# ಕರ್ನಾಟಕ ನಾಗರಿಕ ಸೇವೆ ಖಾತರಿ ಅಧಿನಿಯಮ-2011







# ಸಕಾಲ

ಇಂದು... ನಾಳೆ... ಇನ್ನಿಲ್ಲ, ಹೇಳಿದ ದಿನ ತಪ್ಪೊಲ್ಲ

ಶ್ರೀ ಜಗದೀಶ್ ಶೆಟ್ಟರ್
ಸನ್ಮಾನ್ಯ ಮುಖ್ಯಮಂತ್ರಿಗಳು




ವಿಳಂಬವಾದಲ್ಲಿ ಪ್ರತಿದಿನಕ್ಕೆ ರೂ.20/- ರಂತೆ ನೌಕರರ ವೇತನದಿಂದ ನಾಗರಿಕರಿಗೆ ಪಾವತಿಸುವುದು.

ಮಾಹಿತಿ / ದೂರುಗಳಿಗಾಗಿ ಸಂಪರ್ಕಿಸಿ

080-44554455

ಕಡ್ಡಾಯವಾಗಿ ಅರ್ಜಿಗಳ ಸ್ವೀಕೃತಿ ಪತ್ರ ಪಡೆಯಿರಿ

ಬನ್ನಿ, ನಿಮ್ಮ ಹಕ್ಕು ಚಲಾಯಿಸಿ.

ಅರ್ಜಿಯ ಸ್ಥಿತಿಗತಿಗಳನ್ನು ಅರಿಯಲು ಸ್ವೀಕೃತಿ ಪತ್ರದ ಸಂಖ್ಯೆಯನ್ನು 09212357123ಗೆ  ಕಳುಹಿಸಿ

ವೆಬ್‌ಸೈಟ್ : www.sakala.kar.nic.in ಇ-ಮೇಲ್ : sakala@nic.in

ಆಡಳಿತ ಸುಧಾರಣಾ ಇಲಾಖೆ

 ಕರ್ನಾಟಕ ವಾರ್ತೆ















## ಪುಸ್ತಕ ಪ್ರಕಾಶನ

91, 9ನೇ ಮುಖ್ಯರಸ್ತೆ
ಸರಸ್ವತಿಪುರಂ
ಮೈಸೂರು – 570 009
ಫೋನ್ : 0821-2545774




*ಅಂಚೆ ಮೂಲಕ ತರಿಸಿಕೊಳ್ಳುವವರಿಗೆ :*

## ಪುಸ್ತಕ ಪ್ರಕಾಶನ

ಬುಕ್‌ಪೋಸ್ಟ್ ಸರ್ವೀಸ್
ಪಿ. ಬಿ. ನಂ. 58, ಮೂಡಿಗೆರೆ
ಚಿಕ್ಕಮಗಳೂರು ಜಿಲ್ಲೆ-577132
ಫೋನ್ : 08263-228353, 240202
ಮೊಬೈಲ್ : 94482 03730
e-mail : praghu2@sancharnet.in




### ಪುಸ್ತಕ ಬೆಲೆ ಪಟ್ಟಿ – 2012*

| ಪುಸ್ತಕ | ಬೆಲೆ |
|---|---|
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ:** | |
| ಕಿರಗೂರಿನ ಗಯ್ಯಾಳಿಗಳು | 90.00 |
| ಕರ್ವಾಲೊ | 105.00 |
| ಚಿದಂಬರ ರಹಸ್ಯ | 162.00 |
| ಸಹಜ ಕೃಷಿ | 60.00 |
| ಪರಿಸರದ ಕತೆ | 105.00 |
| ಮಿಸ್ಸಿಂಗ್ ಲಿಂಕ್ | 87.00 |
| ಅಲೆಮಾರಿಯ ಅಂಡಮಾನ್ ಹಾಗೂ ಮಹಾನದಿ ನೈಲ್ | 114.00 |
| ಜುಗಾರಿ ಕ್ರಾಸ್ | 165.00 |
| ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕತೆಗಳು | 63.00 |
| ಫ್ಲೈಯಿಂಗ್ ಸಾಸರ್ಸ್ (1) | 75.00 |
| ಫ್ಲೈಯಿಂಗ್ ಸಾಸರ್ಸ್ (2) | 81.00 |
| ಕಾಡಿನ ಕತೆಗಳು 1 | 72.00 |
| ಕಾಡಿನ ಕತೆಗಳು 2, 3, ಪ್ರತಿಯೊಂದೂ | 75.00 |
| ಕಾಡಿನ ಕತೆಗಳು 4 | 78.00 |
| ರುದ್ರಪ್ರಯಾಗದ ಭಯಾನಕ ನರಭಕ್ಷಕ | 105.00 |
| ಕನ್ನಡನಾಡಿನ ಹಕ್ಕಿಗಳು (1) - ಮಿಂಚುಳ್ಳಿ | 81.00 |
| (2) - ಹೆಜ್ಜೆ ಮೂಡದ ಹಾದಿ | 90.00 |
| ಹಕ್ಕಿ-ಪುಕ್ಕ | 369.00 |
| ಅಣ್ಣನ ನೆನಪುಗಳು | 180.00 |
| ಹುಲಿಯೂರಿನ ಸರಹದ್ದು | 105.00 |
| ಅಬಚೂರಿನ ಪೋಸ್ಟಾಫೀಸು | 87.00 |
| ಮಿಲನಿಯಮ್ (1) - ಹುಡುಕಾಟ | 81.00 |
| ಮಿಲನಿಯಮ್ (2) - ಜೀವನ ಸಂಗ್ರಾಮ | 72.00 |
| ಮಿಲನಿಯಮ್ (3) - ಪೆಸಿಫಿಕ್ ದ್ವೀಪಗಳು | 78.00 |
| ಮಿಲನಿಯಮ್ (4) - ಚಂದ್ರನ ಚೂರು | 81.00 |
| ಮಿಲನಿಯಮ್ (5) - ನೆರೆಹೊರೆಯ ಗೆಳೆಯರು | 81.00 |
| ಮಿಲನಿಯಮ್ (6) - ಮಹಾಯುದ್ಧ (1) | 87.00 |
| ಮಿಲನಿಯಮ್ (7) - ಮಹಾಯುದ್ಧ (2) | 72.00 |
| ಮಿಲನಿಯಮ್ (8) - ಮಹಾಯುದ್ಧ (3) | 81.00 |
| ಮಿಲನಿಯಮ್ (9) - ದೇಶ ವಿದೇಶ (1) | 81.00 |
| ಮಿಲನಿಯಮ್ (10) - ದೇಶ ವಿದೇಶ (2) | 81.00 |
| ಮಿಲನಿಯಮ್ (11) - ದೇಶ ವಿದೇಶ (3) | 81.00 |
| ಮಿಲನಿಯಮ್ (12) - ದೇಶ ವಿದೇಶ (4) | 81.00 |
| ಮಿಲನಿಯಮ್ (13) - ವಿಸ್ಮಯ ವಿಶ್ವ (1) | 72.00 |
| ಮಿಲನಿಯಮ್ (14) - ಮಹಾಪಲಾಯನ | 87.00 |
| ಮಿಲನಿಯಮ್ (15) - ವಿಸ್ಮಯ ವಿಶ್ವ (2) | 72.00 |
| ಮಿಲನಿಯಮ್ (16) - ಅಡ್ವೆಂಚರ್ | 72.00 |
| ಮಾಯಾಲೋಕ - 1 | 216.00 |
| The Stories of My Environment | 144.00 |
| ಪಾಕ ಕ್ರಾಂತಿ ಮತ್ತು ಇತರ ಕತೆಗಳು | 72.00 |
| ವ್ಯಕ್ತಿ ವಿಶಿಷ್ಟ ಸಿದ್ಧಾಂತ ಮತ್ತು ಯಮಳ ಪ್ರಶ್ನೆ | 60.00 |
| ಬೃಹನ್ನಳೆ ಸೋಮುವಿನ ಸ್ವಗತ ಲಹರಿ ಮತ್ತು ಇತರ ಕವನಗಳು | 60.00 |
| ವಿಮರ್ಶೆಯ ವಿಮರ್ಶೆ | 162.00 |
| 'ಮಾಯೆಯ ಮುಖಗಳು' (ಚಿತ್ರಸಂಪುಟ - ನಾಲ್ಕು ವರ್ಣಗಳಲ್ಲಿ) | 600.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಶ್ರೀ ಪ್ರದೀಪ ಕೆಂಜಿಗೆ :** | |
| ವಿಸ್ಮಯ (1) (2) ಪ್ರತಿಯೊಂದೂ | 75.00 |
| ವಿಸ್ಮಯ (3) | 78.00 |
| ಪ್ಯಾಪಿಲಾನ್ (1) (2) ಪ್ರತಿಯೊಂದೂ | 147.00 |
| **ಶ್ರೀ ಕೆ. ಪಿ. ಪೂರ್ಣಚಂದ್ರ ತೇಜಸ್ವಿ - ಡಾ|| ವಿ. ವಿ. ಬೆಳವಾಡಿ :** | |
| ನೆಡೆಯುವ ಕಡ್ಡಿ! ಹಾರುವ ಎಲೆ! | 63.00 |
| **ಶ್ರೀ ಪ್ರದೀಪ ಕೆಂಜಿಗೆ :** | |
| ಬರ್ಮುಡಾ ಟ್ರ್ಯಾಂಗಲ್ | 72.00 |
| ಅದ್ಭುತ ಯಾನ | 108.00 |
| ಹೆಬ್ಬಾವಿನೊಡನೆ ಹೋರಾಟ | 120.00 |
| **ಶ್ರೀ ಎಮ್. ಶಿವಕುಮಾರ್** | |
| ಸೈಕಲ್ ವಾಲ | 40.00 |
| ಕಂಪ್ಯೂಟರ್ ಕಲಿಯಿರಿ | 147.00 |
| 'ಗಡಿಯಾರ' ವಿಕಾಸದ ಹಾದಿಯಲ್ಲಿ | 66.00 |
| **ವಿದ್ವಾನ್ ಶ್ರೀ ಕೊಳಂಬೆ ಪುಟ್ಟಣ್ಣ ಗೌಡರು :** | |
| ಅಚ್ಚ ಕನ್ನಡ ನುಡಿಕೋಶ | 360.00 |
| **ಶ್ರೀ ನರೇಂದ್ರ ರೈ ದೇರ್ಲ :** ಸಾವಯವ ಕೃಷಿ | 51.00 |
| **ಶ್ರೀ ಕೃಪಾಕರ – ಸೇನಾನಿ :** | |
| ಸೆರೆಯಲ್ಲಿ ಕಳೆದ ಹದಿನಾಲ್ಕು ದಿನಗಳು | 93.00 |
| **ಶ್ರೀ ಕೃಷ್ಣ ಆಲನಹಳ್ಳಿ :** ಗೋಡೆ | 66.00 |
| **ಡಾ|| ಎಸ್. ಎಂ. ವೃಷಭೇಂದ್ರ ಸ್ವಾಮಿ :** | |
| ತರಗತಿಗಳಲ್ಲಿ ಕುವೆಂಪು | 180.00 |
| **ಶ್ರೀ ದೇವನೂರು ಮಹಾದೇವ** | |
| ಕುಸುಮಬಾಲೆ | 81.00 |
| ದ್ಯಾವನೂರು ಹಾಗೂ ಒಡಲಾಳ | 96.00 |
| **ಶ್ರೀಮತಿ ತಾರಿಣಿ ಚಿದಾನಂದ :** | |
| ಮಗಳು ಕಂಡ ಕುವೆಂಪು | 330.00 |
| **ಶ್ರೀಮತಿ ಪದ್ಮಾಶ್ರೀರಾಮ :** | |
| ಗಿಡಗಂಟೆಯಾ ಕೊರಳು | 69.00 |
| **ಡಾ|| ಕೆ. ಚಿದಾನಂದ ಗೌಡ :** | |
| ಬದುಕು.. ಬೆಳಕು... ಚುಟುಕು....! ಭಾಗ1 | 89.00 |
| ಬದುಕು.. ಬೆಳಕು... ಚುಟುಕು....! ಭಾಗ2 | 90.00 |
| **ಶ್ರೀಮತಿ ರಾಜೇಶ್ವರಿ ತೇಜಸ್ವಿ:** ನನ್ನ ತೇಜಸ್ವಿ | 369.00 |

* *ಹೊಸ ಆವೃತ್ತಿ (Edition) ಬಿಡುಗಡೆಗೊಂಡಾಗ್ಯೂ ಮುಖಪುಟ ಬೆಲೆಯಲ್ಲಿ ವ್ಯತ್ಯಾಸವಿರುವುದು.*














ಸಂಪುಟ-೧೪ ಸಂಚಿಕೆ-೬ ಜನವರಿ ೨೦೧೩



**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ : ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್ : ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http : //navakarnataka.blogspot.in**
**http : //hosathumonthly.blogspot.in**




'**ಹೊಸತು**' ಪತ್ರಿಕೆ ನೆಮ್ಮದಿಯ ನಾಳೆ ನಮ್ಮದು ಎಂಬ ಆಶಯದೊಂದಿಗೆ ಹದಿನಾಲ್ಕನೇ ವರ್ಷಕ್ಕೆ ಕಾಲಿಟ್ಟಿದೆ. ಆರಂಭದಿಂದ ಇಂದಿನವರೆಗೆ ಪತ್ರಿಕೆಯ ಓದುಗರು, ಲೇಖಕರು, ಕಲಾವಿದರು, ಜಾಹಿರಾತುದಾರರು ಮತ್ತು ಹಿತೈಷಿಗಳು ಬೆಂಬಲ, ಪ್ರೇರಣೆ ನೀಡಿ ಬೆಳೆಸಿದ್ದಾರೆ. ಓದುಗರು ಮತ್ತು ಲೇಖಕರು ಹಲವಾರು ಸಲಹೆ, ಸೂಚನೆ ನೀಡಿ ಪತ್ರಿಕೆ ಅರ್ಥಪೂರ್ಣವಾಗಿ ಮುಂದುವರಿಯಲು ಕಾರಣರಾಗಿದ್ದಾರೆ. ಹಲವಾರು ಸ್ನೇಹಿತರು ಪತ್ರಿಕೆಯ ಪ್ರಸಾರ ಸಂಖ್ಯೆ ಹೆಚ್ಚಿಸಲು ಪ್ರಯತ್ನಿಸಿದ್ದಾರೆ, ಇಂದಿಗೂ ಪ್ರಯತ್ನಿಸುತ್ತಿದ್ದಾರೆ. ಪತ್ರಿಕೆಯ ಮೊದಲ ಸಂಪಾದಕರು, ನಮ್ಮ ನಾಡಿನ ಹಿರಿಯ ಚಿಂತಕರು ಹಾಗೂ ಈಗ ನಮ್ಮ ಗೌರವ ಸಂಪಾದಕರಾದ ಡಾ॥ ಜಿ. ರಾಮಕೃಷ್ಣ ಅವರು ಮತ್ತು ಅವರ ಜೊತೆಗಿನ ಸಂಗಾತಿಗಳು ಪತ್ರಿಕೆಯನ್ನು ಜನಪ್ರಿಯವಾಗಿಸುವುದಕ್ಕಿಂತ ಜನಪರವಾಗಿಸಲು ಹೆಚ್ಚು ಶ್ರಮಿಸಿದ್ದಾರೆ. ಜನಪರ ಆಶಯಗಳನ್ನೇ ಇಟ್ಟುಕೊಂಡು ಬೆಳೆದ ನವಕರ್ನಾಟಕ ಸಂಸ್ಥೆ ಹಾಗೂ ಸಿಬ್ಬಂದಿ 'ಹೊಸತು' ತನ್ನ ಧ್ಯೇಯದೊಂದಿಗೆ ಮುನ್ನಡೆಯಲು ಕಾರಣಕರ್ತರಾಗಿದ್ದಾರೆ. ಈ ಎಲ್ಲರಿಗೂ ಹೊಸ ವರ್ಷದ ಶುಭಾಶಯ ಹೇಳುವುದು ಕ್ಲೀಷೆಯೆನ್ನಿಸಬಹುದು. ಆದರೆ ನೆಮ್ಮದಿಯ ನಾಳೆ ನಮ್ಮದು ಎಂಬುದೇ ನಮ್ಮ ಗುರಿಯಾಗಿರುವಾಗ, ದಿನೇ ದಿನೇ ಸಮಾಜದ ನೆಮ್ಮದಿಯನ್ನು ಕದಡುವ ಶಕ್ತಿಗಳು ಪ್ರಬಲವಾಗುತ್ತಿರುವ ಈ ಸಂದರ್ಭದಲ್ಲಿ ನಮ್ಮ ಸಂಕಲ್ಪವೂ ಹೆಚ್ಚು ಪ್ರಬಲವಾಗಬೇಕಾಗುತ್ತದೆ. ಆ ನಿಟ್ಟಿನಲ್ಲಿ ೨೦೧೩ರ ಈ ವರ್ಷವನ್ನು ಕಳೆದ ವರ್ಷಕ್ಕಿಂತ ಉತ್ತಮಗೊಳಿಸಲು ನಮ್ಮ ನಮ್ಮ ನೆಲೆಯಿಂದ ನಾವೆಲ್ಲರೂ ಕ್ರಿಯಾಶೀಲರಾಗೋಣ, ಈ ನಿಟ್ಟಿನ ಚಿಂತನ – ಮಂಥನ ಪ್ರಕ್ರಿಯೆಯಲ್ಲಿ 'ಹೊಸತು' ಒಂದು ವೇದಿಕೆಯಾಗಲಿ, ಅದಕ್ಕೆ ನಿಮ್ಮ ಸಹಕಾರವಿರಲಿ ಎಂದು ವಿನಂತಿಸಿಕೊಳ್ಳುತ್ತೇನೆ.

✶ ✶ ✶

ಈ ಸಲದ ವಿಶೇಷ ಸಂಚಿಕೆ ಕಳೆದ ಎರಡು ದಶಕಗಳ ವಿದ್ಯಮಾನಗಳನ್ನು ಗಮನದಲ್ಲಿಟ್ಟುಕೊಂಡು ಹೊರಬರುತ್ತಿದೆ. ಜಾಗತೀಕರಣ ಹಾಗೂ ಕೋಮುವಾದ ನಮ್ಮನ್ನು ಅತಿಯಾಗಿ ಕಾಡಿದ, ನಮ್ಮ ಸಾಮಾಜಿಕ, ರಾಜಕೀಯ, ಆರ್ಥಿಕ, ಸಾಂಸ್ಕೃತಿಕ, ಕೃಷಿ ಹೀಗೆ ಎಲ್ಲ ಕ್ಷೇತ್ರಗಳಲ್ಲಿಯೂ ಪಲ್ಲಟಗಳನ್ನು, ಸ್ಥಿತ್ಯಂತರಗಳನ್ನು ಉಂಟುಮಾಡಿದ ಸಂದರ್ಭವಿದು. ಈ ಪಲ್ಲಟಗಳು, ಸ್ಥಿತ್ಯಂತರಗಳು ನಮ್ಮ ಜನತೆಯ ಬದುಕಿಗೆ ಪೂರಕವಾದ ಬೆಳವಣಿಗೆಗಳಲ್ಲ ಎಂಬುದು ಇಂದು ಬಹುತೇಕ ಜನತೆಯ ಅನುಭವಕ್ಕೆ ಬರುತ್ತಿದೆ. ೧೯೯೧ರ ಡಿಸೆಂಬರ್‌ನಲ್ಲಿ ಗ್ಯಾಟ್ ಒಪ್ಪಂದಕ್ಕೆ ಪೂರಕವಾಗಿ ಆರ್ಥರ್ ಡಂಕೆಲ್ ಮಂಡಿಸಿದ್ದ ಪ್ರಸ್ತಾವಗಳಿಗೆ ಇಂಥ ಶಕ್ತಿ ಇದೆ ಎಂದು ಎಡಪಂಥೀಯರು, ಪ್ರಗತಿಪರರನ್ನು ಹೊರತುಪಡಿಸಿದರೆ ಬಹುತೇಕರಿಗೆ ಗೊತ್ತಿರಲಿಲ್ಲ. ಗೊತ್ತಿದ್ದೂ ಸಹಿ ಹಾಕಿದ್ದು ಇಂದು ನಮ್ಮ ದೇಶದ ಆಳುವ ಪಕ್ಷದ ಅಂದಿನ ನಾಯಕರು ಮತ್ತು ಅವರಿಗೆ ಸಹಕರಿಸಿದ ಇಂದಿನ ವಿರೋಧಪಕ್ಷವಾದ ಬಿ.ಜೆ.ಪಿ.ಯ ಅಂದಿನ ನಾಯಕರು. ಎರಡನೇ






**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೫೦/- |
| ಮೂರು ವರ್ಷಕ್ಕೆ | ರೂ. ೩೫೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು - ೫೬೦ ೦೦೯
✆ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು - ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
✆ : ೦೮೨೧-೨೪೨೪೯೦೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
✆ : ೦೮೪೭೨-೨೨೪೩೦೨

# ಸಂಪಾದಕೀಯ

ಜಾಗತಿಕ ಮಹಾಯುದ್ಧದ ನಂತರ ವಿಶ್ವದ ಬಹುತೇಕ ದೇಶಗಳು ಸಾಮ್ರಾಜ್ಯಶಾಹಿಯ ಕಪಿಮುಷ್ಟಿಯಿಂದ ಬಿಡುಗಡೆಯಾಗಿ ಹೊರಬಂದು ಸ್ವತಂತ್ರ ದೇಶಗಳಾದಾಗಲೇ, ಸಾಮ್ರಾಜ್ಯಶಾಹಿ ದೇಶಗಳು, ವಿಶ್ವದ ಬೃಹತ್ ವ್ಯಾಪಾರಿ ಕಂಪನಿಗಳೂ ಸೇರಿ ರೂಪಿಸಿದ ಹುನ್ನಾರವಿದು. ೧೯೪೭ರಲ್ಲಿ ನಮ್ಮ ದೇಶ ಸ್ವತಂತ್ರವಾದ ಎರಡೇ ತಿಂಗಳಲ್ಲಿ ಅಂದರೆ ಅಕ್ಟೋಬರ್ ೩೦ರಂದು ಜಾಗತಿಕ ವ್ಯಾಪಾರ ಮತ್ತು ಮಾರುಕಟ್ಟೆ ಹೊಂದಿರುವ ಸುಮಾರು ೨೩ ದೇಶಗಳು ಸೇರಿ ಮಾಡಿಕೊಂಡ ಒಪ್ಪಂದದ ಫಲವೇ ಈ ಗ್ಯಾಟ್. ಇಡೀ ವಿಶ್ವದ ಮಾರುಕಟ್ಟೆಯನ್ನು, ಉತ್ಪಾದನಾ ವ್ಯವಸ್ಥೆಯನ್ನು, ಕೃಷಿ ವ್ಯವಸ್ಥೆಯನ್ನೂ ಒಳಗೊಂಡು ತನ್ಮೂಲಕ ಒಟ್ಟು ರಾಜಕೀಯ, ಸಾಮಾಜಿಕ ವ್ಯವಸ್ಥೆಗಳನ್ನು ನಿಯಂತ್ರಿಸಲು, ತಮ್ಮ ಲಾಭಕ್ಕೆ ಬಳಸಿಕೊಳ್ಳಲು ೧೯೪೮ ಜನವರಿ ೧ರಂದು ಗ್ಯಾಟ್ (ಜನರಲ್ ಅಗ್ರಿಮೆಂಟ್ ಆನ್ ಟಾರಿಫ್ಸ್ ಆ್ಯಂಡ್ ಟ್ರೇಡ್) ಸಂಸ್ಥೆಯನ್ನು ಹುಟ್ಟುಹಾಕಿದರು. ಈ ಸಂಸ್ಥೆಯ (ಡಂಕೆಲ್) ಪ್ರಸ್ತಾವಗಳಿಗೆ ಸಹಿಹಾಕಿ ನಾವು ವಿಶ್ವವ್ಯಾಪಾರ ಸಂಸ್ಥೆಯ ನಿಯಂತ್ರಣಕ್ಕೊಳಪಟ್ಟು ಎರಡು ದಶಕ ಕಳೆದು ಕಾಲು ಶತಮಾನದತ್ತ ನಡೆದಿದ್ದೇವೆ. ಪರಿಣಾಮವಾಗಿ ಪ್ರಜಾಸತ್ತೆಯ ಸೋಗಿನಲ್ಲಿರುವ ನಮ್ಮ ಸಂಸದೀಯ ಪ್ರಜಾಪ್ರಭುತ್ವವು ಪ್ರಜೆಗಳ ಹಿತಕ್ಕಾಗಿ ದುಡಿಯದೆ ವಿಶ್ವಸಂಸ್ಥೆ, ವಿಶ್ವ ಬ್ಯಾಂಕ್ ಮತ್ತು ಸಾಮ್ರಾಜ್ಯಶಾಹಿ ಅಮೆರಿಕದ ಆಡಳಿತದ ಹಿತಕ್ಕನುಗುಣವಾಗಿ ದುಡಿಯುತ್ತಿದೆ. ಹಿಂದಿನ ಯು.ಪಿ.ಎ.-೧ರ ಕಾಂಗ್ರೆಸ್ ನಾಯಕತ್ವದ ಸರಕಾರ ತನ್ನ ಆಡಳಿತವನ್ನೇ ಪಣಕ್ಕಿಟ್ಟು ಅಣು ಒಪ್ಪಂದ ಮಾಡಿಕೊಂಡದ್ದು, ಇಂದಿನ ಯು.ಪಿ.ಎ.-೨ ಅವಧಿಯಲ್ಲಿ, ಸರಕಾರ ಪತನವಾದರೂ ಚಿಂತೆ ಇಲ್ಲ ಎಂದು, ವಿದೇಶಿ ನೇರ ಬಂಡವಾಳ ಹೂಡಿಕೆ (ಎಫ್.ಡಿ.ಐ.) ನೀತಿ ಜಾರಿಗೆ ತರಲು ಹೊರಟಿದ್ದು ಆಕಸ್ಮಿಕವಲ್ಲ. ಬಿ.ಜೆ.ಪಿ. ನಾಯಕತ್ವದ ಎನ್.ಡಿ.ಎ. ಅಧಿಕಾರಕ್ಕೆ ಬಂದಾಗಲೂ ಇವೇ ನೀತಿಗಳಿಗೆ ಬದ್ಧವಾಗಿದ್ದು, ಇಂದಿನ ಯು.ಪಿ.ಎ. ನೀತಿಗಳಿಗೆ ವಿರೋಧಪಕ್ಷವಾಗಿ ನಿರ್ಣಾಯಕ ಹೋರಾಟ ನಡೆಸದೇ ಇದ್ದದ್ದೂ ಸಾಮ್ರಾಜ್ಯಶಾಹಿ ದೇಶಗಳ ನಾಯಕತ್ವ ವಹಿಸಿದ ಅಮೆರಿಕ ಆಡಳಿತದ ಸೂಚನೆಯಂತೆ ಎಂಬುದು ಈಗ ಗುಟ್ಟಾಗಿ ಉಳಿದಿಲ್ಲ. ದೇಶದಲ್ಲಿ ಇಂದಿನ ಬೆಲೆ ಏರಿಕೆ, ಅಭಿವೃದ್ಧಿ ದರದ ಕುಸಿತ, ನಿರುದ್ಯೋಗ, ಭ್ರಷ್ಟಾಚಾರ, ಕೊಲೆ ಸುಲಿಗೆ, ಕಲ್ಯಾಣ ರಾಜ್ಯದ ನೀತಿಯ ನಾಶ, ಹಣವೇ ಪ್ರಧಾನವಾಗಿರುವ ಸಾಮಾಜಿಕ ಜೀವನ, ಮಾನವೀಯ ಮೌಲ್ಯಗಳ ಪತನ ಇವೆಲ್ಲ ಈ 'ಖಾಉಜಾ' (ಖಾಸಗೀಕರಣ, ಉದಾರೀಕರಣ, ಜಾಗತೀಕರಣ) ನೀತಿಯ ಪ್ರತಿಫಲಗಳು. ಇಂದು ವಿಶ್ವದ ವ್ಯಾಪಾರಿಗಳ ಕಣ್ಣಲ್ಲಿ ವಿಶ್ವದ ಪ್ರಜೆಗಳು ನಾಗರಿಕರಲ್ಲ, ಅವರೆಲ್ಲ ಗಿರಾಕಿಗಳು. ಈ ಗಿರಾಕಿಗಳನ್ನು ವ್ಯವಸ್ಥಿತವಾಗಿ ವ್ಯಾಪಾರಿಗಳ ಲಾಭಕ್ಕೆ ಬಳಸುವಂತೆ ಸಿದ್ಧಪಡಿಸುವುದು ಆಯಾದೇಶಗಳ ಸರಕಾರಗಳ ಜವಾಬ್ದಾರಿ. ಅಂಥ ಮಹತ್ತರ ಜವಾಬ್ದಾರಿಯನ್ನು ನಮ್ಮ ದೇಶದ ಪಾರ್ಲಿಮೆಂಟ್‌ನಿಂದ ಗ್ರಾಮಪಂಚಾಯಿತಿವರೆಗೆ ಎಲ್ಲ ಸರಕಾರಗಳೂ ಪ್ರಾಮಾಣಿಕತೆಯಿಂದ ನಿರ್ವಹಿಸುತ್ತಿವೆ.

✳ ✳ ✳

ದೇಶದ ಈ ಎರಡು ದಶಕಗಳ ರಾಜಕಾರಣದಲ್ಲಿ ಕಾಂಗ್ರೆಸ್, ಬಿ.ಜೆ.ಪಿ. ಎರಡೂ ಪಕ್ಷಗಳು ಒಂದೇ ರೀತಿಯ ಆರ್ಥಿಕ, ವಿದೇಶಾಂಗ ನೀತಿಗಳನ್ನು ಹೊಂದಿದ್ದರೂ ಅಧಿಕಾರಕ್ಕೆ ಬರಲು ಅವು ಬಳಸಿದ ಘೋಷಣೆಯೂ ಒಂದೇ ವಿಷಯಕ್ಕೆ ಸಂಬಂಧಿಸಿದ್ದು. ಬಿ.ಜೆ.ಪಿ. ಹಿಂದುತ್ವದ ಘೋಷಣೆ ಬಳಸಿದರೆ ಕಾಂಗ್ರೆಸ್ ಜಾತ್ಯಾತೀತ (ಸೆಕ್ಯೂಲರ್) ಘೋಷಣೆಯನ್ನು ಬಳಸಿತು. ಕಾಂಗ್ರೆಸ್ ಕೋಮುವಾದಿ ಕಾರ್ಯಸೂಚಿ ಹೊಂದಿರಲಿಲ್ಲ ನಿಜ. ಆದರೆ 'ಜಾತ್ಯಾತೀತ' (ಸೆಕ್ಯೂಲರ್) ಆಗಿರಲಿಲ್ಲ ಅನ್ನುವುದಂತೂ ಸತ್ಯ. ಸಂಘಪರಿವಾರದವರು ಬಾಬ್ರಿ ಮಸೀದಿಯನ್ನು ಹಾರೆ, ಗುದ್ದಲಿಗಳಿಂದ ನೆಲಸಮ ಮಾಡಿದರೆ ಅಂದಿನ ಪ್ರಧಾನಿ ಕಾಂಗ್ರೆಸ್‌ನ ಪಿ. ವಿ. ನರಸಿಂಹರಾವ್ ಅವರು ಪ್ರಭುತ್ವದ ನಾಯಕರಾಗಿ ಅದನ್ನು ತಡೆಯದೇ ಮೌನವಾಗಿದ್ದುಕೊಂಡು ನೆಲಸಮ ಮಾಡಿಸಿದರು. ಅಂದರೆ ದೇಶದ ಸೌಹಾರ್ದ ಬದುಕಿಗೆ ಧಕ್ಕೆ ತರುವಲ್ಲಿ ಈ ಎರಡೂ ಪಕ್ಷಗಳ ಪಾತ್ರವಿದೆ. ಬಿ.ಜೆ.ಪಿ.ಯ ಬೆಂಬಲದೊಂದಿಗೆ ಸಂಘಪರಿವಾರದವರು ಕೋಮುಗಲಭೆಗಳನ್ನು ತೀವ್ರಗೊಳಿಸಿದ್ದು, ದೇಶದಲ್ಲೆಲ್ಲ ಕೋಮುಸಂಘರ್ಷ ನಡೆಸಿದ್ದು, ಬಾಬ್ರಿ ಮಸೀದಿ ಪತನ ಇವೆಲ್ಲ ನಡೆದದ್ದು, ನಮ್ಮ ಕೇಂದ್ರ ಸರಕಾರದ ಅಂದಿನ ಪ್ರಧಾನಿ ನರಸಿಂಹರಾವ್ ಅವರು ನಮ್ಮ ಪ್ರಜಾಸತ್ತೆಯ ಉನ್ನತ ವೇದಿಕೆ ಪಾರ್ಲಿಮೆಂಟ್‌ಗೂ ತಿಳಿಸದೆ ಗ್ಯಾಟ್ ಒಪ್ಪಂದ ಮಾಡಿಕೊಂಡ ಸಂದರ್ಭದಲ್ಲಿಯೇ ಎಂಬುದನ್ನು ಗಮನಿಸಬೇಕು. ಬಿ.ಜೆ.ಪಿ.ಯ ಪರಿವಾರದವರು ಬಾಬ್ರಿ ಮಸೀದಿ ನೆಲಸಮ ಮಾಡಿ ಸೌಹಾರ್ದತೆಯನ್ನು ನಾಶಮಾಡಿದರೆ, ಕಾಂಗ್ರೆಸ್‌ನವರು ಜಾಗತೀಕರಣ ನೀತಿಗೆ ಸಹಿಮಾಡಿ ದೇಶದ ಸ್ವಾವಲಂಬನೆಯನ್ನು ನಾಶಮಾಡಿದರು. ಒಬ್ಬರು ಮಾಡಿದ ಗಾಯ ಮರೆಸಲು ಇನ್ನೊಬ್ಬರು ನೋವುನಿವಾರಕ ಔಷಧಿಯಂತೆ ಕೆಲಸ ಮಾಡಿದ್ದು ಕಾಕತಾಳೀಯ ಖಂಡಿತ ಅಲ್ಲ.

೧೯೭೦ರ ಸಂದರ್ಭದಲ್ಲಿ ಜೆ.ಪಿ. ಚಳುವಳಿಯಲ್ಲಿ ಭಾಗವಹಿಸಿ, ನಂತರ ಜನಸಂಘವನ್ನು ವಿಸರ್ಜಿಸಿ ೧೯೭೭ರ ಕೇಂದ್ರ ಸರಕಾರದಲ್ಲಿ ಭಾಗವಹಿಸಿದ ಹಿಂದುತ್ವವಾದಿಗಳು ತಮ್ಮ ಗಾಂಧೀ ಹತ್ಯೆಯ ನಿಜರೂಪವನ್ನು ಮರೆಮಾಚಿ ಮುಖ್ಯವಾಹಿನಿಗೆ ಬಂದರು. ನಂತರ ಜನತಾಪಕ್ಷದಿಂದ ಹೊರಬಂದು ಬಿ.ಜೆ.ಪಿ.ಯಾಗಿ ಹಿಂದುತ್ವ ಮಾದರಿ ರಾಜಕಾರಣ ಆರಂಭಿಸಿದರು. ಗಾಂಧೀ ಹತ್ಯೆ ಮಾಡಿದವರನ್ನು ಜೊತೆ ಸೇರಿಸಿಕೊಂಡ ಜನತಾಪಕ್ಷ ಇಂದು ಹಲವಾರು ಪ್ರಾದೇಶಿಕ ಪಕ್ಷಗಳಾಗಿ ಸಿಡಿದುಹೋಗಿದೆ. ಕಾಂಗ್ರೆಸ್ ಹಾಗೂ ಬಿ.ಜೆ.ಪಿ. ಇಂದು ಒಂದಕ್ಕೊಂದು ಪರ್ಯಾಯವೆಂದು ಘೋಷಿಸಿಕೊಂಡಿವೆ. ಇಂಥ ಪರ್ಯಾಯ ಸ್ಥಾನಕ್ಕೆ ಬರಲು ಬಿ.ಜೆ.ಪಿ. ಆಯ್ದುಕೊಂಡ ಮಾರ್ಗವೇ 'ಅಯೋಧ್ಯೆ'. ರಾಮಜ್ಯೋತಿ, ಇಟ್ಟಿಗೆ ಜಾಥಾ, ರಥಯಾತ್ರೆ ನಡೆಸಿ, ದೇಶಾದ್ಯಂತ ಸಣ್ಣಪುಟ್ಟ ಜಗಳಗಳನ್ನು ಜನಾಂಗೀಯ ಘರ್ಷಣೆಗಳನ್ನಾಗಿ ಪರಿವರ್ತಿಸುವುದು ಅದರ ರಾಜಕೀಯ ಕಾರ್ಯಸೂಚಿಯಾಗಿತ್ತು. ಇಂಥ ಗುಪ್ತ ಕಾರ್ಯಸೂಚಿಯಿಂದ ೧೯೮೪ರ ಪಾರ್ಲಿಮೆಂಟ್‌ನಲ್ಲಿ ಕೇವಲ ೨ ಸ್ಥಾನ ಹೊಂದಿದ್ದ ಬಿ.ಜೆ.ಪಿ. ೧೯೮೯ರಲ್ಲಿ ೮೫ ಸ್ಥಾನ, ೧೯೯೧ರಲ್ಲಿ ೧೨೦ ಸ್ಥಾನ, ೧೯೯೧-೯೬ ನರಸಿಂಹರಾವ್ ಸರಕಾರದ ಸಂದರ್ಭ, ಬಾಬ್ರಿ ಮಸೀದಿ ಕೆಡವಿದ ನಂತರ ೧೯೯೬ರಲ್ಲಿ ೧೬೧ ಸ್ಥಾನ ಪಡೆಯಿತು. ೧೯೯೮ರಲ್ಲಿ ೧೮೦ ಸ್ಥಾನ ಪಡೆದು ಮುಂದೆ ಮಿತ್ರ ಪಕ್ಷಗಳ ಜೊತೆಗೂಡಿ ಸರಕಾರವನ್ನೇ ರಚಿಸಿತು. ೧೯೯೯ರಲ್ಲಿ ಬಿ.ಜೆ.ಪಿ. ೧೮೨ ಸ್ಥಾನ ಗಳಿಸಿ ಕಾಂಗ್ರೆಸ್‌ಗೆ ಪರ್ಯಾಯವಾಗಿ ಬೆಳೆದು ನಿಂತಿದೆ. ಇದು ಕಾಂಗ್ರೆಸ್ ಮತ್ತು ಬಿ.ಜೆ.ಪಿ.ಗಳ ಪರಸ್ಪರ ಸಹಕಾರ ಸಂಘ. ಈ ಸಹಕಾರವನ್ನು ಅಮೆರಿಕ ಅಧ್ಯಕ್ಷ ಬರಾಕ್ ಒಬಾಮಾ ಅವರು ಭಾರತಕ್ಕೆ ಬಂದಾಗ ಸ್ಮರಿಸಿಕೊಂಡಿದ್ದಾರೆ. ಕಾಂಗ್ರೆಸ್ ಮತ್ತು ಬಿ.ಜೆ.ಪಿ.ಗಳು ಅಮೆರಿಕ ಆಡಳಿತಕ್ಕೆ ಸಲ್ಲಿಸಿದ ಸೇವೆಯನ್ನು ಸ್ಮರಿಸಿದ್ದಾರೆ. ಅಲ್ಲಿಗೆ ಕಾಂಗ್ರೆಸ್, ಬಿ.ಜೆ.ಪಿ.ಗಳು ಅಮೆರಿಕದ ಮಾಂಡಲೀಕರಾಗಿ ಸೇವೆ ಸಲ್ಲಿಸಿದ್ದು ಸಾರ್ಥಕವಾಯಿತು !



✳ ✳ ✳

ಇಂದು ರಾಜಕೀಯದಲ್ಲಿ ಪರ್ಯಾಯದ ಮಾತುಗಳು ಕೇಳಿಬರುತ್ತಿವೆ. ಕಾಂಗ್ರೆಸ್‌ಗೆ ಬಿ.ಜೆ.ಪಿ. ಪರ್ಯಾಯ ಎಂದು ಕೇಂದ್ರದಲ್ಲಿ, ಬಿ.ಜೆ.ಪಿ.ಗೆ ಕಾಂಗ್ರೆಸ್ ಪರ್ಯಾಯ ಎಂಬ ಮಾತುಗಳು ರಾಜ್ಯದಲ್ಲಿ ನಡೆಯುತ್ತಿವೆ. ಹಾಗೇ ವಿವಿಧ ರಾಜ್ಯಗಳಲ್ಲಿ ಬೇರೆ ಬೇರೆ ಪರ್ಯಾಯ ರಾಜಕಾರಣದ ಮಾತುಗಳಿವೆ. ತಮಿಳುನಾಡಿನಲ್ಲಿ ಎ.ಐ.ಡಿ.ಎಂ.ಕೆ.ಗೆ ಡಿ.ಎಂ.ಕೆ. ಪರ್ಯಾಯ. ಬಿಹಾರದಲ್ಲಿ ಲಾಲೂ ಪ್ರಸಾದ್ (ಆರ್.ಜೆ.ಡಿ.) ಪರ್ಯಾಯ, ಈಗ ನಿತೀಶ (ಜೆ.ಡಿ.ಯು.) ಪರ್ಯಾಯ, ಉತ್ತರ ಪ್ರದೇಶದಲ್ಲಿ ಅಂದು ಮಾಯಾವತಿ (ಬಿ.ಎಸ್.ಪಿ.) ಇಂದು ಅಖಿಲೇಶ್ ಯಾದವ್

(ಎಸ್.ಪಿ.) ಪರ್ಯಾಯ, ಪಂಜಾಬ್‌ನಲ್ಲಿ ಅಕಾಲಿದಳ, ಆಂಧ್ರದಲ್ಲಿ ಟಿ.ಡಿ.ಪಿ. ಹೀಗೆ ಪರ್ಯಾಯ ರಾಜಕಾರಣದ ಮಾತು ದೇಶದ ತುಂಬ ಇದೆ. ಇವೆಲ್ಲ ಪಕ್ಷ ಪರ್ಯಾಯಗಳೇ ಹೊರತು ನೀತಿ ಪರ್ಯಾಯಗಳಲ್ಲ. ಉದಾಹರಣೆಗೆ ಕಾಂಗ್ರೆಸ್‌ನ ಭ್ರಷ್ಟಾಚಾರ, ಕುಟುಂಬ ರಾಜಕಾರಣ ವಿರೋಧಿಸಿ ಕರ್ನಾಟಕದಲ್ಲಿ ರಾಮರಾಜ್ಯದ ವಕ್ತಾರರಾದ ಹಿಂದೂ ಮಾದರಿಯ ಬಿ.ಜೆ.ಪಿ. ಸರಕಾರ ಅಧಿಕಾರಕ್ಕೆ ಬಂದಿತು. ಇಂದು ಬಿ.ಜೆ.ಪಿ. ಎಂದರೆ ಭ್ರಷ್ಟ ಜನತಾ ಪಕ್ಷ ಎಂದು ಗುಣಾತ್ಮಕವಾಗಿ ಅದರ ಹೆಸರು ಬದಲಾಯಿಸಿಕೊಂಡಿದೆ.

ಕರ್ನಾಟಕದ ಭಾಗ್ಯವೆಂದರೆ ಇಂದು ಹಲವಾರು ಪರ್ಯಾಯಗಳು ಜನರ ಮುಂದಿವೆ. ಸದ್ಯದ ಬಿ.ಜೆ.ಪಿ. ಆಡಳಿತಕ್ಕೆ ಪರ್ಯಾಯ ಕಾಂಗ್ರೆಸ್, ಕೆ.ಜೆ.ಪಿ., ಜೆ.ಡಿ.ಎಸ್., ಬಿ. ಎಸ್.ಆರ್. ಹೀಗೆ ಇವೆಲ್ಲ ಪರ್ಯಾಯಗಳೇ ! ಆಧುನಿಕ ಬಸವಣ್ಣ ಯಡಿಯೂರಪ್ಪನವರು, ಆಧುನಿಕ ದೇವರಾಜ ಅರಸು ಶ್ರೀರಾಮುಲು ಅವರು ಇಂದು ಜನತೆಗೆ ಪರ್ಯಾಯವಾಗಿದ್ದಾರೆ. ಕಾಂಗ್ರೆಸ್‌ನವರ ಭ್ರಷ್ಟಾಚಾರಕ್ಕೆ ಪರ್ಯಾಯವಾಗಿ, ಹಿಂದೂ ಮಾಡೆಲ್‌ನ ಭ್ರಷ್ಟಾಚಾರ ನೋಡಿಯಾಯಿತು. ಈಗ ಹೊಸ ಹೆಸರಿನ ಮಾದರಿಗಳು ರಾಜ್ಯದ ಜನತೆಯ ಮುಂದಿವೆ. ಜೆ.ಡಿ.ಎಸ್.ನ ದೇವೇಗೌಡರು ಕೇಂದ್ರದ ಎಫ್.ಡಿ.ಐ. ನೀತಿ ವಿರೋಧಿಸಿ ಎಡಪಕ್ಷಗಳ ಜೊತೆಗಿದ್ದರೆ, ಅವರ ಪುತ್ರ ಕುಮಾರಸ್ವಾಮಿಯವರು ಮತ ಚಲಾಯಿಸುವಾಗ ಇತರ ಎಂಪಿಗಳ ಜೊತೆ ಗೈರುಹಾಜರಾಗುತ್ತಾರೆ. ಇಲ್ಲಿ ನೀತಿ ಅಂತ ಏನಾದರೂ ಇದೆಯೇ ?

ಇಂದು ದೇಶಕ್ಕೆ ಬೇಕಾಗಿರುವುದು ಪಕ್ಷ ಪರ್ಯಾಯವಲ್ಲ, ನೀತಿ ಪರ್ಯಾಯ. ಆ ಪರ್ಯಾಯ ನೀತಿ ಪ್ರಾಮಾಣಿಕ, ಪಾರದರ್ಶಕ, ಜಾತ್ಯಾತೀತ, ಜನಪರ, ಪ್ರಜಾಸತ್ತಾತ್ಮಕ, ಧರ್ಮನಿರಪೇಕ್ಷಿತ ಗುಣಗಳನ್ನು ಹೊಂದಿರಬೇಕು. ಸಾಮ್ರಾಜ್ಯಶಾಹಿಗೆದುರಾಗಿ ದೇಶದ ಸ್ವಾವಲಂಬನೆ, ಧರ್ಮಾಂಧತೆಗೆದುರಾಗಿ ಸಹಬಾಳ್ವೆ, ಸಾಮಾನ್ಯ ಜನರ ಕನಿಷ್ಠ ಬದುಕುವ ಸೌಲಭ್ಯ, ಸಾಮಾಜಿಕ ಭದ್ರತೆ ಇಷ್ಟನ್ನು ಕೊಡಲಾಗದ ಸ್ಥಿತಿಯಲ್ಲೇನೂ ನಮ್ಮ ದೇಶವಿಲ್ಲ. ಆದರೆ ಅದಕ್ಕಾಗಿ ಕನಿಷ್ಠ ಸಾಮಾಜಿಕ ಹಾಗೂ ನೈತಿಕ ಮೌಲ್ಯಗಳನ್ನು ರಾಜಕಾರಣದಲ್ಲಿ, ಸಾಮಾಜಿಕ ಬದುಕಿನಲ್ಲಿ ತರಬೇಕಿದೆ. ಭ್ರಷ್ಟರನ್ನು, ಜಾತ್ಯಾಂಧರನ್ನು, ಧರ್ಮಾಂಧರನ್ನು ಗೌರವಿಸುವ ಪ್ರಜೆಗಳಿರುವವರೆಗೆ ಜನಪರವಾದ ಪರ್ಯಾಯ ಸಾಧ್ಯವಿಲ್ಲ.

* * *

ಬಹುತೇಕ ಸಂದರ್ಭಗಳಲ್ಲಿ ನಾವು ಪ್ರೇಕ್ಷಕರಾಗಿ, ಮೂಕಪ್ರೇಕ್ಷಕರಾಗಿ, ವರದಿ ವಾಚಕರಾಗಿ, ಕುತೂಹಲಿಗಳಾಗಿ ಸಮಾಜದಲ್ಲಿ ನಡೆವ ಘಟನೆಗಳಿಗೆ ಸ್ಪಂದಿಸುತ್ತೇವೆ. ಅನಾಚಾರಿಗಳ ಆರ್ಭಟಕ್ಕಿಂತ ಸದಾಚಾರಿಗಳ ಮೌನ ಅಪಾಯಕಾರಿ. ಈಗಾಗಲೇ ವಿಶ್ವವ್ಯಾಪಾರ ಸಂಘಟನೆಯ ದೃಷ್ಟಿಯಲ್ಲಿ ಗಿರಾಕಿಗಳಾಗಿರುವ ನಾವು ಹಣವಿಲ್ಲದಿದ್ದರೆ ಪ್ರಜೆಗಳಾಗಿ ಬದುಕುವ ಹಕ್ಕನ್ನೂ ಕಳೆದುಕೊಳ್ಳುತ್ತೇವೆ. ಉತ್ತಮ ಗಿರಾಕಿಗಳಾಗಿ ಬದುಕಲು, ಕೊಳ್ಳುಬಾಕ ಸಂಸ್ಕೃತಿಯ ದಾಸರಾಗಲು ಹಣ ಗಳಿಕೆಯ ಸ್ಪರ್ಧೆಗೆ ಇಡೀ ಸಮಾಜ ನೂಕಲ್ಪಟ್ಟಿದೆ. ಬಹುರಾಷ್ಟ್ರೀಯ ಕಂಪನಿಗಳ ಪರವಾಗಿ ನಮ್ಮ ನಡುವಿನ ಕ್ರೀಡಾ ಹಾಗೂ ಸಾಂಸ್ಕೃತಿಕ ರಾಯಭಾರಿಗಳಾಗಿ ಕ್ರೀಡಾಪಟುಗಳು, ಸಿನೆಮಾ ತಾರೆಯರು ನಮಗೆ ಮಾರ್ಗದರ್ಶನ ಮಾಡುತ್ತಿದ್ದಾರೆ. ನಾವು ಏನು ತಿನ್ನಬೇಕು, ಏನು ಉಡಬೇಕು, ಏನು ನೋಡಬೇಕು, ಏನು ಕಲಿಯಬೇಕು, ಏನು ಉತ್ಪಾದಿಸಬೇಕು ಹಾಗೂ ಬೆಳೆಯಬೇಕು ಎಂಬುದನ್ನು ನಿರ್ಧರಿಸುವವರು ಕಾರ್ಪೋರೇಟ್ ಹೌಸ್‌ಗಳು, ಸಾಮ್ರಾಜ್ಯಶಾಹಿ ದೇಶಗಳು. ನಮ್ಮ ಮನಮೋಹನ ಸಿಂಗ್ ಸರಕಾರ ಗ್ಯಾಸ್ ಸಿಲಿಂಡರ್, ಸೀಮೆಎಣ್ಣೆ, ಡೀಸೆಲ್, ಆಹಾರಧಾನ್ಯಗಳ ಬೆಲೆ ಏರಿಸುತ್ತದೆ. ಕಾರ್ಪೋರೇಟ್ ಕಂಪನಿಗಳಿಗೆ ವರ್ಷದ ಬಜೆಟ್‌ನಲ್ಲಿ ಸರಾಸರಿ ಐದು ಲಕ್ಷ ಕೋಟಿ ತೆರಿಗೆ ರಿಯಾಯಿತಿ ಕೊಡುತ್ತದೆ. ಗಿರಾಕಿಗಳಾಗಿಯೂ ಪ್ರಜೆಗಳಿಗೆ ಸುಖವಿಲ್ಲ.

ಗ್ರಾಹಕರಾಗಿ ಪರಿವರ್ತನೆಗೊಂಡ ನಮ್ಮ ಪ್ರಜೆಗಳು ಗ್ರಾಹಕ ಚಳುವಳಿಯನ್ನಾದರೂ ನಡೆಸಬಾರದೆ ಎಂದರೆ ಅವರೆಲ್ಲ ಈಗ ಒಂದೊಂದು ಜಾತಿಯ ಸದಸ್ಯರಾಗಿ ವಿಂಗಡನೆಗೊಂಡಿದ್ದಾರೆ. ಕೋಮುಶ್ರೇಷ್ಠತೆಯ ವಾದ ಹೇಗೆ ರಾಜಕೀಯ ಬೇಳೆ ಬೇಯಿಸಿಕೊಳ್ಳಲು ಸಾಧ್ಯವಾಯಿತೋ ಹಾಗೇ ಜಾತಿ ಶ್ರೇಷ್ಠತೆಯೂ ರಾಜಕೀಯ ಲಾಭಕ್ಕೆ ಮಾರ್ಗವಾಗಿದೆ. ಒಂದು ಕಾಲದಲ್ಲಿ ಜಾತಿ ವ್ಯವಸ್ಥೆಯನ್ನು ಕೀಳರಿಮೆ ಹುಟ್ಟಿಸುವ ವ್ಯವಸ್ಥೆಯೆಂದು ನೋಡಿದ್ದರೆ ಇಂದು ಮೇಲಿನಿಂದ ಕೆಳಗಿನವರೆಗೆ ಎಲ್ಲ ಜಾತಿಗಳಲ್ಲೂ ಆಂತರಿಕ ಸಂಘಟನೆ, ಜಗದ್ಗುರು, ಮಠಗಳ ಸ್ಥಾಪನೆ ಮಾಡುತ್ತಲೇ, ತಮ್ಮ ಜಾತಿಯ ಕುರಿತ ವೇದ ಪ್ರಮಾಣ, ಪುರಾಣ ಪ್ರಮಾಣ ಪ್ರಸ್ತಾಪಿಸಿ ತಾವೆಷ್ಟು ಶ್ರೇಷ್ಠರು, ಪುರಾತನರು ಎಂದು ಸಾರುವ ಸ್ಪರ್ಧೆ ನಡೆದಿದೆ. ಹಾಗೆ ನೋಡಿದರೆ ಈ ದೇಶದಲ್ಲಿರುವ ಎಲ್ಲರೂ ಅಸ್ಪೃಶ್ಯರೇ.

ಇತ್ತೀಚೆಗೆ ಅಥಣಿ ತಾಲೂಕಿನಲ್ಲಿ ಒಂಬತ್ತನೇ ಕ್ಲಾಸ್ ಓದುತ್ತಿರುವ ವಿದ್ಯಾರ್ಥಿ, ಜೊತೆ ಓದುವ ವಿದ್ಯಾರ್ಥಿನಿಗೆ ಲೈಂಗಿಕ ಕಿರುಕುಳ ನೀಡಿ, ಅತ್ಯಾಚಾರಕ್ಕೆ ಯತ್ನಿಸಿದ್ದಾನೆ. ಸಿನಿಮಾ ನೋಡಿ ತಾನು ಪ್ರಚೋದಿತನಾದೆನೆಂದು ಪೊಲೀಸರಿಗೆ ಹೇಳಿಕೆ ನೀಡಿದ್ದಾನೆ. ನಮ್ಮ ಸಾಂಸ್ಕೃತಿಕ ಬದುಕು ನಮ್ಮ ಮಕ್ಕಳ ಮೇಲೆ ಎಂಥ ಪ್ರಭಾವ ಬೀರುತ್ತದೆ ಎಂಬುದನ್ನು ಗಮನಿಸಲು ಹೆಚ್ಚು ಕಷ್ಟವನ್ನೇನೂ ಪಡಬೇಕಿಲ್ಲ. ಅಮೇರಿಕದ ಮಕ್ಕಳು ಪಿಸ್ತೂಲ್ ಹಿಡಿದು ತಿರುಗಿದರೆ ನಮ್ಮ ಮಕ್ಕಳು ಚಾಕು-ಚೂರಿ ಹಿಡಿದು ತಿರುಗುತ್ತಾರೆ. ಈ ವ್ಯವಸ್ಥೆಗೆ ಪರ್ಯಾಯ ಹುಡುಕುವುದು ನಮ್ಮ ಜವಾಬ್ದಾರಿ.

ಹಲವಾರು ಪ್ರತಿಕೂಲ ಪರಿಸ್ಥಿತಿಗಳ ಮಧ್ಯೆಯೇ ಸೌಹಾರ್ದ ಬದುಕಿಗೆ, ಪ್ರೀತಿ ವಿಶ್ವಾಸಕ್ಕೆ, ವ್ಯವಸ್ಥೆಯ ವಿರೋಧದ ಚಳುವಳಿಗಳಿಗೆ ನಮ್ಮ ದೇಶ ಸಾಕ್ಷಿಯಾಗುತ್ತಲೇ ಇದೆ. ಲೋಕಪಾಲ ಜಾರಿಗಾಗಿ ನಡೆದ ಹೋರಾಟ ಜನರಲ್ಲಿ ಸುಪ್ತವಾಗಿರುವ ಆಕ್ರೋಶವನ್ನು ಸಾಬೀತುಪಡಿಸಿದೆ. ಆದರೆ, ಅಣ್ಣಾ ಹಜಾರೆ ಹಾಗೂ ಬಾಬಾ ರಾಮದೇವ ಅಂಥವರ ರಾಜಕೀಯ ಮಹತ್ವಾಕಾಂಕ್ಷೆಗಳು ಜನರನ್ನು ಮತ್ತೆ ನಿರಾಸೆಗೆ ತಳ್ಳಿದವು. ಅಣ್ಣಾ ಹಜಾರೆಯವರಿಗೆ ವೈಯಕ್ತಿಕ ರಾಜಕೀಯ ಆಕಾಂಕ್ಷೆಗಳಿರಲಿಕ್ಕಿಲ್ಲ. ಆದರೆ ಕೇಜ್ರಿವಾಲಾರ ಆಮ್ ಆದ್ಮಿ ಪಕ್ಷದಂಥ ಕಾರ್ಯಕ್ರಮವಿಲ್ಲದ, ಪರ್ಯಾಯ ಚಿಂತನೆಗಳಿಲ್ಲದ, ಕಾರ್ಪೋರೇಟ್ ಹೌಸ್‌ಗಳಿಂದ ಹಣಪಡೆದ ಪಕ್ಷದ ಪರವಾಗಿ ಅವರು ನಿಲ್ಲುತ್ತಾರೆ. ಇದರಾಚೆಗೂ ಈ ದೇಶದಲ್ಲಿ ರೈತ-ಕಾರ್ಮಿಕರ ಹೋರಾಟಗಳು, ನಿರುದ್ಯೋಗಿ ಯುವಕರ ಚಳುವಳಿಗಳು, ಮಹಿಳಾ ಹೋರಾಟಗಳು, ಮಧ್ಯಮವರ್ಗದ ಪ್ರತಿರೋಧಗಳು ನಡೆಯುತ್ತಲೇ ಇವೆ. ಬಹುತೇಕ ಮಾಧ್ಯಮಗಳೂ ಇಂದು ಬಹುರಾಷ್ಟ್ರೀಯ ಕಂಪನಿಗಳ ಕೈಸೇರುತ್ತಿರುವುದರಿಂದ ಮಾಧ್ಯಮವೂ ಉದ್ಯಮವಾಗಿ, ಜನರ ಪ್ರತಿರೋಧಗಳು ಪ್ರಚಾರ ಪಡೆಯುತ್ತಿಲ್ಲ. ಜನಪರ ಚಳುವಳಿಗಳು ವಿಭಿನ್ನ ರೀತಿಯಲ್ಲಿ ಪ್ರಚಾರದ ಮಾಧ್ಯಮಗಳನ್ನು ಬಳಸಿಕೊಳ್ಳಬೇಕಿದೆ. ಎಲ್ಲಕ್ಕಿಂತ ಮುಖ್ಯವಾಗಿ ವ್ಯವಸ್ಥೆಯನ್ನು ವಿರೋಧಿಸುವ ಎಲ್ಲ ಸಂಘಟನೆಗಳನ್ನು, ಜನಸಮೂಹಗಳನ್ನು ಒಗ್ಗೂಡಿಸುವ ಕೆಲಸವಾಗಬೇಕಿದೆ. ಜನಪರ ಆಶಯದ ಎಲ್ಲ ಮಾಧ್ಯಮಗಳು ಅಂತರ್ ಸಂಬಂಧವನ್ನು ರೂಪಿಸಿಕೊಳ್ಳಬೇಕಿದೆ. ಸೂಕ್ಷ್ಮ, ಸೈದ್ಧಾಂತಿಕ ಭಿನ್ನಾಭಿಪ್ರಾಯಗಳಾಚೆಗೂ ಜನಪರ ಚಿಂತಕರು ಒಟ್ಟಾಗಿ ಚಿಂತನ ಮಂಥನ ನಡೆಸಬೇಕಿದೆ. ಅಂಥ ಚಟುವಟಿಕೆಗೆ 'ಹೊಸತು' ಸದಾ ಸಿದ್ಧವಿದೆ. ಈ ಆಶಯದಿಂದಲೇ ಧಾರವಾಡದ ಕಲಾವಿದ ಶ್ರೀ ಮಾರುತಿ ಬಾಣದ ಅವರು ಈ ಸಲದ ವಿಶೇಷ ಸಂಚಿಕೆಯ ಮುಖಪುಟಕ್ಕೆ ತಮ್ಮ ಅರ್ಥಪೂರ್ಣವಾದ ಕಲಾಕೃತಿಯನ್ನು ರಚಿಸಿಕೊಟ್ಟಿದ್ದಾರೆ. ಅತ್ಯಂತ ಪ್ರತಿಕೂಲವಾದ ವಾತಾವರಣದಲ್ಲಿಯೂ ನಾವು ಸುಂದರ ಸಮಾಜ ನಿರ್ಮಿಸಲು ಹೊರಟಂತೆ, ಬಂಡೆಗಲ್ಲಿನ ಮೇಲೂ ಬೆಳೆದುನಿಂತ ಮರ 'ಹೊಸತು' ಬಳಗದ ಆಶಯದ ಸಂಕೇತ. ಹೊಸ ವರ್ಷ ನಮ್ಮೆಲ್ಲರ ಆಶಯಗಳಿಗೆ ಆಕರವಾಗಲಿ.

ಸಿದ್ಧನಗೌಡ ಪಾಟೀಲ.

ಸಂಪಾದಕೀಯ



# ಈ ತಿಂಗಳು

**ಮ**ಡೆಸ್ನಾನದ ವಿವಾದ ಒಂದು ಸುತ್ತು ತಿರುಗಿ ಮತ್ತೆ ಮೊದಲಿನ ಸ್ಥಿತಿಗೇ ಬಂದು ನಿಂತಿದೆ. ಮಡೆಸ್ನಾನವನ್ನು ನಿಷೇಧಿಸಬೇಕೆಂದು ಕಳೆದ ವರ್ಷ ಇದೇ ದಿನಗಳಲ್ಲಿ ತೀವ್ರವಾದ ಚಳುವಳಿ ನಡೆಯಿತು. ನಿಡುಮಾಮಿಡಿ ವೀರಭದ್ರ ಚನ್ನಮಲ್ಲ ಸ್ವಾಮಿಗಳು ನಾಡಿನ ಇತರ ಮಡೆಸ್ನಾನ ವಿರೋಧಿಸುವ ಸ್ವಾಮೀಜಿಗಳು ಬೆಂಗಳೂರಿನ ಸ್ವಾತಂತ್ರ್ಯ ಉದ್ಯಾನವನದಲ್ಲಿ ಧರಣಿ ಸತ್ಯಾಗ್ರಹ ನಡೆಸಿದರು. ರಾಜ್ಯದ ಎಲ್ಲ ಪ್ರಗತಿಪರ ಸಂಘಟನೆಗಳು ಈ ಚಳುವಳಿಗೆ ಬೆಂಬಲಿಸಿದವು. ಸರಕಾರ ಮಡೆಸ್ನಾನ ನಿಷೇಧಿಸುವುದಾಗಿ ಅಂದಿನ ಸಭೆಯಲ್ಲಿ ಭರವಸೆಯನ್ನು ಕೊಟ್ಟು ಕಾಲಹರಣ ಮಾಡತೊಡಗಿತು. ನಿಡುಮಾಮಿಡಿ ಸ್ವಾಮೀಜಿಯವರು ಕೆಲವು ಪ್ರಗತಿಪರ ಚಿಂತಕರೊಡನೆ ಕೂಡಿ ನ್ಯಾಯಾಲಯ ಮೆಟ್ಟಿಲೇರಿದರು. ಕರ್ನಾಟಕ ಉಚ್ಚ ನ್ಯಾಯಾಲಯ ವಾದ ವಿವಾದಗಳನ್ನು ಕೇಳಿ ಮಡೆಸ್ನಾನವನ್ನು ನಿಲ್ಲಿಸಿ ಎಡೆಸ್ನಾನ ಮಾಡಬಹುದೆಂದು ಹೇಳಿತು. ಒಟ್ಟಿನಲ್ಲಿ ಅನ್ನದ ಮೇಲೆ ಉರುಳಾಡುವುದು ತಪ್ಪಿಲ್ಲವಾದರೂ ಬ್ರಾಹ್ಮಣರು ಉಂಡ ಎಂಜಲೆಲೆಯ ಮೇಲೆ ಉರುಳಾಡುವುದು ತಪ್ಪಿತಲ್ಲಾ ಎಂದು ಒಂದು ರೀತಿಯ ಸಮಾಧಾನವಾದರೂ ಇತ್ತು. ಆದರೆ ಈ ಎಡೆಸ್ನಾನದ ತೀರ್ಪಿಗೆ ಸಮಾಧಾನಗೊಳ್ಳದ ಕುಕ್ಕೆ ಸುಬ್ರಮಣ್ಯರುಗಳು ಸುಪ್ರೀಂ ಕೋರ್ಟ್ ಮೊರೆಹೋದರು. ಸುಪ್ರೀಂ ಕೋರ್ಟ್ ಹೈಕೋರ್ಟಿನ ತೀರ್ಪಿಗೆ ತಡೆಯಾಜ್ಞೆ ಕೊಟ್ಟು ತನ್ನ ವಿವೇಚನಾ ದೃಷ್ಟಿಕೋನದಿಂದ ಯಥಾಸ್ಥಿತಿ ಕಾಪಾಡಿಕೊಳ್ಳಲು ಹೇಳಿದೆ. ಯಥಾಸ್ಥಿತಿಯೆಂದರೆ ಬ್ರಾಹ್ಮಣರು ಉಂಡುಬಿಟ್ಟ ಎಂಜಲೆಲೆಯ ಮೇಲೆ ಉರುಳಾಡಬಹುದು ಎಂಬುದು. ಆದೇಶ ಬಂದಿದ್ದೇ ತಡ ಕುಕ್ಕೆ ಸುಬ್ರಮಣ್ಯದ ಪುರೋಹಿತರು ಎಂಜಲೆಲೆಗಳನ್ನೂ ಅದರ ಮೇಲೆ ಉರುಳುವ ಜನರನ್ನೂ ಸಿದ್ಧಪಡಿಸಿ ಮಡೆಸ್ನಾನ ನಡೆಸಿಯೇ ಬಿಟ್ಟರು. ಅದೂ ಯುದ್ಧ ಗೆದ್ದ ಸಂಭ್ರಮದಲ್ಲಿ. ಅದನ್ನು ಮಾಧ್ಯಮಗಳೂ ಉತ್ಸಾಹದಿಂದಲೇ ತೋರಿಸಿದವು. ಇದಕ್ಕಿಂತ ನಾಚಿಕೆಗೇಡಿನ ಸಂಗತಿ ಇನ್ನೊಂದಿರಲಾರದು. ಈ ಬಾರಿ ಕೆಳಜಾತಿಯವರು ಮಾತ್ರ ಈ ಮಡೆಸ್ನಾನ ಮಾಡುವುದಿಲ್ಲ, ಬ್ರಾಹ್ಮಣರೂ ಮಾಡುತ್ತಾರೆ ನೋಡಿ, ಎಂದು ಹೇಳಲು ಒಬ್ಬ ಬ್ರಾಹ್ಮಣನನ್ನೂ ಎಂಜಲು ಎಲೆಯ ಮೇಲೆ ಉರುಳಿಸಲಾಯಿತು. ಇದರ ಹಿಂದಿನ ವಾಸ್ತವವೆಂದರೆ ಇದು ಕೇವಲ ಕೆಳಜಾತಿಯವರ ನಂಬಿಕೆಯಲ್ಲ ಮೇಲುಜಾತಿಯವರೂ ಉರುಳುತ್ತಾರೆ ಎಂಬ ಸಾಕ್ಷಿಯನ್ನು ಸುಪ್ರೀಂ ಕೋರ್ಟ್ ಮುಂದೆ ತೋರಿಸುವ ಹುನ್ನಾರ. ನಮ್ಮ ದೇಶದ ನ್ಯಾಯಾಂಗ ವ್ಯವಸ್ಥೆ ಜಾತ್ಯಾತೀತ ಎಂದು ತೋರಿಸಲು ಈ ಎಲ್ಲ ಜಾತಿಗಳ ಜನರ ನಂಬಿಕೆಗಳ ಆಚರಣೆಗೆ ಅನುಮತಿ ನೀಡಿದರೆ ಸಹಾಯಕವಾಗಬಹುದೇನೋ. ನಮ್ಮ ಸಂವಿಧಾನದ ಆಶಯಗಳಾದ ಜಾತ್ಯಾತೀತತೆ, ವೈಜ್ಞಾನಿಕ ಮನೋಭಾವ, ಈ ಮಡೆಸ್ನಾನ ನಿಷೇಧಕ್ಕೆ ತಡೆಯಾಜ್ಞೆ ನೀಡಿದ್ದರಿಂದ ಹೇಗೆ ಅನ್ವಯವಾಗುತ್ತವೆಂದು ತಿಳಿಯದಾಗಿದೆ. ಇಂಥ ಮೌಢ್ಯವನ್ನು ತಡೆಯಲು ಮತ್ತೆ ಲಕ್ಷಾಂತರ ಹಣ ಖರ್ಚು ಮಾಡಿ ಸರ್ವೋಚ್ಚ ನ್ಯಾಯಾಲಯಕ್ಕೇ ಹೋಗಬೇಕಿರುವುದು ಪರಿಸ್ಥಿತಿಯ ವ್ಯಂಗ್ಯ.

* * *

ದೆಹಲಿಯಲ್ಲಿ ಪ್ಯಾರಾ ಮೆಡಿಕಲ್ ವಿದ್ಯಾರ್ಥಿನಿಯ ಮೇಲೆ ನಡೆದ ಸಾಮೂಹಿಕ ಅತ್ಯಾಚಾರ ಹಾಗೂ ಸಾವು ಇಂದು ದೇಶದಾದ್ಯಂತ ಜನತೆಯ ಆಕ್ರೋಶಕ್ಕೆ ಕಾರಣವಾಗಿದೆ. ಶೀಲಾ ದೀಕ್ಷಿತ ಎಂಬ ಹಿರಿಯ ಕಾಂಗ್ರೆಸ್ ನಾಯಕಿ ಮುಖ್ಯಮಂತ್ರಿ ಆಗಿರುವ ಸ್ಥಳ, ಈ ದೇಶದ ರಾಜಧಾನಿಯಲ್ಲಿ ನಡೆದ ಈ ಘಟನೆ ದೇಶದ ಗಮನ ಸೆಳೆದಿದೆ. ಎಲ್ಲ ಕಡೆ ಪ್ರತಿಭಟನೆಗಳು ನಡೆಯುತ್ತಿವೆ. ಇಂಥ ಅಮಾನುಷ ಘಟನೆಯನ್ನು ಖಂಡಿಸಬೇಕಾದದ್ದು ಪ್ರತಿಯೊಬ್ಬ ಪ್ರಜೆಯ ಕರ್ತವ್ಯ. ಆದರೆ ಇದರಲ್ಲಿಯೂ ರಾಜಕೀಯ ಮಾಡಲು ಹೊರಟ ಬಿ.ಜೆ.ಪಿ. ಮತ್ತು ಆಮ್ ಆದ್ಮಿ ಪಕ್ಷಗಳ ನೀತಿ ಮಾತ್ರ ಖಂಡನೀಯ. ದೆಹಲಿಯಲ್ಲಿ ಕಾಂಗ್ರೆಸ್ ಅಧಿಕಾರದಲ್ಲಿ ಇರುವುದರಿಂದ ಬಿ.ಜೆ.ಪಿ. ಧ್ವನಿಯೆತ್ತಿ ಬೀದಿಗಿಳಿದಿದೆ. ದೆಹಲಿಯಲ್ಲಿ ನಡೆದ ಸಾಮೂಹಿಕ ಅತ್ಯಾಚಾರ ಹೊಸದೂ ಅಲ್ಲ, ಈ ವ್ಯವಸ್ಥೆಯಲ್ಲಿ ಕೊನೆಯದೂ ಅಲ್ಲ. ಅದಾದ ಮೇಲೆ ಕರ್ನಾಟಕದಲ್ಲಿ ಗುಲಬರ್ಗಾದ ಚಿಂಚೋಳಿ ತಾಲೂಕಿನ ಗಡಿಲಿಂಗ್ದಳ್ಳಿ, ಮಂಗಳೂರು, ಬೆಂಗಳೂರು ಹೀಗೆ ಎಲ್ಲ ಕಡೆ ಸಾಮೂಹಿಕ ಅತ್ಯಾಚಾರಗಳ ವರದಿಗಳಾಗುತ್ತಲೇ ಇವೆ. ಮಂಗಳೂರಿನಲ್ಲಿ ನಡೆದ ಘಟನೆಯಂತೂ ಯಾವ ನಾಗರಿಕನೂ ಸಹಿಸಲಾರದ ಘಟನೆ. ಮಹಿಳೆಯೊಬ್ಬಳನ್ನು ನಾಲ್ಕು ಜನ ಓಮ್ನಿ ವ್ಯಾನ್‌ನಲ್ಲಿ ಸಾಮೂಹಿಕ ಅತ್ಯಾಚಾರ ಮಾಡಿ ಬಿಸಾಕಿ ಹೋದಮೇಲೆ ರಿಕ್ಷಾ ಚಾಲಕನೊಬ್ಬ ಆಕೆಯನ್ನು ಕರೆದುಕೊಂಡು ಹೋಗಿ ಮತ್ತೆ ಮೂವರನ್ನು ಸೇರಿಸಿಕೊಂಡು ಅತ್ಯಾಚಾರ ಮಾಡಿದ್ದಾರೆ. ಬಿ.ಜೆ.ಪಿ.ಯ ಅಧಿಕಾರದಲ್ಲಿ ವಿಶ್ವ ಹಿಂದೂ ಪರಿಷತ್, ಭಜರಂಗ ದಳ, ಆರ್.ಎಸ್.ಎಸ್. ಪ್ರಬಲವಾಗಿರುವ ಪ್ರದೇಶದಲ್ಲಿಯೇ ಇಂಥ ಹೇಯಕೃತ್ಯ ನಡೆದಿರುವಾಗ ಬಿ.ಜೆ.ಪಿ. ಬಾಯಿಮುಚ್ಚಿಕೊಂಡು ಕುಳಿತಿದೆ. ವಿರೋಧ ಪಕ್ಷವಾದ ಕಾಂಗ್ರೆಸ್ ಮುಂಬರುವ ಚುನಾವಣೆಯಲ್ಲಿ ತಾನಾಗೇ ಅಧಿಕಾರ ಕೈಗೆ ಸಿಗುತ್ತದೆಂದು ಕಾಯ್ದು ಕುಳಿತಿದೆ. ಜನತೆ ರಾಜಧಾನಿ ದೆಹಲಿಯಲ್ಲಿ ನಡೆದ ಅತ್ಯಾಚಾರವನ್ನು ಖಂಡಿಸುತ್ತಲೇ ನಮ್ಮ ಸುತ್ತ ನಡೆದ ಘಟನೆಗಳಿಗೆ ಮೌನವಾಗಿರುವುದು ಯಾವ ನ್ಯಾಯ ? ರಾಜ್ಯದಲ್ಲಿರುವ ಮಹಿಳಾ ಸಂಘಟನೆಗಳು, ಸ್ತ್ರೀಶಕ್ತಿ ಗುಂಪುಗಳೂ ನಿತ್ಯ ನಡೆವ ಈ ಅತ್ಯಾಚಾರಗಳನ್ನು ಕೇಳಿ ಮೌನವಾಗಿರುವುದು, ಸಾಮಾಜಿಕ ಸಂಘಟನೆಗಳು ಈ ಘಟನೆಗಳು ತಮ್ಮ ವ್ಯಾಪ್ತಿಯ ವಿಷಯಗಳಲ್ಲ ಎಂದು ಭಾವಿಸಿ ಮೌನಪ್ರೇಕ್ಷಕರಾಗುವುದು ನಾವೆತ್ತ ಹೊರಟಿದ್ದೇವೆಂಬುದನ್ನು ಸೂಚಿಸುತ್ತದೆ. ಚಿಂಚೋಳಿ ತಾಲೂಕಿನ ಗಡಿಲಿಂಗ್ದಳ್ಳಿಯಲ್ಲಿ ದನ ಮೇಯಿಸಲು ಹೋದ ಹನ್ನೊಂದು ವರ್ಷದ ಬಾಲಕಿ ಮೇಲೆ ಅತ್ಯಾಚಾರ ನಡೆದರೆ, ದೂರು ಕೊಟ್ಟರೂ ಪೊಲೀಸರು ಮೌನವಾಗಿದ್ದಾರೆ. ಇಲ್ಲಿ ಸರಕಾರ, ಸಮಾಜ ಜೀವಂತವಾಗಿವೆಯೆ ?

* * *

ನೀರಾ ರಾಡಿಯಾ ಎಂಬ ಹೆಸರು ಕೆಲವು ದಿನ ನೇಪಥ್ಯಕ್ಕೆ ಸರಿದಿತ್ತು. ಕೇಂದ್ರ ಸರಕಾರದಲ್ಲಿ ಮಂತ್ರಿಗಳನ್ನು ನೇಮಿಸುವುದರಿಂದ ಹಿಡಿದು ಹೈಟೆಕ್ ಭ್ರಷ್ಟಾಚಾರಗಳ ಸಂಯೋಜಕಿಯಾದ ಈ ಮಹಿಳೆ ಮತ್ತೆ ಸುದ್ದಿಯಾಗಿದ್ದಾಳೆ. ಈ ಬಾರಿ ತನ್ನ ಗುರು ಪೇಜಾವರ ಶ್ರೀಗಳಿಗೆ ಎರಡು ಕೋಟಿ ಮೌಲ್ಯದ ಎರಡು ಬಸ್‌ಗಳನ್ನು ತನ್ನ ನಿಯತಿ ಚಾರಿಟೇಬಲ್ ಟ್ರಸ್ಟ್‌ನಿಂದ ದಾನ ಮಾಡಿದ್ದಾಳೆ. ಈ ಬಸ್‌ಗಳು ಸಂಚಾರಿ ವೈದ್ಯಕೀಯ ವಾಹನಗಳಾಗಿ ಕೆಲಸ ಮಾಡುತ್ತವಂತೆ. ಪಶ್ಚಿಮಘಟ್ಟದ ನಕ್ಸಲ್ ಪೀಡಿತ ಪ್ರದೇಶದಲ್ಲಿ ಈ ನೀರಾ ರಾಡಿಯಾ ಎಂಬಾಕೆಯ ಹಣದಿಂದ ಪೇಜಾವರ ಶ್ರೀಗಳು ತಮ್ಮ ಮಠದ ವತಿಯಿಂದ ಆರೋಗ್ಯ ಸೇವೆ ಕೈಗೊಳ್ಳಲಿದ್ದಾರೆ! ಸಾಮಾಜಿಕ ಆರೋಗ್ಯ ಹಾಳು ಮಾಡುತ್ತಲೇ ಗಿರಿಜನರ ಆರೋಗ್ಯ ಕಾಪಾಡಲು ಹೊರಟ ಪೇಜಾವರ ಶ್ರೀಗಳ ಜನಸೇವೆಯನ್ನು ಮೆಚ್ಚಲೇಬೇಕು. ಅದೂ ಭ್ರಷ್ಟಾಚಾರದ ಹಣದ ದೇಣಿಗೆಯಿಂದ ಜನಸೇವೆ ಮಾಡುವ ಈ ತಂತ್ರಗಾರಿಕೆಗೆ ನೊಬೆಲ್ ಪ್ರಶಸ್ತಿಯೋ ಅಥವಾ ಇನ್ನಾವುದೋ ಅದಕ್ಕೆ ಸಮನಾದ ಪ್ರಶಸ್ತಿಯನ್ನು ಅವರಿಗೆ ಕೊಡಿಸಬೇಕು. ಪೇಜಾವರ ಶ್ರೀಗಳು, ನೀರಾ ರಾಡಿಯಾ ಮೇಲೆ ಆರೋಪಗಳಿವೆ ಆದರೆ ಅವರಿನ್ನೂ ಅಪರಾಧಿಯಲ್ಲ, ಹೀಗಾಗಿ ಅವರಿಂದ ದುಡ್ಡು ಪಡೆದರೆ ತಪ್ಪೇನಿಲ್ಲ, ಅದೂ ಒಳ್ಳೆಯ ಕೆಲಸಕ್ಕೆ ಪಡೆಯುತ್ತಿದ್ದೇವೆಂದು ತಿಪ್ಪೆ ಸಾರಿಸಿದ್ದಾರೆ. ಈಗ ಜೈಲಿನಲ್ಲಿರುವ ಗಣಿಗಳ್ಳತನದ ಆರೋಪಿ ಜನಾರ್ದನ ರೆಡ್ಡಿಯವರು ತಿರುಪತಿ ತಿಮ್ಮಪ್ಪನಿಗೆ ವಜ್ರದ ಟೋಪಿ ಹಾಕಿ ತಮ್ಮ ಗಣಿ ಲೂಟಿಯ ಹಣಕ್ಕೆ ಪುಣ್ಯಪ್ರಾಪ್ತಿ ಮಾಡಿಸಿದ್ದರು. ಇದರಿಂದ ಸ್ಫೂರ್ತಿಗೊಂಡು ನೀರಾ ರಾಡಿಯಾ ಅವರ ಭ್ರಷ್ಟಾಚಾರದ ಹಣವನ್ನು ಪೇಜಾವರ ಶ್ರೀಗಳು ಪವಿತ್ರ ಮಾಡಲು ಹೊರಟಿದ್ದಾರೆ. ಅದಕ್ಕೆ ಸಮರ್ಥನೆ ಬೇರೆ, ನೀರಾ ರಾಡಿಯಾ ಮೇಲಿನ ಆರೋಪಗಳು ಸಾಬೀತಾಗಿಲ್ಲ ಎಂದು ಹೇಳುವ ಶ್ರೀಗಳಿಗೆ ನೀರಾ ರಾಡಿಯಾ ನಿಷ್ಕಳಂಕಿತೆ ಎಂಬುದೂ ಸಾಬೀತಾಗಿಲ್ಲ ಎಂದು ಯಾರಾದರೂ ಹೇಳಬಾರದೆ ?

* * *

ಓದುಗರಿಗೆ, ಲೇಖಕರಿಗೆ,
ಜಾಹಿರಾತುದಾರರಿಗೆ, ಹಿತೈಷಿಗಳಿಗೆ
'ಹೊಸತು' ಬಳಗದ
ಹಾಗೂ
ನವಕರ್ನಾಟಕ ಪ್ರಕಾಶನದ
ಹೊಸವರ್ಷದ
ಶುಭಾಶಯಗಳು



ಅಮೆರಿಕಾದ ಅಧ್ಯಕ್ಷ, ವಿದೇಶಾಂಗ ಕಾರ್ಯದರ್ಶಿ, ಮುಂತಾದ ನಾಯಕ ಶಿರೋಮಣಿಗಳು ಭಾರತಕ್ಕೆ ಭೇಟಿ ನೀಡಲು ಬಂದರೆ ಏನನ್ನೋ ಸುಲಿದುಕೊಂಡು ಹೋಗಲೆಂದೇ ಬರುತ್ತಾರೆಂಬುದು ಮೊದಲಿನಿಂದಲೂ ಖಚಿತವಾಗಿದೆ. ರಾಜಕೀಯವಾಗಿ ತಮ್ಮ ಪರವಾದ ನಿಲುವುಗಳನ್ನು ಹೇರುವುದು ಒಂದು ಉದ್ದೇಶ. ಅಷ್ಟೇ ಮುಖ್ಯವಾಗಿ, ವ್ಯಾಪಾರ ಕುದುರಿಸಿಕೊಂಡು ನಮ್ಮ ದೇಶದ ಮೇಲೆ ಹಿಡಿತ ಸಾಧಿಸಿಕೊಳ್ಳುವುದು ಇನ್ನೊಂದು ಉದ್ದೇಶ. ಅದಕ್ಕೇ ಒಬಾಮ ಬಂದಾಗ ಎರಡು ವಿಮಾನ ಭರ್ತಿ ವ್ಯಾಪಾರಿಗಳ ದಂಡು ಆತನ ಜೊತೆ ಬಂದಿದ್ದು. ಹಿಲರಿ ಕ್ಲಿಂಟನ್ ಬಂದಾಗಲೂ ಆಕೆಯ ಜೊತೆ ''ನಮ್ಮ ದೇಶಕ್ಕೆ ಸಹಾಯ ಮಾಡಲು'' ಸುಮಾರು ಐವತ್ತು ವ್ಯಾಪಾರಿ ಸಂಸ್ಥೆಗಳ ಹಿರಿಯ ಪ್ರತಿನಿಧಿಗಳು ಬರುತ್ತಾರೆ. ಒಬಾಮ ಜೊತೆ ತನ್ನ ಪೊಲೀಸರು, ನಾಯಿಗಳು, ಬೇಹುಗಾರರು, ಎಲ್ಲರನ್ನೂ ಕರೆತಂದಿದ್ದುದು ನೆನಪಿದೆಯಲ್ಲವೆ! ನಾಯಿಗಳು ಮತ್ತು ಪೊಲೀಸ್ ನಾಯಿಗಳು ದೆಹಲಿಯ ರಾಜಘಾಟ್ ಬಳಿ ಭಾರತದ ಕೆಲವು ಅಧಿಕಾರಿಗಳ ಮೇಲೆ ದೌರ್ಜನ್ಯ ನಡೆಸಿದ್ದುದು ವರದಿಯಾಗಿತ್ತು. ಒಬಾಮನ ಹತ್ತಿರ ಯಾರೂ ಹೋಗದಂತೆ ತಡೆಯಲು ಹಾಗೆ ಮಾಡಲಾಗಿದ್ದಿತಂತೆ. ಇದಾವುದೂ ನಮ್ಮ ಪ್ರಧಾನಿಯ ಪೇಟವನ್ನು ಹಾಯ್ದು ಮಿದುಳನ್ನು ತಲುಪುವುದಿಲ್ಲ. ಆತ ಚರ್ಮವನ್ನು ದಪ್ಪ ಮಾಡಿಕೊಂಡಿರುವಂತೆ ಮಿದುಳಿನ ಪ್ರದೇಶಕ್ಕೆ ಪ್ರವೇಶ-ದಿಗ್ಬಂಧನ ಹಾಕಿಬಿಟ್ಟಿದ್ದಾರೆ. ಒಬಾಮ ಬಂದಾಗ ತನ್ನಿಂದ ಇಂತಿಷ್ಟು ಬೋಯಿಂಗ್ ವಿಮಾನ ಕೊಳ್ಳಿ, ಇಂತಿಂತಹ ಅಂಗಡಿಗಳಿಗೆ ಅನುಮತಿ ನೀಡಿ, ವಿಶ್ವಸಂಸ್ಥೆಯಲ್ಲಿ ಇಂತಿಂಥದಕ್ಕೆ ಮತ ಚಲಾಯಿಸಿ, ಎಂದೆಲ್ಲಾ ಗರ್ವದಿಂದ ಹೇಳಿ ಸಿಂಗ್-ಸಾಹೇಬರ ಕೈಗಳನ್ನು ತಿರುಚಿಹೋದದ್ದು ಫಲ ನೀಡಿದೆ. ಆರಂಭದಿಂದಲೂ 'ಹೊಸತು' ಇಂತಹ ಸಂಗತಿಗಳನ್ನು ಗುರುತಿಸುತ್ತಾ ಬಂದಿದೆ, ಓದುಗರು ಅದಕ್ಕೆ ತಮ್ಮದೇ ಇನ್ನಷ್ಟು ಮಾಹಿತಿ ಮತ್ತು ವಿಶ್ಲೇಷಣೆಗಳನ್ನು ನೀಡಿ ಅವನ್ನು ಪುಷ್ಟೀಕರಿಸುತ್ತಾ ಬಂದಿದ್ದಾರೆ. ಆದರೆ ನಮ್ಮ ದೇಶದ ಮಾಧ್ಯಮಗಳು ಬಹುಮಟ್ಟಿಗೆ ಅದನ್ನು ದಾಖಲಿಸಿಲ್ಲ; ಅವಕ್ಕೆ ಅದನ್ನು ಮಾಡಲು ಅದೇನು ಮುಜುಗರವೋ ತಿಳಿಯದು ಎನ್ನುವಂತಿಲ್ಲ, ಏಕೆಂದರೆ ಅದು ಮುಜುಗರವಲ್ಲ, ಬದಲಾಗಿ ತಮ್ಮ ಜೇಬುಗಳನ್ನು ತುಂಬಿಕೊಳ್ಳುವ ಹುನ್ನಾರ. ಅಮೆರಿಕಾದ ಅಧ್ಯಕ್ಷ ಮತ್ತು ವಿದೇಶಾಂಗ ಕಾರ್ಯದರ್ಶಿ ಇಂತಹ ''ಜುಜುಬಿ'' ವ್ಯವಹಾರಗಳನ್ನು ಭಾರತದ ನಾಯಕರ ಜೊತೆ ಚರ್ಚಿಸುವುದಿಲ್ಲವೆಂಬ ಹಾರಿಕೆಯ ಸಮಜಾಯಿಷಿ ಕೊಡುವುದು ಅವುಗಳ ಪದ್ಧತಿ. ಇದೆಲ್ಲಾ ನಾಟಕ, ದೇಶಕ್ಕೆ ಅದು ದುರಂತ. ಅತ್ಯುನ್ನತ ಮಟ್ಟದ ಸಭೆಗಳಲ್ಲಿ ಪಾಲ್ಗೊಳ್ಳುತ್ತಿದ್ದ ನಮ್ಮ ದೇಶದ ಮಾಜಿ ವಿದೇಶಾಂಗ ಕಾರ್ಯದರ್ಶಿ ಶ್ರೀ. ಶ್ಯಾಮ್ ಶರಣ್ ''ದಿ ಹಿಂದು'' ಪತ್ರಿಕೆಯ ಡಿಸೆಂಬರ್ ೭ರ ಸಂಚಿಕೆಯಲ್ಲಿ ಒಂದು ದೀರ್ಘ ಲೇಖನ ಬರೆಯುತ್ತಾ ತಮ್ಮ ಅನುಭವವನ್ನು ಬಹಿರಂಗವಾಗಿ ದಾಖಲಿಸಿ ಉಪಕರಿಸಿದ್ದಾರೆ. ಲೇಖನದ ಒಂದು ಭಾಗವನ್ನು ಅನುವಾದಿಸಿ ಕೊಡುವುದು ಸೂಕ್ತವೆನಿಸುತ್ತದೆ: ''ಅಧ್ಯಕ್ಷ ಜಾರ್ಜ್ ಬುಷ್ ನವಂಬರ್ ೨೦೦೮ರಲ್ಲಿ ವಾಷಿಂಗ್‌ಟನ್ನಿನಲ್ಲಿ ಪ್ರಧಾನಿ ಮನಮೋಹನ ಸಿಂಗರಿಗೆ ಒಂದು ಭೋಜನಕೂಟ ಏರ್ಪಡಿಸಿದ್ದುದನ್ನು ಮತ್ತು ಆ ಸಂದರ್ಭದ ಮಾತಿನ ಸರಣಿಯೊಂದನ್ನು ನೆನಪಿಸಿಕೊಳ್ಳಬಯಸುತ್ತೇನೆ. ಅಂದಿನ ವಿದೇಶಾಂಗ ಕಾರ್ಯದರ್ಶಿ ಕೊಂಡಲಿಸ್ಸ ರೈಸ್ ಹೇಳಿದರು, ಪರಮಾಣು ಒಪ್ಪಂದಕ್ಕೆ ಅನುವು ಮಾಡಿಕೊಡಲು ಅಮೆರಿಕಾ ಅತಿಯಾಗಿ ಹೆಣಗಬೇಕಾಯಿತು; ಅಷ್ಟು ಮಾಡಿದ ಮೇಲೆ ಭಾರತವು ತನ್ನ ಹೊಸ ಪರಮಾಣು ಸ್ಥಾವರಗಳಿಗೆ ಅಮೆರಿಕಾದ ಕಂಪನಿಗಳಿಂದ ಮಾಲುಗಳನ್ನು ಕೊಳ್ಳಬೇಕೆಂಬ ನಿರೀಕ್ಷೆ ತಮ್ಮದು, ಎಂದು. (ಇಷ್ಟು ಬಿಚ್ಚುನುಡಿ ಅಪರೂಪವಲ್ಲ, ಆದರೆ ನಮ್ಮ ಮಾಧ್ಯಮಗಳು ಅವನ್ನು ತೇಲಿಸಿಬಿಡುತ್ತವೆ.) ನಮ್ಮ ಪ್ರಧಾನಿ ಅದಕ್ಕೆ ಉತ್ತರ ನೀಡುವ ಮುನ್ನವೇ ಅಧ್ಯಕ್ಷ ಬುಷ್ (ವಾತಾವರಣವನ್ನು ಬದಲಿಸಲು) ''ನೀವು ಕೊಳ್ಳಿ, ಬಿಡಿ, ಅದು ಮುಖ್ಯವಲ್ಲ'' ಎಂದರು.'' ಹಾಗೇ ಮುಂದುವರಿದು ಇನ್ನೂ ಏನೇನೋ ಹೇಳಿದರು, ಅದೆಲ್ಲಾ ತಿಪ್ಪೆ ಸಾರಿಸುವ ಮಾತು. ನಿಜವಾದ ಸಂಗತಿಯೆಂದರೆ ವ್ಯಾಪಾರದಲ್ಲಿ ಲಾಭ ಗಳಿಸಿಕೊಳ್ಳಲು, ತಮ್ಮ ದೇಶದಲ್ಲಿ ಉದ್ಯೋಗಗಳನ್ನು ಹೆಚ್ಚಿಸಿಕೊಳ್ಳಲು, ಅಮೆರಿಕಾ ಏನು ಬೇಕಾದರೂ ಮಾಡುತ್ತದೆ. ನಮ್ಮ ಮೂಸಂಡಿ ನಾಯಕರು ಗೋಣು ಅಲ್ಲಾಡಿಸಿ ದೇಶವನ್ನು ಹರಾಜಿಗಿಡುತ್ತಾರೆ. ಇವರು ದುರುಳರು, ಜನದ್ರೋಹಿಗಳು, ದೇಶದ ಹಿತವನ್ನು ಗಾಳಿಗೆ ತೂರುವಂಥ ಅಯೋಗ್ಯರು. ಈಗ ಅದಕ್ಕೆ ಇನ್ನೊಂದು ಪುರಾವೆ ದೊರೆತಿದೆ. ವಾಲ್‌ಮಾರ್ಟ್ ತನ್ನ ಅಂಗಡಿಗಳನ್ನು ಭಾರತದಲ್ಲಿ ತೆರೆಯಲು ೧೨೫ ಕೋಟಿ ರೂಪಾಯಿಗಳನ್ನು ಖರ್ಚು ಮಾಡಿ ಸರ್ಕಾರಿ ಅಧಿಕಾರಿಗಳನ್ನು, ರಾಜಕೀಯ ನಾಯಕರನ್ನು ಪುಸಲಾಯಿಸಿದೆ. ಅದಕ್ಕೆ ಮುಸುಕು ಹಾಕಿ ''ಲಾಬಿ ಮಾಡುವುದು'' ಎಂದು ಕರೆಯುತ್ತಾರೆ. ಅಂದರೆ, ಲಾಭಕ್ಕಾಗಿ ಹಾತೊರೆದು ಭ್ರಷ್ಟ ನಾಯಕ-ಅಧಿಕಾರಿಗಳ ಜೇಬು ತುಂಬಿಸುವುದು, ಎಂದರ್ಥ. ಇದೆಲ್ಲಾ ''ದೇಶದ ರೈತರ ಏಳಿಗೆಗಾಗಿ'' ಎನ್ನುತ್ತಾ ರೈತರ ಕತ್ತು ಹಿಚುಕುವ ದುಷ್ಟತನ. ಇಂತಹ ರಾಜಕೀಯ ನಾಯಕರು ಕೇವಲ ಕಾಂಗ್ರೆಸ್ಸಿಗರು ಮಾತ್ರವಲ್ಲ, ಗಡ್ಕರಿ ಪಕ್ಷದ ಬಾಂಧವರೂ ಅದನ್ನೇ ಮಾಡುವುದು. ಇವರಿಬ್ಬರ ಜೊತೆಗೆ ಮುಲಾಯಂ ಸಿಂಗ್ ಮತ್ತು ಮಾಯಾವತಿ ಸಹ! ಪರ್ಯಾಯಕ್ಕಾಗಿ ಹೋರಾಟ ನಡೆಸಬೇಕಾದ ಜನತೆಗೆ ಸವಾಲು ಬಹಳ ದೊಡ್ಡದು, ಆದರೆ ಎದುರಿಸದೆ ಗತ್ಯಂತರವಿಲ್ಲ.

* * *

೧೨-೧೨-೧೨ ನೂರು ವರ್ಷಕ್ಕೊಂದು ಬಾರಿ ಬರುತ್ತದೆಂದು ಶಾಲಾಮಕ್ಕಳಿಗೂ ತಿಳಿಯುತ್ತದೆ. ೨೦೧೨ರ ಡಿಸೆಂಬರ್ ೧೨ರ ನಂತರ ಮತ್ತೆ ೨೧೧೨ರ ಡಿಸೆಂಬರ್ ೧೨ರಂದು ೧೨-೧೨-೧೨ ಮತ್ತೆ ಬರುತ್ತದೆ. ಬಂದೇ ಬರುತ್ತದೆ, ಏಕೆಂದರೆ ಪ್ರಳಯವೆಂಬುದು ಹುಚ್ಚು ಮೋಸ. ಪರಮಾಣು ಬಾಂಬುಗಳನ್ನು ಸುರಿದು ಭೂಮಿಯ ಮೇಲಿನ ಜೀವವನ್ನು ನಾಶಗೈದರೂ ೧೨-೧೨-೧೨ ಬಂದೇಬರುತ್ತದೆ. ಅದಿರಲಿ, ಪ್ರಸ್ತುತ ೧೨-೧೨-೧೨ರಂದು ಭಾರತದ ಸರ್ಕಾರ ಒಂದು ಅಮೋಘ ಅಸಂಗತ ಹೇಳಿಕೆ ನೀಡಿತು. ಅದು ಅಪರೂಪವೇನಲ್ಲ,ಬಿಡಿ. ಆದರೂ ಅದರಲ್ಲಿ ಒಂದು ವಿಶೇಷವಿದೆ: ಅಮೆರಿಕಾ ಜೊತೆ ಧೃತರಾಷ್ಟ್ರಾಲಿಂಗನದಲ್ಲಿ ಸಿಲುಕಿದಾಗ ಇಂತಹ ವಿಪರ್ಯಾಸ ಅನಿವಾರ್ಯ. ವಿಚಾರ ಇದು: ಉತ್ತರ ಕೊರಿಯಾ ಒಂದು ಯುದ್ಧ ಕ್ಷಿಪಣಿಯ ಪ್ರಯೋಗ ನಡೆಸಿ ಯಶಸ್ವಿಯಾಯಿತೆಂಬ ಸಮಾಚಾರವನ್ನು ಆಕಾಶವಾಣಿ ಬಿತ್ತರಿಸಿತು, ಭಾರತ ಅದನ್ನು ಖಂಡಿಸಿದೆ. ಅದೇ ವಾರ್ತಾಪ್ರಸಾರದಲ್ಲಿ ಇನ್ನೊಂದು ಸಮಾಚಾರವೂ ಇತ್ತು: ''ಭಾರತವು ಒಡಿಶಾದ ಕೇಂದ್ರದಿಂದ ಯುದ್ಧಕ್ಷಿಪಣಿಯೊಂದರ ಉಡಾವಣೆ ಪ್ರಯೋಗದಲ್ಲಿ ಯಶಸ್ವಿಯಾಯಿತು, ಉಡಾವಣೆ ಸಮಯದಲ್ಲಿ ಪ್ರಧಾನಿಯ ರಕ್ಷಣಾ ಸಲಹೆಗಾರ ಡಾ॥ ವಿ. ಕೆ. ಸಾರಸ್ವತ್ ಹಾಜರಿದ್ದರು.'' ಉತ್ತರ ಕೊರಿಯಾದ ಆರ್ಥಿಕತೆಯ ಹಿನ್ನೆಲೆಯಲ್ಲಿ ಯುದ್ಧ ಕ್ಷಿಪಣಿ ಅರ್ಥಹೀನ. ಅಲ್ಲದೆ, ತಕ್ಷಣದಲ್ಲಿ ಆ ಕ್ಷಿಪಣಿಯಿಂದ ದೊರೆಯುವ ರಕ್ಷಣೆ ಅಷ್ಟರಲ್ಲೇ ಇದೆ! ಹಾಗಿದ್ದರೆ, ಭಾರತವು ಇಂತಹ ಕ್ಷಿಪಣಿಗಳಿಗಾಗಿ ಹಣ ಸುರಿಯಬೇಕೆ? ಸರ್ವಥಾ ವ್ಯರ್ಥ. ಉತ್ತರ ಕೊರಿಯಾ ಮೇಲೆ ಆಕ್ಷೇಪ ಎತ್ತುವ ಭಾರತ ತನ್ನ ಪ್ರಯೋಗವನ್ನು ಸಮರ್ಥಿಸಿಕೊಳ್ಳುವುದು ಹೇಗೆ? ಅಮೆರಿಕಾಕ್ಕೆ ಉತ್ತರ ಕೊರಿಯಾ ಮೇಲಿನ ಖಂಡನೆ ಕೇಳಿಸಿದರೆ ಸಾಕು! ಅದು ನಮ್ಮ ಅರ್ಥರಹಿತ ವಿದೇಶಾಂಗ ನೀತಿ.

* * *

ಡಿಸೆಂಬರ್‌ನಲ್ಲಿ ಬೆಂಗಳೂರಿನ ಅಭಿನವ ಪ್ರಕಾಶನವು 'ಶತಮಾನ ಚಿಂತನೆ' ಮಾಲಿಕೆಯಲ್ಲಿ ಪ್ರೊಫೆಸರ್ ಕಾರ್ಲೋಸ್ ಸಂಪಾದಿಸಿದ ''ಜಾರ್ಜ್ ಲೂಯಿ ಬೋರ್ಹೆಸ್'' ಎಂಬ ೧೦೮ ಪುಟಗಳ ಪುಸ್ತಕ ಹೊರತಂದಿತು. ಅದಲ್ಲದೆ ಬೇರೆ ಐದು ಪುಸ್ತಕಗಳೂ ಪ್ರಕಟಗೊಂಡವು. ಬೋರ್ಹೆಸ್ ಅರ್ಜೆಂಟೀನಾದ ಬರಹಗಾರ ಮತ್ತು ಚಿಂತಕ. ಒಂಬತ್ತನೆ ವಯಸ್ಸಿಗೆ ಆತ ಚೆಸ್ ಆಡುವ ಪ್ರವೀಣ; ಅದೇ ವಯಸ್ಸಿನಲ್ಲಿ ಆಸ್ಕರ್ ವೈಲ್ಡ್‌ನ ಒಂದು ನಾಟಕವನ್ನು ಸ್ಪ್ಯಾನಿಶ್ ಭಾಷೆಗೆ ಅನುವಾದಿಸಿದ್ದನಂತೆ. ಆತನ ಬಗೆಗಿನ ಒಂದು ಲೇಖನವನ್ನು ಬಿ. ಎಸ್. ಶೈಲಜಾ ಕನ್ನಡಕ್ಕೆ ಅನುವಾದಿಸಿದ್ದಾರೆ. ಅದರ ಮೂಲ ಲೇಖಕ ಗರಯಾಲ್ಡ್ ಎಂಬುವವ. ''ಪಾತ್ರಗಳ ನಂಬಿಕೆ ಯಾವುದೇ ಆಗಿರಲಿ ಪಕ್ಷಪಾತವಿಲ್ಲದೆ ಅವೆಲ್ಲಕ್ಕೂ ಒಂದೇ ಸಮನಾದ ಮಾನವೀಯ ಬೆಂಬಲ ನೀಡುತ್ತಾರೆ'' ಎಂದು ಬೋರ್ಹೆಸ್ ಬಗ್ಗೆ ಅಲ್ಲಿ ಹೇಳಲಾಗಿದೆ. ''ಎಲ್ಲ ಪಾತ್ರಗಳನ್ನೂ ಮಾನವೀಯ ದೃಷ್ಟಿಯಿಂದ ಸಮರ್ಥಿಸುತ್ತಾರೆ'' ಎಂದೂ ಬರೆದಿದ್ದಾರೆ. ಇನ್ನೊಂದು ಮಾತು ಹೀಗಿದೆ: ''ಅಲೀಶಿಯಾ ಹುರಾದೋ(ರ) ಪ್ರಕಾರ ಬೋರ್ಹೆಸ್ ಕೃತಿಗಳಲ್ಲಿ ನಿಯತಿಯು ಅನಿರೀಕ್ಷಿತತೆಯ ವಿರುದ್ಧವಾಗಿ ಕಾಣಿಸಿಕೊಳ್ಳುತ್ತದೆ. ವಿಧಿಲಿಖಿತವಾದದ್ದನ್ನು ಈಡೇರಿಸುವುದರಿಂದ ನಿಶ್ಚಿತತೆ ಹಾಗೂ ಆತ್ಮವಿಶ್ವಾಸ ಮೂಡುತ್ತದೆ.'' ಇದೇಕೋ ಸಂಕೀರ್ಣ ವಿಚಾರದಂತೆ ಕಾಣುತ್ತದೆ, ಅದನ್ನು ಹೇಗೆ ಅರ್ಥೈಸಿಕೊಳ್ಳಬೇಕೆಂದು ತಿಳಿಯುವುದಿಲ್ಲ. ''ವಿಧಿಲಿಖಿತ'' ಎಂಬುದು ಸರಿಯಾದರೆ, ಅದನ್ನು ಈಡೇರಿಸುವುದೆಂದರೇನು? ಅದು ಹೇಗೂ ತಾನೇ ಈಡೇರಬೇಕಲ್ಲವೆ? ಅದೇ ಬೋರ್ಹೆಸ್ ಕೃತಿಗಳಲ್ಲಿ ''ನಿಜವಾದ ನಿಯತಿ ಎಂದರೆ ಯಾವಾಗಲೂ ಸಾಮೂಹಿಕ ನಿಯತಿಯೇ ಆಗಿರುತ್ತದೆ. ಈ ಸಾಮೂಹಿಕ ನಿಯತಿಯಲ್ಲಿ ಭಾಗವಹಿಸಬೇಕಾದರೆ ಪಾತ್ರಗಳು ತಮ್ಮ ವೈಯಕ್ತಿಕ ನಿಯತಿಯ ಆಮಿಷಗಳನ್ನು ತೊರೆಯಬೇಕು,'' ಎಂಬ ವ್ಯಾಖ್ಯಾನವೂ ಇದೆ. 'ನಿಯತಿಯ ಆಮಿಷ'ವೇನೆಂಬ ಕುತೂಹಲವಿದ್ದರೂ ಸರಿಯೆ, ಮೂಲತಃ ಸಮೂಹದ ಪರವಾದ ಆಶಯ ಸ್ವಾಗತಾರ್ಹವಾಗಿದೆ. ಆದರೆ ಇದೇ ಬೋರ್ಹೆಸ್ ''ಒಂದು ಕಾಲದಲ್ಲಿ ಚಿಲಿಯ ಸರ್ವಾಧಿಕಾರಿಯಾಗಿದ್ದ

೧೮ನೇ ಪುಟಕ್ಕೆ








# ಪರಿವಿಡಿ

# ಪರಿವಿಡಿ



---

***ಮುಖಚಿತ್ರ :*** ಧಾರವಾಡದ ಕಲಾವಿದ ಶ್ರೀ ಮಾರುತಿ ಬಾಣದ ಅವರು ರಚಿಸಿದ ತೈಲ ವರ್ಣಚಿತ್ರ

***ವಿನ್ಯಾಸ :*** ನವಕರ್ನಾಟಕ ವಿನ್ಯಾಸ

***ಈ ಸಂಚಿಕೆಯ ಚಿತ್ರಗಳ ಕಲಾವಿದರು :***
ಸುವರ್ಣ, ಶ್ರೀಹರಿ, ಜಿಎಂಬೊ, ಗೋಪಿ ಹಿರೇಬೆಟ್ಟು, ಕಮಲಂ ಅರಸು, ಪ್ರತೀಕ್ ಸಿನ್ಹಾ, ವಿ. ಗೋಪಾಲ್, ರವಿಹೆಗ್ಗಡಿ, ಉಮೇಶ್ ಹಿರೇಮಠ, ಐ. ಬಿ. ರಾಠೋಡ್, ಎಂ. ಜಿ. ಹೆಗಡೆ

***ಕಚೇರಿ ಸಹಕಾರ :*** ಜಿ. ವಿ. ತೇಜೋವತಿ
















**'ಹೊಸತು' ನವೆಂಬರ್ ಸಂಚಿಕೆ**

'ಹೊಸತು' ನವೆಂಬರ್ ೨೦೧೨ರ ಸಂಚಿಕೆಯಲ್ಲಿ ಮೂಡಿಬಂದ ಹಿಂದಿ ಚಿತ್ರನಟ ಎ. ಕೆ. ಹಂಗಲ್ ಅವರ ಪರಿಚಯ ಜೀವಂತಿಕೆಯಿಂದ ತುಂಬಿಬಂದಿದೆ. ಅವರ ತೆರೆಮರೆಯ ಜೀವನವನ್ನು ಲೇಖಕರು ತುಂಬ ಸೊಗಸಾಗಿ ತೆರೆದಿರಿಸಿದ್ದಾರೆ.

ಶೋಲೆಯಲ್ಲಿಯ ಮಂದದೃಷ್ಟಿಯ ಇಮಾಮರು ತಮ್ಮ ಮಗ ಡಾಕೂ ಗಬ್ಬರ್ ಗುಂಡಿಗೆ ಬಲಿಯಾದನೆಂಬ ಬರಸಿಡಿಲಿನಂಥ ಸುದ್ದಿ ಕೇಳಿದಾಗಲೂ ''ಈ ಊರಿಗೆ ಹುತಾತ್ಮನಾಗಲೆಂದಾದರೂ ತನಗೆ ಮತ್ತೊಬ್ಬ ಮಗನನ್ನು ಕೊಡಬಾರದಾಗಿತ್ತೇ ಯಾ ಅಲ್ಲಾ'' ಎಂದು ಉದ್ಗರಿಸಿ ನಮಾಜಕ್ಕೆ ತೆರಳುವುದು ಎಷ್ಟೋಕಾಲ ನೆನಪಿನಲ್ಲುಳಿಯುವಂಥ ಮಾತು. ಹಂಗಲ್ ಅಭಿನಯ ಅನುಪಮ.

ಬುದ್ದಣ್ಣ ಅಪ್ಪಟ ಪ್ರೇಮಭಾವದ ಮಣ್ಣಿನ ಮಗ. ಅಪ್ರತಿಮ ಪ್ರತಿಭಾವಂತ. ಕರ್ನಾಟಕ ಬಯಸಿದ್ದರೆ ಮಹಾರಾಷ್ಟ್ರದಲ್ಲಿ ಕನ್ನಡದ ದ್ವೇಷ ಮರೆಸುವ ಸಮರ್ಥ ಸಾಂಸ್ಕೃತಿಕ ರಾಯಭಾರಿಯಾಗಿ ಬಳಸಿಕೊಳ್ಳಬಹುದಿತ್ತು. ನಮ್ಮ ಪ್ರವೃತ್ತಿಗಳ ದೃಷ್ಟಿ ಇಂಥ ಎಲೆಮರೆಯಕಾಯಿಯತ್ತ ಅದೆಂತು ಬಿದ್ದೀತು. ಹೆಚ್ಚು ಅಗತ್ಯಬಿದ್ದ ಮಹಾರಾಷ್ಟ್ರ - ಕರ್ನಾಟಕದ ಕೊಂಡಿಯಾಗುವುದಕ್ಕೆ ಬದಲು ರಷ್ಯಾ - ಭಾರತದ ಕೊಂಡಿಯಾದರು, ಸಾರ್ಥಕ ಜೀವನ ಸಾಗಿಸಿದರು ಡಾ|| ಬುದ್ದಣ್ಣ ಹಿಂಗಮಿರೆ.

ಆದರೆ ಒಂದು ಸಂಶಯ, ತಾವು ಈ ಸಂಚಿಕೆಯಲ್ಲಿ ಶ್ರದ್ಧಾಂಜಲಿ ಸಲ್ಲಿಸಿರುವ ಹಂಗಲ್, ಬುದ್ದಣ್ಣ, ಸುಬ್ಬರಾವ್ ಎಲ್ಲ ಎಡಪಂಥೀಯರಾಗಿರುವುದು ಕಾಕತಾಳೀಯವಲ್ಲ ತಾನೇ? ಉಳಿದ ಪತ್ರಿಕೆಗಳು ಪ್ರಾಮುಖ್ಯ ನೀಡದ ತೆರೆಮರೆಯ ಸಾಧಕರ ಸಾಧನೆ, ಪರಿಚಯಗಳ ಮೇಲೂ ಅವರ ಇಸಂ ಖಂಡಿಸಿಯಾದರೂ 'ಹೊಸತು' ಬೆಳಕು ಚೆಲ್ಲಲು 'ಹೊಸತು' ಸದಾ ಹೊಸತಾಗಿರಲಿ.

ಯಕ್ಸಂಬಿ **ಡಾ|| ಅನಿಲ ಕಮತಿ**

**ಅಗಲಿದ ಮಿತ್ರ ಡಾ|| ಅನಿಲ ಕಮತಿ**

ಈ ಮೇಲಿನ ತಮ್ಮ ಕಡೆಯ ಪತ್ರ ಬರೆದ ಡಾ|| ಅನಿಲ ಕಮತಿ ಯವರು 'ಹೊಸತು' ಅಭಿಮಾನಿಗಳು. ಬೆಳಗಾವಿ ಜಿಲ್ಲೆಯ ಗಡಿಪ್ರದೇಶ ಯಕ್ಸಂಬಿ ಗ್ರಾಮದಲ್ಲಿದ್ದುಕೊಂಡೇ ಕನ್ನಡಪರ ಕೆಲಸಗಳಲ್ಲಿ ಕ್ರಿಯಾಶೀಲರಾಗಿದ್ದರು. ಕನ್ನಡ ರಾಜ್ಯೋತ್ಸವವನ್ನು ಅರ್ಥಪೂರ್ಣವಾಗಿ ಆಚರಿಸುತ್ತ ಆ ಸಂದರ್ಭವನ್ನು ಕನ್ನಡ - ಕರ್ನಾಟಕದ ಅಧ್ಯಯನಕ್ಕೆ ಪೂರಕವಾಗಿ ಬಳಸುತ್ತಿದ್ದರು. ನಿರಂತರವಾಗಿ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿ ಕುರಿತ ಕಾರ್ಯಕ್ರಮ, ಪ್ರಕಟನೆ, ಸಂವಾದ ನಡೆಸಿ ಆ ಭಾಗದ ಯುವಕರಿಗೆ ಮಾರ್ಗದರ್ಶಿಯಾದವರು. ಇಂಥ ಕ್ರಿಯಾಶೀಲ ವ್ಯಕ್ತಿ ಕಳೆದ ತಿಂಗಳು ನಿಧನರಾದರು. ಸಂಘಜೀವಿಯಾಗಿದ್ದ ಡಾ|| ಅನಿಲ ಕಮತಿಯವರ ಅಕಾಲಿಕ ಸಾವು ಆಘಾತ ತಂದಿದೆ. ಅವರ ಸಾವಿಗಿಂತ ಕೆಲವೇ ದಿನಗಳ ಮುಂಚೆ ಮೇಲಿನ ಪತ್ರವನ್ನು ಡಾ|| ಅನಿಲ ಕಮತಿ 'ಹೊಸತು'ಗೆ ಬರೆದಿದ್ದಾರೆ. ಪತ್ರದ ಕೊನೆಗೆ ಅವರು ಕೆಲ ಸೂಚನೆಗಳನ್ನೂ ಕೊಟ್ಟಿದ್ದಾರೆ. ಅವರ ಆಶಯಗಳನ್ನು 'ಹೊಸತು' ಗೌರವಿಸುತ್ತದೆ. ಒಬ್ಬ ಕ್ರಿಯಾಶೀಲ ವಿಚಾರವಂತ ಓದುಗಮಿತ್ರನ ಅಗಲಿಕೆಗೆ ಸಂತಾಪ ವ್ಯಕ್ತಪಡಿಸುತ್ತದೆ.

**– ಸಂಪಾದಕ**

**ಹೊಸತನ್ನು ನೀಡಿದ 'ಹೊಸತು' ಸಂಚಿಕೆ**

ಕಲಾವಿದ ಸಮಾಜಮುಖಿ ಚಿಂತಕ, ಮಾನವೀಯ ಮೌಲ್ಯಗಳನ್ನು ಬಿತ್ತರಿಸುವ ಸೂಕ್ಷ್ಮ ಸಂವೇದಕ ಎನ್ನುವ ತಾತ್ವಿಕ ನಿಯಮಗಳಿಗೆ ಅನ್ವಯಿಸುವಂತಹ ಕಲಾವಿದನ ಅಂತರಂಗ ಬಯಲು ಮಾಡಿದ ಲೇಖಕ ಕೆ. ವಿ. ಸುಬ್ರಹ್ಮಣ್ಯಂ ಅವರಿಗೆ ನಮಸ್ಕಾರ. ಉತ್ತಮ ಲೇಖನವನ್ನು




ಬರೆದು ಓದುಗರಿಗೆ ನೀಡಿದ್ದೀರಿ. ಅಲ್ಲದೆ 'ಹೊಸತು' ಪತ್ರಿಕೆ ಸೃಜನಶೀಲವಾದ ಬರಹಗಳ ಮೂಲಕ ಉತ್ತಮ ಮನಸ್ಥಿತಿಯನ್ನು ರೂಪಿಸುವ ಓದುಗರನ್ನು ರೂಪಿಸುತ್ತಿದೆ. ನವೆಂಬರ್ ಸಂಚಿಕೆಯ ಕೊನೆಯ ಪುಟದಲ್ಲಿ ಪ್ರಕಟವಾದ ಡಾ|| ಶಿವಾನಂದ ಬಂಟನೂರ ಅವರ ಕಲಾಕೃತಿಗಳನ್ನು ನೋಡಿ ಮನಸ್ಸಿಗೆ ಆನಂದ ಮತ್ತು ಚಿಂತನಾತ್ಮಕ ವಿಚಾರಗಳಿಗೆ ಹಚ್ಚಿತ್ತು. ಶಿಲ್ಪಗಳಲ್ಲಿನ ಮೂಕವೇದನೆ, ಹಸಿವು, ನಿರಾಶೆ, ಶೋಷಣೆ ಹೀಗೆ ಹಲವಾರು ನೆಲೆಗಳಿಂದ ತುಳಿತಕ್ಕೊಳಗಾದ ಸಮುದಾಯಗಳ ವ್ಯವಸ್ಥೆಯನ್ನು ಅತ್ಯಂತ ವಿವರವಾಗಿ ತಿಳಿಸಿದವು. ಸಾಮಾಜಿಕ ಬದ್ಧತೆಯ ಕಲಾವಿದ ಎಂದರೆ ತಪ್ಪೇನಿಲ್ಲ. ಅವರ ಕಲಾಕೃತಿಗಳು ಅವರಲ್ಲಿನ ಸೃಜನಶೀಲ ವಿಚಾರಗಳನ್ನು ಪಸರಿಸಿವೆ. ಇಂತಹ ಕಲಾವಿದನನ್ನು ಪರಿಚಯಿಸಿದ ಲೇಖಕ ಮತ್ತು ಪತ್ರಿಕೆಗೆ ನೂರೊಂದು ನಮನಗಳು. ಹಾಗೆಯೇ ಮುಂದೆ ಇನ್ನಿತರ ಭಿನ್ನವಾದ ಕಲಾವಿದರ ಕಲಾಕೃತಿ ಮೂಡಿಬರಲಿ ಎಂದು 'ಹೊಸತು'ಗೆ ಬೇಡುವೆ.

ಶಹಾಪೂರ, ಯಾದಗಿರಿ **ಬಸವರಾಜ ಎಸ್. ಕಲೆಗಾರ**

**'ಹೊಸತು' ಡಿಸೆಂಬರ್ ಸಂಚಿಕೆ**

ಮಲಾಲಾ
ಜೈ ವಿಜಯಿ
ಮಲಾಲಾ
ಉಗ್ರಗಾಮಿಗೆ
ಸವಾಲಾ

ಹುಟ್ಟುವೀರ
ಬಾಲೆಯೇ
ನಿನಗೆ ವಿಜಯ
ಮಾಲೆಯೇ

ತೊಟ್ಟು ನಿಲ್ಲು
ವೀರ ಕಣ
ಶಡ್ಡು ಹೊಡಿ
ವೀರಮರಣ

ವಿನೋಗ್ರಾ
ಪ್ರಾಂತ್ಯಕೆ
ಉದಯಿಸಿತು
ಕಾಂತತೆ

ತಾಲಿಬಾನ
ಉಪಟಳ
ಸಹಿಸರಿನ್ನು
ಜನಗಳು
ನಿನಗೆ ರಕ್ಷೆ
ವಿಶ್ವಸಂಸ್ಥೆ
ನಿನ್ನ ಬೆಳಗು
ಲೋಕಕೆ.

ಭಾಗ್ಯನಗರ, ಕೊಪ್ಪಳಜಿಲ್ಲೆ **ಅಕ್ಬರ್ ಸಿ. ಕಾಲಿಮಿರ್ಚಿ**

ಡಿಸೆಂಬರ್ ೨೦೧೨ರಂದು ಪ್ರಕಟವಾದ 'ಹೊಸತು' ಹೊಸತನದೊಂದಿಗೆ ಬರುವ ಮಾಸಿಕ ಪತ್ರಿಕೆ. ಮಲಾಲಾ ಮುಖಪುಟ ಮತ್ತು ಒಳಪುಟಗಳು ಬಹಳ ಅದ್ಭುತವಾಗಿ ಮೂಡಿಬಂದಿವೆ.

ಡಾ|| ಎನ್. ಗಾಯತ್ರಿ ಅವರು ಬರೆದಿರುವ ಲೇಖನ 'ಕತ್ತಲ ವಿರುದ್ಧ ಅಕ್ಷರದ ದೀಪ ಹಚ್ಚಿದ ಮಲಾಲಾ' ಪಾಕಿಸ್ತಾನದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಪರ ದನಿ ಎತ್ತಿದ್ದ ಬಾಲಕಿ ಮಲಾಲಾ ವಿಶ್ವದ ಶಿಕ್ಷಣಪ್ರೇಮಿಗಳ ಸಂಕೇತ.

ನವೆಂಬರ್ ೧೦ರಂದು ವಿಶ್ವಸಂಸ್ಥೆಯು 'ಮಲಾಲಾ ದಿನ'ವನ್ನಾಗಿ ಆಚರಿಸಲು ಕರೆ ನೀಡಿತು. ಪಾಕಿಸ್ತಾನದಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಹಕ್ಕಿಗಾಗಿ ಚಳುವಳಿ ಹೂಡಿದ್ದಕ್ಕಾಗಿ ತಾಲಿಬಾನ್‌ರ ಗುಂಡೇಟು ತಿನ್ನಬೇಕಾಗಿ ಬಂದ ಬಾಲಕಿ ಮಲಾಲಾ ಸಾಹಸ, ಸಂಕಲ್ಪವನ್ನು ಗುರುತಿಸಿ ಗೌರವಿಸುವ ಆಚರಣೆಯ ಉದ್ದೇಶ ಇದರ ಹಿಂದಿತ್ತು. ಹೀಗೆಯೇ ವಿಶ್ವದಾದ್ಯಂತ ಶಿಕ್ಷಣದ ಅವಕಾಶದಿಂದ ವಂಚಿತರಾದ, ಶಾಲೆಗೆ ಹೋಗಲಾಗದ ಹೆಣ್ಣುಮಕ್ಕಳ ಪರವಾಗಿಯೂ

**ತಿದ್ದುಪಡಿ**

ಡಿಸೆಂಬರ್ 'ಹೊಸತು' ಸಂಚಿಕೆಯಲ್ಲಿ ಪ್ರಕಟವಾದ 'ಹನುಮನಹಳ್ಳಿಯ ಬ್ರಿಟಿಷ್ ಕಾಲದ ತಿಜೋರಿಗಳ ಕಥೆ' ಲೇಖನ ಬರೆದವರು - ಸಿದ್ಧರಾಮ ಹಿರೇಮಠ ಕೂಡ್ಲಿಗಿ ಅವರು. ಕಣ್‌ತಪ್ಪಿನಿಂದಾಗಿ ಲೇಖಕರ ಹೆಸರು ಬೇರೆಯಾಗಿ ಪ್ರಕಟವಾಗಿತ್ತು. ಈ ಪ್ರಮಾದಕ್ಕಾಗಿ 'ಹೊಸತು' ವಿಷಾದಿಸುತ್ತದೆ.

– ಸಂಪಾದಕ

ಆಚರಿಸಲಾಗುತ್ತಿದೆ. ಮಲಾಲಾ ಸಾಹಸವನ್ನು ಕಂಡು ಎಲ್ಲರಿಗೂ ಸಂತೋಷವಾಗಿದೆ.

'ಮಲಾಲಾ' ಬಗ್ಗೆ ಡಾ|| ಎನ್. ಗಾಯತ್ರಿ ಅವರು ಅರ್ಥಪೂರ್ಣವಾಗಿ ಬರೆದಿದ್ದಾರೆ. ಅವರಿಗೆ ನಮ್ಮ ಕಡೆಯಿಂದ ಅಭಿನಂದನೆಗಳು.

ಜಮಖಂಡಿ **ಶ್ರೀಧರ ಪಿ. ಬಿರಾದಾರ**

**ಕಾಡು - ಕಳೆದೇ ಹೋಯ್ತು!**

ಈ ಸಲದ ಸಂಚಿಕೆಯ ವಿಮರ್ಶೆಯನ್ನು ಕೊನೆಯ ಪುಟದಿಂದ ಆರಂಭಿಸುತ್ತೇನೆ. ಮರದ ಹಣ್ಣು ಮಾಯ ವಾಯ್ತು, ಕೊಳದ ನೀರು ಬತ್ತಿಹೋಯ್ತು, ಅರಮನೆ ಯಲ್ಲಿ ಆಡಿದ ಆಟ ಕಾಡಿನಲ್ಲಿ ಅಳಿದು (ಹೋಯ್ತು) (ಎಂದಿರಬೇಕಿತ್ತು!) ಇದಕ್ಕೆ ಪೂರಕವಾಗಿಯೇ ಡೊನಾಲ್ಡ್ ಆ್ಯಂಡರ್‌ಸನ್ ಸಂದರ್ಶನ ಚೆನ್ನಾಗಿ ಮೂಡಿಬಂದು ಇಂದು ಕಾಡಷ್ಟೇ ಅಲ್ಲ, ಪ್ರಾಣಿಗಳೂ ನಶಿಸುತ್ತಿದ್ದು, ಅವುಗಳೊಂದಿಗೆ ಬುಡಕಟ್ಟು ಜನರ ಬದುಕೂ ಅತಂತ್ರವಾಗುತ್ತಿರುವುದು ಡೊನಾಲ್ಡ್ ಅವರ ಮಾತಿನಲ್ಲಿ ಮೂಡಿಬಂದು, ಅವರ ಪರಿಸರ ಪ್ರಜ್ಞೆ ನಮ್ಮನ್ನು ಚಾಟಿಯೇಟಿನಿಂದ ಎಚ್ಚರಿಸುತ್ತದೆ.

'ಹಸುವೊಂದು' - ಸ್ಮಿತ ಅವರ ಲೇಖನಿಯಿಂದ ಚೆನ್ನಾಗಿ ಮೂಡಿಬಂದಿದೆ. ಠಾಕ್ರೆ ಎಂದೂ ಸಾಯೊಲ್ಲ.. ಒಬ್ಬ ಠಾಕ್ರೆ ಸತ್ತರೆ ನೂರಾರು ಜನ ಠಾಕ್ರೆಗಳು ಎದ್ದು ಬರುತ್ತಾರೆ. ಮಲಾಲಾ ಬಗ್ಗೆ ಹೆಚ್ಚೇನೂ ತಿಳಿದಿರಲಿಲ್ಲ, ಡಾ|| ಎನ್. ಗಾಯತ್ರಿ ಅವರ ಲೇಖನ ಮಲಾಲಾ ಬಗ್ಗೆ ವಿವರ ನೀಡಿತು. ಪಿ. ಜೆ. ರಾಘವೇಂದ್ರರ ಹನಿಗವನ ವಿಪರ್ಯಾಸ ಸಕಾಲಿಕವಾಗಿದೆ.

ಮೈಸೂರು **ಕೊ. ಸು. ನರಸಿಂಹಮೂರ್ತಿ**



## ಮಾನ್ಯ ಶ್ರೀ ಕೋ. ಚೆನ್ನಬಸಪ್ಪ ಅವರಿಗೆ ಅಭಿನಂದನೆಗಳು

ಕನ್ನಡನಾಡಿನ ಹೆಮ್ಮೆಯ ಪುತ್ರ ಎಂಬ ಅನ್ವರ್ಥನಾಮಕ್ಕೆ ತಕ್ಕುದಾದ ವ್ಯಕ್ತಿತ್ವವುಳ್ಳ, ನಿಷ್ಠುರ ನ್ಯಾಯವಾದಿ, ನಿವೃತ್ತ ನ್ಯಾಯಾಧೀಶ, ಕವಿ, ಕತೆ-ಕಾದಂಬರಿಕಾರ, ಪತ್ರಿಕೋದ್ಯಮಿ, ಮತ್ತು ಹಿರಿಯ ಸ್ವಾತಂತ್ರ್ಯ ಹೋರಾಟಗಾರರಾದ ಶ್ರೀ ಕೋ. ಚೆ. ಅವರು ಕರ್ನಾಟಕ ಏಕೀಕರಣ ಹೋರಾಟದಲ್ಲೂ ಮುಂಚೂಣಿಯಲ್ಲಿದ್ದವರು. ಅವರ ಸುದೀರ್ಘ ಬದುಕೇ ಒಂದು ಸಾಹಸಗಾಥೆ. ರಾಷ್ಟ್ರದ ಸ್ವಾತಂತ್ರ್ಯ ಸಮರದ ಹಿನ್ನೆಲೆಯಲ್ಲಿ ರೂಪುಗೊಂಡಿರುವ, ನವಕರ್ನಾಟಕ ಪ್ರಕಾಶನ ಸಂಸ್ಥೆ ಪ್ರಕಟಿಸಿರುವ ಕೋ. ಚೆ. ವಿರಚಿತ 'ಬೇಡಿ ಕಳಚಿತು - ದೇಶ ಒಡೆಯಿತು' ಎಂಬ ಬೃಹತ್ ಕಾದಂಬರಿ ಕನ್ನಡ ಸಾಹಿತ್ಯಲೋಕಕ್ಕೆ ಒಂದು ವಿಶೇಷ ಕೊಡುಗೆ ಎಂಬುದು ನಮ್ಮೆಲ್ಲರಿಗೂ ಹೆಮ್ಮೆಯ ವಿಷಯ. ಶ್ರೀಯುತರ 'ನ್ಯಾಯಾಲಯದ ಸತ್ಯ ಕಥೆಗಳು', 'ಶ್ರೀ ಅರವಿಂದರ ದಿವ್ಯ ಜೀವನ', 'ಚೈತನ್ಯಮಯಿ ಶ್ರೀಮಾತಾ' ಇವೇ ಮುಂತಾದ ಕೃತಿಗಳೂ ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿವೆ. ೧೯೪೮ರಿಂದ ೧೯೬೨ರವರೆಗೆ ಅವರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ 'ರೈತ ಪತ್ರಿಕೆ' ಎಂಬ ಮಾಸಿಕ ಶ್ರಮಜೀವಿ ವರ್ಗದ ಬಗ್ಗೆ ಅವರಿಗಿದ್ದ ಕಾಳಜಿಗೆ ಸಾಕ್ಷಿಯಾಗಿದೆ. ಪ್ರಗತಿಪರ ಧೋರಣೆಗಳನ್ನು ತಮ್ಮ ಸಾರ್ಥಕ ಬದುಕಿನುದ್ದಕ್ಕೂ ತಳೆದು ಈ ನೆಲದ ಸಾರ್ವಜನಿಕ ಆಗುಹೋಗುಗಳಿಗೆ ನಿರಂತರವಾಗಿ ಪ್ರತಿಕ್ರಿಯಿಸುತ್ತಲೇ ಬಂದಿರುವ ೯೧ರ ಹರೆಯದ ಕೋ. ಚೆ. ಅವರ ಕ್ರಿಯಾಶೀಲತೆ ನಮ್ಮೆಲ್ಲರಿಗೂ ಸ್ಫೂರ್ತಿಯ ಚಿಲುಮೆಯಾಗಿದೆ.

ಮಾನ್ಯ ಶ್ರೀ ಕೋ. ಚೆನ್ನಬಸಪ್ಪನವರು ಬರುವ ಫೆಬ್ರವರಿ ೯, ೧೦, ೧೧, ೨೦೧೩ರಂದು ಬಿಜಾಪುರದಲ್ಲಿ ಜರುಗಲಿರುವ ೭೯ನೇ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ ಆಯ್ಕೆಯಾಗಿರುವುದು ಸಂತಸದ ಸಂಗತಿ.

ಶ್ರೀಯುತರಿಗೆ ನವಕರ್ನಾಟಕ ಪ್ರಕಾಶನ ಸಂಸ್ಥೆ, 'ಹೊಸತು' ತಿಂಗಳ ಪತ್ರಿಕೆ ಮತ್ತು ಎಂ. ಎಸ್. ಕೃಷ್ಣನ್ ಸ್ಮರಣ ಸಂಸ್ಥೆ ಬಳಗದವರಿಂದ ಹೃತ್ಪೂರ್ವಕ ಅಭಿನಂದನೆಗಳು.

## ಬಿಸಿಲ ಬಗಲಿನಲಿ ಬೆಳದಿಂಗಳು



**ನಾ** ಖಾಲಿ ಕೈಲೇ ಬಂದೇನಿ
ಆದ್ರೆ ಜೊತೆ ಜೊತೆಗೇ ತಂದೇನಿ
ಅದೃಶ್ಯ ಜನ್ಮಾಂತರದ ನೆನಪು
ಕರಡೀ ಕುಣಿತ, ಹುಲಿಯ ನೆಗೆತ
ಕುರಿಯ ಕಮ್ಮನೆಯ ಹಾಲು
ರೆಂಟೆಗೆ ಮೇಲೆದ್ದ ಮಣ್ಣಿನ ಆವಿ
ಬಚ್ಚಿನಲಿ ದಾರಿ ಕಾಯುತ್ತ ಕುಳಿತ
ಗುಬ್ಬಿಯ ಕರಿಕಣ್ಣಿನ ಹೊಳಪು
ಕಲ್ಲಳ್ಳಿಯ ಹನುಮಪ್ಪನ
ಹಗಲುಗತ್ತಲು
ಊರಿಗೆ ಊರನ್ನೇ ನುಂಗಿದ ಬ್ರಹ್ಮ ರಾಕ್ಷಸ
ಎಷ್ಟೊಂದು ವಾಸನೆ ? ಎಷ್ಟೊಂದು ನೆನಪು ?

ನಾ ಖಾಲಿ ಕೈಲೇ ಬಂದೇನಿ
ಆದ್ರೆ ನೆರಳಾಗಿ ಬಂದಿದೆ
ಆಶೆಯ ಮಹಾದ್ವೀಪ
ಉರಿಯುತ್ತಿರುವ ಬಿಸಿಲಿನ ಬಗಲಿನಲಿ
ಗುನುಗುನಿಸುತ್ತ ಬರುವ ಬೆಳದಿಂಗಳು
ಮತ್ತೆ
ಮೊದಲ ಮಳೆ ಬೀಳುತ್ತಲೇ
ಹುತ್ತಕ್ಕೆ ಸಾಣೆ ಹೊಯ್ದು
ಅಣಬೆ !

ನಾ ಖಾಲಿ ಕೈಲೇ ಬಂದೇನಿ
ಆದ್ರೆ ತಲೆ ತುಂಬಾ ಹೋರಾಟದ ನಂದಾದೀಪ
ದಾರಿ ತಪ್ಪಿದ ದಾರಿಹೋಕನಿಗೊಂದು ಕೈ ದೀಪ
ದನಿ ತಪ್ಪಿದವನಿಗೊಂದು ಕಿರುದನಿ
ಕೊತ ಕೊತ ಕುದಿವ ಹೊಟ್ಟೆಗೊಂದು ಹಾಲ್‌ತೆನಿ
ನಾ ಬಿರು ಬಿಸಿಲಿನಲ್ಲೇ ಬಂದೇನಿ
ಆದ್ರೆ ಆದಿಮ ಇತಿಹಾಸ
ನನ್ನ ಬಗಲ ಚೀಲದಲಿ ಅವಡುಗಚ್ಚಿ ಕಾದಿದೆ !

**ತೇಜಸ್ವಿ ಕಟ್ಟೀಮನಿ**

ನಂ. ಪಿ-೨, ಮಾನು ಕ್ಯಾಂಪಸ್, ಗಾಚಿಬೌಲಿ, ಹೈದರಾಬಾದ್ - ೫೦೦ ೦೩೨, ಆಂಧ್ರ ಪ್ರದೇಶ

(ಈ ತಿಂಗಳು) ೧೩ನೇ ಪುಟದಿಂದ

ಪಿನೋಷೆಯನ್ನು ಹೊಗಳುತ್ತಿದ್ದ, ಹುಡುಗನಾಗಿದ್ದಾಗಲಂತೂ ಬೋರ್ಹೆಸ್ ಅಕ್ಕಪಕ್ಕದ ಬಡ ಹುಡುಗರ ಜತೆ ಸೇರುತ್ತಲೇ ಇರಲಿಲ್ಲ'' ಎಂದು ಶಿಕ್ಷಕರ ಸಂಘಟನೆಯೊಂದರ ಮುಖ್ಯಸ್ಥನಾಗಿದ್ದವನೊಬ್ಬ ಹೇಳಿದ್ದುದನ್ನು ಪ್ರೊ॥ ಕಾರ್ಲೋಸ್ ದಾಖಲಿಸಿದ್ದಾರೆ. ಅವನ ಕಥೆಗಳಲ್ಲಿ ''ಅರ್ಜೆಂಟೀನಾದ ನಗರಗಳಲ್ಲಿ ನಡೆಯುವ ಸಂಘರ್ಷದ ವಿವರಗಳೆಲ್ಲಾ ದಟ್ಟವಾಗಿ ಮೂಡಿಬಂದಿರುವುದನ್ನು'' ಕಾರ್ಲೋಸ್ ಆತನಿಗೆ ಜ್ಞಾಪಿಸಿದುದಾಗಿ ಹೇಳಿದ್ದಾರೆ (ಪು. ೨೬). ಪಿನೋಷೆಯನ್ನು ಹೊಗಳುವುದೆಂದರೆ ಅಲೆಂಡೆ ಮತ್ತು ನೆರುದಾರ ಹತ್ಯೆಯನ್ನು (ಸೆಪ್ಟೆಂಬರ್ ೧೯೭೩) ಸಮರ್ಥಿಸಿದಂತೆಯೂ ಹೌದು. ಬೋರ್ಹೆಸ್‌ಗೆ ಅದು ತಿಳಿಯಲಿಲ್ಲವೆ ? ಈತ ಬಾಳ ಠಾಕ್ರೆಯಂಥವನೋ ಏನೋ ಎಂಬ ಗುಮಾನಿ ಬರುತ್ತದೆ. ಠಾಕ್ರೆ ಮೊದಲಿಗೆ ಕಮ್ಯುನಿಸ್ಟ್ ಶಾಸಕ ಕೃಷ್ಣ ದೇಸಾಯಿಯನ್ನು ಕೊಲ್ಲಿಸಿದ, ನಂತರ ತನ್ನದೇ ಕಾರ್ಮಿಕ ಸಂಘಟನೆಯನ್ನೂ ರಚಿಸಿದ. ಹಾಗಿದ್ದರೆ ಅಂಥವನ ಮಾಪನ ಹೇಗಿರಬೇಕು ? ಬರೆಯುವುದು ಒಂದು, ಹೃದಯವಿರುವುದು ಬೇರೆ ಬಗೆಯಲ್ಲಿ, ಎನ್ನಬಹುದೆ ? ಡೇನಿಯಲ್ ಬೌರ್ನ್ ಎಂಬಾತ ಬೋರ್ಹೆಸ್‌ನನ್ನು ಸಂದರ್ಶಿಸಿದ್ದ. ಸಂದರ್ಶನ ಲೇಖನವನ್ನು ಜಯಲಲಿತ ಸಂಗ್ರಹ ಮಾಡಿ ಅನುವಾದಿಸಿದ್ದಾರೆ. ಅದರಲ್ಲಿ ಬೋರ್ಹೆಸ್‌ನ ಒಂದು ಮಾತು ಹೀಗಿದೆ (ಪು. ೮೮) : ''ಲೋರ್ಕಾ ತುಂಬ 'ವಿಷುಯಲ್,' ಆತ ವಿಚಿತ್ರವಾದ ರೂಪಕಗಳನ್ನು ಬಳಸುತ್ತಾನೆ. ...ನಾನು ಆತನನ್ನು ಚೆನ್ನಾಗಿ ಬಲ್ಲೆ. ...ತುಂಬ ವಿಚಿತ್ರ ವ್ಯಕ್ತಿ. ಅವನನ್ನು ಬ್ಯೂನಸ್ ಐರಿಸ್‌ನಲ್ಲಿ ಒಮ್ಮೆ ಮಾತ್ರ ಭೇಟಿಯಾಗಿದ್ದೆ. ಆನಂತರ ಅವನನ್ನು ಕೊಲೆ ಮಾಡಿದರು. ಅದು ಅವನಿಗೆ ಒಳ್ಳೆಯದೇ ಆಯಿತು. ಕವಿಯೊಬ್ಬನಿಗೆ ನಡೆಯಬೇಕಾದ ಉತ್ತಮ ಸಂಗತಿ. ಇದು ಒಳ್ಳೆಯ ಸಾವಲ್ಲವೇ ? ತುಂಬ ಪರಿಣಾಮಕಾರಿಯಾದ ಸಾವು. ನಂತರ ಆಂಟೋನಿಯೋ ಮುಜಾರೊ ಎಂಬ ಕವಿ ಲೋರ್ಕಾನ ಬಗ್ಗೆ ಸೊಗಸಾದ ಕವಿತೆಯೊಂದನ್ನು ಬರೆದ.'' ಲೋರ್ಕಾಗೆ ಆದ್ದು ನೆರುದಾಗೂ ಆಯಿತೆಂದು ಹೇಳಿ ಹಿಗ್ಗುತ್ತಾನೇನೋ ಈ ಚಿಂತಕ ಬೋರ್ಹೆಸ್ ! ಹೋಗಲಿ, ಕೆಟ್ಟ ಪದ್ಯ ಬರೆದಿದ್ದಕ್ಕೆ ಅವನನ್ನು ಕೊಂದರೇ ಎಂದರೆ, ಅವನು ಅಷ್ಟು ಕೆಟ್ಟ ಪದ್ಯಗಳನ್ನು ಬರೆಯಲಿಲ್ಲವಲ್ಲ ಎಂಬ ಶಂಕೆ ಮೂಡುತ್ತದೆ. ಶೇಕ್ಸ್‌ಪಿಯರ್ ನಾಟಕದಲ್ಲಿ ಸಿನ್ನ ಎಂಬ ಕವಿಯನ್ನು ಕೊಲ್ಲುವಾಗ ಹುಚ್ಚೆದ್ದ ಜನಕ್ಕೆ ಅವನು ಕೆಟ್ಟ ಪದ್ಯಗಳನ್ನು ಬರೆದಿದ್ದನೆಂಬ ಸಮರ್ಥನೆ ಇದೆಯೇನೊ ! ಆದರೆ ಲೋರ್ಕಾ ಹತ್ಯೆಗೆ ಯಾವ ಸಮರ್ಥನೆ ಇದೆ ? ಕವಿಗಳಿಗಾಗಲಿ ಅವರ ಪದ್ಯಗಳಿಗಾಗಲಿ ಅಂತಹ ಸಾವು ಅಪೇಕ್ಷಣೀಯವೆ ಮತ್ತು ಸ್ವಾಗತಾರ್ಹವೆ ? ಹೀಗೆ ಪ್ರಶ್ನೆ ಎತ್ತಿದರೆ ವಿಮರ್ಶಕರು ಹೇಳಿಯಾರು : ''ಅಯ್ಯೋ ಮಂಕೆ ! ನಿನಗೆ ಬೋರ್ಹೆಸ್‌ನ ನಿಜವಾದ ಇಂಗಿತವೇ ತಿಳಿಯಲಿಲ್ಲ'' ಎಂದು. ತಿಳಿಯಲಾಗದಂತೆ ಹೇಳುವುದು ಬೋರ್ಹೆಸ್‌ನಂತಹ ಚಿಂತಕರ ವಿಶಿಷ್ಟ ವಿಧಾನವೆ ?

✶ ✶ ✶

**ಕ**ರ್ನಾಟಕದ ರಾಜಕೀಯದಲ್ಲಿ ದಾಖಲೆಗಳನ್ನು ಸೃಷ್ಟಿಸಿರುವ ಯಡಿಯೂರಪ್ಪ, ಈಗ ತಾವು ಹುಟ್ಟುಹಾಕಿರುವ ಕರ್ನಾಟಕ ಜನತಾ ಪಕ್ಷದ ಮೂಲಕ ಅಧಿಕಾರಕ್ಕೇರುವ ಹಗಲುಗನಸು ಕಾಣುತ್ತಿದ್ದಾರೆ. ಭಾಜಪ-ಕೆಜೆಪಿಗಳ ನಡುವೆ ಕೆಸರೆರಚಾಟ ಸಾಗಿದೆ. ಹಾವೇರಿಯಲ್ಲಿ ನಡೆದ ಕೆಜೆಪಿ ಪ್ರಾರಂಭದ ಕಸರತ್ತಿನಲ್ಲಿ ಯಡಿಯೂರಪ್ಪ ಜೊತೆಗೆ ಗುರ್ತಿಸಿಕೊಂಡ ಶಾಸಕರ ಸಂಖ್ಯೆ ಕಡಿಮೆ. ಆದರೂ ಅವರು ಅಬ್ಬರದ ಪ್ರಚಾರ ನಡೆಸಿದ್ದಾರೆ. ವಿಧಾನಸೌಧ ಮುತ್ತಿಗೆ ಹಾಕಿದ್ದಾಯಿತು, ಸಮಾವೇಶಗಳನ್ನು, ಪ್ರತಿಭಟನೆಗಳನ್ನು ಹಮ್ಮಿಕೊಂಡಾಯಿತು. ಈಗ ಜಗದೀಶ ಶೆಟ್ಟರ್ ಸರಕಾರದ ಮುಂದುವರಿಕೆಗೆ ಅಡ್ಡಗಾಲು ಹಾಕಲು ನೋಡುತ್ತಿದ್ದಾರೆ. ತಮ್ಮ ಮುಂದಿನ ಹೆಜ್ಜೆಗಳಿಗೆ ಗಡುವು ನಿಗದಿ ಮಾಡುವುದರಲ್ಲಿ ನಿಸ್ಸೀಮರಾದ ಯಡಿಯೂರಪ್ಪ ಈಗ ಸರಕಾರದ ಪತನಕ್ಕೆ ಇನ್ನೊಂದು ದಿನ ನಿಷ್ಕರ್ಷೆ ಮಾಡಿದ್ದಾರೆ. ಏನೇ ಆಗಲಿ, ಜಗದೀಶ ಶೆಟ್ಟರ್‌ಗೆ ಬಜೆಟ್ ಮಂಡನೆಗೆ ಅವಕಾಶ ನೀಡುವುದಿಲ್ಲ ಎಂಬ ಹಠ ಅವರದ್ದು. ಹಿಂದೆ ಮಾಜಿ ಮುಖ್ಯಮಂತ್ರಿ ಸದಾನಂದ ಗೌಡರಿಗೂ ಇದೇ ಬೆದರಿಕೆ ಹಾಕಿದ್ದರೆಂದು ನೆನಪು. ಅದೇನೇ ಇರಲಿ, ಕರ್ನಾಟಕದ ಎಲ್ಲ ರಾಜಕೀಯ ಬೆಳವಣಿಗೆಗಳ ಕುರಿತು ಭಾಜಪ ರಾಷ್ಟ್ರೀಯ ನಾಯಕತ್ವ ತೋರಿರುವ ಧೋರಣೆ ಮಾತ್ರ ಸಂದರ್ಭಸಾಧಕತನಕ್ಕೆ ಉತ್ತಮ ಉದಾಹರಣೆ. ಯಡಿಯೂರಪ್ಪ ಮತ್ತು ಅವರ ಬೆಂಬಲಿಗರನ್ನು ಈಗಲೂ ಪಕ್ಷದಿಂದ ಹೊರಹಾಕಿಲ್ಲ. ಬೆಂಬಲ ನೀಡಿದ ಶಾಸಕರ ಮೇಲೆ ಕ್ರಮ ಕೈಗೊಳ್ಳುವುದಾಗಿ ಗುಡುಗುತ್ತಿದ್ದ ರಾಜ್ಯಾಧ್ಯಕ್ಷ ಈಶ್ವರಪ್ಪಗೆ ಒಂದು ನೋಟೀಸು ಜಾರಿ ಮಾಡಲೂ ಧೈರ್ಯ ಬರಲಿಲ್ಲ. ಶಿಸ್ತಿನ ಕ್ರಮದ ವಿಚಾರ ಬಂದಾಗ ಅದು ಪಕ್ಷದ ಆಂತರಿಕ ವಿಷಯ ಎಂದು ಜಾರಿಕೊಂಡರು. ಅತಂತ್ರಸ್ಥಿತಿಯಲ್ಲಿರುವ ಭಾಜಪ ಸರಕಾರ ಅವಧಿ ಪೂರೈಸುವುದೆ ? ಏನೂ ಆಗಬಹುದು, ಆಗದಿರಲೂಬಹುದು. ಯಡಿಯೂರಪ್ಪನವರ ಬೆಂಬಲಿಗರು ಇನ್ನೂ ಡೋಲಾಯಮಾನ ಸ್ಥಿತಿಯಲ್ಲಿದ್ದಾರೆ. ಅವರೊಂದಿಗೆ ಉಪಹಾರ, ಊಟ ಹೊಡೆದ ಸಚಿವರು, ಶಾಸಕರು ಮುಂದಿನ ಹೆಜ್ಜೆ ಇರಿಸುವುದಕ್ಕೆ ಮುನ್ನ ಲಾಭನಷ್ಟಗಳ ಲೆಕ್ಕಾಚಾರದಲ್ಲಿದ್ದಾರೆ. ಸಚಿವಸ್ಥಾನ, ಶಾಸಕಸ್ಥಾನ ತ್ಯಜಿಸುವುದು ಸುಲಭವಲ್ಲ. ಆದಷ್ಟು ದಿನ ಅಧಿಕಾರ ಸವಿಯಬೇಕು. ಅಂತೂ ನಮ್ಮ ರಾಜ್ಯದಲ್ಲಿ ಮುಂದಿನ ಚುನಾವಣೆಗಳು ಸ್ವಾರಸ್ಯಕರ. ಚತುಷ್ಕೋಣ ಸ್ಪರ್ಧೆ ಮಾತ್ರ ಖಾತ್ರಿ. ಯಾರಿಗೆ ಲಾಭ, ಯಾರಿಗೆ ನಷ್ಟ– ಯಾರಿಗೊತ್ತು !

✶ ✶ ✶

ಈಶ್ವರಪ್ಪ ಕೂಡ ಶಿವಮೊಗ್ಗ ಮೂಲದ ರಾಜಕಾರಣಿ. ಯಡಿಯೂರಪ್ಪನವರ ಗರಡಿಯಲ್ಲಿ ತರಬೇತಾದವರು. ಬಾಯಿಗೆ ಬಂದಹಾಗೆ ಮಾತಾಡುವುದರಲ್ಲಿ ಪ್ರಸಿದ್ಧ ಈತ. ಈಚೆಗಂತೂ ಅದು ಇನ್ನಷ್ಟು ಹೆಚ್ಚಾಗಿದೆ. ರಾಜ್ಯ ಉಪಮುಖ್ಯಮಂತ್ರಿ ಮತ್ತು ರಾಜ್ಯಾಧ್ಯಕ್ಷ ಸ್ಥಾನ ಎರಡನ್ನೂ ಉಳಿಸಿಕೊಂಡಿರುವ ಈತ ಅತ್ಯಂತ ಭ್ರಷ್ಟ ಎನ್ನುವುದು ಸಾಕ್ಷ್ಯಾಧಾರದ ಸಮೇತ ಬಯಲಾಗಿದೆ. ಲೋಕಾಯುಕ್ತ ಪೊಲೀಸರು ಈಚೆಗೆ ಅವರ ಶಿವಮೊಗ್ಗ ಹಾಗೂ ಬೆಂಗಳೂರು ನಿವಾಸಗಳ ಮೇಲೆ ನಡೆಸಿದ ದಾಳಿಯಲ್ಲಿ ದೊರೆತ ಹಣ, ಬಂಗಾರ, ಬೆಳ್ಳಿ, ಆಸ್ತಿಪಾಸ್ತಿಗಳು ಅಚ್ಚರಿಗೊಳಿಸುತ್ತವೆ. ಅವರ ನಿವಾಸದಲ್ಲಿ ದೊರೆತದ್ದು ಸುಮಾರು ೪ ಕಿಲೋಗ್ರಾಮ್ ಚಿನ್ನ, ೩೭ ಕಿಲೋಗ್ರಾಮ್ ಬೆಳ್ಳಿ, ೧೧ ಲಕ್ಷ ರೂಪಾಯಿ ನಗದು, ನೋಟುಗಳ ಎಣಿಕೆಗೆ ಯಂತ್ರ. ಇದಲ್ಲದೆ ಸ್ಥಿರಾಸ್ಥಿಯ ದಾಖಲೆಗಳು. ದಾಳಿಗೆ ಮುನ್ನ ಬೇರೆ ಕಡೆಗೆ ಇನ್ನೆಷ್ಟು ಸಾಗಿಸಿದ್ದಾರೋ ತಿಳಿಯದು. ಆದರೂ ಈತನ ಭಂಡಧೈರ್ಯ ಮೆಚ್ಚಬೇಕು. ಅಧಿಕಾರ ತ್ಯಜಿಸಲು ಸಿದ್ಧವಿಲ್ಲ. ಹಣ, ಅಧಿಕಾರದ ಮುಂದೆ ಮಾನ-ಮರ್ಯಾದೆ ಯಾರಿಗೆ ಬೇಕು ಈಶ್ವರಪ್ಪನವರೆ. ಅಂದಹಾಗೆ ಇವರು ರಾಜಸ್ತಾನದಲ್ಲೂ ಸ್ಥಿರಾಸ್ಥಿ ಕೊಂಡಿದ್ದಾರಂತೆ. 'ನಾನು ಎಲ್ಲಿ ಬೇಕಾದರೂ ಆಸ್ತಿ ಖರೀದಿಸುತ್ತೇನೆ. ನಿಮಗೇನಂತೆ' ಎಂದು ಮಾಧ್ಯಮಗಳ ಮೇಲೆ ಹರಿಹಾಯ್ದಿದ್ದಾರೆ. ಎಂಥಾ ಭಂಡಧೈರ್ಯ. ಇವರೆಲ್ಲ ಆರೆಸ್ಸೆಸ್ ಸ್ವಯಂಸೇವಕರಾಗಿ ಮೇಲೆ ಬಂದವರು. ಯಾರ ಕೈಯ್ಯೂ ಶುದ್ಧವಿಲ್ಲ. ಇದು ಸಂಘಪರಿವಾರ ಹುಟ್ಟಿಹಾಕಿರುವ ''ಸಂಸ್ಕೃತಿ'' ಪರಂಪರೆ. ರಾಮನ ಹೆಸರಿನಲ್ಲಿ ಸಾವಿರಾರು ಕೋಟಿ ರೂ.ಗಳನ್ನು ನುಂಗಿ ಹಾಕಿ ಕೇಂದ್ರದಲ್ಲಿ ಅಧಿಕಾರಕ್ಕೆ ಬಂದಿದ್ದವರು ಇವರು. ಪಾಪದ ವ್ಯಕ್ತಿ ಬಂಗಾರು ಲಕ್ಷ್ಮಣ್ ಕೆಲವೇ ಲಕ್ಷ ರೂ.ಗಳ ಪ್ರಕರಣದಲ್ಲಿ ಅಧಿಕಾರತ್ಯಾಗ ಮಾಡಬೇಕಾಯಿತು. ಈ ಕೋಟಿಗಟ್ಟಲೆ ಹಗರಣದಲ್ಲಿ ಸಿಕ್ಕಿಕೊಂಡಿದ್ದರೂ ಅಧ್ಯಕ್ಷ ಗಡ್ಕರಿ ಗಟ್ಟಿಯಾಗಿ ಕೂತಿದ್ದಾರೆ, ಅವರ ಕಟ್ಟಾ ಅನುಯಾಯಿಯಾಗಿ ಈಶ್ವರಪ್ಪ ಕರ್ನಾಟಕದಲ್ಲಿ ಕೂತಿದ್ದಾರೆ. ಹಾಯ್ ಕರ್ನಾಟಕ !!

✶ ✶ ✶

ದೆಹಲಿಯಲ್ಲಿ ವಿದ್ಯಾರ್ಥಿನಿಯ ಮೇಲೆ ನಡೆದ ಸಾಮೂಹಿಕ ಅತ್ಯಾಚಾರದ ವಿರುದ್ಧ ರಾಷ್ಟ್ರವ್ಯಾಪಿಯಾಗಿ ಹಬ್ಬಿದ ಪ್ರತಿಭಟನೆ ಸಹಜ. ಸರಕಾರದ ವೈಫಲ್ಯಕ್ಕೆ ಜನರ ಆಕ್ರೋಶದ ಪ್ರತಿಧ್ವನಿ ಅದು. ಆದರೆ ದೇಶಾದ್ಯಂತ ನಿರಂತರವಾಗಿ ನಡೆಯುತ್ತಿರುವ ಸ್ತ್ರೀಯರ ಮೇಲಿನ ದೌರ್ಜನ್ಯಗಳಿಗೆ, ಹಿಂಸಾಚಾರಗಳಿಗೆ ಕೊನೆ ಯಾವಾಗ ? ನಮ್ಮ ಸಮಾಜದಲ್ಲಿ ಬೆಳೆದುಬಂದಿರುವ ಈ ಪಿಡುಗಿಗೆ ಪರಿಹಾರವೇ ಇಲ್ಲವೆ? ದೆಹಲಿ ಪ್ರಕರಣ ಹೊಸತೇನಲ್ಲ. ಜನಸಾಮಾನ್ಯರ ತಾಳ್ಮೆಗೂ ಒಂದು ಮಿತಿ ಇದೆ ಎನ್ನುವುದರ ಪ್ರತೀಕ ಅದು. ಈ ವಿಷಯದಲ್ಲಿ ಕರ್ನಾಟಕ ರಾಜ್ಯ ಏನೂ ಹಿಂದೆ ಬಿದ್ದಿಲ್ಲ. ಇತ್ತೀಚೆಗೆ ಪ್ರಕಟವಾಗಿರುವ ಒಂದು ಸಮೀಕ್ಷೆಯ ಪ್ರಕಾರ ಕರ್ನಾಟಕದಲ್ಲಿ ೨೦೦೬ರಿಂದ ಪ್ರತಿವರ್ಷ ಸರಾಸರಿ ೫೦೦ ಸ್ತ್ರೀಯರ ಮೇಲೆ ಅತ್ಯಾಚಾರ ನಡೆಯುತ್ತಿದೆ. ಈ ವಿಷಯದಲ್ಲಿ, ಅಂದರೆ ಸ್ತ್ರೀಯರ ಮೇಲೆ ದೌರ್ಜನ್ಯದಲ್ಲಿ ಕರ್ನಾಟಕ ನಾಲ್ಕನೇ ಸ್ಥಾನದಲ್ಲಿದೆ. ೨೦೧೧ರಲ್ಲಿ ಕರ್ನಾಟಕದಲ್ಲಿ ಹೆಚ್ಚು ಕಡಿಮೆ ಪ್ರತಿದಿನ ಎರಡು ಅತ್ಯಾಚಾರ ಪ್ರಕರಣಗಳು ನಡೆದಿವೆ. ಇದು ಕರ್ನಾಟಕದ ಮಹಿಳೆಯರು ಎಷ್ಟು ಸುರಕ್ಷಿತ ಎನ್ನುವ ಪ್ರಶ್ನೆಯನ್ನು ಎತ್ತಿದೆ. ೨೦೧೧ರಲ್ಲಿ ೬೩೬ ಅತ್ಯಾಚಾರ ಪ್ರಕರಣಗಳು ದಾಖಲಾಗಿದ್ದರೂ ಅಪರಾಧಿಗಳಿಗೆ ಶಿಕ್ಷೆಯಾದ್ದು ೪ ಪ್ರಕರಣಗಳಲ್ಲಿ ಮಾತ್ರ. ಈ ಅಂಕಿ ಅಂಶಗಳನ್ನು ಪ್ರಕಟಿಸಿರುವುದು ನ್ಯಾಷನಲ್ ಕ್ರೈಮ್ ರಿಕಾರ್ಡ್ಸ್ ಬ್ಯೂರೋ. ಸ್ತ್ರೀಯರ ಮೇಲೆ ದೌರ್ಜನ್ಯಗಳ ಪ್ರಕರಣಗಳಲ್ಲಿ ದೇಶದಲ್ಲಿ ಬೆಂಗಳೂರಿಗೆ ಎರಡನೆ ಸ್ಥಾನ. ೨೦೧೧ರಲ್ಲಿ ಕರ್ನಾಟಕದಲ್ಲಿ ೭,೭೦೦ ದೌರ್ಜನ್ಯದ ಪ್ರಕರಣಗಳು ದಾಖಲಾಗಿವೆ. ಅತ್ಯಾಚಾರ, ಕೊಲೆ, ವರದಕ್ಷಿಣೆ ಹಿಂಸಾಚಾರ, ಅಪಹರಣ ಇತ್ಯಾದಿ ಎಲ್ಲ ಇದರಲ್ಲಿ ಒಳಗೊಂಡಿವೆ. ಈ ಅಂಕಿಅಂಶಗಳನ್ನು ನೋಡಿದಾಗ ಗಾಬರಿಯಾಗುತ್ತದೆ, ಸರಕಾರ ಮತ್ತು ಪೊಲೀಸು ಇದೆಯೇ, ಸತ್ತಿದೆಯೇ ಎನ್ನುವ ಸಂಶಯ ಬರುತ್ತದೆ. ■

# ಸಾಮಾಜಿಕ, ರಾಜಕೀಯ, ಆರ್ಥಿಕ ವೈಫಲ್ಯಗಳ

# ೨೦೧೨





**ಸಂ**ಸತ್ತಿನ ಈ ಸಲದ ಛಳಿಗಾಲದ ಅಧಿವೇಶನ (೨೦೧೨) ಆರು ದಶಕಗಳಲ್ಲಿ ನಮ್ಮ ಪ್ರಜಾಪ್ರಭುತ್ವ ವ್ಯವಸ್ಥೆ ಎತ್ತ ಸಾಗಿದೆ, ಸಾಗುತ್ತಿದೆ ಎನ್ನುವುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿತು. ಗಲಭೆ, ದಾಂಧಲೆ, ಕಲಾಪಗಳಿಗೆ ಅಡ್ಡಿ ಮುಂತಾದುವುಗಳು ಈಚಿನ ವರ್ಷಗಳಲ್ಲಿ ಪಾರ್ಲಿಯಮೆಂಟನ್ನು ಅಪಮೌಲ್ಯಗೊಳಿಸಿವೆ. ಸಮಸ್ಯೆಗಳ ಕುರಿತು ಮೌಲಿಕ ಚರ್ಚೆ, ಅಭಿಪ್ರಾಯಗಳ ಮಂಡನೆಗಳಿಗೆ ಪ್ರತಿಯಾಗಿ ವಾಗ್ವಾಳಿಗಳೇ ಪ್ರಾಮುಖ್ಯತೆಗೆ ಬಂದಿವೆ. ಆಡಳಿತಾ ರೂಢ ಪಕ್ಷವು ಅಧಿಕಾರ ಉಳಿಸಿಕೊಳ್ಳಲು, ಸಂಖ್ಯಾಬಲ ಗಳಿಸಿಕೊಳ್ಳಲು ವಾಮಮಾರ್ಗ ಅರಸುವುದು ಮಿತಿ ಮೀರುತ್ತಿದೆ. ಎರಡು ದಶಕಗಳು ಹಿಂದೆ ಸಂಸತ್ ಸದಸ್ಯರ ಬೆಂಬಲ ಗಳಿಸಲು ಲಂಚ ನೀಡಿದಾಗಿನಿಂದ ಈಗ ಬಹುದೂರ ಕ್ರಮಿಸಿದ್ದೇವೆ. ಈಗ ಭ್ರಷ್ಟಾಚಾರ ಸಾಮೂಹಿಕ ಪ್ರಮಾಣವನ್ನು ತಲುಪಿದೆ. ಸಂದರ್ಭ ಸಾಧಕ ನೀತಿ ಅನುಸರಿಸಿ ಸಾರಾಸಗಟಾಗಿ ರಾಜಕೀಯ ಪಕ್ಷಗಳನ್ನೇ ಕಬಳಿಸಲಾಗುತ್ತಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ದುರ್ಬಲ ಗೊಳಿಸುವುದರ ಜೊತೆಗೆ, ಸಂವಿಧಾನಬದ್ಧವಾಗಿ ನಿರ್ಮಾಣಗೊಂಡಿರುವ ಸ್ಥಾಪನೆಗಳನ್ನು ಕಡೆಗಣಿಸುವ, ನಿರಾಕರಿಸುವ ಪ್ರಕ್ರಿಯೆ ಆತಂಕಕಾರಿಯಾಗಿದೆ. ನಿರ್ದಿಷ್ಟ ಕಾರ್ಯಕ್ರಮದ ಆಧಾರವಿಲ್ಲದೆ ಸಂದರ್ಭಕ್ಕೆ ತಕ್ಕಂತೆ ಹೆಣೆದುಕೊಂಡ ಕಿಚಡಿ ಸರಕಾರ, ಬೇರೆ ರೀತಿಯಲ್ಲಿ ಹೇಳಬೇಕೆಂದರೆ ಸಮ್ಮಿಶ್ರ ಸರಕಾರ ಸ್ಥಾಪನೆಗೊಂಡಮೇಲೆ ಪರಿಸ್ಥಿತಿ ಇನ್ನಷ್ಟು ಹದಗೆಟ್ಟಿದೆ. ಸರಕಾರಕ್ಕೆ ಬೆಂಬಲವಿರುವ ಪಕ್ಷಗಳನ್ನು ಉಳಿಸಿಕೊಳ್ಳಲು ಭ್ರಷ್ಟಾಚಾರಕ್ಕೆ ಪರವಾನಗಿ ಸಿಕ್ಕಿದಂತಾಗಿದೆ. ಕಳೆದ ಹದಿನೈದು ಇಪ್ಪತ್ತು ವರ್ಷಗಳ ಅನುಭವ ಇದಕ್ಕೆ ಉದಾಹರಣೆಯಾಗಿದೆ. ಅದು ಭಾಜಪ ನೇತೃತ್ವದ ಎನ್‌ಡಿಎ ಆಗಿರಲಿ, ಕಾಂಗ್ರೆಸ್ ನೇತೃತ್ವದ ಯುಪಿಎ ಆಗಿರಲಿ, ಅಧಿಕಾರಕ್ಕೆ ಅಂಟಿಕೊಂಡಿರಲು ಅನುಸರಿಸುವ ಮಾರ್ಗ ಒಂದೇ. ನಮ್ಮ ಜನಸಾಮಾನ್ಯರು ಇದನ್ನು ಚೆನ್ನಾಗಿ ಗಮನಿಸಿದ್ದಾರೆ. ಭ್ರಷ್ಟಾಚಾರದ ವಿರುದ್ಧ ಜನಸಾಮಾನ್ಯರ ಆಕ್ರೋಶಕ್ಕೆ ಕಾರಣವಾಗಿದೆ ಇದು, ಪರ್ಯಾಯಕ್ಕಾಗಿ ಹುಡುಕಾಟವೂ ನಡೆದಿದೆ.

ಸಂಸತ್ ಸದಸ್ಯರ ಬೆಂಬಲ ಗಳಿಸಲು ಹಣದ ಥೈಲಿ ನೀಡುವ ವಿಧಾನವನ್ನು ಮೊದಲು ಅನುಸರಿಸಿದ್ದು ಕಾಂಗ್ರೆಸ್. ಪಿ. ವಿ. ನರಸಿಂಹರಾವ್ ನಾಯಕತ್ವದ ಸರಕಾರವನ್ನು ಉಳಿಸಿ ಕೊಳ್ಳಲು ನಾಲ್ವರು ಸದಸ್ಯರಿಗೆ ಲಂಚ ನೀಡಿದ್ದು ಬೆಳಕಿಗೆ ಬಂತು, ಆನಂತರ ಈ ಅಕ್ರಮಗಳು ನಾನಾ ಬಗೆಯಲ್ಲಿ ಮುಂದುವರಿದುವು. ಈ ವಿಚಾರದಲ್ಲಿ ತಕ್ಕಡಿಗೆ ಹಾಕಿದರೆ ಎನ್‌ಡಿಎ ಮತ್ತು ಯುಪಿಎ ಎರಡೂ ಒಂದೇ. ಯುಪಿಎ-೧ ಸರಕಾರ ನಾಲ್ಕು ವರ್ಷಗಳ ಹಿಂದೆ ಅಮೆರಿಕದೊಂದಿಗೆ ನ್ಯೂಕ್ಲಿಯರ್ ಒಪ್ಪಂದ ಮಾಡಿಕೊಳ್ಳುವ ಬಗ್ಗೆ ಎಡಪಕ್ಷಗಳ ಬೆಂಬಲ ಕಳೆದುಕೊಂಡಾಗ ಅನುಸರಿಸಿದ ಮಾರ್ಗ ಎಲ್ಲರಿಗೂ ತಿಳಿದಿದೆ. ಈಗಲೂ ಮನಮೋಹನಸಿಂಗ್ ನೇತೃತ್ವದ ಯುಪಿಎ-೨ ಸರಕಾರ ಛಳಿಗಾಲದ ಅಧಿವೇಶನದಲ್ಲಿ ವಿದೇಶೀ ಬಂಡವಾಳದ ಹೂಡಿಕೆಯ ಬಗ್ಗೆ, ಮುಖ್ಯವಾಗಿ ಚಿಲ್ಲರೆ ವ್ಯಾಪಾರದ ಕ್ಷೇತ್ರದಲ್ಲಿ ವಾಲ್‌ಮಾರ್ಟ್‌ನಂಥ ಬಹುರಾಷ್ಟ್ರೀಯ ಸಂಸ್ಥೆಗಳ ಮುಕ್ತಪ್ರವೇಶಕ್ಕೆ ಮುಕ್ತ ಅವಕಾಶ ನೀಡುವ ನಿರ್ಧಾರಕ್ಕೆ ಸಂಸತ್ತಿನ ಅನುಮೋದನೆ ಪಡೆದುಕೊಳ್ಳಲು ಅನುಸರಿಸಿದ ಮಾರ್ಗ ನೀಚವಾದ್ದೇ ಹೊರತು ಘನಂದಾರಿ ಏನಲ್ಲ. ಸಂದರ್ಭಸಾಧಕತೆಗೆ ಹೆಸರಾಗಿರುವ ಮುಲಾಯಂ ಸಿಂಗ್ ಯಾದವ್ ಮತ್ತು ಬಹುಜನ ಸಮಾಜವಾದಿ ಪಾರ್ಟಿಯ ಮಾಯಾವತಿ ನಡೆದುಕೊಂಡ ರೀತಿ ಅದಕ್ಕೆ ಸಾಕ್ಷಿ. ಇವರಿಬ್ಬರೂ ಉತ್ತರಪ್ರದೇಶದ ರಾಜಕಾರಣಿಗಳು ಮತ್ತು ಇಬ್ಬರ ಮೇಲೂ ಭ್ರಷ್ಟಾಚಾರದ ಆಪಾದನೆಯೂ ಇದೆ. ಎಫ್‌ಡಿಐ ಅನುಮೋದನೆ ಪಡೆದುಕೊಂಡ ರೀತಿ ನಮ್ಮ ಪಾರ್ಲಿಯಮೆಂಟರಿ ಇತಿಹಾಸದಲ್ಲೇ ಮೊದಲನೆಯದು. ಇದೇ ಬಗೆಯ ಸಂದರ್ಭ ಸಾಧಕತೆಯನ್ನು ಭಾರತೀಯ ಜನತಾ ಪಕ್ಷ ಮೀಸಲಾತಿ ಬಡ್ತಿ ವಿಚಾರದಲ್ಲಿ ತೋರಿದೆ. ಸಂಸತ್ ಕಲಾಪಗಳ ನಿಷ್ಕ್ರಿಯತೆ ಮತ್ತು ಭ್ರಷ್ಟತೆಗೆ ಅನೇಕ ನಿದರ್ಶನಗಳಿವೆ. ಅವನ್ನೆಲ್ಲ ಇಲ್ಲಿ ಪಟ್ಟಿಮಾಡುವುದು ಅನುಚಿತ.

ಜಾಗತೀಕರಣ, ಉದಾರೀಕರಣ ಕೊಳ್ಳುಬಾಕ ಸಂಸ್ಕೃತಿಯನ್ನು ಬೆಳೆಸುವುದರ ಜೊತೆಗೆ ದೊಡ್ಡ ಪ್ರಮಾಣದಲ್ಲಿ ಭ್ರಷ್ಟಾಚಾರವನ್ನೂ ಪೋಷಿಸಿದೆ. ಇದಕ್ಕೆ ಹಿಂದೆ ಭ್ರಷ್ಟಾಚಾರ ಇರಲಿಲ್ಲ ಎಂದೇನಲ್ಲ. ಈಗ ಅದು ವಿಪರೀತದ ಮಟ್ಟಕ್ಕೆ ಹೋಗಿದೆಯಷ್ಟೇ ಅಲ್ಲದೆ ಸಾವಿರಾರು ಕೋಟಿ ರೂಪಾಯಿಗಳ ಪ್ರಮಾಣವನ್ನು ತಲುಪಿ ಸಾಮಾಜಿಕ ಜೀವನವನ್ನು ಕಲುಷಿತಗೊಳಿಸಿದೆ; ಸಮಾಜದ ಎಲ್ಲ ವಿಭಾಗಗಳನ್ನು, ಕ್ಷೇತ್ರಗಳನ್ನು ಆವರಿಸಿಕೊಂಡಿದೆ. ಸರಕಾರ ಹಗರಣಗಳ ಸರಮಾಲೆಯಿಂದ ತತ್ತರಿಸಿದೆ. ೨ಜಿ ಸ್ಪೆಕ್ಟ್ರಮ್ ಹಗರಣ ಇಡೀ ದೇಶವನ್ನೇ ಬೆಚ್ಚಿಬೀಳಿಸಿತು. ಸಾರ್ವಜನಿಕರ ಆಕ್ರೋಶ ಪ್ರತಿಭಟನೆಗಳು ಸಚಿವರನ್ನೂ, ಭಾಗಿಗಳನ್ನೂ ಕಾರಾಗಾರಕ್ಕಟ್ಟಿದುವು. ಈ ಪ್ರಕರಣದ ಹಿಂದೆಯೇ ಬಂದದ್ದು ಕಲ್ಲಿದ್ದಲ ಗಣಿಗಾರಿಕೆ ಹಂಚಿಕೆಯ ಹಗರಣ. ಈ ಎರಡು ಹಗರಣಗಳಿಂದ ಸಾರ್ವಜನಿಕ ಬೊಕ್ಕಸಕ್ಕೆ ಸಾವಿರಾರು ಕೋಟಿ ರೂ.ಗಳ ನಷ್ಟ. ಗಣಿಗಾರಿಕೆ ನಮ್ಮ ದೇಶದಲ್ಲಿ ಯಾವತ್ತೂ ಮೋಸ. ದೇಶದ ಸಂಪತ್ತನ್ನು ಲೂಟಿ ಮಾಡಲು ಗಣಿ ಮಾಲಿಕರು, ಸಚಿವರು, ಅಧಿಕಾರಿಗಳು ಎಲ್ಲ ಕೈಜೋಡಿಸಿರುತ್ತಾರೆ. ಕರ್ನಾಟಕದ ಜನಕ್ಕೆ ಬಳ್ಳಾರಿ ಗಣಿಧಣಿಗಳ ಕಾರುಬಾರು ಚೆನ್ನಾಗಿ ಪರಿಚಯವಾಗಿದೆ. ಮಧ್ಯಪ್ರದೇಶ, ಛತ್ತೀಸ್‌ಗಡ, ಬಿಹಾರ ಮೊದಲಾದ ಕಡೆಗಳಲ್ಲಿ ಸಾಕಷ್ಟು ಕಾಲದಿಂದ ದೊಡ್ಡ ಗಣಿ ಮಾಫೀಯಾ ಅಸ್ತಿತ್ವದಲ್ಲಿದೆ. ಈ ಪ್ರಕರಣದಲ್ಲಿ ಮನಮೋಹನ ಸಿಂಗ್ ಸರಕಾರ ಅನುಸರಿಸಿದ ನೀತಿ ಪ್ರಜಾಪ್ರಭುತ್ವಕ್ಕೆ ಮಾರಕ. ಈ ಸಂಬಂಧದಲ್ಲಿ ಕಂಟ್ರೋಲರ್ ಅಂಡ್ ಆಡಿಟರ್ ಜನರಲ್ (ಸಿಎಜಿ) ವರದಿಯನ್ನು ನಿರಾಕರಿಸಿ, ಅವರ ಮೇಲೆ ಆಪಾದನೆ ಹೊರಿಸಲು ಪ್ರಯತ್ನಿಸಿದ್ದು ಖಂಡನೀಯ. ಇದು ಸರಕಾರ ಭ್ರಷ್ಟಾಚಾರ ಪ್ರಕರಣಗಳಿಗೆ

**ಸಿ. ಆರ್. ಕೃಷ್ಣರಾವ್**

ಪ್ರತಿಕ್ರಿಯಿಸದೆ, ಕಡೆಗಣಿಸುವ ಮನೋಭಾವ ತೋರುತ್ತಿರುವುದನ್ನು ವ್ಯಕ್ತಗೊಳಿಸುತ್ತದೆ.

ಭ್ರಷ್ಟಾಚಾರದ ವಿರುದ್ಧವಾಗಿ ಜನತೆಯ ಆಕ್ರೋಶವನ್ನೂ, ನಡೆದಿರುವ ಚಳವಳಿಗಳನ್ನೂ ಈ ಹಿನ್ನೆಲೆಯಲ್ಲಿ ಪರಿಗಣಿಸಬೇಕು. ಬೃಹತ್ ಪ್ರಮಾಣದಲ್ಲಿ ಹರಡಿಕೊಂಡಿರುವ ಈ ಪೀಡೆಯ ವಿರುದ್ಧ ಹೋರಾಟವು ನಿರಂತರ. ಇದರ ವಿರುದ್ಧ ಜನಸಾಮಾನ್ಯರಲ್ಲಿ ಜಾಗೃತಿ ಮೂಡಿಸುವುದು ಆದ್ಯಕರ್ತವ್ಯ. ತಾತ್ಕಾಲಿಕವೋ ಅಥವಾ ಏಕಾಏಕಿ ಪ್ರಾರಂಭವಾಗುವ ಪ್ರತಿಭಟನಾ ಹೋರಾಟಗಳೋ ಪರಿಹಾರವಲ್ಲ. ಲೋಕಾಯುಕ್ತ ಕಾಯಿದೆಗಾಗಿ ಮಹಾರಾಷ್ಟ್ರದ ಗಾಂಧಿವಾದಿ ಅಣ್ಣಾ ಹಜಾರೆ ನೇತೃತ್ವದಲ್ಲಿ ನಡೆದ ಹೋರಾಟ ಅದಕ್ಕೆ ಸಾಕ್ಷಿ. ದೇಶಾದ್ಯಂತ ಪ್ರತಿಭಟನೆಯ ಕಿಚ್ಚು ಎಬ್ಬಿಸಿದ ಚಳವಳಿ ಅನನ್ಯ. ಎಲ್ಲ ಜನವಿಭಾಗಗಳೂ ಇದರಲ್ಲಿ ಭಾಗವಹಿಸಿದ್ದುದು ಅಪೂರ್ವ. ಸ್ವಾತಂತ್ರ್ಯ ಸಮರದ ದಿನಗಳನ್ನು, ಜಯಪ್ರಕಾಶನಾರಾಯಣ ಎಪ್ಪತ್ತರ ದಶಕದಲ್ಲಿ ಹೂಡಿದ ಆಂದೋಳನವನ್ನು ನೆನಪಿಗೆ ತಂದಿತು. ಸರಿಯಾದ ನಾಯಕತ್ವದ ಕೊರತೆ, ಸಂಕುಚಿತ ದೃಷ್ಟಿಕೋನ, ವೈಯ್ಯಕ್ತಿಕ ಪ್ರತಿಷ್ಠೆಗಳಿಂದಾಗಿ ಚಳವಳಿ ಬಹುಬೇಗ ತನ್ನ ಮೊನಚನ್ನು ಕಳೆದುಕೊಂಡಿತು. 'ಅಣ್ಣಾ ತಂಡ' ಎಂದೇ ಕರೆಯಲ್ಪಟ್ಟ ಈ ನಾಯಕತ್ವದಲ್ಲಿ ಪ್ರತಿಷ್ಠಿತ ವ್ಯಕ್ತಿಗಳಿದ್ದರು. ಆದರೆ ಮೂಲತಃ ಗುರಿ ಸಾಧನೆಗೆ ಅನುಸರಿಸಿದ ಮಾರ್ಗ, ಚಳವಳಿಯನ್ನು ಗಟ್ಟಿ ನೆಲೆಯ ಮೇಲೆ ನಿಲ್ಲಿಸಲು ನಿರಾಸಕ್ತಿ, ಲೋಕಾಯುಕ್ತ ಕಾಯಿದೆಯನ್ನು ರಚಿಸುವುದೊಂದರಿಂದಲೇ ಸಮಸ್ಯೆ ಪರಿಹಾರವಾಗುವುದೆಂಬ ನಂಬಿಕೆ, ಸಂವಿಧಾನಾತೀತ ಧೋರಣೆ, ಇವೆಲ್ಲ ಚಳವಳಿಯ ವೈಫಲ್ಯಕ್ಕೆ ಕಾರಣ ಎನ್ನಬಹುದು. ಪ್ರಾರಂಭದಲ್ಲಿ ಭ್ರಷ್ಟಾಚಾರದ ವಿರುದ್ಧದ ಈ ಹೋರಾಟಕ್ಕೆ ಬೆಂಬಲ ನೀಡಿದ ವಿರೋಧ ಪಕ್ಷಗಳು ಕ್ರಮೇಣ ಹಿಂದೆ ಸರಿದದ್ದು ಗಮನಾರ್ಹ. ಭ್ರಷ್ಟಾಚಾರದ ವಿರುದ್ಧ ಕಠಿಣಕ್ರಮಕ್ಕೆ ರಾಜಕೀಯ ಇಚ್ಛಾಶಕ್ತಿಯ ಕೊರತೆಗೆ ಇದು ನಿದರ್ಶನವೆ ಎಂಬ ಅನುಮಾನ ಬರುವುದು ಸಹಜ. ಪಾರ್ಲಿಯಮೆಂಟಿನಲ್ಲಿ ಲೋಕಾಯುಕ್ತ ಮಸೂದೆಯ ಮಂಡನೆಯ ರೀತಿ, ನಡೆದ ಚರ್ಚೆ ಮುಂದೂಡಿಕೆ ಇವೆಲ್ಲ ಈ ಅನುಮಾನವನ್ನು ದೃಢಪಡಿಸುತ್ತವೆ. ರಾಜಕೀಯ ಇಚ್ಛಾಶಕ್ತಿ ಇದ್ದರೆ ಹಾಲಿ ಇರುವ ಕಾನೂನುಗಳ ಅಡಿಯಲ್ಲೇ ಕ್ರಮ ಕೈಗೊಳ್ಳಲು ಬೇಕಾದಷ್ಟು ಅವಕಾಶವಿದೆ. ಬೇರೆ ರಾಜಕೀಯ ಕಾರಣಗಳಿಂದ, ವೋಟ್ ಬ್ಯಾಂಕ್ ರಾಜಕಾರಣದಿಂದ ಭ್ರಷ್ಟರನ್ನು ಹಿಂದಿಟ್ಟುಕೊಳ್ಳುವ ಪ್ರವೃತ್ತಿಯಿಂದಲೇ ಭ್ರಷ್ಟಾಚಾರ ಇಷ್ಟು ದೊಡ್ಡ ಪ್ರಮಾಣದಲ್ಲಿ ಬೆಳೆದಿರುವುದು. ಇವೆಲ್ಲಕ್ಕಿಂತ ಹೆಚ್ಚಾಗಿ ಜನಸಾಮಾನ್ಯರನ್ನು ಭ್ರಮೆನಿರಸನಗೊಳಿಸಿರುವುದು ನ್ಯಾಯವಿತರಣೆಯಲ್ಲಿ ಆಗುತ್ತಿರುವ ವಿಪರೀತ ವಿಳಂಬ. ಇದು ಭ್ರಷ್ಟಾಚಾರ ಪ್ರಕರಣಗಳಿಗಷ್ಟೇ ಅಲ್ಲ, ಎಲ್ಲ ಇತರ ಮೊಕದ್ದಮೆಗಳಿಗೂ ಅನ್ವಯವಾಗುತ್ತದೆ. ಲೋಕಾಯುಕ್ತ ಕಾನೂನು ರಚನೆಯಿಂದ ಸಮಸ್ಯೆ ಬಗೆಹರಿಯದು ಎಂದು ಮತ್ತೊಮ್ಮೆ ಒತ್ತಿ ಹೇಳುತ್ತಲೇ ಜನರಲ್ಲಿ ವಿಶ್ವಾಸ ಮೂಡಿಸಲು ಅಗತ್ಯವಾದ ಎಲ್ಲ ಕ್ರಮಗಳನ್ನು ಕೈಗೊಂಡಾಗ ಮಾತ್ರ ಹಿಂದಿನಿಂದಲೂ ಬೆಳೆದುಬಂದಿರುವ ಭ್ರಷ್ಟಾಚಾರವನ್ನು ತಗ್ಗಿಸಲು ಸಾಧ್ಯ. ಸಮಯಸ್ಫೂರ್ತಿಯಿಂದ ಉದ್ಭವವಾಗುವ ಚಳವಳಿಗಳಿಂದ ಅಲ್ಲ. ಅಣ್ಣಾ ತಂಡದ ಚಳವಳಿ, ಅದರಲ್ಲಿ ಮೂಡಿದ ಒಡಕು, ಇನ್ನೊಂದು ರಾಜಕೀಯ ಪಕ್ಷ- ಆಮ್ ಆದ್ಮಿ ಪಾರ್ಟಿ – ಇವೆಲ್ಲ ಕಲಿಸಿರುವ ಪಾಠ.

ಭ್ರಷ್ಟಾಚಾರದ ಪೆಡಂಭೂತದ ಜೊತೆಗೇ ಜನಸಾಮಾನ್ಯರ ಪಾಲಿಗೆ ಎರಗಿರುವುದು ಅಗತ್ಯ ವಸ್ತುಗಳ ಬೆಲೆ ಏರಿಕೆ, ಬಂಡವಾಳಶಾಹಿ ಜಗತ್ತಿನಲ್ಲಿ ತಲೆದೋರಿದ ಆರ್ಥಿಕ ಕುಸಿತದ ಬಿಸಿ ಭಾರತಕ್ಕೂ ತಟ್ಟದೇ ಇರಲಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ, ಮುಖ್ಯವಾಗಿ ಅಮೆರಿಕದಲ್ಲಿ ತೋರಿಬಂದ ಪರಿಣಾಮಗಳು ಇಲ್ಲದೇ ಹೋದರೂ ಭಾರತದ ಆರ್ಥಿಕಾಭಿವೃದ್ಧಿ ಕುಂಠಿತಗೊಂಡದ್ದು ನಿಜ. ಭಾರತದಲ್ಲಿ ಆರ್ಥಿಕ ಬೆಳವಣಿಗೆಯ ಪ್ರಮಾಣ ನಿರೀಕ್ಷಿತ ಮಟ್ಟಕ್ಕಿಂತ ಕೆಳಗೆ ಇಳಿದಿದೆ. ಮನಮೋಹನ ಸಿಂಗ್-ಅಹ್ಲುವಾಲಿಯ-ಚಿದಂಬರಂ, ಈ ತ್ರಿಮೂರ್ತಿಗಳ ಪಾಶ್ಚಾತ್ಯ ದೇಶಗಳ ಮೇಲೆ ಅವಲಂಬನೆಯ ನೀತಿ, ಜನಪರವಾದ ನೀತಿಗಳಿಗಿಂತ ಬಂಡವಾಳಗಾರರಿಗೆ, ಶ್ರೀಮಂತರಿಗೆ ಅನುಕೂಲ ಮಾಡಿಕೊಡಲು ತೋರುತ್ತಿರುವ ಕಾತರ ದೇಶದಲ್ಲಿ ಶ್ರೀಮಂತರು ಮತ್ತು ಬಡವರ ನಡುವೆ ಅಂತರವನ್ನು ಇನ್ನಷ್ಟು ಗಾಢವಾಗಿಸಿದೆ. ಭಾರತದ ಒಟ್ಟು ಜನಸಂಖ್ಯೆಯಲ್ಲಿ ಶೇ. ೭೧ರಷ್ಟು ಮಂದಿ ಬಡತನದಲ್ಲಿದ್ದಾರೆ. ಪೆಟ್ರೋಲಿಯಂ ಉತ್ಪನ್ನಗಳ ತೀವ್ರವಾಗಿ ಏರಿದ ಬೆಲೆ, ಸಬ್ಸಿಡಿ ಕಡಿತ, ಹೆಚ್ಚುತ್ತಿರುವ ನಿರುದ್ಯೋಗಿ ಜನಸಾಮಾನ್ಯರ ಜೀವನವನ್ನೂ ದುಸ್ತರಗೊಳಿಸಿದೆ. ಕಳೆದ ಒಂದು ವರ್ಷದಲ್ಲಿ ಆರ್ಥಿಕ ಪುನಶ್ಚೇತನದ ಹೆಸರಿನಲ್ಲಿ ಕೈಗೊಂಡಿರುವ ಕಠಿಣಕ್ರಮಗಳು ಬಂಡವಾಳಗಾರರಿಗೆ, ಶ್ರೀಮಂತರಿಗೆ ಅನುಕೂಲ ವಾಗಿದೆಯೇ ಹೊರತು ಜನಸಾಮಾನ್ಯರಿಗಲ್ಲ. ಇನ್ನಷ್ಟು ಕಠಿಣ ಕ್ರಮಗಳ ಸೂಚನೆಯನ್ನೂ ವಿತ್ತ ಮಂತ್ರಿ ಚಿದಂಬರಂ ವರ್ಷದ ಕೊನೆಯಲ್ಲಿ ನೀಡಿದ್ದಾರೆ. ರಾಷ್ಟ್ರೀಯ ಅಭಿವೃದ್ಧಿ ಮಂಡಲಿಯ ಸಭೆಯಲ್ಲಿ ಮಾತನಾಡಿದ ಪ್ರಧಾನಿ ಇದನ್ನು ದೃಢಪಡಿಸಿದ್ದಾರೆ. ಡೀಸೆಲ್, ಸೀಮೆಎಣ್ಣೆ, ಇಂಧನಾನಿಲಗಳ ಬೆಲೆಗಳನ್ನು ಮುಂದಿನ ವರ್ಷ ಪ್ರತಿ ತಿಂಗಳೂ ಏರಿಸುವ ಯೋಜನೆಯನ್ನು ಸರಕಾರ ಹೊಂದಿದೆ. ಸಬ್ಸಿಡಿಯನ್ನು ಸಂಪೂರ್ಣವಾಗಿ ನಿಲ್ಲಿಸುವುದು ಇಂಗಿತ. ಇದರಿಂದ ಜನಸಾಮಾನ್ಯರ ಜೀವನ ಇನ್ನಷ್ಟು ದುಸ್ತರವಾಗಲಿದೆ. ಆರ್ಥಿಕ ಬೆಳವಣಿಗೆಯ ಪ್ರಮಾಣವನ್ನು ಹೆಚ್ಚು ಕಡಿಮೆ ೧೦ಕ್ಕೆ ಏರಿಸುವ ಸರಕಾರದ ಕನಸು ನುಚ್ಚುನೂರಾಗಿ ಈಗ ಅದನ್ನು ಕಡಿಮೆ ಮಾಡಿದೆ. ನಾಲ್ಕು ವರ್ಷ ಅಧಿಕಾರ ಪೂರೈಸುವ ಸರಕಾರದ ಸಾಧನೆ ಏನು ಎಂದರೆ ಎಲ್ಲ ಕ್ಷೇತ್ರಗಳಲ್ಲೂ ವೈಫಲ್ಯತೆ. ವರ್ಷಗಳು ಉರುಳಿದರೂ ಮಹಿಳಾ ಮೀಸಲಾತಿ ಮಸೂದೆ ನೆನೆಗುದಿಗೆ ಬಿದ್ದಿದೆ, ಲೋಕಪಾಲ ಮಸೂದೆಯ ಪಾಡೂ ಅದೇ ಆಗುತ್ತಿದೆ. ಪಾರ್ಲಿಮೆಂಟರಿ ಸಮಿತಿಗಳ ಕಾರುಬಾರೂ ಅಷ್ಟಕ್ಕಷ್ಟೆ. ಒಂದೊಂದಾಗಿ ಸಂವಿಧಾನಬದ್ಧವಾಗಿ ನೇಮಕಗೊಂಡಿರುವ ಸ್ಥಾಪನೆಗಳು ಮಹತ್ವವನ್ನು ಕಳೆದು ಕೊಳ್ಳುತ್ತಿವೆ. ಸರಕಾರದ ಮಧ್ಯಪ್ರವೇಶ, ಅನಾದರಣೆಗಳೇ ಇದಕ್ಕೆ ಕಾರಣ.

ಸಮ್ಮಿಶ್ರ ಸರಕಾರ ಈಗ ಸಂದರ್ಭವಾದಿಗಳ ಆಸರೆಯಿಂದ ಕಾಲ ತಳ್ಳುತ್ತಿದೆ. ಮುಂದಿನ ವರ್ಷ ಚುನಾವಣೆಯ ವರ್ಷ (೨೦೧೪)ವಾಗಿರುವುದರಿಂದ ಹೆಚ್ಚಿನ ಬದಲಾವಣೆಗಳನ್ನೇನೂ ನಿರೀಕ್ಷಿಸುವಂತಿಲ್ಲ. ಎಲ್ಲ ರಾಜಕೀಯ ಪಕ್ಷಗಳೂ ಚುನಾವಣೆಯ ಲೆಖ್ಖಾಚಾರದಲ್ಲಿ ತೊಡಗಿವೆ. ಈವರೆಗೆ ನಡೆದ ಉಪಚುನಾವಣೆಗಳು, ರಾಜ್ಯ ವಿಧಾನ ಸಭಾ ಚುನಾವಣೆಗಳ ಫಲಿತಾಂಶಗಳನ್ನು ಅವಲೋಕಿಸಿದರೆ ಅನಿರೀಕ್ಷಿತವಾದ್ದೇನೂ ಕಾಣುತ್ತಿಲ್ಲ. ಕಾಂಗ್ರೆಸ್ ಯುವಜನರ ಮೇಲೆ ಕಣ್ಣಿರಿಸಿ ರಾಹುಲ ಗಾಂಧಿಗೆ ಪಟ್ಟ ಕಟ್ಟಲು ನೋಡುತ್ತಿದೆ. ಆ ದಾರಿಯಲ್ಲಿ ಪಕ್ಷದಲ್ಲಿ ಆತನಿಗೆ ಹೆಚ್ಚಿನ ಅಧಿಕಾರ ನೀಡಲಾಗಿದೆ. ಇದಕ್ಕೆ ಪೂರ್ವಭಾವಿಯಾಗಿ ಸಂಪುಟದ ಪುನಾರಚನೆಯಲ್ಲಿ ಯುವಕರಿಗೆ ಹೆಚ್ಚಿನ ಸ್ಥಾನ ಕಲ್ಪಿಸಲಾಗಿದೆ. ಪ್ರಮುಖ ವಿರೋಧಪಕ್ಷ ಭಾರತೀಯ ಜನತಾ ಪಾರ್ಟಿ ಒಡೆದ ಮನೆಯಾಗಿದೆ. ಅಧ್ಯಕ್ಷ ಗಡ್ಕರಿಯೇ ಭ್ರಷ್ಟಾಚಾರದ ಆಪಾದನೆ ಎದುರಿಸುತ್ತಿದ್ದಾರೆ. ಮುಂಬರುವ ಚುನಾವಣೆಗಳಲ್ಲಿ ಅಧಿಕಾರ ಗ್ರಹಣಕ್ಕೆ ಕಾತುರವಾಗಿರುವ ಎನ್‌ಡಿಎಯಲ್ಲಿ ಈಗಲೇ ಪ್ರಧಾನಿ ಪಟ್ಟಕ್ಕಾಗಿ ಪೈಪೋಟಿ ನಡೆದಿದೆ. ರಾಜಕೀಯ ಕ್ಷೇತ್ರದಲ್ಲಿ ಮೂಡದ ತೃತೀಯರಂಗದಿಂದಾಗಿ ಚುನಾವಣೆಗಳು ನಡೆದಾಗ ಜನರ ಆಯ್ಕೆ ಸೀಮಿತಗೊಳ್ಳುತ್ತಿದೆ. ಏನೇ ಸುಧಾರಣೆಗಳನ್ನು ನಿರೀಕ್ಷಿಸಿದರೂ ಚುನಾವಣೆಗಳಲ್ಲಿ ಹಣದ ಥೈಲಿ, ಜಾತಿ ರಾಜಕಾರಣ ಮೇಲುಗೈ ಪಡೆಯುತ್ತಿರುವುದು ದುರಂತ. ಎಡಪಕ್ಷಗಳ ಐಕ್ಯತೆ, ಪ್ರಜಾಪ್ರಭುತ್ವ ಶಕ್ತಿಗಳ ಕ್ರೋಢೀಕರಣವೊಂದೇ ಶ್ರೀಸಾಮಾನ್ಯನಿಗಿರುವ ಆಸರೆ.

ರಾಜ್ಯಗಳ ರಾಜಕೀಯ ಪರಿಸ್ಥಿತಿಯಲ್ಲಿ ಹೆಚ್ಚಿನ ವ್ಯತ್ಯಾಸವೇನಿಲ್ಲ. ಉತ್ತರ ಪ್ರದೇಶದಲ್ಲಿ ನಡೆದ ಚುನಾವಣೆಗಳಲ್ಲಿ ಮುಲಾಯಂ ಸಿಂಗ್ ನೇತೃತ್ವದ ಸಮಾಜವಾದಿ ಪಾರ್ಟಿ ಅಧಿಕಾರಕ್ಕೇರಿದ್ದು ವಿಶೇಷ. ರಾಷ್ಟ್ರೀಯ ಪಕ್ಷಗಳಾದ ಕಾಂಗ್ರೆಸ್ ಮತ್ತು ಭಾಜಪ ಈ ರಾಜ್ಯದಲ್ಲಿ ಮೂಲೆಗುಂಪಾಗಿವೆ. ಪಶ್ಚಿಮ ಬಂಗಾಳದಲ್ಲಿ ತೃಣಮೂಲ ಕಾಂಗ್ರೆಸ್ಸಿನ ಒಂದು ವರ್ಷದ ಆಡಳಿತ ಮುಗಿದಿದೆ. ಮುಖ್ಯಮಂತ್ರಿ ಮಮತಾ ಬ್ಯಾನರ್ಜಿಯ ಸರ್ವಾಧಿಕಾರಿ ಧೋರಣೆ, ಪ್ರತೀಕಾರದ ರಾಜಕಾರಣ ಹೆಚ್ಚು ಹೆಚ್ಚು ಬಯಲಾಗಿದೆ. ಗುಜರಾತ್, ಹಿಮಾಚಲ ಪ್ರದೇಶಗಳಲ್ಲಿ ಈಚೆಗೆ ನಡೆದ ಚುನಾವಣೆಗಳಲ್ಲಿನ ಫಲಿತಾಂಶ ಅನಿರೀಕ್ಷಿತವೇನಲ್ಲ. ಆಂಧ್ರಪ್ರದೇಶದ ಕಾಂಗ್ರೆಸ್ಸಿನಲ್ಲಿ ಭುಗಿಲೆದ್ದಿರುವ ವೈಮನಸ್ಸು, ಒಡಕು ಒಂದು ಬಗೆಯಾದರೆ, ತೆಲಂಗಾಣ ಪ್ರಶ್ನೆ ಇತ್ಯರ್ಥ ಕಾಣದೆ ಉಳಿದಿದೆ. ಕರ್ನಾಟಕದ ಮಟ್ಟಿಗೆ ಸಮಾಧಾನಕರ ಸಂಗತಿ ಎಂದರೆ ವರ್ಷದ ಕೊನೆಯಲ್ಲಿ ಹೈದರಾಬಾದ್ ಕರ್ನಾಟಕಕ್ಕೆ ದೊರೆತ ವಿಶೇಷ ಸ್ಥಾನಮಾನ. ಗೊಂದಲದ ಗೂಡಾಗಿರುವ ಭಾಜಪ ಅಧಿಕಾರಾವಧಿಯಲ್ಲಿ ಮೂರನೇ ಮುಖ್ಯಮಂತ್ರಿಯನ್ನು ಪಟ್ಟಕ್ಕೆ ತಂದಿದೆ. ರಾಜ್ಯದ ಮುಖ್ಯಮಂತ್ರಿಯೊಬ್ಬರು ಭ್ರಷ್ಟಾಚಾರ ಪ್ರಕರಣದಲ್ಲಿ ಕಾರಾಗೃಹ ಸೇರಿದ್ದು ದಾಖಲೆ. ಈಗ ಅದೇ ಭ್ರಷ್ಟ ರಾಜಕಾರಣಿ ಹೊಸ ಪ್ರಾದೇಶಿಕ ಪಕ್ಷ - ಕರ್ನಾಟಕ ಜನತಾಪಕ್ಷ - ಸ್ಥಾಪಿಸಿ ಅಧಿಕಾರ ಹಿಡಿಯುವ ಹಂಬಲದಲ್ಲಿದ್ದಾರೆ. ಮುಂಬರುವ ಚುನಾವಣೆಗಳು ಕರ್ನಾಟಕದ ಮಟ್ಟಿಗೆ ಕುತೂಹಲಕಾರಿ.

ವರ್ಷಾಂತ್ಯದಲ್ಲಿ ಕಂಡದ್ದು ಸ್ತ್ರೀಯರ ಮೇಲೆ ಅತ್ಯಾಚಾರದ ವಿರುದ್ಧ ದೇಶದಾದ್ಯಂತ ಭುಗಿಲೆದ್ದ ಆಕ್ರೋಶ. ದೆಹಲಿಯ ವಿದ್ಯಾರ್ಥಿನಿಯ ಮೇಲೆ ನಡೆದ ಸಾಮೂಹಿಕ ಅತ್ಯಾಚಾರ, ನಡೆದ ಅಮಾನುಷ ಹಿಂಸಾಚಾರದಲ್ಲಿ ಸಂಭವಿಸಿದ ಸಾವು, ದೆಹಲಿಯಲ್ಲಿ ಹಾಗೂ ದೇಶಾದ್ಯಂತ ಹೊಮ್ಮಿದ ಪ್ರತಿಭಟನೆ ಸರಕಾರಕ್ಕೆ ಎಚ್ಚರಿಕೆಯ ಗಂಟೆಯಾಗಿದೆ. ಸರಕಾರದ ವೈಫಲ್ಯತೆಗಳ ವಿರುದ್ಧ ಜನತೆಯ ಆಕ್ರೋಶದ ಸಂಕೇತ ಅದು ಎಂದು ಪರಿಗಣಿಸಬೇಕಾಗಿದೆ. ಇಡೀ ದೇಶವೇ ತಲೆತಗ್ಗಿಸಬೇಕಾದ ಪ್ರಕರಣ ಇದು. ಸ್ತ್ರೀಯರ ಮೇಲೆ ಇಂಥ ದೌರ್ಜನ್ಯಗಳು, ಅತ್ಯಾಚಾರಗಳು ನಡೆಯುತ್ತಲೇ ಇವೆ. ಆಪಾದಿತರಿಗೆ ತಕ್ಕ ಶಿಕ್ಷೆ ವಿಧಿಸುವುದರಲ್ಲಿ ಆಗುತ್ತಿರುವ ನಿಧಾನ, ಸರಿಯಾದ ತನಿಖೆ ನಡೆಸಿ, ಸಾಕ್ಷ್ಯ ಒದಗಿಸುವುದರಲ್ಲಿ ಪೊಲೀಸರ ವೈಫಲ್ಯತೆ, ಭ್ರಷ್ಟಾಚಾರ, ನ್ಯಾಯ ವಿತರಣೆಯಲ್ಲಿ ಆಗುತ್ತಿರುವ ವಿಳಂಬ ಜನರಲ್ಲಿ ಉಂಟುಮಾಡಿರುವ ಅಸಮಾಧಾನದ ಪ್ರತೀಕವೇ ದೇಶದಲ್ಲಿ ಭುಗಿಲೆದ್ದ ಪ್ರತಿಭಟನೆ. ಪ್ರಳಯದ ಭವಿಷ್ಯ ಸುಳ್ಳಾಯಿತು, ಆದರೆ ಜನತೆಯ ಪ್ರತಿಭಟನೆಯ ಪ್ರಳಯದ ಬಗ್ಗೆ ಆಡಳಿತಾರೂಢರು ಇನ್ನಾದರೂ ಎಚ್ಚರಗೊಳ್ಳಲಿ.

**ಸಿ. ಆರ್. ಕೃಷ್ಣರಾವ್**
'ಚೌಬೀನ', ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್
ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫



# ಜಾಗತೀಕರಣ : ಬಡವರ ಭಯೋತ್ಪಾದಕ

ಯಾವುದೇ ದೇಶದ ಆರ್ಥಿಕ ನೀತಿಯು ಕೇವಲ ಆರ್ಥಿಕ ಕ್ಷೇತ್ರದ ಮೇಲೆ ಮಾತ್ರ ಪರಿಣಾಮ ಬೀರುವುದಿಲ್ಲ, ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳ ಮೇಲೂ ಪರಿಣಾಮ ಬೀರುತ್ತದೆ. ಜಾಗತೀಕರಣದ ಭರಾಟೆ ಹೆಚ್ಚಾದ ಮೇಲೆ ಸಾಮಾಜಿಕ ನ್ಯಾಯದ ಕಲ್ಪನೆಯನ್ನು ಕಡೆಗಣ್ಣಿಂದ ನೋಡುವವರ ಸಂಖ್ಯೆ ಹೆಚ್ಚಾಗುತ್ತಿದೆ. ಸಾಮಾಜಿಕವಾಗಿ ದಮನಿತರಾದವರಿಗಾಗಲಿ, ಸ್ಥಳೀಯರಿಗಾಗಲಿ ಉದ್ಯೋಗದಲ್ಲಿ ಅವಕಾಶ ಕಲ್ಪಿಸುವ ನೀತಿಯನ್ನು ಖಾಸಗಿ ವಲಯವು ಸಂಪೂರ್ಣವಾಗಿ ನಿರಾಕರಿಸುತ್ತ ಬಂದಿದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಅಸಮಾನತೆಯ ಅಂತರ ಹೆಚ್ಚುತ್ತಿದೆ. ಖಾಸಗಿ ವಿಶ್ವವಿದ್ಯಾಲಯಗಳ ಸ್ಥಾಪನೆಯ ಮೂಲಕ ಸರ್ಕಾರಿ ವಿಶ್ವವಿದ್ಯಾಲಯಗಳ ಶಕ್ತಿಯನ್ನು ಕುಗ್ಗಿಸುವುದಷ್ಟೇ ಅಲ್ಲ, ಖಾಸಗಿ–ಸ್ವಾಯತ್ತ ಶಿಕ್ಷಣ ಸಂಸ್ಥೆಗಳು ಮಾತ್ರವೇ ಶ್ರೇಷ್ಠವೆಂಬ ಮನೋಭಾವವನ್ನು ಬೆಳೆಸಲಾಗುತ್ತಿದೆ. ಜೊತೆಗೆ ಶಿಕ್ಷಣವು ದುಬಾರಿಯಾಗುತ್ತಿದೆ.

**ಪ್ರೊ॥ ಬರಗೂರು ರಾಮಚಂದ್ರಪ್ಪ**

ಜಾಗತೀಕರಣದ ಹೆಸರಿನಲ್ಲಿ ಆರ್ಥಿಕ ಸುಧಾರಣೆಗಳು ಅನುಷ್ಠಾನಗೊಳ್ಳತೊಡಗಿದಾಗ ನಮ್ಮ ದೇಶದಲ್ಲಿ ಮಿಶ್ರ ಪ್ರತಿಕ್ರಿಯೆಗಳು ಎದುರಾದವು. ಅಭಿವೃದ್ಧಿಗೆ ಜಾಗತೀಕರಣವೊಂದೇ ದಾರಿಯೆಂಬುದು ಕೆಲವರ ವಾದವಾದರೆ, ಜಾಗತೀಕರಣವು ಬಂಡವಾಳಗಾರರಿಗೆ ಮಾತ್ರ ಲಾಭದಾಯಕ, ಬಡವರಿಗಲ್ಲ ಎನ್ನುವುದು ಇನ್ನೊಂದು ವಾದ. ಜಾಗತೀಕರಣವೆಂದರೆ ಖಾಸಗೀಕರಣವೆನ್ನುವುದು ಈಗ ಸ್ಪಷ್ಟವಾಗಿದೆ. ಮುಕ್ತ ಮಾರುಕಟ್ಟೆಯ ಮೂಲಪರಿಕಲ್ಪನೆಯೊಂದಿಗೆ ದೇಶ-ವಿದೇಶದ ಬಂಡವಾಳ ತೊಡಗುವಿಕೆಗೆ ಮುಕ್ತ ಅವಕಾಶ ಕಲ್ಪಿಸುವುದೇ 'ಜಾಗತೀಕರಣ'ದ ಮೂಲಪಾಠವಾಗಿದೆ. ಬಂಡವಾಳ ಹರಿದುಬರುವುದಾದರೆ, ಯಾವ ಷರತ್ತನ್ನೂ ವಿಧಿಸದೆ ರತ್ನಗಂಬಳಿ ಹಾಸಿ ಸ್ವಾಗತಿಸಿ ಮಂಡಿಯೂರಿ ಕುಳಿತುಕೊಳ್ಳುವ ಆರ್ಥಿಕ ಸುಧಾರಣಾ ನೀತಿಯ ವಕ್ತಾರರು ನಮ್ಮ ಸಂವಿಧಾನಾತ್ಮಕ ಆಶಯಗಳನ್ನು ಒತ್ತೆಯಿಡುತ್ತಿದ್ದಾರೆ. ಯಾಕೆಂದರೆ ನಮ್ಮ ಸಂವಿಧಾನದಲ್ಲಿ ಅಡಕವಾಗಿರುವ ಸಾಮಾಜಿಕ ನ್ಯಾಯಕ್ಕೆ ಆರ್ಥಿಕ ಸುಧಾರಣೆಗಳು ವಿರುದ್ಧವಾಗಿವೆ. ಸಂವಿಧಾನದ ಆರಂಭದಲ್ಲೇ ಉಲ್ಲೇಖಿತವಾದ ಸಮಾನತೆ ಮತ್ತು ಸಮಾಜವಾದದ ಪರಿಕಲ್ಪನೆಯನ್ನು ಪರಿಹಾಸ್ಯ ಮಾಡುತ್ತಿವೆ. ಈ ಮೂಲಕ ಸಂವಿಧಾನ ವಿರೋಧಿ ಸುಧಾರಣೆಗಳನ್ನು ವಿಜೃಂಭಿಸುತ್ತ, ಅದನ್ನೇ ಅಭಿವೃದ್ಧಿ ಎಂದು ಬಿಂಬಿಸುತ್ತ, ಬಡವರ ಬಾಳಿಗೆ ಬೆಂಕಿಯಿಡುವ ಕ್ರೌರ್ಯಕ್ಕೆ ಸಾಮಾಜಿಕ ಮನ್ನಣೆ ಕೊಡಿಸಲಾಗುತ್ತಿದೆ. ಹರ್ಬರ್ಟ್ ಅಪ್ತೇಕರ್ ಅವರು ಹೇಳಿದಂತೆ - ''ಮುಕ್ತ ಆರ್ಥಿಕ ಪದ್ಧತಿಯಲ್ಲಿ ಸರ್ಕಾರ ಹೇಳಿದಂತೆ ಬಂಡವಾಳಗಾರರು ಕೇಳುವುದಿಲ್ಲ, ಬಂಡವಾಳಗಾರರು ಹೇಳಿದಂತೆ ಸರ್ಕಾರ ಕೇಳುತ್ತದೆ. ಮುಕ್ತ ಆರ್ಥಿಕ ನೀತಿಯ ಹರಿಕಾರರ ಪ್ರಕಾರ ಜನರಿಗೆ ರಾಜಕೀಯ ಸ್ವಾತಂತ್ರ್ಯವಿರುತ್ತದೆ; ಆರ್ಥಿಕ ಸ್ವಾತಂತ್ರ್ಯ ಇರುವುದಿಲ್ಲ; ಆರ್ಥಿಕ ಅಸಮಾನತೆಯು ಸ್ವಾಭಾವಿಕ ನೆಲೆಯಾಗಿರುತ್ತದೆ.''

– ಈ ಹೇಳಿಕೆಯು ಆರ್ಥಿಕ ಸುಧಾರಣೆಯ ಹೆಸರಿನಲ್ಲಿ ಸಂಪೂರ್ಣ ಖಾಸಗೀಕರಣಕ್ಕೆ ಅವಕಾಶ ಕಲ್ಪಿಸಿ ಬಂಡವಾಳಶಾಹಿಯ ಅಡಿಯಾಳಾಗುತ್ತ ಆರ್ಥಿಕ ನಾಯಕತ್ವಕ್ಕೆ ಆದ್ಯತೆ ಕೊಡುವ ಕಟು ಸತ್ಯವನ್ನು ಅನಾವರಣಗೊಳಿಸುತ್ತದೆ. ಆರ್ಥಿಕ ಸ್ವಾತಂತ್ರ್ಯ ಇರುವುದಿಲ್ಲ, ರಾಜಕೀಯ ಸ್ವಾತಂತ್ರ್ಯ ಇರುತ್ತದೆ – ಎಂಬ ಕಲ್ಪನೆಯೇ ಸ್ವಾತಂತ್ರ್ಯ ಮತ್ತು ಪ್ರಜಾಪ್ರಭುತ್ವದ ಪರಿಕಲ್ಪನೆಯನ್ನು ಸಂಕುಚಿತಗೊಳಿಸುತ್ತದೆ. ಸ್ವಾತಂತ್ರ್ಯ ಹೋರಾಟ ನಡೆದಾಗ ರಾಜಕೀಯ ಸ್ವಾತಂತ್ರ್ಯ ಆಶಯದೊಂದಿಗೇ ಸಾಮಾಜಿಕ ಮತ್ತು ಆರ್ಥಿಕ ಸ್ವಾತಂತ್ರ್ಯದ ಹೋರಾಟಧಾರೆಗಳು ಇದ್ದದ್ದನ್ನು ಇಲ್ಲಿ ನೆನೆಯಬೇಕು. ಗಾಂಧೀಜಿಯವರು ಸಾಮಾಜಿಕ-ಆರ್ಥಿಕ ಸಂಗತಿಗಳನ್ನು ಪ್ರಸ್ತಾಪಿಸಿದರೂ ಅವರ ಹೋರಾಟದ ಮೊದಲ ಆದ್ಯತೆ ಬ್ರಿಟಿಷ್ ವಸಾಹತುಶಾಹಿಯಿಂದ ದೇಶವನ್ನು ಬಿಡುಗಡೆಗೊಳಿಸಿ, ರಾಜಕೀಯ ಸ್ವಾತಂತ್ರ್ಯವನ್ನು ಸ್ಥಾಪಿಸುವುದಾಗಿತ್ತು. ಡಾ॥ ಅಂಬೇಡ್ಕರ್ ಅವರು ರಾಜಕೀಯ ಸ್ವಾತಂತ್ರ್ಯದ ಪರವಾಗಿದ್ದುಕೊಂಡೇ ತುಳಿತಕ್ಕೊಳಗಾದವರ ಸಾಮಾಜಿಕ ಸ್ವಾತಂತ್ರ್ಯವನ್ನು ಆದ್ಯತೆಯಾಗಿಟ್ಟುಕೊಂಡು ಹೋರಾಟ ಕಟ್ಟಿದರು. ಸಮತಾವಾದಿಗಳು ಆರ್ಥಿಕ ಸ್ವಾತಂತ್ರ್ಯವಿಲ್ಲದೆ ರಾಜಕೀಯ ಸ್ವಾತಂತ್ರ್ಯಕ್ಕೆ ಅರ್ಥವಿಲ್ಲ ಎಂದು ಪ್ರತಿಪಾದಿಸಿದರು. ಹಾಗೆ ನೋಡಿದರೆ ನಿಜವಾದ ಪ್ರಜಾಸತ್ತಾತ್ಮಕ ಸ್ವಾತಂತ್ರ್ಯವು ರಾಜಕೀಯ, ಸಾಮಾಜಿಕ ಹಾಗೂ ಆರ್ಥಿಕ ಸ್ವಾತಂತ್ರ್ಯಗಳನ್ನು ಒಟ್ಟಿಗೇ ಒಳಗೊಳ್ಳುತ್ತದೆ, ಜಾಗತೀಕರಣವು ರಾಜಕೀಯ ಸ್ವಾತಂತ್ರ್ಯಕ್ಕೆ ಮಾತ್ರ ಮನ್ನಣೆ ಹಾಕಿ ಆರ್ಥಿಕ ಹಾಗೂ ಸಾಮಾಜಿಕ ಸ್ವಾತಂತ್ರ್ಯವನ್ನು ನಿರಾಕರಿಸುತ್ತದೆ; ಬಂಡವಾಳ ತೊಡಗಿಸುವವರಿಗೆ ಎಲ್ಲ ತೀರ್ಮಾನಗಳನ್ನು ತೆಗೆದುಕೊಳ್ಳುವ ಅಧಿಕಾರ ನೀಡುತ್ತದೆ. ಆಗ ರಾಜಕೀಯ ಸ್ವಾತಂತ್ರ್ಯದ ಸಂಕೇತವಾಗಿರುವ ಸರ್ಕಾರ ಸಾಂಕೇತಿಕ ಮಾತ್ರವಾಗುತ್ತದೆ; ಸಂವಿಧಾನಾತ್ಮಕ ಶಕ್ತಿಯಾಗುವುದಿಲ್ಲ, ಸರ್ಕಾರವನ್ನು ನಿರ್ದೇಶಿಸುವ, ನಿಯಂತ್ರಿಸುವ ಶಕ್ತಿಕೇಂದ್ರವಾಗಿ ಆರ್ಥಿಕ ನಾಯಕತ್ವವು ವಿಜೃಂಭಿಸುತ್ತದೆ. ಆರ್ಥಿಕ ನಾಯಕತ್ವಕ್ಕೆ ಅಡಿಯಾಳಾಗಿ ರಾಜಕೀಯ ನಾಯಕತ್ವವು ಕೆಲಸ ಮಾಡುತ್ತದೆ. ನಮ್ಮ ಕೇಂದ್ರ ಸರ್ಕಾರವು ಅನುಷ್ಠಾನಗೊಳಿಸುತ್ತಿರುವ ಆರ್ಥಿಕ ಸುಧಾರಣೆಗಳ ವೈಖರಿಯನ್ನು ನೋಡಿದರೆ ಈ ಅಂಶವು ತಾನಾಗಿಯೇ ಸ್ಪಷ್ಟವಾಗುತ್ತದೆ. ನಿತ್ಯೋಪಯೋಗಿ ಗ್ಯಾಸ್ ಸಿಲಿಂಡರ್‌ಗಳಿಗೆ ಸಬ್ಸಿಡಿ ಕೊಡುವುದನ್ನು ನಿಲ್ಲಿಸುವತ್ತ ಹೆಜ್ಜೆ ಹಾಕಿ, ಸದ್ಯಕ್ಕೆ ಆರು ಸಿಲಿಂಡರ್‌ಗಳನ್ನು ಮಾತ್ರ ರಿಯಾಯಿತಿ ದರದಲ್ಲಿ ಕೊಡುತ್ತಿರುವ ಕ್ರಮವಾಗಲಿ, ಪೆಟ್ರೋಲ್-ಡೀಸಲ್ ಬೆಲೆಯನ್ನು ನಿರಂತರವಾಗಿ ಹೆಚ್ಚಿಸುತ್ತಿರುವುದಾಗಲಿ - ಜನವಿರೋಧಿ ಆರ್ಥಿಕ ಸುಧಾರಣೆಯ ಭಾಗವಾಗಿದೆ. ಇದರ ಜೊತೆಗೆ ಚಿಲ್ಲರೆ ಮಾರಾಟ ಕ್ಷೇತ್ರಕ್ಕೆ ವಿದೇಶಿ ಬಂಡವಾಳದ ನೇರ ಹೂಡಿಕೆಗೆ (ಎಫ್.ಡಿ.ಐ.) ಅವಕಾಶ. ಬಹುಮತದ ಸಮಸ್ಯೆ ಎದುರಾದರೂ ಯಾವುದಾದರೂ ಮಾರ್ಗದಿಂದ ಇಂತಹ ಕ್ರಮಗಳಿಗೆ ಪಾರ್ಲಿಮೆಂಟಿನ ಒಪ್ಪಿಗೆ ಪಡೆಯಲು ಕೇಂದ್ರ ಸರ್ಕಾರವು ನಡೆಸಿದ ಕಸರತ್ತು ಏನನ್ನು ಸೂಚಿಸುತ್ತದೆ? ವಿಶ್ವ ಬ್ಯಾಂಕಿನ ಪ್ರತಿನಿಧಿಯಾಗಿ ಪ್ರಧಾನಿಗಳು ಕೆಲಸ ಮಾಡುತ್ತಿದ್ದಾರೆಯೆ ? ಅಮೇರಿಕ ಆರ್ಥಿಕ ನೀತಿಗೆ ಭಾರತದಲ್ಲಿ ಮಾರುಕಟ್ಟೆ ಒದಗಿಸುವುದಕ್ಕೆ ಕಟಿಬದ್ಧರಾಗಿದ್ದಾರೆಯೆ ? ಪ್ರಧಾನಿಗಳು ಹೇಳುವಂತೆ ಇಂತಹ 'ಆರ್ಥಿಕ ಸುಧಾರಣೆಯ ಕ್ರಮಗಳು' ನಿಜವಾಗಿಯೂ ಈ ದೇಶದ ಜನಸಾಮಾನ್ಯರಿಗೆ, ರೈತರಿಗೆ ಅನುಕೂಲವಾಗುತ್ತವೆಯೆ ?

ಅಮೇರಿಕದ ಹಿಂದಿನ ಅಧ್ಯಕ್ಷ ಜಾರ್ಜ್ ಬುಷ್ ಅವರು ಭಾರತಕ್ಕೆ ಬಂದಾಗ ಏನು ಹೇಳಿದರೆಂಬುದನ್ನು ನೆನಪಿಸಿಕೊಳ್ಳೋಣ. ‘ಭಾರತದ ಮಧ್ಯಮವರ್ಗವು ಅಮೇರಿಕದ ಉತ್ಪನ್ನಗಳಿಗೆ ಉತ್ತಮ ಮಾರುಕಟ್ಟೆ’ – ಇದು ಬುಷ್ ಅವರ ಹೇಳಿಕೆ. ಅವರ ಉತ್ಪನ್ನಗಳಿಗೆ ಮಾರುಕಟ್ಟೆಯಾಗಲು ನಮ್ಮ ದೇಶ ಬೇಕು. ಆದರೆ ನಮ್ಮ ಉತ್ಪನ್ನಗಳಿಗೆ ಮಾರುಕಟ್ಟೆ ಬೇಡವೆ? ಆರ್ಥಿಕವಾಗಿ ಬಲಾಢ್ಯವಾದ ದೇಶಗಳಿಗೆ ಆರ್ಥಿಕವಾಗಿ ಅಷ್ಟೊಂದು ಬಲಾಢ್ಯವಲ್ಲದ ದೇಶಗಳು ವಿಧೇಯವಾಗಿ ವರ್ತಿಸಬೇಕಾದ ಅನಿವಾರ್ಯತೆಯನ್ನು ಇಲ್ಲಿ ಅರ್ಥಮಾಡಿಕೊಳ್ಳಬೇಕಾಗಿದೆ.

ಅವತ್ತು ಬುಷ್ ಹಾಗೆ ಹೇಳಿದರೆ, ಇವತ್ತು ಒಬಾಮ ಹೇಳುತ್ತಾರೆ: ''ಅಮೇರಿಕದ ಆರ್ಥಿಕ ನೀತಿಗಳ ವಿಸ್ತರಣೆಗೆ ಇಂಡಿಯಾ ಉತ್ತಮ ಪ್ರದೇಶ.'' ಅಂದರೆ, ಭಾರತವು ಅಮೇರಿಕದ ಒಂದು ‘ಬಡಾವಣೆ’ಯಾಗಬೇಕು; ಇದು ಒಟ್ಟಾರೆ ಅಮೇರಿಕಾದ ಇಬ್ಬರು ಅಧ್ಯಕ್ಷರ ಆಶಯ. ಅವರ ಆಶಯವು ಒಮ್ಮೆ ಪರೋಕ್ಷವಾಗಿ, ಇನ್ನೊಮ್ಮೆ ಪ್ರತ್ಯಕ್ಷವಾಗಿ ಅನುಷ್ಠಾನಗೊಳ್ಳುತ್ತದೆ. ಹೋಗಲಿ, ಇದರಿಂದ ಈ ದೇಶದ ಜನರ ಬದುಕು ಸುಧಾರಿಸಿದೆಯೆ? ಸುಧಾರಿಸಿರುವುದಾದರೆ ಎಂಥ ಜನರ ಬದುಕು ಸುಧಾರಿಸಿದೆ? ಈ ಪ್ರಶ್ನೆಗೆ ಉತ್ತರ ರೂಪವಾಗಿ ಅರ್ಜುನ್ ಸೇನ್‌ಗುಪ್ತ ಅವರ ವರದಿಯ ಒಂದು ಅಂಶವನ್ನು ಗಮನಿಸಬಹುದು. ಕೇಂದ್ರ ಸರ್ಕಾರವು ಅಸಂಘಟಿತ ವಲಯದ ಸ್ಥಿತಿಗತಿಗಳ ಅಧ್ಯಯನಕ್ಕಾಗಿ ಅರ್ಜುನ್ ಸೇನ್‌ಗುಪ್ತ ಅವರ ನೇತೃತ್ವದ ಆಯೋಗವನ್ನು ೨೦೦೪ರಲ್ಲಿ ನೇಮಿಸಿತು. ಈ ಆಯೋಗವು ೨೦೦೭ರಲ್ಲಿ ವರದಿಯನ್ನು ನೀಡಿತು. ಈ ವರದಿಯ ಪ್ರಕಾರ ನಮ್ಮ ದೇಶದ ಶೇ. ೭೭.೫ ಜನರ ದೈನಂದಿನ ಸರಾಸರಿ ತಲಾ ಆದಾಯವು ೨೦ ರೂಪಾಯಿಗಳು ಮಾತ್ರ. ಇದು ಅಸಂಘಟಿತ ವಲಯಕ್ಕೆ ಸಂಬಂಧಿಸಿದ್ದಾದರೂ ಒಟ್ಟಾರೆ ಆಘಾತಕಾರಿಯಾದುದು. ಇದೇ ವರದಿಯ ಪ್ರಕಾರ ನಮ್ಮ ದೇಶದ ೪೫ ಕೋಟಿ ಜನರು ಕೇವಲ ಒಪ್ಪೊತ್ತಿನ ಊಟ ಮಾಡುತ್ತಾರೆ. ಅಂದರೆ ಜಾಗತೀಕರಣದ ಆರ್ಥಿಕ ಸುಧಾರಣೆಗಳು ಮಾಡಿದ್ದೇನು? ನಿಜ; ಒಂದಷ್ಟು ಉದ್ಯೋಗಾವಕಾಶ ಕಲ್ಪಿಸಿವೆ. ಕೈತುಂಬ – ಅಲ್ಲ – ಮೈತುಂಬ ಸಂಬಳ ತೆಗೆದುಕೊಳ್ಳುವ ಒಂದಷ್ಟು ಉದ್ಯೋಗಿಗಳನ್ನು ‘ಸೃಷ್ಟಿ’ ಮಾಡಿದೆ. ಖಾಸಗಿ ವಲಯ ಬಿಡಿ, ಸರ್ಕಾರದ ಕೆಲಸಗಳಲ್ಲೂ ಔಟ್‌ಸೋರ್ಸಿಂಗ್ ಬರುವಂತೆ ಮಾಡಿವೆ. ಒಟ್ಟಿನಲ್ಲಿ ಖಾಸಗಿ ಕೋಟ್ಯಾಧೀಶರ ಸಾಮ್ರಾಜ್ಯವನ್ನು ವಿಸ್ತರಿಸುತ್ತಿವೆ.



ಇದು ಅಭಿವೃದ್ಧಿಯ ಅಂತಿಮ ಆದರ್ಶ ಮಾದರಿಯೇ?

ಅಭಿವೃದ್ಧಿ ಮಾದರಿಗೆ ಗುಜರಾತಿನ ನರೇಂದ್ರ ಮೋದಿಯವರ ಆಡಳಿತವೇ ಆದರ್ಶವೆಂದು ಭಾವಿಸುವ ಸನ್ನಿವೇಶವನ್ನು ಸೃಷ್ಟಿಸಲಾಗಿದೆ. ಇದೊಂದು ವ್ಯವಸ್ಥಿತ ಪ್ರಚಾರವೂ ಹೌದು. ಆದರೆ ಇದೇ ಗುಜರಾತ್‌ನಲ್ಲಿ ಸುಮಾರು ೮೦೦೦ ಸಣ್ಣ ಕೈಗಾರಿಕೆಗಳು ಮುಚ್ಚಿ ಹೋಗಿವೆ. ಸರ್ಕಾರಿ ಶಾಲೆ-ಕಾಲೇಜುಗಳನ್ನು ಕೇಳುವವರೇ ಇಲ್ಲ; ಒಂದೇ ಒಂದು ಸರ್ಕಾರಿ ಶಾಲೆ ಅಥವಾ ಕಾಲೇಜನ್ನೂ ಹೊಸದಾಗಿ ಪ್ರಾರಂಭಿಸಿಲ್ಲ ಎಂಬ ವದಂತಿಯೂ ಇದೆ. ಜೊತೆಗೆ ಸರ್ಕಾರದ ಎಷ್ಟೋ ವಿದ್ಯಾರ್ಥಿನಿಲಯಗಳಿಗೆ ವಾರ್ಡನ್‌ಗಳೇ ಇಲ್ಲ. ಬುಡಕಟ್ಟು ಜನಾಂಗದವರ ಬವಣೆ ನಿಂತಿಲ್ಲ. ಅಧಿಕೃತ ಮಾಹಿತಿಯ ಪ್ರಕಾರವೇ ಅಪೌಷ್ಟಿಕತೆಯಿಂದ ನರಳುವ ಮಕ್ಕಳ ಸಂಖ್ಯೆ ಶೇ. ೪೨ರಷ್ಟಿದೆ. ಕೇವಲ ಮೂರ್‍ನಾಲ್ಕು ವರ್ಷಗಳಲ್ಲಿ ನಾಲ್ಕು ಸಾವಿರದಷ್ಟು ರೈತರು ಆತ್ಮಹತ್ಯೆ ಹಾಗೂ ಅಸ್ವಾಭಾವಿಕ ಸಾವಿಗೆ ತುತ್ತಾಗಿದ್ದಾರೆ. ಮಧ್ಯಮ, ಮೇಲ್‌ಮಧ್ಯಮ ಮತ್ತು ಮೇಲ್‌ವರ್ಗದವರಿಗೆ ಸಿಕ್ಕಿದ ಸೌಲಭ್ಯಗಳು ಬಹುಪಾಲು ಬಡವರಿಗೆ ಸಿಕ್ಕಿಲ್ಲ ಎಂದು ಕೆಲ ಸಮೀಕ್ಷೆಗಳು ಹೇಳುತ್ತಿವೆ. ಆದರೆ ಖಾಸಗಿ ಕಂಪನಿಗಳಿಗೆ ಮಾತ್ರ ೧೨,೦೦೦ ಕೋಟಿಗೂ ಹೆಚ್ಚು ರಿಯಾಯಿತಿಗಳನ್ನು ನೀಡಲಾಗಿದೆ. ಹಾಗಾದರೆ ಅಭಿವೃದ್ಧಿ ಎಂದರೆ ಬಂಡವಾಳ ಹೂಡಿಕೆ ಮತ್ತು ಲಾಭಗಳು ಮಾತ್ರವೇ? ಬಡವರ ಬವಣೆಗೆ ಸ್ಪಂದಿಸದೆ ಹೋದರೆ ಎಷ್ಟು ಬಂಡವಾಳ ಬಂದರೇನು ಫಲ? ಕಡೇ ಪಕ್ಷ ಸಾಮಾಜಿಕ - ಆರ್ಥಿಕ ಸಮತೋಲನವನ್ನು ಸಾಧಿಸುವ, ಸ್ಥಾಪಿಸುವ ಕೆಲಸ ಆಗಬೇಕಲ್ಲವೆ? ಇಲ್ಲದಿದ್ದರೆ ಅಭಿವೃದ್ಧಿಯೆನ್ನುವುದು ಬಂಡವಾಳಶಾಹಿಪರವಾದ ಏಕಮುಖ ನಡಿಗೆಯಾಗುತ್ತದೆ ಯಲ್ಲವೆ? ಈ ಪ್ರಶ್ನೆಗಳನ್ನು ಕೇಳಿಕೊಳ್ಳುವಷ್ಟು ಸೂಕ್ಷ್ಮತೆಯು ‘ಜಾಗತೀಕರಣ’ಕ್ಕೆ ಇಲ್ಲ.

ಯಾವುದೇ ದೇಶದ ಆರ್ಥಿಕ ನೀತಿಯು ಕೇವಲ ಆರ್ಥಿಕ ಕ್ಷೇತ್ರದ ಮೇಲೆ ಮಾತ್ರ ಪರಿಣಾಮ ಬೀರುವುದಿಲ್ಲ. ಸಾಮಾಜಿಕ, ಶೈಕ್ಷಣಿಕ, ಸಾಂಸ್ಕೃತಿಕ ಕ್ಷೇತ್ರಗಳ ಮೇಲೂ ಪರಿಣಾಮ ಬೀರುತ್ತದೆ. ಜಾಗತೀಕರಣದ ಭರಾಟೆ ಹೆಚ್ಚಾದ ಮೇಲೆ ಸಾಮಾಜಿಕ ನ್ಯಾಯದ ಕಲ್ಪನೆಯನ್ನು ಕಡೆಗಣ್ಣಿಂದ ನೋಡುವವರ ಸಂಖ್ಯೆ ಹೆಚ್ಚಾಗುತ್ತಿದೆ. ಸಾಮಾಜಿಕವಾಗಿ ದಮನಿತರಾದವರಿಗಾಗಲಿ, ಸ್ಥಳೀಯರಿಗಾಗಲಿ ಉದ್ಯೋಗದಲ್ಲಿ ಅವಕಾಶ ಕಲ್ಪಿಸುವ ನೀತಿಯನ್ನು ಖಾಸಗಿ ವಲಯವು ಸಂಪೂರ್ಣವಾಗಿ ನಿರಾಕರಿಸುತ್ತ ಬಂದಿದೆ. ಶೈಕ್ಷಣಿಕ ಕ್ಷೇತ್ರದಲ್ಲಿ ಅಸಮಾನತೆಯ ಅಂತರ ಹೆಚ್ಚುತ್ತಿದೆ. ಖಾಸಗಿ ವಿಶ್ವವಿದ್ಯಾಲಯಗಳ ಸ್ಥಾಪನೆಯ ಮೂಲಕ ಸರ್ಕಾರಿ ವಿಶ್ವವಿದ್ಯಾಲಯಗಳ ಶಕ್ತಿಯನ್ನು ಕುಗ್ಗಿಸುವುದಷ್ಟೇ ಅಲ್ಲ, ಖಾಸಗಿ-ಸ್ವಾಯತ್ತ ಶಿಕ್ಷಣ ಸಂಸ್ಥೆಗಳು ಮಾತ್ರವೇ ಶ್ರೇಷ್ಠವೆಂಬ ಮನೋಭಾವವನ್ನು ಬೆಳೆಸಲಾಗುತ್ತಿದೆ. ಜೊತೆಗೆ ಶಿಕ್ಷಣವು ದುಬಾರಿಯಾಗುತ್ತಿದೆ. ಪ್ರಾಥಮಿಕ ಶಿಕ್ಷಣದಲ್ಲೂ ಮಾತೃಭಾಷಾ ಮಾಧ್ಯಮ ಬೇಡವೆನ್ನುವವರ ಕೂಗು ಮುಂಚೂಣಿಗೆ ಬರುತ್ತಿದೆ. ಸಾಂಸ್ಕೃತಿಕ ಕ್ಷೇತ್ರಕ್ಕೆ ಬಂದರೆ, ಖಾಸಗಿ ಆರ್ಥಿಕ ವಲಯದ ವ್ಯಕ್ತಿಕೇಂದ್ರಿತ ಆಶಯಗಳು ಸೂಕ್ಷ್ಮವಾಗಿ ಪ್ರವೇಶಿಸಿರುವುದನ್ನು ಕಾಣಬಹುದು. ಇದರ ಫಲವಾಗಿ ಏಕವ್ಯಕ್ತಿ, ಏಕಕೃತಿ ಶ್ರೇಷ್ಠತೆಯ ಚರ್ಚೆಗಳಿಗೆ ಆದ್ಯತೆ ನೀಡಿ ಸಾಮಾಜಿಕ ಆಶಯಗಳನ್ನು ಗೌಣಗೊಳಿಸಲಾಗುತ್ತಿದೆ. ಸಾಂಸ್ಕೃತಿಕ ಚಳವಳಿಗಳ ಮಹತ್ವವನ್ನು ಅಲ್ಲಗಳೆಯುವ ಪ್ರವೃತ್ತಿ ಮುಂಚೂಣಿಗೆ ಬರುತ್ತಿದೆ.

ಜಾಗತೀಕರಣ – ಅರ್ಥಾತ್ ಖಾಸಗೀಕರಣವು ಯಾವತ್ತೂ ‘ಸಂಘಟನೆ’ಯ ಪರವಾಗಿರುವುದಿಲ್ಲ. ಇದರ ಫಲವೂ ಎಂಬಂತೆ ನಮ್ಮ ‘ಸಂಘಟನೆ’ಗಳು ‘ವಿಘಟನೆ’ಯ ಹಾದಿ ಹಿಡಿದದ್ದೇ ಹೆಚ್ಚು. ವ್ಯಕ್ತಿಕೇಂದ್ರಿತ ಆಶಯಗಳು ಪರೋಕ್ಷವಾಗಿ ಮಾಡಿದ ಪರಿಣಾಮವೂ ಇದಕ್ಕೆ ಒಂದು ಕಾರಣವೆಂದು ಕಾಣುತ್ತದೆ. ಈ ಎಲ್ಲದರ ಫಲವಾಗಿ ಈಗ ಆರ್ಥಿಕ ನಾಯಕತ್ವವೇ ಆದ್ಯತೆ ಪಡೆದು ಇತರೆ ಕ್ಷೇತ್ರಗಳ ನಾಯಕತ್ವವು ಬಿಕ್ಕಟ್ಟಿನಲ್ಲಿದೆ. ಆತ್ಮವಿಲ್ಲದ ಸಾಂಸ್ಕೃತಿಕ ನಾಯಕತ್ವ, ಆತ್ಮಸಾಕ್ಷಿಯಿಲ್ಲದ ರಾಜಕೀಯ ನಾಯಕತ್ವ, ಆತ್ಮನಿರೀಕ್ಷೆಯಿಲ್ಲದ ಧಾರ್ಮಿಕ ನಾಯಕತ್ವ ಮತ್ತು ಸಂಕುಚಿತ ಸಾಮಾಜಿಕ ನಾಯಕತ್ವಗಳು ಜನವಿರೋಧಿಯಾಗುತ್ತವೆ ಎಂಬ ಅಂಶವನ್ನು ನಾವು ಮನಗಾಣಬೇಕಾಗಿದೆ. ಆರ್ಥಿಕ ನಾಯಕತ್ವವು ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ನಾಯಕತ್ವಗಳ ಆತ್ಮನಾಶ ಮಾಡದಂತೆ ತಡೆಯಬೇಕಾಗಿದೆ. ಜಾಗತೀಕರಣವು ಮೂಲತಃ ಮುಕ್ತ ಆರ್ಥಿಕ ನೀತಿಗೆ ಸಂಬಂಧಿಸಿದ್ದಾದರೂ ಇತರೆ ವಲಯಗಳ ಆದ್ಯತೆಯನ್ನೇ ಪಲ್ಲಟಗೊಳಿಸುತ್ತಿದೆಯೆಂಬ ಕಟುವಾಸ್ತವವನ್ನು ತಿಳಿಯಬೇಕಾಗಿದೆ. ಬಹುಮುಖ್ಯವಾಗಿ ಜಾಗತೀಕರಣವು ಬಡವರ ಭಯೋತ್ಪಾದಕನಾಗುತ್ತಿರುವ ಆತಂಕವನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಈ ಎರಡು ದಶಕಗಳ ಅನುಭವ ಇದನ್ನೇ ಹೇಳುತ್ತಿದೆ.


**ಪ್ರೊ॥ ಬರಗೂರು ರಾಮಚಂದ್ರಪ್ಪ**
‘ಸಂವೇದನೆ’, ನಂ. ೨೭೫, ೧೧ನೇ ‘ಬಿ’ ಅಡ್ಡರಸ್ತೆ, ೧೪ನೇ ಮುಖ್ಯರಸ್ತೆ, ವಿ.ಇ.ಟಿ. ಪಾಲಿಟೆಕ್ನಿಕ್ ಹತ್ತಿರ,
ಜೆ. ಪಿ. ನಗರ ೨ನೇ ಫೇಸ್, ಬೆಂಗಳೂರು - ೫೬೦ ೦೭೮

# ನಮ್ಮ ಕೆಲವು ಪ್ರಕಟಣೆಗಳು

























## ಭಾಗ್ಯಲಕ್ಷ್ಮೀ ಪ್ರಕಾಶನ

87, 3ನೇ ಕ್ರಾಸ್, 4ನೇ ಬ್ಲಾಕ್,
ಬನಶಂಕರಿ 3ನೇ ಸ್ಟೇಜ್, 3ನೇ ಫೇಸ್
ಬೆಂಗಳೂರು – 560 085.
ದೂ : 26695715
ಮೊ : 94480 47735

**ನೈಸರ್ಗಿಕ ಸಂಪತ್ತು, ನೀರು, ಭೂಮಿ, ಕಾಡು, ಕಲ್ಲು, ಯಾವುದರ ಸಂಬಂಧದಲ್ಲಿ ನೋಡಿದರೂ ಇಂದು ನಮ್ಮ ರಾಷ್ಟ್ರದ ಆರ್ಥಿಕ-ಸಾಮಾಜಿಕ ನೀತಿಗಳು ಜನವಿರೋಧಿಯಾಗಿವೆ. ವಿವೇಕಾನಂದರಿಂದ ಮಾರ್ಗದರ್ಶನ ಪಡೆಯುತ್ತೇವೆಂಬುದು ನಿಜವಾಗಬೇಕಾದರೆ ಅವರನ್ನು ಸುಮ್ಮನೆ ಆರಾಧಿಸುವ ಬದಲು ಈ ಜನವಿರೋಧಿ ನೀತಿಗಳನ್ನು ತೊಡೆದುಹಾಕಬೇಕು. ಹಾಗೆ ತೊಡೆದುಹಾಕಬೇಕೆಂದು ಆಗ್ರಹಿಸಲು ವಿವೇಕಾನಂದರನ್ನು ಗೌರವಿಸುವವರೆಲ್ಲಾ ಕೈಜೋಡಿಸಬೇಕು. ಆಗ ದೇಶದ 'ಹಣೆಬರಹ' ಬೇರೆಯೇ ಆಗಿರುತ್ತದೆ. ಈ ಬಗ್ಗೆ ವಿವೇಕಾನಂದರಿಗೆ ಯಾವ ಅನುಮಾನವೂ ಇರಲಿಲ್ಲ.**

# ಇಂದಿನ ಆರ್ಥಿಕ ಸಮಸ್ಯೆಗಳಿಗೆ ವಿವೇಕಾನಂದರ ಪರಿಹಾರ

ರಾಮಕೃಷ್ಣ ಪರಮಹಂಸರು ನದಿಯ ಬಳಿ ಕುಳಿತು ನಾಣ್ಯಗಳನ್ನು ನದಿಗೆ ಬಿಸುಡುತ್ತಿದ್ದರಂತೆ. ಹಣ ಮತ್ತು ಮಣ್ಣು ಸಮಾನವೆಂದು ಭಾವಿಸುತ್ತಿದ್ದರೆಂಬುದಕ್ಕೆ ಅದೊಂದು ರೂಪಕ. ಇರುವ ನಾಣ್ಯಗಳನ್ನೆಲ್ಲಾ ಎಲ್ಲರೂ ನದಿಯೊಳಕ್ಕೆ ಬಿಸುಡಲು ಆರಂಭಿಸಿದರೆ ಯಾವುದೇ ಸಮಸ್ಯೆಗೆ ಪರಿಹಾರ ದೊರೆಯುವ ಬದಲು ಇನ್ನಷ್ಟು ಹೊಸ ಸಮಸ್ಯೆಗಳು ನಮ್ಮೆದುರು ಧುತ್ತೆಂದು ನಿಲ್ಲುತ್ತವೆ. ರಾಮಕೃಷ್ಣರಿಗೆ ಸಹ ಅದೊಂದು ದಿನನಿತ್ಯದ ಅಭ್ಯಾಸ ಅಥವಾ ಆಚರಣೆ ಆಗಿರಲಿಲ್ಲ. ಹಣವಿರುವುದೇ ನಮ್ಮೆಲ್ಲ ಸಂಕಟಗಳಿಗೆ ಕಾರಣವೆನ್ನುವುದು ಅಂತಿಮ ಸತ್ಯವೆಂದಾದರೆ ಆರ್ಥಿಕ ಸಮಸ್ಯೆಗಳಿಗೆ ಪರಿಹಾರ ಅರಸಬೇಕಾಗುವುದಿಲ್ಲ.

ಸಮಸ್ಯೆಯು ವಾಸ್ತವವೆಂದು ಗಣನೆಗೆ ಬಂದಾಗ ಪರಿಹಾರವನ್ನು ಕಂಡುಕೊಳ್ಳುವ ಪ್ರಯತ್ನ ಮಾಡುವುದು ವ್ಯಾವಹಾರಿಕವಾದ್ದು. ಇಂದಿನ ನಮ್ಮ ಆರ್ಥಿಕ ಸಮಸ್ಯೆಗಳಿಗೆ ವಿವೇಕಾನಂದರಿಂದ 'ಇದಮಿತ್ಥಂ' ಎಂಬಂತಹ ಪರಿಹಾರದ ಸೂಚನೆ ದೊರೆಯುವುದು ಅಸಂಭವ. ಮಾರ್ಕ್ಸ್, ಗಾಂಧಿ, ಅಂಬೇಡ್ಕರ್, ಲೋಹಿಯಾ, ಮುಂತಾದವರಿಂದ ಪೂರ್ಣವಾಗಿ ದೊರೆಯಬಹುದೆಂಬುದು ಸಹ ಒಂದು ಮಿಥ್ಯೆಯೇ. ಮಾನವರ ಸನ್ನಿವೇಶವು ಬದಲಾದಂತೆ ನೂತನ ಸಮಸ್ಯೆಗಳ ಆವಿರ್ಭಾವವು ಅನಿವಾರ್ಯ. ಆಗ ಬದಲಾದ ಹಾದಿಗಳನ್ನು ಗುರುತಿಸಿ ಮುನ್ನಡೆಯುವ ಅಗತ್ಯವಿರುತ್ತದೆ. ಆದರೆ ವಿವೇಕಾನಂದರಂತಹ ಮಹಾನ್ ವ್ಯಕ್ತಿಗಳು ನಮಗೆ ಹಾದಿ ತೋರುವುದು ಬೇರೆ ರೀತಿಯಲ್ಲಿ: 'ಇಂಥ ಸಮಸ್ಯೆ ಎದುರಾದಾಗ ಹೀಗೆ ಮಾಡು' ಎಂದು ನಿಷ್ಕೃಷ್ಟವಾಗಿ ಅವರೇನೂ ಹೇಳಲಾರರು. ಉದಾಹರಣೆಗೆ, ಡಾಲರ್‌ಗೆ ಪ್ರತಿಯಾಗಿ ರೂಪಾಯಿಯ ಬೆಲೆ



**ಡಾ|| ಜಿ. ರಾಮಕೃಷ್ಣ**

# ಕಾಮಧೇನು ಪುಸ್ತಕ ಭವನ

5/1, ನಾಗಪ್ಪ ಬೀದಿ, ಶೇಷಾದ್ರಿಪುರ, ಬೆಂಗಳೂರು – 560 020

| ಕ್ರ.ಸಂ | ಶೀರ್ಷಿಕೆ | ಲೇಖಕರು | ಬೆಲೆ | ವಿವರ |
|---|---|---|---|---|
| 1. | ಭಾರತದ ಸಂವಿಧಾನ ಪಕ್ಷಿನೋಟ | *ಶ್ರೀ ನೆ. ತಿ. ಸೋಮಶೇಖರ* | **200.00** | ನಮ್ಮ ಸಂವಿಧಾನವನ್ನು ಪರಿಚಯಿಸಿಕೊಳ್ಳಲು ಸರಳವಾಗಿ ರಚಿತವಾದ ಗ್ರಂಥ |
| 2. | ಹಿಮಾಲಯದ ಮಹಾತ್ಮರ ಸನ್ನಿಧಿಯಲ್ಲಿ | *ಸ್ವಾಮಿ ರಾಮ* | **300.00** | ಹಿಮಾಲಯದ ಚೆಲುವಿಕೆ, ಋಷಿಮುನಿಗಳ ಸಾಧನೆ ಸಿದ್ಧಿ ಬದುಕುಗಳ ಕುರಿತ ಜನಪ್ರಿಯ ಕೃತಿ |
| 3. | ಆರೋಗ್ಯ ಸಂಗಾತಿ : 2 ಸಂಪುಟಗಳು | *ಡಾ॥ ವಸುಂಧರಾ ಭೂಪತಿ* | **1100.00** | -- |
| 4. | ಕುಮಾರವ್ಯಾಸ ಭಾರತ | *ಸಂ. : ಅ.ರಾ.ಸೇ.* | **2500.00** | ಕನ್ನಡದ ಅಗ್ರಮಾನ್ಯ ಕೃತಿ. ಮೂಲ ಹಾಗೂ ವ್ಯಾಖ್ಯಾನ ಸಹಿತ 8000 ಪದ್ಯಗಳು. ರಾಷ್ಟ್ರಪ್ರಶಸ್ತಿ ವಿಜೇತ ಕಲಾವಿದ ಗಂಜೀಫಾ ರಘುಪತಿ ಭಟ್ಟರಿಂದ 300ಕ್ಕೂ ಹೆಚ್ಚು ಸಾಂದರ್ಭಿಕ ರೇಖಾಚಿತ್ರಗಳು, 15 ವರ್ಣಚಿತ್ರಗಳು. |
| 5. | ಸಮಗ್ರ ಕಾವ್ಯ | *ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪ* | **250.00** | ಕನ್ನಡದ ಹೆಮ್ಮೆಯ ರಾಷ್ಟ್ರಕವಿ ಜಿ.ಎಸ್.ಎಸ್.ರವರ ಪದ್ಯಗಳ ಸಮಗ್ರ ಸಂಕಲನ |
| 6. | ಸೌಂದರ್ಯ ಸಮೀಕ್ಷೆ | *ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪ* | **300.00** | ರಾಷ್ಟ್ರಕವಿಯವರ ಪಿಹೆಚ್.ಡಿ. ನಿಬಂಧ, ಕನ್ನಡ ಕಾವ್ಯ ಜಗತ್ತಿನ ಸೌಂದರ್ಯ ಮೀಮಾಂಸೆಯ ಸೊಗಸಾದ ಪರಾಮರ್ಶನ ಕೃತಿ |
| 7. | ಕಾವ್ಯಾರ್ಥ ಪದಕೋಶ | *ರಾಷ್ಟ್ರಕವಿ ಜಿ. ಎಸ್. ಶಿವರುದ್ರಪ್ಪ ಹಾಗೂ ಡಾ॥ ಕೆ. ವಿ. ನಾರಾಯಣ* | **150.00** | ಕನ್ನಡವನ್ನು ಕಲಿಯುವ, ಕಲಿಸುವ ಹಾಗೂ ಸಾಹಿತ್ಯಾಸಕ್ತರ ಆಲಂಬನ ಕೃತಿ |
| 8. | ಪತ್ರಿಕೋದ್ಯಮ – ಸಮಗ್ರ ಸಂಪುಟ | *ಜಿ. ಎನ್. ರಂಗನಾಥ ರಾವ್* | **650.00** | ಪತ್ರಿಕಾ ವ್ಯವಸಾಯದ ಒಂದು ಅಭಿಜಾತ ಕೃತಿ. ಉಪಯುಕ್ತ ಆಕರ ಗ್ರಂಥ |
| 9. | ಒಂದು ತುಂಡು ಗೋಡೆ | *ಬೊಳುವಾರು ಮಹಮದ್ ಕುಂಞಿ* | **120.00** | -- |
| 10. | ಅನ್‌ಟು ದಿಸ್ ಲಾಸ್ಟ್ | *ಕನ್ನಡಕ್ಕೆ : ಜಿ. ಎಂ. ಕೃಷ್ಣಮೂರ್ತಿ* | **75.00** | ಮಹಾತ್ಮ ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಪುಸ್ತಕ |
| 11. | ಹೈದರಾಲಿ | *ಮ. ನ. ಮೂರ್ತಿ* | **100.00** | -- |
| 12. | ಅಂಬೇಡ್ಕರ್ | *ಜಿ. ಎಂ. ಕೃಷ್ಣಮೂರ್ತಿ* | **125.00** | ಡಾ॥ ಬಾಬಾಸಾಹೇಬ ಅಂಬೇಡ್ಕರ್‌ರವರ ಜೀವನ–ಸಾಧನೆಗಳ ಕುರಿತ ಜೀವನಗಾಥೆ |
| 13. | ಟೀಪು ಸುಲ್ತಾನ್ | *ಮ. ನ. ಮೂರ್ತಿ* | **300.00** | -- |
| 14. | ಗೀತಾಂಜಲಿ | *ಅನು : ಮಹಿಪಾಲ ದೇಸಾಯಿ* | **150.00** | ನೊಬೆಲ್ ಪುರಸ್ಕೃತ ಕೃತಿ 'ಗೀತಾಂಜಲಿ'ಯ ಕನ್ನಡ ರೂಪ – ಇಂಗ್ಲಿಷ್ ಮೂಲ ಸಹಿತ |
| 15. | ಶಿಶುನಾಳ ಶರೀಫರ ನೂರಾರು ತತ್ವಪದಗಳು – ವ್ಯಾಖ್ಯಾನ ಸಹಿತ | *ಸಂ. : ಅ.ರಾ.ಸೇ.* | **120.00** | ಜಿಜ್ಞಾಸುಗಳಿಗೆ ಹಾಗೂ ಜನಸಾಮಾನ್ಯರಿಗೆ ಉಪಯುಕ್ತವಾದ ಕೃತಿ |
| 16. | ಹೂವು ಮತ್ತು ಆರೋಗ್ಯ | *ಡಾ॥ ವಸುಂಧರಾ ಭೂಪತಿ* | **160.00** | ನಿತ್ಯಬಳಕೆಯ ಹೂವುಗಳ ಉಪಯುಕ್ತತೆ ಕುರಿತು ಸ್ವಾರಸ್ಯಕರವಾಗಿ ಹಾಗೂ ವೈಜ್ಞಾನಿಕವಾಗಿ ರೂಪಿತವಾದ ವಿಶಿಷ್ಟಕೃತಿ |
| 17. | ಜೈಮಿನಿ ಭಾರತ | *ಸಂ. : ಅ.ರಾ.ಸೇ.* | **750.00** | |
| 18. | ಯೇಗ್ದಾಗೆಲ್ಲಾ ಐತೆ | *ಬೆಳಗೆರೆ ಕೃಷ್ಣಶಾಸ್ತ್ರೀ* | **60.00** | |
| 19. | ವಚನ ಜೈಮಿನಿ ಭಾರತ | *ಡಾ॥ ಜಿ. ಕೃಷ್ಣಪ್ಪ* | **150.00** | |
| 20. | ಪ್ರವಾದಿ : ಖಲೀಲ್ ಗಿಬ್ರಾನ್ | *ಅನು : ಮಹಿಪಾಲ ದೇಸಾಯಿ* | **150.00** | |



ಕುಸಿಯುತ್ತಿದೆ, ಅದನ್ನು ತಡೆಗಟ್ಟಲು ಏನು ಮಾಡಬೇಕೆಂದು ಯಾರೂ ವಿವೇಕಾನಂದರ ಬಳಿ ಸಾರಿ ದುಃಖ ತೋಡಿಕೊಳ್ಳುವುದಿಲ್ಲ, ಸಮಗ್ರವಾಗಿ ಭಾರತ ದೇಶದ ಜನರ ಆಶಯ ಏನಾಗಿರಬೇಕೆಂಬ ಮೂಲಮಂತ್ರವನ್ನು ಅವರು ಬೋಧಿಸಬಲ್ಲರು. ಯಾರಿಗಾಗಿ ಇಷ್ಟೆಲ್ಲಾ ಪ್ರಜ್ಞಾಪೂರ್ವಕ ಮಧ್ಯಪ್ರವೇಶ ಎಂಬುದನ್ನವರು ನಿರ್ದೇಶಿಸುತ್ತಾರೆ. ಆ ದಿಕ್ಕಿನಲ್ಲಿ ಹೆಜ್ಜೆಹಾಕಲು ಕೆಲವು ಮೂಲಭೂತ ಸೂಚನೆಗಳನ್ನವರು ನೀಡುತ್ತಾರೆ. ಅದನ್ನು ಮನನ ಮಾಡುತ್ತಾ ವರ್ತಮಾನದ ಪರಿಸ್ಥಿತಿಗಳಿಗೆ ಸ್ಪಂದಿಸಿ ಸೂಕ್ತ ಪರಿಹಾರಗಳನ್ನು ಕಂಡುಕೊಳ್ಳುವುದು ಇಂದಿನವರ ಜವಾಬ್ದಾರಿ.

ವಿವೇಕಾನಂದರ ಹೃದಯ ಯಾವುದಕ್ಕೆ ಮಿಡಿಯುತ್ತಿತ್ತು ಅಥವಾ ಅವರ ದೃಷ್ಟಿ ಎತ್ತ ವಾಲುತ್ತಿತ್ತು ಎಂಬುದನ್ನು ಗುರುತಿಸಿದರೆ ಅವರಿಂದ ಪರಿಹಾರ ಪಡೆಯಲು ಮೊದಲ ಹೆಜ್ಜೆ ಇಟ್ಟಂತಾಗುತ್ತದೆ. ಉದಾಹರಣೆಗೆ, ಅವರೊಮ್ಮೆ ಹೀಗೆ ಉದ್ಗರಿಸಿದ್ದರು : ''ನಮ್ಮ ಜನಾಂಗದ ಮಹಾಪಾತಕವೇ ಜನಸಾಮಾನ್ಯರನ್ನು ನಿರ್ಲಕ್ಷಿಸಿದ್ದು. ಇದೇ ನಮ್ಮ ಅವನತಿಗೆ ಮುಖ್ಯ ಕಾರಣ. ಜನಸಾಮಾನ್ಯರು ವಿದ್ಯಾವಂತರಾಗಿ ಅವರಿಗೆ ಊಟಕ್ಕೆ ಬಟ್ಟೆಗೆ ಸಾಕಷ್ಟು ಸಿಗುವವರೆಗೆ ಯಾವ ರಾಜಕೀಯದಿಂದಲೂ ಏನೂ ಪ್ರಯೋಜನವಿಲ್ಲ. ಅವರು ನಮ್ಮ ವಿದ್ಯಾಭ್ಯಾಸಕ್ಕೆ ಕಂದಾಯ ಕೊಡುವರು, ನಮ್ಮ ದೇವಸ್ಥಾನ ಕಟ್ಟುವರು. ಅದಕ್ಕೆ ಬದಲು ನಮ್ಮಿಂದ ಅವರಿಗೆ ದೊರಕುವುದು ನಿಂದೆ; ಅವರು ನಿಜವಾಗಿ ನಮ್ಮ ಗುಲಾಮರಾಗಿರುವರು. ನಾವು ಭರತಖಂಡವನ್ನು ಉದ್ಧಾರ ಮಾಡಬೇಕಾದರೆ ಅವರಿಗಾಗಿ ಕೆಲಸ ಮಾಡಬೇಕು.''

ನಮ್ಮ ದೇಶದ ಪ್ರಸಕ್ತ ಆರ್ಥಿಕ ನೀತಿಗಳನ್ನು ಈ ನೆಲೆಯಲ್ಲಿ ನಿಂತು ವಿಶ್ಲೇಷಿಸಿ ಕೊಳ್ಳುವುದು ವಿವೇಕಾನಂದರಿಂದ ನಾವು ಪಡೆಯಬಹುದಾದ ಗಟ್ಟಿ ಪರಿಹಾರ. ಅವರು ಎಲ್ಲ ಕಡೆಗಳಿಂದ ಸೂಕ್ತವೆಂದು ಕಂಡುಬಂದ ಅಂಶಗಳನ್ನು ಸ್ವಾಗತಿಸಲು ಮತ್ತು ಮೈಗೂಡಿಸಿಕೊಳ್ಳಲು ಹಿಂದೇಟು ಹಾಕದಂಥವರು. ಆ ಅರ್ಥದಲ್ಲಿ ಅವರು ನಿಜಕ್ಕೂ ಒಬ್ಬ 'ಎಕ್ಲೆಕ್ಟಿಕ್' ಚಿಂತಕ ಮತ್ತು ಕ್ರಿಯಾಶೀಲ ವ್ಯಕ್ತಿ. ಅದೇ ಅವರಿಗೆ ಒಂದು ರೀತಿ ಮುಳುವಾಗಿದೆ, ಏಕೆಂದರೆ ತಮಗೆ ಬೇಕಾದ್ದನ್ನು ಸಮರ್ಥಿಸಿಕೊಳ್ಳಲು ಅವರ ತಥಾಕಥಿತ ಹಿಂಬಾಲಕರು ಕೆಲವು ಮಾತುಗಳನ್ನು ಆಯ್ದುಕೊಂಡು ಮಿಕ್ಕವನ್ನು ಪುಸ್ತಕದಲ್ಲೇ ಉಳಿಯುವಂತೆ ಮಾಡಿಬಿಡಬಹುದು. ಇದು ವಿವೇಕಾನಂದರನ್ನು ಆಸ್ತಿಯಾಗಿ ಪರಿವರ್ತಿಸಿ ಅವರಿಂದ ನಮಗೆ ಬೇಕೆನಿಸಿದ ಸಾಮಗ್ರಿಯನ್ನು ಹೆಕ್ಕಿಕೊಳ್ಳುವ ಮಾರ್ಗ. ಇದು ಅವರಿಗೆ ಗೌರವವೊ ಅಥವಾ ಅವರ ಮೂಲ ಆಶಯಗಳ ಮರೆವೋ ಎಂಬುದನ್ನು ಮಥಿಸಿಕೊಳ್ಳಬೇಕು. ಅವರು ಕನ್ಯಾಕುಮಾರಿಗೆ ಹೋಗಿದ್ದಾಗ ಸಮುದ್ರದಲ್ಲಿ ಈಜಿ ಒಂದು ಬಂಡೆಯನ್ನೇರಿ ಕುಳಿತು ಮಾಡಿದ್ದೇನು ? ಬಡತನದಿಂದ ಬೆಂದಿರುವ, ಪರರ ಆಕ್ರಮಣಕ್ಕೆ ತುತ್ತಾಗಿ ಶಿಥಿಲವಾಗಿರುವ, ಭಾರತದ ಪದತಲದಲ್ಲಿ ಕೂತು ಕಣ್ಣೀರು ಸುರಿಸಿದರು. ಬಡತನ, ಪರಾವಲಂಬನೆ ಮತ್ತು ಶಾಸ್ತ್ರಾಂಧತೆ, ಇವು ಅವರನ್ನು ಅತೀವ ಬಾಧಿಸಿದ್ದುವು. ಅವನ್ನು ಕಿತ್ತೆಸೆಯಬೇಕೆಂಬುದು ಅವರ ಅಂದಿನ ನಿರ್ಧಾರವಾಗಿತ್ತು. ಅದರ ನೆನಪೇ ಬಾರದಂತಹ ಸ್ಮಾರಕವನ್ನು ಆ ಕಲ್ಲಿನ ಮೇಲೆ ನಿರ್ಮಿಸಲಾಗಿದೆ; ಅಲ್ಲಿಗೆ ಹೋಗಲು ದೋಣಿಯಲ್ಲಿ ಜಾಗ ಸಿಗದಿರುವುದೂ ಉಂಟು. ವಿವೇಕಾನಂದರ ಅಂತರ್‌ಗ್ರಹಿಕೆಯನ್ನು ತಲುಪಲು ನಮಗೆ ದೋಣಿ ಬೇಕು, ಸ್ಮಾರಕಕ್ಕೆ ಹೋಗಲಾಗದಿದ್ದರೂ ಚಿಂತೆಯಿಲ್ಲ. ಅವರ ಕಾಲದ ವಸ್ತುಸ್ಥಿತಿಯಲ್ಲಿ ಸಮವಾಯವಾಗಿದ್ದ ವಿರೋಧಾಭಾಸಗಳ ಮಹಾಪೂರ ಅವರನ್ನು ಬಾಧಿಸಿತು, ಅವನ್ನು ಅವರು ಎತ್ತಿ ಆಡಿದರು. ಆ ಅನುಭವದ ಸಾಕ್ಷಾತ್ಕಾರ ನಮಗಾದರೆ ಅದೇ ವಿವೇಕಾನಂದರು ನೀಡುವ ಪರಿಹಾರ.

ವಿವೇಕಾನಂದರು ಜನಿಸುವ ಮೂರು ವರ್ಷ ಮೊದಲು ೧೮೫೯ರಲ್ಲಿ ಕಂದುಕೂರಿ ವೀರೇಶಲಿಂಗಂ ಭಾರತದ ಬಡತನದ ಚಿತ್ರ ಕಂಡು ರೋಸಿಹೋಗಿ ವಸಾಹತು ಸರ್ಕಾರಕ್ಕೆ ಹಿಡಿಶಾಪ ಹಾಕಿದ್ದರು. ಅದು ಅಂದಿನ ವಾತಾವರಣ. ಅದಾದ ಎರಡು ದಶಕಗಳ ತರುವಾಯದಲ್ಲಿ ಯುವಕ ನರೇಂದ್ರನಾಥ ಸಮಾಜವಾದದ ಕನಸು ಕಾಣುತ್ತಿದ್ದ. ರಾಜಾ ರಾಮಮೋಹನ ರಾಯ್ ಇಂಗ್ಲೆಂಡಿನಲ್ಲಿ ಕಾಲ್ಪನಿಕ ಸಮಾಜವಾದದ ಒಬ್ಬ ವಕ್ತಾರನಾಗಿದ್ದ ರಾಬರ್ಟ್ ಓವೆನ್‌ನ ಮಗನನ್ನು ಭೇಟಿಯಾಗಿ ಬಂದಿದ್ದರು, ವಿವೇಕಾನಂದರು ಆ ಕಾಲ್ಪನಿಕ ಸಮಾಜವಾದದ ಎಲ್ಲೆಯನ್ನು ದಾಟಿ ವೈಜ್ಞಾನಿಕ ಸಮಾಜವಾದದತ್ತ ಕ್ರಮಿಸಲಿಲ್ಲ. ಆದರೆ ಅವರಿನ್ನೂ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿದ್ದಾಗ ೧೮೭೦ರಲ್ಲಿ ಕಲ್ಕತ್ತ ವಿಶ್ವವಿದ್ಯಾಲಯದ ಎಂ.ಎ. (ಅರ್ಥಶಾಸ್ತ್ರ) ಪರೀಕ್ಷೆಯ ವಿದ್ಯಾರ್ಥಿ ಗಳಿಗೆ ಒಂದು ಪ್ರಶ್ನೆ ಹೀಗಿತ್ತು: ''ಸಾಮ್ಯವಾದವೆಂದರೇನು ? ಫ್ಯೂರ್ಯೆ ಮತ್ತು ಸೆಂಟ್ ಸಿಮೋನ್ ಅದರ ಪರವಾಗಿ ಮಂಡಿಸಿದ ಕಾರ್ಯಕ್ರಮಗಳನ್ನು ವಿವರಿಸಿ.'' ಸೂತ್ರಬದ್ಧವಾಗಿ ಅಲ್ಲದಿದ್ದರೂ ವಿವೇಕಾನಂದರು ಅಂಥದೊಂದು ಸಂರಚನೆಯನ್ನು ಕಲ್ಪಿಸಿಕೊಳ್ಳುತ್ತಿದ್ದುದು ಅವರ ಬರಹಗಳಲ್ಲಿ ಸ್ಪಷ್ಟವಾಗಿ ಎದ್ದುಕಾಣುತ್ತದೆ. ಕಾಲ್ಪನಿಕ ಸಮಾಜವಾದದ ಒಂದು ಲಕ್ಷಣ ಹಳೆಯ ಉತ್ಪಾದನಾ ಸಾಧನಗಳನ್ನು, ವಿನಿಮಯ ವಿಧಾನಗಳನ್ನು, ಹಿಂದಿನಂತೆಯೇ ಉಳಿಸಿಕೊಳ್ಳುವುದು ; ಅಂದರೆ, ಹಳೆಯ ಆಸ್ತಿ ಸಂಬಂಧಗಳು ಪಲ್ಲಟವಾಗಬಾರದು. ಹಾಗಿದ್ದಾಗ ಹಳೆಯ ಸಾಮಾಜಿಕ ಸಂಬಂಧಗಳು ಗುಣಾತ್ಮಕವಾಗಿ ಭಿನ್ನವಾಗುವುದಿಲ್ಲ, ಹಳೆಯ ಸಾಮಾಜಿಕ ಸಂಬಂಧಗಳ ಅಡಿಪಾಯವನ್ನು ಹಾಗೇ ಉಳಿಸಿಕೊಂಡು, ಅದರ ಮೇಲೆ ಆಧುನಿಕ ಉತ್ಪಾದನಾ ಸಾಧನಗಳನ್ನು ಮತ್ತು ವಿನಿಮಯ ವಿಧಾನವನ್ನು ಹೇರಹೊರಡುವುದು ಅದರ ಪದ್ಧತಿ. ಎರಡೂ ಸರಿಯಾಗಿ ಹೊಂದಿಕೊಳ್ಳದೆ ನಿರೀಕ್ಷಿತ ಬದಲಾವಣೆಯು ಕೇವಲ ಚಿಂತನೆಯ ಹಂತದಲ್ಲೇ ಉಳಿದುಬಿಡುತ್ತದೆ. ಆ ಹಿನ್ನೆಲೆಯಲ್ಲಿ ಸಾಮಾಜಿಕ-ಆರ್ಥಿಕ ಸಂಬಂಧಗಳ ವಿಶ್ಲೇಷಣೆಯಲ್ಲಿ ತೊಡಕು ಕಾಣಿಸಿಕೊಳ್ಳುವುದು ಸಹಜ. ಉದ್ಯೋಗಗಳಲ್ಲಿ ನಿರತರಾದ ಜನ ಸರಕು ಉತ್ಪಾದನೆ ಮಾಡುತ್ತಿದ್ದಾರೆ, ಕಚ್ಚಾ ಸಾಮಗ್ರಿಗಳಿಗೆ ಮೌಲ್ಯವರ್ಧನೆ ಜಾರಿಯಲ್ಲಿದೆ, ಆದರೆ ಉತ್ಪಾದಕರಲ್ಲಿ ಬಹುಜನ ಅನಕ್ಷರತೆ, ಹಸಿವು ಮತ್ತು ಕಾಯಿಲೆಗಳಿಗೆ ತುತ್ತಾಗಿದ್ದಾರೆ; ಇದೇಕೆ ಹೀಗೆ ? ವಿವೇಕಾನಂದರನ್ನು ತೀವ್ರವಾಗಿ ವಿಹ್ವಲರನ್ನಾಗಿಸಿದ ಪ್ರಶ್ನೆ ಇದು.

ಇದಕ್ಕೆ ಸಾಂಪ್ರದಾಯಿಕ ಉತ್ತರ ಕರ್ಮ ಅಥವಾ ಹಣೆಬರಹ ಎಂಬುದು. ವಿವೇಕಾನಂದರೂ ಅದನ್ನು ಸ್ವೀಕರಿಸುತ್ತಾರೆ. ಅವರ ಮಾತುಗಳಿವು : ''ವೇದಾಂತಿ ಗಳಾಗಿ ನಾವು ನಂಬುವುದು ಏನೆಂದರೆ, ಮೊದಲಿಗೆ ನಮಗೆ ನಾವು ಬಾಧೆ ತಂದು ಕೊಳ್ಳದಿದ್ದರೆ ಪ್ರಪಂಚದಲ್ಲಿ ನಮಗೆ ಬಾಧೆಯುಂಟು ಮಾಡುವಂತಹ ಯಾವ ಪ್ರಬಲ ಶಕ್ತಿಯೂ ಇರಲಾರದು. ಆದ್ದರಿಂದ, ಬೇರೆಯವರನ್ನು ದೂಷಿಸುವುದು ಬೇಡ, ನಮ್ಮ ಕರ್ಮವನ್ನು ಮಾತ್ರ ದೂಷಿಸೋಣ.'' ಈ ಕರ್ಮ ಸಿದ್ಧಾಂತವನ್ನು ಪ್ರತಿಪಾದಿಸು ವವರ ಸಾಮಾನ್ಯ ದೃಷ್ಟಿಗೆ ಬದಲಾಗಿ ವಿವೇಕಾನಂದರು, ಭಾರತದ ಜನರನ್ನು ಕರ್ಮವು



ಹೀಗೆ ಬಾಧಿಸಲು ಅವರೆಸಗಿರುವ ತಪ್ಪಾದರೂ ಏನು ಎಂದು ಕೇಳಿಕೊಳ್ಳುತ್ತಾರೆ. ಅವರಿಗೆ ದಟ್ಟವಾಗಿ ಕಾಣುವ ತಪ್ಪುಗಳು ಐದು: (ಅ) ಮತ ಧರ್ಮವನ್ನು ವಿಕೃತಗೊಳಿಸಿರುವುದು, (ಆ) ಜನತೆಯ ಮೇಲೆ ದೌರ್ಜನ್ಯವೆಸಗಿರುವುದು, (ಇ) ವಿದ್ಯಾಭ್ಯಾಸವನ್ನು ಸೂಕ್ತವಾಗಿ ನೀಡದಿರುವುದು, (ಈ) ಮಹಿಳೆಯರ ಪಾತ್ರವನ್ನು ಅವಗಣನೆಗೆ ಗುರಿಮಾಡಿರುವುದು, ಮತ್ತು (ಉ) ದೈಹಿಕ ಮತ್ತು ಆಧ್ಯಾತ್ಮಿಕ ಬಲಹೀನತೆ ಹಾಗೂ ಜಡತನ. ವಿವೇಕಾನಂದರು ವ್ಯಕ್ತಿ ಮಾತ್ರಕ್ಕೆ ಸೀಮಿತಗೊಳಿಸಿ ಕರ್ಮಫಲದ ವ್ಯಾಖ್ಯಾನ ಮಾಡುವುದಿಲ್ಲ; ಅವರು ಇಡೀ ದೇಶದ 'ಹಣೆಬರಹ'ದ ಕಾರಣ ಹುಡುಕುತ್ತಿದ್ದಾರೆ. ಆ ಕಾರಣಗಳು ಅಂದು ಎಷ್ಟು ಪ್ರಸ್ತುತವಾಗಿದ್ದವೋ ಅಷ್ಟೇ ಇಂದೂ ಪ್ರಸ್ತುತವಾಗಿವೆ. ಆ ಐದು ಕಾರಣಗಳಿಗೂ ಯುಕ್ತವಾದ ನಿದರ್ಶನಗಳನ್ನು ನೀಡುವ ಅವಶ್ಯಕತೆ ಇಲ್ಲ, ಕಣ್ಣು ಮತ್ತು ಮನಸ್ಸು ಸ್ವಚ್ಛವಾಗಿರುವವರಿಗೆಲ್ಲಾ ಇದು ಸ್ಪಷ್ಟವಾಗಿ ತಿಳಿಯುತ್ತದೆ. ಮುಂದುವರಿದು ಒಂದಂಶವನ್ನು ಒತ್ತುಕೊಟ್ಟು ವಿವೇಕಾನಂದರು ಹೇಳಿದ್ದಾರೆ : ''ನಮ್ಮ ರಾಷ್ಟ್ರೀಯ ಪಾತಕಗಳಲ್ಲಿ ಅತಿಘೋರವಾದ್ದು ಜನತೆಯನ್ನು ಕಡೆಗಾಣಿಸಿರುವುದು; ನಮ್ಮ ಪತನಕ್ಕೆ ಅದೊಂದು ಮೂಲ ಕಾರಣ.''

ನೈಸರ್ಗಿಕ ಸಂಪತ್ತು, ನೀರು, ಭೂಮಿ, ಕಾಡು, ಕಲ್ಲು, ಯಾವುದರ ಸಂಬಂಧದಲ್ಲಿ ನೋಡಿದರೂ ಇಂದು ನಮ್ಮ ರಾಷ್ಟ್ರದ ಆರ್ಥಿಕ - ಸಾಮಾಜಿಕ ನೀತಿಗಳು ಜನವಿರೋಧಿಯಾಗಿವೆ. ವಿವೇಕಾನಂದರಿಂದ ಮಾರ್ಗದರ್ಶನ ಪಡೆಯುತ್ತೇವೆ ಎಂಬುದು ನಿಜವಾಗಬೇಕಾದರೆ ಅವರನ್ನು ಸುಮ್ಮನೆ ಆರಾಧಿಸುವ ಬದಲು

ಈ ಜನವಿರೋಧಿ ನೀತಿಗಳನ್ನು ಶಕ್ತಿಯುತವಾಗಿ ತೊಡೆದುಹಾಕಬೇಕು. ಹಾಗೆ ತೊಡೆದು ಹಾಕಬೇಕೆಂದು ಆಗ್ರಹಿಸಲು ವಿವೇಕಾನಂದರನ್ನು ಗೌರವಿಸುವವರೆಲ್ಲಾ ಕೈಜೋಡಿಸಬೇಕು. ಆಗ ದೇಶದ 'ಹಣೆಬರಹ' ಬೇರೆಯೇ ಆಗಿರುತ್ತದೆ. ಈ ಬಗ್ಗೆ ವಿವೇಕಾನಂದರಿಗೆ ಯಾವ ಅನುಮಾನವೂ ಇರಲಿಲ್ಲ. ಭಾರತದ ಜನರನ್ನು ಅವರು ಎರಡು ವರ್ಗಗಳನ್ನಾಗಿ ಗುರುತಿಸಿದರು: ಶ್ರೀಮಂತ ಉಚ್ಚವರ್ಗ ಮತ್ತು ಬಡತನದ ಕೆಳವರ್ಗ. ಇವುಗಳಲ್ಲಿ ಎರಡನೆಯ ವರ್ಗವನ್ನು ಅವರು 'ಶೂದ್ರವರ್ಗ' ಅಥವಾ 'ಮಹಾಜನತೆ' ಎಂದು ಹೆಸರಿಸಿದರು. ಭವಿಷ್ಯ ಅವರದೆಂದು ಅವರು ಕೂಗಿ ಹೇಳಿದರು; ಆರ್ಥಿಕ, ರಾಜಕೀಯ ಮತ್ತು ಮತಧರ್ಮೀಯ ಶಕ್ತಿಸ್ಥಾನಗಳಿಂದ ಅವರನ್ನು ಹೊರದೂಡಲಾಗಿರುವುದು ಸರ್ವಥಾ ಅಸಮರ್ಥನೀಯ ಎಂದು ನಿಟ್ಟುಸಿರಿಟ್ಟರು. ''ನಮ್ಮದು ಕೇವಲ ಅಡಿಗೆಮನೆ ಧರ್ಮ'' ಎಂದು ಟೀಕಿಸುವಾಗ ಅವರಿಗಿದ್ದುದು ಧರ್ಮಸ್ವಭಾವದ ಅವಿಭಾಜ್ಯ ಅಂಗವಾಗಿರಬೇಕಾದ ಅನುಕಂಪದ ಅಭಾವದ ಬಗೆಗಿನ ಸಿಟ್ಟು; ಆಡುವುದು ವೇದಾಂತ, ಮಾಡುವುದು ಕೀಳುಕ್ರಿಯೆ, ಇದು ಅಸಮಂಜಸ, ಎನ್ನುವುದು ವಿವೇಕಾನಂದರ ವಿವೇಕಪ್ರಜ್ಞೆ. ಅವರ ಮಾತುಗಳಲ್ಲೇ ಹೇಳುವುದಾದರೆ, ''ಅಸಮತ್ವವೇ ಬಂಧನಕ್ಕೆ ದಾರಿ. ಯಾವ ವ್ಯಕ್ತಿಯೇ ಆಗಲಿ, ಜನಾಂಗವೇ ಆಗಲಿ, ಬಾಹ್ಯ ಸಮತ್ವವಿಲ್ಲದೆ ಬಾಹ್ಯ ಸ್ವಾತಂತ್ರ್ಯವನ್ನು ಪಡೆಯಲಾರದು, ಮನೋಸಮತ್ವ ವಿಲ್ಲದೆ ಮನೋಸ್ವಾತಂತ್ರ್ಯವನ್ನು ಪಡೆಯಲಾರದು. ಅಜ್ಞಾನ, ಅಸಮತ್ವ ಮತ್ತು ಆಸೆಗಳು, ಇವು ಮೂರೇ ಮಾನವರ ದುಃಖಕ್ಕೆ ಕಾರಣ. ಇವು ಮೂರರಲ್ಲಿ ಎಲ್ಲಿ ಒಂದು ಇರುವುದೋ ಅಲ್ಲಿ ಉಳಿದವೂ ಅದನ್ನು ಅನುಸರಿಸುವುವು.''

ಇದೆಲ್ಲಾ ಕೇವಲ ಮಾತಿನ ಪ್ರಕ್ರಿಯೆಯಲ್ಲ, ಅವು ಅನುಷ್ಠಾನಗೊಳ್ಳಬೇಕಾದ ಸಾಮಾಜಿಕ ನಿಯಮಗಳು. ಅದಕ್ಕಾಗಿ ಕಾನೂನು ಮಾಡಬೇಕು, ಅದನ್ನು ಮಾನ್ಯ ಮಾಡುವಂತಹ ನ್ಯಾಯ ವ್ಯವಸ್ಥೆ ಬೇಕು. ದಿನಕ್ಕೆ ೨೮ ರೂಪಾಯಿಯ ಆದಾಯವಿದ್ದರೆ ಸಾಕು, ಅವನು ಅಥವಾ ಅವಳು ಬಡತನದ ರೇಖೆಗಿಂತ ಮೇಲೆ, ಎಂಬ ಗರ್ವದ ಮಾತು ಒಂದುಕಡೆ; ರಾಷ್ಟ್ರೀಯ ಸಂಪತ್ತನ್ನು ಕಬಳಿಸಿ ೨೮ ಅಂತಸ್ತಿನ ಮನೆ ಕಟ್ಟಿಸಿ ಕೊಳ್ಳುವ ಸೊಕ್ಕಿನ ಅಧಿಪತಿ ಇನ್ನೊಂದು ಕಡೆ. ಇದು ವಿವೇಕಾನಂದರ ಕಲ್ಪನೆಯ ಭಾರತವಲ್ಲ. ಅವರ ಆಶಯಗಳ ಮೂರ್ತೀಕರಣಕ್ಕೆ ಅಗತ್ಯವಾದ ನಿಷ್ಕೃಷ್ಟ ವ್ಯವಸ್ಥೆಯೊಂದನ್ನು ಅವರು ವಿಸ್ತಾರವಾಗಿ ಪ್ರತಿಪಾದಿಸಲಿಲ್ಲ ಎಂಬ ಕಾರಣಕ್ಕೆ ಅವರ ಆಶಯವನ್ನೇ ಅಪ್ರಸ್ತುತಗೊಳಿಸಿಬಿಡುವ ಹುನ್ನಾರವು ಇಂದಿನ ಆಳುವ ವರ್ಗದ ಪ್ರಜ್ಞೆಯಲ್ಲಿ ಹಾಸುಹೊಕ್ಕಾಗಿ ಮನೆ ಮಾಡಿದೆ. ಅದಕ್ಕೆ ವಿವೇಕಾನಂದರ ಎಚ್ಚರಿಕೆಯ ನುಡಿ ದಾರಿದೀಪವಾಗಬೇಕು. ಅವರೊಮ್ಮೆ ಹೀಗೆಂದರು: ''ಯಾರಿಗಾಗಿಯೂ ಮರುಗಬೇಡಿ. ಎಲ್ಲರೂ ನಿಮಗೆ ಸರಿಸಮಾನರೆಂದು ಭಾವಿಸಿ. ಮೇಲುಕೀಳೆಂಬ ಮೂಲಪಾಪದಿಂದ ಪಾರಾಗಲು ಯತ್ನಿಸಿ. ನಾವೆಲ್ಲ ಸರಿಸಮಾನರು. ನಾನು ಮೇಲು, ನೀನು ಕೀಳು, ನಾನು ನಿನ್ನನ್ನು ಉದ್ಧಾರ ಮಾಡಲು ಯತ್ನಿಸುತ್ತೇನೆ ಎಂದು ಭಾವಿಸಬಾರದು. ಸಮಾನತೆಯೇ ಮುಕ್ತನ ಚಿಹ್ನೆ.'' ಇಂದಿನ ವಿಶೇಷವೆಂದರೆ ಮೇಲು-ಕೀಳು ಎಂಬುದಕ್ಕೆ ಹತ್ತಾರು ಹೊಸ ಸೂಚ್ಯಂಕಗಳಿವೆ, ಅದು ಕೇವಲ ಹುಟ್ಟಿನಿಂದ ನಿರ್ಧಾರ ವಾಗುವುದಿಲ್ಲ, ಕಾರ್ಪೊರೇಟ್ ಕಂಪನಿಗಳು ಸಂಪತ್ತನ್ನು ಸೂರೆಗೊಂಡು ಆಮೇಲೆ ಬಡಜನರ ಉದ್ಧಾರ ಮಾಡಲು ಒಂದಷ್ಟು ಹಣ ವ್ಯಯಿಸುವುದುಂಟು. ಇದು ಮೇಲು-ಕೀಳುಗಳ ಅಪೂರ್ವ ಸಂಬಂಧ. ವಿವೇಕಾನಂದರ ಆಕಾಂಕ್ಷೆ ಅಂತಹ ನಿಕೃಷ್ಟ ಮಟ್ಟದ್ದಾಗಿರಲಿಲ್ಲ. ಅವರೊಮ್ಮೆ ನೊಂದು ನುಡಿದಿದ್ದ ಮಾತುಗಳಿವು: ''ಕೆಲವು ವೇಳೆ ನನಗೆ ಈ ಮಠವನ್ನೆಲ್ಲಾ ಮಾರಿ, ಬಂದ ದುಡ್ಡನ್ನು ಬಡಬಗ್ಗರಿಗೆ ಹಂಚಿ ಬಿಡಬೇಕೆನ್ನಿಸುವುದು. ನಾವು ಮಠವನ್ನು ನಮ್ಮ ಆಶ್ರಯವನ್ನಾಗಿ ಮಾಡಿಕೊಂಡೆವು. ಅಯ್ಯೋ! ಈ ದೇಶದ ಜನರಿಗೆ ತಿನ್ನಲಿಕ್ಕೆ ಹಿಟ್ಟಿಲ್ಲ. ನಮಗೆ ತುತ್ತೆತ್ತಲಿಕ್ಕಾದರೂ

ಹೇಗೆ ಮನಸ್ಸು ಬರುವುದು?'' ಈ ದೇಶದಲ್ಲಿ ಬಡತನ ಕುಸಿದು ಬಿಟ್ಟಿದೆಯೆಂದು ಬೀಗುವ ಯೋಜನಾ ಆಯೋಗದ ಮುಖ್ಯಸ್ಥ ಅಹ್ಲುವಾಲಿಯಾಗೆ ರಾಜ್ಯಸಭೆ ಸದಸ್ಯ ರಾಗಿದ್ದ ಡಾ|| ಅರ್ಜುನ ಸೇನ್ ಗುಪ್ತ ಸಲ್ಲಿಸಿದ್ದ ವರದಿಯ ನೆನಪು ಸಹ ಉಳಿದಿಲ್ಲ. ಆ ವರದಿ ಹೇಳಿತ್ತು, ನಮ್ಮ ದೇಶದ ಅಸಂಘಟಿತ ದುಡಿಯುವ ಜನರ ಸರಾಸರಿ ದೈನಿಕ ಆದಾಯವು ಕೇವಲ ೨೦ ರೂಪಾಯಿ, ಎಂದು. ಭ್ರಷ್ಟಾಚಾರ, ನೂರಾರು ವಂಚನೆಯ ಹಗರಣಗಳು, ಸಾರ್ವಜನಿಕ ಸಂಪತ್ತಿನ ಲೂಟಿ, ವಿದೇಶಿ ಆರ್ಥಿಕ ಆಕ್ರಮಣ, ವಿದೇಶಿ ಬ್ಯಾಂಕುಗಳಲ್ಲಿ ನಮ್ಮ ದೇಶದ ಕಪ್ಪುಹಣದ ಶೇಖರಣೆ, ಇಂತಹ ಪಿಡುಗುಗಳೂ ವಿವೇಕಾನಂದರ ಆಶಯದ ಈಡೇರುವಿಕೆಗೆ ಮಾರಕ ಅಂಶಗಳು. ಅಂತಹ ನೀಚ ಅವ್ಯವಹಾರಗಳಲ್ಲಿ ತೊಡಗಿರುವವರು ಸಹ ವಿವೇಕಾನಂದರ ಸ್ತುತಿ ಮಾಡುವುದು ನಮ್ಮ ದೇಶದ ವಿಪರ್ಯಾಸ ಗಳಲ್ಲೊಂದು. ವಿವೇಕಾನಂದ ಒಮ್ಮೆ ಹೇಳಿದ್ದುದು ಇದು: ''ದೇಶ ಮುಳುಗುತ್ತಿದೆ. ಅಸಂಖ್ಯ ಲಕ್ಷೋಪಲಕ್ಷ ಜೀವಿಗಳ ಅಭಿಶಾಪವು ನಮ್ಮ ತಲೆಯ ಮೇಲೆ ಬಿದ್ದಿದೆ. ಪಕ್ಕದಲ್ಲಿ ಅಮೃತವಾಹಿನಿ ಹರಿಯುತ್ತಿದ್ದರೂ ಬಾಯಾರಿಕೆಯಿಂದ ಸಾಯುತ್ತಿದ್ದ ಯಾರಿಗೆ ಬಚ್ಚಲು ನೀರನ್ನು ಕೊಟ್ಟೆವೋ, ಸಮೃದ್ಧತೆಯ ನಡುವೆಯೇ ಯಾರನ್ನು ಹಸಿವೆಯಿಂದ ನರಳುವಂತೆ ಮಾಡಿದೆವೋ, ...ಯಾರ ದಮನಕ್ಕಾಗಿ ಲೋಕಾಚಾರ ಸಿದ್ಧಾಂತವನ್ನು ಕಂಡುಹಿಡಿದೆವೊ, ಯಾರಿಗೆ ಬಾಯಿಮಾತಿನಲ್ಲಿ 'ಎಲ್ಲರೂ ಒಂದೇ, ಎಲ್ಲರಲ್ಲಿಯೂ ಈಶ್ವರನಿದ್ದಾನೆ' ಎಂದು ಹೇಳುತ್ತಾ ಕಾರ್ಯತಃ ಅದನ್ನು ಒಂದಿನಿತೂ ಅಭ್ಯಾಸ ಮಾಡಲಿಲ್ಲವೋ, ಅಂತಹ ಜನಗಳ ಅಭಿಶಾಪವು ಸಿಡಿಲಿನಂತೆ ನಮ್ಮ ತಲೆಯ ಮೇಲೆರಗುತ್ತಿದೆ.''



ವಿವೇಕಾನಂದರು ಮಧ್ಯಮ ವರ್ಗದ ಮೌಲ್ಯಗಳ ಸಾಕಾರಮೂರ್ತಿಯಲ್ಲ, ಮೇಲಿನ ಹೇಳಿಕೆ ಮತ್ತು ಅವರ ನಡತೆ ಅದಕ್ಕೆ ಸಾಕ್ಷಿ. ಆದರೆ ಅವರನ್ನು ಹಾಗೆ ಪರಿವರ್ತಿಸಲಾಗಿರುವುದು ಒಂದು ದುರಂತ. ವರ್ಣಗಳ ಪರಿಭಾಷೆಯನ್ನು ಬಳಸಿ ಅವರು ಸಮಕಾಲೀನ ಸಮಸ್ಯೆ ಗಳನ್ನು ವ್ಯಾಖ್ಯಾನಿಸಿದ್ದುಂಟು, ಆದರೆ ಅವರು ಅದನ್ನು ಶ್ರೇಣೀಕರಣದ ದೃಷ್ಟಿಯಿಂದ ನೋಡಿದ್ದಿಲ್ಲ, ಕೇವಲ ವಿಂಗಡಣೆಯನ್ನು ನಿರ್ದೇಶಿಸಿ ಹೇಳಲು ಅದನ್ನವರು ಬಳಸಿದ್ದರು. ''ಶ್ರೀಮಂತರು ದೇಶಕ್ಕೆ ಆಭರಣ ಗಳಿದ್ದಂತೆ, ಅಷ್ಟೆ; ಆದರೆ ದೇಶದ ಜೀವ ಲಕ್ಷಾಂತರ ಕೆಳವರ್ಗದ ಬಡಜನ'' ಎಂದವರು ಅವರು. ಆ ಕೆಳವರ್ಗದ ಜನರ ಏಳಿಗೆಯನ್ನೇ ಅವರು ಶೂದ್ರಶಕ್ತಿ ಮತ್ತು ಶೂದ್ರಾಧಿಕಾರ ಎಂದು ಕರೆದು ಅದರಿಂದ ನವಭಾರತದ ನಿರ್ಮಾಣವಾಗುತ್ತದೆಂದು ಆಶಿಸಿದರು: ''ಸಹಸ್ರಾರು ವರ್ಷಗಳಿಂದ ಈ ಜನ ತುಳಿತಕ್ಕೊಳ ಗಾಗಿದ್ದಾರೆ. ಅವರಲ್ಲಿ ಅಪಾರವಾದ ಅಂತಶ್ಶಕ್ತಿ ಅಡಗಿದೆ. ಒಂದು ಕಾಳು ಉಂಡು ಜೀವಿಸುವ ಅವರು ಪ್ರಪಂಚವನ್ನು ನಡುಗಿಸಬಲ್ಲರು. ... ಭೂತಕಾಲದ ಅಸ್ಥಿಪಂಜರಗಳಂತಿರುವ ಅವರು ನಮ್ಮ ಮುಂದಿದ್ದಾರೆ, ನಾಳಿನ ಭಾರತದ ವಾರಸುದಾರರು ಅವರು.''

ಅವರು ನಾಳಿನ ಆಳುವ ಜನತೆ, ಸರಿ; ಆದರೆ ಅದನ್ನವರು ಹೇಗೆ ಸಿದ್ಧಿಸಿಕೊಳ್ಳುತ್ತಾರೆ? ವಿವೇಕಾನಂದರು ಅದನ್ನು ಚರ್ಚಿಸಿಲ್ಲ, ಆದರೆ ಚರಿತ್ರೆಯ ಚಲನೆಯ ಬಗೆಗಿನ ಒಳನೋಟವನ್ನು ನಮ್ಮ ಮುಂದಿಡುತ್ತಾ ಅವರ ಅಚಲ ಆಕಾಂಕ್ಷೆಗೆ ಧ್ವನಿ ಕೊಟ್ಟಿದ್ದಾರೆ. ಕಳೆದ ಶತಮಾನದ ವಸಾಹತು ಪ್ರಭುತ್ವ ಮತ್ತು ಬಹುರಾಷ್ಟ್ರೀಯ ಕಂಪನಿಗಳ ಜೊತೆ ಶಾಮೀಲಾಗಿರುವ ಇಂದಿನ ನವವಸಾಹತುಶಾಹಿ ರಾಜ್ಯ ಪ್ರಭುತ್ವ, ಎರಡೂ ವೈಶ್ಯಾಧಿಕಾರವೆಂಬುದು ಅವರ ವಿವರಣೆ. ಅದರಡಿ ಜನಸಾಮಾನ್ಯರ ಜ್ಞಾನ ಮತ್ತು ಸಂಸ್ಕೃತಿಗೆ ಮಿತಿಯನ್ನು ವಿಧಿಸಲಾಗಿದೆ. ಆದರೆ ಶೂದ್ರಶಕ್ತಿಯ ಆವಿಷ್ಕಾರದಿಂದ ಅದು ಪಲ್ಲಟಗೊಂಡು ಸಂಸ್ಕೃತಿಯು ನೂರ್ಮಡಿಯಾಗಿ ವಿಕಸಿಸುತ್ತದೆ. ಅಸ್ತಿತ್ವ ದಲ್ಲಿರುವ ಕ್ಷೋಭೆ ಮತ್ತು ಬರಲಿರುವ ಶೋಭೆ, ಎರಡರ ಬಗೆಗೂ ವಿವೇಕಾನಂದರದು ಮೊನಚು ಮಾತುಗಳೇ. ವಿಶ್ವ ವಾಣಿಜ್ಯ ಸಂಸ್ಥೆಯ ತೆಕ್ಕೆಯಲ್ಲಿ ಸಿಲುಕಿಕೊಂಡು ಕ್ಷುದ್ರ ವಿದೇಶಾಂಗ ನೀತಿಯನ್ನನು ಸರಿಸುತ್ತಿರುವ ಇಂದಿನ ನಮ್ಮ ದೇಶಕ್ಕೆ ಕನ್ನಡಿ ಹಿಡಿಯುವಂತೆ ಅವರ ಮಾತಿದೆ: ''ಈಗ ಭಾರತೀಯರಿಗೆ ಉಳಿದಿರುವುದು ಒಂದೇ: ಅದೇ ಶೂದ್ರತ್ವ, ಪರಿಚಾರಿಕೆ. ಅಭೇದ್ಯವಾದ ಕಾರ್ಮೋಡ ಇಂದು ನಮ್ಮನ್ನೆಲ್ಲ ಆವರಿಸಿದೆ. ಉದ್ದೇಶದ ದೃಢತ್ವವಿಲ್ಲ, ಅಥವಾ ಉದ್ಯಮದ ಸಾಹಸವಿಲ್ಲ, ಕೆಚ್ಚೆದೆಯ ಧೈರ್ಯ ವಾಗಲಿ, ದೃಢಮನಸ್ಸಾಗಲಿ ಇಲ್ಲ. ...ಭರತಖಂಡದಲ್ಲಿ ಇರುವುದೇ ಆಳವಾದ ಸ್ವಭಾವ ಸಿದ್ಧ ಪರಸ್ಪರ ಅಸೂಯೆ ಮತ್ತು ದ್ವೇಷ. ಹೇಗಾದರೂ ಮಾಡಿ ದುರ್ಬಲರನ್ನು ನಾಶಮಾಡುವುದು, ನಾಯಿಯಂತೆ ಬಲಾಢ್ಯರ ಕಾಲನ್ನು ನೆಕ್ಕುವುದು.''

ಇದಕ್ಕೆ ಪರ್ಯಾಯವಾದ್ದನ್ನು ಸಾಧಿಸಬೇಕೆಂಬುದು ವಿವೇಕಾನಂದರ ಪರಿಹಾರ. ಯಾವುದು ರಾಷ್ಟ್ರದ ಸ್ವಂತಿಕೆ ಮತ್ತು ಹೆಮ್ಮೆಗೆ ಇಂಬುಕೊಡುತ್ತದೋ ಆ ಕ್ರಿಯೆ ಅವರ ಆಯ್ಕೆ. ಅವರು ಎತ್ತಿಹಿಡಿದ ಮೂರು ಪ್ರಮುಖ ಮೌಲ್ಯಗಳೆಂದರೆ ಮಾನವ ಪ್ರಗತಿ, ಶಾಂತಿ ಮತ್ತು ಪ್ರಜಾಪ್ರಭುತ್ವದ ತಳಪಾಯದ ಮೇಲೆ ನಿಲ್ಲುವ ಸಮಾಜವಾದ. ಶಾಂತಿ ಎಂದರೆ ಅಮೂರ್ತವಾದುದಲ್ಲ; ವರ್ಣ ಸಂಘರ್ಷವಿಲ್ಲದಿರುವುದು ಅದರ ಮೂಲ ಲಕ್ಷಣ. ಪ್ರಜಾಪ್ರಭುತ್ವ ವೆಂದರೆ ಸಮಾನತೆ. ಇವಕ್ಕೆಲ್ಲಾ ಅಡಿಪಾಯ ಸಮಾಜವಾದ ಅಥವಾ ಶೂದ್ರ ಪ್ರಭುತ್ವ, ಅರ್ಥಾತ್ ದುಡಿಯುವ ಜನರ ಅಧಿಕಾರ. ಉತ್ಪಾದನಾ ಸಲಕರಣೆ ಮತ್ತು ಸಂಬಂಧಗಳನ್ನು ವಿವೇಕಾನಂದರು ಎಲ್ಲೂ ಪ್ರಸ್ತಾಪಿಸಿದ್ದು ತಿಳಿಯದು, ಆದರೆ ವೈಜ್ಞಾನಿಕ ಸಮಾಜವಾದಕ್ಕೆ ಅವೇ ಮೂಲಾಧಾರ. ನವೀನ ಭಾರತದ ನಿರ್ಮಾಣಕ್ಕೆ ಅತಿ ಪ್ರಮುಖ ಸಾಫಲ್ಯದ ಸಾಮಗ್ರಿಯೆಂದರೆ ಜನಸಾಮಾನ್ಯರ ಕರ್ತೃತ್ವಶಾಲಿ ಶಕ್ತಿ ಎಂದು ವಿವೇಕಾನಂದರು ಪದೇಪದೇ ಹೇಳುತ್ತಾರೆ. ಜನರ ಬಳಿ ಸಾರಿ ಶಿಕ್ಷಣ ನೀಡುವುದೊಂದೇ ಅವರನ್ನು ಕ್ರಿಯಾಶೀಲರಾಗಲು ಜಾಗೃತಗೊಳಿಸುವ ಕ್ರಮ. ಶಿಕ್ಷಣವೆಂದರೆ ಕೇವಲ ಶಾಲಾ ಶಿಕ್ಷಣವಲ್ಲ, ಅದು ಸಮಗ್ರ ಜೀವನ ಶಿಕ್ಷಣ, ಸಮಾಜದ ಬಗೆಗಿನ ತಿಳುವಳಿಕೆ. ನಮ್ಮ ದೇಶದಲ್ಲಿ ಸಾಮಾಜಿಕ ಸುಧಾರಣೆಯ ಮಾತು ಸಾಕಷ್ಟು ಕೇಳಿಬಂದಿದೆ, ಆದರೆ ಆರ್ಥಿಕ ಸುಧಾರಣೆಯನ್ನು ಅದಕ್ಕೆ ಲಗತ್ತಿಸಿದ್ದು ವಿವೇಕಾನಂದರ ಹೆಚ್ಚಳ. ಹಾಗಾದರೆ ಸಾಗುವುದೆತ್ತ? ರಸ್ಕಿನ್ನನ ಪ್ರೇರಣೆಯಿಂದ ಯಾವ ಮಾರ್ಗವನ್ನು ಗಾಂಧೀಜಿ 'ಸರ್ವೋದಯ' ಎಂದು ಕರೆದರೋ ಅದೇ ವಿವೇಕಾನಂದರು ಇಂದಿನ ಆರ್ಥಿಕ ಸಮಸ್ಯೆಗಳಿಗೆ ಸೂಚಿಸುವ ಪರಿಹಾರವಾದೀತು. ೧೯ನೆಯ ಶತಮಾನದ ಅನೇಕ ಭಾರತೀಯ ಚಿಂತಕರು, ಅವರ ಚಾರಿತ್ರಿಕ ಸನ್ನಿವೇಶದ ಮಿತಿಯೊಳಗೆ, ರಾಷ್ಟ್ರೀಯ ಪ್ರಜ್ಞೆ ಮತ್ತು ಅಭಿವೃದ್ಧಿ ಕುರಿತಂತೆ ಗಮನಾರ್ಹ ಕಾಣಿಕೆ ನೀಡಿದ್ದಾರೆ. ವರ್ಗಪ್ರಜ್ಞೆಯನ್ನು ತಮ್ಮದೇ ರೀತಿಯಲ್ಲಿ ಪ್ರತಿಪಾದಿಸಿದವರು ವಿರಳ. ಅವರಲ್ಲಿ ವಿವೇಕಾನಂದರು ಅಗ್ರಮಾನ್ಯರಲ್ಲಿ ಸೇರುತ್ತಾರೆ. ಅದನ್ನು ಇಂದಿನ ಸಂದರ್ಭದಲ್ಲಿ ಮರುವ್ಯಾಖ್ಯಾನಿಸಿ ಕೊಂಡು ಸಾಮುದಾಯಿಕ ಕ್ರಿಯೆಯಲ್ಲಿ ತೊಡಗಿದರೆ ಅದು ವಿವೇಕಾನಂದರು ಸೂಚಿಸುವ ಪರಿಹಾರ ವಾಗುತ್ತದೆ, ಅವರ ಆಶಯವು ಸಾರ್ಥಕವಾಗುತ್ತದೆ. ಬೇರೊಂದು ಪ್ರಮೇಯದ ಸಂದರ್ಭದಲ್ಲಿ ಅವರು ಹತ್ತಾರು ಬಾರಿ ಕಠೋಪನಿಷತ್ತಿನ ಮಾತನ್ನು ಸಂದೇಶವಾಗಿ ನೀಡಿದ್ದಾರೆ: ''ಏಳಿ, ಎದ್ದೇಳಿ, ಗುರಿಮುಟ್ಟುವ ತನಕ ವಿಮುಖರಾಗಬೇಡಿ.'' ಕತ್ತಿಯ ಅಲುಗಿನ ಹರಿತದಷ್ಟೇ ಈ ಹಾದಿ ದುರ್ಗಮ, ಆದರೆ ಅದನ್ನು ತುಳಿಯದೆ ಅನ್ಯಮಾರ್ಗವಿಲ್ಲ.

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್
೨೨/೧, ೪ನೇ ಕ್ರಾಸ್, ಕಾವೇರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫



ನರೇಂದ್ರ ನಾಯಕ ನಮ್ಮ ರಾಜ್ಯ ಹಾಗೂ ದೇಶದಲ್ಲಿ ವಿಚಾರವಾದಿ ಚಳುವಳಿಗೆ ನಾಯಕತ್ವ ವಹಿಸಿರುವವರು. ನರೇಂದ್ರ ನಾಯಕ ಮಂಗಳೂರಿನವರು. ೧೯೫೧ರಲ್ಲಿ ಜನಿಸಿದ ಇವರು ಬಾಲ್ಯದಲ್ಲಿಯೇ ಪ್ರಶ್ನಾರ್ಥಕ ಚಿನ್ಹೆಯನ್ನು ಕೈಯ್ಯಲ್ಲಿ ಹಿಡಿದು ಬೆಳೆದರು. ಮೂಢನಂಬಿಕೆಗಳನ್ನು ವಿರೋಧಿಸುತ್ತ, ದೇವರ ಅಸ್ತಿತ್ವವನ್ನು ಪ್ರಶ್ನಿಸುತ್ತ ಬೆಳೆದ ನರೇಂದ್ರ ನಾಯಕರು ವಿಜ್ಞಾನದ ವಿದ್ಯಾರ್ಥಿಯಾಗಿ ಜೀವ ರಸಾಯನ ಶಾಸ್ತ್ರದಲ್ಲಿ ವಿಶೇಷ ಅಧ್ಯಯನ ನಡೆಸಿದರು. ವಿಜ್ಞಾನವನ್ನು ಕೇವಲ ಒಂದು ವಿಷಯವನ್ನಾಗಿ, ಶೈಕ್ಷಣಿಕ ಹಿನ್ನೆಲೆಯಲ್ಲಿ ಕಲಿಯದೆ ಅದನ್ನು ತಮ್ಮ ಚಿಂತನೆಯ ಭಾಗವಾಗಿಸಿಕೊಂಡರು. ವೈಜ್ಞಾನಿಕ ಮನೋಭಾವವನ್ನು ಬೆಳೆಸಿಕೊಳ್ಳುತ್ತಲೇ ವಿಚಾರವಾದಿಗಳಾಗಿ ಬೆಳೆದರು. ೧೯೭೬ರಲ್ಲಿ ದಕ್ಷಿಣ ಕನ್ನಡ ವಿಚಾರವಾದಿಗಳ ಸಂಘ ಸ್ಥಾಪಿಸಿದರು. ಅದೇ ವರ್ಷ ನವೆಂಬರ್‌ನಲ್ಲಿ ಖ್ಯಾತ ವಿಚಾರವಾದಿ ಶ್ರೀಲಂಕಾದ ಅಬ್ರಹಾಂ ಕೋವೂರ ಅವರನ್ನು ಮಂಗಳೂರಿಗೆ ಕರೆತಂದರು. ಪವಾಡಗಳನ್ನು, ಪವಾಡ ಪುರುಷರನ್ನು ಬಯಲು ಮಾಡುತ್ತಿದ್ದ ಕೋವೂರ ಅವರ ವಿಧಾನದಿಂದ ನರೇಂದ್ರ ನಾಯಕ ಪ್ರಭಾವಿತರಾದರು. ಅಂದೇ ನಾನೂ ಒಬ್ಬ

# ಪ್ರಶ್ನೆಯೇ ವಿಕಾಸದ ಮೂಲ

– ನರೇಂದ್ರ ನಾಯಕ

ಕೋವೂರ ಆಗಬೇಕೆಂದು ನಿರ್ಧರಿಸಿದರು. ಕರ್ನಾಟಕದಾದ್ಯಂತ ಪವಾಡ ರಹಸ್ಯ ಬಯಲು ಚಳುವಳಿಯನ್ನೇ ಆರಂಭಿಸಿದರು. ತಂತ್ರ, ಕಣ್ಕಟ್ಟು, ಮ್ಯಾಜಿಕ್‌ಅನ್ನು ಬಳಸಿ ಪವಾಡ ಮಾಡುತ್ತಿದ್ದ ಬುರಡಿ ಬಾಬಾಗಳನ್ನು ಬೀದಿಗೆಳೆದರು. ಬೆಂಕಿಯ ಮೇಲೆ, ನೀರಿನ ಮೇಲೆ ನಡೆವ, ಬೆಂಕಿ ನುಂಗುವ, ಬೂದಿ ಸೃಷ್ಟಿಸುವ, ದೇಹ ಕೊರೆಯುವ ಇಂಥ ನೂರಾರು 'ಪವಾಡ'ಗಳ ಹಿಂದಿನ ರಹಸ್ಯಗಳನ್ನು ಬಯಲುಮಾಡಿದರು. 'ಪವಾಡ ಪುರುಷರ' ಬಂಡವಾಳವನ್ನು ಬಯಲಿಗೆಳೆದರು. ಪುಟ್ಟಪುರ್ತಿ ಸಾಯಿಬಾಬಾನಿಂದ ಪುಡಿ ಬಾಬಾಗಳವರೆಗಿನ 'ದೇವ ಮಾನವ'ರ 'ದೈವೀ ಪುರುಷ'ರ ಮುಖವಾಡ ಕಳಚಿದರು. ನೂರಾರು ಯುವಕರಿಗೆ, ವಿಜ್ಞಾನದ ಶಿಕ್ಷಕರಿಗೆ 'ಪವಾಡ ಬಯಲು' ಕಾರ್ಯಾಗಾರ ನಡೆಸಿದರು. ಕರ್ನಾಟಕದಲ್ಲಿ ವಿಚಾರವಾದದ ಹೊಸ ಅಲೆ ಎಬ್ಬಿಸಿದರು.

ಕರ್ನಾಟಕ ಮಾತ್ರವಲ್ಲದೆ ಇಂದು ದೇಶದಲ್ಲಿಯೇ ವಿಚಾರವಾದಿ ಚಳುವಳಿ ಕಟ್ಟಲು ನರೇಂದ್ರ ನಾಯಕ ಶ್ರಮಿಸುತ್ತಿದ್ದಾರೆ. ಭಾರತೀಯ ವಿಚಾರವಾದಿ ಸಂಘಗಳ ಒಕ್ಕೂಟದ ರಾಷ್ಟ್ರೀಯ ಅಧ್ಯಕ್ಷರಾಗಿ ಕೆಲಸ ಮಾಡುತ್ತಿರುವ ನರೇಂದ್ರ ನಾಯಕ ತಾವು ಹಾಗೂ ತಮ್ಮ ತಂಡದಿಂದ ೨೦೦೦ಕ್ಕೂ ಹೆಚ್ಚು ಕಾರ್ಯಕ್ರಮ ಕೊಟ್ಟಿದ್ದಾರೆ. ವಿಶ್ವದ ಹಲವಾರು ದೇಶಗಳಲ್ಲಿ ಕಾರ್ಯಕ್ರಮ ಕೊಟ್ಟಿದ್ದಾರೆ. ಡಿಸ್ಕವರಿ ಚಾನೆಲ್, ನ್ಯಾಶನಲ್ ಜಿಯಾಗ್ರಫಿ, ಆಸ್ಟ್ರೇಲಿಯನ್ ಟಿ.ವಿ., ಬಿ.ಬಿ.ಸಿ. ಮುಂತಾದ ದೂರದರ್ಶನ ಚಾನೆಲ್‌ಗಳು ಇವರ ಸಂದರ್ಶನ, ಕಾರ್ಯಕ್ರಮ ಪ್ರಸಾರ ಮಾಡಿವೆ.

ತಮ್ಮ ಪ್ರಶ್ನೆ ಮಾಡುವ ಮನೋಭಾವ, ಅನ್ಯಾಯಗಳ ವಿರುದ್ಧ ಪ್ರತಿಭಟಿಸುವ ಗುಣದಿಂದ ತಾವು ಕೆಲಸ ಮಾಡುತ್ತಿದ್ದ ಕಸ್ತೂರ ಬಾ ಮೆಡಿಕಲ್ ಕಾಲೇಜಿನ ಮ್ಯಾನೇಜ್‌ಮೆಂಟನ್ನು ಎದುರುಹಾಕಿಕೊಂಡರು. ಮ್ಯಾನೇಜ್‌ಮೆಂಟ್‌ನ ಅಕ್ರಮವನ್ನು ಪ್ರಶ್ನಿಸಿ ನ್ಯಾಯಾಲಯದ ಮೆಟ್ಟಿಲೇರಿದರು, ನ್ಯಾಯಾಲಯದಲ್ಲಿ ಗೆಲವು ಪಡೆದ ಮೇಲೆ ತಮ್ಮ ಉದ್ಯೋಗದಿಂದ ಸ್ವಯಂ ನಿವೃತ್ತಿ ಪಡೆದು ವಿಚಾರವಾದಿ ಚಳುವಳಿಯನ್ನೇ ತಮ್ಮ ಬದುಕಿನ ಗುರಿಯಾಗಿಸಿಕೊಂಡಿದ್ದಾರೆ. ಈ ವಯಸ್ಸಿನಲ್ಲಿಯೂ ದೇಶ-ವಿದೇಶ ಸುತ್ತಿ ವಿಚಾರವಾದಿಗಳ ತಂಡ ಕಟ್ಟಿ ಜಾತಿ, ಧರ್ಮ, ಕೋಮುವಾದ, ಮತಾಂಧತೆ, ಮೌಢ್ಯಗಳಿಗೆ ಎದುರಾಗಿ ವಿಚಾರವಾದಿ ಚಳುವಳಿ ನಡೆಸುತ್ತಿದ್ದಾರೆ. ಎಡಪಂಥೀಯ, ದಲಿತ, ರೈತ ಸಂಘಟನೆಗಳು, ಪ್ರಗತಿಪರರು, ವೈಜ್ಞಾನಿಕ ಮನೋಭಾವದ ಜನತೆ, ವಿದ್ಯಾರ್ಥಿಗಳು, ಶಿಕ್ಷಕರು, ಯುವಕರು ಒಂದಾಗಿ ನಮ್ಮ ಸಮಾಜವನ್ನು ಕಾಡುತ್ತಿರುವ ಮೌಢ್ಯವನ್ನು ಕಿತ್ತೆಸೆಯಬೇಕೆಂದು ಕರೆ ಕೊಡುತ್ತಾರೆ. ಯಾರೇ ಎಲ್ಲಿಯೇ ಕರೆದರೂ ಬಂದು ಪವಾಡಗಳನ್ನು, ಪವಾಡಗಳ ಹಿಂದಿನ ರಹಸ್ಯವನ್ನು ಬಯಲಿಗೆಳೆಯುತ್ತಾರೆ. ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳಲು ಪ್ರಚೋದನೆ ನೀಡುತ್ತಾರೆ.

ಹೊಸತು ಪತ್ರಿಕೆಯ ವಿಶೇಷ ಸಂಚಿಕೆಗಾಗಿ ಡಾ॥ ಸಿದ್ದನಗೌಡ ಪಾಟೀಲ, ಆರ್. ಡಿ. ಸೋನ್ಸ್, ಸತೀಶ ಕುಮಾರ ಬಂಟ್ವಾಳ ನರೇಂದ್ರ ನಾಯಕ ಅವರ ಸಂದರ್ಶನ ಮಾಡಿದ್ದಾರೆ. ವೈಜ್ಞಾನಿಕ, ವೈಚಾರಿಕ ಮನೋಭಾವಕ್ಕಾಗಿ ಶ್ರಮಿಸುತ್ತಿರುವ ನರೇಂದ್ರ ನಾಯಕರ ಸಂದರ್ಶನ ಓದುಗರಿಗೆ ಉಪಯುಕ್ತ ಎಂಬುದು ಹೊಸತು ಬಳಗದ ಅಭಿಪ್ರಾಯ.

**ಸಂದರ್ಶಕರು : ಡಾ॥ ಸಿದ್ದನಗೌಡ ಪಾಟೀಲ, ಆರ್. ಡಿ. ಸೋನ್ಸ್, ಸತೀಶ ಕುಮಾರ ಬಂಟ್ವಾಳ**

**ಹೊಸತು :** ವಿಚಾರವಾದಿ ಚಳುವಳಿ ಆರಂಭಿಸಲು ಪ್ರೇರಣೆ ಏನು ?

**ನರೇಂದ್ರ ನಾಯಕ :** ನನ್ನ ಬಾಲ್ಯದಲ್ಲಿ ಹೈಸ್ಕೂಲ್ ವಿದ್ಯಾರ್ಥಿಯಾಗಿದ್ದಾಗಲೇ ನನಗೆ ಈ ಪ್ರಶ್ನೆ ಮಾಡುವ ಮನೋಭಾವ ಬೆಳೆಯಿತು. ಸುಮಾರು ೧೦-೧೧ ವರ್ಷದವನಿದ್ದಾಗಲೇ ನನ್ನೊಳಗೊಬ್ಬ ನಾಸ್ತಿಕ ಬೆಳೆಯುತ್ತಿದ್ದ. ಮಂಗಳೂರಿನ ಶಾಲೆಯಲ್ಲಿ ಓದುವಾಗ ಒತ್ತಾಯದಿಂದ ವಿದ್ಯಾರ್ಥಿಗಳ ಮೇಲೆ ಹೇರುತ್ತಿದ್ದ ದೇವರ ಪ್ರಾರ್ಥನೆ ನನ್ನಲ್ಲಿ ಅನೇಕ ಪ್ರಶ್ನೆಗಳನ್ನು ಮೂಡಿಸುತ್ತಿತ್ತು. ಗೌಡ ಸಾರಸ್ವತ ಜಾತಿಯ ನನ್ನ ಕುಟುಂಬದ ವಾತಾವರಣ, ನಮ್ಮ ಮನೆಯಲ್ಲಿನ ದೇವರ ಚಿತ್ರಗಳಿಗೆ ನಮಸ್ಕರಿಸಲು ನನ್ನ ತಾಯಿ ಹಾಗೂ ತಂದೆ ಒತ್ತಾಯಿಸುತ್ತಿದ್ದರು. ನನ್ನ ಪರೀಕ್ಷೆಯ ಸಂದರ್ಭದಲ್ಲಿ ಈ ಒತ್ತಡ ಹೆಚ್ಚುತ್ತಿತ್ತು. ಯಾವುದೇ ರೀತಿಯ ಹೇರಿಕೆಯನ್ನು ವಿರೋಧಿಸುತ್ತಿದ್ದ ನಾನು ದೇವರನ್ನೇ ಪರೀಕ್ಷೆಗೊಳಪಡಿಸುವ ಯೋಚನೆ ಮಾಡಿದೆ. ಒಮ್ಮೆ ಪರೀಕ್ಷೆಯ ಸಂದರ್ಭದಲ್ಲಿ ದೇವರಿಗೆ ನಮಸ್ಕಾರ ಮಾಡಲು ನನ್ನ ತಾಯಿ ಒತ್ತಾಯಿಸಿದಾಗ ಅವಳ ಒತ್ತಡಕ್ಕಾಗಿ ದೇವರ ಚಿತ್ರದ ಮುಂದೆ ನಿಂತು, ''ಓ ದೇವರೇ, ನನ್ನನ್ನು ಈ ಸಲದ ಪರೀಕ್ಷೆಯಲ್ಲಿ ಫೇಲ್ ಮಾಡು'' ಎಂದು ಪ್ರಾರ್ಥಿಸಿದೆ. ಆದರೆ ನಾನು ಫೇಲ್ ಆಗಲಿಲ್ಲ. ಹೀಗೆ ಹಲವು ಬಾರಿ ಪ್ರಾರ್ಥಿಸಿದರೂ ನಾನು ಫೇಲ್ ಆಗಲೇ ಇಲ್ಲ. ಬದಲಾಗಿ ಉತ್ತಮ ಅಂಕಗಳನ್ನು ಪಡೆದು ಪಾಸಾಗುತ್ತಿದ್ದೆ. ಆಗಲೇ ನನಗೆ ಈ ದೇವರ ಮೇಲಿನ ನಂಬಿಕೆ ಹೋಗಿ ಒಬ್ಬ ನಾಸ್ತಿಕನಾಗಿ ಬೆಳೆಯತೊಡಗಿದೆ. ದೇವರು ಎಂಬುದು ನಾನ್‌ಸೆನ್ಸ್ ಅಂತ ತೀರ್ಮಾನಿಸಿದೆ. ಕಾಲೇಜು ದಿನಗಳಲ್ಲಿ ಸಹಪಾಠಿಗಳೊಡನೆ ವಾದಿಸುತ್ತ ನಾಸ್ತಿಕತೆಯ ಕುರಿತು ಮಾತನಾಡುತ್ತಲೇ ಗೊಡ್ಡು ಸಂಪ್ರದಾಯ, ಮೂಢನಂಬಿಕೆಗಳನ್ನು ವಿರೋಧಿಸ ತೊಡಗಿದೆ. ವಿಜ್ಞಾನದ ವಿದ್ಯಾರ್ಥಿಯಾಗಿದ್ದ ನಾನು ನನ್ನ ಶಿಕ್ಷಣವನ್ನು ಕೇವಲ ಪರೀಕ್ಷೆಗಾಗಿ ಎಂದು ಓದದೇ ನನ್ನ ಬದುಕು, ಚಿಂತನೆಯಲ್ಲೂ ಅಳವಡಿಸಿಕೊಂಡೆ.

**ಹೊ :** ನಿಮ್ಮ ನಂಬಿಕೆ ಚಿಂತನೆಗಳನ್ನು ಸಾಮಾಜಿಕ ಚಳುವಳಿಯಾಗಿ ಪರಿವರ್ತಿಸಬೇಕೆಂದು ನಿಮಗೆ ಹೇಗೆ ಅನ್ನಿಸಿತು ?

**ನ. ನಾ :** ನಾನು ಎಂ.ಎಸ್‌ಸಿ. ಓದುವಾಗ ಕೋವೂರ ಅವರ ವಿಚಾರಗಳು ಹೆಚ್ಚು ಪ್ರಚಾರ ಪಡೆಯುತ್ತಿದ್ದವು. ಆಗ ನಮ್ಮ ದೇಶದಲ್ಲಿ ತುರ್ತುಪರಿಸ್ಥಿತಿಯ ಸಂದರ್ಭ. ಪತ್ರಿಕೆಗಳು ರಾಜಕೀಯ ವಿಷಯಗಳನ್ನು ಬರೆಯುತ್ತಿರಲಿಲ್ಲ. ಕೋವೂರ ಅವರ ವಿಚಾರವಾದಿ ಚಳುವಳಿ, ಚಿಂತನೆಗಳಿಗೆ ಹೆಚ್ಚು ಪ್ರಚಾರ ಕೊಟ್ಟವು. ನಾವು ಕೆಲ ಯುವಕರು ಅವರ ಚಿಂತನೆಗಳಿಂದ ಪ್ರಭಾವಿತರಾದೆವು. ನಾವು ಕೋವೂರ ಅವರನ್ನು ಭೆಟ್ಟಿಯಾಗಿ ಮಂಗಳೂರಿಗೆ ಬರಲು ಕೇಳಿಕೊಂಡೆವು. ಅವರು ವ್ಯಕ್ತಿಗತವಾದ ಕಾರ್ಯಕ್ರಮಕ್ಕೆ ನಾನು ಬರುವುದಿಲ್ಲ, ನೀವೂ ಒಂದು ಸಂಘಟನೆ ಮಾಡಿ ಕರೆದರೆ ಬರುತ್ತೇನೆಂದರು. ಆಗ ನಾನು ಕೆಲವು ಪ್ರಗತಿಪರ ಸ್ನೇಹಿತರೊಡಗೂಡಿ ೧೯೭೬ ನವೆಂಬರ್ ತಿಂಗಳಲ್ಲಿ ದಕ್ಷಿಣ ಕನ್ನಡ ಜಿಲ್ಲಾ ವಿಚಾರವಾದಿಗಳ ಸಂಘ ಸ್ಥಾಪಿಸಿದೆವು. ಹಲವಾರು ಎಡಪಂಥೀಯ ಗೆಳೆಯರೂ ನಮ್ಮ ಜೊತೆ ಸೇರಿದರು. ಕೋವೂರ ಅವರನ್ನು ಕರೆತರಲೆಂದೇ ಈ ಸಂಘಟನೆ ಆರಂಭಿಸಿದೆವು. ಅಬ್ರಹಾಂ ಕೋವೂರ ಅವರು ಸಂತೋಷದಿಂದಲೇ ಮಂಗಳೂರಿಗೆ ಬಂದರು. ಅಂದಿನ ಕಾರ್ಯಕ್ರಮಕ್ಕೆ ನಮ್ಮ ನಿರೀಕ್ಷೆ ಮೀರಿ ಜನ ಸೇರಿದರು. ಸಭಾಭವನ, ಅದರ ಕಾಂಪೌಂಡ್ ತುಂಬಿಹೋಗಿತ್ತು. ಪೊಲೀಸರೇ ಬಂದು ಹೊರಗಡೆ ಮೈಕ್ ಹಾಕಿರಿ ಜನ ಜಾಸ್ತಿ ಇದಾರೆ ಎಂದು ಹೇಳಿದರು. ಕೋವೂರ ಅವರು ವೈಚಾರಿಕ ವಿಚಾರಗಳ ಬಗ್ಗೆ, ವೈಜ್ಞಾನಿಕ ಮನೋಭಾವದ ಬಗ್ಗೆ ಮಾತನಾಡುತ್ತಾ ಇದ್ದರೆ, ಅವರ ಜೊತೆ ಸ್ವಾಮಿನಾಥನ್ ಎನ್ನುವವರು ಪವಾಡಗಳನ್ನು ಮಾಡಿ ತೋರಿಸ್ತಾ ಅವುಗಳ ಹಿಂದಿರುವ ರಹಸ್ಯಗಳನ್ನು ಬಯಲುಮಾಡುತ್ತಿದ್ದರು. ಕೋವೂರ ಅವರು ಇವೆಲ್ಲ ಪವಾಡ ಅಲ್ಲ, ಆದ್ರೆ ಇದನ್ನೇ ಕಾವಿ ಹಾಕೊಂಡವರು ಮಾಡಿ ಇವುಗಳನ್ನು ಪವಾಡ ಅಂತ ಹೇಳಿ ತಾವು ದೈವೀಪುರುಷರೆಂದು ಬುರುಡೆ ಬಿಡುತ್ತಾರೆ. ಮುಗ್ಧ ಜನರಲ್ಲಿ ಭಯ ಹುಟ್ಟಿಸ್ತಾರೆ ಅಂತ ಹೇಳಿದ್ರು. ಅದೊಂದು ಅತ್ಯಂತ ಪರಿಣಾಮಕಾರಿ ಕಾರ್ಯಕ್ರಮವಾಗಿತ್ತು. ಕೋವೂರ ಅವರ ಕಾರ್ಯಕ್ರಮ ನೋಡಿ ನಾನು ವಿಚಾರವಾದಿಯಾದರೆ ಸಾಲದು, ವಿಚಾರವಾದಿ ಚಳುವಳಿಯನ್ನೇ ಆರಂಭಿಸಬೇಕು, ನಾನೂ ಒಬ್ಬ ಕೋವೂರ ಆಗಬೇಕೆಂದು ಅಂದೇ ನಾನು ತೀರ್ಮಾನಿಸಿದೆ. ಅಂದಿನಿಂದ ಈ ವಿಚಾರವಾದಿ ಚಳುವಳಿ ನಂತರ ೧೯೮೦-೮೧ರಲ್ಲಿ ಗ್ರಾಹಕರ ಚಳುವಳಿಯನ್ನು ಆರಂಭಿಸಿದೆವು.

**ಹೊ :** ವಿಚಾರವಾದಿ ಚಳುವಳಿ ಆರಂಭಿಸಿದಾಗ ನೀವು ಎದುರಿಸಿದ ಸಮಸ್ಯೆಗಳಾವುವು, ಹೇಗೆ ಎದುರಿಸಿದಿರಿ ?

**ನ. ನಾ :** ಮೊಟ್ಟ ಮೊದಲು ಈ ವಿಚಾರವಾದ ಹಾಗೂ ವೈಜ್ಞಾನಿಕ



*ನರೇಂದ್ರನಾಯಕರೊಂದಿಗೆ ಡಾ।। ಸಿದ್ದನಗೌಡ ಪಾಟೀಲ, ಸತೀಶಕುಮಾರ ಬಂಟ್ವಾಳ, ಉಮಾಕರ.*

ಮನೋಭಾವವನ್ನು ನಮ್ಮ ಚಿಂತನೆ ಹಾಗೂ ಬದುಕಿನಲ್ಲಿ ಅಳವಡಿಸಿಕೊಳ್ಳಬೇಕು. ನಮ್ಮಲ್ಲಿ ಬದ್ಧತೆ ಬೆಳೆಸಿಕೊಳ್ಳಬೇಕು. ಹಿಪಾಕ್ರಸಿ, ರಾಜಿ ಮನೋಭಾವ ಇರಬಾರದು. ನಮ್ಮನ್ನು ನಾನು ಬದ್ಧತೆ ಗೊಳಪಡಿಸಿಕೊಳ್ಳಬೇಕಾದರೆ ನಮ್ಮ ವೈಯಕ್ತಿಕ ಬದುಕಿನಲ್ಲಿ ಹಲವಾರು ಸಮಸ್ಯೆಗಳು ಬರುತ್ತವೆ. ಉದಾಹರಣೆಗೆ, ನನ್ನ ಮದುವೆ. ನನ್ನ ಮದುವೆಯನ್ನು ಯಾವ ಪುರೋಹಿತರಿಲ್ಲದೆ, ಮಂತ್ರ, ಅಕ್ಷತೆಗಳಿಲ್ಲದೆ, ಯಾವುದೇ ಧಾರ್ಮಿಕ ಆಚರಣೆಗಳಿಲ್ಲದೆ, ವಿಶೇಷ ವಿವಾಹ ಕಾನೂನು ಪ್ರಕಾರ ಮಾಡಿಕೊಂಡೆ. ನನ್ನ ಹೆಂಡತಿ ಮತ್ತು ಅವರ ಪಾಲಕರು ತಾಳಿಯನ್ನಾದರೂ ಕಟ್ಟಲು ಒತ್ತಾಯಿಸಿದರು. ತಾಳಿ ಗುಲಾಮಗಿರಿಯ ಸಂಕೇತ, ನಾನು ಕಟ್ಟುವುದಿಲ್ಲ, ಬೇಕು ಅನ್ನಿಸಿದರೆ ನೀನೇ ಕಟ್ಟಿಕೋ ಎಂದು ಹೇಳಿದೆ. ನನ್ನ ಕುಟುಂಬ ಹಾಗೂ ನನ್ನ ಹೆಂಡತಿಯ ಕುಟುಂಬದವರು ಕಟ್ಟಾ ಸಂಪ್ರದಾಯಸ್ಥರು. ಅವರಲ್ಲಿ ಬಹುತೇಕರು ಆರ್.ಎಸ್.ಎಸ್. ಜೊತೆಗಿದ್ದವರು. ಹಿಂದುತ್ವವಾದಿಗಳು. ನನ್ನ ಇಬ್ಬರು ತಮ್ಮಂದಿರು ಮಾತ್ರ ನನ್ನ ಮನೋಭಾವದವರು. ನನ್ನ ಮನೆಯ ಪರಿಸರ, ನಂಬಿಕೆಗಳನ್ನು ಬದಲಿಸಲೆಂದೇ ನಾನು ಹಲವಾರು ಪ್ರಯೋಗಗಳನ್ನು ಮಾಡಿದ್ದೇನೆ. ನನ್ನ ಮನೆ ಗೃಹಪ್ರವೇಶವನ್ನು ಶನಿವಾರ, ಅಮವಾಸ್ಯೆ ದಿನ, ಮಾಂಸಾಹಾರ ಊಟದೊಂದಿಗೆ ಆರಂಭಿಸಿದೆ. ಬಂಧು ಬಳಗದವರು ಅಸಮಾಧಾನದಿಂದಲೇ ಭಾಗ ವಹಿಸಿದರು. ಸುಮ್ಮನೇ ನನ್ನ ೬೦ನೇ ಹುಟ್ಟಿದ ದಿನ ಆಚರಿಸಿಕೊಂಡೆ. ಅದೊಂದು ಅಣುಕು ಕಾರ್ಯಕ್ರಮ. ದನದ ಮಾಂಸ, ಹಂದಿ ಮಾಂಸದ ಅಡುಗೆ. ಕಾರ್ಯಕ್ರಮದಲ್ಲಿ ಒಂದು ಬ್ಯಾನರ್ ಬರೆಸಿದ್ದೆ: ''ನಾನು ಯಾವುದೇ ದೈವೀಶಕ್ತಿಯ ಆಶೀರ್ವಾದವಿಲ್ಲದೆ ೬೦ ವರ್ಷ ಪೂರೈಸಿದ್ದೇನೆ'' ಎಂದು. ಅಮ್ಮ ಸತ್ತಾಗ ಯಾವುದೇ ಆಚರಣೆ ಮಾಡಲಿಲ್ಲ, ಅಪ್ಪ ಸತ್ತಾಗ ಬೇರೆ ರಾಜ್ಯದಲ್ಲಿದ್ದೆ, ಬರಲಾಗಲಿಲ್ಲ, ಇದೆಲ್ಲ ನೋಡುವವರಿಗೆ ಅತಿ ಎನ್ನಿಸಿರಬೇಕು. ಆದರೆ ಕೆಲವು ಮೌಢ್ಯಗಳನ್ನು ದೂರಮಾಡಬೇಕಾದರೆ ನಮ್ಮನ್ನೇ ನಾವು ಪ್ರಯೋಗಕ್ಕೆ ಒಳಪಡಿಸಿಕೊಳ್ಳಬೇಕಾಗುತ್ತದೆ. ಕೆಲವು ಹುಸಿ ನಂಬಿಕೆಗಳನ್ನು ಪುಡಿ ಮಾಡಬೇಕಾದರೆ ಟಫ್ ಡಿಸಿಷನ್ ತೆಗೆದುಕೊಳ್ಳಬೇಕಾಗುತ್ತದೆ.

**ಹೊ :** ವಿಚಾರವಾದಿ ಚಳುವಳಿಯನ್ನು ಕರ್ನಾಟಕದ ಬೇರೆ ಭಾಗದಲ್ಲಿ ಕಟ್ಟೋ ಪ್ರಯತ್ನ ಮಾಡಿದ್ದೀರಾ ?

**ನ. ನಾ. :** ರಾಜ್ಯಾದ್ಯಂತ ವಿಚಾರವಾದದ ಪ್ರಚಾರಕ್ಕೆ ಕೆಲಸ ಮಾಡಿದ್ದೇವೆ. ರಾಜ್ಯದ ಹಲವಾರು ಪ್ರಗತಿಪರ, ವೈಜ್ಞಾನಿಕ ಮನೋಭಾವದ ವ್ಯಕ್ತಿಗಳನ್ನು ಸೇರಿಸಿ ಪವಾಡದ ರಹಸ್ಯ ಬಯಲು ಕಾರ್ಯಾಗಾರ ನಡೆಸಿದ್ದೇವೆ. ಅವರು ವಿವಿಧ ಪ್ರದೇಶಗಳಲ್ಲಿ ವಿಜ್ಞಾನ ಸಂಘಟನೆ, ಶಾಲಾ ಕಾಲೇಜು, ಪ್ರಗತಿಪರ ಸಂಘಟನೆಗಳ ಸಹಕಾರದಿಂದ ನೂರಾರು ಕಾರ್ಯಕ್ರಮ ಮಾಡಿದ್ದಾರೆ. ಈಗ ಕರ್ನಾಟಕ ರಾಜ್ಯ ವಿಚಾರವಾದಿಗಳ ಒಕ್ಕೂಟ ಮಾಡ್ತಾ ಇದೀವಿ. ಆದರೆ ಇದು ಯಾಕೋ ಇಂದು ಏಕವ್ಯಕ್ತಿ ಸಂಘಟನೆಯಾಗ್ತಾ ಇದೆ. ಹೊಸಬರು ಈ ಚಳುವಳಿಗೆ ಬರಬೇಕು. ನನ್ನ ಮೇಲಿನ ಅವಲಂಬನೆ ಕಡಿಮೆಯಾಗಬೇಕು. ಈಗ ನಾನು ದೇಶದಲ್ಲಿ ವಿಚಾರವಾದಿಗಳ ಸಂಘಟನೆಗಳ ಒಕ್ಕೂಟದ




ಅಧ್ಯಕ್ಷನಾಗಿ ಕೆಲಸ ಮಾಡ್ತಾ ಇದೀನಿ. ಪಂಜಾಬ್, ಬಿಹಾರ, ಮಧ್ಯಪ್ರದೇಶ, ಕೇರಳ ಹೀಗೆ ಹಲವಾರು ರಾಜ್ಯಗಳು, ನೇಪಾಳ, ಶ್ರೀಲಂಕಾ ಹಲವು ದೇಶಗಳಲ್ಲಿ ವಿಚಾರವಾದಿಗಳ ಸಂಘಟನೆ ಬೆಳೆಸಲು ಓಡಾಡ್ತಿದೀನಿ. ಅದಕ್ಕಾಗಿ ಒಂಬತ್ತು ಭಾಷೆಗಳನ್ನು ಕಲಿತ್ತಿದೀನಿ.

**ಹೊ :** ೧೯೭೬ರಿಂದ ನೀವು ವಿಚಾರವಾದಿ ಚಳುವಳಿ ನಡೆಸಿದ್ದೀರಿ. ರಾಜ್ಯದಲ್ಲಿ ಇಂದಿಗೂ ನಿಮ್ಮ ಶ್ರಮ ಚಟುವಟಿಕೆಗಳಿಗೆ ಮಾತ್ರ ಸೀಮಿತವಾಗಿದೆ, ಒಂದು ಚಳುವಳಿಯಾಗಿ ಬೆಳೆದಿಲ್ಲ. ನೀವೇ ಹೇಳಿದಂತೆ ನಿಮ್ಮ ಮೇಲೆ ಅವಲಂಬನೆ ಹೆಚ್ಚಾಗಿದೆ. ಇಷ್ಟು ವರ್ಷಗಳಲ್ಲಿ ವಿಚಾರವಾದಿ ಚಳುವಳಿಗೆ ನಿಮ್ಮಂಥವರನ್ನು ತಯಾರಿ ಮಾಡಲು ಯಾಕೆ ಸಾಧ್ಯವಾಗಲಿಲ್ಲ?

**ನ. ನಾ. :** ಕೆಲವರು ತಯಾರಾಗಿದಾರೆ. ಆದರೆ ಅದು ಸಾಲದು. ಧೈರ್ಯ, ವೈಚಾರಿಕ ಮನೋಭಾವಕ್ಕೆ ಬದ್ಧತೆ, ರಾಜಿ ಇಲ್ಲದ ಬದುಕು ಈ ಚಳುವಳಿ ಬಯಸುವ ಮೂಲ ಗುಣಗಳು. ಅಂಥವರು ಬಹಳ ಕಡಿಮೆ ಇದಾರೆ. ನನ್ನ ಜೊತೆ ಮೊದಲು ಇದ್ದವರು ಈಗ ತಮ್ಮದೇ ವೃತ್ತಿಗಳಲ್ಲಿ ಬಿಡುವಿಲ್ಲದವರಾಗಿದ್ದಾರೆ. ಮೊದಲು ನನಗೆ ಸಹಾಯಕರಾಗಿ ಬರುತ್ತಿದ್ದವರು ಇನ್ನೂ ಸಹಾಯಕರಾಗಿಯೇ ಇದ್ದಾರೆ. ಸ್ವತಃ ಅವರೂ ಬೆಳೀತಿಲ್ಲ. ಇನ್ನು ಕೆಲವರು ಈ ವೈಚಾರಿಕ ಚಳುವಳಿಯನ್ನೇ ಒಂದು ವ್ಯಾಪಾರ ಮಾಡಿಕೊಂಡಿದ್ದಾರೆ. ಕೆಲವರು ಅಹಂನಿಂದ ಹಾಳಾಗಿದ್ದಾರೆ. ಇನ್ನೂ ಒಂದು ವಿಷಯ. ವೈಚಾರಿಕ ಮನೋಭಾವ ಸಾಮಾಜಿಕ ವಿಕಾಸಕ್ಕೆ ಪೂರಕವಾದರೂ ನಮ್ಮ ವೈಯಕ್ತಿಕ ಬದುಕಿನಲ್ಲಿ ವೈರಿಗಳನ್ನು ಹುಟ್ಟಿಸುತ್ತದೆ. ನನ್ನ ಶಿಕ್ಷಣ ಸಂಸ್ಥೆಯವರೇ ನನ್ನ ಮೇಲೆ ದಾಳಿ ನಡೆಸಿದರು. ನನ್ನ ವೃತ್ತಿಗೆ ಅಡ್ಡಿ ಮಾಡಿದರು. ನಾನು ನ್ಯಾಯಾಲಯದ ಮೆಟ್ಟಿಲೇರಿದೆ. ನ್ಯಾಯಾಲಯದಲ್ಲಿ ಗೆಲವು ಪಡೆದು ನನ್ನ ವೃತ್ತಿಗೇ ನಮಸ್ಕಾರ ಹೇಳಿ ನಿವೃತ್ತಿ ಪಡೆದು ಈ ವಿಚಾರವಾದಿ ಚಳುವಳಿಯನ್ನು ಪೂರ್ಣಾವಧಿಯಾಗಿ ನಡೆಸಿಕೊಂಡು ಬಂದೆ. ಇಂಥ ಹಲವಾರು ರಿಸ್ಕ್‌ಗಳಿರುತ್ತವೆ. ಈಗ ರಾಜ್ಯಮಟ್ಟದ ಸಂಘಟನೆ ತಯಾರಿ ನಡೆಸಿದ್ದೇವೆ. ಎಡಪಂಥೀಯರು, ರೈತ ಸಂಘಟನೆ, ದಲಿತ ಸಂಘಟನೆಗಳು, ವಿದ್ಯಾರ್ಥಿಗಳು, ಶಿಕ್ಷಕರು, ಪ್ರಗತಿಪರರು ಈ ಸಂಘಟನೆಯ ಜೊತೆಗೆ ಬರಬೇಕು.

**ಹೊ :** ಇಂದು ಶಿಕ್ಷಣದಲ್ಲಿ ಒಂದೆಡೆ ಮೌಢ್ಯ, ಇನ್ನೊಂದೆಡೆ ವ್ಯಾಪಾರೀಕರಣ ಪ್ರಧಾನ ಸ್ಥಾನ ಪಡೆಯುತ್ತಿವೆ. ಇದನ್ನು ತಡೆಯೋದು ಹೇಗೆ ?

**ನ. ನಾ. :** ಇಲ್ಲಿಯವರೆಗೆ ಶಿಕ್ಷಣ ಕ್ಷೇತ್ರದಲ್ಲಿ ಏನಾಗಬೇಕಿತ್ತೋ ಅದಾಗಲಿಲ್ಲ, ಒಂದು ಕಾಲದಲ್ಲಿ ಶಿಕ್ಷಣ ಸಂಸ್ಥೆಗಳಿಗೆ ವ್ಯಾಪಾರವೂ ಒಂದು ಗುರಿಯಾಗಿತ್ತು. ಆದರೆ ಇಂದು ಶಿಕ್ಷಣವೇ ವ್ಯಾಪಾರವಾಗಿಹೋಗಿದೆ. ಶಿಕ್ಷಣ ವ್ಯಾಪಾರ ಸರಾಗವಾಗಿ ನಡೀಬೇಕಾದ್ರೆ ಅವರಿಗೆ ಮೌಢ್ಯ ಬೇಕು. ವ್ಯಾಪಾರ ಮತ್ತು ಮೌಢ್ಯ ಒಂದೇ ನಾಣ್ಯದ ಎರಡು ಮುಖಗಳು. ನೋಡಿ, ಬಹುರಾಷ್ಟ್ರೀಯ ಕಂಪನಿಗಳೂ ಆಯುರ್ವೇದ ಔಷಧಿ, ಯೋಗ ಕುರಿತು ಮಾತಾಡ್ತಿವೆ. ಮೌಢ್ಯವನ್ನು ಪ್ರಚಾರ ಮಾಡುತ್ತಲೇ ಅದಕ್ಕೂ ಗ್ರಾಹಕರನ್ನು ಪಡೆದು ಶೋಷಣೆ ಮಾಡೋದು ಅವರ ಉದ್ದೇಶ. ಅದಕ್ಕೆ ಮೌಢ್ಯ ಮತ್ತು ವ್ಯಾಪಾರ ಒಂದೇ ನಾಣ್ಯದ ಎರಡು ಮುಖಗಳು.

**ಹೊ :** ಮೂಲಭೂತ ವಿಜ್ಞಾನ ಶಿಕ್ಷಣ ಕ್ಷೇತ್ರದಿಂದ ದೂರ ಆಗ್ತಾ ಇದೆ. ಇದರ ಪರಿಣಾಮ ನಮ್ಮ ಶಿಕ್ಷಣದ ಮೇಲೆ ಏನಾಗಬಹುದು ?

**ನ. ನಾ. :** ನಮ್ಮಲ್ಲಿ ಶಿಕ್ಷಣ ಇಲ್ಲ ಬರೀ ಸಾಕ್ಷರತೆ ಇರೋದು. ಕೆಲವರು ಕಾನೂನು ಸಾಕ್ಷರತೆ ಮಾತಾಡ್ತಾರೆ, ಕೆಲವರು ಔಷಧಿ ಸಾಕ್ಷರತೆ ಬಗ್ಗೆ ಮಾತಾಡ್ತಾರೆ, ಕೆಲವರು ತಾಂತ್ರಿಕ ಸಾಕ್ಷರತೆ ಬಗ್ಗೆ ಮಾತಾಡ್ತಾರೆ. ಇಲ್ಲಿ ಶಿಕ್ಷಣ ಅನ್ನೋದು ಇಲ್ಲ. ನಾನು ಯುರೋಪ್‌ಗೆ ಹೋಗಿ ಅಲ್ಲಿ ಕಾರ್ಯಕ್ರಮ ಕೊಟ್ರೆ ಅವರು ಇದು ಮ್ಯಾಜಿಕ್ ಅಂತಾರೆ, ಆದ್ರೆ ನಮ್ಮಲ್ಲಿ ಇದು ಪವಾಡ ಅಂತಾರೆ. ಇದೇ ಶಿಕ್ಷಣದ ವಿಭಿನ್ನತೆ.

**ಹೊ :** ಯಾವುದೇ ಚಳುವಳಿಗೆ ಎರಡು ಆಯಾಮ ಇರ್ತಾವೆ. ಒಂದು ಪ್ರತಿಕ್ರಿಯೆ, ಇನ್ನೊಂದು ಕ್ರಿಯೆ. ಇಂದಿನ ಶಿಕ್ಷಣದ ಬಗ್ಗೆ ನಿಮ್ಮ ಪ್ರತಿಕ್ರಿಯೆ ಹೇಳಿದಿರಿ. ಆದರೆ ಪರ್ಯಾಯ ಶಿಕ್ಷಣ ಹೇಗಿರಬೇಕು ?

**ನ. ನಾ. :** ನಾನು ದೇಶಾದ್ಯಂತ ಶಿಕ್ಷಕರು, ಶಿಕ್ಷಣ ಸಂಸ್ಥೆಗಳಿಗೆ ಸಂಪನ್ಮೂಲ ವ್ಯಕ್ತಿಯಾಗಿ ತರಬೇತಿ ಕೊಡ್ತೇನೆ. ಅಲ್ಲಿ ನಾನು ಹೇಳೋದು ವೈಜ್ಞಾನಿಕ ಮನೋಭಾವವನ್ನು ಶಿಕ್ಷಣದಲ್ಲಿ ಬೆಳೆಸೋದು ಹೇಗೆ ಅಂತ. ೮ರಿಂದ ೧೨ನೇ ವರ್ಗದವರೆಗೆ ಕಲಿಕೆಯ ಸಂದರ್ಭದಲ್ಲಿ ಮೌಢ್ಯವನ್ನು ದೂರ ಮಾಡೋದು ಎಂಬ ವಿಷಯಕ್ಕೆ ೬ ದಿನಗಳ ಕಾರ್ಯಾಗಾರ ಮಾಡಿದ್ದೇನೆ. ಈ ರೀತಿ ದೇಶದ ಪ್ರತಿ ಜಿಲ್ಲೆಯನ್ನು ಒಂದು ಘಟಕವನ್ನಾಗಿಸಿ ಅಲ್ಲಿನ ಶಿಕ್ಷಕರಿಗೆ ಕಾರ್ಯಾಗಾರ ನಡೆಸುವ ಯೋಜನೆಯನ್ನು ಹಾಕಿ ಕೊಂಡಿದ್ದೇನೆ. ಅದೇ ರೀತಿ ವಿದ್ಯಾರ್ಥಿಗಳಿಗೂ ಈ ರೀತಿಯ ಕಾರ್ಯಾಗಾರ ನಡೆಸುವ ಯೋಚನೆ ಇದೆ. ಇಷ್ಟು ದೊಡ್ಡ ಪ್ರಮಾಣದಲ್ಲಿ ಇದು ನೆರವೇರಬೇಕಾದ್ರೆ ನೂರಾರು ಜನ ಸಂಪನ್ಮೂಲ ವ್ಯಕ್ತಿಗಳು ಬೇಕು.

**ಹೊ :** ಶಿಕ್ಷಣದಲ್ಲಿ ಭಗವದ್ಗೀತೆ, ವಾಸ್ತು, ಜೋತಿಷ್ಯ ಶಾಸ್ತ್ರ ಇಂಥ ವಿಷಯಗಳ ಸೇರ್ಪಡೆಗೆ ಒತ್ತಡವಿದೆ. ಬಿ.ಜೆ.ಪಿ. ಸರಕಾರವೂ ಉತ್ಸುಕವಾಗಿದೆ. ನಿಮ್ಮ ಅಭಿಪ್ರಾಯವೇನು ?

**ನ. ನಾ. :** ಇವೆಲ್ಲ ಕೋಮುವಾದೀಕರಣದ ಹುನ್ನಾರಗಳು. ಇವನ್ನೆಲ್ಲ ತಡೆಯಲು ಆಯಾಕ್ಷೇತ್ರಗಳ ಜನ ಬಂದು ಮಾತಾಡ್ಬೇಕು. ಉದಾಹರಣೆ : ವಾಸ್ತುವಿನ ಸುತ್ತ ಇರುವ ಮೌಢ್ಯದ ಬಗ್ಗೆ ಒಬ್ಬ ಆರ್ಕಿಟೆಕ್ಟ್ ಮಾತಾಡಬೇಕು. ಹೀಗೆ ಆಯಾಕ್ಷೇತ್ರದ ಪ್ರಜ್ಞಾವಂತರು ಬೀದಿಗಿಳಿಯಬೇಕು. ಜನ ಹೆದರ್ತಾರೆ. ಮಂಗಳೂರಿನಲ್ಲಿ ನಾನು, ಡಾ॥ ಶ್ರೀನಿವಾಸ ಕಕ್ಕಿಲ್ಲಾಯ, ಮಾಧವರಾವ್ ಇನ್ನು ಕೆಲವೇ ಜನ ಮಾತಾಡ್ತೇವೆ. ಜನ ಮೌನವಾಗಿರ್ತಾರೆ. ಅಕಾಡಮಿಕ್ ವಲಯದ ಜನರಿಗೆ ಗಟ್ಸ್ ಬೇಕು. ಆ ಸಂಸ್ಥೆ, ಇಲಾಖೆ ಮುಖ್ಯಸ್ಥ ಮೂಢನಾಗಿದ್ರೆ ಅಲ್ಲಿ ಕೆಲಸಮಾಡೋ ವಿದ್ಯಾವಂತರು ಬಾಲ ಮುದುರಿಕೊಂಡಿರ್ತಾರೆ. ಅಪ್ರಬುದ್ಧ ರಾಜಕಾರಣಿಗಳು ಏನೇ ಅಸಂಬದ್ಧ ಮಾತನಾಡಿದರೂ ನಮ್ಮ ಬುದ್ಧಿಜೀವಿಗಳು ಹಲ್‌ಕಿರಿದು ಕ್ಲಾಪ್ ಮಾಡ್ತಾರೆ. ಶಿಕ್ಷಣ ನಮ್ಮ ಜೀವನಕ್ಕೆ ಒಂದು ದಾರಿ ಅಂತ ಭಾವಿಸಿದ್ದೇವೆಯೇ ಹೊರತು, ನಮ್ಮ ಮನಸ್ಸನ್ನು, ಚಿಂತನೆಯನ್ನು ಬೆಳೆಸಿಕೊಳ್ಳಲು ಬಳಸಿಕೊಂಡಿಲ್ಲ.

**ಹೊ :** ಮಾಧ್ಯಮಗಳಲ್ಲಿ, ಅದರಲ್ಲೂ ದೃಶ್ಯ ಮಾಧ್ಯಮಗಳಲ್ಲಿ ಭವಿಷ್ಯ, ಜ್ಯೋತಿಷ್ಯದ ಕಾರ್ಯಕ್ರಮಗಳು ಜೋರಾಗೇ ನಡೀತಿವೆ. ಇದನ್ನು ಎದುರಿಸೋಕೆ ನಿಮ್ಮ ಕಾರ್ಯಕ್ರಮವೇನು ?

**ನ. ನಾ. :** ಹೌದು ಜೋರಾಗೇ ನಡೀತಿವೆ. ನನಗನ್ನಿಸ್ತದೆ ಇದು ಹೆಚ್ಚು ದಿನ ನಡೆಯೋದಿಲ್ಲ. ಭವಿಷ್ಯ ಅನ್ನೋದು ರಿಸಲ್ಟ್ ಓರಿಯಂಟೆಡ್ ಪ್ರೋಗ್ರಾಮ್. ಪ್ರತಿಫಲ ಸಿಗದೇ ಇದ್ರೆ ಬೈಕೊಂಡು ಸುಮ್ಮನಾಗ್ತಾರೆ. ಈ ರಾಮಕಿಶನ್ ಯಾದವನ ಯೋಗಾ ಪ್ರೋಗ್ರಾಮ್‌ಗೆ ಹೋದವರು ಎಷ್ಟೋ ಜನ ಬೈತಿದಾರೆ. ಅವರ ಸಮಸ್ಯೆಗಳಿಗೆ ಪರಿಹಾರ ಸಿಕ್ಕಿಲ್ಲ. ಮೊದಲಿದ್ದ ಖ್ಯಾತಿ ಈಗಿಲ್ಲ. ಆದ್ರೆ ಅಷ್ಟರಲ್ಲಿ ರಾಮಕಿಶನ್ ಯಾದವ ಅನ್ನುವ ಸಾಮಾನ್ಯ ವ್ಯಕ್ತಿ ಬಾಬಾ ರಾಮದೇವ್ ಆಗಿಬಿಟ್ಟ ಅಷ್ಟೇ. ರವಿಶಂಕರನ ಕತೇನೂ ಅದೇ. ಅವರ ಹತ್ತಿರ ಜನ ಹೋಗಿ ನೋಡಿದರೆ ಜನರಿಗೆ ಅರ್ಥವಾಗ್ತದೆ.



## ತುಂತುರು

ಮಗುವಿನ ಕಾಗದದ ದೋಣಿ
ಮುಳುಗಿಸಲು ಮನಬಾರದೆ
ಸುರಿದ ಮಳೆ ತುಂತುರು ಹನಿ

**ಶ್ರೀನಿವಾಸ ಕುಂಡಂತಾಯ**
ಜಿ ೦೧, ಶ್ರೀಗುರುಮ್ಯಾನ್ಷನ್, ನಂ. ೧೫, ೨ನೇ ಕ್ರಾಸ್
೧ನೇ ಮೈನ್, ಪಿಎಂಡಿಟಿ ಕಾಲೋನಿ, ಸಂಜಯನಗರ
ಬೆಂಗಳೂರು - ೫೬೦ ೦೯೪

**ಹೊ :** ಕೆಲವು ಸನ್ಯಾಸಿಗಳು ಅವ್ಯವಹಾರ, ಅತ್ಯಾಚಾರದ ಆರೋಪ ಹೊತ್ತು ಜೈಲಿಗೆ ಹೋಗಿ ಬಂದರೂ ಅವರಿಗೆ ಅನುಯಾಯಿಗಳಿದ್ದಾರೆ. ಉದಾಹರಣೆಗೆ ಬಿಡದಿಯ ನಿತ್ಯಾನಂದ.

**ನ. ನಾ. :** ಕೆಲವರಿಗೆ ಬ್ರೈನ್‌ವಾಶ್ ಮಾಡಿರ್ತಾರೆ. ಕೆಲವರದು ಆಂತರಿಕ ವ್ಯವಹಾರ ಇರ್ತದೆ. ಇವರು ಒಂದು ಕಲ್ಟ್ ಬೆಳೆಸಿಕೊಂಡಿರ್ತಾರೆ. ಕಲ್ಟ್‌ಗೂ ಧರ್ಮಕ್ಕೂ ಅಂತರವಿದೆ. ಧರ್ಮಾಂಧತೆಯ ವಿರುದ್ಧ ನಿರಂತರ ಹೋರಾಡಬೇಕಾಗುತ್ತದೆ. ಕಲ್ಟ್ ಕೆಲವು ದಿನ ಇದ್ದು ಅನಂತರ ತಾನೇ ಹೋಗ್ತದೆ. ಈ ಥರದ ಕಳ್ಳ ಸನ್ಯಾಸಿಗಳು, ಡೋಂಗಿ ಬಾಬಾಗಳು ವಿಚಾರವಾದಿಗಳ ಜೊತೆ ಚರ್ಚೆಗೆ ಬರೋದೇ ಇಲ್ಲ. ಬಂದ್ರೂ ತಪ್ಪಿಸಿಕೊಂಡು ಹೋಗ್ತಾರೆ. ಕೋಡಿ ಮಠದ ಸ್ವಾಮಿ ರಾಜಕೀಯ ಭವಿಷ್ಯ ಹೇಳ್ತಾರೆ. ಒಂದೂ ಸತ್ಯವಾಗಿಲ್ಲ. ಆದ್ರೆ ನಮ್ಮಲ್ಲಿ ಜನರ ನೆನಪು ಕ್ಷಣಿಕ. ತಪ್ಪು ಹೇಳಿದ್ದನ್ನು ಮರೀತಾರೆ, ಕಾಕತಾಳೀಯವಾಗಿ ಸತ್ಯವಾಗಿದ್ದನ್ನು ನೆನಪಿಡ್ತಾರೆ. ಇದೊಂಥರಾ ಸೆಲೆಕ್ಟಿವ್ ಮೆಮರಿ. ಅದೇ ರೀತಿ ನಮ್ಮ ಅಧರ್ಮಸ್ಥಳದ ಅಧರ್ಮಾಧಿಕಾರಿ. ಎಲ್ಲ ರೀತಿಯ ಮೌಢ್ಯಗಳನ್ನು ಕಾಪಾಡೋ ಗುತ್ತಿಗೆ ಹಿಡ್ದಿದಾರೆ. ನಮ್ಮ ಒಂದು ಸಣ್ಣ ಗುಂಪು ಬಿಟ್ರೆ ಯಾರೂ ಪ್ರಶ್ನೆ ಮಾಡೋದಿಲ್ಲ, ಹೆದ್ರಿ ಸಾಯ್ತಾರೆ. ಒಂದು ಘಟನೆ ಹೇಳ್ತೀನಿ ಕೇಳಿ. ನಮ್ಮ ತಂದೆ ಭವಿಷ್ಯ ಕೇಳ್ದೆ ಏನೂ ಮಾಡ್ತಿರಲಿಲ್ಲ. ನಮ್ಮಲ್ಲಿ ಒಬ್ಬ ರಾಮಕೃಷ್ಣ ಭಟ್ಟ ಅಂತ ಇದ್ದ. ಅವನನ್ನ ನೋಡ ಭಟ್ಟ ಅಂತ ಕರೀತಿದ್ರು. ಅವ ಎಲ್ಲರ ಭವಿಷ್ಯ ಹೇಳ್ತಿದ್ದ. ನಮ್ಮ ತಂದೆ ಅವನ ಹತ್ರಾನೇ ಭವಿಷ್ಯ ಕೇಳ್ತಿದ್ರು. ಒಂದು ದಿನ ಆ ನೋಡ ಭಟ್ಟ ಮನೇಲೆ ಸತ್ತುಹೋದ. ಮನೇಲಿ ಯಾರೂ ಇರ್‍ಲಿಲ್ಲ, ಎಲ್ಲಾ ತೀರ್ಥಯಾತ್ರೆಗೆ ಹೋಗಿದ್ರು. ಭಟ್ಟ ಸತ್ತಿದ್ದು ಯಾರಿಗೂ ಗೊತ್ತಿರ್‍ಲಿಲ್ಲ. ಹೆಣ ಕೊಳ್ತು ವಾಸನೆ ಹೊರಟಮೇಲೇ ಜನರಿಗೆ ಗೊತ್ತಾಗಿದ್ದು. ತನ್ನ ಭವಿಷ್ಯವೇ ಗೊತ್ತಿರದವರು ಜನರ ಭವಿಷ್ಯ ಹೇಳ್ತಾರೆ. ಇವರು ಕೇಳ್ತಾರೆ. ದೇವೇಗೌಡ, ಯಡಿಯೂರಪ್ಪರಂಥ ಮೂಢರೇ ಇರುವಾಗ ಸಾಮಾನ್ಯಜನರ ಪಾಡೇನು ? ಜನರನ್ನು ವೈಜ್ಞಾನಿಕ ಮನೋಭಾವದ ಕಡೆ ಕೊಂಡೊಯ್ಯ ಬೇಕು. ತಂತ್ರಜ್ಞಾನ ಬೆಳೆದಿದೆ. ಮೈಂಡ್‌ಸೆಟ್ ಬೆಳೆದಿಲ್ಲ. ೧೬ನೇ ಶತಮಾನದ ಮೈಂಡ್‌ಸೆಟ್‌ನಿಂದ ೨೧ನೇ ಶತಮಾನದಲ್ಲಿ ಬದುಕುತ್ತಿದ್ದೇವೆ. ಪ್ರಶ್ನೆ ಮಾಡೋದನ್ನ ಕಲಿಸಬೇಕು. ಪ್ರಶ್ನೆಯೇ ವಿಕಾಸದ ಮೂಲ.

**ಹೊ :** ಜಾಗತೀಕರಣದಿಂದ ಉಂಟಾಗುತ್ತಿರುವ ದುಷ್ಪರಿಣಾಮಗಳ ವಿರುದ್ಧ ನಿಮ್ಮ ಗ್ರಾಹಕ ಚಳುವಳಿಯ ಕಾರ್ಯಕ್ರಮ ಏನು ?

**ನ. ನಾ. :** ಸದ್ಯ ನನ್ನ ಗುರಿ ವಿಚಾರವಾದಿ ಹೋರಾಟ. ೮೦ರ ದಶಕದಲ್ಲಿ ಗ್ರಾಹಕ ಚಳುವಳಿ ನಡೆಸಿದ್ದೆ. ಗ್ರಾಹಕರ ಹಿತಾಸಕ್ತಿ ಕುರಿತು ಜಾಗತೀಕರಣದ ವಿರುದ್ಧ ವಿದೇಶಿ ಕಂಪನಿ ಲೂಟಿ ಕುರಿತು ಲೇಖನ ಬರದ್ರೆ ಸಾಲದು. ಬೀದಿಗಿಳೀಬೇಕು. ಶಾಲಾ ಕಾಲೇಜ್‌ಗಳಲ್ಲಿ, ಹಳ್ಳಿ ಹಳ್ಳಿಯಲ್ಲಿ ಜನರಿಗೆ ರ್‍ಯಾಶನಲ್ ಥಿಂಕಿಂಗ್ ಕಲಿಸಬೇಕು. ಬಳಕೆದಾರರ ಚಳುವಳಿ ಬೆಳೀಬೇಕು.

**ಹೊ :** ವಿಚಾರವಾದದ ಕುರಿತ ನಿಮ್ಮ ಚಟುವಟಿಕೆಗಳನ್ನು ಚಳುವಳಿಯಾಗಿ ಬೆಳೆಸಲು ನಿಮ್ಮ ಕಾರ್ಯಕ್ರಮವೇನು ?

**ನ. ನಾ. :** ಮುಖ್ಯವಾಗಿ ಸಮಾನ ಮನಸ್ಕರನ್ನು ಸೇರಿಸಿ ವಿಚಾರವಾದಿ ಚಳುವಳಿಯ ಅವಶ್ಯಕತೆಯನ್ನು ಅವರಿಗೆ ಮನದಟ್ಟು ಮಾಡಿಕೊಡ್ತೇವೆ. ನಂಬಿಕೆ-ನಡತೆ ಒಂದಾಗಬೇಕು. ಅಂಥವರನ್ನು ಒಗ್ಗೂಡಿಸ್ತೇವೆ. ರಾಜಿ ಮಾಡಿಕೊಳ್ಳುವವರನ್ನು, ಹಿಪೋಕ್ರೀಟ್‌ಗಳನ್ನು ದೂರ ಇಡಬೇಕು. ಒಟ್ಟಾರೆ ಜನಪರ ಚಳುವಳಿಯ ಜನ ಮತ್ತು ಪ್ರಗತಿಪರರನ್ನು ಸಂಪರ್ಕಿಸಿ ಇಷ್ಟರಲ್ಲಿಯೇ ಒಂದು ರಾಜ್ಯಮಟ್ಟದ ಸಮಿತಿ ಮಾಡಿ ಚಳುವಳಿಗೆ ಚಾಲನೆ ಕೊಡ್ತೇವೆ.

**ಹೊ :** ಹೊಸತು ಓದುಗರಿಗೆ ನಿಮ್ಮ ಸಂದೇಶ ಏನು ?

**ನ. ನಾ. :** ಯಾವುದನ್ನಾದರೂ ನಂಬೋ ಮೊದಲು ತಲೆ ಓಡಿಸಿ. ನಮಸ್ಕಾರ.



*ಆರ್. ಡಿ. ಸೋನ್ಸ್, ನರೇಂದ್ರ ನಾಯಕ, ಡಾ॥ ಸಿದ್ದನಗೌಡ ಪಾಟೀಲ.*

ಚಿತ್ರಗಳು : ಉಮಾಕರ

ಜಿ. ರಾಜಶೇಖರ

# ಬಾಬರಿ ಮಸೀದಿ ಧ್ವಂಸದ ನಂತರದ ಮತೀಯವಾದ

ಸಮಕಾಲೀನ ಮತೀಯವಾದದ ಬೆಳವಣಿಗೆ ಕುರಿತು ನಾವು ಮಾಡುವ ಯಾವುದೇ ವಿಶ್ಲೇಷಣೆಯಲ್ಲಿ ಹಿಂದು ಮತೀಯವಾದವೇ ಪ್ರಧಾನವಾಗುವುದು ಅನಿವಾರ್ಯ. ಅದರ ಅರ್ಥ ಮುಸ್ಲಿಂ ಮತೀಯವಾದ ಎಂಬುದೇ ಇಲ್ಲ ಎಂದೇನೂ ಅಲ್ಲ. ಭಾರತ ಉಪಖಂಡದಲ್ಲಿ, ಮತೀಯವಾದದ ಹಿಂದು, ಮುಸ್ಲಿಂ – ಎರಡು ತಳಿಗಳಿಗೂ, ಏಕಕಾಲದಲ್ಲಿ ವಸಾಹತುಶಾಹಿಯ ಆಳ್ವಿಕೆಯ ದಿನಗಳಲ್ಲಿ ಬೀಜಾಂಕುರವಾಯಿತು. ಹಿಂದು ಮತೀಯವಾದಕ್ಕೆ ಹಿಂದುಯೇತರರು 'ಅನ್ಯ'ವಾದರೆ ಮುಸ್ಲಿಂ ಮತೀಯವಾದಕ್ಕೆ ಮುಸ್ಲಿಮರಲ್ಲದ ಎಲ್ಲರೂ ಕಾಫಿರ 'ಅನ್ಯರು'. ೧೯೪೭ರ ದೇಶವಿಭಜನೆಗೆ ಹಿಂದು ಮತೀಯವಾದದಷ್ಟೇ ಮುಸ್ಲಿಂ ಮತೀಯವಾದವೂ ಕಾರಣವಾಗಿದೆ. ವಿಭಜನೆ ಸೃಷ್ಟಿಸಿದ ಅಗಾಧ ಹಿಂಸೆಯಲ್ಲೂ ಇವೆರಡಕ್ಕೆ ಸಮಪಾಲು ಇದೆ. ಜೊತೆಗೆ, ಹಿಂದು ಮತ್ತು ಮುಸ್ಲಿಂ ಮತೀಯವಾದದ ಇತ್ತಂಡಗಳೂ ಪರಸ್ಪರರನ್ನು ಬಲಪಡಿಸುವ ಪ್ರಕ್ರಿಯೆ ಅಂದಿನಿಂದ ಇಂದಿನವರೆಗೆ ನಿರಂತರವಾಗಿ ಮುಂದುವರಿದುಕೊಂಡು ಬಂದಿದೆ.

ವಿಷಯ ಮಂಡನೆಯ ಅನುಕೂಲಕ್ಕಾಗಿ, ಮತೀಯವಾದದ ಬೆಳವಣಿಗೆಯಲ್ಲಿ ಬಾಬರಿ ಮಸೀದಿ ಧ್ವಂಸದ ನಂತರ ಎಂದು ನಿಗದಿಗೊಳಿಸಿಕೊಂಡರೂ, ಭಾರತದಲ್ಲಿ ಆ ವಿಷವೃಕ್ಷದ ಬೇರುಗಳು ಬಹಳ ಹಿಂದಕ್ಕೆ ಚಾಚಿಕೊಳ್ಳುತ್ತವೆ ಎಂಬುದನ್ನು ನಾವು ಮರೆಯಕೂಡದು. ೧೯ನೆಯ ಶತಮಾನದ ಕೊನೆಯ ದಶಕಗಳಿಂದ ಈಚೆಗೆ, ಮತೀಯವಾದ, ಅದನ್ನು ಈಗ ನಾವು ಗುರುತಿಸುವ ಸ್ವರೂಪ ಮತ್ತು ಗುಣ ಚಹರೆಗಳಲ್ಲಿ ಹರಳುಗಟ್ಟಿಕೊಂಡಿತು. ಅಂದಿನಿಂದ ಇಂದಿನವರೆಗೆ ಅದು ತಡೆಯಿಲ್ಲದೆ ಬೆಳೆದುಕೊಂಡು ಬಂದಿದೆ. ೧೯೯೨ರ ಡಿಸೆಂಬರ್ ೬ರಂದು, ಉತ್ತರಪ್ರದೇಶ ರಾಜ್ಯದ ಫೈಜಾಬಾದ್ ನಗರದ ಹೊರವಲಯದಲ್ಲಿರುವ ಅಯೋಧ್ಯೆಯ ಬಾಬರಿ ಮಸೀದಿಯನ್ನು ಲಕ್ಷಾಂತರ ಜನರ ಸಮ್ಮುಖದಲ್ಲಿ ಧ್ವಂಸಗೊಳಿಸಿದ್ದು ಮತೀಯವಾದದ ಸುದೀರ್ಘ ಪಯಣದಲ್ಲಿ ಒಂದು ಮೈಲಿಗಲ್ಲೇ ಹೊರತು ಅದು ಪ್ರಾರಂಭವೂ ಅಲ್ಲ; ಕೊನೆಯೂ ಅಲ್ಲ. ೧೯ನೆಯ ಶತಮಾನದಲ್ಲಿ ಪ್ರಾರಂಭವಾದ ಭಾರತದ ಸ್ವಾತಂತ್ರ್ಯ ಹೋರಾಟದ ಜೊತೆ ಜೊತೆಗೇ ಮತೀಯವಾದವೂ ಜನರ ಯೋಚನಾಕ್ರಮಗಳನ್ನು ಪ್ರಭಾವಿಸತೊಡಗಿತ್ತು. ಆದರೆ ಬಾಬರಿ ಮಸೀದಿಯ ಧ್ವಂಸ ಮತ್ತು ಅದಕ್ಕಾಗಿ ನಡೆದ ರಾಮಜನ್ಮಭೂಮಿ ಚಳುವಳಿ ಮತೀಯವಾದದ ಬೆಳವಣಿಗೆಗೆ ವೇಗವರ್ಧಕವಾಯಿತು. ಮಾತ್ರವಲ್ಲ, ಅದಕ್ಕೆ ಒಂದು ಅಖಿಲ ಭಾರತ ನೆಲೆಯನ್ನೂ ಒದಗಿಸಿತು. ಮತೀಯವಾದ ಪೂರ್ಣ ಪ್ರಮಾಣದ ಫ್ಯಾಸಿಸ್ಟ್ ಸಿದ್ಧಾಂತ ಮತ್ತು ಕಾರ್ಯಕ್ರಮವಾಗಿ ರೂಪುಗೊಂಡದ್ದು ಕೂಡ ರಾಮಜನ್ಮಭೂಮಿ ಚಳುವಳಿ ಮತ್ತು ಆನಂತರದ ಕಾಲ ಘಟ್ಟದಲ್ಲೇ. ಹಾಗಾಗಿ ಮತೀಯವಾದದ ಪ್ರಸ್ತುತ ರೂಪ ಚಹರೆಗಳನ್ನು ಅರಿಯಲು ಬಾಬರಿ ಮಸೀದಿ ಧ್ವಂಸ ಮತ್ತು ಅದರ ಹಿನ್ನೆಲೆಯನ್ನು ಅಭ್ಯಾಸ ಮಾಡುವುದು ಅವಶ್ಯ.

೧೯೯೨ರ ಡಿಸೆಂಬರ್ ೬ರಂದು ಅಯೋಧ್ಯೆಯಲ್ಲಿ ಬಾಬರಿ ಮಸೀದಿಯನ್ನು ಉರುಳಿಸುವುದಕ್ಕೆ ತಯಾರಿ ಎಂದಿನಿಂದ ಪ್ರಾರಂಭವಾಯಿತು ? ಭಾರತ





ಭೂಪಟದಲ್ಲಿ ಸ್ಪಷ್ಟವಾಗಿ ಗುರುತಿಸಬಹುದಾದ, ಫೈಜಾಬಾದ್ ನಗರದ ಅಯೋಧ್ಯೆ – ಅದರಲ್ಲೂ ನಿರ್ದಿಷ್ಟವಾಗಿ ಬಾಬರಿ ಮಸೀದಿ ಇರುವ ಜಾಗ ಮತ್ತು ಅದು ಮಾತ್ರ ರಾಮಜನ್ಮಭೂಮಿ ಎಂಬುದು ಒಂದು ಆಧುನಿಕ ವಿಚಾರ; ಅದಕ್ಕೆ ಯಾವ ಶಾಸ್ತ್ರಾಧಾರವೂ ಇಲ್ಲ; ಐತಿಹಾಸಿಕ ದಾಖಲೆಯೂ ಇಲ್ಲ. ಅಷ್ಟೇ ಯಾಕೆ, ಆ ಮಸೀದಿ ಇದ್ದ ಸ್ಥಳದಲ್ಲಿ ಒಂದು ದೇವಾಲಯವಿತ್ತು ಎಂಬ ಪ್ರತಿಪಾದನೆಯನ್ನು ಸಹ ಇತಿಹಾಸಜ್ಞರು ಒಪ್ಪಿಕೊಳ್ಳುವುದಿಲ್ಲ. ಅಯೋಧ್ಯೆಯಲ್ಲಿ ರಾಮ ಜನ್ಮ ತಳೆದ ಎಂಬ ನಂಬಿಕೆ ಇದೆ; ಆದರೆ ರಾಮನೆಂಬುದೂ ಒಂದು ನಂಬಿಕೆಯೇ. ಅದು ಹಾಗಲ್ಲದೆ, ರಾಮ ಒಬ್ಬ ಐತಿಹಾಸಿಕ ವ್ಯಕ್ತಿಯಾಗಿದ್ದರೆ ಮಾತ್ರ, ಆತ ಹುಟ್ಟಿದ ದಿನಾಂಕ, ಮಾಸ, ಇಸವಿ, ಊರು ಮತ್ತು ವಿಳಾಸ – ಇವು ಸಹ ಇರಲು ಸಾಧ್ಯ. ಆದರೆ ರಾಮಾಯಣ ಒಂದು ಕಾವ್ಯವೇ ಹೊರತು, ಇತಿಹಾಸದ ನಿರೂಪಣೆಯಲ್ಲ, ರಾಮಾಯಣದಲ್ಲಿ ಹೇಳಲಾಗಿರುವ ಅಯೋಧ್ಯೆ ಮತ್ತು ಇವತ್ತು ಉತ್ತರಪ್ರದೇಶ ರಾಜ್ಯದ ಒಂದು ಊರಿನ ಬಡಾವಣೆಯಾಗಿರುವ ಅಯೋಧ್ಯೆ – ಇವೆರಡೂ ಒಂದೇ ಆಗಿರಲಾರದು ಎಂದು ಸಹ ಹಲವು ಇತಿಹಾಸಜ್ಞರು ಸಂದೇಹಿಸಿದ್ದಾರೆ. ಹಾಗೆಯೇ ರಾಮಾಯಣದ ಅಧಿಕೃತವಾದ ಒಂದು ಮೂಲಪಾಠ ಎಂಬುದು ಕೂಡ ಇಲ್ಲ. ಆದಿಕಾವ್ಯ ಎಂದು ತಪ್ಪಾಗಿ ಭಾವಿಸಲ್ಪಟ್ಟಿರುವ, ವಾಲ್ಮೀಕಿ ರಾಮಾಯಣ ವಾಸ್ತವವಾಗಿ ಭಾರತ ಮತ್ತು ಆಗ್ನೇಯ ಏಷ್ಯಾದಲ್ಲಿ ಪ್ರಚಲಿತವಾಗಿರುವ ನೂರಾರು ರಾಮಾಯಣಗಳಲ್ಲಿ ಒಂದು ಮಾತ್ರ. ಆದರೆ ರಾಮಾಯಣಕ್ಕೆ ಇರುವುದು ಒಂದೇ ಪಾಠ ಮತ್ತು ಒಂದೇ ಅರ್ಥ; ಅದು ಒಂದು ಚಾರಿತ್ರಿಕ ದಾಖಲೆಯೇ ಹೊರತು ಕಾವ್ಯವಲ್ಲ ಎಂಬ ಮೂಲಭೂತವಾದಿ ಹಠ, ರಾಮಜನ್ಮಭೂಮಿ ಚಳುವಳಿಯ ಸೈದ್ಧಾಂತಿಕ ನೆಲೆಯೇ ಆಗಿದೆ. ಇವತ್ತಿನ ಅಯೋಧ್ಯೆಯಲ್ಲಿ ಬಾಬರಿ ಮಸೀದಿ ಇರುವ ಸರ್ವೇ ನಂಬರಿನ ಜಾಗವೇ ರಾಮಜನ್ಮಸ್ಥಳ ಮತ್ತು ಅದು ಹಿಂದುಗಳಿಗೇ ಸೇರತಕ್ಕದ್ದು ಎಂಬ ಹಕ್ಕೊತ್ತಾಯ, ಬಾಬರಿ ಮಸೀದಿ ಧ್ವಂಸಕ್ಕೆ ಮಾತ್ರ ಕಾರಣವಾಗಲಿಲ್ಲ. ಅದು ಪುರಾಣಗಳ ಹೊಸಬಗೆಯ ಓದು ಮತ್ತು ಅರ್ಥೈಸುವಿಕೆಗಳಿಗೂ ಕಾರಣವಾಯಿತು. ರಾಮಾಯಣ ಕಾವ್ಯಗ್ರಂಥವಷ್ಟೇ ಆಗಿದ್ದರೆ, ಪ್ರತಿಯೊಬ್ಬ ಓದುಗನೂ, ಅದನ್ನು ತನಗೆ ಸರಿಕಂಡಂತೆ ಅರ್ಥೈಸಿಕೊಳ್ಳಬಹುದು. ರಾಮಾಯಣದ ಲಿಖಿತ ಪಾಠ ಸಿದ್ಧವಾಗುವುದಕ್ಕೆ ಮೊದಲು, ಆ ಕಥಾನಕ, ಜಾನಪದ ತೋಂಡಿಯ ರೂಪದಲ್ಲಿ ಪ್ರಚಲಿತವಾಗಿತ್ತು ಎಂದು ಮಾನವ ಶಾಸ್ತ್ರಜ್ಞರು ಭಾವಿಸುತ್ತಾರೆ. ರಾಮಾಯಣದ ಲಿಖಿತ ಪಾಠಗಳಂತೂ ಅಸಂಖ್ಯವಾಗಿವೆ; ಜೊತೆಗೆ ಅಷ್ಟೇ ವೈವಿಧ್ಯಪೂರ್ಣವೂ ಆಗಿವೆ. ಆದರೆ ರಾಮಾಯಣ ಒಂದು ಚಾರಿತ್ರಿಕ ದಾಖಲೆಯೇ ಹೊರತು ಕಾವ್ಯವಲ್ಲ ಎಂಬ ಪ್ರತಿಪಾದನೆ, ರಾಮಾಯಣದ ಈ ವೈವಿಧ್ಯಮಯ ಹಾಗೂ ಬಹುವಚನಿ ಪರಂಪರೆಯನ್ನು ಅಲ್ಲಗಳೆಯುತ್ತದೆ. ಹಾಗಾಗಿ ೧೯೯೨ರ ಡಿಸೆಂಬರ್ ೬ರಂದು ನಾಶಗೊಂಡದ್ದು ಬಾಬರಿ ಮಸೀದಿ ಎಂಬ, ಮಧ್ಯಯುಗದ ಗಚ್ಚುಗಾರೆಯ ಕಟ್ಟಡ ಮಾತ್ರವಲ್ಲ; ಸಾವಿರಾರು ವರ್ಷಗಳಿಂದ ಬೆಳೆದುಬಂದ ರಾಮಾಯಣದ ಬಹುಮುಖೀ ಕಥನ ಪರಂಪರೆಯೂ ಅಂದು ಅವಸಾನಗೊಂಡಿತು.

ಬಾಬರಿ ಮಸೀದಿಯ ಧ್ವಂಸದ ಜೊತೆಗೆ, ರಾಮಾಯಣದ ಕಥನ ಪರಂಪರೆಯನ್ನು ನಾಶಪಡಿಸುವುದು, ರಾಮಜನ್ಮಭೂಮಿ ಚಳುವಳಿಯನ್ನು ಸಂಘಟಿಸಿದ ಹಿಂದುತ್ವವಾದಿಗಳಿಗೆ ಅನಿವಾರ್ಯವಾಗಿದ್ದಿತು. ವರ್ಗ, ಜಾತಿ, ಮತ, ಭಾಷೆ ಇತ್ಯಾದಿ ಎಲ್ಲ ಭೇದಗಳನ್ನೂ ಮೀರಿ ಅಖಂಡವಾದ ಹಿಂದು ಧಾರ್ಮಿಕ ಸಮುದಾಯವೊಂದನ್ನು ಕಟ್ಟುವುದು ಹಿಂದುತ್ವದ ಪ್ರಮುಖ ರಾಜಕೀಯ ಕಾರ್ಯಕ್ರಮ. ಅಂತಹ ಒಂದು ಅಖಂಡ ಹಿಂದು ಸಮುದಾಯ ವಾಸ್ತವದಲ್ಲಿ ಇಲ್ಲ. ಹಿಂದು ಎನ್ನುವ ಹೆಸರು ಕೂಡ, ಹಿಂದುಗಳು ತಮಗೆ ತಾವೇ ಕೊಟ್ಟುಕೊಂಡದ್ದಲ್ಲ. ಇಸ್ಲಾಂಗೆ ಕುರಾನ್ ಮತ್ತು ಕ್ರೈಸ್ತಧರ್ಮಕ್ಕೆ ಬೈಬಲ್ 'ಏಕೈಕ ಪವಿತ್ರ ಗ್ರಂಥ'ಗಳಾಗಿವೆ. ಆದರೆ ಹಿಂದು ಧರ್ಮಕ್ಕೆ ಅಂತಹ ಒಂದು ಅಧಿಕೃತ ಮತ್ತು ಏಕೈಕ ಎನ್ನಬಹುದಾದ ಪವಿತ್ರ ಗ್ರಂಥವಿಲ್ಲ. ಇಸ್ಲಾಂ ಮತ್ತು ಕ್ರೈಸ್ತಧರ್ಮಗಳ ಹಾಗೆ, ಒಂದು ಆರಾಧನಾ ಸಮುದಾಯವಾಗಿ ಹಿಂದುಧರ್ಮ ಎಂದೂ ಅಸ್ತಿತ್ವದಲ್ಲೇ ಇರಲಿಲ್ಲ. ಆದರೆ ಭಾರತವನ್ನು ಆಳಿದ ಬ್ರಿಟಿಷ್ ವಸಾಹತುಶಾಹಿ, ನೂರಾರು ಜಾತಿ, ನಂಬಿಕೆ, ರೀತಿ, ರಿವಾಜುಗಳಲ್ಲೂ ಸಮುದಾಯಗಳಲ್ಲೂ ಹಂಚಿಹೋಗಿದ್ದ ಭಾರತದ ಜನಸಮೂಹವನ್ನು, ಐರೋಪ್ಯ ದೃಷ್ಟಿಕೋನ ಮತ್ತು ತಿಳುವಳಿಕೆಗೆ ಅನುಗುಣವಾಗಿ ಅರ್ಥಮಾಡಿಕೊಳ್ಳಲು ಹೆಣಗಿತು. ಆ ಪ್ರಕ್ರಿಯೆಯಲ್ಲಿ, ಇಲ್ಲಿನ ಜನಸಮುದಾಯಗಳಿಗೂ, ಒಂದು ರಿಲಿಜನ್ನು, ಒಂದು ಪವಿತ್ರ ಗ್ರಂಥ ಮತ್ತು ಸಾಂಸ್ಕೃತಿಕ ಪರಂಪರೆಗಳನ್ನು ಆರೋಪಿಸುವುದು ವಸಾಹತುಶಾಹಿಗೆ ಅನಿವಾರ್ಯ

ವಾಗಿದ್ದಿತು. ಸಂಸ್ಕೃತದ ಶಾಸ್ತ್ರಗ್ರಂಥ, ಸಾಹಿತ್ಯ ಕೃತಿಗಳೇ ಭಾರತದ ಅಧಿಕೃತ ಪರಂಪರೆ ಎನ್ನಿಸಿಕೊಂಡದ್ದು ಹಾಗೆ. ರಾಮಾಯಣ ಹಿಂದುಗಳ ಪವಿತ್ರ ಗ್ರಂಥ ಎಂದು ಪ್ರತಿಪಾದಿಸುವ ಹಿಂದುತ್ವವಾದಿಗಳು ಬೌದ್ಧಿಕವಾಗಿ, ಬ್ರಿಟಿಷ್ ವಸಾಹತುಶಾಹಿಯ ಅಕ್ರಮ ಸಂತಾನ. ಕೆಲವು ವರ್ಷಗಳ ಹಿಂದೆ, ಸಹಮತ್ ಎಂಬ ಸಾಂಸ್ಕೃತಿಕ ಸಂಘಟನೆ, ದೆಹಲಿಯಲ್ಲಿ ರಾಮಾಯಣ ಕಥಾನಕದ ವಿವಿಧ ಪ್ರಸ್ತುತಿಗಳ ಒಂದು ಪ್ರದರ್ಶನ ಏರ್ಪಡಿಸಿದಾಗ, ಸಂಘಪರಿವಾರದ ಧಾಂಡಿಗರು ಧಾಂಧಲೆಪಡಿಸಿ, ಅದನ್ನು ನಿಲ್ಲಿಸಿದ್ದರು. ರಾಮಾಯಣದ ವೈವಿಧ್ಯಮಯ ಕಥನ ಪರಂಪರೆಯನ್ನು ತಿರಸ್ಕರಿಸಿ, ಸಂಸ್ಕೃತದ ಒಂದು ಪಾಠ ಮತ್ತು ಒಂದು ಅರ್ಥ ಎಂಬ ಅವರ ಹಠ ''ಒಂದು ರಾಷ್ಟ್ರ, ಒಂದು ಜನಾಂಗ, ಒಂದು ಸಂಸ್ಕೃತಿ, ಒಂದು ಧರ್ಮ, ಒಂದು ಪವಿತ್ರ ಗ್ರಂಥ'' ಎಂಬ ಮತೀಯವಾದಿ ಪ್ರತಿಪಾದನೆಗೆ ಅನುಗುಣವಾಗಿಯೇ ಇದೆ. ಜೊತೆಗೆ ಅದು ೧೯ನೆಯ ಶತಮಾನದ ಐರೋಪ್ಯ ರಾಜಕಾರಣಿ ಬಿಸ್ಮಾರ್ಕ್ ಪ್ರಣೀತ ರಾಷ್ಟ್ರ ಪ್ರಭುತ್ವದ ನಕಲು ಕೂಡ ಆಗಿದೆ.

೨೦ನೆಯ ಶತಮಾನದಲ್ಲಿ, ಭಾರತವೂ ಸೇರಿದಂತೆ, ಏಷ್ಯಾ, ಆಫ್ರಿಕಾ ಮತ್ತು ದಕ್ಷಿಣ ಅಮೆರಿಕ ಖಂಡದ ದೇಶಗಳಲ್ಲಿ, ತಮ್ಮನ್ನು ಆಳಿದ ಐರೋಪ್ಯ ವಸಾಹತು ಶಾಹಿಯ ವಿರುದ್ಧ ನಡೆದ ಜನಾಂದೋಲನಗಳಲ್ಲಿ ಹೆಚ್ಚಿನವು ರಾಜಕೀಯ ಸ್ವಾತಂತ್ರ್ಯಕ್ಕೆ ಮಾತ್ರ ಸೀಮಿತವಾಗಿರಲಿಲ್ಲ. ರಾಜಕೀಯ ಸ್ವಾತಂತ್ರ್ಯದ ಜೊತೆಗೆ ಆರ್ಥಿಕ ಮತ್ತು ಸಾಮಾಜಿಕ ಸಮಾನತೆಯ ವಿಮೋಚನಾವಾದೀ ಆಶಯವನ್ನೂ ಅವು ಇರಿಸಿಕೊಂಡಿದ್ದವು. ಭಾರತದ ಸ್ವಾತಂತ್ರ್ಯ ಚಳುವಳಿಯಂತೂ, ಹಲವು ಸಾಮಾಜಿಕ ಚಳುವಳಿಗಳನ್ನು ತನ್ನ ಒಡಲಲ್ಲಿರಿಸಿಕೊಂಡಿತ್ತು. ಸ್ವಾತಂತ್ರ್ಯ ಚಳುವಳಿಗೆ ಸಮಾನಾಂತರವಾಗಿ, ಒಮ್ಮೊಮ್ಮೆ ಅದರದ್ದೇ ಭಾಗವಾಗಿ ಭಾರತದಲ್ಲಿ ಮಹಿಳೆಯರ ವಿಮೋಚನಾ ಚಳುವಳಿ, ದಲಿತರು, ಹಿಂದುಳಿದ ಜಾತಿಗಳು ಹಾಗೂ ರೈತಕಾರ್ಮಿಕರ ಹೋರಾಟ ಹಾಗೂ ವೈಚಾರಿಕ ಜಾಗೃತಿಯ ಆಂದೋಲನಗಳೂ ನಡೆದವು. ಆದರೆ ಅವೆಲ್ಲದರ ಜೊತೆ ಜೊತೆಗೇ ಸ್ವಾತಂತ್ರ್ಯ, ಸಮಾನತೆಗಳ ಬದಲು ಜನರ ಒಗ್ಗಟ್ಟನ್ನು ಮಾತ್ರ ಬಯಸುವ ಹಿಂದುತ್ವದ ಚಳುವಳಿಯೂ ಪ್ರಾರಂಭವಾಯಿತು. ೨೦ನೆಯ ಶತಮಾನದ ೨೦ನೆಯ ದಶಕದಲ್ಲಿ, ಹಿಂದುತ್ವದ ಪ್ರಧಾನ ಸಂಘಟನೆ ಆರ್.ಎಸ್.ಎಸ್. ಹಾಗೂ ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವಗಳ ಆಶಯ ಹೊಂದಿದ್ದ ಭಾರತ ಕಮ್ಯುನಿಸ್ಟ್ ಪಕ್ಷ ಹೆಚ್ಚುಕಡಿಮೆ ಒಟ್ಟೊಟ್ಟಿಗೇ ಜನ್ಮ ತಳೆದವು. ಆಧುನಿಕ ಭಾರತದ ರಾಜಕೀಯ ಎರಡು ಕವಲುಗಳಲ್ಲಿ ಸೀಳಿಕೊಂಡದ್ದರ, ಸ್ಪಷ್ಟ ನಿದರ್ಶನ ಅದು. ''ಒಂದು ದೇಶ, ಒಂದು ಜನಾಂಗ, ಒಂದು ಧರ್ಮ'' ಎಂಬ ಹಿಂದುತ್ವದ ಒಗ್ಗಟ್ಟಿನ ಘೋಷಮಂತ್ರಕ್ಕೆ, ತನಗೆ ಎದುರಾಳಿಯಾದ ಒಂದು 'ಅನ್ಯ'ವನ್ನು ಸೃಷ್ಟಿಸಿಕೊಳ್ಳುವುದು ಅನಿವಾರ್ಯವಾಗಿದೆ. ಎರಡು ಮಹಾಯುದ್ಧಗಳ ನಡುವಣ ಕಾಲಾವಧಿಯಲ್ಲಿ ಜರ್ಮನಿಯಲ್ಲಿ ಇಂತಹದ್ದೇ ಒಗ್ಗಟ್ಟಿನ ಘೋಷಣೆ ಮೊಳಗಿಸಿದ ನಾಝಿಗಳಿಗೆ 'ಅನ್ಯ'ರಾಗಿದ್ದವರು ಯಹೂದಿಗಳು ಮತ್ತು ಕಮ್ಯುನಿಸ್ಟರು. ಸಿದ್ಧಾಂತ ಮತ್ತು ಆಚರಣೆ ಎರಡರಲ್ಲೂ ನಾಝಿಗಳ ಜೊತೆ ನಿಕಟ ಹೋಲಿಕೆ ಇರುವ ಹಿಂದುತ್ವವಾದಿಗಳಿಗೆ, ಭಾರತದ ಎಲ್ಲ ಹಿಂದೂಯೇತರರು, ಮುಖ್ಯವಾಗಿ ಮುಸ್ಲಿಮರು, ಕ್ರೈಸ್ತರು ಮತ್ತು ಕಮ್ಯುನಿಸ್ಟರು, 'ಅನ್ಯರು'. ಹಿಂದುತ್ವವಾದಿಗಳು ಬಯಸುವ ಹಿಂದುಗಳ ಒಗ್ಗಟ್ಟು ಈ 'ಅನ್ಯರ' ಮತ್ತು 'ಅನ್ಯಮತೀಯರ' ತಲೆ ಒಡೆಯುವುದಕ್ಕೆ ಮಾತ್ರ ಎಂಬ ಬಗ್ಗೆ ಈಗ ಯಾರಿಗೂ ಸಂದೇಹ ಉಳಿದಿಲ್ಲ. ಕಮ್ಯುನಿಸ್ಟರು ದುಡಿಯುವವರ ಒಗ್ಗಟ್ಟನ್ನು ಬಯಸುವುದು ಸಮಾನತೆಯನ್ನು ಸಾಧಿಸಲು. ಆದರೆ ಹಿಂದುತ್ವವಾದಿಗಳು ಹಿಂದುಗಳ ಒಗ್ಗಟ್ಟನ್ನು ಬಯಸುವುದು 'ಅನ್ಯ'ರನ್ನು ಶತ್ರುಗಳೆಂಬಂತೆ ಚಿತ್ರಿಸಿ ತುಳಿಯುವುದಕ್ಕೇ ಹೊರತು, ಹಿಂದುಗಳ ನಡುವೆ ಸಮಾನತೆಗಾಗಿ ಅಲ್ಲವೇ ಅಲ್ಲ. ಆದ್ದರಿಂದಲೇ ಕರ್ನಾಟಕದಲ್ಲಿ ಬಿ.ಜೆ.ಪಿ.ಯ ನಾಯಕ ಯಡಿಯೂರಪ್ಪ ಮುಖ್ಯಮಂತ್ರಿಯಾಗಿದ್ದ ಕಾಲಾವಧಿಯಲ್ಲಿ ಎಗ್ಗಿಲ್ಲದೆ ಜಾತಿವಾದವನ್ನು ಬೆಳೆಸುತ್ತಲೇ, ಮೇಲುನೋಟಕ್ಕೆ ಜಾತಿವಾದದ ವಿರೋಧಿಯಂತೆ ಕಾಣುವ ಹಿಂದುತ್ವದ ಅಜೆಂಡಾವನ್ನು ಸಹ ಜಾರಿಗೆ ತರಲು ಸಾಧ್ಯವಾಯಿತು. ಆರ್.ಎಸ್.ಎಸ್.ನ ಯಾವ ಹಿರಿತಲೆಗೂ, ಹಿಂದುತ್ವ ಮತ್ತು ಯಡಿಯೂರಪ್ಪನವರ ಜಾತಿರಾಜಕೀಯಗಳ ನಡುವೆ ವಿರೋಧಾಭಾಸವೇನೂ ಕಾಣಲಿಲ್ಲ. ಹಾಗೆಯೇ ಮುಸ್ಲಿಮರು ಮತ್ತು ಕ್ರೈಸ್ತರ ವಿರುದ್ಧ ಹಿಂದುಗಳ ಒಗ್ಗಟ್ಟನ್ನು ಬಯಸುವ ಪೇಜಾವರ ಶ್ರೀ, ಹಿಂದುಗಳ ನಡುವೆ ಜಾತಿ, ಲಿಂಗ ಮತ್ತು ವರ್ಗಸಮಾನತೆಗಳು ಹಾಗಿರಲಿ, ಮಠ, ದೇವಸ್ಥಾನಗಳಂತಹ ಸಾರ್ವಜನಿಕ ಸ್ಥಳಗಳಲ್ಲಿ ಊಟದ ವೇಳೆಯಲ್ಲಾದರೂ ಜಾತಿಗಳ ನಡುವೆ ಪಂಕ್ತಿ ಸಮಾನತೆಯಂತಹ ತೀರ ಪ್ರಾಥಮಿಕ ಹಂತದ ಪರಿವರ್ತನೆಗೂ ಸಿದ್ಧರಿಲ್ಲ.

ಹಿಂದೂಯೇತರರ ವಿರುದ್ಧ ಮತ್ತು ಅವರನ್ನು ಮಣಿಸಲೋಸುಗವೇ ಹಿಂದುಗಳನ್ನು ಒಗ್ಗೂಡಿಸುವುದು ರಾಮಜನ್ಮಭೂಮಿ ಚಳುವಳಿಯ ನಿಜವಾದ ಉದ್ದೇಶ. ಬಾಬರಿ ಮಸೀದಿ ವಿವಾದ, ಅದಕ್ಕೆ ಒಂದು ನೆವವಾಗಿದ್ದಿತು. ಗತಕಾಲದ ಚರಿತ್ರೆ ಹಾಗೂ ಸಮಕಾಲೀನ ಹಿಂದು ಮುಸ್ಲಿಮ್ ಸಂಬಂಧಗಳನ್ನು ಅದು ನಿರೂಪಿಸಿದ ವಿಧಾನದಲ್ಲೇ, ರಾಮಜನ್ಮಭೂಮಿ ಚಳುವಳಿ, ದೇಶಾದ್ಯಂತ ಅಂತಹ ಹಲವು ವಿವಾದಗಳನ್ನೂ, ಚಳುವಳಿಗಳನ್ನೂ ಹುಟ್ಟುಹಾಕುವ ಸಾಧ್ಯತೆಯನ್ನು ಹೊಂದಿತ್ತು. ಉದಾಹರಣೆಗೆ ರಾಮಜನ್ಮಭೂಮಿ ಚಳುವಳಿಯ ಸಿದ್ಧಾಂತ, ತರ್ಕ ಮತ್ತು ಸಂಘಟನೆಯ ತಂತ್ರಗಳನ್ನೇ ತದ್ವತ್ ಅನುಕರಿಸಿ, ಕರ್ನಾಟಕದಲ್ಲಿ ಸಂಘಪರಿವಾರ, ಬಾಬಾಬುಡನ್‌ಗಿರಿ - ದತ್ತಪೀಠ ವಿವಾದವನ್ನು ಹುಟ್ಟುಹಾಕಿತು. ನೂರಾರು ವರ್ಷಗಳಿಂದ ಹಿಂದುಗಳು ಮತ್ತು ಮುಸ್ಲಿಮರು, ಅದರಲ್ಲೂ ವಿಶೇಷವಾಗಿ ಕೆಳಜಾತಿ ವರ್ಗಗಳವರು ಮತ್ತು ಹೆಂಗಸರು, ಚಿಕ್ಕಮಗಳೂರು ಸಮೀಪದ ಬಾಬಾಬುಡನ್‌ಗಿರಿಯಲ್ಲಿರುವ, ಅದೇ ಹೆಸರಿನ ಮುಸ್ಲಿಂ ಸಂತನ ಸಮಾಧಿಗೆ ಭಕ್ತಿಯಿಂದ ನಡೆದುಕೊಳ್ಳುತ್ತಿದ್ದರು. ಆದರೆ, ರಾಮಜನ್ಮಭೂಮಿ ಚಳುವಳಿಯ ನಂತರದ ದಿನಗಳಲ್ಲಿ, ಇದ್ದಕ್ಕಿದ್ದಂತೆ ಬಾಬಾಬುಡನ್‌ಗಿರಿ 'ವಿವಾದಿತ' ಸ್ಥಳವಾಯಿತು;



ಅಂದರೆ ವಿವಾದವೊಂದನ್ನು, ಆ ಕ್ಷೇತ್ರದ ಕುರಿತು ಉದ್ದೇಶಪೂರ್ವಕವಾಗಿ ಸೃಷ್ಟಿಸಲಾಯಿತು. ಬಾಬಾಬುಡನ್‌ಗಿರಿ ಮುಸ್ಲಿಮ್ ಸಂತನೊಬ್ಬನ ಸಮಾಧಿ ಸ್ಥಳವಲ್ಲ; ಬದಲಾಗಿ ಅದು ದತ್ತಪೀಠ ಮತ್ತು ಹಿಂದುಗಳಿಗೆ ಮಾತ್ರ ಅಲ್ಲಿ ಪ್ರವೇಶವಿರತಕ್ಕದ್ದು ಎಂಬ ಹಕ್ಕೊತ್ತಾಯಕ್ಕಾಗಿ ಸಂಘಪರಿವಾರ ಹಿಂದುಗಳನ್ನು ಒಗ್ಗೂಡಿಸಲಾರಂಭಿಸಿತು. ಆ ಸಂದರ್ಭದಲ್ಲೇ, ಕರ್ನಾಟಕದ ಓರ್ವ ಬಿ.ಜೆ.ಪಿ. ನಾಯಕ, ಅನಂತಕುಮಾರ್ ಬಾಬಾಬುಡನ್‌ಗಿರಿಯನ್ನು ಇನ್ನೊಂದು ಅಯೋಧ್ಯೆ ಮಾಡುವೆವು ಎಂದು ಘೋಷಿಸಿದ್ದು 'ಸಂದರ್ಭೋಚಿತ'ವಾಗಿತ್ತು. ಸದ್ಯಕ್ಕೆ ಈ ವಿವಾದ, ಸುಪ್ರೀಂ ಕೋರ್ಟು ಮುಂದಿದೆ. ಮತ್ತು ಪ್ರತಿ ವರ್ಷ ದತ್ತಜಯಂತಿಯ ವೇಳೆ ಸಂಘಪರಿವಾರ ಚಿಕ್ಕಮಗಳೂರಿನಲ್ಲಿ ಶಕ್ತಿಪ್ರದರ್ಶನ ನಡೆಸುತ್ತಿದೆ. ಬಾಬಾಬುಡನ್‌ಗಿರಿ - ದತ್ತಪೀಠದ ವಿವಾದದ ಜೊತೆಗೆ, ರಾಮಜನ್ಮಭೂಮಿ ಚಳುವಳಿಯ ನಂತರ ಸಂಘಪರಿವಾರ ದೇಶದ ಹಲವೆಡೆ ಇಂತಹ ವಿವಾದಗಳನ್ನು ಹುಟ್ಟುಹಾಕಿದೆ.

ಸಮಕಾಲೀನ ಮತೀಯವಾದದ ಬೆಳವಣಿಗೆ ಕುರಿತು ನಾವು ಮಾಡುವ ಯಾವುದೇ ವಿಶ್ಲೇಷಣೆಯಲ್ಲಿ ಹಿಂದುಮತೀಯವಾದವೇ ಪ್ರಧಾನವಾಗುವುದು ಅನಿವಾರ್ಯ. ಅದರ ಅರ್ಥ ಮುಸ್ಲಿಂ ಮತೀಯವಾದ ಎಂಬುದೇ ಇಲ್ಲ ಎಂದೇನೂ ಅಲ್ಲ. ಭಾರತ ಉಪಖಂಡದಲ್ಲಿ, ಮತೀಯವಾದದ ಹಿಂದು, ಮುಸ್ಲಿಂ - ಎರಡು ತಳಿಗಳಿಗೂ, ಏಕಕಾಲದಲ್ಲಿ ವಸಾಹತುಶಾಹಿಯ ಆಳ್ವಿಕೆಯ ದಿನಗಳಲ್ಲಿ ಬೀಜಾಂಕುರವಾಯಿತು. ಹಿಂದು ಮತೀಯವಾದಕ್ಕೆ ಹಿಂದುಯೇತರರು 'ಅನ್ಯ'ವಾದರೆ ಮುಸ್ಲಿಂ ಮತೀಯವಾದಕ್ಕೆ ಮುಸ್ಲಿಮರಲ್ಲದ ಎಲ್ಲರೂ ಕಾಫಿರ 'ಅನ್ಯರು'. ೧೯೪೭ರ ದೇಶವಿಭಜನೆಗೆ ಹಿಂದು ಮತೀಯವಾದದಷ್ಟೇ ಮುಸ್ಲಿಂ ಮತೀಯವಾದವೂ ಕಾರಣವಾಗಿದೆ. ವಿಭಜನೆ

ಸೃಷ್ಟಿಸಿದ ಅಗಾಧ ಹಿಂಸೆಯಲ್ಲೂ ಇವೆರಡಕ್ಕೆ ಸಮಪಾಲು ಇದೆ. ಜೊತೆಗೆ, ಹಿಂದು ಮತ್ತು ಮುಸ್ಲಿಂ ಮತೀಯವಾದದ ಇತ್ತಂಡಗಳೂ ಪರಸ್ಪರರನ್ನು ಬಲಪಡಿಸುವ ಪ್ರಕ್ರಿಯೆ ಅಂದಿನಿಂದ ಇಂದಿನವರೆಗೆ ನಿರಂತರವಾಗಿ ಮುಂದುವರಿದುಕೊಂಡು ಬಂದಿದೆ. ಸಂಘಟನೆಯ ವ್ಯಾಪಕತೆ ಮತ್ತು ಹಿಂಸೆಯ ತೀವ್ರತೆಗಳಲ್ಲಿ ಇವೆರಡರ ನಡುವೆ ಹೋಲಿಕೆ ಸಲ್ಲದು. ಆದರೆ ಹಿಂಸೆಯ ಸಂಕಲ್ಪ ಮತ್ತು ಸಮುದಾಯವನ್ನು ತಮ್ಮ ಸಾಮಾಜಿಕ ಮತ್ತು ಸಾಂಸ್ಕೃತಿಕ ಅಜೆಂಡಾಕ್ಕೆ ತಕ್ಕಂತೆ ರೂಪಿಸುವ ಹಠದಲ್ಲಿ ಹಿಂದು ಮತ್ತು ಮುಸ್ಲಿಂ ಮತೀಯವಾದಗಳೆರಡೂ, ಒಂದೇ ರೂಪ, ಚಹರೆ ಮತ್ತು ಗುಣಸ್ವಭಾವದವುಗಳು ಅಥವಾ ಒಂದೇ ನಾಣ್ಯದ ಎರಡು ಮುಖಗಳು. ಉದಾಹರಣೆಗೆ ಕಳೆದ ಶತಮಾನದ ಉದ್ದಕ್ಕೂ, ಬಾಬರಿ ಮಸೀದಿ ಇರುವ ಜಾಗವನ್ನು ತೆರವುಗೊಳಿಸಿ ಅದನ್ನು ರಾಮಮಂದಿರದ ನಿರ್ಮಾಣಕ್ಕಾಗಿ ಹಿಂದುಗಳಿಗೆ ಒಪ್ಪಿಸಬೇಕು, ಎಂಬ ಬೇಡಿಕೆ ಆಗಿಂದಾಗ್ಗೆ ಕೇಳಿಬರುತ್ತಿತ್ತು. ೧೯೪೯ರಲ್ಲಿ ಅತ್ಯಂತ ಆಕ್ಷೇಪಾರ್ಹವಾದ ಒಂದು ನ್ಯಾಯಾಲಯದ ತೀರ್ಪಿಗೆ ಅನುಗುಣವಾಗಿ ಬಾಬರಿ ಮಸೀದಿಯಲ್ಲಿ ರಾಮನ ವಿಗ್ರಹ ಇಡಲಾಯಿತು. ಆಗಲೂ ದೇಶದ ಹಿಂದುಗಳಲ್ಲಿ ಹೆಚ್ಚಿನವರು ಈ ವಿದ್ಯಮಾನಗಳಿಂದ ವಿಚಲಿತರಾಗಲಿಲ್ಲ. ಆದರೆ ೮೦ರ ದಶಕದಲ್ಲಿ ಒಮ್ಮಿಂದೊಮ್ಮೆಗೆ ರಾಮಜನ್ಮಭೂಮಿ ಚಳುವಳಿ ದೊಡ್ಡ ಸಂಖ್ಯೆಯಲ್ಲಿ ಹಿಂದುಗಳನ್ನು ಸೆಳೆಯಲು ಕಾರಣವಾದದ್ದು ಮುಸ್ಲಿಂ ಮತೀಯವಾದಿಗಳನ್ನು ಸರಕಾರ ಓಲೈಸುತ್ತಿದೆ ಎಂದು ಅವರಲ್ಲಿ ತಲೆದೋರಿದ ಭಾವನೆ. ಮುಸ್ಲಿಮರು ಒಗ್ಗಟ್ಟಾಗುತ್ತಿದ್ದಾರೆ ಎಂದು ಸಾಮಾನ್ಯ ಹಿಂದುಗಳೂ ಭಾವಿಸತೊಡಗಿದರು. ಸರಕಾರದ ವರ್ತನೆಯೂ ಅದಕ್ಕೆ ತಕ್ಕಂತಿತ್ತು. ೧೯೮೫ರಲ್ಲಿ, ತನ್ನ ಗಂಡನಿಂದ ತ್ಯಜಿಸಲ್ಪಟ್ಟ ಇಳಿವಯಸ್ಸಿನ ಮುಸ್ಲಿಂ ಮಹಿಳೆ ಶಾಬಾನು ತನ್ನ ವಿಚ್ಛೇದಿತ ಗಂಡನಿಂದ ಸೂಕ್ತ ಪರಿಹಾರ ಬಯಸಿ ಹೂಡಿದ ವ್ಯಾಜ್ಯದಲ್ಲಿ ಸುಪ್ರೀಂ ಕೋರ್ಟು, ಶಾಬಾನು ಪರವಾಗಿ ತೀರ್ಪು ನೀಡಿತು. ಆ ತೀರ್ಪಿನ ಭಾಷೆಯ ಬಗ್ಗೆ ತಕರಾರು ಏನೇ ಇರಲಿ, ತೀರ್ಪು ನ್ಯಾಯಸಮ್ಮತವಾಗಿದ್ದಿತು ಮತ್ತು ಭಾರತದ ಸೆಕ್ಯುಲರ್ ಸಂವಿಧಾನಕ್ಕೆ ಅನುಗುಣವಾಗಿ, ಅದು ಮುಸ್ಲಿಂ ಮಹಿಳೆಯರ ಹಕ್ಕುಗಳನ್ನು ಎತ್ತಿಹಿಡಿದಿತ್ತು. ಆದರೆ ಮುಸ್ಲಿಂ ಮತೀಯವಾದಿಗಳು ಮಾತ್ರ, ನ್ಯಾಯಾಲಯದ ಈ ತೀರ್ಪು, ತಮ್ಮ ಧರ್ಮದಲ್ಲಿ 'ಅನ್ಯರ' ಹಸ್ತಕ್ಷೇಪ ಎಂದು ಹುಯಿಲೆಬ್ಬಿಸಿದರು. ದೇಶಾದ್ಯಂತ ಸಾಮಾನ್ಯ ಮುಸ್ಲಿಮರಲ್ಲೂ ಈ ಕುರಿತು ಸಮೂಹಸನ್ನಿ ಹಬ್ಬಿಸಿ, ಅವರನ್ನು ಬೀದಿಗೆ ಇಳಿಸುವುದರಲ್ಲೂ ಯಶಸ್ವಿಯಾದರು. ಆ ವೇಳೆಗೆ ಶ್ರೀಮತಿ ಇಂದಿರಾ ಗಾಂಧಿಯವರ ಕೊಲೆಯಿಂದ ಸೃಷ್ಟಿಯಾದ ಅನುಕಂಪದ ಅಲೆಯ ಲಾಭ ಪಡೆದು ಭಾರೀ ಬಹುಮತದಿಂದ ಅಧಿಕಾರಕ್ಕೆ ಬಂದಿದ್ದ ರಾಜೀವ್ ಗಾಂಧಿ ನೇತೃತ್ವದ ಕಾಂಗ್ರೆಸ್ ಸರಕಾರದ ಜನಪ್ರಿಯತೆ ಕುಸಿಯತೊಡಗಿತ್ತು. ಈ ಸನ್ನಿವೇಶದಲ್ಲಿ ಮುಸ್ಲಿಮರ ಬೆಂಬಲವನ್ನಾದರೂ ಉಳಿಸಿಕೊಳ್ಳಲು, ಪ್ರಧಾನಿ ರಾಜೀವ್ ಗಾಂಧಿ, ಮುಸ್ಲಿಂ ಮತೀಯವಾದಿಗಳ ಬೇಡಿಕೆಗೆ ಮಣಿದು, ಶಾಬಾನು ಪ್ರಕರಣದಲ್ಲಿ ಸುಪ್ರೀಂ ಕೋರ್ಟಿನ ತೀರ್ಪನ್ನು ನಿಷ್ಕ್ರಿಯಗೊಳಿಸುವ, ಮುಸ್ಲಿಂ ಮಹಿಳೆಯರ ಕಾನೂನನ್ನು ಜಾರಿಗೊಳಿಸಿದರು. ನಂತರ ಈ ಓಲೈಕೆಯ ತಕ್ಕಡಿಯನ್ನು ಸಮಸ್ಥಿತಿಗೆ ತರಲು, ರಾಜೀವ್ ಗಾಂಧಿ, ಹಿಂದುಮತೀಯವಾದಿಗಳ ಬೇಡಿಕೆಗೆ ಅನುಗುಣವಾಗಿ, ನ್ಯಾಯಾಲಯದ ತೀರ್ಪಿನ ಪ್ರಕಾರವೇ ಮುಚ್ಚಿಕೊಂಡಿದ್ದ ಬಾಬರಿ ಮಸೀದಿಯ ಬಾಗಿಲುಗಳನ್ನು ತೆರೆಸಿ, 'ರಾಮಲಲ್ಲ'ನ ದರ್ಶನಕ್ಕೆ ಅನುವುಮಾಡಿಕೊಟ್ಟರು.

ಹೀಗೆ ಕಳೆದ ಶತಮಾನದ ೮೦ರ ದಶಕದಲ್ಲಿ, ಕಾಂಗ್ರೆಸ್ ಸರಕಾರ, ಹಿಂದು ಮತ್ತು ಮುಸ್ಲಿಂ - ಎರಡೂ ಬಗೆಯ ಮತೀಯವಾದಗಳಿಗೂ ಕುಮ್ಮಕ್ಕು ಕೊಟ್ಟಿತು. ವ್ಯಾಪ್ತಿಯಲ್ಲಿ ಮತ್ತು ಅನುಯಾಯಿಗಳ ತಲೆ ಲೆಕ್ಕದಲ್ಲಿ ಮುಸ್ಲಿಂ ಮತೀಯವಾದ ಹಿಂದು ಮತೀಯವಾದವನ್ನು ಎಂದೂ ಸರಿಗಟ್ಟಲಾರದು. ಆದರೆ, ಪ್ರಜಾಪ್ರಭುತ್ವ, ಸಮಾಜವಾದ ಮತ್ತು ಸೆಕ್ಯುಲರಿಸಂನ ಮೌಲ್ಯಗಳ ಬಗ್ಗೆ ತಿರಸ್ಕಾರ ಮತ್ತು ಎಂತಹ ಹಿಂಸೆಗಾದರೂ ಸೈ ಎನ್ನುವ ಧೋರಣೆಯಲ್ಲಿ ಹಿಂದು ಮತ್ತು ಮುಸ್ಲಿಂ ಮತೀಯವಾದಗಳ ನಡುವೆ ಯಾವ ವ್ಯತ್ಯಾಸವೂ ಇಲ್ಲ. ಮುಸ್ಲಿಂ ಮತೀಯವಾದದ ಜೊತೆ ಹೆಚ್ಚುತ್ತಿರುವ ಮೂಲಭೂತವಾದಿ ವಹಾಬಿ ಇಸ್ಲಾಮಿನ ಪ್ರಭಾವವೂ ಕಳವಳಕಾರಿಯಾಗಿದೆ. ಇಸ್ಲಾಮಿನ ವಹಾಬಿ ಪಂಥ, ಭಾರತವೂ ಸೇರಿದಂತೆ ಜಗತ್ತಿನ ವಿವಿಧ ದೇಶಗಳ ಮುಸ್ಲಿಂ ಪ್ರಜೆಗಳ ಸ್ಥಳೀಯ ನಂಬಿಕೆ ಮತ್ತು ಆಚರಣೆಗಳನ್ನು ಚೂರೂ ಸಹಿಸುವುದಿಲ್ಲ. ಸಂತರ ಸಮಾಧಿ - 'ದರ್ಗಾ'ಗಳಿಗೆ ನಡೆದುಕೊಳ್ಳುವುದು, ಸಂತರ ಆರಾಧನೆ, ಮುಂತಾದವು ಕೂಡ ಆ ಪಂಥದಲ್ಲಿ ನಿಷಿದ್ಧ. 'ವಹಾಬಿ ಇಸ್ಲಾಂ', ಮುಸ್ಲಿಂ ಸಮುದಾಯದ ಆಂತರಿಕ ವಿಷಯ; ಅನ್ಯರು ಅದರಲ್ಲಿ ಹಸ್ತಕ್ಷೇಪ ನಡೆಸಕೂಡದು ಎಂಬ ಧೋರಣೆ ಎಷ್ಟು ಮಾತ್ರಕ್ಕೂ ಸಲ್ಲದು. ಯಾಕೆಂದರೆ ಭಾರತದ ಸಂವಿಧಾನ, ಜಾತಿ, ಮತ, ವರ್ಗ ಮತ್ತು ಲಿಂಗಭೇದವೆನಿಸದೆ ಪ್ರಜೆಗಳೆಲ್ಲರಿಗೂ ನೀಡುವ ಹಕ್ಕುಗಳನ್ನು ವಹಾಬಿ ಇಸ್ಲಾಂ ಮುಸ್ಲಿಮರಿಗೆ ಅದರಲ್ಲೂ ವಿಶೇಷವಾಗಿ ಮುಸ್ಲಿಂ ಮಹಿಳೆಯರಿಗೆ ನಿರಾಕರಿಸುತ್ತದೆ. ಮುಸ್ಲಿಂ ಮೂಲಭೂತವಾದ ಪ್ರತಿಪಾದಿಸುವ ಶರಿಯತ್ ಕಾನೂನಿನ ಅಪರಾಧ ಮತ್ತು ಶಿಕ್ಷೆಯ ಸಂಹಿತೆಯಂತೂ ಸಂವಿಧಾನ ವಿರೋಧಿಯಷ್ಟೇ ಅಲ್ಲ, ಮಾನವ ವಿರೋಧಿಯೂ ಹೌದು. ಹಾಗಾಗಿ ಮುಸ್ಲಿಂ ಮೂಲಭೂತವಾದ ಕೇವಲ ಮುಸ್ಲಿಮರ ಧಾರ್ಮಿಕಶ್ರದ್ಧೆಗೆ ಮಾತ್ರ ಸಂಬಂಧಿಸಿದ ಆಂತರಿಕ ವಿಷಯವಲ್ಲ. ಸ್ವಾತಂತ್ರ್ಯ, ಸಮಾನತೆ ಮತ್ತು ಪ್ರಜಾಪ್ರಭುತ್ವದ ಮೌಲ್ಯಗಳನ್ನು ಎತ್ತಿ ಹಿಡಿಯುವ ಎಲ್ಲರೂ ಒಟ್ಟಾಗಿ ಅದನ್ನು ಹಿಮ್ಮೆಟ್ಟಿಸಬೇಕಾಗಿದೆ.

ಬಾಬರಿ ಮಸೀದಿಯನ್ನು ಧ್ವಂಸಗೊಳಿಸಲು ಮಾಡಿದ ಸಿದ್ಧತೆಯ ಅಂಗವಾಗಿ ನಡೆದ ರಾಮಜನ್ಮಭೂಮಿ ಚಳುವಳಿಯ, ಶಿಲಾನ್ಯಾಸ, ಇಟ್ಟಿಗೆ ಯಾತ್ರೆ ಮತ್ತು ಅಡ್ವಾನಿಯವರ ರಥಯಾತ್ರೆಯ ಸಂದರ್ಭಗಳಲ್ಲಿ ಕರ್ನಾಟಕವೂ ಸೇರಿದಂತೆ, ದೇಶದ ಹಲವೆಡೆ ಮುಸ್ಲಿಮರ ಮೇಲೆ, ಏಕಪಕ್ಷೀಯವಾದ ಹಿಂಸಾಚಾರ, ಅಗಾಧ ಪ್ರಮಾಣದಲ್ಲಿ ನಡೆದಿದೆ. ೧೯೯೨ರ ಡಿಸೆಂಬರ್ ೬ರಂದು ಕರಸೇವಕರು, ಬಾಬರಿ ಮಸೀದಿಯನ್ನು ಕ್ರಮಬದ್ಧವಾಗಿ, ಮೊದಲೇ ಹಾಕಿಕೊಂಡ ಯೋಜನೆಗೆ ತಕ್ಕಂತೆ ಉರುಳಿಸಿದ್ದನ್ನು ಲೋಕವೇ ಬಲ್ಲದು. ಆದರೆ ಆವತ್ತು ಮಧ್ಯಾಹ್ನ, ಈಗಲೂ ಹೆಚ್ಚಿನವರ ಗಮನಕ್ಕೆ ಬಾರದ ಭೀಕರ ಹತ್ಯಾಕಾಂಡವೊಂದು ಅಯೋಧ್ಯೆಯಲ್ಲಿ ನಡೆಯಿತು. ಡಿಸೆಂಬರ್ ೬ಕ್ಕೆ ಎರಡು ಮೂರು ದಿನಗಳ ಮೊದಲೇ, ದೇಶದ ಮೂಲೆ ಮೂಲೆಗಳಿಂದ ಬಂದಿದ್ದ ಕರಸೇವಕರು ಅಯೋಧ್ಯೆಯಲ್ಲಿ ಜಮಾಯಿಸಿದ್ದರು. ಅಯೋಧ್ಯೆಯಲ್ಲಿ ಲಾಗಾಯ್ತಿನಿಂದಲೂ ವಾಸಿಸಿಕೊಂಡಿದ್ದ ಮುಸ್ಲಿಮರಲ್ಲಿ ಹೆಚ್ಚಿನವರು, ಜೀವಭಯದಲ್ಲಿ ಊರು ತೊರೆದಿದ್ದರು. ಅವರ ಪೈಕಿ ಹೋಗಲು ಬೇರೆಡೆ ಆಶ್ರಯವಿಲ್ಲದವರು, ವೃದ್ಧರು, ರೋಗಿಗಳು, ಅಂಗವಿಕಲರು ಮುಂತಾದವರು ಅನಿವಾರ್ಯವಾಗಿ ಆದಿನ ಅಯೋಧ್ಯೆಯಲ್ಲಿದ್ದರು. ಮಸೀದಿ ಧ್ವಂಸಗೊಳಿಸುವ ಘನಂದಾರಿ ಕೆಲಸ ಮುಗಿಸಿದ ಕರಸೇವಕರು, ಮಧ್ಯಾಹ್ನದ ನಂತರ, ಅಯೋಧ್ಯೆಯ ಮುಸ್ಲಿಂ ಮನೆಗಳನ್ನು

ಹುಡುಕಿ ಹುಡುಕಿ, ಬೆಂಕಿಯಿಡ ತೊಡಗಿದರು. ಈ ಬೆಂಕಿಯಲ್ಲಿ ಬಾಬರಿ ಮಸೀದಿಯ ಕಟ್ಟಕಡೆಯ ಇಮಾಂರ ಮಗ ಮತ್ತು ಸೊಸೆ ಸೇರಿದಂತೆ ೧೩ ಜನ ಸುಟ್ಟು ಕರಕಲಾದರು; ೧೩೪ ಮುಸ್ಲಿಂ ಮನೆಗಳನ್ನು ಲೂಟಿಮಾಡಿ, ನಂತರ ಬೆಂಕಿ ಕೊಟ್ಟು ನಾಶಪಡಿಸಲಾಯಿತು. ಅಯೋಧ್ಯೆಯಲ್ಲಿ ಅಂದು ಬಾಬರಿ ಮಸೀದಿ ಜೊತೆಗೆ, ಊರಿನ ಹೆಚ್ಚಿನ ಮಸೀದಿ ಮತ್ತು ಈದ್ಗಾಗಳನ್ನು ಸಹ ಕರಸೇವಕರು ನಾಶಪಡಿಸಿದರು.



ಅಯೋಧ್ಯೆಯಲ್ಲಿ ಬಾಬರಿ ಮಸೀದಿಯ ಗುಂಬಜ್ ನೆಲಕ್ಕೆ ಕುಸಿಯುತ್ತಿದ್ದಂತೆ ಮುಂಬಯಿ ನಗರದಲ್ಲಿ ಬಿ.ಜೆ.ಪಿ. ಮತ್ತು ಶಿವಸೇನೆ, ಮೊದಲೇ ಸ್ಕೆಚ್ ಹಾಕಿಕೊಂಡ ಹಾಗೆ, ಮುಸ್ಲಿಮರ ಮೇಲೆ ಹಿಂಸಾಚಾರ ಪ್ರಾರಂಭಿಸಿತು. ಮಹಾರಾಷ್ಟ್ರ ರಾಜ್ಯ ಸರಕಾರ ಹಾಗೂ ಕೇಂದ್ರ ಸರಕಾರಗಳ ಸಮ್ಮತಿ ಮತ್ತು ಸಹಕಾರಗಳೊಂದಿಗೆ ಈ ಹಿಂಸೆ ಸತತವಾಗಿ ಎರಡು ತಿಂಗಳು ನಡೆದು ಹತ್ತಿರ ಹತ್ತಿರ ೯೦೦ ಜನ ಸಾವಿಗೀಡಾದರು. ಇವರಲ್ಲಿ ಹೆಚ್ಚಿನವರು ಮುಸ್ಲಿಮರು. ಈ ಸರಣಿ ಹಿಂಸಾಚಾರದ ಕುರಿತು ನ್ಯಾಯಾಂಗ ವಿಚಾರಣೆ ನಡೆಸಲು, ಸರಕಾರ ನಿವೃತ್ತ ನ್ಯಾಯಾಧೀಶ ಬಿ. ಎನ್. ಶ್ರೀಕೃಷ್ಣ ಅವರ ನೇತೃತ್ವದಲ್ಲಿ ಒಂದು ಆಯೋಗವನ್ನು ನೇಮಿಸಿತು. ಶ್ರೀಕೃಷ್ಣ ಆಯೋಗ, ತನ್ನ ವರದಿಯಲ್ಲಿ ಮುಂಬಯಿಯಲ್ಲಿ ಹಿಂಸಾಚಾರಕ್ಕೆ ಬಿ.ಜೆ.ಪಿ. ಮತ್ತು ಶಿವಸೇನೆಗಳೇ ಉತ್ತರದಾಯಿ ಎಂದು ಸ್ಪಷ್ಟವಾಗಿ ಹೇಳಿತು; ಅಷ್ಟೇ ಅಲ್ಲ, ಹಿಂಸೆಯಲ್ಲಿ ನೇರವಾಗಿ ಭಾಗಿಗಳಾಗಿದ್ದ ಬಿ.ಜೆ.ಪಿ. ಮತ್ತು ಶಿವಸೇನೆಯ ಹಲವು ನಾಯಕರನ್ನು ಅದು ಹೆಸರಿಸಿತು. ಮುಂಬೈ ಪೊಲೀಸು ಇಲಾಖೆಯ ಅನೇಕ ಅಧಿಕಾರಿಗಳನ್ನು ಸಹ ಆಯೋಗ ಹಿಂಸೆಯಲ್ಲಿ ಶಾಮೀಲಾಗಿರುವವರು ಅಥವಾ ಸ್ವತಃ ತಾವೇ ಹಿಂಸೆಯಲ್ಲಿ ತೊಡಗಿಕೊಂಡವರು ಎಂದು ಸಾಕ್ಷ್ಯಾಧಾರ ಸಮೇತ ವರದಿ ಮಾಡಿದೆ. ಆನಂತರ ಕೇಂದ್ರದಲ್ಲೂ ರಾಜ್ಯದಲ್ಲೂ ಹಲವು ಸರಕಾರಗಳು ಬಂದುಹೋಗಿವೆ. ಆದರೆ ಶಿವಸೇನೆಯ ನಾಯಕ ಬಾಳ ಠಾಕ್ರೆಯೂ ಸೇರಿದಂತೆ, ಆಯೋಗ ಹೆಸರಿಸಿದ ಯಾವ ರಾಜಕಾರಣಿಗೂ ಇದುವರೆಗೆ ಶಿಕ್ಷೆ ಆಗಿಲ್ಲ; ಶ್ರೀಕೃಷ್ಣ ಆಯೋಗ, ತಪ್ಪಿತಸ್ಥರು ಎಂದು ಹೆಸರಿಸಿದ ಮುಂಬಯಿಯ ಪೊಲೀಸು ಅಧಿಕಾರಿಗಳಲ್ಲಿಯೂ ಹೆಚ್ಚಿನವರಿಗೆ ಶಿಕ್ಷೆ ಆಗಿಲ್ಲ; ಬದಲಾಗಿ ಅವರಲ್ಲಿ ಕೆಲವರಿಗೆ, ಮಹಾರಾಷ್ಟ್ರದ ಕಾಂಗ್ರೆಸ್ ಸರಕಾರವೇ ಬಡ್ತಿ ನೀಡಿದೆ! ೧೯೮೪ರಲ್ಲಿ ಶ್ರೀಮತಿ ಇಂದಿರಾ ಗಾಂಧಿಯವರ ಕೊಲೆಯ ನಂತರ ದೆಹಲಿಯಲ್ಲಿ ನಡೆದ ಸಿಖ್ ನರಮೇಧದಲ್ಲಿ ಶಾಮೀಲಾಗಿದ್ದ ರಾಜಕಾರಣಿಗಳು ಮತ್ತು ಅಧಿಕಾರಿಗಳ ಬಗ್ಗೆ ಕೂಡ ಸರಕಾರ ಹೀಗೆಯೇ ವರ್ತಿಸಿತ್ತು. ಬಾಬರಿ ಮಸೀದಿ ಉರುಳಿದಾಗ, ದೆಹಲಿಯಲ್ಲಿ ಪ್ರಧಾನಮಂತ್ರಿ ನರಸಿಂಹರಾವ್ ನಿದ್ರೆ ಮಾಡುತ್ತಿದ್ದರಂತೆ. ಬಾಬರಿ ಮಸೀದಿಯ ಪತನ ಮತ್ತು ಮುಂಬಯಿ ಹಿಂಸಾಚಾರಗಳಿಗೆ ಸಂಬಂಧಿಸಿದ ಹಾಗೆ ಕಾಂಗ್ರೆಸ್ ಸರಕಾರ ನಡೆದುಕೊಂಡ ರೀತಿಗೂ, ಗುಜರಾತ್ ನರಮೇಧದ ಸಂದರ್ಭದಲ್ಲಿ ಎನ್.ಡಿ.ಎ. ಸರಕಾರದ ವರ್ತನೆಗೂ ಯಾವ ವ್ಯತ್ಯಾಸವೂ ಇಲ್ಲ. ೧೯೯೨ರ ನಂತರ ಕೋಮು ಹಿಂಸಾಚಾರದ ಬಗ್ಗೆ ಅತೀವ ನಿರ್ಲಕ್ಷ್ಯ, ಎಡಪಕ್ಷಗಳನ್ನು ಹೊರತುಪಡಿಸಿ, ಇತರ ಎಲ್ಲ ರಾಜಕೀಯ ಪಕ್ಷಗಳ ಅಘೋಷಿತ ನಿಲುವು ಆಗಿಬಿಟ್ಟಿತು. ಬಡವರ ಹಿತ, ಸೆಕ್ಯುಲರಿಸಂ, ಸಮಾಜವಾದ ಇತ್ಯಾದಿ ಮಾತುಗಳನ್ನು ಆಡುತ್ತಲೇ, ಭಾರತದ ರಾಜಕೀಯ ಪಕ್ಷಗಳು ಜನರಿಂದ ದೂರವಾಗತೊಡಗಿದ್ದವು. ಆದ್ದರಿಂದಲೇ ಬಾಬರಿ ಮಸೀದಿ ಪತನ, ಮುಂಬಯಿ ಹಿಂಸಾಚಾರ, ಹಾಗೂ ಗುಜರಾತ್ ನರಮೇಧಗಳ ನಂತರವೂ ಎಡಪಕ್ಷಗಳನ್ನು ಹೊರತುಪಡಿಸಿ ಎಲ್ಲ ರಾಜಕೀಯ ಪಕ್ಷಗಳೂ ಒಂದಲ್ಲ ಒಂದು ಸಂದರ್ಭದಲ್ಲಿ ಬಿ.ಜೆ.ಪಿ. ಜೊತೆ ಕೈಜೋಡಿಸಿವೆ. ಒರಿಸ್ಸಾದ ಕ್ರೈಸ್ತ ಆದಿವಾಸಿಗಳ ಮೇಲೆ ೨೦೦೮ರಲ್ಲಿ ನಡೆದ ಭೀಕರ ಹಿಂಸಾಚಾರದ ನಂತರವೂ ಬಿ.ಜೆ.ಪಿ. ನಾಯಕತ್ವದ ಎನ್.ಡಿ.ಎ. ಒಕ್ಕೂಟ ನಿರ್ಬಾಧಿತವಾಗಿದೆ. ದೇವರು, ಧರ್ಮ ಮತ್ತು ಜನಾಂಗಗಳ ಹೆಸರು ಹೇಳಿ ಯಾವ ಕ್ರಿಮಿನಲ್ ಕೃತ್ಯವನ್ನೂ ನಡೆಸಬಹುದು; ದೇಶದ ಕಾನೂನು ವ್ಯವಸ್ಥೆ ಆ ಕುರಿತು ಕ್ಯಾರೆ ಎನ್ನುವುದಿಲ್ಲ. ರಾಜಕೀಯ ವ್ಯವಸ್ಥೆಯೂ ಹಿಂಸೆಗೆ ಸ್ಪಂದಿಸುವುದಿಲ್ಲ ಎಂಬ ಬಗ್ಗೆ ಈಗ ಯಾರಿಗೂ ಸಂದೇಹ ಉಳಿದಿಲ್ಲ. ಆಳುವ ವ್ಯವಸ್ಥೆಯ ಈ ರೂಕ್ಷತೆ, ಜನರ ಅನ್ನ, ವಸತಿ, ಶಿಕ್ಷಣ, ಆರೋಗ್ಯ, ಉದ್ಯೋಗ, ಸಾರ್ವಜನಿಕ ಸಂಪನ್ಮೂಲಗಳು ಮುಂತಾದ ಕ್ಷೇತ್ರಗಳಲ್ಲಿ ತಲೆದೋರಿದ್ದು ಸಹ ಬಾಬರಿ ಮಸೀದಿ ಧ್ವಂಸದ ಜೊತೆ ಜೊತೆಗೇ ನಡೆದ ಪ್ರಕ್ರಿಯೆ. ರಾಮಜನ್ಮಭೂಮಿ ಚಳವಳಿ ಕಾವು ಏರುತ್ತಿದ್ದ ದಿನಗಳಲ್ಲೇ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣಗಳ ಹೊಸ ಆರ್ಥಿಕ ವ್ಯವಸ್ಥೆಯೂ ದೇಶದಲ್ಲಿ ನೆಲೆಯೂರ ತೊಡಗಿತು. ಈ ಎರಡು ವಿದ್ಯಮಾನಗಳು ಒಂದು ಇನ್ನೊಂದಕ್ಕೆ ಪೂರಕವಾಗಿವೆ. ರಾಮಜನ್ಮಭೂಮಿ ಚಳವಳಿ ಸೃಷ್ಟಿಸಿದ ಸಾಮೂಹಿಕ ಉನ್ಮಾದದಲ್ಲಿ ದೇಶದ ನೆಲ, ಜಲ, ಖನಿಜ ಸಂಪತ್ತು, ಕೃಷಿ, ಕೈಗಾರಿಕೆ, ಮುಂತಾದ ಎಲ್ಲ ಸಂಪನ್ಮೂಲಗಳು ಸ್ವದೇಶಿ ಹಾಗೂ ಬಹುರಾಷ್ಟ್ರೀಯ ಬಂಡವಾಳಶಾಹಿಗಳ ಖಾಸಗಿ ಆಸ್ತಿಯಾಗಿ ಮಾರ್ಪಡುತ್ತಿದ್ದುದು ಸಾಮಾನ್ಯಪ್ರಜೆಗಳ ಗಮನಕ್ಕೆ ಬಾರದೆ ಹೋಯಿತು. ಚಳುವಳಿಯ ಮುಂಚೂಣಿಯಲ್ಲಿದ್ದ ಬಿ.ಜೆ.ಪಿ. ಮತ್ತು ಸಂಘಪರಿವಾರಗಳಿಗೂ ಅದೇ ಬೇಕಿದ್ದುದು. ಜನಸಂಘದ ದಿನಗಳಿಂದಲೂ ಬಿ.ಜೆ.ಪಿ.ಯದ್ದು ಬಲಪಂಥೀಯ ಆರ್ಥಿಕ ಧೋರಣೆಯೇ ಆಗಿದ್ದುದರಿಂದ ಹೊಸ ಆರ್ಥಿಕ ವ್ಯವಸ್ಥೆಯನ್ನು ಸ್ವಾಗತಿಸಲು ಅದು ಹಿಂದೆ ಮುಂದೆ ನೋಡಲಿಲ್ಲ. ಕಳೆದ ಶತಮಾನದ ೮೦ರ ದಶಕದಲ್ಲಿ ರಾಜೀವ್ ಗಾಂಧಿ ನಾಯಕತ್ವದ ಕಾಂಗ್ರೆಸ್ ಸರಕಾರ ಪ್ರಾರಂಭಿಸಿದ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣಗಳ ಪ್ರಕ್ರಿಯೆ, ಮುಂದೆ ಪ್ರಧಾನಿ ನರಸಿಂಹರಾವ್ ಹಾಗೂ ಅವರ ಮಂತ್ರಿಮಂಡಲದಲ್ಲಿ ಅರ್ಥಮಂತ್ರಿಯಾಗಿದ್ದ ಮನಮೋಹನ್ ಸಿಂಗ್ ಅವರ ಅಧಿಕಾರಾವಧಿಯಲ್ಲಿ ಸಂಪೂರ್ಣಗೊಂಡಿತು. ೧೯೯೯ರಿಂದ ೨೦೦೪ರ ವರೆಗೆ ಅಧಿಕಾರದಲ್ಲಿದ್ದ ಬಿ.ಜೆ.ಪಿ. ನಾಯಕತ್ವದ ಎನ್.ಡಿ.ಎ. ಸರಕಾರ ಹಿಂದಿನ ಕಾಂಗ್ರೆಸ್ ಸರಕಾರಗಳ ಆರ್ಥಿಕ ಧೋರಣೆಯನ್ನೇ ಮುಂದುವರಿಸಿತು. ಹೀಗೆ, ದಿನೇದಿನೇ ಹೆಚ್ಚುತ್ತಿದ್ದ ಹಿಂದುತ್ವದ ಪ್ರಭಾವ ಮತ್ತು ಆಗತಾನೆ ಕಾಲಿರಿಸಿದ್ದ ಹೊಸ ಆರ್ಥಿಕ ವ್ಯವಸ್ಥೆಗಳ ನಡುವೆ ನಿಕಟವಾದ ಸಂಬಂಧವಿದೆ; ಸಂದು ಕಡಿಯದ ಸಾತತ್ಯವೂ ಇದೆ.

ಬಾಬರಿ ಮಸೀದಿಯ ಧ್ವಂಸ ಕಾರ್ಯಕ್ರಮ ಲಕ್ಷಾಂತರ ಜನರ ಕಣ್ಣೆದುರಿಗೇ, ಅವರ ಉದ್ಘೋಷಗಳ ನಡುವೆಯೇ ನಡೆದರೂ, ಅದಕ್ಕೋಸ್ಕರ ಒಂದು ದೇಶವ್ಯಾಪಿ ಚಳುವಳಿಯೇ ನಡೆದಿದ್ದರೂ, ಆ ಕೃತ್ಯವನ್ನು ಎಸಗಿದವರು ಯಾರು ಎಂದು ಪತ್ತೆ ಹಚ್ಚಲು ಘನ ಸರಕಾರ ಒಂದು ತನಿಖಾ ಆಯೋಗವನ್ನು ನಿವೃತ್ತ ನ್ಯಾಯಮೂರ್ತಿ ಲಿಬರ್‌ಹಾನ್‌ರ ನೇತೃತ್ವದಲ್ಲಿ ರಚಿಸಿತು! ಈ ಸಮಿತಿ, ಘಟನೆಯ ಕುರಿತು ಬರೋಬ್ಬರಿ ೧೭ ವರ್ಷಗಳ ಕಾಲ ತನಿಖೆ ನಡೆಸಿ, ೨೦೦೯ರ ಜೂನ್ ತಿಂಗಳಿನಲ್ಲಿ ಸರಕಾರಕ್ಕೆ ಸಲ್ಲಿಸಿದ ವರದಿಯಲ್ಲಿ ಪ್ರಕರಣದ ಅಪರಾಧಿಗಳನ್ನು ಹೆಸರಿಸಲೇ ಇಲ್ಲ. ಅದಕ್ಕೆ ಬದಲಾಗಿ, ಮಸೀದಿ ಇದ್ದ ಜಾಗದಲ್ಲಿ ಒಂದು ಭಾಗವನ್ನು, ಜಾಗದ ಕುರಿತು ತಕರಾರು ಎಬ್ಬಿಸಿದವರಿಗೇ ಬಿಟ್ಟುಕೊಡಬೇಕು ಎಂದು ಆಯೋಗ ಶಿಫಾರಸ್ಸು ಮಾಡಿತು! ಮಸೀದಿ ಧ್ವಂಸವಾಗುವಾಗ ಕೇಂದ್ರದ ಕಾಂಗ್ರೆಸ್ ಸರಕಾರ ನಿಷ್ಕ್ರಿಯವಾಗಿತ್ತು; ಉತ್ತರಪ್ರದೇಶದ ಬಿ.ಜೆ.ಪಿ. ರಾಜ್ಯ ಸರಕಾರ ಮಸೀದಿ ರಕ್ಷಣೆಯ ತನ್ನ ಸಂವಿಧಾನಾತ್ಮಕ ಕರ್ತವ್ಯ ಪಾಲಿಸಲಿಲ್ಲ; ದೇಶದ ನ್ಯಾಯವ್ಯವಸ್ಥೆ ತನ್ನ ಕರ್ತವ್ಯವನ್ನು ಪಾಲಿಸಲಿಲ್ಲ. ಹೀಗೆ ಬಾಬರಿ ಮಸೀದಿ ಧ್ವಂಸ, ನಮ್ಮ ದೇಶದ ಸಾರ್ವಜನಿಕ ಬದುಕಿನಲ್ಲಿ ಸೋಗಲಾಡಿತನ ಮತ್ತು ವಿಶ್ವಾಸದ್ರೋಹಗಳ ಹೊಸ ದಾಖಲೆಯನ್ನೇ ನಿರ್ಮಿಸಿದವು.

ಅಗಾಧ ಜೀವಹಿಂಸೆ ಮತ್ತು ವಿಶ್ವಾಸದ್ರೋಹ, ನಂತರ ಆ ಕುರಿತು ಹೊಣೆಗಾರಿಕೆಯಿಂದ ಕಳಚಿಕೊಳ್ಳಲು ಈ ಸೋಗಲಾಡಿತನ ವರ್ತನೆ ಸಾರ್ವಜನಿಕ ಜೀವನದಲ್ಲಿ ಮಾಮೂಲಾಗಿ ಹೋಯಿತು. ಬಾಬರಿ ಮಸೀದಿ ಉರುಳಿದ ಮೇಲೆ ಬಿ.ಜೆ.ಪಿ. ನಾಯಕ ಹಾಗೂ ರಥಯಾತ್ರೆಯ ನೇತಾರ ಎಲ್. ಕೆ. ಅಡ್ವಾನಿ, ಅದು ತನ್ನ ಜೀವನದ ಅತ್ಯಂತ ವಿಷಾದದ ದಿನ ಎಂದು ಉದ್ಗರಿಸಿದರು. ಆದರೆ ಆನಂತರವೂ ತನ್ನ ಹಿಂದುತ್ವದ ರಾಜಕೀಯವನ್ನು ಎಗ್ಗಿಲ್ಲದೆ ಮುಂದುವರಿಸಿದರು. ರಾಮಜನ್ಮಭೂಮಿ

ಚಳುವಳಿಯ ಉದ್ದಕ್ಕೂ, ಅದರ ಮುಂಚೂಣಿಯಲ್ಲಿದ್ದು, ಮಸೀದಿ ಧ್ವಂಸವಾಗುತ್ತಿದ್ದಾಗ ಸ್ಥಳದಲ್ಲೇ ಹಾಜರಿದ್ದ ಪೇಜಾವರ ಶ್ರೀಗಳು ಕೂಡ ಘಟನೆಯಿಂದ ತಮಗೆ ವೇದನೆಯಾಗಿದೆ ಎಂದು ಹೇಳಿದರು. ಶ್ರೀಗಳು ಈಗಲೂ ಸಂಘಪರಿವಾರದ ಓರ್ವ ಸಕ್ರಿಯ ಬೆಂಬಲಿಗ. ಗುಜರಾತ್-೨೦೦೨ರ ಸಂದರ್ಭದಲ್ಲಿ ಅಹ್ಮದಾಬಾದ್‌ನ ಒಂದು ಸಂತ್ರಸ್ತರ ಶಿಬಿರದಲ್ಲಿ, ಟಿ.ವಿ. ಕ್ಯಾಮೆರಾಗಳ ಎದುರು ನಿಂತು ಆಗಿನ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ, ಗುಜರಾತ್ ಮುಖ್ಯಮಂತ್ರಿ ನರೇಂದ್ರ ಮೋದಿಗೆ ರಾಜಧರ್ಮ ಬೋಧಿಸಿದರು; ಆದರೆ ಮುಂದೆ ಕೆಲವೇ ದಿನಗಳಲ್ಲಿ ಗೋವಾದಲ್ಲಿ ನಡೆದ ಸಾರ್ವಜನಿಕ ಸಭೆಯೊಂದನ್ನು ಉದ್ದೇಶಿಸಿ ಮಾತನಾಡುತ್ತ ''ಮೊದಲು ಬೆಂಕಿ ಹಚ್ಚಿದವರು ಯಾರು ?'' ಎಂದು ಕೇಳಿದರು. ಅವರ ಮನಸ್ಸಿನಲ್ಲಿ ಇದ್ದುದು ಮುಸ್ಲಿಮರು ಎಂಬುದು ಎಲ್ಲರಿಗೂ ಸ್ಪಷ್ಟವಾಗಿತ್ತು. ಹಿಂಸೆಗೆ ಒಳಗಾದವರನ್ನೇ, ಅಪರಾಧಿ ಎಂದು ಪರಿಗಣಿಸುವ ಫ್ಯಾಸಿಸ್ಟ್ ರಾಜಧರ್ಮ ನಿಸ್ಸಂದೇಹವಾಗಿ ಭಾರತದೊಳಗೆ ಕಾಲಿರಿಸಿತ್ತು!

ಆಳುವವರು ಸ್ವತಃ ಹಿಂಸೆ ನಡೆಸುವುದು ಅಥವಾ ಹಿಂಸೆಯಲ್ಲಿ ಶಾಮೀಲಾಗುವುದು, ಮತ್ತು ಆ ಕುರಿತು ಮೊಸಳೆ ಕಣ್ಣೀರು ಸುರಿಸುವುದು - ಅದರಲ್ಲಿ ವಿಶೇಷವೇನೂ ಇಲ್ಲ. ಆದರೆ ಹಿಂಸೆಗೆ ಅದೂ, ತಮ್ಮ ಕಣ್ಣೆದುರಿಗೇ ನಡೆಯುವ ಹಿಂಸೆಗೆ, ಸಾಮಾನ್ಯ ಪ್ರಜೆಗಳ ಪ್ರತಿಕ್ರಿಯೆ ಏನು ? ಹಿಂಸೆ ಎಂದರೆ ನಮಗೆಲ್ಲರಿಗೂ ಅಸಹ್ಯವಾಗುತ್ತದೆ; ಅಥವಾ ನಾವು ಸ್ವತಃ ನಮ್ಮನ್ನು ಹಾಗೆಂದು ನಂಬಿಸಿಕೊಳ್ಳುತ್ತೇವೆ. ಆದರೆ ಅದು ನಿಜವೆ ? ೧೯೯೨-೯೩ರ ಕೋಮು ಹಿಂಸೆಯನಂತರ, ೧೯೯೫ರಲ್ಲಿ ಮಹಾರಾಷ್ಟ್ರ ವಿಧಾನಸಭೆಗೆ ಚುನಾವಣೆ ನಡೆಯಿತು. ಮುಂಬೈ ಹಿಂಸಾಕಾಂಡದ ಉಸ್ತುವಾರಿ ವಹಿಸಿದ್ದ ಬಿ.ಜೆ.ಪಿ. - ಶಿವಸೇನೆ ಮೈತ್ರಿಕೂಟವೇ ಆ ಚುನಾವಣೆಯಲ್ಲಿ ಬಹುಮತ ಪಡೆಯಿತು. ಅದಕ್ಕಿಂತ ಮೊದಲು, ೧೯೮೪ರಲ್ಲಿ ಪ್ರಧಾನಿ ಶ್ರೀಮತಿ ಇಂದಿರಾ ಗಾಂಧಿಯವರ ಕೊಲೆಯನಂತರ ದೆಹಲಿಯಲ್ಲಿ ನಡೆದ ಕಾಂಗ್ರೆಸ್ ಪ್ರಾಯೋಜಿತ ಸಿಖ್ ನರಮೇಧದಲ್ಲಿ ೩೦೦೦ ಜನ ಸಾವಿಗೀಡಾದರು. ಹಾಗಿದ್ದೂ ೧೯೮೫ರಲ್ಲಿ ನಡೆದ ಲೋಕಸಭಾ ಚುನಾವಣೆಯಲ್ಲಿ ಕಾಂಗ್ರೆಸ್ ಪಕ್ಷ ಭಾರೀ ಬಹುಮತ ಪಡೆಯಿತು. ೨೦೦೨ರ ನರಮೇಧದ ನಂತರ ಗುಜರಾತ್‌ನಲ್ಲಿ ನರೇಂದ್ರ ಮೋದಿ ನೇತೃತ್ವದ ಬಿ.ಜೆ.ಪಿ. ಸರಕಾರ ಎರಡು ಬಾರಿ (೨೦೦೨ ಮತ್ತು ೨೦೦೭) ಮೂರನೆಯ ಎರಡರಷ್ಟು ಬಹುಮತ ಪಡೆದಿದೆ.





೨೦೧೨ರಲ್ಲಿಯೂ ಅದು ತನ್ನ ಈ 'ಸಾಧನೆ'ಯನ್ನು ಪುನರಾವರ್ತಿಸುತ್ತದೆ ಎಂಬುದು ಹೆಚ್ಚಿನವರ ನಿರೀಕ್ಷೆ. ನಿಸ್ಸಂದೇಹವಾಗಿ, ಈ ಎಲ್ಲ ಚುನಾವಣಾ ಫಲಿತಾಂಶಗಳು ಮತೀಯ ಹಿಂಸೆಗೆ ಜನಸಾಮಾನ್ಯರ ಸಮ್ಮತಿಯನ್ನು ಸೂಚಿಸುತ್ತವೆ. ಹೆದ್ದಾರಿಯಲ್ಲಿ, ನಾಯಿಮರಿಯೊಂದು ಲಾರಿಯಡಿ ಸಿಕ್ಕಿ ಸಾಯುವುದನ್ನು ಕೂಡ ನೋಡಲಾಗದ ಗೃಹಸ್ಥರು, ದೇವರು ಮತ್ತು ಧರ್ಮದ ಹೆಸರಿನಲ್ಲಿ ಇನ್ನೊಂದು ಸಮುದಾಯಕ್ಕೆ ಸೇರಿದ ಜನರನ್ನು ಕೊಲ್ಲುವುದಕ್ಕೆ ಹಿಂದೆಮುಂದೆ ನೋಡುವುದಿಲ್ಲ. ಹಾಗಾಗಿ, ಈಗ ಹಿಂಸೆ ನಮ್ಮ ಮನೆ, ಊರುಕೇರಿಗಳಿಂದ ಹೊರಗೆ, ದೂರದಲ್ಲಿ ನಮಗೆ ಸಂಬಂಧಪಡದ 'ಮೂರನೆಯವರು' ಎಸಗುತ್ತಿರುವಂತಹದ್ದು ಎಂದು ನಾವು ಭಾವಿಸುವ ಹಾಗೇ ಇಲ್ಲ. ೧೯೯೨ ಡಿಸೆಂಬರ್ ೬ರಂದು ಅಯೋಧ್ಯೆಯಲ್ಲಿ ಸೇರಿದ ಲಕ್ಷಾಂತರ ಜನರು, ಮುಂಬೈ ನಗರದ ಬೀದಿಗಳಲ್ಲಿ ಹಿಂಸೆ ಎಸಗಿದವರು, ಗುಜರಾತ್‌ನ ಊರುಗಳಲ್ಲಿ ೨೦೦೨ರಲ್ಲಿ ಸಾವಿರಗಟ್ಟಲೆಯಲ್ಲಿ ಗುಂಪು ಸೇರಿ, ಅಸಹಾಯಕ ಮುಸ್ಲಿಮರ ಮೇಲೆ ಎರಗಿದವರು, ಕಂಧಮಾಲ್‌ನಲ್ಲಿ ಕ್ರೈಸ್ತರಾಗಿ ಮತಾಂತರಗೊಂಡ ತಪ್ಪಿಗೆ, ಆದಿವಾಸಿಗಳನ್ನು 'ಶಿಕ್ಷಿಸಿದವರು' – ಇವರೆಲ್ಲರೂ ಜನಸಾಮಾನ್ಯರು, ಥೇಟು ನಮ್ಮ ನಿಮ್ಮ ಹಾಗಿನವರು. ೧೯೪೭ರ ದೇಶವಿಭಜನೆಯ ಅಗಾಧ ಹಿಂಸೆಯಲ್ಲೇ, ಸಾಮಾನ್ಯಜನರ ಭಾಗೀದಾರಿಕೆಯನ್ನು ಕತೆಗಾರ ಸಾದತ್ ಹಸನ್ ಮಾಂಟೋ ಗುರುತಿಸಿದ್ದ. ಆ ಹಿಂಸೆಯಲ್ಲಿ ಹಿಂದುಗಳು ಮತ್ತು ಮುಸ್ಲಿಮರು ಸಮಪ್ರಮಾಣದಲ್ಲಿ ಭಾಗಿಗಳಾಗಿದ್ದರು. ಹಿಂಸೆಗೆ ಒಳಗಾದವರಲ್ಲಿ ಸಹ ಎರಡೂ ಸಮುದಾಯಗಳವರೂ ಸಮಪ್ರಮಾಣದಲ್ಲಿದ್ದರು. ಆದರೆ ೧೯೮೪ರ ದೆಹಲಿಯ ಸಿಖ್ ನರಮೇಧ, ಬಾಬರಿ ಮಸೀದಿ ಧ್ವಂಸ, ೧೯೯೨-೯೩ರ ಮುಂಬಯಿ 'ಗಲಭೆ', ೨೦೦೨ರ ಗುಜರಾತ್ ನರಮೇಧ ಮತ್ತು ಒರಿಸ್ಸಾದ ಕಂಧಮಾಲ್‌ನಲ್ಲಿ ಆದಿವಾಸಿ ಕ್ರೈಸ್ತರ ಮೇಲೆ ನಡೆದ ಸಾಮೂಹಿಕ ಹಿಂಸಾಚಾರಗಳು ಏಕಪಕ್ಷೀಯವಾಗಿದ್ದವು. ಈ ಹಿಂಸಾಕಾಂಡಗಳು ಮತ್ತು ಹಿಂಸೆಯ ಪ್ರಮಾಣದಲ್ಲಿ ಇದಕ್ಕಿಂತ ಕಿರಿದಾದ ನೂರಾರು ಪ್ರಕರಣಗಳನ್ನು 'ಗಲಭೆ' ಅಥವಾ 'ಕೋಮು ಗಲಭೆ' ಎಂದು ತಿಪ್ಪೆ ಸಾರಿಸುವ ಭಾಷಾ ಪ್ರಯೋಗದ ಸಂಪ್ರದಾಯವೊಂದು ಮಾಧ್ಯಮಗಳಲ್ಲಿ ಚಾಲ್ತಿಯಲ್ಲಿದೆ. ಅವುಗಳಲ್ಲಿ ಹೆಚ್ಚಿನವು ಈ ಹಿಂಸೆಯಲ್ಲಿ ಶಾಮೀಲಾಗಿರುವಂತಹವು ಎಂಬುದು ಆಕಸ್ಮಿಕವಲ್ಲ. 'ಗಲಭೆ' ಎಂಬ ಶಬ್ದವೇ ಎರಡು ಪರಸ್ಪರ ವಿರೋಧಿ ಗುಂಪುಗಳ ಸಮಬಲದ ಮುಖಾಮುಖಿಯನ್ನು ಸೂಚಿಸುತ್ತದೆ. ಆದರೆ ಮೇಲೆ ಹೇಳಿದ ಯಾವ ಪ್ರಕರಣವನ್ನೂ ಆ ಅರ್ಥದಲ್ಲಿ ಗಲಭೆ ಎಂದು ಕರೆಯಲಾಗುವುದಿಲ್ಲ. ಅವೆಲ್ಲವೂ ಹಿಂದುತ್ವದ ತೋಳ್ಬಲದ ಪಡೆಗಳು, ಇನ್ನೊಂದು ಮತದ ಅಸಹಾಯಕ ಜನರ ಮೇಲೆ ಏಕಾಏಕಿ ಎರಗಿ ನಡೆಸಿದ ಹಿಂಸೆಯ ಪ್ರಕರಣಗಳು. ಆಳುವ ವರ್ಗದ ಕುಮ್ಮಕ್ಕಿನಿಂದ ಸಾಮಾನ್ಯ ಪ್ರಜೆಗಳು ಹಿಂಸೆಯ ಹಾದಿ ಹಿಡಿಯುವುದು, ಅಥವಾ ದುರ್ಬಲರ ಮೇಲೆ ದೇವರು, ದೇಶ ಇತ್ಯಾದಿ ಕಾರಣಗಳಿಗಾಗಿ ನಡೆಯುವ ಸಂಘಟಿತ ಹಿಂಸೆಗೆ ಸಮ್ಮತಿ ನೀಡುವುದು – ಇವೆಲ್ಲವೂ ದೇಶ, ಫ್ಯಾಸಿಸಂನತ್ತ ಸರಿಯುತ್ತಿರುವುದರ ಸ್ಪಷ್ಟ ಸೂಚನೆಯಾಗಿದೆ. ಇದನ್ನು ಎದುರಿಸಿ ಹಿಮ್ಮೆಟ್ಟಿಸುವ ಗುರುತರವಾದ ಜವಾಬ್ದಾರಿ, ಈಗ ದೇಶದ ಎಡ, ಪ್ರಜಾಸತ್ತಾತ್ಮಕ ಪಕ್ಷಗಳು ಮತ್ತು ಸಂಘಟನೆಗಳ ಮೇಲೆ ಇದೆ.

ಜಿ. ರಾಜಶೇಖರ
'ವಿಷ್ಣುನಂದನ', ಕೊಳಂಬೆ, ಉಡುಪಿ - ೫೭೬ ೧೦೧

# ಮುನಿಯಪ್ಪನ ಮುಳ್ಗಾಯಿ

*ಈ ಕತೆಗೆ ಪ್ರೇರಣೆ ಒಂದು ಬ್ಯಾಲೆಡ್, ಅದು ಕೊಲಂಬಿಯಾದ್ದು, ದಕ್ಷಿಣ ಅಮೆರಿಕಾದ ಸೊಗಡೆಂದರೆ ಅಸಾಮಾನ್ಯವಾದ್ದು ಎನಿಸೀತು.*

**ಕೆಂ**ಡಲಾಪುರ ಪ್ರವೇಶಿಸುವ ಮುಂಚೆ ನೀವು ದೊಡ್ ಮಾರಿಗುಡಿ, ನಾಯ್ಕನ ಕೆರೆ, ಗೂಡು ಸಾಬರ ತೋಟ, ಊರಿನ ಶ್ಮಶಾನದ ಕಾಂಪೋಂಡು – ಇವನ್ನು ದಾಟಿಯೇ ಹೋಗಬೇಕು. ಹೈವೇನಲ್ಲಿರುವ ಈ ಊರಿನ ಬಹು ಪ್ರಸಿದ್ಧ ಸ್ಥಳ ಅಂದರೆ ಕ್ರಿಷ್ಣಪ್ಪನ ಹೋಟಲು ಕಮ್ ವೈನ್ ಷಾಪು. ರಸ್ತೆಯ ಎಡಭಾಗದಲ್ಲಿ ಒಂದು ದೊಡ್ಡ ಹಳೆಯ ಮನೆ - ಮಂಗಳೂರು ಹೆಂಚು, ನಾಡಹೆಂಚು ಎರಡನ್ನೂ ಬೆರಕೆಮಾಡಿ ಹೊದಿಸಿರುವ ಮೇಲ್ಛಾವಣಿ. ಗೋಡೆಗಳು ವರ್ಷಾನುಗಟ್ಟಲೆ ಸುಣ್ಣಬಣ್ಣ ಕಾಣದೆ, 'ಬಿಸಿಲಲ್ಲಿ ಒಣಗಿ, ಮಳೆಯಲ್ಲಿ ನೆನೆದು' ಹೊರಗಿನಿಂದ ಬರುವವರಿಗೆ ತಮ್ಮ 'ಅಪಸ್ಮಾರೆ' ಪ್ರದರ್ಶಿಸುತ್ತ ಚೀಣಾ ದೇಶದ ರಾಕ್ಷಸ ಭಿತ್ತಿಯನ್ನು ಅಣಕಿಸುತ್ತಾ ನಿಂತಿದೆ! ಹಸಿಗೋಡೆಯ ಮೇಲೆ ಯಾವನೋ ಗ್ರಾಮ ಕಲಾವಿದ ಅಂಕುಡೊಂಕು ಬಣ್ಣದ ಅಕ್ಷರಗಳಲ್ಲಿ ಎಂದೋ ಬರೆದ ಜಾಹಿರಾತು : **'ಕ್ರಿಷ್ಟಪ್ಪನ ವೈನ್ ಷಾಪು'**

ಕೇವಲ ಅಕ್ಷರಗಳು ಸಾಲದೆಂಬಂತೆ ಅಕ್ಷರಗಳ ಮೇಲುಗಡೆ ಒಂದು ಬೃಹದಾಕಾರದ ಗರಿಕೆದರಿದ (ಕೋಳಿ) ಹುಂಜದ ಚಿತ್ರ - ರಕ್ತ ಸೂಸುತ್ತಿರುವ ಹೃದಯಾಕಾರದ ಕಟ್ಟೆ ಮೇಲೆ ಒಂದು ಕಾಲನ್ನು ಇಟ್ಟು ಹುಂಜ ತಲೆಎತ್ತಿ ಬೀಗುತ್ತ, ಹೋಗಿಬರುವವರನ್ನು ವಕ್ರದೃಷ್ಟಿಯಿಂದ ನೋಡುತ್ತಿದೆ. ಈ ಚಿತ್ರದ ಒಗಟನ್ನು ಯಾರೂ ಈವರೆಗೆ ಬಿಡಿಸಿಲ್ಲ.

ಮಸಿ ಹಿಡಿದ ಮನೆಯ ಬಾಗಿಲಿನಿಂದ ಒಳಹೊಕ್ಕರೆ ದೇಶೋ ವಿಶಾಲವಾದ ಅಂಗಳ – ಉದ್ದಕ್ಕೂ ಎರಡೂ ಕಡೆ ಹಜಾರಗಳು. ಅಲ್ಲಿ ಸಾಲಾಗಿ ಅವ್ಯವಸ್ಥಿತವಾಗಿ ಪೇರಿಸಿರುವ ಹಳೆಯ, ಮುರುಕು ಹರಕು, ಪೀಠೋಪಕರಣಗಳು, ಬಾಟಲಿಗಳು, ಪಾತ್ರೆಪರಡಿಗಳು, ಒಡೆದ ದೊಡ್ಡ ಪಿಂಗಾಣಿ ಜಾಡಿಗಳು, ಮನೆಯ ಹಿಂಭಾಗದಲ್ಲಿ ದೊಡ್ಡ ಹಿತ್ತಿಲು – ಅಲ್ಲಿ ಎಂಥವೋ ಮರಗಳು. ಮರಗಳ ನೆರಳಿನಲ್ಲಿ ಹಳೆಯ ಬೆಂಚು ಕುರ್ಚಿಗಳು, ೩-೪ ಎಂದೂ ಸ್ವಚ್ಛಮಾಡದ, ಅಗಲವಾದ ಮೇಜುಗಳು ! ಊರಿನ ಪಾನಪ್ರಿಯರು ಸಂಜೆ ಅಲ್ಲಿ ಜಮಾಯಿಸಿ, ಅಲ್ಲಲ್ಲಿ ಕೂತು, ಗುಂಡು ಹಾಕುತ್ತ, ಹರಟುತ್ತ ಇರುವ ದೃಶ್ಯವನ್ನು ನೀವು ದಿನನಿತ್ಯವೂ ನೋಡಬಹುದು.

ಈ ಹೊಟೇಲಿನ ನಾಮಕಾವಾಸ್ತೆ ಪ್ರೊಪ್ರೈಟರ್ – ಧಡಿಯ ಕ್ರಿಷ್ಣಪ್ಪನಾದರೂ, ವಾಸ್ತವವಾಗಿ ಎಲ್ಲ ವಹಿವಾಟು ನಡೆಸುವವಳು ಅವನ ಹೆಂಡತಿ ಫಣಿಯಮ್ಮ. ಕ್ರಿಷ್ಣಪ್ಪ ಮಹಾಕುಡುಕ, ತಲೆತಿರುಕ; ಮೈತುಂಬ ಸಾಲ-ಸೋಲ. ಮೂರು ಹೊತ್ತು ಮೂರೆಲೆ ಆಟದ ಖಯಾಲಿ. ಹೋಟಲಿನಿಂದ ಸಾಕಷ್ಟು ಆದಾಯವಿದ್ದರೂ ಅವನ ಹುಚ್ಚಾಟದಿಂದಾಗಿ ಏನೂ ಲಾಭ ಕೈಹತ್ತದೆ ಫಣಿಯಮ್ಮ ಅತಿ ಪ್ರಯಾಸದಿಂದ ಏಳುಮಕ್ಕಳ ತನ್ನ 'ಹಡಗಿನಂಥ' ಸಂಸಾರವನ್ನು ಹೇಗೋ ತೂಗಿಸುತ್ತಿದ್ದಳು. ವೈನ್ ಷಾಪಿನಲ್ಲಿ ಅವಳ ಜಾಣತನದಿಂದ ದಿನವೂ ಹೇಗೋ ಸಾವಿರಾರು ರೂಪಾಯಿನ ವ್ಯಾಪಾರ ನಡೆಯುತ್ತಿದ್ದರೂ ಗಂಡನ ಅಡ್ಡಾದಿಡ್ಡಿ ಜೀವನ ಅವಳಿಗೆ ಪ್ರತಿಕ್ಷಣದಲ್ಲೂ ಏನಾದರೂ ಸವಾಲುಗಳನ್ನು ತಂದೊಡ್ಡುತ್ತಿತ್ತು... ಗೂಳಿಯಂಥ ಗಂಡ, ಕಿತ್ತು ತಿನ್ನುವ ಮಕ್ಕಳು, ಆಗಾಗ ಒದಗುವ ಸಾಲಗಾರರ ಹಿಂಸೆ, - ಈ ವೇದನೆಗಳ ನಡುವೆ, ಇನ್ನೂ ಮೂವ್ವತ್ತು ದಾಟದ ಫಣಿಯಮ್ಮ ಐವತ್ತು ಕಳೆದ ಮುದುಕಿಯಂತಾಗಿದ್ದಳು.

''ಲೋ ಕ್ರಿಷ್ಣಪ್ಪ... ನಿಂಗೆ ಸದ್ಯದಲ್ಲೆ ಇನ್ನಾ ಒಂದು ಮಗಾ ಹುಟ್ಟೋ ಹಂಗಿದೆಯಂತಲ್ಲೋ ?'' – ಅವನ ಸ್ನೇಹಿತರ ಗೇಲಿ, ಚಿತಾವಣೆ :



**ಎಚ್. ಕೆ. ರಾಮಚಂದ್ರಮೂರ್ತಿ**

''ಅಲ್ಲ ಕಳ್ಳೇ... ಇಷ್ಟಿಷ್ಟು ಅವಸರ ಯಾಕೋ ? ಅದ್ಹೆಂಗೆ ನಿಭಾಯಿಸ್ತಿಯೋ ?'' – ಇನ್ನೊಂದು ಗುಂಪಿನವರ ಪ್ರಶ್ನೆ!

''ಅಯ್, ಬಿಡೋ - ನಾ ಏನ್ ಮಾಡ್ಲೋ... ಅತ್ತರ ಓದರೆ ಸಾಕು - ಅಷ್ಟಿಗೆ ಸುಮ್ನೆ ನನ್ನ ಉಸಿರು ತಾಕಿದರೆ ಸಾಕು ಅಕಿ ಬಸಿರಾಗಿ ಬಿಡ್ತಾಳೆ... ಎಂಗಯ್ಯ ಇಂಗಾದ್ರೆ ? ಇದ್ರಲ್ಲಿ ನಂದೇನಯ್ಯ ತ್ಯಪ್ಪು ?''

''ನಿಮ್ ಮಕಕೊಂದಿಷ್ಟು ತಥ್! ಎದ್ದೋಗಿ ಏನಾದರೂ ಕೆಲಸ ನೋಡಬಾರದೇ'' – ಅಡಿಗೆ ಮನೆಯಿಂದ ಫಣಿಯಮ್ಮನ ಗುಡುಗು, ಸಿಡಿಲು!

''ಕೆಲಸ ಏನ್ಬಂತು, ಬುಡೇ... ನೀನಿದೀಯಲ್ಲಾ... ಎಲ್ಲಾ ನೀನೇ ಮಾಡ್ಕ್ಯಂಡು ಓಗ್ತಿಯಲ್ಲಾ'' - ಕ್ರಿಷ್ಣಪ್ಪನ ಕೀರಲು ಪ್ರತಿಧ್ವನಿ, ನಗೆ. ಅವಳು ಸಿಕ್ಕಾಬಟ್ಟೆ ಬೈದರೂ ಅದು ಅವನ ಪಾಲಿಗೆ 'ನಿಂದಾಸ್ತುತಿ'!

ಮಾಗಿ ಕಾಲದಲ್ಲಿ ಒಂದು ದಿನ ಕ್ರಿಷ್ಣಪ್ಪ ಕಂಠಪೂರ್ತಿ ಗುಂಡೇರಿಸಿ ನಾಯ್ಕನ ಕೆರೆಯಲ್ಲಿ ಕಾಲು ಜಾರಿ ಬಿದ್ದು ನೀರು ಕುಡಿದ. ಅವನು ಪೂರಾ ಮುಳುಗುವಷ್ಟರಲ್ಲಿ ಅವನ ಜತೆಗಾರರು ಯಾರೋ ಅವನನ್ನು ಮೇಲಕ್ಕೆಳೆದು ಮನೆಗೆ ಸಾಗಿಸಿದರು. ತರಗೆಲೆಯಂತೆ ನಡುಗುತ್ತಿದ್ದ ಅವನಿಗೆ ಅಂದೇ ಕೆಂಡಾಮಂಡಲದ ಜ್ವರ, ಡಬಲ್ ನ್ಯೂಮೋನಿಯ : 'ಬದುಕಲ್ಲ' ಅಂದರು ಇಸ್ಮಾಯಿಲ್ ಡಾಕ್ಟರು. ಕ್ರಿಷ್ಣಪ್ಪ ಧೃತಿಗೆಡಲಿಲ್ಲ.

ಆ ಊರಿನ ಪ್ರಸಿದ್ಧ ಡೋಲು ವರದಪ್ಪ - ಸುನಾದಿ ಪಿಳ್ಳಯ್ಯ - ಅವನ ಆಪ್ತಗೆಳೆಯರು. ಮದುವೆ, ಶ್ಮಶಾನ ಯಾತ್ರೆ, ಮಾರಮ್ಮನ ಜಾತ್ರೆ - ಏನೇ ಶುಭಾಶುಭವಾದವುಗಳಲ್ಲೂ ಅವರ ಬಾಜಾಬಜಂತ್ರಿ ಇದ್ದೇ ತೀರಬೇಕು...

ಅವತ್ತು ಬೆಳಿಗ್ಗೆ ಅವರಿಬ್ಬರೂ ಹೋಟೇಲಿನಲ್ಲಿ 'ಬಿರಿಯಾನಿ' ತಿನ್ನುತ್ತಾ ಕೂತಿದ್ದರು. ಜ್ವರದ ತಾಪದಲ್ಲಿ ಹೊರಳಾಡುತ್ತಿದ್ದ ಕ್ರಿಷ್ಣಪ್ಪ ಅವರಿಬ್ಬರನ್ನು ಒಳಕ್ಕೆ ಕರೆದ.

''ವರದಣ್ಣ - ನಂಗ್ಯಾಕೋ ಇವತ್ತು ಉಸಿರು ಮೇಲಕ್ಕೆಳೀತೈತೆ. ನಿಮ್ಮ ಇಬ್ಬರ ಬಾಜಾಬಜಂತ್ರಿ ಕೇಳುವ ಅನಿಸ್ತಿದೆ... ಏನಂತೀರಿ ?'' - ಕ್ರಿಷ್ಣಪ್ಪನ ಮಾತುಗಳು ಅವ್ಯಕ್ತವಾದ 'ಪ್ರಾರ್ಥನೆ'ಯಂತಿದ್ದವು.

''ಆಗಲಣ್ಣ - ಅದ್ಕೇನಂತೆ ನೀ ಕೇಳೋದು ಎಷ್ಟೋ ನಾವು ಬಾರಿಸೋದು ಎಷ್ಟೋ?'' ಎಂದವರೇ ಇಬ್ಬರೂ ಕೆಲವೇ ನಿಮಿಷಗಳಲ್ಲಿ ವಾದ್ಯಗಳ ಸಮೇತ ಹಾಜರಾದರು.

''ಏನ್ ಬಾರಿಸಬೇಕಣ್ಣ, ಯೇಳು'' - ವರದಪ್ಪ ಕೇಳಿದ. ಅಷ್ಟರಲ್ಲಿ ಪಿಳ್ಳಯ್ಯ ಪ್ರಾರಂಭಿಸಿಯೇ ಬಿಟ್ಟ: ''ನಿನ್ನಂಥ ಸೋಮಿ ಇನ್ನಿಲ್ಲವೋ ಏಳುಮಲೆ ಸೀನಿವಾಸಾ'' – ಕ್ರಿಷ್ಣಪ್ಪನ ಫೇವರಿಟ್ ಹಾಡು! ಶಹನಾಯ್ - ಡೋಲು (ವಾದ್ಯ) ಸಂಗೀತ ಇನ್ನೂ ಮುಗಿದೇ ಇರಲಿಲ್ಲ. ಕ್ರಿಷ್ಣಪ್ಪ ''ಸಾಕು ಕಣಣ್ಣ ಹಾಡಿನ ಕೊನೇ ಭಾಗ ಬಾರಿಶಿಬಿಡು...'' ಅಂದ. ಗೋಡೆಯತ್ತ ತಿರುಗಿ ಕೊನೆಯುಸಿರೆಳೆದ.

ಮಾರನೆಯ ದಿನ ಕ್ರಿಷ್ಣಪ್ಪನ ಇನ್ನೊಬ್ಬ ಆಪ್ತ ಹೆಣದ ಗುಂಡಿಗಳನ್ನು ತೋಡುವ, ಆರು ಬೆರಳಿನ ಮುನಿಯಪ್ಪ ತನ್ನ ಗೆಳೆಯನಿಗಾಗಿ ಸೊಗಸಾದ, ಹಿತವಾದ, ೩ x ೬ ಸೈಜಿನ ಗೋರಿ ಸಿದ್ಧಪಡಿಸಿದ. ಕ್ರಿಷ್ಣಪ್ಪನನ್ನು ಅಂತಿಮವಾಗಿ ಭೂತಾಯಿ ಮಡಿಲು ಸೇರಿಸಿದ್ದಾಯಿತು. ಏತನ್ಮಧ್ಯೆ ಬಡಪಾಯಿ ಫಣಿಯಮ್ಮ (ಅವಳು ಪುನಃ ಗರ್ಭಿಣಿಯಾಗಿದ್ದದ್ದು ನಿಜ) ತನ್ನ ಏಳುಮಕ್ಕಳನ್ನು ಕಟ್ಟಿಕೊಂಡು ಜೀವನ ಯಾತ್ರೆ ಮುಂದುವರಿಸಿದ್ದಳು. ಅವಳ ಗಂಡನ ಸ್ನೇಹಿತರು ಒಬ್ಬೊಬ್ಬರೂ ತರಹೇವಾರಿ ಸಲಹೆಗಳನ್ನು, ಬುದ್ಧಿಮಾತುಗಳನ್ನು ಕೊಡುವುದರಲ್ಲಿ ಮಾತ್ರ ನಿಸ್ಸೀಮರಾಗಿದ್ದರು.

ಆದರೆ ಎಲ್ಲರಿಗಿಂತ ನಿಯತ್ತಿನ ಮನುಷ್ಯ ಅಂದರೆ ಆರು ಬೆರಳಿನ ಮುನಿಯಪ್ಪ ಒಬ್ಬನೆ. ಅವನು ಊರಿಗೆ ಅತ್ಯಗತ್ಯವಾದ ಸೇವೆಯನ್ನು ನಿಸ್ವಾರ್ಥತೆಯಿಂದ ಮಾಡುತ್ತಿದ್ದರೂ ಅವನ ಬೆನ್ನಹಿಂದೆ ಕಿಡಿಗೇಡಿಗಳು ಅವನನ್ನು 'ಭೂತಪ್ಪ, ಹೆಣ ಹೂಳೋ' – ಎಂಬಿತ್ಯಾದಿಯಾಗಿ ಗೇಲಿಮಾಡುತ್ತಿದ್ದುದೂ ಉಂಟು. ಮುನಿಯಪ್ಪ, ಕೆಲವೊಮ್ಮೆ ಅವನು ಊರಿನ ತಾಯಂದಿರಿಗೆ ಒಂದು ರೀತಿ ಬೆದರುಗೊಂಬೆಯ ಪ್ರತೀಕವಾಗುತ್ತಿದ್ದ. ಮಕ್ಕಳು ರಗಳೆ ಮಾಡಿದಾಗ ಸುಮ್ನಿರ್ತಿಯಾ ಇಲ್ವೋ... ಮಷಾಣದ ಮುನಿಯಪ್ಪ ಈಗ ಬರ್‍ತಾನೆ ನೋಡು ಎಂದು ಹೇಳಿ ಮಕ್ಕಳ ಬಾಯಿ ಮುಚ್ಚಿಸುತ್ತಿದ್ದರು. ಮುನಿಯಪ್ಪ ಕಟ್ಟುಮಸ್ತಾದ ಆಳು. ಅವನಿಗೆ ಅಷ್ಟು ದಪ್ಪ ಶರೀರವಿಲ್ಲದೆ ಹೋಗಿದ್ದರೆ ಅವನು ನಿಜವಾಗಿ ಗರಡಿ ಪೈಲ್ವಾನನಾಗಬಹುದಾಗಿತ್ತು. ದಿನಕ್ಕೆ ೬-೮ ಗಂಟೆಕಾಲ ಬಿಸಿಲಲ್ಲಿ ದುಡಿದರೂ ಅದನ್ನು ಸುಮಾರಾಗಿ 'ಶ್ವೇತವರ್ಣ'ವೆನ್ನಬಹುದಾದ ವರ್ಚಸ್ಸಿನ, ಆಕರ್ಷಕ ಮೃದುಸ್ವಭಾವದ ವ್ಯಕ್ತಿ.

ಬಹುಸಂಖ್ಯೆಯ ಸೋಮಾರಿಗಳು, ಚಾಡಿಕೋರರೇ ತುಂಬಿದ ನಮ್ಮ ಕೆಂಡಲಾಪುರದಲ್ಲಿ ಅವನ ಬಗ್ಗೆ ಇಲ್ಲಸಲ್ಲದ 'ವದಂತಿ'ಗಳ 'ಗುಲ್ಲು' ಆಗಾಗ

ಕೇಳಿಬರುತ್ತಿದ್ದವು. ಕೆಲವು ವರ್ಷಗಳ ಹಿಂದೆ ಅವನು ಸೋಮಲಾಪುರದ ಜಂಗಲಿನಲ್ಲಿ ಸಂತೆಯ ಗಾಡಿಗಳನ್ನು ಅಡ್ಡಕಟ್ಟಿ ದರೋಡೆ ಮಾಡಿದ್ದನೆಂದೂ ಅವನನ್ನು ಕೆಲಕಾಲ ಜೈಲಿನಲ್ಲಿ ಇಡಲಾಗಿತ್ತೆಂದೂ ಒಂದು 'ಕುಂಟು' ಸುದ್ದಿ ಹರಡಿತ್ತು. ಅದೆಲ್ಲಾ ಈಗ ಮರೆತ ಕಥೆಗಳು. ಅದೇನೆ ಇರಲಿ! ಇವತ್ತು ಅವನು ಊರಿನಲ್ಲಿ ಒಬ್ಬ ನಿಷ್ಠಾವಂತ ಜನಸೇವಕ, 'ಕರ್ಮಜೀವಿ'. ೮-೧೦ ವರ್ಷಗಳು ಅವನು ಮುಂಬಯಿನ ಗಿರಣಿಯಲ್ಲಿ ಕೆಲಸ ಮಾಡುತ್ತಿದ್ದ. ಈಗಷ್ಟೆ ತನ್ನ ಹುಟ್ಟೂರು – ಕೆಂಡಲಾಪುರಕ್ಕೆ ಹಿಂತಿರುಗಿದ್ದ.

ಊರಿಗೆ ಬಂದನಂತರ ಅವನಿಗೆ ತಿಳಿಯಿತು. ಶ್ಮಶಾನದ ಪಕ್ಕ ತನಗೆ ಸೇರಿದ್ದ ಜಮೀನನ್ನು ಆಕ್ರಮಿಸಿ ಶ್ಮಶಾನವನ್ನು ವಿಸ್ತಾರಗೊಳಿಸಿ ಪರಿವರ್ತಿಸಿರುವ ಸಂಗತಿ. ಅದಕ್ಕೆ ಕಾರಣ ಇಷ್ಟೆ: ಅವನು ೮-೧೦ ವರ್ಷಗಳಾದರೂ ಊರಿಗೆ ಹಿಂತಿರುಗಿರಲಿಲ್ಲವಾಗಿ ಅವನು ಮುಂಬಯಿಯಲ್ಲಿ ಸತ್ತನೆಂಬ ಸುದ್ದಿ ಹರಡಿ, ಖಚಿತವಾಗಿತ್ತು. ಅನಧಿಕೃತ ವಾಗಿ, ಅವನ ಜಮೀನನ್ನು ಸಾರ್ವಜನಿಕ ಶ್ಮಶಾನವನ್ನಾಗಿ ಮಾಡುವ 'ಹುನ್ನಾರು' ನಡೆದಿತ್ತು.




ಮುನಿಯಪ್ಪನಿಗೆ ವಿಷಯ ತಿಳಿದಾಕ್ಷಣ ಅವನು ತನ್ನ ಹಕ್ಕು ಚಲಾಯಿಸಲು ಕೋರ್ಟಿಗೆ ಹೋಗುವುದಾಗಿ ಬೆದರಿಕೆ ಹಾಕಿದ. ಆಗ ಊರಿನ ಪಂಚಾಯತಿದಾರರು ಅದನ್ನು ಅವನು ತಮಗೇ ಮಾರಬೇಕೆಂದು ತಾಕೀತು ಮಾಡಿದರು. ಮುನಿಯಪ್ಪ ಬಿಲ್‌ಕುಲ್ ಒಪ್ಪಲಿಲ್ಲ. ಆದರೆ ಅಂತಿಮವಾಗಿ ಅದನ್ನು ಸಾರ್ವಜನಿಕರಿಗೆ ಕೊಡಲು ಒಪ್ಪಿ ಒಂದು ಷರತ್ತು ಹಾಕಿದ – ಹೆಣದ ಗುಂಡಿಗಳನ್ನು ತೋಡುವ ಕೆಲಸವನ್ನು ತನಗೆ ಖಾಯಮ್ಮಾಗಿ ಕೊಡಬೇಕೆಂದೂ, ತಾನು ಸ್ಮಶಾನದ ಗೋಡೆ ಪಕ್ಕದಲ್ಲಿ ವಾಸವಾಗಿರಲು ಒಂದು ಜೋಪಡಿ ಕಟ್ಟಿಕೊಳ್ಳುವುದಾಗಿಯೂ ಹೇಳಿದ. ಪಂಚಾಯತಿದಾರರು ಸಂತೋಷವಾಗಿ ಒಪ್ಪಿದರು. ಸತ್ತವರಾಗಲಿ, ಬದುಕಿರುವವರಾಗಲಿ ಯಾರೂ ಆಕ್ಷೇಪಿಸದಂತೆ ಶ್ಮಶಾನದ ಗೋರಿಗಳನ್ನು ಅಚ್ಚುಕಟ್ಟಾಗಿಟ್ಟು ಅಲ್ಲಿ ಸುತ್ತಲೂ ಸುವಾಸನೆಯ ಹೂ ಗಿಡಗಳನ್ನು ಬೆಳೆಸಿ ಉದ್ಯಾನವನದಂತೆ ಒಪ್ಪ ಮಾಡಿದ.

ಹೆಂಡತಿ ಮಕ್ಕಳು ಯಾರೂ ಇಲ್ಲದ ಮುನಿಯಪ್ಪನ ಬಗ್ಗೆ ಊರಿನವರ, ಅದರಲ್ಲೂ ಮೇಲುವರ್ಗ ಎಂದು ಹೇಳಿಕೊಂಡವರ ಒಂದು ಮುಖ್ಯ ಆಕ್ಷೇಪಣೆ : ಅವನು ಎಲ್ಲರ ಮುಂದೆಯೂ, ರಾಜಾರೋಷವಾಗಿ 'ನನಗೆ ದೇವರುಗೀವರಲ್ಲಿ ನಂಬಿಕೆ ಇಲ್ಲ' 'ನಾನು ಗುಡಿಗೆ ಹೋಗುವುದಿರಲಿ, ಗುಡಿ ಮುಂದೆ ಸುಳಿಯೋದೂ ಇಲ್ಲ' ಎಂದು ಒದರುತ್ತಿದ್ದ. ಮಾರಮ್ಮನ ಜಾತ್ರೆಯೆಂದರೆ ಆ ಇಡೀ ಒಳಾಡಿಯಲ್ಲಿ ಬಹುದೊಡ್ಡ ಉತ್ಸವ ಸಮಾರಂಭ. ಮುನಿಯಪ್ಪ ಅಷ್ಟೇನೂ ಸ್ಥಿತಿವಂತನಲ್ಲದಿದ್ದರೂ ಜಾತ್ರೆ ನಡೆಸುವ ಪುಢಾರಿಗಳು ಬಂದು ಕೇಳಿದಾಗ ಎಂದೂ ತಪ್ಪದೆ ತನಗೆ ತೋಚಿದಷ್ಟು ವಂತಿಗೆ ಕೊಟ್ಟು ಕೈ ತೊಳಕೋತಿದ್ದ. ಆದರೆ ಗುಡಿ ಕಡೆ ಮಾತ್ರ ಸುಳಿಯುತ್ತಿರಲಿಲ್ಲ. ಆದರೂ ಅವನನ್ನು ಮುಕ್ತವಾಗಿ ಮೆಚ್ಚಿಕೊಂಡವರೇ ವಿರಳ.

ಆದರೆ ಊರಿನ ಯಾರ ಮಾತಿಗೂ ಮುನಿಯಪ್ಪ ತಲೆಕೆಡಿಸಿಕೊಳ್ಳುತ್ತಿರಲಿಲ್ಲ. ಯಥಾಪ್ರಕಾರ ಅವನು ಕ್ರಿಷ್ಣಪ್ಪನ ಹೋಟೆಲು 'ರಮ್' ವೈನ್ ಷಾಪಿಗೆ ಹೋಗಿ ಸಂಜೆ ಹೊತ್ತು ಸ್ವಲ್ಪ ಗುಂಡುಹಾಕಿ ಬರುವುದು ಅವನ ಮಾಮೂಲಿ ಕಾರ್ಯಕ್ರಮ. ಅವನು ಬಂದಾಗ ಅವನ ಸುತ್ತ ಒಂದು ಸಣ್ಣ ಗುಂಪು ಸೇರಿ ಹರಟೆಕೊಚ್ಚುವ ವಾಡಿಕೆ. ಅವನ ಬಗ್ಗೆ ಪರೋಕ್ಷವಾಗಿ ಏನೇ ಹೇಳಿದರೂ ಅವನು ಮಾತನಾಡುವಾಗ ಎಲ್ಲರೂ ಗಮನವಿಟ್ಟು ಆಲಿಸುತ್ತಿದ್ದರು. ಎಷ್ಟಾದರೂ 'ದೇಶ ತಿರುಗಿ' ಬಂದವನಲ್ಲವೇ? ಅವನು ಆಗಾಗ ಹೇಳುತ್ತಿದ್ದ 'ಕತೆ'ಗಳು ಕೇಳುವವರಿಗೆ ಆಪ್ಯಾಯಮಾನವಾಗಿರುತ್ತಿದ್ದವು. ಅವನ ಶ್ರೋತೃ ಸಮೂಹದಲ್ಲಿ ಕಲ್ಲಿನ ಕೆಲಸದ ಹೈದರ್, ಮರ-ಮುಟ್ಟು ಮಾರುವ ರಾಮಸಿಂಗು, ಹಿಂದೆಂದೋ ಕುಲುಮೆ ಕೆಲಸದಲ್ಲಿದ್ದು 'ಪಾಪರ್', ಆದ ಪರಮೇಶಿ ಎಷ್ಟೋ ವರ್ಷಗಳ ಹಿಂದೆ ಪಿಂಚಣಿ ಪಡೆದ, ಆದರೆ ಕುಡಿತದ ಚಟ ಇನ್ನೂ ಬಿಡದ ಮೇಷ್ಟು, ಸಿವಂಗಿ ಸಿವಯ್ಯನೋರು ಇವರೆಲ್ಲರಿಗೂ ಮುನಿಯಪ್ಪನ ಮಾತು, 'ಕತೆ' ಅಂದರೆ ಪ್ರಾಣ.

ಈ ಗುಂಪಿನ ಹಲವರಿಗೆ ತಿಳಿಯದ ವಿಷಯಗಳನ್ನು ಮುನಿಯಪ್ಪ ಅನಾಯಾಸವಾಗಿ ಬಿಡಿಸಿ ವಿವರಿಸುತ್ತಿದ್ದ: ಎಲೆಕ್ಟ್ರಿಸಿಟಿ ದೀಪಗಳ ರಿಪೇರಿ, ಹೊಲಗಳಲ್ಲಿ ಬಿತ್ತನೆ ಕೆಲಸ, ಎತ್ತು-ದನ-ಕರುಗಳಿಗೆ ರೋಗ ಬಂದಾಗ ಮಾಡಬೇಕಾದ ಇಲಾಜು, ಮಕ್ಕಳಿಗೆ ಶೀತದ ಜ್ವರ, ಮಲೇರಿಯ 'ಕೀವರ್' ಬಂದಾಗ, ಬಾಲಗ್ರಹ ಬಂದಾಗ ಕೈಗೊಳ್ಳಬೇಕಾದ ಔಷಧೋಪಚಾರಗಳು – ಹೀಗೆ ಅವನಿಗೆ ತಿಳಿಯದ ವಿಷಯಗಳಿರಲಿಲ್ಲ. ಊರಿನ ಯಾರೇ ಆಗಲಿ, ಎಷ್ಟು ಹೊತ್ತಿನಲ್ಲಾದರೂ, ಮುನಿಯಪ್ಪನ ನೆರವು ಬೇಡಿದರೆ ಕ್ಷಣಾರ್ಧದಲ್ಲಿ ಅವನು ಅಲ್ಲಿಗೆ ಧಾವಿಸಿ ತನ್ನ 'ವಿಶೇಷ ಜ್ಞಾನ'ದ ಲಾಭವನ್ನವರಿಗೆ ದೊರಕಿಸುತ್ತಿದ್ದ.

ಒಂದು ಅರ್ಥದಲ್ಲಿ, 'ಕರ್ಮಯೋಗಿ'ಯಂತಿದ್ದ ಮುನಿಯಪ್ಪನನ್ನು ಊರಿನಲ್ಲಿ ದ್ವೇಷಿಸುವವರಿರಲಿಲ್ಲ ವೆಂದಲ್ಲ – ಅನುಕೂಲಸ್ಥರೆನಿಸಿಕೊಂಡ ಹಲವರಿಗೆ ಅವನನ್ನು ಕಂಡರೆ ತಾತ್ಸಾರ, ಗೇಲಿ, ಲುಚ್ಚಾ ಮಾತುಗಳು ಆಗಾಗ ಅಲ್ಲಲ್ಲಿ ಕೇಳಿಬರುತ್ತಿದ್ದವು. ಆದರೆ ಕೆಂಡಲಾಪುರದ ಹೆಲ್ತ್ ಸೆಂಟರ್‌ನಲ್ಲಿದ್ದ ಏಕೈಕ ಯುವ ವೈದ್ಯ - ಡಾ॥ ರಮೇಶನಿಗೆ ಮುನಿಯಪ್ಪನ ಬಗ್ಗೆ ಸ್ವಲ್ಪ ಅಭಿಮಾನವಿತ್ತು. ಆಗಾಗ 'ಶವಪರೀಕ್ಷೆ'ಗೆ ಬರುತ್ತಿದ್ದ ಹೆಣಗಳ 'ಡಿಸೆಕ್ಷನ್' ಮಾಡುವಾಗ ವೈದ್ಯರಿಗೆ ಮುನಿಯಪ್ಪ ಸಹಾಯಕನಾಗಿ ಕೆಲಸ ಮಾಡುವ ವಾಡಿಕೆ. ಅದರಲ್ಲಿ ಅವನಿಗೆ ಯಾವ ಲಾಭದ ದೃಷ್ಟಿಯೂ ಇರಲಿಲ್ಲ. ಆ ಸಮಯದಲ್ಲಿ ಊರಿನ ಪುಂಡಪೋಕರಿಗಳಾಗಲಿ, ಮನಸ್ವಿ ಅವರಿವರನ್ನು ಟೀಕಿಸುವ ಹೇಡಿ-ಹರಟೆ ಮಲ್ಲರಾಗಲಿ ಆಸ್ಪತ್ರೆಯ ಬಳಿ ಸುಳಿಯುತ್ತಿರಲಿಲ್ಲ – ಅವರು ಹೆಣಕೊಯ್ಯುವ ದೃಶ್ಯವೆಂದರೆ ಹೆದರಿ ಹೈರಾಣಾಗುತ್ತಿದ್ದರು. ಅದರ ಹರಟೆ ಮಾತಿಗೆ ಮುನಿಯಪ್ಪ ಎಂದೂ 'ಕೇರ್' ಮಾಡಿದವನಲ್ಲ.

ಅವನಿಗೆ ಕ್ರಿಷ್ಣಪ್ಪನ ಅಂಗಡಿಯಲ್ಲಿ ಸಂಜೆ ವೇಳೆ ಸೇರುತ್ತಿದ್ದ ಗುಂಪಿನ ನಡುವೆ ಕೂತು ಲೋಕಾಭಿರಾಮದ ಮಾತನಾಡುವುದೆಂದರೆ ಆಪ್ಯಾಯಮಾನದ ಸಂಗತಿ. ಅನೇಕ ವೇಳೆ ಅವನು ಅಲ್ಲಿ ಮಾತನಾಡುವಾಗ ಟಂಕಿಸುತ್ತಿದ್ದ ವಿಚಿತ್ರ ಪದಪ್ರಯೋಗಗಳು, ಶಬ್ದಗುಚ್ಛಗಳು ಜಾಣ್ನುಡಿಗಳಾಗಿ ನಾಣ್ಣುಡಿಗಳಾಗಿ ಊರಿನ ಹಲವರ ದಿನನಿತ್ಯದ ಶಬ್ದಭಂಡಾರಕ್ಕೆ ಸೇರಿ ಹೋಗಿದ್ದವು. 'ಮನುಷ್ಯ ಅಂದ್ರೆ ಏನಂತ ತಿಳಿಕಂಡೀರಿ?' ಅವ್ರು ಹುಟ್ತಾರೆ – ಯಾಕಂದರೆ ಅದು ಭಗವಂತನ ನೇಮ... ಗಿಡ-ಮರಗಳು ಎಂಗೆ ಕೆಂಪು ಹೂವ, ಹಳದಿ ಹೂವ, ನೀಲಿ ಹೂವ ಬಿಡ್ತಾವೋ ಅಂಗೇ ನರಮನುಷ್ಯರಲ್ಲಿ ಒಳ್ಳೆಯವ್ರು, ಕುಡುಕರು, ಅಲ್ಕಾ ನನ್ ಮಕ್ಳು, ಪೋಲಿ ಸೂಳೆ ಮಗ್ನಾವ್ರ ಉಟ್ತಾವೋ ಅಂಗೇ ಅದು - ತಿಳಿತೇನ್ರಯ್ಯಾ? – ಎಂದವನೇ ಲೋಟಕ್ಕೆ ಒಂದಿಷ್ಟು ನೀರು ಬಗ್ಗಿಸ್ಕಂಡು ಅದರ ತುಂಬ ಗುಂಡು ಬೆರಸಿ 'ಸ್ವಾಮಿ, ಬೆಟ್ಟದ ರಂಗಪ್ಪ ನೀನೇ ಕಾಪಾಡೋ ...' ಎಂದು ಗಟಗಟನೆ ಹೀರಿ ಲೋಟ ಕೆಳಗಿಟ್ಟು ಒಂದು ಸುತ್ತು ಸಭೆಯನ್ನು ವೀಕ್ಷಿಸಿ ''ನಾ ಏನ್ ಏಳ್ತಿತ್ತಿದ್ದೇ ಅಂದರೆ...'' ಎಂದು ತಡವರಿಸಿದಾಗ ಗುಂಪು ಗೊಳ್ಳೆಂದು ನಕ್ಕು ಕೇರಾಡುತ್ತಿತ್ತು!

ಮಾತಿಗೆ ಮಾತು ಜೋಡಿಸಿ ಚಾಟಿ ಬೀಸುವುದರಲ್ಲಿ ಮುನಿಯಪ್ಪ ಎತ್ತಿದ ಕೈ. ತನ್ನ ತಾನೊಬ್ಬ ಮನ್ಮಥನೆಂದೇ ಭಾವಿಸಿದ್ದ ಮೂಲೆ ಮನೆ ಹಣುಮಂತಪ್ಪ ಒಂದು ದಿನ ತನ್ನ ಪುರುಷತ್ವದ ಬಗ್ಗೆ ಬಡಾಯಿ ಕೊಚ್ಚುತ್ತಾ 'ತನಗೆ ಮೂರು ನಾಲ್ಕು ಊರುಗಳಲ್ಲಿ ಬೇರೆ ಬೇರೆ 'ರಖಾವು'ಗಳಲ್ಲಿ ನಾಲ್ಕೈದು ಮಕ್ಕಳಿವೆ'ಯೆಂದ. ಮುನಿಯಪ್ಪ ''ವಸಿ ಉಸಾರಾಗಿ ಇಚಾರ ಮಾಡಕಳಪ್ಪ - ಅವು ನಿನ್ನಾವೋ ಅಥವಾ ಬೇರೆ ಇನ್ ಯಾರಿಗಾದರೂ...'' ಸಭಿಕರು ಬಿದ್ದು ಬಿದ್ದು ನೆಗಾಡಿದರು, ಆದರೆ ತನ್ನದೇ 'ಹೆಣ್ಣು ಬೇಟೆ'ಯ ಬಗ್ಗೆ ಅವನು ಘನಗಂಭೀರವಾಗಿ ಮಾತನಾಡುವಾಗ ಅವನ ಶ್ರೋತೃಗಳು ಬೆಕ್ಕಸಬೆರಗಾಗಿ ಕೇಳುತ್ತ ತಲೆತೂಗುತ್ತಿದ್ದರು!

ಏತನ್ಮಧ್ಯೆ ದಿವಂಗತ ಕ್ರಿಷ್ಣಪ್ಪನ ಪತ್ನಿ ಫಣಿಯಮ್ಮ ತನ್ನ ಎಂಟನೆಯ ಮಗುವಿಗೆ ಜನ್ಮವಿತ್ತಳು. ಹೆರಿಗೆಯಾದ ಎರಡೇ ದಿನಕ್ಕೆ 'ಹಸಿ ಮೈ' ಬಾಣಂತಿ ಹಾಸಿಗೆ ಬಿಟ್ಟು ಎದ್ದು ಏನೂ ಆಗಿಲ್ಲದವಳಂತೆ ಮನೆ ಕೆಲಸಗಳಲ್ಲಿ ಎಂದಿನಂತೆ ನಿರತಳಾದಳು. ದುರ್ದೈವದಿಂದ ಅವತ್ತೆ ರಾತ್ರೆ ಅವಳಿಗೆ ಕೆಂಡಾಮಂಡಲದ ಜ್ವರ ಕಾಣಿಸಿಕೊಂಡಿತು. ಬಾಣಂತಿಗೆ ಬಂದ ವಿಷಮಶೀತ ಜ್ವರ ಬಡಪಟ್ಟಿಗೆ ಗುಣವಾಗದು ಎಂದು ಊರೆಲ್ಲಾ ಲೊಚಗುಟ್ಟಿತು : ಮಾರನೆ ಬೆಳಗಿನ ಝಾವವೇ ಫಣಿಯಮ್ಮ ಶಿವನಪಾದ ಸೇರಿದಳು. ಯದ್ವಾತದ್ವಾ

ಸಾಲದ ಹೊರೆ ಹೊತ್ತಿದ್ದ ಹೋಟೆಲು-ವೈನ್ ಷಾಪು ಸಾಲಗಾರರ ವಶವಾಯಿತು. ಅವಳ ಸಂಸಾರ ಮೂರಾಬಟ್ಟೆಯಾಗಿ ಎಂಟು ಮಕ್ಕಳೂ ಬೀದಿ ಪಾಲಾದವು.

ಊರಿನ ಮುಖಂಡ ವೆಂಕಟಶಾಮಯ್ಯನಿಗೆ ವಿಷಯ ತಿಳಿದು ''ಛೇ... ಛೇ... ಶಿವ ಶಿವ! ಆ ಮಕ್ಕಳಿಗೆ ಏನಾದರೂ ನಮ್ಮ ಕೈಲಾದ್ದನ್ನು ಮಾಡಬೇಕು'' ಎಂದು ಉದ್ಗಾರ ತೆಗೆದರು. ಪುರೋಹಿತ ರಾಮಾಚಾರ್ರು ಮೃದು ಮಧುರ ಧ್ವನಿಯಲ್ಲಿ, ಆಕಾಶದತ್ತ ನೋಡುತ್ತ ''ಛೆ... ಛೆ... ಮುಖ್ಯಪ್ರಾಣಾ! ಎಂಥ ಅನ್ಯಾಯ! ಹೌದೌದು... ಆ ಅನಾಥ ಶಿಶುಗಳಿಗೆ ಊರೆಲ್ಲ ಸೇರಿ ಏನಾದರೂ ಅಗತ್ಯ ಪರಿಹಾರ ಒದಗಿಸಲೇಬೇಕು'' ಎಂದು ಎರಡು ಚಿಟಿಕೆ ನಶ್ಯವನ್ನು ನಾಸಿಕಾಗ್ರಗಳಿಗೆ ಒದಗಿಸಿ, 'ಝುಯ್ಯ್' ಎಂದು ಗಾಳಿಬಿಟ್ಟರು! ಶ್ಯಾನುಭೋಗ ರಾಮಣ್ಣ ''ಹೌದಪ್ಪ... ಇದು ಊರಿನ ಸಮಾಜದ ಎಲ್ಲರ ಆದ್ಯಕರ್ತವ್ಯ...'' ಎಂದು ಅರೆಬರೆ ಸಂಸ್ಕೃತ ಬೆರೆತ ಭಾಷೆಯಲ್ಲಿ ಒಂದು ಭಾಷಣವನ್ನೇ ಬಿಗಿದರು.

ಅಂಗಡಿ ಸಾಹುಕಾರಿ ನಿಂಗಪ್ಪ ''ಹೌದ್ರಿ... ದಿಕ್ಕುದೆಸೆ ಇಲ್ಲದ ಬಡಮುಂಡೇವುಕ್ಕೆ ಏನಾದರೂ ಮಾಡ್ಲೇ ಬೇಕು'' ಎಂದರು. ಆದರೆ ಯಾರೊಬ್ಬರೂ ಕಿರುಬೆರಳೆತ್ತಿ ದಿಕ್ಕಿಲ್ಲದ ಸಂಸಾರಕ್ಕೆ ನಿಜವಾಗಿ ಏನೂ ಸಹಾಯ ಮಾಡಲಿಲ್ಲ, ತೆಪ್ಪಗೆ, ತಣ್ಣಗೆ, ಅವರವರ ಮನೆ ಸೇರಿಕೊಂಡರು...

ಕೆಲವು ವಾರಗಳು ಕಳೆದವು. ಫಣಿಯಮ್ಮನ ಹಿರಿಯ ಮಗಳು ಪೋಸ್ಟ್ ಮಾಸ್ಟರ್ ಜವರಯ್ಯನ ಮನೆಯಲ್ಲಿ ದಿನಗೂಲಿ ಕೆಲಸಕ್ಕೆ ಸೇರಿಕೊಂಡಳು. ಜವರಯ್ಯನ ಹೆಂಡತಿ ಗಂಡನ ಬಲವಂತಕ್ಕೆ ಫಣಿಯಮ್ಮನ ಎಳೆಯ ಮಗುವನ್ನು ಒಂದೆರಡು ದಿನ ನೋಡಿಕೊಂಡಳು.

ಉಳಿದ ಮಕ್ಕಳು ಬೀದಿಯಲ್ಲಿ ಅಲೆದಾಡುತ್ತ ಅವರಿವರ ಮುಂದೆ ಕೈ ಒಡ್ಡಿ ಭಿಕ್ಷೆ ಬೇಡುತ್ತಿದ್ದವು.

ಒಂದು ದಿನ ಬೆಳಗ್ಗೆ ಮುನಿಯಪ್ಪ ಊರೊಳಕ್ಕೆ ಬಂದ. ಒಂದು ಕೈಗಾಡಿಯಲ್ಲಿ ಆರು ಮಕ್ಕಳನ್ನು ತುಂಬಿಕೊಂಡು, ಎಳೆಮಗುವನ್ನು ಕಂಕುಳಲ್ಲಿ ಇರುಕಿಕೊಂಡು ಹೊರಟ. ಊರ ಮುಂದಿನ ಸಾಬರ ಅಂಗಡಿಯಲ್ಲಿ ಒಂದು 'ಫೀಡಿಂಗ್ ಬಾಟ್ಲು' ಖರೀದಿಸಿ, ಅನಾಥ ಮಕ್ಕಳ ಮೆರವಣಿಗೆಯನ್ನು ಶ್ಮಶಾನದಲ್ಲಿನ ತನ್ನ ಗುಡಿಸಿಲಿಗೆ ಕರೆದೊಯ್ದ.

''ಇವೆಲ್ಲಾ ಬರಿಯ ಬೂಟಾಟಿಕೆ...'' ಅಂದ ಮುನಿಶಾಮಯ್ಯ.

''ಶುದ್ಧ ಕಳ್ಳ ಕಣ್ರಿ... ಏನೋ ಆವುಟ ತೆಗೆದಿದಾನೆ, ಅಷ್ಟೆ'' – ಆಚಾರ್ರ ಅಮೃತವಾಣಿ. ಸಾಹುಕಾರ ನಿಂಗಪ್ಪ ತನ್ನ ಕೈ ಬೆರಳುಗಳನ್ನು ನಾಟಕೀಯವಾಗಿ ತಿರುಗಿಸುತ್ತಾ ''ಅಯ್ಯೋ ಹಾಗೇ ನೋಡ್ತಾ ಇರಿ... ಇನ್ನೆರಡು ದಿನ ಕಳೆದರೆ ಮಕ್ಕಳ್ನೆಲ್ಲಾ ಬೀದಿಗೆ ತಳ್ತಾನೆ'' ಎಂದು ತನ್ನ ಅಪಾರ ವ್ಯವಹಾರ ಜ್ಞಾನವನ್ನು ಪ್ರದರ್ಶಿಸಿದ.

ಆದರೆ ಮುನಿಯಪ್ಪ ಮಕ್ಕಳನ್ನು ಇನ್ನೂ ಬೀದಿಗೆ ತಳ್ಳಿಲ್ಲ... ಚೆನ್ನಾಗಿ ಸಾಕುತ್ತಿದ್ದಾನೆ... ಆದರೆ ಅಷ್ಟೊಂದು ದೊಡ್ಡ ಸಂಸಾರ ನಿಭಾಯಿಸುವುದು ಅವನಿಗೆ ಸುಲಭವಾಗಿಲ್ಲ - ಕುಡಿಯುವುದನ್ನು ಒಮ್ಮೆಲೇ ನಿಲ್ಲಿಸಿದ. ಶ್ಮಶಾನದಲ್ಲಿ ಎಲ್ಲೆಲ್ಲಿ ಖಾಲಿ ಜಾಗವಿದೆಯೋ ಅಲ್ಲಿ ತರಕಾರಿ ಗಿಡಗಳನ್ನು ಬೆಳೆಸಿದ, ಎಲ್ಲಿಂದಲೋ ತಂದ ಬೀಜಗಳನ್ನು ಬಿತ್ತಿ ಮುಳ್ಗಾಯಿ* ಗಿಡಗಳನ್ನು ಎಬ್ಬಿಸಿದ. ಗಿಡಗಳು ಸೊಂಪಾಗಿ ಬೆಳೆದು ಹೇರಳವಾಗಿ ಕಾಯಿಬಿಟ್ಟವು. ಊರಿನಲ್ಲಿ ತರಕಾರಿಗೆ ಭಾರಿ ಡಿಮ್ಯಾಂಡಿದ್ದುದರಿಂದ ಅವನ ಕೈಯಲ್ಲಿ ಸಾಕಷ್ಟು ಹಣ ಶೇಖರವಾಯಿತು - ಮುನಿಯಪ್ಪನ ಮುಳ್ಗಾಯಿ ಆ ಒಳಾಡಿಯಲ್ಲೆಲ್ಲಾ ಪ್ರಸಿದ್ಧವಾಗಿ ಅವನು ಅದರ ಮಾರಾಟಕ್ಕೆ ೪-೫ ಮಂದಿ ಏಜಂಟರನ್ನು ನೇಮಿಸಬೇಕಾಯಿತು. ಆಚಾರ್ರ ಮನೆಯವರಿಗಂತೂ ಮುನಿಯಪ್ಪನ ಮುಳ್ಗಾಯಿ ಬಹುಪ್ರಿಯವಾಯಿತು - 'ಇದು ವಾದಿರಾಜ ಗುಳ್ಳದ ಜಾತಿಯದೇ ಇರಬೇಕು... ಆಹಾ... ಘನವಾಗಿದೆ!' ಎಂದು ಹಾಡಿ ಹೊಗಳಿದರು. ಅವರ ಹಾಗೆಯೇ ಸಂತೆಯಿಂದ ಮುಳ್ಗಾಯಿ ತಂದು ತಿನ್ನುತ್ತಿದ್ದ ಊರಿನ ಹಲವರಿಗೆ ಅದು ತಮ್ಮ ಪಿತೃಪಿತಾಮಹ, ನಂಟರಿಷ್ಟರ ದೇಹಾವಶೇಷಗಳಿಂದ ಉದ್ಭವಿಸಿದ ಸ್ವಾದಿಷ್ಟ ಫಲ ಎಂದು ತಿಳಿದೇ ಇರಲಿಲ್ಲ...

(* ತೊಟ್ಟಿನ ಸುತ್ತ ಮುಳ್ಳುಗಳಿರುವ ಒಂದು ಜಾತಿ ಗುಂಡು ಬದನೆಕಾಯಿ.)

**ಎಚ್. ಕೆ. ರಾಮಚಂದ್ರಮೂರ್ತಿ**
ನಂ. ೧೦೨, ಶರಾವತಿ ಪ್ಯಾಲೇಸ್, ೩ನೇ ಕ್ರಾಸ್, ಸಿ.ಆರ್. ಲೇಔಟ್
ಜೆ. ಪಿ. ನಗರ ೧ನೇ ಫೇಸ್, ಬೆಂಗಳೂರು - ೫೬೦ ೦೭೮

# ವಸ್ತುಗತಿತತ್ವದ ಅಧ್ಯಯನ

ವಿ. ಚಂದ್ರಶೇಖರ ನಂಗಲಿ

ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರದಲ್ಲಿ ಯಾವ ಬಗೆಯ ಚಿಂತನೆಯನ್ನು 'ಡಯಲೆಕ್ಟಿಕಲ್ ಮೆಟೀರಿಯಲಿಸಂ' ಎಂದು ಕರೆಯುತ್ತಾರೋ ಅದನ್ನೇ ಕನ್ನಡದಲ್ಲಿ 'ವಸ್ತುಗತಿತತ್ವದ ಅಧ್ಯಯನ'ವೆಂದು ಕರೆದಿದ್ದೇನೆ. ಈ ದಿಸೆಯಲ್ಲಿ ನನ್ನ ಎರಡು ವಿಮರ್ಶಾಕೃತಿಗಳಾದ ೧. 'ನಾ ನಿಮ್ಮೊಳಗು' (೨೦೦೨) : ಅಲ್ಲಮಪ್ರಭು ವಚನಗಳ ವಸ್ತುಗತಿತತ್ವದ ಅಧ್ಯಯನವಾಗಿದ್ದರೆ, ೨. 'ಆಲಿಸಯ್ಯ ಮಲೆಯ ಕವಿ' (೨೦೦೫) : ಕುವೆಂಪು ಸಮಗ್ರ ಸಾಹಿತ್ಯದ ವಸ್ತುಗತಿತತ್ವದ ಅಧ್ಯಯನವಾಗಿದೆ. ಮೇಲಿನ ಎರಡೂ ಕೃತಿಗಳಲ್ಲಿ ವಸ್ತುಗತಿತತ್ವದ ಅಧ್ಯಯನವೆಂದರೆ ಏನು ? ಎಂಬುದನ್ನು ಸೈದ್ಧಾಂತಿಕವಾಗಿ ವಿವರಿಸುವ ಸಾಹಸಕ್ಕೆ ಕೈಹಾಕದೆ, ಈ ಚಿಂತನಾಕ್ರಮದ ಆನ್ವಯಿಕ ನೆಲೆಗಳನ್ನು ಸ್ಪಷ್ಟೀಕರಿಸಿದ್ದೇನೆ. ನನ್ನ ಬರಹಗಳನ್ನು ಓದಿದವರು 'ವಸ್ತುಗತಿತತ್ವದ ಅಧ್ಯಯನ'ವೆಂದರೇನು ? ಎಂದು ನನ್ನನ್ನು ಪ್ರಶ್ನಿಸಿದ್ದಾರೆ. ಈ ಕುರಿತು ಕನ್ನಡದಲ್ಲಿ ಯಾವೊಂದು ಲೇಖನವೂ ಪ್ರಕಟವಾಗಿರುವಂತೆ ತೋರುವುದಿಲ್ಲ, ಪ್ರಸ್ತುತ, ವಸ್ತುಗತಿತತ್ವದ ಅಧ್ಯಯನವನ್ನು ನಾನು ಓದಿಕೊಂಡಂತೆ ವಿವರಿಸುವುದಕ್ಕೆ ಬದಲು, ತಿಂದ ಅನ್ನವು ಜೀರ್ಣವಾಗಿ ರಕ್ತಗತವಾಗುವ ರೀತಿಯಲ್ಲೆ ನಾನು ಅರ್ಥಮಾಡಿಕೊಂಡಂತೆ ನನ್ನದೇ ಆದ ಶೈಲಿಯಲ್ಲಿ ವಿವರಿಸುವ ಸಾಹಸ ಮಾಡುತ್ತೇನೆ.

'ವಸ್ತು' ಎಂದರೇನು ? ಈ ಪ್ರಶ್ನೆಗೆ ಉತ್ತರ ಕೊಡುವುದು ಕಷ್ಟ! ಏಕೆಂದರೆ, 'ಒಂದು ಶಬ್ದಕ್ಕೆ ಒಂದು ಅರ್ಥ' ಎಂಬ ಸಮೀಕರಣ ದೃಷ್ಟಿಗೆ ಒಗ್ಗಿಹೋದವರಿಗೆ 'ವಸ್ತು'ವಿನ ವಿರಾಟ್ ಸ್ವರೂಪದ ದರ್ಶನ ಸಾಧ್ಯವಿಲ್ಲ, ಇತ್ತೀಚೆಗೆ, ಮಾಧ್ಯಮಗಳಲ್ಲಿ ಹೆಸರು ಮಾಡಿದ ಹಿಗ್ಸ್ ಬೋಸಾನ್ ಕಣಗಳಿಂದ ಹಿಡಿದು ಬ್ರಹ್ಮಾಂಡದವರೆಗೆ ರೂಪುಗೊಂಡ ಜಗತ್ತೆಲ್ಲವನ್ನೂ 'ವಸ್ತು'ವೆಂದೇ ಕರೆಯಬಹುದು. ಸಕಲ ಚರಾಚರ ಜೀವರಾಶಿಯೆಲ್ಲವೂ 'ವಸ್ತು' ವ್ಯಾಪ್ತಿಗೊಳಪಡುತ್ತದೆ. ಕಣ್ಣಿಗೆ ಕಾಣುವ ಗುಬ್ಬಚ್ಚಿ, ಕಾಗೆಗಳು ಪ್ರತ್ಯಕ್ಷ ವಸ್ತುಗಳಾಗಿದ್ದರೆ ಕಣ್ಣಿಗೆ ಕಾಣದ ಗಂಡಭೇರುಂಡ, ಫೀನಿಕ್ಸ್ ಪಕ್ಷಿಗಳು ಕಾಲ್ಪನಿಕ ವಸ್ತುಗಳಾಗಿವೆ. ವಸ್ತುವಿನ ಜೊತೆಗೆ 'ಪರವಸ್ತು' ಎಂಬ ಮಾತಿದೆ. ಅಲ್ಲಮಪ್ರಭುವಿನ ಈ ವಚನವನ್ನು ಪರಿಭಾವಿಸಿರಿ :

*ಶ್ರುತಿಯ ನಂಬದಿರೊ ! ಶ್ರುತಿಯ ನಂಬದಿರೋ !*
*.................................................*
*ವಸ್ತು ಹೃದಯದಲುಂಟೆಂದು ನೆನೆಯದಿರೋ !*
*ವಸ್ತು ಭ್ರೂಮಧ್ಯದಲುಂಟೆಂದು ಭ್ರಮಿಸದಿರೋ !*
*ವಸ್ತು ಬ್ರಹ್ಮರಂಧ್ರದಲುಂಟೆಂದು ಹೊಲಬುಗೆಡದಿರೋ !*
*ವಸ್ತು ನಿಶ್ಚಯವ ಕಾಬಡೆ -*
*ಎನ್ನ ಸದ್ಗುರು ಅನಿಮಿಷದೇವನಂತೆ ನಿನ್ನ ಕರಸ್ಥಲದಲ್ಲಿ ನಿಶ್ಚೈಸಿ*
*ವಸ್ತು ನಿಶ್ಚಯವ ಕಂಡು*
*ನಮ್ಮ ಗೊಹೇಶ್ವರ ಲಿಂಗದಲ್ಲಿ ನಿಬ್ಬೆರಗಾಗೋ ಮರುಳೇ ! - ೪೧೯*

(ಎಲ್. ಬಸವರಾಜು ಪಠ್ಯ ನಿರ್ಮಾಣ)

ಅಮೂರ್ತ ವಸ್ತುವನ್ನು (= ಹುಸಿನುಸುಳು) ನಿರಾಕರಿಸುವ ಮತ್ತು ಮೂರ್ತ ವಸ್ತುವನ್ನು (= ನಿಜದುದಯ) ಪ್ರತಿಪಾದಿಸುವ ಮನೋಧರ್ಮವು ಅಲ್ಲಮಪ್ರಭುವಿನ ಮೇಲಿನ ವಚನದಲ್ಲಿದೆ. 'ವಸ್ತು' ಶಬ್ದದ ಅತಿವ್ಯಾಪ್ತಿಯನ್ನು ಮನಗಾಣಿಸಲು ಕೊಟ್ಟಿರುವ ಈ ಉಲ್ಲೇಖದೊಂದಿಗೆ ಕೆ. ಎಸ್. ನರಸಿಂಹಸ್ವಾಮಿಯವರ 'ಇಕ್ಕಳ' ಎಂಬ ಕವಿತೆಯ ಉಲ್ಲೇಖವನ್ನೂ ಗಮನಿಸಿರಿ :

*ಚಳಿಗಾಲ ಬಂದಾಗ 'ಎಷ್ಟು ಚಳಿ ?' ಎಂದರು*
*ಬಂತಲ್ಲ ಬೇಸಿಗೆ, 'ಕೆಟ್ಟ ಬಿಸಿಲೆಂ'ದರು*
*ಮಳೆ ಬಿತ್ತೊ, 'ಬಿಡದಲ್ಲ ಶನಿ !' ಎಂಬ ಟೀಕೆ*
*ಇವರು ಮೆಚ್ಚುವ ವಸ್ತು ಇಲ್ಲಿಲ್ಲ, ಜೋಕೆ !...*

ಮಲ್ಲಿಗೆಯ ಮಾಲೆ, ಪುಟ ೨೬೩



**ಚಿಂತನೆ ಮಾಡಿದಷ್ಟೂ 'ವಸ್ತು'ವಿನ ವ್ಯಾಪ್ತಿ ಹಿರಿದಾಗುತ್ತಾ ಹೋಗುತ್ತದೆ. 'ಮೆಟೀರಿಯಲಿಸಂ' ಎಂಬ ಇಂಗ್ಲಿಷ್ ನುಡಿಗೆ ಕನ್ನಡದಲ್ಲಿ ವಸ್ತುವಾದ, ಭೌತವಾದ, ಹೇತುವಾದ ಎಂಬ ನುಡಿಗಳು ಬಳಕೆಯಾಗಿವೆ. 'ಡಯಲೆಕ್ಟಿಕಲ್ ಮೆಟೀರಿಯಲಿಸಂ' – ಎಂಬುದಕ್ಕೆ ದ್ವಂದ್ವಾತ್ಮಕ ಭೌತವಾದ, ವಸ್ತುನಿಷ್ಠ ಗತಿತರ್ಕವೆಂಬ ಬಳಕೆಯಿದೆ.**

ಚಿಂತನೆ ಮಾಡಿದಷ್ಟೂ 'ವಸ್ತು'ವಿನ ವ್ಯಾಪ್ತಿ ಹಿರಿದಾಗುತ್ತಾ ಹೋಗುತ್ತದೆ. 'ಮೆಟೀರಿಯಲಿಸಂ' ಎಂಬ ಇಂಗ್ಲಿಷ್ ನುಡಿಗೆ ಕನ್ನಡದಲ್ಲಿ ವಸ್ತುವಾದ, ಭೌತವಾದ, ಹೇತುವಾದ ಎಂಬ ನುಡಿಗಳು ಬಳಕೆಯಾಗಿವೆ. 'ಡಯಲೆಕ್ಟಿಕಲ್ ಮೆಟೀರಿಯಲಿಸಂ' - ಎಂಬುದಕ್ಕೆ ದ್ವಂದ್ವಾತ್ಮಕ ಭೌತವಾದ, ವಸ್ತುನಿಷ್ಠ ಗತಿತರ್ಕವೆಂಬ ಬಳಕೆಯಿದೆ. ಆದರೆ, ಶಬ್ದಾರ್ಥಕ್ಕಿಂತಲೂ ಒಳ ತಿರುಳಿಗೆ ಬೆಲೆಕೊಟ್ಟು 'ಡಯಲೆಕ್ಟಿಕಲ್ ಮೆಟೀರಿಯಲಿಸಂ' ಎಂಬುದನ್ನು ನಾನಿಲ್ಲಿ 'ವಸ್ತುಗತಿತತ್ವದ ಅಧ್ಯಯನ'ವೆಂದು ಕರೆದಿದ್ದೇನೆ.

'ವಸ್ತುಗತಿತತ್ವ'ದಲ್ಲಿ ವಸ್ತು + ಗತಿ + ತತ್ವ ಎಂಬ ಮೂರು ಶಬ್ದಗಳ ಸಂಯೋಜನೆಯಿದೆ : ವಸ್ತು= ರೂಪುಗೊಂಡ ಜಗತ್ತಿನ ಎಲ್ಲ ಬಗೆಯ ನೈಸರ್ಗಿಕ ಮತ್ತು ಮಾನವನಿರ್ಮಿತ ವಸ್ತುಗಳು, ಗತಿ = ಚಲಿಸುತ್ತಿರುವುದು, ಚಲನಶೀಲವಾದುದು, ತತ್ವ = ವಸ್ತುವಿನ ಸ್ವರೂಪದರ್ಶನ, ಸ್ವಭಾವದರ್ಶನ. ಇಂಗ್ಲಿಷಿನ 'ಫಿಲಾಸಫಿ'ಯನ್ನು ಕನ್ನಡದಲ್ಲಿ ತತ್ವಶಾಸ್ತ್ರ, ದರ್ಶನಶಾಸ್ತ್ರ ಎನ್ನುವುದುಂಟು. ನಾನಿಲ್ಲಿ 'ತತ್ವಶಾಸ್ತ್ರ'ದ ನೆಲೆಯಿಂದ 'ಡಯಲೆಕ್ಟಿಕಲ್ ಮೆಟೀರಿಯಲಿಸಂ'ಅನ್ನು ವಿವರಿಸುವುದಕ್ಕೆ ಬದಲು, ಸಾಹಿತ್ಯ ಮೀಮಾಂಸೆ ಮತ್ತು ಸೌಂದರ್ಯಶಾಸ್ತ್ರಗಳ ನೆಲೆಯಿಂದ ವಸ್ತುಗತಿತತ್ವದ ಅಧ್ಯಯನವನ್ನು ನಿರೂಪಿಸಲಿಚ್ಛಿಸುತ್ತೇನೆ. ವಸ್ತುಗತಿತತ್ವದ ಅಧ್ಯಯನವು ಕನ್ನಡದಲ್ಲಿ ಮಾರ್ಕ್ಸ್‌ವಾದಿ ನಿರೂಪಣೆಗಳ ನಂತರ ಆಗಮವಾದ ಅರಿವು ಎಂದು ತಿಳಿಯಬಾರದು. ಕನ್ನಡ ಕವಿಗಳು ಸಾಹಿತ್ಯ ವಸ್ತುವಿನ ಗತಿಶೀಲತೆಯನ್ನೂ, ಅಪೂರ್ವ ವಸ್ತು ನಿರ್ಮಾಣವನ್ನೂ ಸುಸ್ಪಷ್ಟವಾಗಿ ಅರಿತಿದ್ದರು. ಆದಿಕವಿ ಪಂಪನು ಸಾಹಿತ್ಯ ವಸ್ತುವನ್ನು (= ಕವಿತ್ವವನ್ನು) ನಿರ್ವಚಿಸಿರುವ ಬಗೆಯಿದು : ''ಇದು ನಿಚ್ಚಂ ಪೊಸತು ಅರ್ಣವಂಬೊಲ್ ಅತಿಗಂಭೀರಂ ಕವಿತ್ವಂ.'' ಪಂಪನು ಇಲ್ಲಿ ಸಾಹಿತ್ಯವೆಂಬ 'ನಿತ್ಯನೂತನ ವಸ್ತು'ವನ್ನು ಕುರಿತು ಮಾತನಾಡುತ್ತಿದ್ದಾನೆ. ಅಂದರೆ, ಕವಿ ಪಂಪನಿಂದ ನಿರ್ಮಾಣಗೊಂಡ 'ವಸ್ತು' ಯಾವುದೇ ಒಂದು ನಿರ್ದಿಷ್ಟ ಕಾಲ -ದೇಶದ ಸೀಮೆಗೆ ಬದ್ಧವಾದುದಲ್ಲ. ಸಾಹಿತ್ಯ ವಸ್ತುವಿಗೆ ಇರುವ ಈ ಬಗೆಯ ಗತಿಶೀಲ ಮತ್ತು ಪರಿವರ್ತನಶೀಲ ಸ್ವಭಾವದಿಂದಲೇ ಕಾಳಿದಾಸ, ಶೇಕ್ಸ್‌ಪಿಯರ್, ಟಾಲ್‌ಸ್ಟಾಯ್ ಅಥವಾ ಅಜ್ಞಾತ ಕವಿಗಳು ಎಲ್ಲ ಕಾಲ- ದೇಶಗಳಿಗೆ ಸಲ್ಲುವ ಪ್ರತಿಭಾವಂತರಾಗಿದ್ದಾರೆ.

''ಇದು ನಿತ್ಯನೂತನ ಮತ್ತು ಸಮುದ್ರದಂತೆ ಅತಿ ಗಂಭೀರವಾದದ್ದು ಕವಿತ್ವ'' – ಎಂಬ ಪಂಪನ ನಿರೂಪಣೆಯು ನಮಗೆ ಅರಿಸ್ಟಾಟಲ್‌ನನ್ನು ನೆನಪಿಸುತ್ತದೆ. ಚರಿತ್ರೆ ಮತ್ತು ಸಾಹಿತ್ಯಗಳ ವ್ಯತ್ಯಾಸವನ್ನು ಮನಗಾಣಿಸುತ್ತಾ ನಿರ್ದಿಷ್ಟ ಸಂಗತಿಗಳೊಂದಿಗೆ ವ್ಯವಹರಿಸುವ ಚರಿತ್ರೆಗಿಂತಲೂ ಸಾಹಿತ್ಯವು ಹೆಚ್ಚು ಉದಾತ್ತವೂ ಅತಿ ಗಂಭೀರವಾದದ್ದು ಎಂದು ಅರಿಸ್ಟಾಟಲ್ ಅಭಿಪ್ರಾಯಪಟ್ಟಿದ್ದಾನೆ. ನಿರ್ದಿಷ್ಟದಿಂದ ಸಾಧಾರಣದವರೆಗೆ ಲಾಳಿಯಾಡುವ ಸಾಹಿತ್ಯ ವಸ್ತುವಿನ ಬಗ್ಗೆ ಅರಿಸ್ಟಾಟಲ್ ಮತ್ತು ಪಂಪ – ಇಬ್ಬರೂ ಅಭಿಮಾನ ಹೊಂದಿದ್ದಾರೆ.

ಕನ್ನಡ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಗಳತ್ತ ಕಣ್ಣುಹಾಯಿಸಿದರೆ 'ಸಾಹಿತ್ಯವಸ್ತು'ವಿನ ಪರಿಸ್ಥಿತಿ ಪಂಪ ಮತ್ತು ಅರಿಸ್ಟಾಟಲ್‌ಗೆ ತದ್ವಿರುದ್ಧವಾಗಿದೆ : ಪ್ರಾಚೀನ ಕವಿ, ಪ್ರಾಚೀನ ಕಾವ್ಯ, ವೀರಯುಗ, ವೀರಕಾವ್ಯ, ಲೌಕಿಕ- ಆಗಮಿಕ, ವಸ್ತುಕ- ವರ್ಣಕ, ಚಂಪೂಯುಗ, ಹತ್ತನೇ ಶತಮಾನ ಮುಂತಾದ ಪರಿಭಾಷೆಗಳಿಂದ ಪಂಪ- ರನ್ನರ ಕಾವ್ಯಗಳನ್ನು ನಿರ್ದಿಷ್ಟ ಕಾಲ- ದೇಶದ ಕೊಟ್ಟಿಗೆಯಲ್ಲಿ ಕಟ್ಟಿಹಾಕಿದ ನಿರೂಪಣೆಗಳೇ ಅತ್ಯಧಿಕವಾಗಿವೆ. ಪಂಪನು ತನ್ನ ಕಾವ್ಯಗಳನ್ನು 'ಇದು ನಿಚ್ಚಂ ಪೊಸತು' ಎಂದು ವರ್ಣಿಸಿದ್ದರೆ, ಈ ಚರಿತ್ರಕಾರ- ವಿಮರ್ಶಕ- ವಿದ್ವಾಂಸರು ಹತ್ತನೇ ಶತಮಾನವೆಂಬ ಕಣ್ಣಪಟ್ಟಿಗಳಿಂದಲೇ ನೋಡುತ್ತಿದ್ದಾರೆ. ಪಂಪನ ಕಾವ್ಯಗಳ ವಿಭಾವಗಳನ್ನು ನಿರ್ದಿಷ್ಟ ಸಾಮಾಜಿಕ ಮತ್ತು ಚಾರಿತ್ರಿಕ ಸಂದರ್ಭದ ವಿವರಗಳೊಂದಿಗೆ ಮೇಳೈಸಿ, ಕಾಲನಿಷ್ಠ ಸ್ಥಾವರ ಅಥವಾ ದೇಶನಿಷ್ಠ ಸ್ಥಾವರದ ಅಧ್ಯಯನಗಳನ್ನೇ ನಡೆಸುತ್ತಿದ್ದಾರೆ. ನಮ್ಮ ಶೈಕ್ಷಣಿಕ ವ್ಯಾಸಂಗದಲ್ಲಂತೂ ಹತ್ತನೇ ಶತಮಾನವೆಂಬ ಜೈಲಿನಲ್ಲಿ ಪಂಪ- ರನ್ನರು ಶಾಶ್ವತ ಖೈದಿಗಳಾಗಿ ಹೋಗಿದ್ದಾರೆ.

ಈ ದೃಷ್ಟಿಯಿಂದ ''ಸ್ಥಾವರಕ್ಕೆ ಅಳಿವುಂಟು ಜಂಗಮಕ್ಕೆ ಅಳಿವಿಲ್ಲ'' ಎಂಬ ಬಸವಣ್ಣನವರ ವಚನವನ್ನು ಹೊಸದಾಗಿಯೇ ವ್ಯಾಖ್ಯಾನಿಸಬೇಕಾಗಿದೆ. 'ಸಾಹಿತ್ಯ ವಸ್ತು'ವನ್ನು ನಾವಿಂದು ವಸ್ತು ಸ್ಥಾವರತ್ವದಿಂದ ಬಿಡಿಸಿ, ವಸ್ತು ಜಂಗಮತ್ವಕ್ಕೆ ಪರಿವರ್ತಿಸಬೇಕಾದ ಅಗತ್ಯವಿದೆ. ಜಿ. ಎಸ್. ಶಿವರುದ್ರಪ್ಪನವರು ವಿಮರ್ಶೆಯ ಪೂರ್ವ ಪಶ್ಚಿಮ ಕೃತಿಯಲ್ಲಿ ವಿವರಿಸಿರುವಂತೆ, 'ಚಾರಿತ್ರಿಕ ವಿಧಾನ'ವೆಂಬ ಸ್ಥಾವರ

ದೃಷ್ಟಿಗೆ ಬದ್ಧರಾದವರು ನಿರ್ದಿಷ್ಟವಾದ ವ್ಯಕ್ತಿಕೇಂದ್ರ-ಕಾಲಕೇಂದ್ರ - ದೇಶಕೇಂದ್ರಗಳನ್ನು ದಾಟಲಾರರು! ಈ ಬಗೆಯ ಸ್ಥಾವರ ದೃಷ್ಟಿಯನ್ನೇ 'ಅತಿರತಿಗೆ ಗತಿಮತಿ ಮಂದವಾಯಿತ್ತು' ಎಂಬ ಅಲ್ಲಮನ ವಚನ ಮಾರ್ಮಿಕವಾಗಿ ವಿಡಂಬಿಸುತ್ತಿದೆ. ಒಂದು ನಿರ್ದಿಷ್ಟವಾದ ಸಾಮಾಜಿಕ ಮತ್ತು ಚಾರಿತ್ರಿಕ ಸಂದರ್ಭಕ್ಕೆ ಅತಿಯಾಗಿ ಅಂಟಿಕೊಳ್ಳುವ ಮನಃಸ್ಥಿತಿಯನ್ನೇ 'ಅತಿರತಿ' ಎನ್ನಬಹುದು. ಇದರಿಂದ ಪಾರಾಗಿ ಸಾಹಿತ್ಯವಸ್ತುವನ್ನು ಪ್ರಸ್ತುತಗೊಳಿಸುತ್ತಾ ನಿತ್ಯನೂತನವಾಗಿಸುವ ಮನೋಧರ್ಮವನ್ನು 'ಗತಿಮತಿ' ಎನ್ನಬಹುದು. ಚಾಮರಸನ ಪ್ರಕಾರ ಅಲ್ಲಮಪ್ರಭು ಅನುಭವ ಸ್ಥಿತಿಯ ಗತಿಯನುಪದೇಶಿಸುವ ಗುರು. 'ಅನುಭವ ಸ್ಥಿತಿ'ಯೆಂಬುದು ಸ್ಟಾಟಿಕ್ ಆಗಿದ್ದರೆ, ಅನುಭವದ ಗತಿಯು ಡೈನಮಿಕ್ ಆದುದು. ಬಾಳಿನ ಪಯಣದಲ್ಲಿ ಅನುಭವದ ಸ್ಥಿತಿಯನ್ನು ದಾಟಿಕೊಂಡು ಅನುಭವದ ಗತಿಯನ್ನು ಗಳಿಸಬೇಕಾದ ಪರಿಯನ್ನು ಸಾರುವ ಕನಕ ಕತೆಗಳು, ಝೆನ್ ಕತೆಗಳು, ಸೂಫಿ ಕತೆಗಳು ಸಮೃದ್ಧವಾಗಿವೆ (ಉದಾಹರಣೆ: 'ನಾನು' ಹೋದರೆ ಹೋಗಬಹುದು ಎಂಬ ಕನಕವಾಣಿ, ಹಿರಿಯ ಸಂನ್ಯಾಸಿಯೊಬ್ಬ ಹೆಣ್ಣೊಬ್ಬಳನ್ನು ಎತ್ತಿಕೊಂಡು ಹೊಳೆ ದಾಟಿಸುವುದು ಇತ್ಯಾದಿ)

ನಾ ಹರಿವೆನೆಂದಿಗೂ, ನಾ ಜಂಗಮ ದೇವಸ್ಥಾನ ಎಂಬ ಕುವೆಂಪು ಕವಿತೆಗಳು 'ವಸ್ತುಗತಿತತ್ವ'ಕ್ಕೆ ಉತ್ತಮ ನಿದರ್ಶನ. ಹರಿವ ಹೊಳೆಯ ಗತಿಯನ್ನೇ ವ್ಯಕ್ತಿಯ ಬಾಳಿನ ಗತಿಯಲ್ಲೂ ಮನಗಾಣುವ ಪರಿ 'ನಾ ಹರಿವೆನೆಂದಿಗೂ' ಕವಿತೆಯಲ್ಲಿದೆ. ಚಲನಶೀಲ ಮನೋಧರ್ಮದ ಹೊಳೆಯನ್ನು ವ್ಯಕ್ತಿಯನ್ನಾಗಿ ಪರಿವರ್ತನೆ ಮಾಡಿರುವುದರಿಂದಲೇ 'ನಾ ಹರಿವೆನೆಂದಿಗೂ' ಎಂಬ ಕಲ್ಪನೆ ಸಾಧ್ಯವಾಗಿದೆ. ಕಲ್ಲು ಕಟ್ಟಡದ ಸ್ಥಾವರದಲ್ಲಿ ದೇವಸ್ಥಾನವನ್ನು ಕಾಣದೆ, ರಕ್ತಮಾಂಸಗಳ ಚೈತನ್ಯದಲ್ಲಿ ದೇವಸ್ಥಾನವನ್ನು ಮನಗಂಡಿರುವುದರಿಂದ 'ನಾ ಜಂಗಮ ದೇವಸ್ಥಾನ' ಎಂಬ ಕಲ್ಪನೆ ಸಾಧ್ಯವಾಗಿದೆ. ಈ ದೃಷ್ಟಿಯಿಂದ ವಿವೇಚಿಸಿದರೆ ಕುವೆಂಪು ಸಾಹಿತ್ಯ ಸಮಸ್ತವು ವಸ್ತುಗತಿತತ್ವದ ನಿರೂಪಣೆಯೇ ಆಗಿದೆ. ಹುಲ್ಲಿನ ಇಬ್ಬನಿಯು ತೃಣ ಸುಂದರಿಯ ಮೂಗುತಿಯಾಗುವ ಕಾಣ್ಕೆಯಲ್ಲೆ ವಸ್ತುಗತಿತತ್ವದ ನಿರೂಪಣೆಯಿದೆ. ''ಇಲ್ಲಿ ಯಾವುದಕ್ಕೂ ಮೊದಲಿಲ್ಲ, ಇಲ್ಲಿ ಯಾವುದಕ್ಕೂ ಕೊನೆಯಿಲ್ಲ'' ಎಂಬ ಮುನ್ನುಡಿಯ ಮಾತುಗಳಲ್ಲಿ ಬಾಳನ್ನು ಪ್ರವಾಹರೂಪಿಯನ್ನಾಗಿ ಕಾಣುವ ವಸ್ತುಗತಿತತ್ವದ ದರ್ಶನವಿದೆ. ನದಿಯನ್ನು ಆದಿ+ಮಧ್ಯ+ಅಂತವೆಂದು ವಿಭಜಿಸಲು ಹೇಗೆ ಸಾಧ್ಯವಿಲ್ಲವೋ ಸಾಹಿತ್ಯ ವಸ್ತುವನ್ನು ಸಹ ಹಾಗೆ ವಿಭಜಿಸಲು ಸಾಧ್ಯವಿಲ್ಲ. ಆದಿಮಧ್ಯಾಂತರಹಿತವಾದ ಬಾಳಗತಿಯನ್ನು ಹಿಡಿದಿಡುವ ಕುವೆಂಪು ಪ್ರತಿಭೆಗೆ ಅವರ ಸಮಗ್ರ ಸಾಹಿತ್ಯವೇ ಅತ್ಯುತ್ತಮ ನಿದರ್ಶನವಾಗಿದೆ.



'ಹರಿವ ನದಿಗೆ ಮೈಯೆಲ್ಲ ಕಾಲು' – ಎಂಬ ಅಲ್ಲಮನ ವಚನ ವಸ್ತುಗತಿತತ್ವದ ಕಲಾತ್ಮಕ ಅಭಿವ್ಯಕ್ತಿಯಾಗಿದೆ. ''ಒಮ್ಮೆ ಕಾಲಿಟ್ಟ ನದಿಯಲ್ಲಿ ಅದೇ ಕಾಲನ್ನು ಇಡಲಾಗದು'' – ಎಂಬ ಸುಪ್ರಸಿದ್ಧ ನುಡಿಯಲ್ಲೂ ನಿತ್ಯನೂತನ ಮತ್ತು ನಿತ್ಯ ಪರಿವರ್ತನಶೀಲವಾದ ವಸ್ತುಗತಿತತ್ವವಿದೆ. ಕನ್ನಡದ ವರಕವಿ ಬೇಂದ್ರೆಯವರು ಭೂವನ ಮತ್ತು ಕುಸುಮಗಳ ಸಾಂಗತ್ಯದಲ್ಲಿ ವಸ್ತುಗತಿತತ್ವದ ನೈಸರ್ಗಿಕ ಶಾಸನವನ್ನೇ ಮುಂದಿಟ್ಟಿದ್ದಾರೆ :

*ಭೂವನ ಕುಸುಮಿಸಿ ಪುಲಕಿಸಿ ಮರಳಿಸಿ*

*ಕೋಟಿ ಕೋಟಿ ಸಲ ಹೊಸಯಿಸಿತು.*

ರಾಮಾಯಣ ಮತ್ತು ಮಹಾಭಾರತಗಳು ನಮ್ಮ ದೇಶದ ಭೂವನದಲ್ಲಿ ಮತ್ತೆ ಮತ್ತೆ ಕುಸುಮಿಸಿ, ಪುಲಕಿಸಿ, ಮರಳಿಸಿ, ಕೋಟಿ ಕೋಟಿ ಸಲ ಹೊಸಯಿಸಿತು ಎಂಬುದನ್ನು ಅರಿತುಕೊಂಡರೆ ವಸ್ತುಗತಿತತ್ವದ ಮಹತ್ವ ಅರ್ಥವಾಗಬಹುದು. ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರ, ಡಯಲೆಕ್ಟಿಕಲ್ ಮೆಟೀರಿಯಲಿಸಂ ಎಂಬ ಕಲಿತ ಮಾತುಗಳಿಂದ ನಮಗೆ ಅನ್ಯವೂ ಅಪರಿಚಿತವೂ ಆಗಿ ಕಾಣುವ ಚಿಂತನೆಗಳೇ ನಮ್ಮ ಕಣ್ಣುಗಳಿಂದ ಪರಿಭಾವಿಸಿದಾಗ ಅನನ್ಯವೂ ಆತ್ಮೀಯವೂ ಆಗಿಬಿಡುವುದನ್ನಿಲ್ಲಿ ಮನಗಾಣಬೇಕು.

ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರವು ಪ್ರತಿಪಾದಿಸುವ ಪ್ರಕ್ರಿಯಾತ್ಮಕ ಅಧ್ಯಯನಗಳು ಮತ್ತು ಬೌದ್ಧ ದರ್ಶನಗಳು ಎತ್ತಿಹಿಡಿಯುವ ಪ್ರಕ್ರಿಯಾ ಮೀಮಾಂಸೆಗೆ ಯಾವುದೇ ವಿರೋಧವಿಲ್ಲ. ತೋರಿಕೆಗೆ ಬೇರೆ ಬೇರೆಯಾಗಿ ಕಾಣುವ ಎಷ್ಟೋ ವಿಚಾರಗಳು ಒಳಹೊಕ್ಕು ನೋಡಿದಾಗ 'ಐಕ್ಯಸ್ಥಲ'ದ ಅನುಭವ ನೀಡಬಹುದು. ಸಂಸ್ಕೃತ ಕಾವ್ಯಮೀಮಾಂಸೆ ಅಥವಾ ಭಾರತೀಯ ಕಾವ್ಯಮೀಮಾಂಸೆ ಎಂಬ ಏಕರೂಪಾತ್ಮಕ ಚೌಕಟ್ಟುಗಳನ್ನು ಮೀರಿದ ಧ್ವನಿತತ್ವವು ಭಾಷಾ ಸೀಮೆಗಳನ್ನು ದಾಟಿದ ಅನನ್ಯ ಚಿಂತನೆಯಾಗಿದೆ. ವಸ್ತುವಿನ ಸ್ವರೂಪ ಮತ್ತು ಸ್ವಭಾವಗಳನ್ನು ಆನಂದವರ್ಧನ ಮೂರು ಮಾತುಗಳಿಂದ ಸಮರ್ಥವಾಗಿ ವ್ಯಾಖ್ಯಾನಿಸಿದ್ದಾನೆ :

೧. ನವತ್ವ = ಸದಾ ಹೊಸದಾಗಿರುವುದು

೨. ಬಹುತ್ವ = ಬಹುರೂಪಿಯಾಗಿರುವುದು

೩. ಆನಂತ್ಯ = ಆದಿ-ಅಂತ್ಯಗಳಿಲ್ಲದಿರುವುದು

ವಸ್ತುವಿನ ಸ್ವರೂಪ ಮತ್ತು ಸ್ವಭಾವಗಳನ್ನು ವಿವರಿಸುತ್ತಾ ಆನಂದವರ್ಧನ ಹೇಳಿರುವ ಈ ಮೂರು ಮಾತುಗಳು ವಸ್ತುಗತಿತತ್ವದ ಅಧ್ಯಯನವೂ ಆಗಿದೆ. ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರವು 'ಡಯಲೆಕ್ಟಿಕಲ್ ಮೆಟೀರಿಯಲಿಸಂ' ಎಂಬುದನ್ನು ಮೂರು ಪರಿಭಾಷೆಗಳಿಂದ ನಿರೂಪಿಸುತ್ತದೆ :

೧. ಉಭಯ ವೈರುಧ್ಯಗಳು = ಅಪೋಸಿಟ್ಸ್/ ಬೈನರೀಸ್

೨. ಉಭಯ ಪರಿವರ್ತನೆ = ಟ್ರಾನ್ಸ್‌ಫಾರ್ಮೇಶನ್

೩. ನಿರಂತರ ಚಲನಶೀಲತೆ = ಡೈನಮಿಕ್ಸ್

ಈ ಮೂರು ವಿಚಾರಗಳನ್ನು ಏಕ ಗ್ರಾಹಕವಾಗಿ ಮಾಡಿಕೊಂಡಾಗಲೇ ವಸ್ತುಗತಿತತ್ವದ ಅಧ್ಯಯನವು ಪೂರ್ಣ ದೃಷ್ಟಿಗೆ ಸಲ್ಲುತ್ತದೆ. 'ಡಯಲೆಕ್ಟಿಕಲ್ ಮೆಟೀರಿಯಲಿಸಂ' – ಎಂಬ ಹೆಸರಿಗೆ ಮರುಳಾಗಿ ವಸ್ತುಗತಿತತ್ವವನ್ನು ಕೇವಲ ಬೈನರಿಗಳ ಅಧ್ಯಯನವೆಂದು ತಿಳಿಯುವುದು ಖಂಡದೃಷ್ಟಿಯಾಗುತ್ತದೆ. ವಸ್ತು ವಿವೇಚನೆಯನ್ನು ವಿರುದ್ಧ ಧ್ರುವಗಳಲ್ಲಿ ಉಳಿಸುವುದು (ಉದಾಹರಣೆ: ಉಳ್ಳವರು ಮತ್ತು ಬಡವರು) ಡಯಲೆಕ್ಟಿಕಲ್ ಮೆಟೀರಿಯಲಿಸಂ ಎನಿಸಿಕೊಳ್ಳುವುದಿಲ್ಲ. ಈ ವಿರುದ್ಧಗಳ ನಡುವೆ ಏರ್ಪಡುವ ಸಂಘರ್ಷ ಮತ್ತು ಸಾಮರಸ್ಯಗಳು ಸಾಮಾಜಿಕವಾಗಿ ಅಸ್ತಿತ್ವದಲ್ಲಿ ಇಲ್ಲದಿದ್ದರೂ, ಕಲೆ ಎಲ್ಲರಿಗಾಗಿ ಎಂದು ನಂಬಿದ ಲೇಖಕರು ಈ ವಿರುದ್ಧಗಳನ್ನು ಪರಿವರ್ತನೆಗೊಳಿಸುವ ಕನಸನ್ನು ಕಾಣುತ್ತಾರೆ. ಸಾಮಾಜಿಕವಾಗಿ ಸ್ಥಾವರವಾದ ಸಂದರ್ಭಗಳನ್ನು ನಿರೂಪಿಸುವಾಗ ಅದು ಬದಲಾಗಬೇಕಾದ ಅನಿವಾರ್ಯತೆಯನ್ನು ಮನದಟ್ಟು ಮಾಡುವ ಜವಾಬ್ದಾರಿ ಲೇಖಕರಿಗಿರುತ್ತದೆ. ಇಂಥ ಲೇಖಕರನ್ನೇ ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರದಲ್ಲಿ ಗತಿಶೀಲ ವಾಸ್ತವತೆಯ ಪ್ರವರ್ತಕರು ಎಂದು ಕರೆಯಲಾಗಿದೆ. 'ಬಡತನವೆ ಸಾಹಿತ್ಯದ ಸಾರ್ವಭೌಮ ವಸ್ತು' – ಎಂದು ನಂಬಿ ಬರೆದ ಕುವೆಂಪು, ಬೇಂದ್ರೆ, ಕಾರಂತರ ಬರಹಗಳಲ್ಲಿ ವಸ್ತುಗತಿತತ್ವದ ಕಾಣ್ಕೆಯಿದೆ.

ವಸ್ತುಗತಿತತ್ವದ ಅಧ್ಯಯನವನ್ನು ಪ್ರಾಚೀನ-ಮಧ್ಯಕಾಲೀನ-ಆಧುನಿಕ ಎಂಬ ಕಾಲನಿಷ್ಠ ಉಪಾಧಿಗೊಳಗಾಗದಂತೆ ನಿರ್ವಹಿಸಬೇಕಾಗಿದೆ. 'ನೆಲನೊಂದೆ ಹೊಲಗೇರಿ ಶಿವಾಲಯಕ್ಕೆ' – ಎಂಬ ಬಸವಣ್ಣನ ವಚನವು 'ಸ್ಥಾವರ'ವಾದ ಜಾತಿಪದ್ಧತಿಯನ್ನು ನಿರಾಕರಿಸುತ್ತಾ, 'ಜಂಗಮ'ವಾದ ಮನುಕುಲದ ಅರಿವನ್ನು ಎತ್ತಿಹಿಡಿದಿದೆ. ಹೊಲಗೇರಿ ಮತ್ತು ಶಿವಾಲಯಗಳೆಂಬ ವಿರುದ್ಧ ಧ್ರುವಗಳನ್ನು ಮಂಡಿಸುತ್ತಿರುವಾಗಲೇ ಇವು ಒಂದೇ ನೆಲದಲ್ಲಿರುವ ಪರಿವರ್ತಿತ ಸತ್ಯವನ್ನು ಪ್ರತಿಪಾದಿಸುತ್ತಿವೆ. ಶೌಚಾಲಯದ ನೀರು ಮತ್ತು ದೇವಾಲಯದ ಉದಕಗಳೆಂಬ ವಿರುದ್ಧಗಳನ್ನು ಒಂದೇ ಜಲವೆಂಬ ಕಾಣ್ಕೆಯಲ್ಲಿ ಹೊಡೆದುರುಳಿಸಲಾಗಿದೆ. ಅಪರಿಮಿತದ ಕತ್ತಲೆಯೊಳಗೆ ವಿಪರೀತದ ಬೆಳಕನಿಕ್ಕಿದವರಾರೊ! – ಎಂಬ ಅಲ್ಲಮನ ವಚನವು ವಸ್ತುಗತಿತತ್ವದ ಉಭಯವೈರುಧ್ಯಗಳು, ಉಭಯ ಪರಿವರ್ತನೆ, ನಿರಂತರ ಚಲನಶೀಲತೆಗಳನ್ನು ಮನಗಾಣಿಸುತ್ತಿರುವ ನಿಬ್ಬೆರಗಿನ ವಚನವಾಗಿದೆ.

ಇಡೀ ಜಗತ್ತು ಚಲನೆಯಿಂದ ಕೂಡಿದ್ದು ಗತಿಶೀಲವಾಗಿರುವುದನ್ನು ನಾವಿಂದು

ಪ್ರಶ್ನಾತೀತವಾಗಿ ಒಪ್ಪಿಕೊಂಡಿದ್ದೇವೆ. ಈ ಭೂಮಿಯಲ್ಲಿ ಇರುವ ಎಲ್ಲ ವಸ್ತುಗಳು ಭೂಗ್ರಹದ ಚಲನಾ ನಿಯಮಕ್ಕೆ ಬದ್ಧವಾಗಿವೆ. ತೆವಳುವ ಬಸವನಹುಳು, ಇರುವೆ, ಆಮೆ, ಮೊಲ, ಚಿರತೆ, ಮೋಟಾರು, ಬುಲೆಟ್‌ಟ್ರೇನ್‌ಗಳಲ್ಲಿರುವ ವ್ಯತ್ಯಾಸದ ವೇಗಗಳು ತೋರಿಕೆಯದೇ ಹೊರತು, ಇವೆಲ್ಲವುಗಳ ನೈಜವೇಗವು ಇರುವುದೊಂದೆ ಭೂಮಿಯ ವೇಗವಾಗಿದೆ. ನಮ್ಮ ಪೂರ್ವಿಕರು ಭೂಮಿಯನ್ನು 'ಸ್ಥಿರೆ' (= ತಿರೆ) ಎಂದು ತಪ್ಪಾಗಿ ಕರೆದಿದ್ದರು. ನಿರಂತರ ಪರಿಭ್ರಮಣಶೀಲವಾದ ಭೂಮಿಯು 'ಸ್ಥಿರೆ'ಯಲ್ಲ, ಮಣ್ಣಿಂದ ಕಾಯ ಮಣ್ಣಿಂದ ಎಂಬಂತೆ ನಮ್ಮ ದೇಹಗಳು ಕೂಡ ಅನುಕ್ಷಣವೂ ಗತಿಶೀಲವಾಗಿದೆ. ಈ ಭೂಮಿಯಲ್ಲಿ 'ಸ್ಥಿರ' ಎಂಬ ಪ್ರಶಸ್ತಿಗೆ ಪಾತ್ರವಾಗುವುದು ಸ್ಥಾವರದೃಷ್ಟಿಯ ಮನಸ್ಸುಗಳು ಮಾತ್ರ! ಆದ್ದರಿಂದ, ವಸ್ತುಗತಿತತ್ವದ ಸತ್ವವನ್ನು ಅರಿತು ನಮ್ಮ ಮನಸ್ಸುಗಳನ್ನು ಕೂಡ ಗತಿಶೀಲವಾಗಿಸುವ ಜವಾಬ್ದಾರಿಯನ್ನು ಪ್ರತಿಯೊಬ್ಬರೂ ನಿರ್ವಹಿಸಬೇಕಾಗಿದೆ. ಬಸವಣ್ಣನವರು ಹೇಳಿದಂತೆ, ಸ್ಥಾವರಕ್ಕೆ ಅಳಿವುಂಟು, ಜಂಗಮಕ್ಕೆ ಅಳಿವಿಲ್ಲ!

'ವಸ್ತುಗತಿತತ್ವ'ವನ್ನು ಸಾಹಿತ್ಯವಸ್ತುವಿನಲ್ಲಿ ಮಾತ್ರವಲ್ಲ! ಕ್ವಾಂಟಮ್ ಫಿಸಿಕ್ಸ್ (= ಕಣ ಭೌತಶಾಸ್ತ್ರ)ದಲ್ಲೂ ಮನಗಾಣಬಹುದು. ಭೂಮಿಯ ಸೃಷ್ಟಿ, ವಿಶ್ವದ ಉತ್ಪತ್ತಿ ಹೇಗಾಯಿತು? ಎಂಬ ಪ್ರಶ್ನೆಗೆ ಜಿನೇವ ಪ್ರಯೋಗಾಲಯದಲ್ಲಿ 'ಹಿಗ್ಸ್ ಬೋಸಾನ್ ಕಣಗಳು' ಎಂಬ ಉತ್ತರ ಲಭ್ಯವಾಗಿದೆ. ಇದನ್ನು 'ತಿಯರಿ ಆಫ್ ಎವೆರಿಥಿಂಗ್' ಎಂದು ಕರೆದಿದ್ದಾರೆ. ಹಿಗ್ಸ್ ಬೋಸಾನ್ ಕಣಗಳನ್ನು ಇತರ ಉಪ ಪರಮಾಣು ಕಣಗಳ ದ್ರವ್ಯರಾಶಿಗೆ ಕಾರಣವಾದವು ಎಂಬುದನ್ನಿಲ್ಲಿ ಶೋಧಿಸಲಾಗಿದೆ. ಪೀಟರ್ ಹಿಗ್ಸ್ ಮತ್ತು ಸತ್ಯೇಂದ್ರನಾಥ ಬೋಸ್ ಅವರ ಹೆಸರುಗಳನ್ನು ಬೆಸೆದು 'ಹಿಗ್ಸ್ ಬೋಸಾನ್' ಕಣಗಳೆಂದು ಕರೆಯಲಾಗಿದೆ. ವಸ್ತುವು ಶಕ್ತಿಯಾಗುವ ಮತ್ತು ಶಕ್ತಿಯು ವಸ್ತುವಾಗುವ ಪ್ರಕ್ರಿಯೆಯನ್ನು ಹೇಳುವ ಕಣ ಭೌತಶಾಸ್ತ್ರದ ವಸ್ತುಗತಿತತ್ವವಿದು. ಇಲ್ಲಿ ವಸ್ತು ಮತ್ತು ಶಕ್ತಿಗಳ ಉಭಯ ವೈರುಧ್ಯ, ಉಭಯ ಪರಿವರ್ತನೆ, ನಿರಂತರ ಚಲನಶೀಲತೆಗಳ ವಸ್ತುಗತಿತತ್ವವನ್ನು ಗ್ರಹಿಸಬೇಕು. ಹಿಗ್ಸ್ ಬೋಸಾನ್ ಕಣಗಳನ್ನು ಮಾಧ್ಯಮಗಳಲ್ಲಿ ದೊಡ್ಡದಾಗಿ ಗಾಡ್ ಪಾರ್ಟಿಕಲ್ಸ್ (= ದೇವಕಣಗಳು) ಎಂದು ಕರೆಯಲಾಗಿದೆ. 'ದೇವಕಣಗಳು' ಎಂಬ ಮಾತಿನಲ್ಲಿ 'ದೈವಮೂಲವಾದ'ದ ಪ್ರಭಾವವಿದೆ. ಪ್ರತಿಯೊಂದು ಆವಿಷ್ಕಾರವನ್ನು ದೈವದೊಡನೆ ಬೆಸೆದು ನೋಡುವ ಚಟವಿದು. 'ಹಿಗ್ಸ್ ಬೋಸಾನ್ ಕಣಗಳು' – ಎಂಬ ಮಾತಿನಲ್ಲಿ ಉತ್ಪಾದಕ ಅಧ್ಯಯನದ ದೃಷ್ಟಿಯಿದ್ದರೆ, 'ದೇವಕಣಗಳು' – ಎಂಬ ಮಾತಿನಲ್ಲಿ ದೈವಮೂಲ ವಾದವಿದ್ದು ಮೂಲವ್ಯಾಧಿಯ ಅಧ್ಯಯನ ದೃಷ್ಟಿಯನ್ನು ಹೊಂದಿದೆ.

'ಸಾಹಿತ್ಯವಸ್ತು' ಪ್ರತಿಭಾಜನ್ಯವಾದುದು. ಅಪೂರ್ವವಸ್ತು ನಿರ್ಮಾಣವನ್ನಿಲ್ಲಿ ಕಾಣುತ್ತೇವೆ. ಇದರ ವಸ್ತುಗತಿತತ್ವವನ್ನು ಅರಿಯಬೇಕಾದರೆ ಸಾಹಿತ್ಯವಸ್ತುವು ಸ್ಥಾವರವಾಗುವ ಬಗೆಗಳಾವುವು? ಎಂಬುದನ್ನು ತಿಳಿಯಬೇಕು. ಇಂಥ ನಾಲ್ಕು ನೆಲೆಗಳಿವು :

೧. ಕವಿಯ ಉದ್ದೇಶ, ಕವಿಯ ವ್ಯಕ್ತಿತ್ವ, ಕವಿಯ ಸಂದರ್ಶನ ಇದನ್ನು 'ಪರ್ಸನಲ್ ಜೆನೆಸಿಸ್' ಎನ್ನಲಾಗಿದೆ.

೨. ಕವಿಯ ಜೀವನಚರಿತ್ರೆ, ಕವಿಯ ಜೀವನ ಮತ್ತು ಸಾಹಿತ್ಯ ಸಂಬಂಧ ಇದನ್ನು 'ಬಯಾಗ್ರಫಿಕಲ್ ಜೆನೆಸಿಸ್' ಎನ್ನಲಾಗಿದೆ.

೩. ಕವಿಯು ಬದುಕಿದ ಸಾಮಾಜಿಕ ಸಂದರ್ಭದ ಅಧ್ಯಯನ ಇದನ್ನು 'ಸೋಶಿಯಾಲಜಿಕಲ್ ಜೆನೆಸಿಸ್' ಎನ್ನಲಾಗಿದೆ.

೪. ಕವಿಯು ಬದುಕಿದ ಚಾರಿತ್ರಿಕ ಸಂದರ್ಭದ ಅಧ್ಯಯನ ಇದನ್ನು 'ಹಿಸ್ಟಾರಿಕಲ್ ಜೆನೆಸಿಸ್' ಎನ್ನಲಾಗಿದೆ.

ಮಾರ್ಕ್ಸ್‌ವಾದಿ ಸೌಂದರ್ಯಶಾಸ್ತ್ರವು ಮೇಲಿನ ನಾಲ್ಕು ಬಗೆಯ 'ಸ್ಥಾವರ' ದೃಷ್ಟಿಗಳಿಂದ ಪ್ರವೇಶ ಪಡೆಯುವ ದೃಷ್ಟಿ-ಧೋರಣೆಗಳನ್ನು ಜೆನೆಟಿಕ್ ಫ್ಯಾಲಸಿ ಅಥವಾ ಜೆನೆಟಿಕಲ್ ಸ್ಟಡೀಸ್ ಎಂದು ಕರೆದಿದೆ. ಇದನ್ನು ಕನ್ನಡದಲ್ಲಿ 'ಮೂಲವ್ಯಾಧಿ ಅಧ್ಯಯನಗಳು' ಎಂದು ಕರೆಯಬಹುದು. ಕೃತಿ ಮತ್ತು ಕೃತಿಕಾರರ ಮಧ್ಯೆ ಅಭೇದ ಕಲ್ಪನೆಯ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಗಳು ಹುಟ್ಟುವುದು ಇಲ್ಲಿಂದಲೇ! ಅಜ್ಞಾತ ಕರ್ತೃಕವಾದ ಮತ್ತು ಕವಿಯ ಬಗ್ಗೆ ಖಚಿತವಾದ ಮಾಹಿತಿ, ತಂತ್ರಜ್ಞಾನವು ಲಭ್ಯವಿಲ್ಲದ ಕಡೆಗಳಲ್ಲಿ

# ಕಾಲ ನೂಲುತ್ತಿದೆ



ಹರಿವ ನೀರಿನ ಬಿಕ್ಕು
ಕಿರುಗುಡುವ ಗಾಲಿಯ ಸೊಕ್ಕು
ದನಿಯೆತ್ತರಿಸಿದೆ ಮಳೆ
ಮಂಡೂಕ ಬಾಲ ಎತ್ತಿ
ನಿಂತ ಪಿಕ
ನಡು ಮುರಿವಂತೆ ಚಳಿ ಗಾಳಿ
ದಿಮಿತ ದಿಮಿತ ಮರ

ಲಯತಪ್ಪಿ ಬೆಂಬೆತ್ತಿ ದನ ಕರು
ಕೆಸರು ಕೊಳೆತ ನೀರು

ಗುಡ್ಡಗಾಡುಗಳ ನಡುವೆ
ಅಂಗಾತ ನುಸುಳಿ
ತಪ್ಪಿಸಿಕೊಂಡ ಕೆಂಪು ಚೆಂಡು

ಪ್ರಾಣಕ್ಕೆ ಪ್ರಾಣ ಎದೆಗೊಟ್ಟು
ತನುವ ತಿಳಿಗೊಳವ ಮಾಡಿ
ಜಲಬಾವಿಯಿಂದ ಜಲ ತಂದು
ಹಾಲು ಬಾವಿಯಿಂದ ಹಾಲು ತಂದು
ಇದೋ ಕಂದಾ...
ಜೀವ ಜಲ ಆಡಿಸಿ
ತಳಮನೆ ಅರಮನೆ
ಕಣ್ಣು ತೆರೆದವು ತುಟಿಗಳು ಉಬ್ಬಿದವು

ಕೈಗೂಸು ಹಸುಗಾಯಿ
ಕುಂಬಾರನ ತಿಗರಿಯಲಿ ಜೀವ
ಮಣ್ಣೊಳು ಮಣ್ಣಾಗಿ ಮಾಗಿ ಹಣ್ಣಾಗಿ
ನೆಲದವ್ವನ ಮಡಿಲು ಬೇಸರಿಕೆ ಬಂದು
ಹೆಪ್ಪುಗಟ್ಟಿದ ಚಂದ್ರ
ಒಡಲೊಡವೆ ನೆನಪ ಒಳಗುದಿ
ಮಣ್ಣಲ್ಲಿ ಹೊರಳಿ ಮರಳಿ
ನೀಳ ಕತ್ತು ಎತ್ತಿ ನಾಲಿಗೆ ಚಾಚಿ
ನೂಲುತ್ತಿದೆ ಸಾವಿನಾಚೆಗೂ

**ಆಲೂರು ದೊಡ್ಡನಿಂಗಪ್ಪ**
ರಂಗಾಯಣ, ಮೈಸೂರು

(ಉದಾಹರಣೆ: ಜನಪದ ಸಾಹಿತ್ಯ, ರಾಮಾಯಣ- ಮಹಾಭಾರತ ಇತ್ಯಾದಿ) ಜೆನೆಟಿಕ್ ಫ್ಯಾಲಸಿಗೆ ಎಡೆಯಿರುವುದಿಲ್ಲ.

*ಬೆಳಗಾಗ ನಾನೆದ್ದು ಯಾರ್ಯಾರ ನೆನೆಯಾಲಿ ?*
*ಎಳ್ಳು ಜೀರಿಗೆ ಬೆಳೆಯೋಳ ಭೂಮ್ತಾಯ*
*ಎದ್ದೊಂದು ಗಳಿಗೆ ನೆನೆದೇನು*

ಈ ಜನಪದ ತ್ರಿಪದಿಯನ್ನು ಮೊದಲಿಗೆ ಹೇಳಿದವರಾರು ? ಅವರ ಕಾಲ-ದೇಶ ಯಾವುದು ? ಎಂಬ ಪ್ರಶ್ನೆಗೆ ಇಲ್ಲಿ ಅವಕಾಶವೇ ಇಲ್ಲ. ಇದು ಆದಿಕವಿ ಪಂಪನಷ್ಟೇ ಹಳೆಯದು ಮತ್ತು ಆಧುನಿಕ ಕವಿ ಪಂಪನಷ್ಟೇ ಹೊಸದು. ಕಾಲ ನಿಷ್ಠೆಯಿಂದ 'ಆದಿಕವಿ ಪಂಪ'ನೆಂದೂ ಮನೋಧರ್ಮವನ್ನು ಲಕ್ಷಿಸಿ ಆಧುನಿಕ ಕವಿ ಪಂಪನೆಂದೂ ಇಲ್ಲಿ ಚಮತ್ಕಾರದಿಂದ ಹೇಳಲಾಗಿದೆ. ವಸ್ತುಗತಿತತ್ವಕ್ಕೆ ಕಾಲ-ದೇಶಗಳ ಉಪಾಧಿಯಿಲ್ಲ. ಪ್ರತಿಭೆಯು ನಿರುಪಾಧಿಕ :

*ನಿರುಪಾಧಿಕ ಲಿಂಗವನು ಉಪಾಧಿಗೆ ತರಬಹುದೆ ?*
*ಸ್ವತಂತ್ರ ಲಿಂಗವನು ಪರತಂತ್ರಕ್ಕೆ ತರಬಹುದೆ ?* ... ಅಲ್ಲಮಪ್ರಭು

ಸಾಹಿತ್ಯವಸ್ತುವನ್ನು ಮಾನವನಿರ್ಮಿತವಾದ ಎಲ್ಲ ಬಗೆಯ ಉಪಾಧಿಗಳಿಂದ ಬಿಡಿಸಿ, ಮುಕ್ತವಾಗಿ ನೋಡುವುದನ್ನು ವಸ್ತುಗತಿತತ್ವವು ಪ್ರತಿಪಾದಿಸುತ್ತದೆ. ಕಾವೇರಿ ನದಿಯನ್ನು ಲಕ್ಷಿಸಿ, ನಾವಿಂದು ಪ್ರಾಚೀನ ಕಾವೇರಿ, ಮಧ್ಯಕಾಲೀನ ಕಾವೇರಿ, ಆಧುನಿಕ ಕಾವೇರಿ ಎಂದು ಕಲ್ಪಿಸಿಕೊಳ್ಳಲು ಹೇಗೆ ಸಾಧ್ಯವಿಲ್ಲವೋ ಹಾಗೆಯೇ ಕನ್ನಡ ಸಾಹಿತ್ಯವನ್ನು ಲಕ್ಷಿಸಿ – ಪ್ರಾಚೀನ ಕನ್ನಡ ಸಾಹಿತ್ಯ, ಮಧ್ಯಕಾಲೀನ ಕನ್ನಡ ಸಾಹಿತ್ಯ, ಆಧುನಿಕ ಕನ್ನಡ ಸಾಹಿತ್ಯ ಎಂದು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ಪಂಪ-ರನ್ನರನ್ನು ವೀರಯುಗ-ವೀರ ಮೌಲ್ಯಗಳ ನೆಲೆಯಲ್ಲಿ ನೋಡುವುದು ಮತ್ತು ಕುವೆಂಪು-ಬೇಂದ್ರೆ- ಕಾರಂತರನ್ನು ವಸಾಹತುಶಾಹಿ-ವಸಾಹತೋತ್ತರ ನೆಲೆಯಲ್ಲಿ ನೋಡುವುದು ಮೂಲತಃ ಸ್ಥಾವರದೃಷ್ಟಿಯ ಅಧ್ಯಯನ ವಾಗುತ್ತದೆ. ಅತ್ಯಂತ ಸಂಕುಚಿತವಾದ ವಿಭಜನೆಗಳಿಂದ ಕೂಡಿದ 'ಕಾಲಮಾನ' ದೃಷ್ಟಿಯನ್ನು ಮೀರಿ ನಿರಂತರ ಚಲನಶೀಲವಾದ 'ಕಾಲಪ್ರವಾಹ' ದೃಷ್ಟಿಯಿಂದ ಸಾಹಿತ್ಯವಸ್ತುವನ್ನು ಪರಿಶೀಲಿಸಬೇಕು. ಸೀಮಾಬದ್ಧವಾದ ಜೀವನಚರಿತ್ರೆಗಳಿಂದ ಕೂಡಿದ 'ಸಾಮಾಜಿಕ ಸಂದರ್ಭ' ದೃಷ್ಟಿಯನ್ನು ಮೀರಿ ನಿರಂತರ ಚಲನಶೀಲವಾದ 'ಸಾಮಾಜಿಕ ದರ್ಶನ' ದೃಷ್ಟಿಯಿಂದ ಸಾಹಿತ್ಯ ವಸ್ತುವನ್ನು ಪರಿಭಾವಿಸಬೇಕು.

ಸಾಹಿತ್ಯವಸ್ತುವು ಯಾವುದೇ ಕಾಲ-ದೇಶಕ್ಕೆ ಸೇರಿರಲಿ! ಪ್ರತಿಯೊಂದು ತಲೆಮಾರುಗಳು ಅದನ್ನು ತನ್ನದನ್ನಾಗಿ ಪರಿಭಾವಿಸಿಕೊಂಡು ತನ್ನ ಬದುಕಿಗೆ ಜನರೇಟ್ ಮಾಡಿಕೊಳ್ಳುತ್ತಿರಬೇಕು. ಸಾಹಿತ್ಯಕೃತಿಯ ಈ ಜನರೇಟಿವ್ ಫೋರ್ಸ್‌ಅನ್ನು ಒಪ್ಪಿಕೊಳ್ಳ ದಿದ್ದರೆ, ಕಾಳಿದಾಸ - ಶೇಕ್ಸ್‌ಪಿಯರ್ - ಟಾಲ್‌ಸ್ಟಾಯ್ ಹೇಗೆ ನಮ್ಮವರಾಗುವುದಿಲ್ಲವೋ ಹಾಗೆಯೆ ಪಂಪ ರನ್ನರು - ಕುಮಾರವ್ಯಾಸ-ಕುವೆಂಪು ಬೇಂದ್ರೆ ಕಾರಂತರು ಕೂಡ ನಮ್ಮವರಾಗುವುದಿಲ್ಲ. ಸ್ಥಾವರವಾದ 'ಜೆನೆಟಿಕಲ್ ಸ್ಟಡೀಸ್'ಗೆ ತದ್ವಿರುದ್ಧವಾದ ಈ 'ಜಂಗಮ' ದೃಷ್ಟಿಯನ್ನು 'ಜನರೇಟಿವ್ ಸ್ಟಡೀಸ್' (= ಉತ್ಪಾದಕ ಅಧ್ಯಯನಗಳು) ಎಂದು ಕರೆಯಬಹುದು. ಇದೊಂದು ರೀತಿಯಲ್ಲಿ 'ತಿಯರಿ ಆಫ್ ಮೂವಿಂಗ್ ತಿಂಗ್' – ಎಂಬುದು ಬಹುಮುಖ್ಯ! ಆದರೆ ನಮ್ಮ ಶಾಲಾ ಕಾಲೇಜುಗಳ ಶೈಕ್ಷಣಿಕ ವ್ಯಾಸಂಗದ ಸಾಹಿತ್ಯ ಚರಿತ್ರೆ ಮತ್ತು ಸಾಹಿತ್ಯ ವಿಮರ್ಶೆಗಳಲ್ಲಿ ಕೃತಿ ಮತ್ತು ಕೃತಿಕಾರರ ನಡುವೆ ಅಭೇದ ಕಲ್ಪನೆಯ ಅನುಸಂಧಾನಗಳಿಗೆ ಅತಿ ಹೆಚ್ಚಿನ ಪ್ರಾಮುಖ್ಯತೆಯಿದ್ದು ಮೂಲವ್ಯಾಧಿಯ ಅಧ್ಯಯನಗಳೇ ವಿಜೃಂಭಿಸುತ್ತಿವೆ. ಇನ್ನು ಮುಂದಾದರೂ ವಸ್ತುಗತಿತತ್ವದ ದೃಷ್ಟಿಧೋರಣೆಗಳು ಮುನ್ನೆಲೆಗೆ ಬಂದು 'ಸಾಹಿತ್ಯವಸ್ತು' ವನ್ನು ಅದರ ಕರ್ತೃವಿನಿಂದ, ಪ್ರತ್ಯೇಕ ಕಾಲಘಟ್ಟಗಳಿಂದ, ನಿರ್ದಿಷ್ಟವಾದ ಒಂದು ಸಾಮಾಜಿಕ ಸಂದರ್ಭ-ಚಾರಿತ್ರಿಕ ಸಂದರ್ಭಗಳಿಂದ ಪಾರುಮಾಡುವ ಉತ್ಪಾದಕ ಅಧ್ಯಯನಗಳಾಗಲೆಂಬ ಸದಾಶಯದಿಂದ ವಿರಮಿಸುತ್ತೇನೆ.

**ವಿ. ಚಂದ್ರಶೇಖರ ನಂಗಲಿ**
ನಂ. ೧೬, ಶ್ರೀಗೌರಿ, ೪ನೇ ಕ್ರಾಸ್, ಕನಕನಗರ, ಹೊಸಕೋಟೆ
ಬೆಂಗಳೂರು ಗ್ರಾಮಾಂತರ ಜಿಲ್ಲೆ- ೫೬೨ ೧೧೪

# ಜನಪದ ಪ್ರಕಾಶನದ ಜನಪ್ರಿಯ ಪ್ರಕಟಣೆಗಳು




ರೂ. 30/-




ರೂ. 25/-




ರೂ. 20/-




ರೂ. 45/-




ರೂ. 30/-




ರೂ. 30/-




ರೂ. 30/-




ರೂ. 30/-




ರೂ. 30/-




ರೂ. 50/-




ರೂ. 25/-




ರೂ. 30/-




ರೂ. 25/-




ರೂ. 20/-




ರೂ. 20/-




ರೂ. 110/-




ರೂ. 20/-




ರೂ. 20/-




ರೂ. 35/-




ರೂ. 30/-




ರೂ. 30/-




ರೂ. 30/-




ರೂ. 30/-




ರೂ. 25/-



# ಜನಪದ ಪ್ರಕಾಶನ

ನಂ. 57, ಮೊದಲನೆಯ ಮುಖ್ಯರಸ್ತೆ
ಯಶವಂತಪುರ, ಬೆಂಗಳೂರು - 560 022




ರೂ. 40/-

ಮುರಳೀಧರ ಚಿಕ್ಕಮಗಳೂರು

# ಹೊಸ ಹಾದಿಯಲ್ಲಿ ಲ್ಯಾಟಿನ್ ಅಮೆರಿಕಾ

**ವಿಕಿಲೀಕ್ಸ್‌ನ ಸಾಹಸ**

ಆಸ್ಟ್ರೇಲಿಯದ ಪ್ರಜೆ, ಪರ್ತಕರ್ತ ಮತ್ತು ವಿಕಿಲೀಕ್ಸ್‌ನ ಸಂಪಾದಕ ಜೂಲಿಯನ್ ಅಸಾಂಜ್ ಈಗ ಜಗತ್ತಿಗೆ ಚಿರಪರಿಚಿತ ವ್ಯಕ್ತಿ. ವಿಕಿಲೀಕ್ಸ್ ಬೇಹುಗಾರಿಕೆ ಸಂಸ್ಥೆಯೇನಲ್ಲ, ಯಾವೊಂದು ವಿಚಾರಧಾರೆಗೂ ಅಂಟಿಕೊಂಡಂತಿಲ್ಲ. ಇದರ ಕ್ರಿಯಾಶೀಲತೆಯನ್ನು ನೋಡಿದಾಗ ಇದೊಂದು ಅರಾಜಕೀಯ ಸಂಘಟನೆಯೆಂದು ಕರೆಯುವುದೂ ಕಷ್ಟವೆ. ಇರಾಕ್ ಮತ್ತು ಆಫ್ಘಾನಿಸ್ತಾನ ಯುದ್ಧಗಳಲ್ಲಿ ಅಮೆರಿಕಾದ ನೀತಿ-ರೀತಿಗಳನ್ನು ಬಹಿರಂಗಗೊಳಿಸಿದ್ದು ವಿಕಿಲೀಕ್ಸ್‌ನ ಹಿರಿಮೆ. ಅಮೆರಿಕಾ ಮತ್ತಿತರ ದೇಶಗಳನ್ನು ಏಕಕಾಲಕ್ಕೆ ತಲ್ಲಣಗೊಳಿಸುವಂತಹ ಕೆಲಸಕ್ಕೆ ಕೈ ಹಾಕುವುದು ಸಾಹಸವೇ ಸರಿ. ಇದೊಂದು ಹುಚ್ಚು ಸಾಹಸವೆಂದು ಪರಿಗಣಿಸುವವರು ಕೆಲವರಾದರೆ, ಇದು ಸಿ.ಐ.ಎ.ಯ ಇನ್ನೊಂದು ಕುತಂತ್ರವೆಂದು ಅನುಮಾನಿಸುವವರೂ ಇದ್ದಾರೆ. ವಿಕಿಲೀಕ್ಸ್ ೨೦೧೦ರಲ್ಲಿ ಅಮೆರಿಕಾದ ಮಿಲಿಟರಿಗೆ ಸಂಬಂಧಿಸಿದ ಸುಮಾರು ೨,೫೦,೦೦೦ ದಾಖಲೆಗಳನ್ನು ಬಹಿರಂಗಗೊಳಿಸುವ ಮುನ್ನ ಜೂಲಿಯನ್ ಅಸಾಂಜ್ ಇರಾಕ್ ಮತ್ತು ಆಫ್ಘಾನಿಸ್ತಾನದ ಯುದ್ಧಗಳನ್ನು ಕೊನೆಗೊಳಿಸಲು ನಾವು ಏನನ್ನೂ ಯೋಚಿಸಿದ್ದೇವೆಂದು ಹೇಳಿದ್ದನ್ನು ಸ್ಮರಿಸಬಹುದು. ಬೇಹುಗಾರಿಕೆ ಸಂಸ್ಥೆಗಳು ಅನೇಕ ವಿಷಯಗಳನ್ನು ರಹಸ್ಯವಾಗಿ ಏಕೆ ಇಡುತ್ತವೆಂದರೆ ಬಹಳಷ್ಟು ಸಲ ಅವು ನ್ಯಾಯಮಾರ್ಗ ಮತ್ತು ಒಳ್ಳೆಯ ನಡತೆಯನ್ನು ಉಲ್ಲಂಘಿಸಿರುತ್ತವೆಂದು ಅಸಾಂಜ್‌ನ ವಿಶ್ಲೇಷಣೆ. ವಿಕಿಲೀಕ್ಸ್‌ನ ವಿವಾದಾತ್ಮಕತೆಯ ಬಗ್ಗೆ ಮಾತನಾಡುತ್ತ ಪತ್ರಿಕೋದ್ಯಮ ಉತ್ತಮವಾಗಿದ್ದಲ್ಲಿ ಅದು ಸಹಜವಾಗಿಯೆ ವಿವಾದಾತ್ಮಕವಾಗಿರುತ್ತದೆಂದು ಅಭಿಪ್ರಾಯಪಡುತ್ತಾನೆ. ದುರುಪಯೋಗಗಳನ್ನು ಗುರುತಿಸಲಾಗದಿದ್ದರೆ ಅದನ್ನು ಸರಿಪಡಿಸುವ ಬಗೆ ಹೇಗೆ ಎಂದು ಪ್ರಶ್ನಿಸುತ್ತಾನೆ. ಹೀಗೆ ಹಲವಾರು ಅಭಿಪ್ರಾಯಗಳನ್ನು ಹೊಂದಿರುವ ಅಸಾಂಜ್ ಕೆಲವರಿಗೆ ಪ್ರಿಯ ವ್ಯಕ್ತಿ ಮತ್ತೆ ಕೆಲವರಿಗೆ ಅಪ್ರಿಯ ವ್ಯಕ್ತಿ. ಅಮೆರಿಕಾ ಸರ್ಕಾರಕ್ಕಂತೂ ಈತ ದೇಶದ ಪರಮ ಶತ್ರು.

**ಅಮೆರಿಕಾದ ಶತ್ರು – ಜೂಲಿಯನ್ ಅಸಾಂಜ್**

ವಿಕಿಲೀಕ್ಸ್ ಅಮೆರಿಕಾದ ಮಿಲಿಟರಿ ದಾಖಲೆಗಳನ್ನು ಬಹಿರಂಗಗೊಳಿಸಿದ ಸಂದರ್ಭದಲ್ಲಿ ೨೦೦೭ರ ಅಮೆರಿಕಾದ ಉಪಾಧ್ಯಕ್ಷ ಚುನಾವಣೆಯಲ್ಲಿ ರಿಪಬ್ಲಿಕನ್ ಪಕ್ಷದ ಅಭ್ಯರ್ಥಿಯಾಗಿ ಸ್ಪರ್ಧಿಸಿ ಸೋತ ಮಹಿಳೆ ಸಾರಾ ಪ್ಯಾಲಿನ್ ಅಲ್‌ಖೈದಾ ಮತ್ತು ತಾಲಿಬಾನ್ ನಾಯಕರನ್ನು ಬೆನ್ನಟ್ಟಿದ ರೀತಿಯಲ್ಲೇ ಅಸಾಂಜ್‌ನನ್ನು ಬೆನ್ನಟ್ಟಬೇಕೆಂದು ಕರೆಯಿತ್ತಳು. ರಿಪಬ್ಲಿಕನ್ ಪಕ್ಷದ ಇನ್ನೊಬ್ಬ ಸದಸ್ಯ ಮೈಕ್ ಹಕಾಬಿ ವಿಕಿಲೀಕ್ಸ್‌ಗೆ ಸಂಬಂಧಿಸಿದವರನ್ನೆಲ್ಲ ಗಲ್ಲಿಗೇರಿಸಬೇಕೆಂದು ಅಪ್ಪಣೆಯಿತ್ತರೆ



ಜೂಲಿಯನ್ ಅಸಾಂಜ್

ಮಗದೊಬ್ಬ ರಿಪಬ್ಲಿಕನ್ ಪಕ್ಷದ ನಾಯಕ ಪೀಟರ್ ಕಿಂಗ್ ವಿಕಿಲೀಕ್ಸನ್ನು ಒಂದು ಭಯೋತ್ಪಾದಕ ಸಂಘಟನೆಯೆಂದು ಪರಿಗಣಿಸಿ ಜೂಲಿಯನ್ ಅಸಾಂಜ್‌ನನ್ನು ಅಮೆರಿಕಾ ಬೇಹುಗಾರಿಕೆ ಕಾಯ್ದೆಯಡಿಯಲ್ಲಿ ಶಿಕ್ಷಿಸಬೇಕೆಂದು ಅಟಾರ್ನಿ ಜನರಲ್‌ಗೆ ಬರೆದ ಪತ್ರದಲ್ಲಿ ಸಲಹೆಯಿತ್ತ. ಕೆನಡದ ಮಾಜಿ ಪ್ರಧಾನ ಮಂತ್ರಿಯ ಸಲಹೆಗಾರನಾಗಿದ್ದ ಟಾಮ್ ಫ್ಲಾಗನ್ ಎಂಬುವನಂತೂ ಅಸಾಂಜ್‌ನನ್ನು ಕೊಲೆ ಮಾಡಬೇಕೆಂದು ಕರೆಯಿತ್ತದ್ದನ್ನು ಗಮನಿಸಿದರೆ ಬಂಡವಾಳಶಾಹಿ ರಾಷ್ಟ್ರಗಳ ಆಳುವ ವರ್ಗಕ್ಕೆ ಅಸಾಂಜ್‌ನ ಬಗ್ಗೆಯಿರುವ ಕೋಪ-ತಾಪ ಮತ್ತು ಇವರ ಅನಾಗರಿಕ ವರ್ತನೆ ಅರಿವಾಗುತ್ತದೆ. ಅಸಾಂಜ್‌ಗೆ ಮಿಲಿಟರಿ ರಹಸ್ಯ ದಾಖಲೆಗಳನ್ನು ಒದಗಿಸಿಕೊಟ್ಟನೆಂಬ ಆಪಾದನೆಯನ್ನು ಅಮೆರಿಕಾದ ಸೈನಿಕ ಬ್ರಾಡ್ಲೆ ಮ್ಯಾನಿಂಗ್ ಮೇಲೆ ಹೊರಿಸಿ ಮೊಕದ್ದಮೆ ಹೂಡಲಾಗಿದೆ. ಸ್ವೀಡನ್ ಅಸಾಂಜ್‌ನ ಮೇಲೆ ಲೈಂಗಿಕ ಕಿರುಕುಳದ ಆಪಾದನೆಯಿದೆ



ತಮ್ಮ ತಮ್ಮ ದೇಶಗಳಲ್ಲಿನ ಆಂತರಿಕ ಸಂಪನ್ಮೂಲಗಳನ್ನು ಹತೋಟಿಗೆ ತೆಗೆದುಕೊಂಡು ಸಮಾನವಾಗಿ ವಿತರಿಸಿ ಸಮಾನತೆ ತರುವ ಯತ್ನ, ಪರಸ್ಪರ ಸಹಾಯ ಮತ್ತು ಸಹಕಾರಕ್ಕಾಗಿ ರಚಿಸಿಕೊಂಡಿರುವ ಒಕ್ಕೂಟ ಮತ್ತು ಬ್ಯಾಂಕ್, ವಿದೇಶಾಂಗ ನೀತಿ, ಪರಿವರ್ತನೆಯ ಇಚ್ಛಾಶಕ್ತಿ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳಲ್ಲಿ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಪರಿಕಲ್ಪನೆಯ ಸ್ಪಷ್ಟತೆ ಮತ್ತು ಸಾಮ್ಯತೆ ಕಾಣಬಹುದು. ನಾವು ಒಂದು ವ್ಯವಸ್ಥೆಯನ್ನು ನಿರ್ವಹಿಸಲು ಅಧಿಕಾರಕ್ಕೆ ಬಂದಿಲ್ಲ, ನಾವು ಅದನ್ನು ಬದಲಾಯಿಸುತ್ತಿದ್ದೇವೆ. ಇದು ಬದಲಾವಣೆಯ ಯುಗವಲ್ಲ, ಇದು ಯುಗದ ಬದಲಾವಣೆ ಎಂದು ಈಕ್ವೆಡಾರ್‌ನ ರಫೈಲ್ ಕೊರ್ರಿಯ ನುಡಿದದ್ದು ಲ್ಯಾಟಿನ್ ಅಮೆರಿಕಾ ದೇಶಗಳು ಹಿಡಿದ ಹೊಸ ಹಾದಿಯ ದರ್ಶನ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ನರಳುತ್ತಿರುವವರಿಗೊಂದು ಹೊಸ ಚೇತನ.

ಎಂದು ಅವನನ್ನು ತನ್ನ ದೇಶಕ್ಕೆ ಸಾಗಿಸಬೇಕೆಂದು ಬ್ರಿಟಿಷ್ ಸರ್ಕಾರವನ್ನು ಕೇಳಿದೆ. ಈ ನೆಪದಿಂದ ಅವನನ್ನು ಅಮೆರಿಕಾ ಸರ್ಕಾರಕ್ಕೊಪ್ಪಿಸುವುದು ಸ್ವೀಡನ್‌ನ ಹಂಚಿಕೆ ಎಂದು ಹಲವರ ಅನುಮಾನ. ಬ್ರಿಟನ್‌ನ ನ್ಯಾಯಾಲಯ ಅಸಾಂಜ್‌ನ ಅರ್ಜಿಯನ್ನು ತಿರಸ್ಕರಿಸಿದೆ. ಆಸ್ಟ್ರೇಲಿಯ ಸರ್ಕಾರ ಕೂಡ ಅಸಾಂಜ್‌ನ ವಿರುದ್ಧ ನಿಂತಿದೆ. ಇದು ದಮನಕಾರಿ ಶಕ್ತಿಗಳ ಒಕ್ಕೂಟ ಮತ್ತು ಇದನ್ನು ಎದುರಿಸಲು ಅಸಾಧಾರಣ ಐಕ್ಯತೆ ಮತ್ತು ದೃಢನಿಶ್ಚಯ ಅಗತ್ಯವೆಂದು ಅಸಾಂಜ್‌ಗೆ ಮನವರಿಕೆಯಾಗಿದೆ. ಈ ಬಲಿಷ್ಠ ರಾಷ್ಟ್ರಗಳನ್ನೆದುರಿಸಿ ಅಸಾಂಜ್‌ನ ಪರ ನಿಲ್ಲುವ ದೇಶವಿದೆಯೆ ?

**ಅಸಾಂಜ್‌ಗೆ ಈಕ್ವೆಡಾರ್ ಆಶ್ರಯ**

ಈ ಪ್ರಶ್ನೆ ಏಳುತ್ತಿದ್ದಂತೆಯೆ ಅದಕ್ಕೆ ಉತ್ತರಿಸಲು ಪುಟಿದೆದ್ದುದು ಲ್ಯಾಟಿನ್ ಅಮೆರಿಕಾದ ಒಂದು ಪುಟ್ಟ ದೇಶ ಈಕ್ವೆಡಾರ್ ಮತ್ತು ಅದರ ದಿಟ್ಟ ಅಧ್ಯಕ್ಷ ರಫೈಲ್ ಕೊರ್ರಿಯ. ಬ್ರಿಟಿಷ್ ಸರ್ಕಾರ ಅಸಾಂಜ್‌ನನ್ನು ಸ್ವೀಡನ್ ಸರ್ಕಾರಕ್ಕೆ ಒಪ್ಪಿಸುವ ಮುನ್ನವೆ ಲಂಡನ್‌ನಲ್ಲಿರುವ ತನ್ನ ರಾಯಭಾರಿ ಕಚೇರಿಗೆ ಬಂದ ಅವನಿಗೆ ಈಕ್ವೆಡಾರ್ ಆಶ್ರಯ ಕೊಟ್ಟದ್ದು ರಾಜತಾಂತ್ರಿಕವಲಯದಲ್ಲಿ ಹೊಸ ಬಿರುಗಾಳಿಯನ್ನು ಹುಟ್ಟುಹಾಕಿದೆ. ಬ್ರಿಟಿಷ್ ಸರ್ಕಾರ ಅಸಾಂಜ್‌ನನ್ನು ತಮ್ಮ ವಶಕ್ಕೆ ಕೊಡದಿದ್ದಲ್ಲಿ ಈಕ್ವೆಡಾರ್ ರಾಯಭಾರಿ ಕಚೇರಿಗೆ ನುಗ್ಗುವುದಾಗಿ ಬೆದರಿಕೆ ಹಾಕಿ ನಂತರ ಸುಮ್ಮನಾಯಿತು. ಈ ಸಂದರ್ಭದಲ್ಲಿ ಈಕ್ವೆಡಾರ್‌ನ ವಿದೇಶಾಂಗ ಮಂತ್ರಿ ಮಾತನಾಡುತ್ತ ''ಬಹಳಷ್ಟು ಜನರು ಸರ್ಕಾರ ತತ್ವಾಧಾರಿತವಾಗಿ



ರಫೈಲ್ ಕೊರ್ರಿಯ

ನಡೆದುಕೊಂಡಾಗ ಅದೊಂದು ವಿಚಿತ್ರವೆಂದು ಭಾವಿಸುತ್ತಾರೆ. ಆದರೆ ನಾವು ಅಸಾಂಜ್‌ನ ವಿಷಯದಲ್ಲಿ ತತ್ವಬದ್ಧರಾಗಿ ನಡೆದುಕೊಂಡಿದ್ದೇವೆ. ಇಲ್ಲಿ ನಡೆದಿರುವುದೇನೆಂದರೆ ಅಂತರರಾಷ್ಟ್ರೀಯ ಸ್ತರದಲ್ಲಿ ಈಕ್ವೆಡಾರ್ ತನ್ನ ಗೌರವವನ್ನು ಪುನಃ ಪಡೆದುಕೊಂಡಿದೆ. ಈಕ್ವೆಡಾರ್‌ನ ಹಿಂದಿನ ಸರ್ಕಾರಗಳು ಅಮೆರಿಕಾ ಅಥವಾ ಯುರೋಪ್ ಹೇಳಿದ ಹಾಗೆ ಇಲ್ಲವೆ ಆ ರಾಷ್ಟ್ರಗಳು ಹಾಗೆ ಬಯಸಿರಬಹುದೇನೋ ಎಂದು ಕಲ್ಪಿಸಿಕೊಂಡು ಕುಣಿಯುತ್ತಿದ್ದವು. ಆದರೆ ೨೦೦೭ರ ನಂತರ ರಫೈಲ್ ಕೊರ್ರಿಯ ಈಕ್ವೆಡಾರ್ ಅಧ್ಯಕ್ಷನಾದ ನಂತರ, ನಾವು ಸ್ವತಃ ಆಲೋಚಿಸಿ, ಸ್ವತಂತ್ರವಾಗಿ ಮತ್ತು ಆತ್ಮಗೌರವದಿಂದ ನಡೆಯುವುದನ್ನು ಕಲಿತಿದ್ದೇವೆ'' ಎಂದು ಹೇಳಿದ್ದು ಕೇವಲ ಈಕ್ವೆಡಾರ್ ಪ್ರದರ್ಶಿಸಿದ ಆತ್ಮಸ್ಥೈರ್ಯ ಮಾತ್ರವಲ್ಲ, ಇಡೀ ಲ್ಯಾಟಿನ್ ಅಮೆರಿಕಾ ದೇಶಗಳಲ್ಲಿ ಗಾಢವಾಗುತ್ತಿರುವ ಆತ್ಮಸ್ಥೈರ್ಯಕ್ಕೆ ಸಾಕ್ಷಿ. ಜೂಲಿಯನ್ ಅಸಾಂಜ್‌ನ ಸಮಸ್ಯೆಯ ಜೊತೆ ಈಗ ರಫೈಲ್ ಕೊರ್ರಿಯನ ಸವಾಲು. ಅಮೆರಿಕಾ ಸರ್ಕಾರಕ್ಕೆ ತಲೆನೋವು.

**ಲ್ಯಾಟಿನ್ ಅಮೆರಿಕಾ – ಬಾಣಲೆಯಿಂದ ಬೆಂಕಿಗೆ**

ಲ್ಯಾಟಿನ್ ಅಮೆರಿಕಾದ ದೇಶಗಳು ಸುಮಾರು ೪೦೦ ವರ್ಷಗಳು ಸ್ಪೇನ್, ಪೋರ್ತುಗಲ್ ಮತ್ತು ಫ್ರಾನ್ಸ್‌ನ ವಸಾಹತು ಶೋಷಣೆಯಲ್ಲಿ ನರಳಿ ನಂತರ ಸ್ವತಂತ್ರವಾದರೂ ಅಮೆರಿಕಾದ ಕಪಿಮುಷ್ಠಿಗೆ ಸಿಲುಕಿ ತೈಲ ಸಂಪತ್ತು , ಖನಿಜ ಸಂಪತ್ತು ಮತ್ತಿತರ ನೈಸರ್ಗಿಕ ಸಂಪನ್ಮೂಲಗಳನ್ನು ಒತ್ತೆಯಿಟ್ಟಿತ್ತು. ಅಮೆರಿಕಾದ ಕಾರ್ಪೋರೇಟ್ ಧಣಿಗಳು ತಮಗೆ ಅನುಕೂಲಕರವಾದ ರಾಜಕೀಯ ವ್ಯವಸ್ಥೆಯನ್ನು ಈ ದೇಶಗಳಲ್ಲಿ ಸ್ಥಾಪಿಸಿಕೊಂಡು ಶೋಷಣೆಯ ಹಾದಿಯನ್ನು ಸುಗಮಗೊಳಿಸಿಕೊಂಡಿದ್ದರು. ಅಡ್ಡ ಬಂದವರನ್ನು ಕೊಚ್ಚಿಹಾಕಿ ಲ್ಯಾಟಿನ್ ಅಮೆರಿಕಾ ದೇಶಗಳ ಆರ್ಥಿಕ ಶೋಷಣೆಯನ್ನು ಅಮೆರಿಕಾ ನಿರಾತಂಕವಾಗಿ ಮುಂದುವರೆಸಿತ್ತು. ೧೯೫೪ರಲ್ಲಿ ಗ್ವಾಟೆಮಾಲಾದ ಜೇಕಬ್ ಆರ್ಬೆಂಜ್ ಕಮ್ಯುನಿಸ್ಟರ ಸಹಾಯ ಪಡೆದು ಅಮೆರಿಕಾದ ಹಣ್ಣು ವ್ಯಾಪಾರದ ಕಂಪನಿಗಳ ಮೇಲೆ ದಾಳಿ ನಡೆಸಿದಾಗ ಸಿ.ಐ.ಎ. ಅವನನ್ನು ಮುಗಿಸಿತು.

ಲ್ಯಾಟಿನ್ ಅಮೇರಿಕಾದ ದೇಶಗಳನ್ನು ತನ್ನ ನಿರಂತರ ಹತೋಟಿಯಲ್ಲಿಟ್ಟುಕೊಳ್ಳಲು ಅಮೆರಿಕಾ ಸರ್ಕಾರ ಬಳಸುತ್ತಿದ್ದ ಪ್ರಮುಖ ಅಸ್ತ್ರ ಸಿ.ಐ.ಎ. ೧೯೭೩ರಲ್ಲಿ ಚಿಲಿಯ ಅಧ್ಯಕ್ಷ ಸಮಾಜವಾದಿ ಸಾಲ್ವಡೋರ್ ಅಲೆಂಡೆನನ್ನು ಕೊಂದು ಮಿಲಿಟರಿ ಸರ್ವಾಧಿಕಾರಿ... ಪಿನೋಷೆಯನ್ನು ಗದ್ದುಗೆಯಲ್ಲಿ ಕೂಡಿಸಿದ್ದು ಸಿ.ಐ.ಎ.ನೇ. ಅಂದಿನ ಅಮೇರಿಕಾದ ಅಧ್ಯಕ್ಷ ರಿಚರ್ಡ್ ನಿಕ್ಸನ್‌ಗೆ ಅಲೆಂಡೆ ಚಿಲಿಯ ಅಧ್ಯಕ್ಷನಾಗುವುದು ಸ್ವಲ್ಪವೂ ಇಷ್ಟವಿರಲಿಲ್ಲ. ಸಮಾಜವಾದ ಬೆಳೆಯುವುದನ್ನು ತಡೆಯಬೇಕೆಂದರೆ ಸಮಾಜವಾದಿಗಳನ್ನು ತೊಡೆದು ಹಾಕಬೇಕೆನ್ನುವುದು ಅಮೇರಿಕಾದ ಅಂದಿನ ರಾಜನೀತಿ. ಒಟ್ಟಾರೆ ಬಂಡವಾಳಶಾಹಿಯ ದೈತ್ಯ ನರ್ತನಕ್ಕೆ ಲ್ಯಾಟಿನ್ ಅಮೇರಿಕಾ ಸುಸಜ್ಜಿತ ರಂಗಭೂಮಿ.

**ಕ್ಯೂಬದ ಕ್ರಾಂತಿ – ಆರ್ಥಿಕ ದಿಗ್ಬಂಧನ**

ಫಿಡೆಲ್ ಕ್ಯಾಸ್ಟ್ರೊ ಮತ್ತು ಚೆ ಗುವಾರಾ ೧೯೫೯ರಲ್ಲಿ ಕ್ಯೂಬದ ಮಿಲಿಟರಿ ಸರ್ವಾಧಿಕಾರಿ ಬ್ಯಾಟಿಸ್ಟಾನ್ನು ಅಧಿಕಾರದಿಂದ ಓಡಿಸಿ ಸಮಾಜವಾದಿ ಕ್ರಾಂತಿಯ ಕಹಳೆ ಮೊಳಗಿಸಿದಾಗ ಅಮೇರಿಕಾ ಸರ್ಕಾರ ಕಂಗೆಟ್ಟು ಕ್ಯಾಸ್ಟ್ರೊನನ್ನು ಕೊಲೆಗೈಯ್ಯಲು ಸಿ.ಐ.ಎ. ಮೂಲಕ ಹಲವಾರು ಬಾರಿ ಪ್ರಯತ್ನಿಸಿದ್ದು ಬೆಳಕಿಗೆ ಬಂದಿರುವ ವಿಷಯ. ಹಾಗೆಯೆ ಕ್ಯೂಬದಲ್ಲಿ ಪ್ರತಿಕ್ರಾಂತಿಗೆ ಪ್ರಯತ್ನಿಸಿದ್ದು ಅಮೇರಿಕಾದ ಸರ್ಕಾರವೇ. ಅಂದು ಕ್ಯೂಬದಿಂದ ಓಡಿಬಂದ ಜನರನ್ನು ಅಮೇರಿಕಾ ಇಂದಿಗೂ ಸಾಕುತ್ತಿದೆ. ತನ್ನ ಸಮೀಪದ ಲ್ಯಾಟಿನ್ ಅಮೇರಿಕಾದ ಪುಟ್ಟ ರಾಷ್ಟ್ರವೊಂದು ವಿಶ್ವದ ದೈತ್ಯ ಬಂಡವಾಳಶಾಹಿ ರಾಷ್ಟ್ರವೆನಿಸಿಕೊಂಡಿರುವ ತನಗೆ ಸವಾಲಾಗಿ ನಿಂತಿರುವುದು ಅಮೇರಿಕಾ ಸರ್ಕಾರಕ್ಕೆ ನುಂಗಲಾರದ ತುತ್ತು. ಅಮೇರಿಕಾ ಮತ್ತು ಅದರ ಬಾಲಬಡುಕ ದೇಶಗಳು ಕ್ಯೂಬದ ಮೇಲೆ ವಿಧಿಸಿರುವ ಆರ್ಥಿಕ ದಿಗ್ಬಂಧನ ಉಸಿರು ಕಟ್ಟಿಸುವಂತಹದ್ದು. ಆದರೂ ಕೂಡ ಕ್ಯೂಬ ತನ್ನ ಜೀವಂತಿಕೆ ಕಳೆದು ಕೊಳ್ಳದೆ ಆರೋಗ್ಯ, ವಿದ್ಯಾಭ್ಯಾಸ, ಕ್ರೀಡೆ ಇತ್ಯಾದಿ ಕ್ಷೇತ್ರಗಳಲ್ಲಿ ಅಮೋಘ ಸಾಧನೆ ಮಾಡಿರುವುದು, ವಿಶ್ವಸಂಸ್ಥೆಯ ಪ್ರಶಂಸೆ ಗಳಿಸಿರುವುದು ಶ್ಲಾಘನೀಯ ಮತ್ತು ಅನುಕರಣೀಯ. ಸೋವಿಯತ್ ಒಕ್ಕೂಟದ ಪತನದ ನಂತರ ಕ್ಯೂಬ ಒಬ್ಬಂಟಿಯಾಗಿ ನಿಂತು ಎಲ್ಲ ಕಷ್ಟಗಳನ್ನೆದುರಿಸಿ ಉಳಿದು ಬೆಳೆದದ್ದು ಲ್ಯಾಟಿನ್ ಅಮೇರಿಕಾದ ಸ್ವಾಭಿಮಾನಕ್ಕೆ ಒಂದು ನಿದರ್ಶನ.

**ಲ್ಯಾಟಿನ್ ಅಮೇರಿಕಾದ ಜನನಾಯಕ – ಶಾವೇಜ್**

ಈಗ ಕ್ಯೂಬ ಏಕಾಂಗಿಯಲ್ಲ. ಲ್ಯಾಟಿನ್ ಅಮೇರಿಕಾ ದಲ್ಲಿ ಇತ್ತೀಚಿನ ವರ್ಷಗಳಲ್ಲಿ ಅನೇಕ ಕ್ಯೂಬಗಳು ಹುಟ್ಟಿ ಅರಳಿವೆ. ಈ ಬೆಳವಣಿಗೆ ಕ್ಯೂಬ ಚರಿತ್ರೆಗೆ ನೀಡಿದ ಕೊಡುಗೆ. ರೋಗರುಜಿನ, ಬಡತನ, ನಿರಕ್ಷರತೆ, ನಿರುದ್ಯೋಗಗಳಿಂದ ಬಳಲಿದ್ದ ಶೋಷಿತ ಲ್ಯಾಟಿನ್ ಅಮೇರಿಕಾದ ಜನತೆ ಹಂಬಲಿಸಿದ ಪರ್ಯಾಯಕ್ಕೆ ಸ್ಪಂದಿಸಿದ ಹೊಸ ಪೀಳಿಗೆಯ ನಾಯಕರು ಇಂದು ಲ್ಯಾಟಿನ್ ಅಮೇರಿಕಾಕ್ಕೆ ನವ ಚೈತನ್ಯ ಮತ್ತು ಭರವಸೆ ನೀಡಿದ್ದಾರೆ. ವೆನೆಝೂಲ ದೇಶದ ಅಧ್ಯಕ್ಷ ಹ್ಯೂಗೋ ಶಾವೇಜ್ ಈ ಬೆಳವಣಿಗೆಯ ಹರಿಕಾರ, ಈತ ೧೯೯೮ರಿಂದ ವೆನೆಝೂಲದ ಅಧ್ಯಕ್ಷ, ಅಮೇರಿಕಾ ಸರ್ಕಾರದ ಆರ್ಥಿಕ ಮತ್ತು ವಿದೇಶಾಂಗ ನೀತಿಯ ಕಡು ವಿರೋಧಿ. ತನ್ನ ದೇಶದ ವ್ಯವಹಾರದಲ್ಲಿ ಅಮೇರಿಕಾ ಮೂಗು ತೂರಿಸಲು ಈತ ಬಿಡುತ್ತಿಲ್ಲ. ಅಮೇರಿಕಾದ ಮಾಜಿ ಅಧ್ಯಕ್ಷ ಜಾರ್ಜ್ ಬುಷ್‌ನನ್ನು ಪ್ರಪಂಚದ ಅತಿ ದೊಡ್ಡ ಭಯೋತ್ಪಾದಕನೆಂದು ಜರೆದ. ವೆನೆಝೂಲ ಅಪಾರ ತೈಲ ಸಂಪತ್ತನ್ನು ಹೊಂದಿರುವ ದೇಶ. ಅಮೇರಿಕಾದ ತೈಲದಾಹ ವೆನೆಝೂಲವನ್ನು ಒಂದು ನವ ವಸಾಹತುವನ್ನಾಗಿಸಿಕೊಂಡಿತ್ತು. ಶಾವೇಜ್ ಅಧಿಕಾರಕ್ಕೆ ಬಂದ ಕೂಡಲೆ ತೈಲ ಕಂಪನಿ ಮತ್ತಿತರ ಉದ್ದಿಮೆಗಳನ್ನು ರಾಷ್ಟ್ರೀಕರಿಸಿದ. ತೈಲದ ರಫ್ತಿನಿಂದ ಬಂದ ಬಹುಪಾಲು ಹಣವನ್ನು ಬಡತನ ನಿರ್ಮೂಲನ ಕಾರ್ಯಗಳಿಗೆ ಹರಿಸಲು ಪ್ರಾರಂಭಿಸಿದ. ತೈಲ ಉದ್ದಿಮೆ ವೆನೆಝೂಲಕ್ಕೆ ಶೇಕಡ ೫೦ರಷ್ಟು ಆದಾಯ ತಂದರೆ, ದೇಶದ ೮೦% ವಿದೇಶಿ ವಿನಿಮಯ ಗಳಿಕೆಗೆ ಕಾರಣವಾಗಿದೆ. ಶಾವೇಜ್ ಬಡ ದೇಶಗಳಿಗೆ ರಿಯಾಯಿತಿ ದರದಲ್ಲಿ ತೈಲ ನೀಡುತ್ತಾನೆ. ಕ್ಯೂಬ, ನಿಕರಾಗುವ ಇತ್ಯಾದಿ ಲ್ಯಾಟಿನ್ ಅಮೇರಿಕಾದ ದೇಶಗಳಿಗೆ ವಿಶೇಷ ನೆರವು ನೀಡುತ್ತಾನೆ. ಶಾವೇಜ್ ಅಧಿಕಾರಕ್ಕೆ ಬಂದನಂತರ ವೆನೆಝೂಲದಲ್ಲಿ ಆರ್ಥಿಕ ಅಸಮಾನತೆ ಕಡಿಮೆಯಾಗುತ್ತಿದೆ ಮತ್ತು ಸಮಾಜದಲ್ಲಿ ಆದಾಯ ವಿತರಣೆ ನ್ಯಾಯಯುತವಾಗಿದೆ ಎಂದು ಅಂತರರಾಷ್ಟ್ರೀಯ ಸಂಸ್ಥೆಯೊಂದು ಸಮೀಕ್ಷಾವರದಿ ಯಲ್ಲಿ ತಿಳಿಸಿದೆ. ಶಾವೇಜ್ ಸಂವಿಧಾನವನ್ನು ತನ್ನ ಅನುಕೂಲಕ್ಕೆ ತಕ್ಕ ಹಾಗೆ ತಿದ್ದುಪಡಿ ಮಾಡಿ ಕೊಂಡಿದ್ದಾನೆಂದು ಇವನ ವಿರೋಧಿಗಳು ದೂರಿದರೂ ಪ್ರತಿಯೊಂದು ತಿದ್ದುಪಡಿಯನ್ನು ಜನತೆ ಮತದಾನದ ಮೂಲಕ ಒಪ್ಪಿಕೊಂಡಿರುವುದನ್ನು ಮರೆಯುವಂತಿಲ್ಲ. ಅಕ್ಟೋಬರ್ ೨೦೧೨ರಲ್ಲಿ ನಡೆದ ಅಧ್ಯಕ್ಷೀಯ ಚುನಾವಣೆಯಲ್ಲಿ ಶಾವೇಜ್ ವಿರುದ್ಧ ೩೧ ರಾಜಕೀಯ ಪಕ್ಷಗಳು ಒಂದಾಗಿ ಹೆನ್ರಿ ಕ್ಯಾಪ್ರಿಲೆಸ್‌ನನ್ನು ಅಭ್ಯರ್ಥಿಯಾಗಿ ನಿಲ್ಲಿಸಿದ್ದವು. ಆದರೂ ಶಾವೇಜ್ ಮತ್ತೆ ಅಧ್ಯಕ್ಷನಾಗಿ ಚುನಾಯಿತನಾಗಿದ್ದಾನೆ. ಈ ಅಧಿಕಾರದ ಅವಧಿಯಲ್ಲಿ ಮೂವತ್ತು ಲಕ್ಷ ಮನೆಗಳನ್ನು ಕಟ್ಟುವ ಯೋಜನೆ ಹಾಕಿಕೊಂಡಿದ್ದಾನೆ.

**ಪರ್ಯಾಯ ವ್ಯವಸ್ಥೆಯ ಹರಿಕಾರ**

ಒಂದು ಕಡೆ ವೆನೆಝೂಲದ ರಾಷ್ಟ್ರೀಯ ಬೆಳವಣಿಗೆ ಯತ್ತ ಗಮನವಿತ್ತಿರುವ ಶಾವೇಜ್ ಇನ್ನೊಂದೆಡೆ ಲ್ಯಾಟಿನ್ ಅಮೇರಿಕಾ ದೇಶಗಳನ್ನು ರಾಜಕೀಯ ಆರ್ಥಿಕ ಹಾಗೂ ಮಿಲಿಟರಿ ಹೊಂದಾಣಿಕೆಯಲ್ಲಿ ಬೆಸೆಯಲು ಪ್ರಯತ್ನಿಸುತ್ತಿದ್ದಾನೆ. ಅರ್ಜೆಂಟೈನಾ, ಬ್ರೆಝಿಲ್, ಬೊಲಿವಿಯ, ನಿಕರಾಗುವ ಮತ್ತಿತರ ಲ್ಯಾಟಿನ್ ಅಮೇರಿಕಾ ದೇಶಗಳು ಕೂಡಿ ಬ್ಯಾಂಕ್ ಆಫ್ ಸೌತ್ ಸ್ಥಾಪಿಸಲಾಗಿದೆ. ಇದು ಲ್ಯಾಟಿನ್ ಅಮೇರಿಕಾ ದೇಶಗಳ ಆರ್ಥಿಕ ಬೆಳವಣಿಗೆಗೋಸ್ಕರ ಸ್ಥಾಪಿಸಲ್ಪಟ್ಟಿರುವ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಗೆ ಪರ್ಯಾಯ ವ್ಯವಸ್ಥೆ. ನೊಬೆಲ್ ಪ್ರಶಸ್ತಿ ವಿಜೇತ ಆರ್ಥಿಕ ತಜ್ಞ ಜೊಸೆಫ್ ಸ್ಟಿಗ್ಲಿಟ್ಜ್ ಬ್ಯಾಂಕ್ ಆಫ್ ಸೌತ್ ಸ್ಥಾಪನೆಯನ್ನು ಪ್ರಶಂಸಿಸಿದ್ದಾನೆ. ಈ ಬೆಳವಣಿಗೆಗಳನ್ನು ಸಹಿಸದವರೂ ಇದ್ದಾರೆ. ಹ್ಯೂಗೋ ಶಾವೇಜ್‌ನನ್ನು ಪ್ರಜಾಪ್ರಭುತ್ವ ವಿರೋಧಿ, ಸರ್ವಾಧಿಕಾರಿ, ಮಾನವ



**ಹ್ಯೂಗೋ ಶಾವೇಜ್**

ಹಕ್ಕುಗಳನ್ನು ಉಲ್ಲಂಘಿಸುತ್ತಿರುವವನು ಇತ್ಯಾದಿ ಅಪಪ್ರಚಾರ ನಡೆದಿದೆ. ಪ್ರವಾಹದೆದುರು ಈಜುವುದು ಕಷ್ಟದ ಕೆಲಸ. ಶಾವೇಜ್ ಇದನ್ನು ಹವ್ಯಾಸ ಮಾಡಿಕೊಂಡುಬಿಟ್ಟಿದ್ದಾನೆ. ಹಾಗಾಗಿ ಬಂಡವಾಳಶಾಹಿ ಹಿಡಿತದಲ್ಲಿರುವ ಮಾಧ್ಯಮಗಳಿಗೂ ಮತ್ತು ಶಾವೇಜ್‌ಗೂ ಆಗಾಗ್ಗೆ ಲಟಾಪಟಿ ನಡೆಯುತ್ತಿರುತ್ತದೆ. ಕ್ಯಾನ್ಸರ್ ಬಾಧಿಸುತ್ತಿದ್ದರೂ ಶಾವೇಜ್ ಕ್ರಿಯಾಶೀಲನಾಗಿದ್ದಾನೆ. ೨೧ನೇ ಶತಮಾನದ ಸಮಾಜವಾದವೇ ತನ್ನ ಪರಿಕಲ್ಪನೆ ಮತ್ತು ಗುರಿ ಎಂದು ಘೋಷಿಸಿದ್ದಾನೆ. ಈತ ಲ್ಯಾಟಿನ್ ಅಮೇರಿಕಾದ ಸಮ - ಸಮಾಜ ವ್ಯವಸ್ಥೆಯ ಹರಿಕಾರನೆಂದರೆ ಅತಿಶಯೋಕ್ತಿಯಲ್ಲ. ಬಂಡವಾಳಶಾಹಿ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಕ್ಕೊಂದು ಪರ್ಯಾಯ ವ್ಯವಸ್ಥೆಯ ಪ್ರಯತ್ನ ಸಾಕಾರಗೊಳ್ಳುತ್ತಿದೆ.

**ಹರಡಿದ ಸಮಾಜವಾದದ ಸೊಗಡು**

ಹ್ಯೂಗೊ ಶಾವೇಜ್ ೨೧ನೇ ಶತಮಾನದ ಸಮಾಜವಾದದ ಹೇಳಿಕೆ ಅವನ ಆದರ್ಶದ ಟೊಳ್ಳು ಅಭಿವ್ಯಕ್ತಿಯಾಗಲಿಲ್ಲ. ಈ ಶತಮಾನದ ಮೊದಲ ದಶಕದಲ್ಲೆ ಒಂದಾದನಂತರ ಒಂದು ಲ್ಯಾಟಿನ್ ಅಮೇರಿಕಾ ದೇಶಗಳು ಸಮಾಜವಾದದ ಸೆಳೆತಕ್ಕೆ ಒಳಗಾದದ್ದೇ ಇದಕ್ಕೆ ಸಾಕ್ಷಿ. ಚಿಲಿಯ ರಿಕಾರ್ಡೋ ಲಾಗೋಸ್ ಮತ್ತು ಮಿಶೆಲ್ ಬ್ಯಾಚಲೆ, ಬ್ರೆಝಿಲ್‌ನ ಲೂಲ ಡಿಸಿಲ್ವ ಮತ್ತು ದಿಲ್ಮ ರೌಸೆಫ್, ಅರ್ಜೆಂಟೈನಾದ ನೆಸ್ಟರ್ ಕರ್ಶನರ್ ಮತ್ತು ಕಿಸ್ಟೀನಾ ಫರ್ನಾಂಡಿಸ್ ಉರುಗ್ವೆಯ ವಾಸ್‌ಕ್ವೆಜ್ ತಬಾರೆ ಮತ್ತು ಜೋಸ್ ಮುಜೀಕ, ಬೊಲಿವಿಯದ ಈವ ಮೊರಾಲೆಸ್, ನಿಕರಾಗುವಾದ ಡೇನಿಯಲ್ ಒರ್ಟೆಗಾ, ಈಕ್ವೆಡಾರ್‌ನ ರಫೇಲ್ ಕೊರ್ರಿಯ, ಪೆರುಗ್ವೆಯ ಫರ್ನಾಂಡೊ ಲುಗೊ. ಪೆರುವಿನ ಒಲ್ಲಾಂಟ ಹುಮಾಲ, ಹೊಂಡುರಾಸ್‌ನ ಮ್ಯಾನುವೆಲ್ ಜೆಲಾಯ ಮತ್ತು ಎಲ್ ಸಾಲ್ವೆಡೋರ್‌ನ ಮೌರಿಸಿಯಾ ಫ್ಯೂನ್ಸ್ ಆಯಾ ದೇಶಗಳ ಜನತೆಯ ವಿಶ್ವಾಸ ಮತ್ತು ಬೆಂಬಲ ಪಡೆದಿರುವ ಸಮಾಜವಾದಿ ನಾಯಕರು. ಮೆಕ್ಸಿಕೊ ದೇಶದಲ್ಲಿ ಇತ್ತೀಚೆಗೆ ನಡೆದ ಅಧ್ಯಕ್ಷೀಯ ಚುನಾವಣೆಯಲ್ಲಿ ಎಡಪಂಥೀಯ




ರವುಲ್ ಕ್ಯಾಸ್ಟ್ರೊ

ಅಭ್ಯರ್ಥಿ ಅಲ್ಪ ಅಂತರದಿಂದ ಸೋತರೂ ಆ ದೇಶವೂ ಸಮಾಜವಾದಿ ವ್ಯವಸ್ಥೆಯತ್ತ ವಾಲುತ್ತಿರುವುದರ ಸೂಚನೆ. ಒಟ್ಟಿನಲ್ಲಿ ಸಮಾಜವಾದದ ಸೊಗಡು ಇಡೀ ಲ್ಯಾಟಿನ್ ಅಮೆರಿಕಾವನ್ನು ಆವರಿಸುತ್ತಿದೆ. ಇದೊಂದು ಮಹತ್ವದ ಚಾರಿತ್ರಿಕ ಬೆಳವಣಿಗೆ.

**ಲ್ಯಾಟಿನ್ ಅಮೆರಿಕಾದ ಬೋಲಿವರ್ ಪರ್ಯಾಯ**

ಸಮಾಜವಾದಿಯೊಬ್ಬನನ್ನು ಚುನಾಯಿಸಿದ ಮಾತ್ರಕ್ಕೆ ದೇಶ ಸಮಾಜವಾದಿ ವ್ಯವಸ್ಥೆಯಾಗುವುದಿಲ್ಲ, ಅದು ನಿರ್ಧರಿತವಾಗುವುದು ಸಮಾಜವಾದಿ ಕಾರ್ಯಕ್ರಮಗಳ ಅನುಷ್ಠಾನದಿಂದ. ಬಂಡವಾಳಶಾಹಿ ಜಾಗತೀಕರಣವೇ ಎಲ್ಲ ಆರ್ಥಿಕ ಸಮಸ್ಯೆಗಳಿಗೂ ಸಿದ್ಧೌಷಧವೆಂದು ಪ್ರಚಾರ ಮಾಡುವ ವಿಶ್ವ ಬ್ಯಾಂಕ್, ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆ ಮತ್ತು ಬಹುರಾಷ್ಟ್ರೀಯ ಕಂಪನಿಗಳ ಹಿಡಿತಕ್ಕೆ ಸಿಕ್ಕು ನಲುಗಿರುವ ರಾಷ್ಟ್ರಗಳ ಸಂಖ್ಯೆ ಕಡಿಮೆಯೇನಲ್ಲ. ಲ್ಯಾಟಿನ್ ಅಮೆರಿಕಾ ದೇಶಗಳ ಕಥೆಯೂ ಇದೇಯೇ ಆಗಿತ್ತು. ೨೦೦೬ರಲ್ಲಿ ಈಕ್ವೆಡಾರ್‌ನ ಅಧ್ಯಕ್ಷನಾಗಿ ಚುನಾಯಿತನಾದ ರಫೈಲ್ ಕೊರ್‍ರಿಯ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ವಿರುದ್ಧ ತಿರುಗಿಬಿದ್ದ. ಈಕ್ವೆಡಾರ್‌ನ ೫೧೦ ಮಿಲಿಯನ್ಸ್ ಡಾಲರ್ ವಿದೇಶಿ ಸಾಲ ಅಕ್ರಮವಾದದ್ದು ಎಂದು ಘೋಷಿಸಿ ಸಾಲ ಮತ್ತು ಬಡ್ಡಿಯನ್ನು ಕೊಡುವುದಿಲ್ಲವೆಂದು ಹಠ ಹಿಡಿದ. ಕೊರ್‍ರಿಯ ಅಮೆರಿಕಾ ವಿಶ್ವವಿದ್ಯಾನಿಲಯದಲ್ಲಿ ಅರ್ಥಶಾಸ್ತ್ರದಲ್ಲಿ ಡಾಕ್ಟರೇಟ್ ಪಡೆದ ಆರ್ಥಿಕ ತಜ್ಞ . ಚೌಕಾಸಿ ಮಾಡಿ ದೇಶದ ಸಾಲ ಮತ್ತು ಬಡ್ಡಿಯ ಹೊರೆಯನ್ನು ಬಹಳ ಕಡಿಮೆ ಮಟ್ಟಕ್ಕೆ ಇಳಿಸಿ, ದೇಶದ ವಿದೇಶಿ ವಿನಿಮಯ ಉಳಿಸಿದ. ಈಕ್ವೆಡಾರ್‌ನ ತೈಲ ಕಂಪನಿಗಳನ್ನು ರಾಷ್ಟ್ರೀಕರಿಸಿದ. ಬಂಡವಾಳಶಾಹಿ ಆರ್ಥಿಕ ಸಂಸ್ಥೆಗಳು ದೇಶದ ಆರ್ಥಿಕ ಪರಿಸ್ಥಿತಿಯನ್ನು ನಿಯಂತ್ರಿಸಲು ಬಿಡೆವು ಎಂದು ಸಾರಿ 'ಲ್ಯಾಟಿನ್ ಅಮೆರಿಕಾದ ಬೋಲಿವರ್ ಪರ್ಯಾಯ' ಎಂಬ ಒಕ್ಕೂಟದ ಪ್ರವರ್ತಕನಾದ. ವೆನೆಜ್ಹೂಲದ ಶ್ಯಾವೇಜ಼್‌ನಂತೆಯೆ ತೈಲದಿಂದ ಮತ್ತಿತರ ಸಂಪನ್ಮೂಲಗಳಿಂದ ಬಂದ ಆದಾಯವನ್ನು ಬಡತನ ನಿರ್ಮೂಲನ ಮತ್ತಿತರ ಸಾಮಾಜಿಕ ಭದ್ರತಾ ಕಾರ್ಯಕ್ರಮಗಳಿಗೆ ಹರಿಸಿದ ಬೊಲಿವಿಯದ ಅಧ್ಯಕ್ಷ ಈವ ಮೊರಾಲೆಸ್ ಈ ವೇಳೆಗಾಗಲೆ ಇದೇ ಹಾದಿ ಹಿಡಿದಿದ್ದ.

**ದಾಳಿ – ಪ್ರತಿದಾಳಿ**

ಈಕ್ವೆಡಾರ್‌ನ ಪೊಲೀಸ್‌ಗೆ ಅಮೆರಿಕಾ ಬಹಳಷ್ಟು ವರ್ಷಗಳಿಂದ ಹಣ ನೀಡುವುದು ಒಂದು ಪದ್ಧತಿಯಾಗಿ ಹೋಗಿತ್ತು. ಯಾರನ್ನು ಉನ್ನತ ಪೊಲೀಸ್ ಹುದ್ದೆಗೆ ಏರಿಸಬೇಕೆಂಬುದನ್ನು ಈಕ್ವೆಡಾರ್‌ನಲ್ಲಿದ್ದ ಅಮೆರಿಕಾದ ರಾಯಭಾರಿ ಕಚೇರಿಯು ನಿರ್ಧರಿಸುತ್ತಿತ್ತು. ೨೦೧೦ರಲ್ಲಿ ಕೊರ್‍ರಿಯ ಈ ಪದ್ಧತಿಯನ್ನು ರದ್ದುಪಡಿಸಿದ. ಜೊತೆಗೆ ಪೊಲೀಸರ ವೇತನವನ್ನು ಹೆಚ್ಚಿಸಿದ. ಇದರಿಂದ ಸಂತುಷ್ಟರಾಗದ ಪೊಲೀಸರು ಮುಷ್ಕರ ಹೂಡಿದರು. ಅವರೊಡನೆ ನೇರ ಮಾತುಕತೆ ನಡೆಸಲು ಹೋದ ಕೊರ್‍ರಿಯನನ್ನೇ ಪೊಲೀಸರು ಮುತ್ತಿಗೆ ಹಾಕಿದರು. ನಂತರ ನಡೆದ ಮಿಲಿಟರಿ ಕಾರ್ಯಾಚರಣೆಯಲ್ಲಿ ಕೊರ್‍ರಿಯ ಹೊರಬಂದು ಪೊಲೀಸರ ಬಂಡಾಯವನ್ನು ಕೊನೆಗೊಳಿಸಿದ. ಈ ವಿಷಯವಾಗಿ ಖಾಸಗಿ ಪತ್ರಿಕೆಗಳು ಇವನ ವಿರುದ್ಧ ಅಪಪ್ರಚಾರದ ದಾಳಿ ನಡೆಸಿದವು. ಕೊರ್‍ರಿಯ ಪ್ರತಿದಾಳಿ ನಡೆಸಿದ. ಆ ಪತ್ರಿಕೆಗಳ ಮೇಲೆ ಮಾನನಷ್ಟ ಮೊಕದ್ದಮೆಗಳನ್ನು ಹಾಕಿ ಗೆದ್ದ. ಖಾಸಗಿ ಪತ್ರಿಕೆಗಳು ಶ್ರೀಮಂತರ ಆಸ್ತಿ-ಅಧಿಕಾರವನ್ನು ಕಾಯಲು ಇರುವ ದಲ್ಲಾಳಿಗಳೆಂದು ಜರೆದ. ತನ್ನ ಮೇಲಿನ ಪತ್ರಿಕಾ ಸ್ವಾತಂತ್ರ್ಯಹರಣದ ಆರೋಪಕ್ಕೆ ಉತ್ತರವಾಗಿ ಜೂಲಿಯನ್ ಅಸಾಂಜ್‌ಗೆ ಆಶ್ರಯ ನೀಡಿದ. ಈಗ ಈತನ ಜನಪ್ರಿಯತೆ ದಿನೇ ದಿನೇ ಹೆಚ್ಚುತ್ತಿದೆ. ಚಿಲಿಯಲ್ಲಿ ಇತ್ತೀಚೆಗೆ ನಡೆದ ನಗರಪಾಲಿಕೆಯ ಚುನಾವಣೆಯಲ್ಲಿ ಸಮಾಜವಾದಿ ಅಭ್ಯರ್ಥಿಗಳು ಭಾರಿ ಬಹುಮತದಿಂದ ಜಯಗಳಿಸಿರುವುದು ಲ್ಯಾಟಿನ್ ಅಮೆರಿಕಾದಲ್ಲಿ ಬೇರೂರುತ್ತಿರುವ ಸಮಾಜವಾದಿ ಚಿಂತನೆಗೆ ನಿದರ್ಶನ.

**ಯುಗದ ಬದಲಾವಣೆ**

ತಮ್ಮ ತಮ್ಮ ದೇಶಗಳಲ್ಲಿನ ಆಂತರಿಕ ಸಂಪನ್ಮೂಲಗಳನ್ನು ಹತೋಟಿಗೆ ತೆಗೆದುಕೊಂಡು ಸಮಾನವಾಗಿ ವಿತರಿಸಿ ಸಮಾನತೆ ತರುವ ಯತ್ನ, ಪರಸ್ಪರ ಸಹಾಯ ಮತ್ತು ಸಹಕಾರಕ್ಕಾಗಿ ರಚಿಸಿಕೊಂಡಿರುವ ಒಕ್ಕೂಟ ಮತ್ತು ಬ್ಯಾಂಕ್, ವಿದೇಶಾಂಗ ನೀತಿ, ಪರಿವರ್ತನೆಯ ಇಚ್ಛಾಶಕ್ತಿ ಇತ್ಯಾದಿಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವುಗಳಲ್ಲಿ ರಾಜಕೀಯ, ಆರ್ಥಿಕ ಮತ್ತು ಸಾಮಾಜಿಕ ಪರಿಕಲ್ಪನೆಯ ಸ್ಪಷ್ಟತೆ ಮತ್ತು ಸಾಮ್ಯತೆ ಕಾಣಬಹುದು. ನಾವು ಒಂದು ವ್ಯವಸ್ಥೆಯನ್ನು ನಿರ್ವಹಿಸಲು ಅಧಿಕಾರಕ್ಕೆ ಬಂದಿಲ್ಲ, ನಾವು ಅದನ್ನು ಬದಲಾಯಿಸುತ್ತಿದ್ದೇವೆ. ಇದು ಬದಲಾವಣೆಯ ಯುಗವಲ್ಲ, ಇದು ಯುಗದ ಬದಲಾವಣೆ ಎಂದು ಈಕ್ವೆಡಾರ್‌ನ ರಫೈಲ್ ಕೊರ್‍ರಿಯ ನುಡಿದದ್ದು ಲ್ಯಾಟಿನ್ ಅಮೆರಿಕಾ ದೇಶಗಳು ಹಿಡಿದ ಹೊಸ ಹಾದಿಯ ದರ್ಶನ, ಬಂಡವಾಳಶಾಹಿ ವ್ಯವಸ್ಥೆಯಲ್ಲಿ ನರಳುತ್ತಿರುವವರಿಗೊಂದು ಹೊಸ ಚೇತನ.




**ಮುರಳೀಧರ ಚಿಕ್ಕಮಗಳೂರು**
ವಕೀಲರು, ನಂ. ೮೩, ಮಲ್ಲೇಶ್ವರಂ ವೃತ್ತ
ಬೆಂಗಳೂರು - ೫೬೦ ೦೦೩




# ಬಿಟ್ಟುಬಂದ ಹಳ್ಳಿಗಳ ಪಾಡು ನೋಡಿ!

ಹಳ್ಳಿ ಹಾದಿ... ಇಂದಿನ ಹಳ್ಳಿಗಳ ನೈಜ ಚಿತ್ರಣವನ್ನು ಬಿಂಬಿಸುವ ಜೊತೆಗೆ ಅಲ್ಲಿನ ದಾರುಣ ಬದುಕು ಹೇಗಿದೆಯೆಂಬ ಅರಿವು ಮೂಡಿಸುವ ಲೇಖನಗಳ ಸಂಗ್ರಹ. ನಗರಗಳ ಮೋಹದಿಂದಾಗಿ ನಾವಿಟ್ಟ ತಪ್ಪು ಹೆಜ್ಜೆಗಳನ್ನು ಮನವರಿಕೆ ಮಾಡಿಕೊಟ್ಟು ಹಳ್ಳಿಗಳನ್ನು ಕಡೆಗಣಿಸಿದ್ದರಿಂದ ಉಂಟಾದ ಇಂದಿನ ದುರ್ಭರ ಪರಿಸ್ಥಿತಿಯನ್ನು ತಿಳಿಸಿಕೊಡುವ ಅಮೂಲ್ಯ ವಿಚಾರಗಳ ಬರಹಗಳಿವು. ಹೌದು, ಅಂದು ಗಾಂಧೀಜಿ ತಿಳಿಹೇಳಿದಂತೆ ಹಳ್ಳಿಗಳನ್ನು ಗೌರವಿಸಿ ಕೃಷಿಗೆ ಪ್ರಾಧಾನ್ಯತೆ/ಪ್ರಥಮಾದ್ಯತೆ ನೀಡಿ, ಗುಡಿಕೈಗಾರಿಕೆಗಳನ್ನು ಪ್ರೋತ್ಸಾಹಿಸಿ ಸ್ವಾವಲಂಬನೆ ಸಾಧಿಸಿದ್ದರೆ ನಮ್ಮೆಲ್ಲ ಅಗತ್ಯಗಳಿಗೆ ಬೇರೆಡೆ ನೋಡಬೇಕಾಗಿದ್ದಿಲ್ಲ, ಹಳ್ಳಿಗಳಲ್ಲೂ ಬದುಕಿದೆ. ಸಮುದಾಯದ ಒಳಿತನ್ನು ಬಯಸುವ ಅವರ ಜೀವನ ವಿಧಾನ ತನ್ನ ಒಳಿತಿಗಾಗಿ ಮಾತ್ರ ದುಡಿಯುವ ನಗರ ಸಂಸ್ಕೃತಿಗಿಂತ ಸಂಪೂರ್ಣ ಭಿನ್ನ. ಹಳ್ಳಿಯ ಜೀವನ ಶ್ರಮಸಂಸ್ಕೃತಿಯದು. ಕಷ್ಟದ, ದೈಹಿಕ ಶ್ರಮದ ಕೆಲಸ ಯಾರಿಗೂ ಬೇಕಾಗಿದ್ದಿಲ್ಲ, ಕಷ್ಟಪಡುವವರು ಬುದ್ಧಿಯಿಲ್ಲದವರೆಂದು ಪರಿಗಣಿಸಲಾಗಿತ್ತು. ಸುಮಾರು ಮೂವತ್ತು ಮೂವತ್ತೈದು ವರ್ಷಗಳ ಹಿಂದಿನ ಮಾತು – ''ತೈಯಾ ತಕ-ತೈಯಾ ತಕ, ಕಾಲೇಜಿಗೆ ಬಂದನಯ್ಯ ಹಳ್ಳೀಮುಕ್ಕ'' ಎಂಬ ಹಳ್ಳಿಗರನ್ನು ಗೇಲಿ ಮಾಡುವ ಗೀತೆಯೊಂದು ಎಲ್ಲೆಡೆ ಪ್ರಚುರವಾಗಿತ್ತು. ಅಂದು ಪಟ್ಟಣದವರು ಶ್ರೇಷ್ಠರು, ಹಳ್ಳಿಗರು ನಾಲಾಯಕ್ಕು ಎಂಬ ಭಾವನೆ ಬಲವಾಗಿತ್ತು. ನಗರಗಳಲ್ಲಿ ಸಕಲ ಸೌಕರ್ಯಗಳಿದ್ದವು. ನಾಲ್ಕಕ್ಷರ ಕಲಿತು ನೌಕರಿ ಹಿಡಿದರೆ ಆರಾಮ ಜೀವನ. ಸರಿ, ಮುಂದೆ ಹಳ್ಳಿಯ ಮಕ್ಕಳೆಲ್ಲ ಶಾಲಾ ಕಾಲೇಜು ಸೇರಿ ಹಳ್ಳಿಗಳನ್ನು ಕಡೆಗಣಿಸಿ ನಗರವಾಸಿಗಳಾಗಿ ಜೀವನ ಪದ್ಧತಿಯನ್ನು ಬದಲಾಯಿಸಿಕೊಂಡರು. ಭಾರತದ ಹಳ್ಳಿಗಳ ಚಿತ್ರಣವೇ ಬದಲಾಯಿತು... ಕ್ರಮೇಣ ಯಂತ್ರಗಳ ಅವಲಂಬನೆಯಿಂದಾಗಿ ಶ್ರಮಜೀವನಕ್ಕೆ ಆಸ್ಪದವಿಲ್ಲದೆ ಜೀವನಕ್ರಮ ಬದಲಾಗಿ ದೈಹಿಕ-ಮಾನಸಿಕ ಸ್ವಾಸ್ಥ್ಯದಲ್ಲಿ ಏರುಪೇರು ಉಂಟಾಯಿತು. ಇಂದು ವಿವೇಚನಾಶೂನ್ಯ ಬದುಕು ಆತನದು.

ಇನ್ನು ಅರಣ್ಯನಾಶ ಎಂಬುದೊಂದು ನಮ್ಮ ಸ್ವಯಂಕೃತಾಪರಾಧ. ಕಟ್ಟಿಗೆಯನ್ನು ಉರುವಲಾಗಿ ಮರ ಕಡಿದು ಉರಿಸಿ ಭಸ್ಮ ಮಾಡಿದೆವು. ಬೀಡಿ ಸೇದಿ ಬೇಸಗೆಯಲ್ಲಿ ಅರಣ್ಯ ಬದಿಯ ಹುಲ್ಲಿಗೆ ಎಸೆದು ಸಾವಿರಾರು ಎಕರೆ ಕಾಡನ್ನು ನೀಗಿಕೊಂಡೆವು. ನಾಗರಿಕತೆಯ ಕುರುಹಾಗಿ ಕುಟುಂಬಗಳು ವಿಘಟನೆಗೊಂಡು ಒಂದೇ ಸೂರಿನಡಿ ಬಾಳುತ್ತಿದ್ದ ಮಕ್ಕಳು ಹತ್ತು ಮನೆ ಕಟ್ಟಿಕೊಳ್ಳುವಂತಾಯ್ತು. ನೂರಾರು ವರ್ಷಗಳ ಹಿಂದೆ ಯಾರೋ ಪುಣ್ಯಾತ್ಮರು ನೆಟ್ಟ ಮರಗಳುರುಳಿ ಮನೆಗೆ ಕಿಟಿಕಿ ಬಾಗಿಲುಗಳಾಗಿ ಕಂಗೊಳಿಸಿದವು. ಗಂಧದ ಮರಗಳಂತೂ ಕಡಿಯಲ್ಪಟ್ಟು ವಿಗ್ರಹಗಳಾಗಿ ರೂಪುಗೊಂಡು ಕುಸುರಿ ಕೆಲಸದ ಕೆತ್ತನೆಯಿಂದಾಗಿ ಮನುಷ್ಯನ ಮನಸೆಳೆಯಲ್ಪಟ್ಟು – ನೆನಪಿರಲಿ, ಪ್ರಾಣಿ ಪಕ್ಷಿಗಳಂತಹ ಇತರ ಯಾವುದೇ ಜೀವಿಗಳಲ್ಲ - ಮನೆ, ಸಭಾಂಗಣ, ದೇವಾಲಯಗಳಲ್ಲಿ ಅಲಂಕಾರ ವಸ್ತುವಾಗಿ ತುಂಬಲ್ಪಟ್ಟವು. ಇದು ಹೇರಳವಾಗಿ ಅರಣ್ಯಗಳಿದ್ದು ಜನಸಂಖ್ಯೆ ಕಡಿಮೆ ಇದ್ದಾಗ ದೊಡ್ಡ ಲೆಕ್ಕಾಚಾರವಾಗಿರಲಿಲ್ಲ, ಆದರೆ ಇಂದು ಪ್ರತಿಯೊಬ್ಬನೂ ತನಗೂ ಬೇಕು, ತನಗೂ ಬೇಕೆಂಬ ಸ್ಪರ್ಧೆಯಂತಹ ಬೇಡಿಕೆಯಿಟ್ಟಾಗ ಮರ ಕಡಿಯುವುದೇ ಅಭ್ಯಾಸವಾಯಿತಲ್ಲದೆ ನೆಡುವುದು ಯಾರಿಗೂ ನೆನಪಾಗಲಿಲ್ಲ, ಈ ಪುಸ್ತಕದಲ್ಲೊಂದು ಮಾತು ಬರುತ್ತದೆ :

''ಅಲ್ಲಾ ಸ್ವಾಮಿ, ಈ ಕಾಡನ್ನೆಲ್ಲ ಯಾರಾದ್ರು ನೆಟ್ಟಿ ಬೆಳೆಸಿದ್ರ? ಅದು ತಾನಾಗೇ ಬೆಳೀತು, ಹಾಳಾಗಿರೋ ಕಾಡಿನ ಕಡೆಗೆ ಯಾರೂ ಹೋಗ್ದೆ ಇದ್ರೆ ಸಾಕು ಕಾಡು ತಾನಾಗೇ ಬೆಳೆಯುತ್ತೆ'' – ಇದು ಗಿರಿಜನ ಮುಖಂಡ ಚಲುವಾದಿ ಮಾದೇಗೌಡರ ಮಾತು.

ಕಾಡಿನ ನಾಶದೊಂದಿಗೆ ಅಲ್ಲಿನ ಪ್ರಾಣಿ-ಪಕ್ಷಿಗಳಿಗೆ ನೆಲೆಯಿಲ್ಲದಂತಾಯಿತು. ಅರಣ್ಯಗಳನ್ನೇ ನಂಬಿಕೊಂಡಿದ್ದ ಬುಡಕಟ್ಟು ಜನರಿಗೆ – ಅಂದರೆ ಕಾಡು ಕಡಿಯದೆ ಕಾಡಿನ ಉತ್ಪನ್ನಗಳಿಂದಾಗಿ ಜೀವಿಸುತ್ತಿದ್ದವರಿಗೆ, ಬದುಕಲು ಬೇರೆ ದಾರಿ ಕಂಡುಕೊಳ್ಳಬೇಕಾಯಿತು. ಹೆಚ್ಚಿನವರು ನಗರ ಸಂಸ್ಕೃತಿಯ ಕಡೆಗೆ ಮುಖ ಮಾಡಲೇಬೇಕಾಯಿತು. ಇಲ್ಲಿನ ಲೇಖನಗಳಲ್ಲಿ ಅಂತಹ ಗಿರಿಜನರ - ಅರಣ್ಯದಂಚಿನಲ್ಲಿನ ಬುಡಕಟ್ಟು ಜನರ ಪಾಡನ್ನು ವಿವರಿಸುತ್ತ ನೆಲೆ ಕಳೆದುಕೊಂಡು ಬದುಕುವ ಪರಿಯನ್ನೂ ಚಿತ್ರಿಸಲಾಗಿದೆ... ಸುಮಾರು ಐವತ್ತೆಂಟು ಲೇಖನಗಳು ಸಾಮಾಜಿಕ ನೆಲೆಯಲ್ಲಿ ನಮ್ಮ ಬದುಕಿನ ಪರಿಯನ್ನು ವಿಶ್ಲೇಷಿಸುತ್ತವೆ.

ನಾವು ಬದುಕುತ್ತಿರುವ ಇಂದಿನ ಸಮಾಜದ ವೈಫಲ್ಯಗಳನ್ನು ಜನತೆಯೆದುರು ಕೂಗಿ ಹೇಳಿದಂತಿರುವ ಈ ಲೇಖನಗಳ ಮಹತ್ವದ ಅರಿವು ನಮಗಾಗಬೇಕು. ಇವು ಯಾವುದೋ ಕಾಲದಲ್ಲಿನ ಆಗಿಹೋದ ಘಟನೆಗಳಾಗಿರದೆ ನಾವು-ನೀವು ನೇರ ಮುಖಾಮುಖಿಯಾಗಬೇಕಾದ ಇಂದಿನ ಜ್ವಲಂತ ಸಮಸ್ಯೆಗಳು. ಸ್ವಾತಂತ್ರ್ಯಾನಂತರ ನಾವು ಸಾಮಾಜಿಕ-ಆರ್ಥಿಕ ಕ್ಷೇತ್ರಗಳಲ್ಲಿ ಸುಧಾರಿಸಬಹುದಿತ್ತು, ಹಾಗಾಗದಿದ್ದುದಕ್ಕೆ ದೇಶದ ಪ್ರತಿಯೊಬ್ಬ ಪ್ರಜೆ-ಪ್ರಜಾಪ್ರತಿನಿಧಿಯೇ ಹೊಣೆಗಾರ. ನಾವೆಲ್ಲ ಕೈಯಾರೆ ಸೃಷ್ಟಿಸಿಕೊಂಡ ಅತಿರೇಕಗಳು - ಸಮಸ್ಯೆಗಳು ತಿರುಗಿಬಂದು ನಮ್ಮನ್ನೇ ಹಿಂಸಿಸುವ 'ಬೂಮರಾಂಗ್' ಸ್ವರೂಪದವು. ಇಂಥದೇ ರೋಗವೆಂದು ಎಕ್ಸ್-ರೇ ಮೂಲಕ ಶೋಧಿಸಿದಂತೆ ಸಮಾಜದ ಒಟ್ಟು ಅವ್ಯವಸ್ಥೆಗೆ ಕಾರಣಗಳನ್ನು ನಿಚ್ಚಳವಾಗಿ ಪಟ್ಟಿಮಾಡಿ, ನಮ್ಮ ಮುಂದಿಟ್ಟು ಮನದಟ್ಟು ಮಾಡಿಕೊಟ್ಟಿದ್ದಾರೆ ಲೇಖಕ ಶ್ರೀ ಜಿ. ಎಸ್. ಜಯದೇವ. ಇವರು ಸಾಮಾಜಿಕ ಕಳಕಳಿ ಉಳ್ಳವರಷ್ಟೇ ಅಲ್ಲ; ಸ್ವತಃ

**ಇಂದಿರಾಕುಮಾರಿ**




ಲೇಖಕರು :
**ಜಿ. ಎಸ್. ಜಯದೇವ**

ಪುಟ : ೨೪೮ ಬೆಲೆ : ರೂ. ೧೫೦

ಪ್ರಕಾಶಕರು :
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೧

ಸಮಾಜಸೇವೆಗಾಗಿ ಬದುಕನ್ನು ಮುಡುಪಾಗಿಟ್ಟವರು ಮತ್ತು ಶಿಕ್ಷಕರಾಗಿಯೂ ಅನುಭವವುಳ್ಳವರು. ಹಾಗಾಗಿ ಇಲ್ಲಿನ ಹೆಚ್ಚಿನ ಲೇಖನಗಳು ಶಿಕ್ಷಣದ ಬಗ್ಗೆ ಇವೆ. ಇಂದಿನ ನಮ್ಮ ಶಾಲಾ ಶಿಕ್ಷಣ - ಅದರಲ್ಲೂ ಗ್ರಾಮೀಣ ಪ್ರದೇಶದ ಶಾಲೆಗಳ ಬಗ್ಗೆ – ಯಾವ ದಿಕ್ಕಿನಲ್ಲಿ ಸಾಗುತ್ತಿದೆಯೆಂದು ವಿಶ್ಲೇಷಿಸುತ್ತ ತೀವ್ರ ಅಸಮಾಧಾನ ವ್ಯಕ್ತಪಡಿಸುವ ಲೇಖಕರು ವಿದ್ಯಾಭ್ಯಾಸದ ವ್ಯಾಪಾರೀಕರಣಕ್ಕಾಗಿ ಮರುಗಿದ್ದಾರೆ. ಶಾಲೆಗಳು ಮಕ್ಕಳಿಗೆ ಎಳವೆಯಿಂದಲೇ ಶಿಕ್ಷಣದ ಮೂಲಕ ಉತ್ತಮ ಮಾರ್ಗದರ್ಶನ ನೀಡಿ, ಸದ್ವರ್ತನೆ ಕಲಿಸಬೇಕಾದ ಜವಾಬ್ದಾರಿ ಇರುವ ಸಂಸ್ಥೆಗಳು. ಇಂದು ಇವುಗಳೇ ಮಕ್ಕಳಲ್ಲಿ ಸ್ಪರ್ಧಾ ಮನೋಭಾವ ಬೆಳೆಸಿ ತಾನೊಬ್ಬನೇ ಶ್ರೇಷ್ಠನಾಗುವ, ಉಳಿದವರನ್ನು ಹಿಂದಿಕ್ಕಿ ಮುನ್ನುಗ್ಗುವ ಪಾಠ ಕಲಿಸುತ್ತಿವೆ. ಹೌದು, ಇದು ಸ್ಪರ್ಧಾ ಪ್ರಪಂಚ. ಶಾಲೆಗಳಲ್ಲಿ ಹೇಳಿಕೊಡುತ್ತಿರುವುದು ಅಂಕಗಳಿಸುವತ್ತ ನಿರಂತರ ಓಟ. ಇಂದು ಶಿಕ್ಷಣ ಕ್ಷೇತ್ರದಲ್ಲಿ ನಾವು ಗಳಿಸಿದ್ದೇವೆಂದು ಬೀಗುತ್ತಿರುವ ಯಶಸ್ಸು ಎಂದಿಗೂ ಮೌಲ್ಯಯುತವಲ್ಲ; ಪಠ್ಯಗಳು ಮಕ್ಕಳನ್ನು ಸತ್ಪ್ರಜೆಗಳನ್ನಾಗಿ ರೂಪಿಸುತ್ತಿಲ್ಲ ಇದು ಇಲ್ಲಿನ ಲೇಖನಗಳಲ್ಲಿನ ಖಚಿತ ಅಭಿಪ್ರಾಯ. ಮೌಲ್ಯಾಧಾರಿತ ಶಿಕ್ಷಣ ಎಂದೋ ಕಾಣೆಯಾಗಿದೆ. ಇಂದಿನ ಅಂಕಗಳಿಕೆ - ರ್‍ಯಾಂಕ್ ಗಳಿಕೆಗಳೆಲ್ಲ ಕೇವಲ ಹಣ ಗಳಿಕೆಗೆ, ತನ್ಮೂಲಕ ಅಧಿಕಾರ ಸಂಪಾದನೆಗೆ ರಾಜಮಾರ್ಗ ಆಗುತ್ತಿದೆ, ಅಷ್ಟೆ. ಉತ್ತಮ ಸಮಾಜ ನಿರ್ಮಾಣಕ್ಕೆ ಭದ್ರಬುನಾದಿ ಹಾಕುವಂತಹ ನೈತಿಕ ಶಿಕ್ಷಣ ಶಾಲಾ ಕಾಲೇಜುಗಳಲ್ಲಿ ಇಂದು ದೊರೆಯುತ್ತದೆಯೆ? ನಮಗೂ ನಮ್ಮ ಹಿಂದಿನ ಪೀಳಿಗೆಗೆ ದೊರೆತಿದೆಯೆ? ಹೌದಾದಲ್ಲಿ ನಾವೇಕೆ ಶ್ರೇಷ್ಠತೆ ತಲುಪಿಲ್ಲ? ಸಹಮಾನವರೊಂದಿಗೆ ಬದುಕಲು ಬೇಕಾದ ವಿಶಾಲ-ಸೌಹಾರ್ದ ಮನೋಭಾವ ನಮಗೇಕಿಲ್ಲ? ಯಶಸ್ಸಿಗೂ-ಶ್ರೇಷ್ಠತೆಗೂ-ಮೌಲ್ಯಕ್ಕೂ ಅಜಗಜಾಂತರವಿದೆ. ಆದರೆ ನಮಗವು ಆಕಾಶದ ನಕ್ಷತ್ರಗಳಂತೆ ಎಲ್ಲವೂ ಸಮತಳದಲ್ಲಿರುವಂತೆ ಭಾಸವಾಗುತ್ತವೆ. ನಾವಿಂದು ಬದುಕುತ್ತಿರುವುದು ಯಶಸ್ಸು ಎಂಬ ಭ್ರಮಾಲೋಕದಲ್ಲಿ! ಆ ಯಶಸ್ಸು ಸರಿಯಾದ ಮಾರ್ಗ ಕ್ರಮಿಸಿ ಬಂದುದಲ್ಲ! ಅತ್ಯುನ್ನತ ಮೌಲ್ಯಗಳನ್ನು ನಾವು ಮೈಗೂಡಿಸಿಕೊಂಡೇ ಇಲ್ಲ!

ಲೇಖನಗಳು ಒಂದಕ್ಕಿಂತ ಹೆಚ್ಚು ಕ್ಷೇತ್ರಗಳನ್ನಾಯ್ದುಕೊಂಡು ಅಲ್ಲಿನ ದೌರ್ಬಲ್ಯಗಳತ್ತ ನಮ್ಮ ಗಮನ ಸೆಳೆದಿವೆ. ಶ್ರೇಷ್ಠಮಟ್ಟದ ಆದರ್ಶಮಯ ಸಹಬಾಳ್ವೆ ಸಮಾಜದಲ್ಲಿ ನೆಲೆಯೂರಲು ಇರುವ ಅಡ್ಡಿ-ಆತಂಕಗಳೇನೆಂಬುದೇ ಎಲ್ಲ ಬರಹಗಳ ಚಿಂತನೆ. ನಮ್ಮ ಇಂದಿನ ಅಗತ್ಯಗಳೇನು, ಅವು ನಮಗೆ ಮರೀಚಿಕೆಯಂತೆ ತೋರುವುದೇಕೆ, ನಾವು ಗಳಿಸಿದ ಸ್ವಾತಂತ್ರ್ಯ ಸ್ವೇಚ್ಛೆಯಾಯಿತೇ, ನಾವು ಎಡವಿದ್ದೆಲ್ಲಿ, ಪ್ರಗತಿಗೆ ಅಡ್ಡಗಾಲು ಹಾಕಿ ತಡೆಯುವವರಾರು – ಇಂಥ ಹತ್ತು ಹಲವು ಪ್ರಶ್ನೆಗಳನ್ನೆತ್ತಿ ಸಮಾಜ ಶಾಸ್ತ್ರೀಯ ದೃಷ್ಟಿಕೋನದಿಂದ ವಿಶ್ಲೇಷಣೆ ನಡೆದಿದೆ. ಸುಂದರವಾಗಿ ಕಟ್ಟಿಕೊಳ್ಳಬಹುದಾಗಿದ್ದ ಸಮಾಜ ವ್ಯವಸ್ಥೆಗಳನ್ನು ನಾವು ಬೇಕಾಬಿಟ್ಟಿಯಾಗಿ ಅಸಡ್ಡೆಯಿಂದ ಕಂಡಿರುವುದು ಅಕ್ಷಮ್ಯ. ಯುಕ್ತಾಯುಕ್ತ ವಿವೇಚನೆಯಿಲ್ಲದೆ ಪ್ರಾಕೃತಿಕ ಸಂಪನ್ಮೂಲಗಳನ್ನು ಮಿತಿಮೀರಿ ಬಳಸಿ ಎಲ್ಲದರ ಅಭಾವ ಸೃಷ್ಟಿಸಿದ್ದು ನಾವೇ. ವಿಜ್ಞಾನ ಮತ್ತು ಅಭಿವೃದ್ಧಿಯ ಹೆಸರಿನಲ್ಲಿ ನಿಯಮಗಳನ್ನು ಗಾಳಿಗೆ ತೂರಿ ಅಣುಸ್ಥಾವರ, ಪರಮಾಣು ಬಾಂಬು ಎಂದೆಲ್ಲ ಅನರ್ಥಕಾರಿ ಹೆಮ್ಮಾರಿಗಳಿಗೆ ಜಾಗ ನೀಡಿದವರೂ ನಾವೇ. ಸುಖ-ಸೌಕರ್ಯಗಳಿಗೋಸ್ಕರ ಕೆಲವೇ ಕೆಲವರು ಕುಟಿಲ ನೀತಿಯನ್ನನುಸರಿಸಿ ಭೂಮಿಯ ಮೇಲೆ ತಾವಿದ್ದರೆ ಸಾಕೆಂಬ ನಿರ್ಲಜ್ಜ, ಆದರೆ ಅತಿ ಶ್ರೀಮಂತಿಕೆಯ ಬಾಳನ್ನು ಆರಿಸಿಕೊಂಡಿದ್ದಾರೆ. ಸಮಾಜ ವ್ಯವಸ್ಥೆ ಏರುಪೇರಾಗಿದೆ. ಸಮಾನತೆಯ ಕಲ್ಪನೆ ಹೇಳಹೆಸರಿಲ್ಲದೆ ನಿರ್ನಾಮವಾಗಿದೆ. ಗಾಂಧಿ ಕಂಡ ಗ್ರಾಮ ಸ್ವರಾಜ್ಯದ ಕಲ್ಪನೆ ನುಚ್ಚುನೂರಾಗಿ ಗ್ರಾಮ ಪಂಚಾಯತ್ ವ್ಯವಸ್ಥೆಯಿಂದ ದಿಲ್ಲಿ ದರ್ಬಾರಿನವರೆಗೂ ವ್ಯಾಪಿಸಿರುವ ಭ್ರಷ್ಟಾಚಾರ ನಮ್ಮನ್ನು ಕಂಗೆಡಿಸಿದೆ. ಏನೂ ಅರ್ಹತೆ, ತಿಳುವಳಿಕೆ ಇಲ್ಲದವರು ಹಣಬಲದಿಂದ ಆರಿಸಿ ಬಂದು ಪ್ರತಿನಿಧಿಗಳಾಗಿ ಆಯಕಟ್ಟಿನ ಜಾಗ ಹಿಡಿದು ಅಧಿಕಾರ ಬಲದಿಂದ ಏನು ಬೇಕಾದರೂ ಮಾಡುವ ಸಾಮರ್ಥ್ಯ ಗಳಿಸಿದ್ದಾರೆ. ಉತ್ತಮ ಮೇಲ್ಪಂಕ್ತಿ ಹಾಕಿಕೊಟ್ಟು ಆದರ್ಶ ಮೆರೆಯಬೇಕಾದವರು ಚಾರಿತ್ರಹೀನರಾಗಿರುವುದೇ ನಮ್ಮೆಲ್ಲ ವೈಫಲ್ಯಗಳಿಗೆ ಕಾರಣ.

ಎತ್ತ ತಿರುಗಿದರೂ ಸಮಸ್ಯೆಗಳ ಮೂಟೆಗಳನ್ನೇ ಹೇರಿಕೊಂಡು ದಿಕ್ಕು ಕಾಣದಂತಾಗಿರುವ ನಮಗೆ ಯಾವ ಮಾರ್ಗದಲ್ಲಿ ಸಾಗಬೇಕೆಂಬ ನಿರ್ದಿಷ್ಟ ಗುರಿ-ಕಲ್ಪನೆಯೇ ಇಲ್ಲ. ಸಮಾಜದ ಯಾವ ಭಾಗಕ್ಕೆ ಗ್ಯಾಂಗ್ರೀನ್ ಬಡಿದಿದೆಯೆಂದು ನಿಖರವಾಗಿ ಹೇಳಬಲ್ಲ ದಿಟ್ಟತನ ಇರುವುದು ಈ ಲೇಖನಗಳಿಗೆ ಮಾತ್ರ. ಇದು ಸರಿಪಡಿಸಲಾಗದ ಹಂತ ಮುಟ್ಟಿದೆಯೆಂಬ ಸತ್ಯದರಿವು ನಮಗಿನ್ನೂ ಆಗಿಲ್ಲ. ಇಲ್ಲಿನ ಬರಹಗಳು ಕಾಟಾಚಾರಕ್ಕಾಗಿ ಬರೆದವುಗಳಲ್ಲ; ಸಮಾಜದ ಸ್ವಾಸ್ಥ್ಯವನ್ನು ಬಯಸುವ ಒಬ್ಬ ನಿಸ್ಪೃಹ ನಿರ್ಮಲ ಮನಸ್ಸಿನ ವ್ಯಕ್ತಿಯೊಬ್ಬರ ನೋವಿನ ಅನಿಸಿಕೆಗಳೆಲ್ಲ ಇಲ್ಲಿ ಮಡುಗಟ್ಟಿವೆ. ಸುತ್ತಮುತ್ತಲಿನ ಜನಸಮುದಾಯಗಳನ್ನು ಹತ್ತಿರದಿಂದ ಕಂಡ ಅನುಭವಗಳು ದಾಖಲಾಗಿವೆ. ಸುಖ-ಸಂತೋಷ-ಸಂಪತ್ತೆಲ್ಲ ತನಗೊಬ್ಬನಿಗೇ ಬೇಕೆಂಬ ದುರಾಸೆಯ ಮನುಷ್ಯನಿಂದಾಗಿಯೇ ಸಮಾಜ ಹಾಳುಗೆಡುವುದೆಂಬ ಸತ್ಯ ಇಲ್ಲಿ ಗೋಚರವಾಗುತ್ತದೆ. ಇಂತಹ ತಿಳುವಳಿಕೆ ನೀಡುವ ಬಹುಬೆಲೆಯುಳ್ಳ ಆಪ್ತ ಮತ್ತು ಮನದಾಳಕ್ಕಿಳಿಯುವ ಮಾತುಗಳು ನಮಗೆ ಎಲ್ಲೆಂದರಲ್ಲಿ ಸಿಗುವುದಿಲ್ಲ. ಸಿಕ್ಕಿರುವಾಗ ಓದುವ ಇಂಥ ಅವಕಾಶವನ್ನು ನಾವೆಂದೂ ಬಿಟ್ಟುಕೊಡಬಾರದು.

ಹದಗೆಟ್ಟಿರುವ ವ್ಯವಸ್ಥೆಯ ಬಗ್ಗೆ ಮಾತ್ರ ಹೇಳಿ ಸುಮ್ಮನಾಗದೆ ಕೆಲವೊಂದು ಪರಿಹಾರೋಪಾಯಗಳನ್ನು ಇಲ್ಲಿ ಸೂಚಿಸಲಾಗಿದೆ. ಸ್ವತಃ ಲೇಖಕರೇ ಅದನ್ನು ಅನುಸರಿಸಿ ತೋರಿಸಿದ್ದಾರೆ. ಹೆಣ್ಣುಮಕ್ಕಳು ಹಾಗೂ ಅನಾಥ ಪುಟ್ಟ ಗಂಡುಮಕ್ಕಳಿಗಾಗಿ ಅವರೇ ನಡೆಸಿಕೊಂಡು ಬರುತ್ತಿರುವ ಎರಡು ಸಂಸ್ಥೆಗಳೆಂದರೆ – 'ದೀನಬಂಧು ಮಕ್ಕಳ ಮನೆ' ಮತ್ತು 'ಶಕ್ತಿಧಾಮ'. ಇವು ನೊಂದವರಿಗೆ ಆಸರೆ ನೀಡುವಂಥ ತಾಣಗಳು. ಇಂಥ ಸತ್ಕಾರ್ಯಗಳನ್ನು ಉಳ್ಳವರು ಸೇವಾ ಮನೋಭಾವದಿಂದ ಮುಂದೆ ಬಂದು ಮಾಡಬೇಕಲ್ಲದೆ ಏಕವ್ಯಕ್ತಿಯಿಂದ ಎಲ್ಲ ಸಮಸ್ಯೆಗಳೂ ಪರಿಹಾರವಾಗಲಾರವು. ಈ ಲೇಖನಗಳನ್ನೋದಿದ ಮೇಲಾದರೂ ಕಿಂಚಿತ್ ಆ ದಿಕ್ಕಿನಲ್ಲಿ ಯೋಚಿಸುವ ಮನಸ್ಸು ಕೆಲವರಲ್ಲಾದರೂ ಉಂಟಾದರೆ ಅಷ್ಟರಮಟ್ಟಿಗೆ ನೆಮ್ಮದಿಯ ಬಾಳಿನ ಗುರಿ ನಮ್ಮದಾಗಬಹುದು.

**ಇಂದಿರಾಕುಮಾರಿ**
ನಂ. ೩೪/೧೧, ೨ನೇ ಅಡ್ಡರಸ್ತೆ, ಬಾಂಬೆ ಡೈಯಿಂಗ್ ಸಮೀಪ
ಯಶವಂತಪುರ, ಬೆಂಗಳೂರು - ೫೬೦ ೦೨೨

# ಅತ್ಯಂತ ವಿಶ್ವಾಸಾರ್ಹ ದಿನಪತ್ರಿಕೆ

1948 ಕನ್ನಡ ದಿನಪತ್ರಿಕೆಗಳ ಇತಿಹಾಸದಲ್ಲಿ ಹೊಸ ಮೈಲಿಗಲ್ಲನ್ನು ಕಂಡ ವರ್ಷ, ಕನ್ನಡ ಪ್ರಜೆಗಳವಾಣಿ ಪ್ರಜಾವಾಣಿ ಸಂಸ್ಥೆ, ದಿ ಪ್ರಿಂಟರ್ಸ್ (ಮೈಸೂರು) ಪ್ರೈವೇಟ್ ಲಿಮಿಟೆಡ್ ಉದಯಿಸಿದ ವರ್ಷ. ಅಂದಿನಿಂದ ಇಂದಿನವರೆಗೆ ಸಂಸ್ಥೆ ಬರೇ ಪತ್ರಿಕೆಗಳನ್ನು ಪ್ರಕಟಿಸುವ ಸಂಸ್ಥೆಯಾಗಿರದೆ ಕರ್ನಾಟಕದ ಜನರ ಮನೆ ಮನಗಳಲ್ಲಿ ಹಾಸುಹೊಕ್ಕಾಗಿ ಅವರ ಜೀವನದ ಒಂದು ಭಾಗವಾಗಿ ಬೆಳೆದಿದೆ.

ಸಂಸ್ಥೆಯ ಮುಖ್ಯ ಪ್ರಕಟಣೆಗಳಲ್ಲಿ ಇಂಗ್ಲಿಷ್ ದಿನಪತ್ರಿಕೆ ಡೆಕ್ಕನ್ ಹೆರಾಲ್ಡ್, ಕನ್ನಡ ದಿನಪತ್ರಿಕೆ ಪ್ರಜಾವಾಣಿ ಕರ್ನಾಟಕದ ಜನರ ಅತ್ಯಂತ ವಿಶ್ವಾಸಾರ್ಹ ಪತ್ರಿಕೆಗಳಾಗಿ ಜನಮನದಲ್ಲಿ ನೆಲೆಸಿದ್ದು ಅವರ ಜೀವನ ಶೈಲಿಯನ್ನೇ ಬದಲಿಸುವಷ್ಟು ಶಕ್ತಿಶಾಲಿಯಾಗಿ ಬೆಳೆದಿವೆ. ವಾರ ಪತ್ರಿಕೆ ಸುಧಾ ಪ್ರಕಟಣೆಯ ದಿನಕ್ಕಾಗಿ ಇಡೀ ಕುಟುಂಬ ತುದಿಗಾಲಲ್ಲಿ ಕಾದಿರುತ್ತದೆ. ಕನ್ನಡ ಸಾಹಿತ್ಯಾಸಕ್ತರ ಮೆಚ್ಚಿನ ಮಾಸ ಪತ್ರಿಕೆ ಮಯೂರ ಕೂಡ ನಮ್ಮ ಸಂಸ್ಥೆಯ ಹೆಮ್ಮೆಯ ಕಾಣಿಕೆ.

ನಮ್ಮ ನಾಲ್ಕೂ ಪ್ರಕಟಣೆಗಳು ಹಿಂದೆಂದಿಗಿಂತಲೂ ಅತಿ ಶೀಘ್ರವಾಗಿ ಕರ್ನಾಟಕ ರಾಜ್ಯಾದ್ಯಂತ ಓದುಗರಿಗೆ ತಲುಪುತ್ತಿವೆ. ವಿಶ್ವದ, ದೇಶದ, ರಾಜ್ಯದ ಸುದ್ದಿಗಳನ್ನಷ್ಟೇ ಅಲ್ಲದೆ ಓದುಗರ ಜ್ಞಾನ ಭಂಡಾರವನ್ನು ಹೆಚ್ಚಿಸುವ ಲೇಖನಗಳನ್ನೂ ಹೊಂದಿರುತ್ತವೆ. ಆರು ದಶಕಗಳಿಗೂ ಮೀರಿ ಓದುಗರು ನಮ್ಮ ಪ್ರಕಟಣೆಗಳ ಮೇಲಿಟ್ಟಿರುವ ವಿಶ್ವಾಸ ಮತ್ತು ನಂಬಿಕೆಗಳಿಗೆ ಸ್ವಲ್ಪವೂ ಕುಂದುಬಾರದಂತೆ ಮುನ್ನಡೆಯುತ್ತಿವೆ.

The Printers (Mysore) Private Limited

ಪ್ರಜಾವಾಣಿ

DECCAN HERALD

ಸುಧಾ

ಮಯೂರ

No. 75, M.G. Road, Bangalore-560 001 Phone: 2588 0000
Fax: 2588 0205 E-mail: Circulation-Blore@deccanherald.co.in

# ನವ ವಸಾಹತುಶಾಹಿಯ ಮೊದಲ ದಶಕ

## ಜಾಗತೀಕರಣ ಹಾಗೂ ಕೋಮುವಾದದ ಅಂತರ್‌ಸಂಬಂಧದ ಸ್ವರೂಪ



**ಡಾ॥ ಎಂ. ಡಿ. ಒಕ್ಕುಂದ**

೧೯೯೦-೯೧ರಲ್ಲಿ ದೇಶದಲ್ಲಿ ಉದ್ಭವವಾದ ಆರ್ಥಿಕ ಬಿಕ್ಕಟ್ಟಿಗೆ ಜಾಗತೀಕರಣದಲ್ಲಿ ಪರಿಹಾರ ಕಂಡುಕೊಳ್ಳುವ ಮೂಲಕ ಭಾರತದ ಬದುಕು ಮತ್ತೊಮ್ಮೆ ಮೈ ಹೊರಳಿಸಿತು. ೧೯೫೦ರಲ್ಲಿ ಭಾರತದ ಸಂವಿಧಾನದಲ್ಲಿ ಪ್ರಜಾಸತ್ತಾತ್ಮಕ ಸಮಾಜವಾದಿ ಹಾಗೂ ಧರ್ಮ ನಿರಪೇಕ್ಷ ಸಾರ್ವಭೌಮತ್ವವನ್ನು ಆದರ್ಶವಾಗಿ ಸ್ವೀಕರಿಸಲಾಗಿತ್ತು. ಹಲವಾರು ಅಡೆತಡೆಗಳ ಮಧ್ಯದಲ್ಲಿಯೂ ಮಿಶ್ರ ಆರ್ಥಿಕ ನೀತಿ, ಸಾರ್ವಜನಿಕ ವಲಯಗಳ ಸಬಲೀಕರಣ, ನಿಯಂತ್ರಿತ ಖಾಸಗೀಕರಣ, ಮೀಸಲಾತಿ, ಸಮಾಜ ಕಲ್ಯಾಣ ಯೋಜನೆಗಳು ಹಾಗೂ ಈ ಎಲ್ಲವನ್ನೂ ತೀರ್ಮಾನಿಸುವ ದೇಶೀ ಸಾರ್ವಭೌಮತ್ವಗಳು ಸ್ವಾತಂತ್ರ್ಯೋತ್ತರದ ಮೂರು-ಮೂರೂವರೆ ದಶಕಗಳವರೆಗೂ ಭಾರತವನ್ನು ಎಲ್ಲ ಮಿತಿಗಳ ನಡುವೆಯೂ ಸಮಾಜವಾದಿ ಮತ್ತು ಪ್ರಜಾಸತ್ತೆಯ ಚೌಕಟ್ಟಿನ ಆದರ್ಶದಿಂದ ಹೊರಗೆ ತಂದಿರಲಿಲ್ಲ. ಜಾಗತೀಕರಣದ ಒಪ್ಪಂದದ ಮೂಲಕ ಇದಕ್ಕೆ ತದ್ವಿರುದ್ಧವಾದ ಆರ್ಥಿಕ ವ್ಯವಸ್ಥೆಗೆ ಭಾರತವನ್ನು ತಿರುಗಿಸಲಾಯಿತು. ರಾಷ್ಟ್ರದ ಹೊರಗಿನ ಸಾಮ್ರಾಜ್ಯಶಾಹಿ ಶಕ್ತಿಗಳು ಅಂತರರಾಷ್ಟ್ರೀಯ ಬ್ಯಾಂಕರ್‌ಗಳು, ಕಾರ್ಪೋರೇಟ್ ಕಂಪನಿಗಳು ರಾಷ್ಟ್ರದ ಒಳಗಿನ ರಾಜಕಾರಣವನ್ನು ನಿಯಂತ್ರಿಸುತ್ತ ಸರಕಾರ ಮತ್ತು ಪ್ರಭುತ್ವಗಳನ್ನು ಅಪ್ರಸ್ತುತಗೊಳಿಸಿ, ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಯೊಂದನ್ನೇ ಪ್ರಸ್ತುತಗೊಳಿಸಿದವು. ವಸಾಹತುಶಾಹಿ ಕಾಲದ ವ್ಯಾಪಾರಿ ಬಂಡವಾಳಶಾಹಿ ಹಾಗೂ ಕೈಗಾರಿಕಾ ಬಂಡವಾಳಶಾಹಿಗಿಂತಲೂ ಪ್ರಬಲವಾದ ಸಮಸ್ತ ಮಾರುಕಟ್ಟೆ, ಕೃಷಿ, ಬೌದ್ಧಿಕತೆಗಳನ್ನೆಲ್ಲ ನಿಯಂತ್ರಿಸುವ ಬ್ರಹ್ಮರಾಕ್ಷಸನ ರೂಪದಲ್ಲಿ ಆಕ್ರಮಿಸಿದ ಹೊಸ ಬಂಡವಾಳಶಾಹಿಯು ಸಾಲ ನೀಡಿ ಅಧೀನತೆಗೊಳಪಡಿಸಿ, ತನ್ನ ಅಧಿನಾಯಕತ್ವವನ್ನು ಸ್ಥಾಪಿಸಿತು. ಖಾಸಗೀಕರಣ ಅದರ ಮಂತ್ರ. ಹೀಗಾಗಿ ಸಾರ್ವಜನಿಕ ವಲಯವನ್ನು ನಿಷ್ಕ್ರಿಯಗೊಳಿಸಲಾಯಿತು. ಜನತಾ ಕಲ್ಯಾಣ ಯೋಜನೆಗಳನ್ನು ತಡೆಯಲಾಯಿತು. ಜನಪರ ಸಬ್ಸಿಡಿಗಳನ್ನು ನಿಲ್ಲಿಸಲಾಯಿತು. ಆದರ್ಶ ರೂಪದಲ್ಲಿಯಾದರೂ ಜೀವಂತವಿದ್ದ ಪ್ರಜಾಸತ್ತಾತ್ಮಕ ಸಮಾಜವಾದಿ ಪರಿಕಲ್ಪನೆಗಳನ್ನು ಸಂಪೂರ್ಣವಾಗಿ ಮರೆಸಲಾಯಿತು. ಇವುಗಳೊಂದಿಗೆ ಧರ್ಮ ನಿರಪೇಕ್ಷತೆಯೂ ವ್ಯವಸ್ಥಿತವಾಗಿ ಹಲ್ಲೆಗೀಡಾಯಿತು. ಮತಾಂಧ ಸಮಾಜದ ನಿರ್ಮಾಣಕ್ಕೆ ಚಾಲನೆ ದೊರೆಯಿತು. ಹೀಗಾಗಿ ದೇಶ ವಿಭಜನೆಯ ಸಂದರ್ಭಕ್ಕಿಂತಲೂ ಭೀಕರವಾದ ಹಿಂಸಾಕಾಂಡ ಸಾಧ್ಯವಾಯಿತು.

**೧. ೮೦ರ ದಶಕದ ರಾಜಕಾರಣ: ಭವಿಷ್ಯದ ಉದಾರವಾದಿ ಹಾಗೂ ಕೋಮುವಾದಿ ಸಂಕರ ರಾಜಕೀಯದ ಬೀಜಾಂಕುರ**

ಇಂದಿರಾ ಗಾಂಧಿ ಹತ್ಯೆಯ ಭಾವನಾತ್ಮಕತೆಯಲ್ಲಿ ಪ್ರಧಾನ ಮಂತ್ರಿಯಾದ ರಾಜೀವ್ ಗಾಂಧಿ ೨೧ನೇ ಶತಮಾನದ ಕನಸುಗಳನ್ನು ಬಿತ್ತುತ್ತ ವಿಶ್ವಬ್ಯಾಂಕ್ ಪ್ರವೇಶಕ್ಕೆ ಅವಕಾಶ ಕಲ್ಪಿಸಿದರು. ಅವರ ಹೊಸ ಆರ್ಥಿಕ ನೀತಿ ಬಂಡವಳಿಗರ ಪರವಾಗಿತ್ತು. ಸಾರ್ವಜನಿಕ ವಲಯದ ಪಾತ್ರವನ್ನು ಕಡಿತಗೊಳಿಸಿ ಖಾಸಗೀ ವಲಯವನ್ನು ವಿಸ್ತರಿಸುವುದಕ್ಕೆ ಆಸಕ್ತಿ ತೋರಿಸಿದರು. ದೊಡ್ಡ ಪ್ರಮಾಣದ ವಿದೇಶಿ ಸಾಲಕ್ಕೆ ದೇಶವನ್ನು ನೂಕಿದರು. ಬಡವರ ಬಗ್ಗೆ ಕಣ್ಣೀರು ಸುರಿಸುತ್ತ ಉದಾರೀಕರಣದಿಂದ



**೯೦ರ ದಶಕದ ಹಾಗೂ ನಂತರದ ರಾಜಕೀಯ ಧ್ರುವೀಕರಣ ಕೋಮುವಾದಿ ಶಕ್ತಿಗಳು ಪ್ರಬಲವಾಗಲು ಸೂಕ್ತ ವೇದಿಕೆಗಳನ್ನು ಕಲ್ಪಿಸಿಕೊಟ್ಟಿತು. ರಾಜೀವ್ ಗಾಂಧಿ ಸರಕಾರದ ಆರ್ಥಿಕ-ಉದಾರವಾದಿ ನಿಲುವುಗಳು ಹಾಗೂ ಮತೀಯ ಹೆಜ್ಜೆಗಳಿಗೆ ಪ್ರತಿಕ್ರಿಯೆಯಾಗಿ ಜನ ಕಾಂಗ್ರೆಸ್ಸಿಗೆ ಬಹುಮತ ನೀಡಲಿಲ್ಲ. ದೇಶದಾದ್ಯಂತ ಕಾಂಗ್ರೆಸ್ ವಿರೋಧಿ ಅಲೆ ಕೆಲಸ ಮಾಡುತ್ತಿತ್ತು. ತುರ್ತು ಪರಿಸ್ಥಿತಿಯಲ್ಲಿ ಜೆ.ಪಿ.ಯವರ ಸಂಪರ್ಕದಲ್ಲಿ ಪ್ರಧಾನವಾಹಿನಿ ರಾಜಕೀಯದೊಂದಿಗೆ ಸಂಪರ್ಕ, ಮೊರಾರ್ಜಿ ದೇಸಾಯಿ ಸರಕಾರದಲ್ಲಿ ಪಾಲುದಾರಿಕೆ ಪಡೆದ ಬಿಜೆಪಿಗೆ ರಾಮಜನ್ಮಭೂಮಿ ಚಳುವಳಿಯ ಕಾರಣದಿಂದ ೮೫ ಸ್ಥಾನಗಳು ಲಭಿಸಿದ್ದವು. ವಿ. ಪಿ. ಸಿಂಗ್ ಮಂಡಲ್ ವರದಿಯನ್ನು ಜಾರಿಗೆ ತಂದ ಕಾರಣಕ್ಕೆ ಆಂತರಿಕ ಭಿನ್ನಾಭಿಪ್ರಾಯ ತಲೆದೋರಿ ಸರಕಾರ ಬಿದ್ದಿತು.**

ಔದ್ಯಮಿಕ ಬೆಳವಣಿಗೆ ಸಾಧಿಸುವ ದ್ವಿಮುಖ ಆರ್ಥಿಕ ನೀತಿಯನ್ನು ಆರಂಭಿಸಿದರು. ಇದೇ ವೇಳೆಯಲ್ಲಿ ಈ ಆರ್ಥಿಕ ನೀತಿಯ ಪರಿಣಾಮಗಳಿಂದ ಜನತೆಯ ಮನಸ್ಸನ್ನು ತಿರುಗಿಸಲು ಮುಸ್ಲಿಂ ಮತ್ತು ಹಿಂದೂ ಮೂಲಭೂತವಾದಿಗಳನ್ನು ತೃಪ್ತಿಪಡಿಸುವ ರಾಜಕೀಯ ತೀರ್ಮಾನಗಳನ್ನು ತೆಗೆದುಕೊಂಡರು. ಶಾಬಾನು ಪ್ರಕರಣ, ರಾಮಜನ್ಮಭೂಮಿಯ ಬಾಗಿಲು ತೆರೆಸಿದ್ದು, ಶಿಲಾನ್ಯಾಸ ಏರ್ಪಡಿಸಿದ್ದು, ಇವು ಕೋಮುವಾದ ಹಾಗೂ ಮೂಲಭೂತವಾದಗಳನ್ನು ತುಷ್ಟೀಕರಿಸುವ ಪ್ರಯತ್ನಗಳಾಗಿದ್ದವು. ಸಂಘಪರಿವಾರದ ರಥಯಾತ್ರೆಗಳ ಯುಗಕ್ಕೆ ದೇಶವನ್ನು ಹದಗೊಳಿಸಿದರು. ರಾಮಜನ್ಮಭೂಮಿ ಚಳುವಳಿ ಒಂದು ಮೂರ್ತ ರೂಪವನ್ನು ತಾಳಿ ದೇಶವನ್ನು ಮತೀಯ ಭಾವನೆಗಳಿಗೆ ತಳ್ಳುವಲ್ಲಿ ಈ ಬೆಳವಣಿಗೆಗಳು ಪ್ರೇರಕವಾದವು. ೯೧ರ ವಿಶ್ವ ವಾಣಿಜ್ಯ ಸಂಸ್ಥೆಯೊಂದಿಗಿನ ಒಪ್ಪಂದ ಹಾಗೂ ೯೨ರ ಬಾಬರಿ ಮಸೀದಿ ನಾಶದಲ್ಲಿ ಭವಿಷ್ಯತ್ತಿನ ಬೀಜಗಳು ಅಂಕುರಿಸಿದವು. ದೇಶವನ್ನು ಕೋಮುಭಾವನೆಗೆ ತಳ್ಳುವಲ್ಲಿ ಕಾಂಗ್ರೆಸ್ ಮತ್ತು ಬಿಜೆಪಿ ಸಮಾನ ಆಸಕ್ತಿಯನ್ನು ಹೊಂದಿದ್ದವು. ಯಾಕೆಂದರೆ ಎರಡೂ ಪಕ್ಷಗಳು ಬಂಡವಾಳಶಾಹಿ ಹಾಗೂ ಭೂಮಾಲಿಕರ ಆರ್ಥಿಕ ಹಿತಾಸಕ್ತಿಯನ್ನು ಕಾಪಾಡುವ ಉದ್ದೇಶವನ್ನು ಹೊಂದಿದ್ದವು.

**೨. ಬಾಬರಿ ಮಸೀದಿ ನಾಶ : ಉರುಳಿದ ಸೌಹಾರ್ದತೆಯ ಕಟ್ಟಡ**

ಅಯೋಧ್ಯೆಯ ವಿವಾದಕ್ಕೆ ಶತಮಾನಗಳ ಇತಿಹಾಸವಿತ್ತು. ವಸಾಹತುಶಾಹಿಯ ಒಡೆದಾಳುವ ರಾಜಕಾರಣ, ಕೋಮುವಾದಿ ಸಂಘಟನೆಗಳ ಮತೀಯ ರಾಜಕಾರಣಗಳ ನಡುವೆಯೂ ಭಾರತದ ಹಿಂದೂ-ಮುಸಲ್ಮಾನರ ಸೌಹಾರ್ದತೆಯ ಸಂಕೇತವಾಗಿ ಉಳಿದುಬಂದಿತ್ತು. ನವ ವಸಾಹತುಶಾಹಿಯ ಆಗಮನ ಹಾಗೂ ಕಾಂಗ್ರೆಸ್, ಬಿಜೆಪಿಗಳ ಮೃದು ಹಾಗೂ ಉಗ್ರ ಕೋಮುವಾದಿ ಹಿತಾಸಕ್ತಿಗಳು ಒಂದುಗೂಡಿ ಬಾಬರಿ ಮಸೀದಿಯನ್ನು ನಾಶಮಾಡಿದವು. ಶತಮಾನಗಳ ಸೌಹಾರ್ದತೆಯನ್ನು ಉರುಳಿಸಿದ್ದವು. ಮಸೀದಿ ಉರುಳಿದ್ದು ಸಾಂಕೇತಿಕವಾಗಿತ್ತು. ಇದಕ್ಕಿಂತ ಮೊದಲು ಅದ್ವಾನಿಯವರು ನಡೆಸಿದ ರಥಯಾತ್ರೆಯು ದೇಶದಾದ್ಯಂತ ಬಹುಸಂಖ್ಯಾತರನ್ನು ಅಲ್ಪಸಂಖ್ಯಾತರ ವಿರುದ್ಧ ಎತ್ತಿಕಟ್ಟಿ ಅವರ ಸಾಂಸ್ಕೃತಿಕ ಅನನ್ಯತೆಗಳನ್ನು ನಾಶಮಾಡುವ ಸಾಮಾಜಿಕ ಅವಿವೇಕವನ್ನು ಬೆಳೆಸುವಲ್ಲಿ ಯಶಸ್ವಿಯಾಗಿತ್ತು. ಜಿ. ರಾಜಶೇಖರ ಹಾಗೂ ಫಣಿರಾಜ ಹೇಳುವಂತೆ, ''ರಥಯಾತ್ರೆಯಲ್ಲಿ ಒಂದೆಡೆ ಅದ್ವಾನಿಯವರಿಗೆ ರಕ್ತ ತುಂಬಿದ ಬಿಂದಿಗೆಯನ್ನು ಕಾಣಿಕೆಯಾಗಿ ನೀಡಲಾಗಿತ್ತು, ಅದು ಹಿಂದೂ ರಕ್ತವೋ, ಮುಸ್ಲಿಂ ರಕ್ತವೋ ಅದ್ವಾನಿಯವರ ರಕ್ತಪಿಪಾಸು ರಾಜಕೀಯಕ್ಕೆ ಇದಕ್ಕಿಂತ ಒಳ್ಳೆಯ ಸಂಕೇತವಿರಲಾರದು.'' ರಥಯಾತ್ರೆ ನಡೆದ ಪ್ರದೇಶಗಳಲ್ಲಿ ಸಾವಿರಾರು ಮುಸಲ್ಮಾನರನ್ನು ಕೊಲ್ಲಲಾಯಿತು. ಅವರ ಆಸ್ತಿಪಾಸ್ತಿಯನ್ನು ನಾಶಪಡಿಸಲಾಯಿತು. ದೇಶ ವಿಭಜನೆಯ ನಂತರ ಭಾರತದಲ್ಲಿ ಉಳಿದ ಮುಸಲ್ಮಾನರಿಗೆ ಇದು ಅತಿ ದೊಡ್ಡ ಆಘಾತವಾಗಿತ್ತು. ಮಧು ಲಿಮಯೆ ಅವರು ಹೇಳುವಂತೆ, ''ಡಿಸೆಂಬರ್ ೬, ೧೯೯೨ರಂದು ಅಯೋಧ್ಯೆಯಲ್ಲಿ ಸಂಭವಿಸಿದ ಘಟನೆಗಳು ನಿಸ್ಸಂದೇಹವಾಗಿ ವಿಶ್ವಾಸಘಾತಕ ಘಟನೆಗಳಾಗಿವೆ. ಅವು ಸಾಂವಿಧಾನಿಕ ವ್ಯವಸ್ಥೆಗೆ ಇನ್ನಿಲ್ಲವಾದ ಖುಲ್ಲಂ ಖುಲ್ಲಾ ಸವಾಲಾಗಿವೆ. ಮಸೀದಿ ಧ್ವಂಸ ವಿಶ್ವಾಸ ದ್ರೋಹದ ಕೆಲಸವಾಗಿದೆ.'' ಮಸೀದಿ ನೆಲಕ್ಕುರುಳುವಾಗ ಭಾರತದ ಪ್ರಧಾನಮಂತ್ರಿ ಪಿ. ವಿ. ನರಸಿಂಹರಾವ್ ಅವರು ಮಲಗಿದ್ದರು. ಕಾಂಗ್ರೆಸ್ ಪಕ್ಷ ಜಾತ್ಯತೀತ ನಿಲುವಿಗೆ ಚರಿತ್ರೆಯುದ್ದಕ್ಕೂ ತೋರಿಸುತ್ತ ಬಂದ ಪ್ರತಿಕ್ರಿಯೆಗೆ ಇದು ಸಮರ್ಥ ರೂಪಕ. ಈ ದೌರ್ಜನ್ಯಕ್ಕೆ ಅಯೋಧ್ಯೆಯ ಮುಸ್ಲಿಮರು ತೋರಿದ ಪ್ರತಿಕ್ರಿಯೆ ಸಹನಶೀಲತೆ, ಸೌಹಾರ್ದತೆಗಳಿಗೆ ಪ್ರತೀಕವಾಗಿತ್ತು. ದೇಶದ ಮುಸ್ಲಿಂ ಸಮುದಾಯ ತಮ್ಮ ಧಾರ್ಮಿಕ ಹಾಗೂ ಸಾಂಸ್ಕೃತಿಕ ಅನನ್ಯತೆಯ ಮೇಲೆ ನಡೆದ ಉನ್ಮತ್ತ ಆಕ್ರಮಣವನ್ನು ಸಹಿಸಿದ ಮೌನದಲ್ಲಿಯ ಆಕ್ರಂದನಕ್ಕೆ ಶಬ್ದಗಳಿರಲಿಲ್ಲ.

**೩. ರಾಜಕೀಯ ಧ್ರುವೀಕರಣ ಮತ್ತು ಕೋಮುವಾದಿ ಶಕ್ತಿಗಳ ಪ್ರಾಬಲ್ಯ**

೮೦ರ ದಶಕದ ಹಾಗೂ ನಂತರದ ರಾಜಕೀಯ ಧ್ರುವೀಕರಣ ಕೋಮುವಾದಿ ಶಕ್ತಿಗಳು ಪ್ರಬಲವಾಗಲು ಸೂಕ್ತ ವೇದಿಕೆಗಳನ್ನು ಕಲ್ಪಿಸಿಕೊಟ್ಟಿತು. ರಾಜೀವ್ ಗಾಂಧಿ ಸರಕಾರದ ಆರ್ಥಿಕ - ಉದಾರವಾದಿ ನಿಲುವುಗಳು ಹಾಗೂ ಮತೀಯ ಹೆಜ್ಜೆಗಳಿಗೆ ಪ್ರತಿಕ್ರಿಯೆಯಾಗಿ ಜನ ಕಾಂಗ್ರೆಸ್ಸಿಗೆ ಬಹುಮತ ನೀಡಲಿಲ್ಲ. ದೇಶದಾದ್ಯಂತ ಕಾಂಗ್ರೆಸ್ ವಿರೋಧಿ ಅಲೆ ಕೆಲಸ ಮಾಡುತ್ತಿತ್ತು. ತುರ್ತು ಪರಿಸ್ಥಿತಿಯಲ್ಲಿ ಜೆ.ಪಿ.ಯವರ



ಸಂಪರ್ಕದಲ್ಲಿ ಪ್ರಧಾನವಾಹಿನಿ ರಾಜಕೀಯದೊಂದಿಗೆ ಸಂಪರ್ಕ, ಮೊರಾರ್ಜಿ ದೇಸಾಯಿ ಸರಕಾರದಲ್ಲಿ ಪಾಲುದಾರಿಕೆ ಪಡೆದ ಬಿಜೆಪಿಗೆ ರಾಮಜನ್ಮಭೂಮಿ ಚಳುವಳಿಯ ಕಾರಣದಿಂದ ೮೬ ಸ್ಥಾನಗಳು ಲಭಿಸಿದ್ದವು. ವಿ. ಪಿ. ಸಿಂಗ್ ಮಂಡಲ್ ವರದಿಯನ್ನು ಜಾರಿಗೆ ತಂದ ಕಾರಣಕ್ಕೆ ಆಂತರಿಕ ಭಿನ್ನಾಭಿಪ್ರಾಯ ತಲೆದೋರಿ ಸರಕಾರ ಬಿದ್ದಿತು. ಕಾಂಗ್ರೆಸ್ ವಿರೋಧಿ ಹಾಗೂ ತೃತೀಯ ಶಕ್ತಿಯ ವಿರೋಧಿ ಅಲೆಯಲ್ಲಿ ಬಿಜೆಪಿ ವ್ಯವಸ್ಥಿತವಾಗಿ ಹಿಂದೂಗಳ ಸಂಘಟನೆಗೆ ಇಳಿಯಿತು. ರಥಯಾತ್ರೆಯನ್ನು ಕೈಗೊಂಡಿತು. ರಾಜೀವ್ ಹತ್ಯೆಯ ಅಲೆಯಲ್ಲಿಯೂ ಬಿಜೆಪಿ ೧೯೯೧ರ ಚುನಾವಣೆಯಲ್ಲಿ ೧೨೦ ಸ್ಥಾನಗಳನ್ನು ಗಳಿಸಿತು. ೧೯೯೨ ಡಿಸೆಂಬರ್, ೬ರಂದು ಬಾಬರಿ ಮಸೀದಿಯನ್ನು ಸಂಘಪರಿವಾರ ವಿಧ್ವಂಸಗೊಳಿಸಿತು. ನರಸಿಂಹರಾವ್ ನೇತೃತ್ವದ ಕಾಂಗ್ರೆಸ್ ಸಮ್ಮಿಶ್ರ ಸರಕಾರದ ಮೌನವೂ ಇದಕ್ಕೆ ಕಾರಣವಾಗಿತ್ತು. ಅದರ ಪರಿಣಾಮವಾಗಿ ೧೯೯೬ರ ಚುನಾವಣೆಯಲ್ಲಿ ಬಿಜೆಪಿ ಮೈತ್ರಿಕೂಟ ೧೬೧ ಸ್ಥಾನಗಳಿಸಲು ಸಾಧ್ಯವಾಯಿತು. ಆದರೆ ಅಧಿಕಾರ ಹಿಡಿಯಲು ಸಾಧ್ಯವಾಗಲಿಲ್ಲ. ರಾಷ್ಟ್ರೀಯ ರಂಗದ ಆಂತರಿಕ ಕಚ್ಚಾಟ, ಕಾಂಗ್ರೆಸ್ಸಿನ ನಯವಂಚಕ ರಾಜಕಾರಣಗಳು ವಾಜಪೇಯಿಯವರನ್ನು ಪ್ರಧಾನಿಯನ್ನಾಗಿಸಿದವು. ೧೯೯೯ರ ಚುನಾವಣೆಯಲ್ಲಿ ೧೮೨ ಸ್ಥಾನ ಗಳಿಸಿ ಇತರ ಮೈತ್ರಿ ಪಕ್ಷಗಳೊಂದಿಗೆ ಸರಕಾರ ರಚಿಸುವಲ್ಲಿ ಬಿಜೆಪಿ ಯಶಸ್ವಿಯಾಯಿತು. ಸಮಾಜವಾದಿ ಹೋರಾಟಗಳಲ್ಲಿ ಇಡೀ ಬದುಕನ್ನು ಸವೆಸಿದ ಜಾರ್ಜ್ ಫರ್ನಾಂಡಿಸ್ ಎನ್.ಡಿ.ಎ. ಸಂಚಾಲಕರಾದರು. ವಿ. ಪಿ. ಸಿಂಗ್ ಅವರಿಗೆ ಬೆಂಬಲಿಸಿದ್ದ ಸಮಾಜವಾದಿ ಹಿನ್ನೆಲೆಯ ಕೆಲವು ಪ್ರಾದೇಶಿಕ ಪಕ್ಷಗಳು ಈಗ ಬಿಜೆಪಿಯನ್ನು ಬೆಂಬಲಿಸಿದವು. ಕೋಮುವಾದ ಹಾಗೂ ಕೋಮುವಾದಿ ಪಕ್ಷಗಳನ್ನು ಕುರಿತಾಗಿ ಯಾವುದೇ ಸೈದ್ಧಾಂತಿಕ ಖಚಿತ ನಿಲುವುಗಳನ್ನು ಹೊಂದಿರದ, ಕಾಂಗ್ರೆಸ್ ವಿರೋಧವನ್ನು ಮಾತ್ರ ಮುಖ್ಯವೆಂದು ಪರಿಗಣಿಸಿದ ಶೂದ್ರ ಪ್ರಾದೇಶಿಕ ಪಕ್ಷಗಳ ಅವಕಾಶವಾದಿ ರಾಜಕಾರಣ ಭಾರತದಲ್ಲಿ ಕೋಮುವಾದಿ ರಾಜಕೀಯ ಶಕ್ತಿಗಳ ಪ್ರಾಬಲ್ಯಕ್ಕೆ ಕಾರಣವಾದುವು. ಕಾಂಗ್ರೆಸ್ಸಿನ ಮೃದು ಕೋಮುವಾದಿ ನಿಲುವು ಹಾಗೂ ಭ್ರಷ್ಟಾಚಾರ ಕೂಡ ಕಾರಣ. ರಾಜ್ಯ ರಾಜಕಾರಣದಲ್ಲಿಯೂ ಪ್ರಾದೇಶಿಕ ಪಕ್ಷಗಳು ಬಿಜೆಪಿಯೊಂದಿಗೆ ಹೊಂದಾಣಿಕೆ ಮಾಡಿಕೊಂಡವು. ಮಾಯಾವತಿ ಮತ್ತು ಬಿಜೆಪಿಯ ಸಖ್ಯ ಈ ತತ್ವರಹಿತ ರಾಜಕಾರಣದ ಮತ್ತೊಂದು ಮಜಲನ್ನು ಸೂಚಿಸುತ್ತದೆ.

**೪. ಕೇಸರೀಕರಣ : ಮರು ವಿಕೃತೀಕರಣ**

ಗತಕಾಲದ ವೈಭವೀಕರಣ ಹಾಗೂ ಮಧ್ಯಯುಗದ ವಿಕೃತೀಕರಣದ ವಸಾಹತುಶಾಹಿ ಚರಿತ್ರೆಯನ್ನು ಭಾರತದ ಪ್ರಗತಿಪರ ಚರಿತ್ರಕಾರರು ನಿರ್ಮಿತೀಕರಿಸಿ ಹೊಸ ಚರಿತ್ರೆಯನ್ನು ರಚಿಸಿದ್ದರು. ೧೯೬೨ರಲ್ಲಿ ಆರಂಭವಾದ ರಾಷ್ಟ್ರೀಯ ಶೈಕ್ಷಣಿಕ ಸಂಶೋಧನೆ ಹಾಗೂ ತರಬೇತಿ ಸಂಸ್ಥೆಯ ನಿರ್ದೇಶನದಂತೆ ಡಾ|| ಆರ್. ಎಸ್. ಶರ್ಮ, ರೋಮಿಲಾ ಥಾಪರ್, ಬಿಪಿನ್ ಚಂದ್ರ, ಸತೀಶಚಂದ್ರ ಮೊದಲಾದ ಜಾಗತಿಕ ಮನ್ನಣೆ ಪಡೆದ ಚರಿತ್ರಕಾರರು ಪಠ್ಯವನ್ನು ರಚಿಸಿ ಶಾಲಾ ವಿದ್ಯಾಭ್ಯಾಸಕ್ಕೆ ಧರ್ಮನಿರಪೇಕ್ಷತೆಯ ಆಯಾಮವನ್ನು ಒದಗಿಸಿದ್ದರು. ಆದರೆ ೯೦ರ ದಶಕದಲ್ಲಿ ಅಧಿಕಾರದ ಗದ್ದುಗೆ ಏರಿದ ಕೋಮುವಾದಿ ಪಕ್ಷವು ಶಾಲಾ ಪಠ್ಯಕ್ರಮಕ್ಕೆ ಮತೀಯ ಚಿಂತನೆಗಳನ್ನು ತುಂಬಲು ಯತ್ನಿಸಿತು. ಆದಿತ್ಯ ನಾರಾಯಣ ಅವರು ಹೇಳುವಂತೆ, ''ವೈಜ್ಞಾನಿಕವಾಗಿ ವೈಚಾರಿಕತೆಯಿಂದ ಬೆಳೆದುಬಂದ ಚಾರಿತ್ರಿಕ ವಿಶ್ಲೇಷಣೆಯನ್ನು ಉದ್ದೇಶಪೂರ್ವಕವಾಗಿ ತಿರುಚಿ, ತಮ್ಮ ಪಕ್ಷ ಭಾರತದ ಚರಿತ್ರೆ ಹೇಗಿರಬೇಕೆಂದು ಬಯಸುತ್ತದೋ ಆ ರೀತಿ ಪಾಠಕ್ರಮ ಮತ್ತು ಪಠ್ಯವಸ್ತುಗಳನ್ನು ರಚಿಸುವ ಪ್ರಯತ್ನ ಇದಾಗಿತ್ತು. ಚರಿತ್ರೆಯ ಮೂಲಕ ಭಾರತದ ಇಡೀ ಸಂಸ್ಕೃತಿಯನ್ನು ತಲೆಕೆಳಗು ಮಾಡಿ ಬೆಳೆಯುತ್ತಿರುವ ಎಳೆಯ ಮಕ್ಕಳ ಮನಸ್ಸಿನಲ್ಲಿ ಕೋಮುವಾದದ ನಂಜು ಬಿತ್ತುವುದು ಅವರ ಉದ್ದೇಶ. ಭಾರತದ ಇತಿಹಾಸವನ್ನು ಪುನರ್ ರಚಿಸುವುದು, ಅಂದರೆ ದೇಶದ ಸಂಸ್ಕೃತಿಯನ್ನು ಕೇಸರೀಕರಣಗೊಳಿಸುವುದು.'' ಜೋಗಿಂದರ್ ಸಿಂಗ್ ಪ್ರತಾಪ್ ಎನ್.ಸಿ.ಇ.ಆರ್.ಟಿ.ಯ ಅಧ್ಯಕ್ಷರಾದರೆ, ದೇಶವಿಭಜನೆಯ ಕೋಮುಗಲಭೆಯಲ್ಲಿ ಸುಂದರ ಮುಸ್ಲಿಂ ಯುವತಿಯೊಬ್ಬಳನ್ನು ಕೊಲೆಗೈದದ್ದನ್ನು ಆತ್ಮಕಥೆಯಲ್ಲಿ ಹೇಳಿಕೊಂಡಿದ್ದ ಕೆ. ಜ. ರುಸ್ತೋಗಿ ಸದಸ್ಯರಾದರು. ಕಿರೀಟ್ ಜೋಶಿಯವರ 'ಭಾರತೀಯ ಶಿಕ್ಷಣಶಾಸ್ತ್ರ'ವೆಂಬ ಹಿಂದೂ ಮೂಲಭೂತವಾದಿ ಉಪನ್ಯಾಸವನ್ನು ಪ್ರಕಟಿಸಿ ದೇಶದ ಪ್ರತಿಯೊಂದು ಶಿಕ್ಷಣ ತರಬೇತಿ ಸಂಸ್ಥೆಗಳಿಗೆ ಕಳುಹಿಸಿ ಅದರ ಆಶಯಗಳಿಗೆ ತಕ್ಕಂತೆ ಪಠ್ಯಕ್ರಮ ಮತ್ತು ಕಲಿಕೆಯ ವಿಧಾನಗಳನ್ನು ರೂಪಿಸಿಕೊಳ್ಳಲು ಆಜ್ಞೆ ಮಾಡಲಾಯಿತು. ಇದರ ಉದ್ದೇಶ ಕೆ. ಎನ್. ಪಣಿಕ್ಕರ್ ಅವರು ಹೇಳುವಂತೆ, ''ಭಾರತೀಕರಣ, ಅಧ್ಯಾತ್ಮೀಕರಣ ಮತ್ತು ರಾಷ್ಟ್ರೀಯತೆಯನ್ನು ಜಾಗೃತಗೊಳಿಸುವ ಹೆಸರಿನಲ್ಲಿ ಈಗ ಚಾಲ್ತಿಯಲ್ಲಿರುವ ದೇಶದ ಸೆಕ್ಯುಲರ್ ವಿದ್ಯಾವ್ಯವಸ್ಥೆಯ ಸ್ಥಾನದಲ್ಲಿ ಪ್ರಾಚೀನ ಜ್ಞಾನ ಭಂಡಾರದಲ್ಲಿ ಗಟ್ಟಿಯಾಗಿ ಬೇರು ಬಿಟ್ಟಿರುವ ವಿದ್ಯಾಭ್ಯಾಸದ ಮಾದರಿಯನ್ನು ಸ್ಥಾಪಿಸುವುದು.'' ಭಾರತದಲ್ಲಿ ಸುಮಾರು ೨೦೦೦೦ದಷ್ಟಿರುವ ವಿದ್ಯಾಭಾರತಿ ಶಾಲೆಗಳಲ್ಲಿ ಪ್ರಚಲಿತವಿರುವ ಪಠ್ಯಕ್ರಮದಲ್ಲಿ ಆರ್ಯರು ಸ್ಥಳೀಯರು, ಬೌದ್ಧ ಧರ್ಮದ ಅಹಿಂಸಾತತ್ವ ದೇಶವನ್ನು ಅಸ್ಥಿರಗೊಳಿಸಿತು, ಮುಸ್ಲಿಂ ಆಕ್ರಮಣಕಾರರು ಹಿಂದೂ ದೇವಾಲಯ ನಾಶಮಾಡಿ ಹಿಂದೂ ಸ್ತ್ರೀಯರ ಮೇಲೆ ಅತ್ಯಾಚಾರ ಮಾಡಿದರು, ೧೫೨೮ರಲ್ಲಿ ಬಾಬರ್ ರಾಮಜನ್ಮಭೂಮಿಯನ್ನು ನಾಶಮಾಡಿದ, ಅದರ ಮುಕ್ತಿಗಾಗಿ ನಾಲ್ಕುನೂರು ವರ್ಷಗಳಲ್ಲಿ ಮೂರೂವರೆ ಲಕ್ಷ ಜನ ಜೀವ ತೆತ್ತಿದ್ದಾರೆ... ಮುಂತಾದ ತಿರುಚಿದ ಚರಿತ್ರೆಯನ್ನು ಸೇರಿಸಲಾಯಿತು. ಸೆಕ್ಯುಲರ್ ಪಠ್ಯಕ್ರಮದಲ್ಲಿದ್ದ ಪುರಾಣಕ್ಕಿಂತ ಪುರಾತತ್ವ ನಂಬಿಕೆಗೆ ಅರ್ಹ, ರಾಮ ಕ್ರಿ.ಪೂ. ೨೦೦೦ದ ಆಜೂಬಾಜು ಬದುಕಿದ್ದಕ್ಕೆ ಪುರಾವೆ ಇಲ್ಲ, ಆರ್ಯರು ಗೋಮಾಂಸ ಭಕ್ಷಕರಾಗಿದ್ದರು. ಯಜ್ಞಯಾಗಾದಿಗಳ ಕಾರಣದಿಂದ ದನಗಳ ಸಂತತಿ ಕುಂಠಿತಗೊಂಡಿತು. ಇವೇ ಮೊದಲಾದ ಸಂಗತಿಗಳನ್ನು ಕಿತ್ತುಹಾಕಲಾಯಿತು. ಸಂಸ್ಕೃತ ಭಾಷೆಯನ್ನು ಎಲ್ಲರಿಗೂ

## ಬಡತನ - ಸಿರಿತನ

**ಒಬ್ಬರ**
**ಅವಿರತ ಅಸಹಾಯಕತೆ**
**ಇನ್ನೊಬ್ಬರ**
**ದುರುಪಯೋಗದ ತಾನ**
**ಈ ತನ-ತಾನಗಳ ನಡುವೆ**
**ಹುಟ್ಟಿದೆ**
**ಬಡತನ - ಸಿರಿತನ**

**ಶಂಕರಗೌಡ ಸಾತ್ಮಾರ**
ನಂ. ೫೨, ಡಾ|| ರಾಧಾಕೃಷ್ಣನ್ ನಗರ
ಗೋಕುಲ ರಸ್ತೆ, ಹುಬ್ಬಳ್ಳಿ - ೩೦

ಕಡ್ಡಾಯಗೊಳಿಸುವ 'ಸಂಸ್ಕೃತ ಭಾಷೆಯ ಬಗ್ಗೆ ಪಾಠಕ್ರಮ -೨೦೦೦'ದಲ್ಲಿ ಪ್ರಸ್ತಾಪಗೊಂಡಿದ್ದು ಕೇಸರೀಕರಣದ ಮತ್ತೊಂದು ಪ್ರಯತ್ನವಾಗಿದೆ. ಇದು ಏಕಭಾಷೆ, ಏಕ ಸಂಸ್ಕೃತಿಯ ಹೇರಿಕೆಯ ಭಾಗವೇ ಆಗಿದೆ. ಕುಲದೀಪ್ ನಯ್ಯರ್ ಅವರು, ''ಧಾರ್ಮಿಕ ಮೌಲ್ಯಗಳು ಹಾಗೂ ಸಂಸ್ಕೃತಕ್ಕೆ ಒತ್ತುಕೊಡುವ ಮೂಲಕ ಮತಾಂಧತೆ ಮತ್ತು ಅಬ್ಬರದ ದೇಶಾಭಿಮಾನಕ್ಕೆ ದಾರಿ ಮಾಡಿಕೊಡುವುದೇ ಈ ಜೋಶಿಯಂಥ ವ್ಯಕ್ತಿಗಳಿಂದಾಗುವ ನೈಜ ಅಪಾಯ. ಹೊಸ ಶಿಕ್ಷಣ ನೀತಿಯ ಗುಣಮಟ್ಟ ಸುಧಾರಿಸದಿದ್ದರೂ ದೇಶದ ಜಾತ್ಯತೀತ ನಂಬಿಕೆಗೆ ಧಕ್ಕೆ ತರುತ್ತದೆ'' ಎಂದು ಪ್ರತಿಭಟಿಸಿದರು. ಕೇಂದ್ರದಲ್ಲಿ ಯುಪಿಎ ಸರಕಾರ ಬಂದ ತಕ್ಷಣ ಮಾನವ ಸಂಪನ್ಮೂಲ ಸಚಿವ ಅರ್ಜುನ್ ಸಿಂಗ್ ಅವರು ಕೇಸರೀಕರಣದ ನಂಜನ್ನು ಇತಿಹಾಸದ ಪಠ್ಯದಿಂದ ತೆಗೆಯುವ ಕೆಲಸವನ್ನು ಕೈಗೆತ್ತಿಕೊಂಡರು. ಚರಿತ್ರೆಯುದ್ದಕ್ಕೂ ಹಿಂದುತ್ವದ ವಿಕಾಸಕ್ಕೆ ಪೂರಕವಾಗಿ ವರ್ತಿಸಿದ ಕಾಂಗ್ರೆಸ್ಸಿನ ರಾಜಕೀಯಕ್ಕೆ ಭಿನ್ನವಾಗಿ ನಡೆದುಕೊಂಡರು.

**೫. ಅಣ್ವಸ್ತ್ರ ಪರೀಕ್ಷೆ : ಕೋಮುವಾದಿ ರಾಷ್ಟ್ರೀಯತೆ**

ಭಾರತ ಸ್ವಾತಂತ್ರ್ಯೋತ್ತರದ ಆರಂಭದ ದಶಕಗಳಲ್ಲಿ ಅಲಿಪ್ತ ನೀತಿ ಮತ್ತು ನಿಶ್ಶಸ್ತ್ರೀಕರಣದ ಪರವಾಗಿತ್ತು. ೧೯೭೪ರಲ್ಲಿ ಇಂದಿರಾ ಗಾಂಧಿ ಅಣ್ವಸ್ತ್ರ ಪರೀಕ್ಷೆ ನಡೆಸಿ ಸಂಘಪರಿವಾರಕ್ಕೂ ಮೆಚ್ಚಿನ ನಾಯಕಿಯಾಗಿದ್ದರು. ೧೯೯೮ರಲ್ಲಿ ಎನ್.ಡಿ.ಎ. ಸರಕಾರ ಅಧಿಕಾರಕ್ಕೆ ಬಂದ ಕೆಲವೇ ದಿನಗಳಲ್ಲಿ ಅಣ್ವಸ್ತ್ರ ಪರೀಕ್ಷೆ ನಡೆಸಿತು. ಅದಕ್ಕೆ ಖರ್ಚು ಮಾಡಿದ್ದು ಸುಮಾರು ೨೫೦೦೦ ಕೋಟಿ. ಅದನ್ನು ಆತ್ಮಗೌರವದ ಸ್ಫೋಟ, ಬುದ್ಧನಗೆ, ಹೆಮ್ಮೆಯ ಗಳಿಗೆ ಮುಂತಾಗಿ ಹೇಳಲಾಯಿತು. ಅರುಂಧತಿ ರಾಯ್ ಅವರು ಗುರುತಿಸುವಂತೆ, ''ರಾಷ್ಟ್ರಾಭಿಮಾನದ ರಂಗನ್ನು ಬಳಿದುಕೊಂಡ ಈ ಅಣ್ವಸ್ತ್ರ ಪರೀಕ್ಷೆಗಳು ವಿಜಯೀ ಮನೋಭಾವದ ಕಳ್ಳನ್ನು ಕುಡಿಸಿ ಜನರಿಗೆ ಮತ್ತೇರಿಸಿದವು.'' ಲಂಕೇಶ್ ಇದಕ್ಕೆ 'ಮಗ ಭಂಗಿ ನೆಟ್ಟ' ಎಂದು ಪ್ರತಿಕ್ರಿಯಿಸಿದರು. ಕಾಂಗ್ರೆಸ್ ಸರಕಾರ ಜಾರಿಗೆ ತಂದ ಜಾಗತೀಕರಣದ ನೀತಿಯನ್ನು ಅದಕ್ಕಿಂತ ಹೆಚ್ಚು ಉತ್ಸಾಹದಿಂದ ಅಪ್ಪಿಕೊಂಡ ಬಿಜೆಪಿಗೆ ಆ ನೀತಿಯ ಮೂಲಕ ದೇಶದಲ್ಲಿ ಬಡವರು, ರೈತರು, ದಲಿತರು ಹಾಗೂ ಮಹಿಳೆಯರ ಮೇಲೆ ಆಗುತ್ತಿದ್ದ ಮಾರಣಾಂತಿಕ ಆಕ್ರಮಣಗಳನ್ನು ಮರೆಮಾಚಿ ದೇಶದ ಗಮನವನ್ನು ಬೇರೆಡೆ ಸೆಳೆಯಲು ಕೋಮುವಾದಿ ರಾಷ್ಟ್ರೀಯತೆಯನ್ನು ಅವಲಂಬಿಸುವುದು ಅನಿವಾರ್ಯವಾಗಿತ್ತು. ೯೦ರ ದಶಕದಲ್ಲಿ ಇಸ್ಲಾಮನ್ನು ಶತ್ರುವೆಂದು ಭಾವಿಸಿ ಜಾಗತಿಕ ಭಯೋತ್ಪಾದನೆಗಳಿಂದ ಅಮೇರಿಕಾ ಪ್ರಣೀತ ಮತೀಯ ರಾಜಕಾರಣ ಅದರ ಆರ್ಥಿಕ ನೀತಿಯ ಅನುಯಾಯಿಯಾದ ಭಾರತದಲ್ಲೂ ಅಭಿವ್ಯಕ್ತಗೊಳ್ಳುತ್ತಿದ್ದ ಹಲವಾರು ಆಯಾಮಗಳಲ್ಲಿ ಅಣ್ವಸ್ತ್ರ ಪರೀಕ್ಷೆಯೂ ಒಂದಾಗಿತ್ತು. ಸ್ವಾತಂತ್ರ್ಯ ಪೂರ್ವದಲ್ಲಿ ಮುಸ್ಲಿಮರನ್ನು ಶತ್ರುಗಳೆಂದು ಭಾವಿಸಿದ್ದ ಸಂಘಪರಿವಾರ ಈಗ ಪಾಕಿಸ್ತಾನವನ್ನು ನಿರಂತರವಾಗಿ ಶತ್ರುಸ್ಥಾನದಲ್ಲಿಟ್ಟು, ಜನತೆಯಲ್ಲಿ ಕೋಮುವಾದಿ ರಾಷ್ಟ್ರೀಯತೆಯನ್ನು ಉದ್ದೀಪಿಸುತ್ತಿತ್ತು. ಅಣ್ವಸ್ತ್ರವಾದ ಆಧುನಿಕ ರಾಷ್ಟ್ರೀಯವಾದದ ಅಂತಿಮ ಸಾಧ್ಯತೆಯಾಗಿದೆ. ''ನಾಝಿ ಜರ್ಮನಿ ಹಿರೋಷಿಮಾ, ನಾಗಾಸಾಕಿಗಳ ಸಮೂಹ ಪಾತಕಿಗಳನ್ನು ಇವತ್ತಿನ ಅಣ್ವಸ್ತ್ರಪರ ವಾದಿಗಳೊಂದಿಗೆ ಹೋಲಿಸಿದರೆ ಪರಸ್ಪರ ಅವರಿಬ್ಬರಿಗೂ ಸಮಾನವಾದ ಮನೋಧರ್ಮವಿರುವುದನ್ನು'' ಎರಿಕ್ ಮರ್ಕ್ಯುಸನ್ ಮತ್ತು

## ಕತ್ತೆಗಳು

ಮಗು ಬೇಡಿ
ಸೊಸೆಯನ್ನು
ವಿಚ್ಛೇದನ
ಮಾಡಿಸುವವರೆ
ಮಳೆ ಬೇಡಿ
ಕತ್ತೆಗಳಿಗೆ
ಮದುವೆ
ಮಾಡುವರು

ಡಾ|| ಎ. ಪುಗಳೇಂದಿ
ಬಳ್ಳಾರಿ

ರಾಬರ್ಟ್ ಜೆ. ಲಿಫ್ಟನ್ ಅವರು ತಮ್ಮ 'ದಿ ಜಿನೊಸೈಡಲ್ ಮೆಂಟಾಲಿಟಿ'ಯಲ್ಲಿ ಗುರುತಿಸಿದ್ದಾರೆ. ಇದು ಸಮೂಹ ಪಾತಕದ ಆಸಕ್ತಿಯ ದುರ್ಬಲ ಮನಸ್ಥಿತಿಯಾಗಿದೆ. ಇಂದಿರಾ ಗಾಂಧಿ, ವಾಜಪೇಯಿ ಪಕ್ಷಾತೀತವಾಗಿ ರಾಷ್ಟ್ರ ನಿರ್ವಹಣೆಯ ಭಾಗವಾಗಿ ಸಮೂಹ ಪಾತಕದ ಮನಸ್ಥಿತಿಯಿಂದ ನರಳುವ ಆಳುವ ವರ್ಗದ ಭಾಗವಾಗಿದ್ದಾರೆ. ಭಾರತ ಅಣುಬಾಂಬ್ ತಯಾರಿಸಿದ ಕೆಲವೇ ದಿನಗಳಲ್ಲಿ ಪಾಕಿಸ್ತಾನ ಕೂಡ ಅದೇ ದಾರಿ ಹಿಡಿಯಿತು. ಎರಡೂ ದೇಶಗಳಲ್ಲಿ ಪರದೇಶ ಮತ್ತು ಪರಧರ್ಮ ವಿರೋಧಿ ಹುಚ್ಚು ತುಂಬಿ ಹರಿಯುತ್ತಿದೆ. ಆಶೀಶ್ ನಂದಿಯವರು ಪಾಕಿಸ್ತಾನದ ಪ್ರಭಾವಶಾಲಿ ಸೇನಾಧಿಕಾರಿಯೊಬ್ಬನ ಪತ್ರಿಕಾ ಸಂದರ್ಶನವನ್ನು ದಾಖಲಿಸಿದ್ದಾರೆ: ''ಮೊದಲಿಗೆ ನಾವು ಯುದ್ಧವನ್ನಾರಂಭಿಸಿ ದೆಹಲಿ, ಮುಂಬಯಿ, ಕಲ್ಕತ್ತಾ ಮೊದಲಾದ ಅವರ ನಗರಗಳನ್ನು ಬಲಿತೆಗೆದುಕೊಳ್ಳುತ್ತೇವೆ. ಆಮೇಲೆ ಅವರು ನಮ್ಮ ಮೇಲೆ ದಾಳಿ ಮಾಡಿ ಕರಾಚಿ ಮತ್ತು ಲಾಹೋರ್‌ಗಳನ್ನು ಬಲಿ ತೆಗೆದುಕೊಳ್ಳುತ್ತಾರೆ. ಆ ಯುದ್ಧದಲ್ಲಿ ನಾವು ನೂರಿನ್ನೂರು ಮಿಲಿಯನ್ ಜನರನ್ನು ಕೊಲ್ಲುತ್ತೇವೆ ಮತ್ತು ಅವರು ಇನ್ನೊಮ್ಮೆ ದಾಳಿ ನಡೆಸಿದರೆ ಅಲ್ಲಿಗೆ ಕಥೆ ಮುಗಿಯುತ್ತದೆ''. ಇದು ಭಾರತ ಮತ್ತು ಪಾಕಿಸ್ತಾನಗಳೆಂಬ ಎರಡು ಆಧುನಿಕ ಅವಳಿ ಜವಳಿ ರಾಷ್ಟ್ರಗಳು ಕೋಮುವಾದಿ ರಾಷ್ಟ್ರೀಯತೆಯ ಭಯಗ್ರಸ್ತತೆ, ಹತಾಶೆ ಹಾಗೂ ಆಕ್ರಮಣಶೀಲ ಪ್ರವೃತ್ತಿಗಳನ್ನು ಅಂತರಂಗೀಕರಿಸಿ ಕೊಂಡು ದುರ್ಬಲವಾಗುತ್ತಿರುವುದನ್ನು ಸಮರ್ಥವಾಗಿ ವಿವರಿಸುತ್ತದೆ.

### ೬. ಕಾರ್ಗಿಲ್ ಯುದ್ಧ : ಮುಸ್ಲಿಮರ ಅಗ್ನಿಪರೀಕ್ಷೆ

ಕಾಶ್ಮೀರ ಸಮಸ್ಯೆಗೆ ಶಾಶ್ವತ ಪರಿಹಾರ ಸಿಗುವವರೆಗೆ ಭಾರತ ಮತ್ತು ಪಾಕಿಸ್ತಾನಗಳ ಮಧ್ಯೆ ಯುದ್ಧಗಳು ನಡೆಯುತ್ತಲೇ ಇರುತ್ತವೆ. ಭಾರತ ಮತ್ತು ಪಾಕಿಸ್ತಾನದ ರಾಜಕಾರಣಿಗಳಿಗೆ ರಾಷ್ಟ್ರೀಯತೆಯ ಹೆಸರಿನಲ್ಲಿ ಜನರನ್ನು ಉನ್ಮಾದಕ್ಕೆ ತಳ್ಳಿ ತಮ್ಮ ರಾಜಕೀಯ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳಲು ಕಾಶ್ಮೀರ ಬಳಕೆಯಾಗುತ್ತಿದೆ. ೯೦ರ ದಶಕದಲ್ಲಿ ಎರಡೂ ದೇಶಗಳಲ್ಲಿ ಅಣ್ವಸ್ತ್ರ ತಯಾರಿಕೆಯಲ್ಲಿ ಸಾಧಿಸಿದ ಸ್ವಾವಲಂಬನೆಯ ಕಾರಣದಿಂದ ಹಳೆಯ ಸಾಂಪ್ರದಾಯಿಕ ಯುದ್ಧ ವಿಧಾನಗಳು ಅಪ್ರಸ್ತುತಗೊಂಡವು. ಪಾಕಿಸ್ತಾನ ಸೈನ್ಯಬಲದಲ್ಲಿ ಸಣ್ಣದಿದ್ದರೂ ಅಣ್ವಸ್ತ್ರ ಬಲದಲ್ಲಿ ಸಮಾನವಾಗಿದ್ದು ಯುದ್ಧಕ್ಕೆ ಪ್ರೇರಣೆ ನೀಡಿದೆ. ಗಡಿಯ ಹೆಸರಿನಲ್ಲಿ ಎರಡೂ ದೇಶದ ನೂರಾರು ಪ್ರಜೆಗಳ ಮಾರಣಹೋಮ ನಡೆಯಿತು. ಈ ಸಂದರ್ಭದಲ್ಲಿ ದೇಶದ ಅಲ್ಪಸಂಖ್ಯಾತ ಮನಸ್ಸುಗಳು ವಿಚಿತ್ರ ಸಂಶಯ, ಸಂಕಟ, ತಳಮಳಗಳಿಗೆ ಒಳಗಾದವು. ತಮ್ಮ ದೇಶಪ್ರೇಮವನ್ನು ಸಾರ್ವಜನಿಕವಾಗಿ ಪ್ರದರ್ಶಿಸುವ ಒತ್ತಡ ಅವರದಾಗಿತ್ತು. ದೇಶೀ ಮುಸ್ಲಿಮರ ದೇಶಪ್ರೇಮವನ್ನು ಸಂಶಯದ ಕಣ್ಣಿನಿಂದ ನೋಡುವಂತೆ ಬಹುಸಂಖ್ಯಾತ ವರ್ಗವನ್ನು ಪರೀಕ್ಷಕರನ್ನಾಗಿ ಇಂಥ ಯುದ್ಧಗಳು ಸಿದ್ಧಗೊಳಿಸುತ್ತವೆ. ಎರಡೂ ಧರ್ಮಗಳ ಜನರ ನಡುವಿನ ಬಾಂಧವ್ಯವನ್ನು ಕತ್ತರಿಸುತ್ತವೆ. ದ್ವೇಷ, ದಿಗಿಲುಗಳನ್ನು ಬಿತ್ತುತ್ತವೆ. ಸತ್ತು ಪೆಟ್ಟಿಗೆಯಲ್ಲಿ ಶವವಾಗಿ ಬರುತ್ತಿದ್ದ ಈ ದೇಶದ ಬಡ ರೈತನ ಮಕ್ಕಳ ಹೆಣಗಳು ದೇಶದಾದ್ಯಂತ ಭಾವುಕತೆಯ ಹೊಳೆಯನ್ನೇ ಹರಿಸಿದವು. ಆಗಿನ ಸರಕಾರ ಸೈನಿಕರ ಹೆಣಗಳನ್ನು ತನ್ನ ಜನಪ್ರಿಯತೆಗೆ ಬಳಸಿಕೊಂಡಿತು. ಶವಪೆಟ್ಟಿಗೆಯ ಸಿದ್ಧತೆಯಲ್ಲಿಯೂ ಭ್ರಷ್ಟಾಚಾರ ನಡೆದದ್ದು ಅದರ ದೇಶಭಕ್ತಿಯ ನಾಟಕವನ್ನು ಬಯಲುಮಾಡಿತು.

### ೭. ಶೂದ್ರ ವರ್ಗಗಳು ಮತ್ತು ಕೋಮುವಾದಿ ಪ್ರತಿಸ್ಪಂದನೆ

ವಸಾಹತುಶಾಹಿಯ ಆಗಮನದ ಮೂಲಕ ಭಾರತದ ಮೇಲ್ಜಾತಿ ಬ್ರಿಟಿಷ್ ಆಡಳಿತ ವ್ಯವಸ್ಥೆಯ ಭಾಗವಾಗಲು ಹಳ್ಳಿಗಳಿಂದ ನಗರಗಳಿಗೆ ಗುಳೇ ಹೊರಟಿತು. ಸ್ವಾತಂತ್ರ್ಯೋತ್ತರ ಭಾರತದಲ್ಲಿಯ ರಾಜಕೀಯ ಹಾಗೂ ಅಧಿಕಾರಶಾಹಿಯನ್ನು ಆಕ್ರಮಿಸಿದ್ದು ಕೂಡ ಬ್ರಾಹ್ಮಣ ಮತ್ತು ವ್ಯಾಪಾರಿ ವರ್ಗ. ಜಾಗತೀಕರಣದ ಹೊಸ ಅವಕಾಶಗಳಿಗೂ ಲಗ್ಗೆ ಇಟ್ಟದ್ದು ಇದೇ ವರ್ಗ. ಊಳಿಗಮಾನ್ಯ ಕಾಲದಿಂದಲೂ ಶೂದ್ರವರ್ಗಗಳಲ್ಲಿ ಕೆಲವು ಜಮೀನ್ದಾರಿ ಕುಟುಂಬಗಳಿದ್ದವು. ವಸಾಹತುಶಾಹಿ, ಸ್ವಾತಂತ್ರ್ಯ ಹಾಗೂ ನವ ವಸಾಹತುಶಾಹಿಯ ಮೂಲಕ ಮೇಲ್ಜಾತಿಗಳು ಖಾಲಿಮಾಡಿದ ಸ್ಥಾನಗಳಿಗೆ ಶೂದ್ರ ವರ್ಗಗಳು ಲಗ್ಗೆ ಇಟ್ಟವು. ಸ್ವಾತಂತ್ರ್ಯೋತ್ತರ ಭಾರತದ ಭೂಸುಧಾರಣಾ ಕಾನೂನು ಹೆಚ್ಚು ಅನುಕೂಲವಾಗಿದ್ದು ಶೂದ್ರ ಸಮುದಾಯಗಳಿಗೆ. ಸಣ್ಣಪುಟ್ಟ ಭೂಮಿಗಳ ಒಡೆತನ ಅವರಿಗೆ ಲಭಿಸಿತು. ಸಮಾನತೆಗಾಗಿ ತನಗಿಂತ ಮೇಲ್ಜಾತಿಗಳೊಂದಿಗೆ ಸಂಘರ್ಷಕ್ಕಿಳಿಯುತ್ತಿದ್ದ ಶೂದ್ರರು ತಮಗಿಂತ ಕೆಳಗಿನ ಜಾತಿಗಳನ್ನು ಕೀಳಾಗಿಯೇ ಕಾಣುತ್ತಿದ್ದರು. ದಲಿತರು ಹಾಗೂ ಮುಸ್ಲಿಮರ ವಿಷಯದಲ್ಲಿ ಬ್ರಾಹ್ಮಣ್ಯದ ಮತ್ತು ಕೋಮುವಾದದ ನಿಲುವುಗಳನ್ನು



ಶೂದ್ರರು ಅಂತರಂಗೀಕರಿಸಿಕೊಂಡರು. ಹೀಗಾಗಿ ದಲಿತರ ಹಾಗೂ ಮುಸ್ಲಿಮರ ಮೇಲೆ ನಡೆಯುವ ಹಲ್ಲೆಗಳಲ್ಲಿ ಶೂದ್ರರೇ ಹಲ್ಲೆಕೋರರಾಗುವಂಥ ವಾತಾವರಣವು ಸೃಷ್ಟಿಯಾಯಿತು. ಕರ್ನಾಟಕದಲ್ಲಿ ಒಕ್ಕಲಿಗರು ಹಾಗೂ ಲಿಂಗಾಯತರು ಬಿಜೆಪಿ ಹಾಗೂ ಸಂಘಪರಿವಾರದೊಂದಿಗೆ ಸಂಬಂಧವನ್ನೇರ್ಪಡಿಸಿಕೊಳ್ಳುವುದರ ಹಿಂದಿನ ರಾಜಕೀಯ ಆರ್ಥಿಕತೆ ಇದೇ ಆಗಿದೆ. ౭೦ರ ನಂತರದ ದಶಕಗಳಲ್ಲಿ ಸ್ವಾತಂತ್ರ್ಯೋತ್ತರ ಭಾರತದ ಆರ್ಥಿಕ ನೀತಿಗಳಿಂದ ಬಲಗೊಂಡ ಈ ವರ್ಗ ಪ್ರಾದೇಶಿಕ ಪಕ್ಷಗಳನ್ನು ಕಟ್ಟಿದ್ದು ಮತ್ತು ಅಧಿಕಾರಕ್ಕಾಗಿ ಎಲ್ಲ ಹೊಂದಾಣಿಕೆಗಳಿಗೂ ಸಿದ್ಧವಾದದ್ದು, ಆರ್ಥಿಕ ಬಲಾಢ್ಯತೆಯ ಮೂಲಕ ಹಿಂದುತ್ವದ ಕಕ್ಷೆಗೆ ಚಲಿಸಿದ್ದು, ಭಾರತದ ರಾಜಕೀಯ ಕ್ಷೇತ್ರಗಳಲ್ಲಿ ಜರುಗಿದ ವಿಪರ್ಯಾಸಗಳು. ಶೂದ್ರ ಭೂಮಾಲಿಕ ವರ್ಗಗಳು ಕೋಮುವಾದೀಕರಣಗೊಳ್ಳುವ ಮತ್ತು ಮತೀಯ ಹಿಂಸೆಯನ್ನು ಬೆಂಬಲಿಸುವ ಸ್ಪಷ್ಟವಾದ ಪಲ್ಲಟವನ್ನು ಕಂಡಿದ್ದು ಜಾಗತೀಕರಣದ ಕಾಲಘಟ್ಟದಲ್ಲಿ.

### ೮. ಧಾರ್ಮಿಕ ಹಿಂಸೆ ಮತ್ತು ದಲಿತರು

ಜಾಗತೀಕರಣ ಕಾಲದ ಅತ್ಯಂತ ಆತಂಕಕಾರಿ ಸಂಗತಿಯೆಂದರೆ ದಲಿತರು ದೊಡ್ಡ ದೊಡ್ಡ ಸಮುದಾಯವಾಗಿಯೇ ಕೋಮು ಹಿಂಸೆಗಳಲ್ಲಿ ಹಿಂದುತ್ವ ಸಂಘಟನೆಗಳೊಂದಿಗೆ ಭಾಗವಹಿಸುತ್ತಿರುವುದು. ೮೦ರ ದಶಕದಲ್ಲಿಯೇ ಅಧಿಕಾರ ರಾಜಕಾರಣಕ್ಕಾಗಿ ದಲಿತರನ್ನೂ, ಆದಿವಾಸಿಗಳನ್ನೂ ಓಲೈಸುವ ವ್ಯವಸ್ಥಿತ ಕಾರ್ಯಕ್ರಮಗಳನ್ನು ಹಾಕಿಕೊಂಡ ಸಂಘಪರಿವಾರ ಅದರ ಸಂಪೂರ್ಣ ಫಲಿತಾಂಶವನ್ನು ೯೦ರ ದಶಕದಲ್ಲಿ ಕಾಣತೊಡಗಿದೆ. ಗುಜರಾತ್ ಹತ್ಯಾಕಾಂಡದಲ್ಲಿ ಮುಸ್ಲಿಮರ ಸಂಹಾರಕ್ಕೆ ದಲಿತರು ಹಾಗೂ ಆದಿವಾಸಿಗಳನ್ನು ಆಯುಧಗಳಾಗಿ ಬಳಸಿಕೊಳ್ಳುವಲ್ಲಿ ಅದು ಯಶಸ್ಸು ಕಂಡಿದೆ. ದಲಿತ ಲೋಕದಲ್ಲಿ ಕಂಡುಬಂದ ಈ ಪಲ್ಲಟವನ್ನು ಕುರಿತು ಆನಂದ ತೇಲ್ತುಂಬ್ಡೆ, ಶಂಸುಲ್ ಇಸ್ಲಾಂ, ಸಂದೀಪ ಪೇಂಡ್ಸೆ, ರಾಮ ಪುನಿಯಾನಿ, ಪ್ರಕಾಶ ಲೂಯಿಸ್, ಗೋಪಾಲ ಗುರು, ರಮೇಶ್ ಕಾಂಬ್ಳೆ ಮೊದಲಾದವರು ಗಂಭೀರವಾಗಿ ಚಿಂತನೆ ನಡೆಸಿದ್ದಾರೆ. ಜಾಗತೀಕರಣ, ಕೋಮುವಾದ ಹಾಗೂ ದಲಿತರ ಪಾಲ್ಗೊಳ್ಳುವಿಕೆಯ ಸಂಕೀರ್ಣ ಸಂಬಂಧವು ಕೇವಲ ತಾತ್ವಿಕ ಆದರ್ಶದ ಪ್ರಶ್ನೆಯಾಗಿರದೆ ೯೦ರ ದಶಕದ ನಂತರ ಆರ್ಥಿಕ ಪಲ್ಲಟದಲ್ಲಿ ದಲಿತ ಜಗತ್ತು ಅನುಭವಿಸುತ್ತಿರುವ ಹೊಸ ಸಂಕಟಗಳ ಹಿನ್ನೆಲೆಯಲ್ಲಿ ಚರ್ಚಿಸಿದ್ದಾರೆ. ಮಹಾರಾಷ್ಟ್ರದಲ್ಲಿ 'ಶಿವಶಕ್ತಿ ಮತ್ತು ಭೀಮಶಕ್ತಿ'ಗಳ ಐಕ್ಯತೆಯ ಹೆಸರಿನಲ್ಲಿ ಶಿವಸೇನೆ ಹಾಗೂ ಅಂಬೇಡ್ಕರ್‌ವಾದಿಗಳು ಒಂದಾದರು. ಉತ್ತರ ಪ್ರದೇಶದಲ್ಲಿ ಬಹುಜನ ಸಮಾಜ ಪಕ್ಷ ಹಾಗೂ ಬಿಜೆಪಿಗಳ 'ಮಹಾಮೈತ್ರಿ'ಗಳು ದಲಿತ ರಾಜಕಾರಣದ ಬಿಕ್ಕಟ್ಟುಗಳನ್ನು ಸೂಚಿಸುತ್ತವೆ. ಗೋಪಾಲ ಗುರು ಅವರು ಈ ಬೆಳವಣಿಗೆಗೆ ಮೂರು ಕಾರಣಗಳನ್ನು ಗುರುತಿಸಿದ್ದಾರೆ. ಸಾರ್ವಜನಿಕ ಉದ್ದಿಮೆಗಳಲ್ಲಿ ದಲಿತರ ನೇಮಕಾತಿ ಪ್ರಕ್ರಿಯೆ ಸ್ಥಗಿತಗೊಂಡಿರುವುದು, ಮೀಸಲಾತಿ ಸೌಲಭ್ಯದ ಕೊರತೆಯಿಂದ



ದಲಿತರಲ್ಲಿಯೇ ಹುಟ್ಟಿದ ಸ್ಪರ್ಧಾತ್ಮಕತೆ, ಬೌದ್ಧ ಧರ್ಮದ ಮತಾಂತರದಿಂದಲೂ ಸಿಗಲಾರದ ಆರ್ಥಿಕ ಸಬಲತೆಗಳು ದಲಿತರ ಬದುಕಿನಲ್ಲಿ ಹುಟ್ಟುಹಾಕಿದ ಕ್ಷೋಭೆಯಿಂದ ದಿಕ್ಕುತಪ್ಪಿದ ದಲಿತರು ಅಸ್ತಿತ್ವಕ್ಕಾಗಿ ಅನಿವಾರ್ಯವಾಗಿ ಕೋಮುವಾದಿ ಹಿಂಸೆಗೆ ಸಾಧನವಾಗಿ ಬಳಕೆಗೊಳ್ಳುತ್ತಿರುವದನ್ನು ಗುರುತಿಸಿದ್ದಾರೆ. ಆನಂದ ತೇಲ್ತುಂಬ್ಡೆಯವರು ಕೋಮುವಾದಿ ಫ್ಯಾಸಿಸ್ಟರ ನಯವಂಚಕ ರಾಜತಾಂತ್ರಿಕ ವಿಧಾನಗಳಿಗೆ ದಲಿತರು ಬಲಿಯಾಗುತ್ತಿರುವುದನ್ನು ಗುರುತಿಸಿದ್ದಾರೆ. ರಮೇಶ್ ಕಾಂಬ್ಳೆಯವರು ಮಾಯಾವತಿಯ ಹೊಂದಾಣಿಕೆ ತತ್ವರಹಿತ ಭಾರತದ ರಾಜಕಾರಣದಲ್ಲಿ ಅನಿವಾರ್ಯವೆಂದೂ ಅದರಿಂದ ದಲಿತ ಹಿತಾಸಕ್ತಿಯನ್ನು ಕಾಪಾಡಲು ಸಾಧ್ಯವಾಗಿದೆಯೆಂದೂ ಪ್ರತಿಪಾದಿಸುತ್ತಾರೆ. ದಲಿತ ವಿರೋಧಿಯಾದ ಚಿಂತನೆಗೆ ದಲಿತರು ಬಲಿಯಾಗುತ್ತ ಅಲ್ಪಸಂಖ್ಯಾತರ ಹಿಂಸೆಗೆ ತೊಡಗಿರುವುದು ಅಪಾಯಕಾರಿ ಬೆಳವಣಿಗೆಯಾಗಿದೆ. ಕೋಮು ಗಲಭೆಗಳು ನಡೆದಾಗ ಹಿಂಸೆ ಮಾಡುವವರು ಹಾಗೂ ಹಿಂಸೆಗೆ ಬಲಿಯಾಗುವವರು ದಲಿತರು, ಮುಸ್ಲಿಮರು ಹಾಗೂ ಬಡ ಹಿಂದೂಗಳು ಎಂಬ ಸತ್ಯ ಅರಿವಿಗೆ ಬರಬೇಕಾಗಿದೆ.

**೯. ಗುಜರಾತ್ ನರಮೇಧ : ಜನಾಂಗ ಹತ್ಯೆಯ ಯತ್ನ**

''ಆ ದಿವಸ ಕೊಲ್ಲಲ್ಪಟ್ಟವರಲ್ಲಿ ಶೇಕಡ ೯೦ ಜನರು ಮುಸ್ಲಿಮರಾಗಿದ್ದಾರೆ. ಬೊಸ್ನಿಯಾ, ಕಾಂಬೋಡಿಯಾ, ನಾಝಿ ಜರ್ಮನಿಯಂತೆ ನನ್ನ ದೇಶ ಕೂಡ ಆಯಿತು.'' – ದೇಶದ ಅಂದಿನ ಪ್ರಥಮ ಪ್ರಜೆ ರಾಷ್ಟ್ರಪತಿ ಕೆ. ಆರ್. ನಾರಾಯಣನ್ ಅವರು ನೋವಿನಿಂದ ತೆಗೆದ ಈ ಉದ್ಗಾರವು ಗುಜರಾತ್ ನರಮೇಧವನ್ನು ಕುರಿತಾಗಿ ಭಾರತದ ಸಂವೇದನಾಶೀಲ ಮನಸ್ಸುಗಳ ಸಂಕಟದ ಅಭಿವ್ಯಕ್ತಿಯಾಗಿದೆ. ಅಲ್ಲಿ ನಡೆದ ಹಿಂಸೆಯ ವಿಧಾನ ಮತ್ತು ಪ್ರಮಾಣಗಳನ್ನು ಕೇಳಿಸಿಕೊಂಡರೆ ಮನಸ್ಸು ಮರಗಟ್ಟಿಹೋಗುತ್ತದೆ. ಮನುಷ್ಯ ಮಾತ್ರದವರು ಕೇಳಿ ಸಹಿಸಲಸಾಧ್ಯವಾದಂತಹ ಹಿಂಸಾಕಾಂಡವನ್ನು ಭಾರತೀಯ ಸಮಾಜ ಅರಗಿಸಿಕೊಂಡಿತು. ಆರ್. ಬಿ. ಶ್ರೀಕುಮಾರ್ ದಾಖಲಿಸಿದಂತೆ ಗುಜರಾತಿನ ಪುಟ್ಟ ಹುಡುಗಿಯೊಬ್ಬಳು ಮುಸ್ಲಿಮರ ಕಾಲನಿಯಿಂದ ಬೆಂಕಿ ಮತ್ತು ಕಪ್ಪು ಹೊಗೆ ಮೇಲಕ್ಕೇಳುವುದನ್ನು ಕಂಡು, ''ಅಂಕಲ್... ನೋಡಿದಿರಾ, ಅವರೆಲ್ಲ ವಾಸಿಸುತ್ತಿದ್ದ ಸ್ಥಳದಿಂದ ಹೊಗೆ ಮೇಲೇಳುತ್ತಿದೆ. ಎಲ್ಲರೂ ಬೆಂದು ಹೋಗಿರಬಹುದು, ಸತ್ತಿರಬಹುದು'' ಎಂದು ಸಂತಸಪಡುತ್ತಿದ್ದಳಂತೆ. ಮತೀಯ ದ್ವೇಷ ಇಡೀ ಸಮಾಜದ ಆಳದಲ್ಲಿ ಹಿಂಸೆಯನ್ನು ಅಂತರಂಗೀಕರಿಸಿದ ಪರಾಕಾಷ್ಠೆಯನ್ನು ಇದು ಸೂಚಿಸುತ್ತದೆ. ಅವರೇ ದಾಖಲಿಸಿದಂತೆ ''ಹಿಂದೂಗಳಿಗೆ ಸಂಬಂಧಪಟ್ಟಂತೆ ಬಹಳ ದೌರ್ಭಾಗ್ಯಕರವೂ, ವೇದನಾಜನಕವೂ ಆದ ಘಟನೆಗಳು ಸಂಭವಿಸಿವೆ. ಸಾಮಾನ್ಯವಾಗಿ ನೀವು ಪೊಲೀಸರು ಕೋಮು ಗಲಭೆ ಪ್ರಾರಂಭವಾದರೆ ಹಿಂದೂ ಮುಸ್ಲಿಮರೆಲ್ಲರನ್ನೂ ಬಂಧಿಸುತ್ತೀರಿ. ಅದು ಇಲ್ಲಿ ಸಾಧ್ಯವಿಲ್ಲ. ಮೂರು ದಿನಗಳವರೆಗೆ ಇಲ್ಲಿ ಹಿಂದುಗಳ ಪ್ರತೀಕಾರಾಗ್ನಿ ಧಗಧಗಿಸುತ್ತದೆ. ನೀವು ಮಧ್ಯ ಪ್ರವೇಶಿಸಕೂಡದು'' ಎಂದು ರಾಜ್ಯದ ಮುಖ್ಯಮಂತ್ರಿ ಪೊಲೀಸ್ ವ್ಯವಸ್ಥೆಗೆ ನಿರ್ದೇಶನ ನೀಡುತ್ತಾರೆ. ಭಾರತದಲ್ಲಿ ಅಸಂಖ್ಯ ಕೋಮು ಗಲಭೆಗಳು ನಡೆದಿರಬಹುದು. ಆದರೆ ಪ್ರಭುತ್ವವೇ ನೇರವಾಗಿ ನೇತೃತ್ವ ವಹಿಸಿದ ಭೀಕರ ಹತ್ಯಾಕಾಂಡವಿದು. ಸಿಖ್ ಹತ್ಯಾಕಾಂಡದಲ್ಲಿ ಪ್ರಭುತ್ವ ಸಹಕರಿಸಿತ್ತೇ ಹೊರತು ನಾಯಕತ್ವವನ್ನು ವಹಿಸಿರಲಿಲ್ಲ. ಮುಸ್ಲಿಂ ಎಂಬ ಕಾರಣಕ್ಕಾಗಿ ಅಲ್ಲಿ ಒಬ್ಬ ಹಿರಿಯ ಸಂಸತ್ ಸದಸ್ಯನನ್ನೇ ಜೀವಂತವಾಗಿ ಸುಡಲಾಯಿತು. ಗರ್ಭಿಣಿಯ ಹೊಟ್ಟೆಯನ್ನು ಸೀಳಿ ಭ್ರೂಣವನ್ನು ತ್ರಿಶೂಲಕ್ಕೆ ಸಿಕ್ಕಿಸಿ ಉನ್ಮತ್ತವಾಗಿ ಕುಣಿಯಲಾಯಿತು. ಮಕ್ಕಳು, ಮುದುಕರು ಹೆಣ್ಣುಮಕ್ಕಳೆಂದು ಲೆಕ್ಕಿಸದೆ ಅಟ್ಟಿಸಿಕೊಂಡು ಹೋಗಿ ಕೊಚ್ಚಲಾಯಿತು. ಕಾಲನಿ ಕಾಲನಿಗಳ ದಹನ, ಸಾಮೂಹಿಕ ಕೊಲೆ, ಅತ್ಯಾಚಾರ, ಹಿಟ್ಲರ್ ಮುಸ್ಸೋಲಿನಿಯರನ್ನು ನಾಚಿಸುವಂಥ ಸಾಮೂಹಿಕ ಪಾಲುದಾರಿಕೆಯ ಹಿಂಸಾಕಾಂಡವಿದು. ''ಗುಜರಾತ್‌ನಲ್ಲಿ ಮುಸ್ಲಿಮರ ಮೇಲೆ ಅವರ ನೆರೆ ಹೊರೆಯ ಹಿಂದುಗಳೇ ದಾಳಿ ನಡೆಸಿದರು. ಮುಸ್ಲಿಂ ಹೆಂಗಸರ ಮೇಲೆ ಅತ್ಯಾಚಾರ ನಡೆಸಲು ತಮ್ಮ ಗಂಡಸರನ್ನು ಹಿಂದು ಹೆಂಗಸರೇ ಪ್ರೋತ್ಸಾಹಿಸಿದರು. ಶಾಲೆಗೆ ಹೋಗುವ ಪ್ರಾಯದ ಮಕ್ಕಳೂ ಬಡಿಗೆಗಳನ್ನು ಹಿಡಿದುಕೊಂಡು ರಸ್ತೆಗಳಲ್ಲಿ ಠಳಾಯಿಸಿದರು.'' ಶ್ರೀಕುಮಾರ್ ಭಾರತ ಕಂಡ ಹಿಂಸೆಯ ಸಮುದಾಯೀಕರಣದ ಕಟ್ಟಕಡೆಯ ಸ್ಥಿತಿ ಇದು. ಈ ಹಿಂಸೆ ಒಮ್ಮಿಂದೊಮ್ಮೆಲೇ ಹುಟ್ಟಿದ್ದಲ್ಲ. ಗುಜರಾತಿಗೆ ಕೋಮು ಹಿಂಸೆಯ ದೊಡ್ಡ ಚರಿತ್ರೆಯೇ ಇದೆ. ಅಡ್ವಾನಿಯವರ ರಥಯಾತ್ರೆಯು ಆರಂಭವಾದದ್ದು ಗುಜರಾತಿನಲ್ಲಿಯೇ. ನರೇಂದ್ರ ಮೋದಿ ಮುಖ್ಯಮಂತ್ರಿಯಾದ ತಕ್ಷಣ ಶಿಕ್ಷಣ ಕ್ಷೇತ್ರವನ್ನು ಕೋಮುವಾದೀಕರಿಸಿದ್ದರು. ಇಡೀ ಆಡಳಿತ ವ್ಯವಸ್ಥೆಯನ್ನೇ ಹಿಂದುತ್ವದಲ್ಲಿ ಬಂಧಿಸಲು ಯತ್ನಿಸಿದ್ದರು. ಗುಜರಾತಿನ ಹಿಂದುಗಳು ಇಂಥ ಹಿಂಸೆಗೆ ಮಾನಸಿಕವಾಗಿ ಸಿದ್ಧರಾಗಿದ್ದರು.

೨೦೦೨ ಫೆಬ್ರುವರಿ, ೨೭ರಂದು ಗೋಧ್ರಾದಲ್ಲಿ ಸಬರ್ಮತಿ ಎಕ್ಸ್‌ಪ್ರೆಸ್ ರೈಲಿಗೆ ಬೆಂಕಿ ಬಿದ್ದು ೫೮ ಮಂದಿ ರಾಮಭಕ್ತರು ಸುಟ್ಟುಹೋದ ಅಮಾನವೀಯ ದುರಂತ ಈ ಹಿಂಸೆಗೆ ಕಾರಣವೆಂದು ನಂಬಿಸಲಾಗುತ್ತಿದೆ. ಬೆಂಕಿ ಕೊಟ್ಟವರಾರೆಂದು ತನಿಖೆಯ ಮೂಲಕ ತಿಳಿಯುವ ಮೊದಲೇ ಅವರು ಮುಸ್ಲಿಮರೇ ಎಂದು ತೀರ್ಮಾನಿಸಿ ಹಿಂಸೆಯನ್ನು ಆರಂಭಿಸಿಬಿಡುವ ವಿಧಾನದಲ್ಲಿ ದೇಶದ ಕಾನೂನನ್ನು ಗಾಳಿಗೆ ತೂರಲಾಯಿತು.

ಹಲವು ತಿಂಗಳಿನಿಂದ ಹಿಂಸೆಗೆ ವ್ಯವಸ್ಥಿತ ತಯಾರಿ ನಡೆಸಿದ ವರದಿಗಳು ನಂತರ ಪ್ರಕಟವಾದವು. ಆಗಿನ ರಕ್ಷಣಾ ಸಚಿವ ಜಾರ್ಜ್ ಫರ್ನಾಂಡಿಸ್ ಈ ಮಾದರಿಯ ಹಿಂಸೆ ಇದೇ ಮೊದಲಲ್ಲವೆಂದು ಸಮರ್ಥಿಸಿದ್ದಂತೂ ಹಿಂಸೆಗಳನ್ನು ಅರಗಿಸಿಕೊಳ್ಳುವ ಪ್ರಭುತ್ವದ ಕ್ರೌರ್ಯವನ್ನು ಸೂಚಿಸುತ್ತದೆ. ಜಾಗತಿಕ ಬಂಡವಾಳಶಾಹಿ ಪ್ರವೇಶವಾಗಿ ಒಂದು ದಶಕದ ಅವಧಿಯಲ್ಲಿ ಭಾರತದ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಬದುಕಿನಲ್ಲಾದ ಋಣಾತ್ಮಕ ಪರಿಣಾಮಗಳಿಂದ ಜನಸಮುದಾಯ ಹೋರಾಟಗಳನ್ನು ಸಂಘಟಿಸದಂತೆ ತಡೆಯಲು ಅದರ ಮನಸ್ಸನ್ನು ಬೇರೆಡೆಗೆ ಸೆಳೆಯಲು ಗುಜರಾತ್ ಹತ್ಯಾಕಾಂಡ ಒಂದು ಕಾರಣವಾಯಿತು.

**ಡಾ॥ ಎಂ. ಡಿ. ಒಕ್ಕುಂದ**
'ನೆಮ್ಮದಿ', ಸಂಖ್ಯೆ. ೧೨೪, ಸಿ.ಐ.ಟಿ.ಬಿ. ಕಾಲನಿ
ಶ್ರೀನಗರ, ಧಾರವಾಡ - ೫೮೦ ೦೦೩

ಮೂಲ : ಸತ್ಯಜಿತ್ ರಾಯ್    ಕನ್ನಡಕ್ಕೆ : ಸಾಕ್ಷಿ

# ಲೋಡ್ ಶೆಡ್ಡಿಂಗ್



**ಇದು ಸತ್ಯಜಿತ್ ರಾಯ್ ಬರೆದ ಕತೆ. ಆಶ್ಚರ್ಯವೋ, ಆಕಸ್ಮಿಕವೋ, ಅನಾಹುತವೋ ಈ ಅನುಭವ ಎಂಬುದನ್ನು ಓದುಗರು ಕಂಡುಕೊಳ್ಳಬಹುದು.**

ಇನ್ನೇನು ಬಸ್ ನಿಲ್ದಾಣ ತಲುಪಬೇಕೆನ್ನುವಷ್ಟರಲ್ಲಿ, ತನ್ನೊಂದಿಗೆ ಆ ಇಡೀ ಪ್ರದೇಶವೂ ಕತ್ತಲ ಸಮುದ್ರದಲ್ಲಿ ಮುಳುಗಿಹೋಗಿರುವುದು ಫೋನಿ ಬಾಬುವಿನ ಅನುಭವಕ್ಕೆ ಬಂದಿತು. ಮತ್ತೊಂದು ಪವರ್ ಕಟ್. ಇನ್ನಷ್ಟು ಲೋಡ್ ಶೆಡ್ಡಿಂಗ್‌ಗಳು. ಇಂದು, ಅವನು 'ಓವರ್ ಟೈಮ್' ಮಾಡಿದ್ದಕ್ಕೋ ಏನೋ, ಸಂಜೆ ಕಚೇರಿ ಬಿಡುವಷ್ಟರಲ್ಲಿ, ಘಂಟೆ ಎಂಟೂ ಕಾಲಾಗಿತ್ತು. ಅವನು ಕೆಲಸ ಮಾಡುವ ಡಾಲ್‌ಹೌಸಿ ಚೌಕದಿಂದ ವಾಸಿಸುವ ಸ್ಥಳಕ್ಕೆ ಬರಲು ಮತ್ತೆ ಮೂವತ್ತೈದು ನಿಮಿಷ. ಪವರ್ ಕಟ್ ಎಷ್ಟು ಹೊತ್ತಿನಿಂದ ಶುರುವಾಗಿತ್ತು ಎಂದು ನಿಖರವಾಗಿ ಹೇಳಲಾಗದಿದ್ದರೂ, ಸುಮಾರು ನಾಲ್ಕೈದು ಘಂಟೆಗಳ ನಂತರ ವಿದ್ಯುತ್ ಪೂರೈಕೆಯ ವ್ಯವಸ್ಥೆ ಯಥಾಸ್ಥಿತಿಗೆ ಮರಳುತ್ತದೆ ಎಂದು ಕಲ್ಕತ್ತಾದ ಬಾಬುಗಳಿಗೆಲ್ಲಾ ಖಚಿತವಾಗಿ ಗೊತ್ತಿತ್ತು.

ಫೋನಿ ಬಾಬು ಬಸ್ಸಿನಿಂದಿಳಿದು, ತಾನು ವಾಸಿಸುವ ಗಲ್ಲಿಯೆಡೆಗೆ ಕಾಲು ಹಾಕಿದ. ಎಲ್ಲಿಯೂ ಒಂದು ಮಿಣುಕು ದೀಪವೂ ಇದ್ದಂತೆ ಕಾಣಲಿಲ್ಲ. ನಮ್ಮ ಫೋನಿ ಬಾಬುವಿನ ಮೇಲೆ ಕೊಂಚ ಕಟಕಿಯಾಡಬೇಕಾದರೆ, ನಿನ್ನೆ ಅವನು ಮಾಡಿದ ಕೆಲಸ ಅದ್ಭುತವಾಗಿತ್ತು. ಹಿಂದಿನ ದಿನವೇ ಅವನ ಸಹಾಯಕ ನಬೀನ್, ''ಇಂದು ಒಂದಷ್ಟು ಮೊಂಬತ್ತಿ ತಂದಿಡಲೇ?'' ಎಂದು ವಿಚಾರಿಸಿದ್ದ. ಅದಕ್ಕೆ ಈ ಬಾಬು ''ಬೇಡ ಮಾರಾಯ! ನೀನು ಮೊಂಬತ್ತಿ ತಂದ ಮರುಕ್ಷಣದಿಂದಲೇ, ಪವರ್ ಕಟ್‌ನ ಉಪಟಳ ಆರಂಭವಾಗುತ್ತದೆ. ಸದ್ಯಕ್ಕೆ ಮೊಂಬತ್ತಿ ತರುವುದು ಬೇಡವೇ ಬೇಡ'' ಎಂದುಬಿಟ್ಟ.

ಅಂದರೆ ಈಗ ಮನೆಯಲ್ಲಿ ಒಂದೇ ಒಂದು ಮೊಂಬತ್ತಿಯೂ ಇಲ್ಲ. ಒಳ್ಳೆಯದಾಯ್ತು! ಮನೆ ಎರಡನೆ ಮಹಡಿಯಲ್ಲಿದ್ದ ಕಾರಣ, ಕೆಲವೊಮ್ಮೆ ಬೀದಿ ದೀಪದ ಸಹಾಯದಿಂದಲೂ ಒಳಗಡೆ ಓಡಾಡಬಹುದಿತ್ತು. ಆದರೆ ಇಂದು ಬೀದಿ ದೀಪಕ್ಕೂ ಪವರ್ ಕಟ್‌ನ ಭೂತ ಹಿಡಿದು, ಎಲ್ಲೆಲ್ಲೂ ಬರೀ ಗಾಢಾಂಧಕಾರ. ಧೂಮಪಾನದ ದುಶ್ಚಟವಿರದ ಕಾರಣ, ಫೋನಿ ಬಾಬು ಬೆಂಕಿಪೊಟ್ಟಣವನ್ನು ಹೊತ್ತು ತಿರುಗುವ ಗೋಜಿಗೆ ಹೋಗುತ್ತಿರಲಿಲ್ಲ. ಒಮ್ಮೊಮ್ಮೆ 'ಒಂದು ಟಾರ್ಚನ್ನಾದರೂ ಕೊಳ್ಳೋಣ' ಎಂಬ ಯೋಚನೆ ಸುಳಿದಿತ್ತಾದರೂ ಅದನ್ನು ಕಾರ್ಯರೂಪಕ್ಕಿಳಿಸಲು ಅವನಿಗೆ ಅವಕಾಶವೇ ಸಿಕ್ಕಿರಲಿಲ್ಲ.

ಆ ದಾರಿಯಲ್ಲಿನ ಮೂರು ನಿಮಿಷದ ನಡಿಗೆ ಅವನನ್ನು ಅವನ ಮನೆ ನಂ. ೧೭/೨ರ ಬಳಿ ತಂದುಬಿಟ್ಟಿತು. ಗೇಟಿನ ಬಳಿ ಸದಾ ಹೊಟ್ಟೆ ತುಂಬಿ ನಿದ್ದೆ ಹೊಡೆಯುತ್ತಿದ್ದ ಮೂರು ನಾಯಿಮರಿಗಳನ್ನು ತುಳಿಯದಂತೆ ಎಚ್ಚರ ವಹಿಸುತ್ತಾ ಒಳಹೊಕ್ಕನು.

ಅವನು ಮತ್ತು ಸಹಾಯಕ ನಬೀನ್ ಈ ವಸತಿ ಸಮುಚ್ಚಯಕ್ಕೆ ಬಂದು ಸುಮಾರು ಒಂದು ತಿಂಗಳಾಗಿತ್ತಷ್ಟೆ. ಪ್ರತಿ ಮಹಡಿಗೂ ಎರಡೆರಡು ಮನೆಗಳಿದ್ದವು. ಮೆಟ್ಟಿಲುಗಳ ಬಳಿ ಸಾರುತ್ತಿದ್ದಂತೆ, ಕೆಳ ಮಹಡಿಯಲ್ಲಿ ವಾಸವಾಗಿದ್ದ, ಧ್ಯಾನದತ್ತನ ಮನೆಯ ಕಿಟಕಿಯಿಂದ ತೂರಿಬಂದ ಮೊಂಬತ್ತಿಯ ಕ್ಷೀಣ ಬೆಳಕು ಅಂಗಳದ ಮೇಲೂ ಹರಡಲು ಯತ್ನಿಸುತ್ತಿದ್ದುದನ್ನು ಫೋನಿ ಬಾಬು ಗಮನಿಸಿದ. ಅಲ್ಲೇ ಇದ್ದ ಇನ್ನೊಂದು ಮನೆ ಕತ್ತಲೆಯ ಕೂಪದಲ್ಲಿತ್ತು. ಸುತ್ತಮುತ್ತಲೂ ಯಾರೂ ಇದ್ದಂತೆ ಕಾಣಲಿಲ್ಲ. ದುರ್ಗಾಪೂಜೆಗೆ ಇನ್ನೆರಡೇ ದಿನಗಳು ಉಳಿದಿದ್ದವು. ಆ ಮನೆಯ ವಾರಸುದಾರ, ರಾಮನಾಥ್ ಬಾಬು, ಈಗಾಗಲೆ ಮಾಧೋಪುರ್ ಅಥವಾ ಘಾಟ್‌ಶೀಲಕ್ಕೆ ರಜೆ ಕಳೆಯಲು ಹೋಗಿರಬಹುದು.

ಮೆಟ್ಟಿಲೇರುವ ಮುನ್ನ, ಫೋನಿ ಬಾಬು ''ನಬೀನ್'' ಎಂದು ಅರಚಿದ. ಊಹುಂ, ಯಾವುದೇ ಉತ್ತರವಿಲ್ಲ. ನಬೀನ್ ಮನೆಯಲ್ಲಿಲ್ಲ ಎನ್ನುವುದಂತೂ ಸ್ಪಷ್ಟವಾಯ್ತು. ಪವರ್ ಕಟ್ ಶುರುವಾದ ತಕ್ಷಣ ಮನೆಯಿಂದ ಹೊರಬೀಳುವುದು ಅವನಿಗೊಂದು ಚಾಳಿಯಾಗಿತ್ತು.

ಉತ್ತರಿಸದ ನಬೀನ್‌ಗಾಗಿ ಕಾಯದೆ, ಫೋನಿ ಬಾಬು ಮೆಟ್ಟಿಲು ಹತ್ತಲಾರಂಭಿಸಿದ. ದತ್ತನ ಮೊಂಬತ್ತಿಯ ಬೆಳಕಲ್ಲಿ ಕೆಲವು ಮೆಟ್ಟಿಲುಗಳು ಕಂಡರೂ, ನಂತರ ದಟ್ಟ ಕತ್ತಲೆ ಆವರಿಸಿತು. ಇದರಿಂದಾಗಿ ಅವನಿಗೇನು ಜಾಸ್ತಿ ವ್ಯತ್ಯಾಸವಾಗಲಿಲ್ಲ. ತಾನು ಹತ್ತಬೇಕಾಗಿರುವ ಮೆಟ್ಟಿಲುಗಳ ಸಂಖ್ಯೆ ಎಪ್ಪತ್ತೆರಡು ಎಂದು ಅವನಿಗೆ ಚೆನ್ನಾಗಿ ಗೊತ್ತಿತ್ತು. ಮುಂದೆಂದಾದರೂ ಉಪಯೋಗಕ್ಕೆ ಬರಬಹುದೆಂದು ಒಂದು ದಿನ ಮೆಟ್ಟಿಲುಗಳ ಗಣತಿ ಮಾಡಿದ್ದು ನೆನಪಿತ್ತು.

ಬೆಳಕಿದ್ದಾಗ ತಾನು ಅದೆಷ್ಟು ಬೇಗ ಮೆಟ್ಟಿಲು ಹತ್ತಬಲ್ಲೆ ಎಂಬುದೇ ಬಾಬುಗೆ ಆಶ್ಚರ್ಯಕರವಾಗಿ ಕಂಡಿತು. ಆ ಕಡು ಕತ್ತಲಲ್ಲಿ ಮಹಡಿಗಳ ಕಟಾಂಜನಕ್ಕಿಂತ ಭಿನ್ನವಾದ ಏನೋ ಮೆತ್ತಗಿನದರ ಮೇಲೆ ಫೋನಿ ಬಾಬು ಕೈಯಿಟ್ಟನು... ಹೃದಯವೇ ಬಾಯಿಗೆ ಬಂದಂತಾಯಿತು. ಮತ್ತೊಮ್ಮೆ ಧೈರ್ಯಮಾಡಿ ಅಲ್ಲೇ ಕೈಯಿಟ್ಟಾಗ, ಅದು ಯಾರೋ ನಿರ್ಲಕ್ಷ್ಯದಿಂದ ಎಸೆದು ಹೋಗಿದ್ದ ಟವೆಲ್ ಎಂದು ತಿಳಿಯಲು ಹೆಚ್ಚು ಹೊತ್ತಾಗಲಿಲ್ಲ.

ಮೊದಲನೆಯ ಮಹಡಿಯೂ ಕತ್ತಲೆಯಲ್ಲೇ ಮುಳುಗಿದ್ದ ಕಾರಣ, ಅಲ್ಲಿನ ಎರಡೂ ಮನೆಯವರೂ ಹೊರಗೆಲ್ಲೋ ಹೋಗಿರಬೇಕು. ಅದರ ಒಂದು ಮನೆಯಲ್ಲಿ ಬಿಜನ್ ಬಾಬು ತನ್ನ ಹೆಂಡತಿ ಮಕ್ಕಳೊಡನೆ ವಾಸವಾಗಿದ್ದನು. ಅವನ ಚಿಕ್ಕ ಮಗ ತಕ್ಕಮಟ್ಟಿಗೆ ವಾಚಾಳಿ ಮತ್ತು ವಿಪರೀತ ತುಂಟ.

ಅದರ ಎದುರು ಮನೆ, ಕಾಲೇಜ್ ಸ್ಟ್ರೀಟ್‌ನಲ್ಲಿ ಚಪ್ಪಲಿ ಅಂಗಡಿ ಹೊಂದಿದ್ದ ಮಹದೇವ ಮಂಡಲನದ್ದಾಗಿತ್ತು. ಬಹುಶಃ ಆತ ಗೆಳೆಯರೊಡನೆ ಇಸ್ಪೀಟಾಡಲು ತೆರಳಿದ್ದನೋ ಏನೋ. ಬಿಜನ್ ಬಾಬು ಎಂದಿನಂತೆ ಮನೆ ಮಂದಿಯೊಂದಿಗೆ ಹಿಂದಿ ಸಿನಿಮಾ ನೋಡಲು ಹೋಗಿರಬೇಕು.

ಫೋನಿ ಬಾಬು ಮೆಟ್ಟಿಲು ಹತ್ತುತ್ತಲೇ ಇದ್ದ. ಅರವತ್ತನೇ ಮೆಟ್ಟಿಲ ಬಳಿ ಬಂದು ಬಲಗಡೆ ತಿರುಗಿದಾಗ, ಯಾವುದೋ ತಗಡಿನ ಪಾತ್ರೆಗೆ ಕಾಲು ತಾಗಿ ಅದು ಎಬ್ಬಿಸಿದ ಗಲಭೆಯಿಂದ ಸುಧಾರಿಸಿ ಕೊಳ್ಳಲು ಅವನಿಗೆ ಸುಮಾರಷ್ಟು ಸಮಯವೇ ಹಿಡಿಯಿತು. ಇನ್ನು ಉಳಿದ ಹನ್ನೆರಡು ಮೆಟ್ಟಿಲುಗಳನ್ನು ಬಹಳವೇ ಎಚ್ಚರದಿಂದ ಹತ್ತಬೇಕಿತ್ತು.

ಇದೀಗ ಅವನು ಎಡಗಡೆ ತಿರುಗ ಬೇಕಿತ್ತು. ಮಹಡಿ ಮೆಟ್ಟಿಲು ಮುಗಿದಲ್ಲಿ ಸದಾ ಒಂದು ಖಾಲಿ ಪಂಜರ ತೂಗು ಬಿದ್ದಿರುತ್ತಿತ್ತು. ಯಾವುದೋ ಕಾಲದಲ್ಲಿ ಅದರಲ್ಲೊಂದು ಮೈನಾವನ್ನು ಕೂಡಿಟ್ಟಿದ್ದರು. ಫೋನಿ ಬಾಬು, ಆ ಪಂಜರವನ್ನು ತೆಗೆಯುವಂತೆ ನೆರೆಯಾತ ನರೇಶ್ ಬಿಸ್ವಾಸನನ್ನು ಕೇಳಿದ್ದನು. ಮೈನಾ ಸತ್ತ ನಂತರವೂ ಆ ಪಂಜರವನ್ನು ತೂಗು ಹಾಕುವುದರಲ್ಲಿ ಯಾವುದೇ ಅರ್ಥವಿರಲಿಲ್ಲ. ಆದರೆ ಈ ವಿಷಯದ ಕಡೆ ನರೇಶ್ ಬಾಬು ಕೊಂಚವೂ ಗಮನಹರಿಸಿರಲಿಲ್ಲ.

ಪಂಜರದಿಂದ ಹೊಡೆಸಿಕೊಳ್ಳುವುದನ್ನು ತಪ್ಪಿಸಿಕೊಳ್ಳಲು, ಬೆನ್ನು ಬಾಗಿಸಿ, ಫೋನಿ ಬಾಬು, ತನ್ನ ಮನೆ ಕಡೆ ದೌಡಾಯಿಸಿದ.



ಎಲ್ಲಿಂದಲೋ (ಬಹುಶಃ ಹತ್ತಿರದಲ್ಲೇ ಎಲ್ಲೋ) ಟ್ಯಾಗೋರರ ಹಾಡಿನ ಎಳೆ ತೇಲಿ ಬಂತು. ಪಕ್ಕದ ಮನೆಯ ಟ್ರಾನ್ಸಿಸ್ಟರ್‌ನಿಂದ ಇರಬಹುದು. ಫೋನಿ ಬಾಬುವಿಗೆ ದೆವ್ವಗಳ ಭಯವಿರದಿದ್ದರೂ ಎಲ್ಲವನ್ನೂ ನುಂಗಿ ಹಾಕುವಂತಿದ್ದ ಕತ್ತಲೆ ಮತ್ತು ಹೆದರಿಕೆ ಹುಟ್ಟಿಸುವಂತಿದ್ದ ಮೌನಗಳ ಮಧ್ಯೆ ಟ್ಯಾಗೋರರ ಹಾಡು ಕೊಂಚ ಧೈರ್ಯ ತಂದಿತು.

ಬಾಗಿಲ ಬಳಿ ಸಾರಿದಾಗ, ಅವನ ಕೈಗಳು ಯಾಂತ್ರಿಕವಾಗಿ ಕಿಸೆಯಲ್ಲಿ ಬೀಗಕ್ಕಾಗಿ ತಡಕಾಡಿದವು. ಅವನ ಬಳಿ ಎರಡು ಜೊತೆ ಬೀಗದ ಗೊಂಚಲುಗಳಿದ್ದವು. ಸಾಧಾರಣವಾಗಿ, ಒಂದು ಜೊತೆ ನಬೀನ್‌ನೊಂದಿಗಿರುತ್ತಿತ್ತು. ಇನ್ನು ಕತ್ತಲಲ್ಲಿ ಚಿಲಕ ಹುಡುಕುವುದು ಕಷ್ಟವೇನಲ್ಲ. ಆದರೆ ಫೋನಿ ಬಾಬು ಆಚ್ಚರಿಪಡುವಂತೆ, ಅಲ್ಲಿ ಚಿಲಕವೇ ಇರಲಿಲ್ಲ! ಮನೆ ಬಿಡುವ ಮುಂಚೆ, ಚಿಲಕ ಹಾಕಿ, ಭದ್ರವಿದೆಯೇ ಎಂದು ಗಮನಿಸಿ ಬೀಗದ ಗೊಂಚಲನ್ನು ಕಿಸೆಯಲ್ಲಿರಿಸಿದ್ದು ಚೆನ್ನಾಗಿ ನೆನಪಿದ್ದ ಕಾರಣ, ಇದೊಂದು ವಿಲಕ್ಷಣ ಘಟನೆ ಎನಿಸಿತು. ನಬೀನ್‌ನ ಬೇಜವಾಬ್ದಾರಿತನ ಇದಕ್ಕೆ ಕಾರಣವಿರಬಹುದೆ? ಇಲ್ಲ, ಅವನೇನಾದರೂ ಒಳಗಿನಿಂದಲೇ ಚಿಲಕ ಹಾಕಿ ನಿದ್ದೆ ಹೋಗಿದ್ದಾನೋ?

ತಟ್ಟಲು ಯತ್ನಿಸಿದಾಗ ತಾನಾಗೇ ತೆರೆದುಕೊಂಡ ಬಾಗಿಲನ್ನು ಮೂರ್ಖನಂತೆ ದಿಟ್ಟಿಸುತ್ತಿದ್ದ ಫೋನಿ ಬಾಬು ''ನಬೀನ್'' ಎಂದು ಚೀರಿದ.

ಮತ್ತೂ ಉತ್ತರವಿಲ್ಲ. ಖಂಡಿತವಾಗಿ ನಬೀನ್ ಹೀಗೆ ಕತ್ತಲಲ್ಲೇ ಇಷ್ಟು ಹೊತ್ತೂ ಮಲಗಿರಲಾರನಲ್ಲವೇ?

ಹೊಸ್ತಿಲನ್ನು ದಾಟಿ, ಫೋನಿ ಬಾಬು ತನ್ನ ವಾಸದ ಕೊಠಡಿಯನ್ನು ಪ್ರವೇಶಿಸಿದ. ಆದರೆ ಆ ಕತ್ತಲಲ್ಲಿ ಬಾಗಿಲಾಚೆಗೆ ಏನಿದೆ ಎಂಬುದನ್ನು ಕೇವಲ ಊಹೆಯ ಮೇಲೆ ಹೇಳಬೇಕಾಗಿದ್ದ ಕಾರಣ, ಯಾರು ಎಲ್ಲಿದ್ದರೂ ಅದರಲ್ಲೇನು ಹೆಚ್ಚು ವ್ಯತ್ಯಾಸವಿರಲಿಲ್ಲ. ಫೋನಿ ಬಾಬು ಒಮ್ಮೆ ಕಣ್ಣುಮುಚ್ಚಿ ತೆರೆದ. ಇದರಲ್ಲೂ ಯಾವುದೇ ವ್ಯತ್ಯಾಸವಿರಲಿಲ್ಲ. ಇದೀಗ ಅವನು ಕಣ್ಣುಮುಚ್ಚಿಕೊಂಡು ಏನು ಬೇಕಾದರೂ ಮಾಡಬಹುದಿತ್ತು. ಸರ್ವವ್ಯಾಪಿಯಾಗಿದ್ದ ಕತ್ತಲೆ, ಯಾರಾದರೂ ವ್ಯರ್ಥವಾಗಿ ತಳ್ಳಬಯಸುವ ಮಹಾ ಭಿತ್ತಿಯಂತೆ ಕಂಡಿತು.

ಎಡಗಡೆಯ ಗೋಡೆಯಲ್ಲೊಂದು ಸ್ವಿಚ್ ಬೋರ್ಡಿತ್ತು. ಇದರ ಹಿಂದೆ, ಪಕ್ಕದ ಕೋಣೆಗೆ ಹೋಗುವ ಬಾಗಿಲು ಮತ್ತು ಬಳಿಯೇ ಬಟ್ಟೆ ಇಡುವ ಕಪಾಟು ನಿಂತಿತ್ತು. ಫೋನಿ ಬಾಬು ಬಳಿ ಹಳೆಕಾಲದ ಒಂದು ಕೊಡೆಯೂ ಇತ್ತು. ಸಾಮಾನ್ಯವಾಗಿ ಇದನ್ನು ಕಪಾಟಿನ ಮೊಳೆಗೆ ಸಿಕ್ಕಿಸಿಡುತ್ತಿದ್ದ. ಬಹುಶಃ ಭಯ, ನಿಗೂಢತೆಯಿಂದ ಮೈ ಬಿಸಿಯಾದಂತೆನಿಸಿ, ತನ್ನ ಶರ್ಟನ್ನೂ ಬಿಚ್ಚಿ ಅಲ್ಲಿ ಸಿಕ್ಕಿಸಬೇಕಾಗಿತ್ತು. ಎಲ್ಲದಕ್ಕಿಂತ ಮುಖ್ಯವಾಗಿ ದುಡ್ಡಿರುವ ಕೈಚೀಲವನ್ನು ಕಿಸೆಯಿಂದ ತೆಗೆದು ಕಪಾಟಿನ ಎಡಗಡೆ ಇರುವ ಮೇಜಿನ ಡ್ರಾಯರ್‌ನೊಳಗಿಟ್ಟು ಬಿಟ್ಟರೆ ಕೊಂಚ ನಿರಾಳವಾಗುತ್ತದೆ.

ಫೋನಿ ಬಾಬು ಸ್ವಿಚ್ ಬೋರ್ಡ್ ಬಳಿ ಹೋದ. ಈಗ ಸ್ವಿಚ್ ಹಾಕಿಯೂ ಏನೂ ಪ್ರಯೋಜನವಿಲ್ಲದಿದ್ದರೂ ಕರೆಂಟ್ ಬಂದಾಗ ಯಾವುದೇ ಸದ್ದಿಲ್ಲದೆ ಇಡೀ ಮನೆ ಬೆಳಗುವ ದೃಶ್ಯ ಫೋನಿ ಬಾಬುಗೆ ಸಂತೋಷ ನೀಡುತ್ತಿತ್ತು.

ಆ ಬೋರ್ಡಿನಲ್ಲಿ ಎರಡು ಸ್ವಿಚ್‌ಗಳು ಸಡಿಲವಾಗಿದ್ದವು. ಅದೊಂದು ದಿನ, ವಿದ್ಯುತ್ ಕಡಿತವಿದ್ದರೂ, ಸ್ವಿಚ್‌ಗಾಗಿ ತಡಕಾಡುತ್ತಿದ್ದ ನಬೀನ್ ಅದರಿಂದ ಶಾಕ್ ಹೊಡೆಸಿಕೊಂಡಿದ್ದ. ನಾಜೂಕಾಗಿ ಈ ಸ್ವಿಚ್‌ಅನ್ನು ದಾಟಿ, ಫೋನಿ ಬಾಬುವಿನ ಬೆರಳುಗಳು ಎರಡನೆಯದನ್ನು ಒತ್ತಿದವು. ಅದರ 'ಟಕ್' ಎನ್ನುವ ಶಬ್ದ ಇಂದೇಕೋ ಅವನಿಗೆ ಹಿತಕರವಾಗಿ ತೋರಿದವು.

ಸ್ವಿಚ್ ಬೋರ್ಡನ್ನು ದಾಟಿ, ಅವನು ಪಕ್ಕದ ರೂಮಿಗೆ ನಡೆದ. ಕಪಾಟು ಅಲ್ಲೇ ಗೋಡೆಯಲ್ಲಿ ಇವನೆತ್ತರದಲ್ಲೇ ಇತ್ತು...

ಛೇ! ಇದೇನಾಯಿತು? ತಡಕಾಡುತ್ತಿದ್ದ ಅವನ ಕೈಗಳಿಗೆ ಯಾವ ಕಪಾಟೂ ಸಿಗಲಿಲ್ಲ. ಕೈಗೆ ಸಿಕ್ಕಿದ್ದು ಬೇರೇನೋ. ಆದರೆ ಕೊಂಚ ಅಚಾತುರ್ಯದಿಂದ ಅವನ ಕೈತಾಗಿ ಆ ವಸ್ತು ಕೆಳಗೆ ಬಿದ್ದು ಪುಡಿಪುಡಿಯಾಯಿತು. ಯಾವ ಚಿತ್ರಪಟ? ಅಥವಾ ಅದೇನು? ಕನ್ನಡಿಯ ಚೂರುಗಳು ಅವನ ಪಾದಗಳ ಸುತ್ತ ಬಿದ್ದಿದ್ದವು. ಚಪ್ಪಲಿ ಹಾಕಿಕೊಂಡಿದ್ದ ಕಾರಣ ಅವನೇನೂ ಚಿಂತಿಸಬೇಕಾಗಿರಲಿಲ್ಲ. ಆದರೆ ಅವನ ಕಪಾಟಿಗೇನಾಯ್ತೋ ತಿಳಿಯಲಿಲ್ಲ. ಅಲ್ಲೇ ನಿಂತು ಯಾವುದು ಎಲ್ಲಿತ್ತು ಎಂದು ಒಂದು ಚಿತ್ರಣ ತಂದುಕೊಳ್ಳಲು ಪ್ರಯತ್ನಿಸಿದ. ಅವನ ಕೋಣೆಯಲ್ಲಿ ಪರಮಹಂಸರ ಪಟವೊಂದಿತ್ತು. ಆದರೆ ಅದಿದ್ದದ್ದು ಕಪಾಟಿನ ಎದುರಿನ ಗೋಡೆಯಲ್ಲಿ. ಅವನ ಕನ್ನಡಿ ಸದಾ ಮೇಜಿನ ಮೇಲಿರುತ್ತಿತ್ತು.

ತನ್ನ ಎಂದಿನ ಅಭ್ಯಾಸದಂತೆ ನಬೀನ್ ಮತ್ತೆ ಸಾಮಾನುಗಳ ಸ್ಥಾನ ಪಲ್ಲಟಿಸಿರಬೇಕು. ಫೋನಿ ಬಾಬುಗೆ, ಸದಾ ತನ್ನ ಚಪ್ಪಲಿಗಳನ್ನು ಮೇಜಿನಡಿ ಇಡುತ್ತಿದ್ದರೂ, ಪ್ರತಿಬಾರಿ ಅವುಗಳನ್ನು ಅಲ್ಲಿಂದ ತೆಗೆದು ಭೂಗತಗೊಳಿಸುತ್ತಿದ್ದ ನಬೀನ್‌ನನ್ನು ತರಾಟೆಗೆ ತೆಗೆದುಕೊಳ್ಳುವುದು ದಿನನಿತ್ಯದ ಕಾರ್ಯವೇ ಆಗಿತ್ತು.

ಗೊಂದಲಕ್ಕೊಳಗಾದವನಂತೆ ಫೋನಿ ಬಾಬು ತನ್ನ ಕೊಡೆಯನ್ನು ನೆಲದ ಮೇಲೆ ಗೋಡೆಗೊರಗಿಸಿಟ್ಟ. ತನ್ನ ಹಣದ ಚೀಲವನ್ನು ಹಿಡಿದು ಅದೃಶ್ಯವಾಗಿದ್ದ ಮೇಜಿನೆಡೆಗೆ ಸಾಗಿದ. ಮೊದಲೇ ಚೂರಾಗಿದ್ದ ಗಾಜುಗಳು ಇವನ ಕಾಲಡಿ ಸಿಕ್ಕಿ ಹುಡಿಗಟ್ಟಿದವು. ಮೇಜಿನ ಒಂದು ತುದಿ ಸಿಕ್ಕಿದರೆ ಡ್ರಾಯರ್ ಹುಡುಕುವುದು ಸುಲಭವಾಗುತ್ತಿತ್ತು. ಆದರೆ ಈಗ ಮೇಜೇ ಸಿಗುತ್ತಿಲ್ಲವಲ್ಲ! ಮತ್ತೊಂದು ಹೆಜ್ಜೆ ಮುಂದುವರಿದ. ಏನನ್ನೂ ಮಾಡಲೂ ಅಸಾಧ್ಯವಾದ ಕತ್ತಲೆ. ಕಿಟಕಿ ತೆರೆದರಾದರೂ ಅತ್ತಿತ್ತಲ ಬೆಳಕು ಒಳಹರಿದು ಕೊಂಚ ಸಹಾಯವಾಗಬಹುದು.

ಇದೀಗ ಅವನ ಕೈಗಳು ಏನೋ ಘನವಾದುದಕ್ಕೆ ತಾಗಿದವು. ಯಾವುದೋ ಮರದ ಪೀಠೋಪಕರಣ ಇರಬೇಕು. ಆದರೆ ಖಂಡಿತ ಅವನು ಹುಡುಕುತ್ತಿರುವ ಮೇಜಲ್ಲ. ಬೀರುವೇ? ಹೌದು, ಅದೇ. ಒಂದು ಉದ್ದನೆಯ ಕಟ್ ಗ್ಲಾಸ್ ಹಿಡಿಕೆ ಬೇರೆ ಇತ್ತು. ಕೆಲವು ಹಳೆಯ ಕಾಲದ ಬೀರುಗಳಿಗೂ ಇಂಥದ್ದೇ ಹಿಡಿಕೆ ಇತ್ತು. ಫೋನಿ ಬಾಬು ಬಳಿಯೂ ಇಂಥದ್ದೇ ಒಂದು ಹಳೆಯ ಕಾಲದ ಬೀರುವಿತ್ತು. ಆದರೆ ಅದರ ಹಿಡಿಕೆ ಯಾವುದರಿಂದ ಮಾಡಿತ್ತು ಎಂಬುದೇ ಅವನಿಗೆ ನೆನಪಾಗಲಿಲ್ಲ.

ಆದರೆ ಈ ಬೀರುವಿನ ಬಾಗಿಲು ಹಾರುಹೊಡೆದಂತೆ ತೆರೆದಿತ್ತು. ಅವನು ಹಿಡಿಕೆಯಿಂದ ಕೈ ತೆಗೆದಾಗ, ಒಮ್ಮೆ ಮೆಲ್ಲನೆ ಅದರ ಬಾಗಿಲು ಅತ್ತಿಂದಿತ್ತ ತೂರಾಡಿತು. ಇಷ್ಟು ಹೊತ್ತು ನಡೆದ ಘಟನೆಗಳೆಲ್ಲಾ ಒಂದಕ್ಕೊಂದು ತಾಳೆಯಾಗದೆ ಅರ್ಥಹೀನವಾಗಿದ್ದವು. ಅವನೆಂದೂ ಬೀರುವಿಗೆ ಬೀಗ ಹಾಕದೇ ಇದ್ದವನಲ್ಲ. ಅವನ ಬಳಿ ಹೇಳಿಕೊಳ್ಳುವಷ್ಟು ಅಮೂಲ್ಯವಾದದ್ದು ಏನೂ ಇರದಿದ್ದರೂ, ಅದರಲ್ಲವನ ಬಟ್ಟೆ ಬರೆ, ಕೆಲವು ಹಳೆಯ ದಾಖಲೆ ಮತ್ತು ಚೂರುಪಾರು ಹಣವೆಲ್ಲಾ ಇದ್ದವು. ಅವನೇನು ಬೀರುವನ್ನು ಮುಚ್ಚಲು ಮರೆತಿದ್ದನೆ? ಹಾಗಾದರೆ ತನ್ನ ಮೇಜಿಗೇನಾಗಿದೆ? ಇದೇನಾದರೂ...?

ಓಹ್! ಬಹುಶಃ ಇದು ಹೀಗೇ ಆಗಿರಬೇಕು! ಫೋನಿ ಬಾಬುಗೆ ಏನಾಗಿರಬಹುದು ಎಂಬುದರ ಬಗ್ಗೆ ಒಂದು ಸ್ಥೂಲ ಕಲ್ಪನೆ ಮೂಡಿ ಸಮಾಧಾನವೆನಿಸಿತು. ಎರಡು ದಿನಗಳ ಹಿಂದೆ, ಭಾನುವಾರದ ಮಧ್ಯಾಹ್ನದಂದು ಕೊಂಚ ಜೋರಾಗಿಯೇ ಮಳೆ ಸುರಿದು ಮನೆಯ ಕೆಲವು ಭಾಗಗಳಲ್ಲಿ ಮಾಡು ಸೋರಲಾರಂಭಿಸಿತ್ತು. ನೀರು ಅವನ ಮೇಜಿನ ಮೇಲೂ ಬೀಳುತ್ತಿದ್ದ ಕಾರಣ, ನಬೀನ್ ಅದರ ಮೇಲೆ ಪತ್ರಿಕೆಗಳನ್ನು ಹರಡಬೇಕಾಗಿ ಬಂತು. ಆ ಕಟ್ಟಡವೂ ಸುಮಾರಷ್ಟು ಹಳೆಯದೇ. ಮನೆ ಮಾಲೀಕನಿಗೆ ಹೇಳಿ ಮಾಡನ್ನು ಸರಿಪಡಿಸಬೇಕೆಂದು ಕೊಂಡಿದ್ದನು. ಮತ್ತೆ ಇಂದು ಮುಂಜಾನೆಯೂ ಮಳೆ ಸುರಿದು ಇವನಿರುವ ಗಲ್ಲಿಯೇ ಕೆರೆಯಂತಾಗಿತ್ತು. ನಬೀನ್ ಈ ಕಾರಣಗಳಿಗಾಗಿ ಮೇಜನ್ನು ಕಿಟಕಿ ಬಳಿ ತಳ್ಳಿ ಕಪಾಟನ್ನು ಎದುರಿನ ಗೋಡೆಗೆ ಒರಗಿಸಿದ್ದರೆ, ಅವನು ಮೊದಲ ಬಾರಿ ತಲೆ ಉಪಯೋಗಿಸಿ ಕೆಲಸ ಮಾಡಿದ್ದಾನೆಂದು ಅವನನ್ನು ಮೆಚ್ಚಲೇಬೇಕಿತ್ತು. ಹಣದ ಚೀಲವನ್ನು ಕಿಸೆಗೆ ಮರಳಿಸಿ ಫೋನಿ ಬಾಬು ಮತ್ತೆ ಕಿಟಕಿ ಬಳಿ ಹೊರಟ. ಈಗ ಇನ್ನೇನೋ ಹೊಸದಕ್ಕೆ ಡಿಕ್ಕಿ ಹೊಡೆದ.

ಒಂದು ಕುರ್ಚಿ. ನಬೀನ್ ಕುರ್ಚಿಯನ್ನು ಎತ್ತಿ ತಂದಿಟ್ಟನೆಂದು ತೋರುತ್ತದೆ. ಫೋನಿ ಬಾಬು ತನ್ನ ಅನಿಶ್ಚಿತವಾದ ಅನ್ವೇಷಣಾ ಕಾರ್ಯವನ್ನು ಕೈಬಿಟ್ಟ. ಕತ್ತಲಲ್ಲಿ ದಾರಿ ಹುಡುಕುವುದರಲ್ಲಿ ಯಾವ ಅರ್ಥವೂ ಇರಲಿಲ್ಲ. ಕರೆಂಟ್ ಬರುವತನಕ ಕುರ್ಚಿಯಲ್ಲಿ ಕೂತು ಕಾಯುವುದೇ ಅವನಿಗೆ ವಿವೇಕಯುತ ಕೆಲಸವಾಗಿ ಕಂಡಿತು. ಆ ಕುರ್ಚಿಗೆ ಕೈಗಳಿದ್ದು, ಬೆತ್ತದ್ದಾಗಿತ್ತು. ಅವನ ಕುರ್ಚಿಗೆ ಕೈಗಳಿದ್ದುವೆ? ಇವನೇ ಗಮನಿಸಿಲ್ಲ. ತಾನು ಇಲ್ಲಿತನಕ ತನ್ನ ಮನೆಯ ವಸ್ತುಗಳನ್ನೇ ಸರಿಯಾಗಿ ಗಮನಿಸಿರಲಿಲ್ಲ ಎಂಬುದು ಅವನಿಗೆ ಚೆನ್ನಾಗಿ ಅರಿವಾಯ್ತು. ಮಹಡಿಯ ಮುಂಬಾಗಿಲಿನಿಂದ ಕಾಣುತ್ತಿದ್ದ ತುಣುಕು ಆಕಾಶವನ್ನು ದಿಟ್ಟಿಸುತ್ತಾ ಕುಳಿತ. ವಿದ್ಯುತ್ ಕಡಿತಕ್ಕೆ ಒಳಪಡದ ಇತರ ಪ್ರದೇಶಗಳ ಬೆಳಕನ್ನು ಅದು ಕ್ಷೀಣವಾಗಿ ಪ್ರತಿಫಲಿಸುತ್ತಿತ್ತು. ಮೋಡ ಗಳಿದ್ದ ಕಾರಣ ನಕ್ಷತ್ರಗಳು ಕಾಣುತ್ತಿರಲಿಲ್ಲವಾದರೂ ಫೋನಿ ಬಾಬುಗೆ ನೋಡಲೊಂದು ವಸ್ತು ಸಿಕ್ಕಂತಾಯ್ತು.

ಕೋಣೆಯಲ್ಲಿ ಅಲಾರ್ಮಿನ ಟಿಕ್‌ಟಿಕ್ ಶಬ್ದ ಕೇಳಿಸಲು ಶುರುವಾಯ್ತು. ಇವನ ಬಳಿಯಂತೂ ಅಲಾರ್ಮ್ ಗಡಿಯಾರವಿರಲಿಲ್ಲ. ಹಾಗಾದರೆ ಇದೆಲ್ಲಿಂದ...? ಅವನೇನಾದರೂ ಯೋಚಿಸುವುದಕ್ಕೂ ಮೊದಲು ತುತ್ತೂರಿಯಂತಹ ಸದ್ದು ಅವನೇ ಕುಳಿತಲ್ಲಿಂದ ಹಾರಿಬೀಳುವಷ್ಟು ಗಟ್ಟಿಯಾಗಿ ಮೊಳಗತೊಡಗಿತು.

ಅದು ದೂರವಾಣಿಯದ್ದು. ಅವನ ಹಿಂದೆಯಿದ್ದ ಮೇಜಿನ ಮೇಲೆ ದೂರವಾಣಿಯೊಂದು ಪ್ರತಿಷ್ಠಾಪನೆಗೊಂಡಿತ್ತು. ಕತ್ತಲೆಯನ್ನು ಸೀಳಿ ಹೊರಟ ಅದರ ಕಹಳೆ ನಿರಂತರವಾಗಿ ಹೊಡೆದುಕೊಂಡು ಕೊಂಚ ಸಮಯದ ನಂತರ ನಿಂತೇಹೋಯ್ತು.

ಫೋನಿ ಬಾಬು ಬಳಿ ದೇವರಾಣೆಗೂ ಯಾವುದೇ ದೂರವಾಣಿ ಇರಲಿಲ್ಲ! ಇದು ತನ್ನ ಕೊಠಡಿ ಅಲ್ಲವೇ ಅಲ್ಲ ಅನ್ನುವುದಂತೂ ಬಾಬುಗೆ ಖಚಿತವಾಯ್ತು. ಬೇರೆ ಯಾರದ್ದೋ ಕೋಣೆಯಲ್ಲಿ ಇವನು ಬಂದು ಕುಳಿತಿದ್ದ. ಈಗ ಎಲ್ಲ ಘಟನೆಗಳು ಕ್ರಮಬದ್ಧವಾಗಿ ಜೋಡಿಸಲ್ಪಟ್ಟವು.

ನಂ. ೧೭/೨ ಮತ್ತು ೧೭/೩ ಒಂದೇ ತೆರನಾಗಿದ್ದ ಎರಡು ವಸತಿ ಸಮುಚ್ಚಯಗಳು. ಎರಡರಲ್ಲೂ ಮೂರು ಮಹಡಿಗಳಿದ್ದು, ಅವುಗಳ ಮಾಲೀಕನೂ ಒಬ್ಬನೇ ಆಗಿದ್ದನು. ಫೋನಿ ಬಾಬು ಎಂದೂ ನಂ. ೧೭/೩ರ ಒಳಗೆ ಹೋಗಿರದಿದ್ದರೂ, ಅದರ ರೂಪರೇಷೆ, ವಿನ್ಯಾಸ ಮತ್ತು ನಕ್ಷೆ ಒಂದೇ ತೆರನಾಗಿತ್ತು. ಸದ್ಯಕ್ಕೆ ಅವನು

ನಂ. ೧೭/೩ರ ಎರಡನೆ ಮಹಡಿಯ ಒಂದು ಕೊಠಡಿಯಲ್ಲಿದ್ದನು. ಎಲ್ಲೂ ಕರೆಂಟ್ ಇಲ್ಲ, ಮುಂಬಾಗಿಲು ತೆರೆದಿದೆ ಮತ್ತು ಬೀರುವೂ ಹಾರು ಹೊಡೆದಂತೆ ಬಿದ್ದುಕೊಂಡಿದೆ. ಇವೆಲ್ಲದರ ಅರ್ಥ, ಇವುಗಳ ವಾಚ್ಯಾರ್ಥ, ಗೂಢಾರ್ಥ ಏನೇ ಇರಲಿ, ತನ್ನಿಂದ ತಪ್ಪಾಗಿದೆ. ತಾನೀಗ ಇಲ್ಲಿಂದ ಹೊರಡಲೇಬೇಕು ಎಂಬುದೊಂದೇ ಫೋನಿ ಬಾಬುಗೆ ಹೊಳೆದದ್ದು. ಇನ್ನೇನು ಏಳಬೇಕು ಎನ್ನುವಷ್ಟರಲ್ಲಿ ಎಡಗಡೆಯಿಂದ ತೀರ ಹತ್ತಿರದಲ್ಲಿ ಬಂದ ಸದ್ದು ಮತ್ತೆ ಅವನನ್ನು ಬೆಚ್ಚಿ ಬೀಳಿಸಿತು.

ಅದು ತಗಡಿನ ಟ್ರಂಕನ್ನು ನೆಲದ ಮೇಲೆ ಎಳೆದುಕೊಂಡು ಹೋಗುತ್ತಿರುವ ಸದ್ದು! ಫೋನಿ ಬಾಬುವಿನ ಗಂಟಲು ಒಣಗಿ ಎದೆ ಹೊಡೆದುಕೊಳ್ಳುತ್ತಿತ್ತು. ಕಳ್ಳ! ತಾನು ಕುಳಿತಿದ್ದ ಕುರ್ಚಿಯ ಪಕ್ಕ ಮಂಚವಿದ್ದಿರಬೇಕು, ಅದರಡಿಯೇ ಕಳ್ಳನಿದ್ದಾನೆ. ಹೊರಗೋಡುವ ತರಾತುರಿಯಲ್ಲಿ ಟ್ರಂಕಿಗೆ ಗುದ್ದಿರಬೇಕು.

ಬಾಗಿಲು ಮತ್ತು ಬೀರು ಏಕೆ ತೆರೆದಿತ್ತೆಂದು ಈಗ ಹೊಳೆಯಿತು. ಕಳ್ಳನ ಬಳಿ ಆಯುಧಗಳೇನಾದರೂ ಇದ್ದರೆ ಫೋನಿ ಬಾಬುಗೆ ಅಪಾಯವಿದೆ. ಬಾಬು ಬಳಿಯಿದ್ದ ಕೊಡೆಯೂ ದೂರದಲ್ಲಿತ್ತು. ಹೇಗೂ ಹಳೆಯದಾಗಿದ್ದ ಅದರಲ್ಲಿ ಕಳ್ಳನಿಗೆ ಹೊಡೆದಿದ್ದರೆ ಕಳ್ಳನಿಗಿಂತ ಜಾಸ್ತಿ ಓಬೀರಾಯನ ಕಾಲದ ಕೊಡೆಗೇ ಗಾಯಗಳಾಗುತ್ತಿದ್ದವೇನೋ!

ತನ್ನ ಇರುವಿಕೆಯನ್ನು ತಪ್ಪಿ ತಿಳಿಸಿದ್ದಕ್ಕೋ ಏನೋ, ಕಳ್ಳ ಈಗ ಸದ್ದಿಲ್ಲದೆ ಅಡಗಿದ್ದ. ಫೋನಿ ಬಾಬುವಿಗಂತೂ ತಾನು ಮಾಡಿದ ಮೂರ್ಖ ಕೆಲಸಕ್ಕಾಗಿ ಈಗ ಅನುಭವಿಸಬೇಕಾಗಿರುವುದನ್ನು ಕಂಡು ಅವನ ಮೇಲೆಯೇ ವಿಪರೀತ ಕೋಪ ಬಂದಿತು. ಚಿಲ್ಲರೆ ಕಳ್ಳರು ಪಿಸ್ತೂಲನ್ನು ಹೊತ್ತು ತಿರುಗದಿದ್ದರೂ ಅವರ ಬಳಿ ಒಂದು ಚೂರಿಯಂತೂ ಇದ್ದೇ ಇರುತ್ತದೆ. ಆದರೆ ಎಲ್ಲ ಕಳ್ಳರ ಬಳಿಯೂ ಆಯುಧಗಳಿರಲಾರವು. ಪ್ರಾಯಶಃ ಬರಿಗೈ ಕಳ್ಳನಾಗಿ, ಅವನ ಜೊತೆ ಹೋರಾಡಬೇಕಾಗಿ ಬಂದರೆ, ಒಂದು ಕಾಲದಲ್ಲಿ ಕ್ರೀಡಾಪಟುವಾಗಿದ್ದ ಫೋನಿ ಬಾಬು ಖಂಡಿತ ಹೆದರುತ್ತಿರಲಿಲ್ಲ. ತೊಂದರೆ ಇದ್ದಿದ್ದೇ ಈ ವಿದ್ಯುತ್ ಕಡಿತದಲ್ಲಿ, ಒಬ್ಬ ಬಲಶಾಲಿಗೂ ಕತ್ತಲೆಯಲ್ಲಿ ಅಸಹಾಯಕನೆನಿಸಬಹುದು.

ಈಗೇನು ಮಾಡಬಹುದು? ಸುಮ್ಮನೆದ್ದು ಹೊರಡಬೇಕೆ? ಅವನು ಇಳಿಯುತ್ತಿದ್ದ ಹಾಗೆ ಕರೆಂಟು ಬಂದರೆ? ಕಳ್ಳ ಒಂದೆಡೆಯಿಂದ ಪರಾರಿಯಾದಾಗ ಈ ಮನೆ ಮಾಲೀಕ ಬಂದು ತನ್ನ ಮನೆಯನ್ನೇ ದೋಚಿರುವುದನ್ನು ಕಂಡರೆ...?

ತಟಕ್ಕನೆ ಫೋನಿ ಬಾಬುವಿನ ಯೋಚನಾ ಲಹರಿ ಮುರಿದುಬಿತ್ತು. ಆರಾಮಾಗಿ ಮೆಟ್ಟಿಲು ಹತ್ತುತ್ತಾ ಬರುತ್ತಿರುವ ಹೆಜ್ಜೆ ಸದ್ದುಗಳು ಕೇಳತೊಡಗಿದವು.

ತನಗರಿವಿಲ್ಲದಂತೆಯೇ ಫೋನಿ ಬಾಬು ಹೆಜ್ಜೆಗಳನ್ನು ಎಣಿಸಲಾರಂಭಿಸಿದ. ಮೆಟ್ಟಿಲು ಹತ್ತುತ್ತಿದ್ದ ಮನುಷ್ಯ ನಲ್ವತ್ತೊಂಭತ್ತನೆ ಮೆಟ್ಟಿಲು ಹತ್ತಿದ ತಕ್ಷಣ ಇದು ಈ ಮನೆಯ ಮಾಲೀಕನೇ ಎಂಬುದು ಫೋನಿ ಬಾಬುಗೆ ಸ್ಪಷ್ಟವಾಯ್ತು. ಇನ್ನೊಂದರೆಕ್ಷಣದಲ್ಲಿ ಆ ಮಾಲೀಕ ತನಗೆ ಪರಿಚಿತನೂ ಹೌದು ಎಂಬುದೂ ನಮ್ಮ ಬಾಬುಗೆ ಹೊಳೆಯಿತು.



ಅದೊಂದು ದಿನ ಡಾಲ್‌ಹೌಸಿ ಚೌಕದಿಂದ ಟ್ಯಾಕ್ಸಿಯಲ್ಲಿ ಒಟ್ಟಿಗೆ ಬರಬೇಕಾದಾಗ ತನ್ನನ್ನು ಆತ ಆದಿನಾಥ್ ಸನ್ಯಾಲ್ ಎಂದು ಪರಿಚಯಿಸಿಕೊಂಡಿದ್ದ. ಸುಮಾರು ಐವತ್ತು ವರ್ಷವಾದರೂ ಕಠೋರ ಚರ್ಯೆ, ಗೌರವರ್ಣ, ದುಬಾರಿ ಹತ್ತಿಯ ಕುರ್ತಾ, ಪೊದೆಯಂತಿದ್ದ ಹುಬ್ಬುಗಳ ಕೆಳಗೆ ತೀಕ್ಷ್ಣ ನೋಟ ಬೀರುವ ಹಸಿರು ಕಣ್ಣುಗಳು. ಅರವತ್ತೆರಡು, ಅರವತ್ತಮೂರು, ಅರವತ್ತನಾಲ್ಕು... ಹೆಜ್ಜೆ ಸದ್ದುಗಳು ಹತ್ತಿರವಾಗುತ್ತಾ ಗಟ್ಟಿಯಾಗಿ ಕೇಳತೊಡಗಿದವು.

ಮನೆಯೊಳಗಿನಿಂದಲೂ ಈಗ ಬೇರೆ ಬೇರೆ ಸದ್ದುಗಳು ಕೇಳಿ ಬರಲಾರಂಭಿಸಿದವು. ಯಾರೋ ಆ ತುದಿಯಿಂದ ಓಡಿ ಹೋಗುವಾಗ ''ಅಮ್ಮಾss'' ಎಂದು ಮೆಲ್ಲನೆ ಕೂಗಿದ್ದೂ ಕೇಳಿಸಿತು. ಬಹುಶಃ ಆಗ ಒಡೆದಿದ್ದ ಗಾಜಿನ ಚೂರುಗಳು ಕಳ್ಳನ ಕಾಲನ್ನು ಕತ್ತರಿಸಿರಬೇಕು. ಅವನಿಗೆ ತಕ್ಕ ಶಾಸ್ತಿಯಾಯಿತು. ಆಗಸದಿಂದ ಹೊಳೆಯುತ್ತಿದ್ದ ಮಂದ ಬೆಳಕು ಒಮ್ಮೆ ಮರೆಯಾಗಿ ಮತ್ತೆ ಕಂಡಿತು. ಕಳ್ಳ ಈಗ ಬಲಗಡೆಗೆ ತಿರುಗಿ ಓಡಿದ. ಅವನಿಗೆ ಕಿಟಕಿಯಿಂದ ಹೊರಹೋಗಿದ್ದ ನಳಿಕೆಯನ್ನು ಹಿಡಿದಿಳಿಯುವ ದಾರಿಯೊಂದೇ ಇದ್ದಿದ್ದು.

ಇದೀಗ ಆ ಹೆಜ್ಜೆಗಳು ಮೊಗಸಾಲೆಗೆ ಬಂದಿದ್ದವು. ಫೋನಿ ಬಾಬು, ಕಳ್ಳ ಮಾಡಿದಂತೆ ಗಾಜನ್ನು ತುಳಿಯದೆ, ಮೆತ್ತಗೆ ನಡೆಯುತ್ತಾ ತನ್ನ ಕೊಡೆಯನ್ನೆತ್ತಿಕೊಂಡು ವಾಸದ ಕೋಣೆಗೆ ನಡೆದನು. ಹೆಜ್ಜೆಗಳು ಇದೀಗ ನೇರವಾಗಿ ಮುಂಬಾಗಿಲಿನ ಇದಿರೇ ನಿಂತಿದ್ದವು. ಕೆಲವು ಕ್ಷಣಗಳ ಮೌನದ ನಂತರ ''ಇದೇನಿದು! ಈ ಬಾಗಿಲೇಕೆ...?'' ಎಂಬ ಆರ್ಭಟ ಕಿವಿದೆರೆಗಳನ್ನಪ್ಪಳಿಸಿತು.

ಇದು ಆದಿನಾಥ್ ಸನ್ಯಾಲ್‌ನ ಕರ್ಕಶ ದನಿ ಎಂಬುದರಲ್ಲಿ ಅನುಮಾನವೇ ಇಲ್ಲ. ಅಂದು ಟ್ಯಾಕ್ಸಿಯಲ್ಲೂ ತುಂಬ ಹೊತ್ತು ಮಾತನಾಡಿದ್ದನು.

ಇವನ ಬಗ್ಗೆ ಇನ್ನೂ ಇತರ ಸಂಗತಿಗಳು ನೆನಪಿಗೆ ಬಂದವು. ಫೋನಿ ಬಾಬುವಿನ ಪಕ್ಕದ ಮನೆಯವನೇ ಆದ ನರೇಶ್ ಬಿಸ್ವಾಸ್ ಅಂದೊಮ್ಮೆ ಆದಿನಾಥ್ ಸನ್ಯಾಲ್ ಮೂಟೆಗಟ್ಟಲೆ ಹಣವನ್ನು ಎಲ್ಲೋ ಪೇರಿಸಿಟ್ಟಿದ್ದಾನೆಂದು ಹೇಳಿದ್ದನು. ಕಲ್ಕತ್ತಾದಲ್ಲೇ ಅವನ ಬಳಿ ಮೂರು ಮನೆಗಳಿದ್ದವು. ಅವುಗಳನ್ನೆಲ್ಲಾ ಬಾಡಿಗೆಗೆ ಕೊಟ್ಟು ಈ ಆಸಾಮಿ ಮಾತ್ರ ಇಲ್ಲಿನ ಮನೆಯಲ್ಲಿ ವಾಸವಾಗಿದ್ದ. ಅವನು ಹಣ ಗಳಿಸುತ್ತಿದ್ದ ರೀತಿ ನೇರ ಮಾರ್ಗದ್ದಲ್ಲ ಎಂಬ ಗಾಳಿ ಸುದ್ದಿಯೂ ಇತ್ತು. ಎಲ್ಲರ ಊಹೆಯ ಪ್ರಕಾರ ಅವನ ಮೇಜಿನ ಡ್ರಾಯರ್, ಕಪಾಟುಗಳಲ್ಲೆಲ್ಲಾ ತುಂಬಿದ್ದುದು ಕಪ್ಪು ಹಣ...

ಇದೀಗ ಸನ್ಯಾಲ್ ಒಡೆದ ಗಾಜಿನ ಚೂರುಗಳ ಮೇಲೆ ನಡೆಯುತ್ತಾ, ಬುಸುಗುಡುತ್ತಾ, ಕಳ್ಳನನ್ನು ಕಳ್ಳತನ ಮಾಡುವಾಗಲೇ ಹಿಡಿಯಲೆಂದು ಮಲಗುವ ಕೋಣೆಗೆ ನುಗ್ಗಿದನು.

ಫೋನಿ ಬಾಬುಗೆ ಈಗ ಭಯಪಡಲು ಕಾರಣ ವಿರಲಿಲ್ಲ. ಇನ್ನೂ ತೆರೆದೇ ಇದ್ದ ಮುಂಬಾಗಿಲಿನ ಮೂಲಕ ಜಾರಿಕೊಂಡು ಕೆಲವೇ ನಿಮಿಷಗಳ ಹಿಂದೆ ಹತ್ತಿದ್ದ ಎಪ್ಪತ್ತೆರಡು ಮೆಟ್ಟಿಲುಗಳನ್ನು ಸದ್ದಿಲ್ಲದೆ ಇಳಿದ. ಏನೂ ಆಗದವನಂತೆ ನಂ. ೧೭/೨ರ ಕಡೆ ನಡೆದ. ಅವನ ಮನೆಯ ಮೆಟ್ಟಿಲುಗಳನ್ನೇ ಹತ್ತಿ, ಖಾಲಿ ಪಂಜರ ತೂಗಿದ್ದ ಸ್ಥಳಕ್ಕೆ ಬಂದಾಗ, ಕರೆಂಟು ಬಂತು. ತುಂಬ ಸಮಾಧಾನವಾದಂತಾಗಿ ಫೋನಿ ಬಾಬು ತನ್ನ ಕೈಯೆಡೆಗೆ ನೋಡಿದಾಗ ಅವನು ಹೊಚ್ಚ, ಹೊಸ ಐಷಾರಾಮಿ ಜಪಾನಿ ಕೊಡೆಯನ್ನು ಹಿಡಿದುಕೊಂಡಿರುವುದು ಕಂಡಿತು!

ಮೂಲ : **ಸತ್ಯಜಿತ್ ರಾಯ್**
ಕನ್ನಡಕ್ಕೆ : **ಸಾಕ್ಷಿ**


ನಂ. ೩೧, ವೆಂಕಟೇಶ್ವರ ನಿಲಯ, ೨ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ
೧೨ನೇ ಬ್ಲಾಕ್, ನಾಗರಭಾವಿ ಎಕ್ಸ್‌ಟೆನ್ಷನ್, ಬೆಂಗಳೂರು-೫೬೦ ೦೭೨

# ರಾಜ್ಯ ಶಿಕ್ಷಣ ಸಂಶೋಧನೆ ಮತ್ತು ತರಬೇತಿ ಇಲಾಖೆ

## ಇವರಿಂದ ರಚಿತವಾದ ಕೃತಿಗಳು

ಸಂಪುಟ 1 ; ರೂ. 320/-




ಪ್ರಸ್ತುತ ಭೂಗೋಳ ಸಂಗಾತಿ ಪುಸ್ತಕವನ್ನು ಪ್ರಾಥಮಿಕ ಹಾಗೂ ಪ್ರೌಢಶಾಲಾ ಶಿಕ್ಷಕರಿಗೆ ಮತ್ತು ವಿದ್ಯಾರ್ಥಿ ವೃಂದಕ್ಕೆ ವಿಶಾಲವಾದ ವಿಶ್ವ ಸೌರವ್ಯೂಹ ಹಾಗೂ ಮಾನವನ ಆವಾಸ ಸ್ಥಾನವಾದ ಪೃಥ್ವಿಯನ್ನು ಕುರಿತ ಆಳವಾದ ಅಧ್ಯಯನ ಮಾಡಲು ವಿಶೇಷವಾಗಿ ರಚಿಸಲಾಗಿದೆ. ಶಿಲೆಗಳು ಮತ್ತು ಭೂ ಮೇಲ್ಮೈ ಸ್ವರೂಪಗಳನ್ನು ರೂಪಿಸಿ ಹಾಗೂ ಏರ್ಪಡಿಸಿ ವೈವಿಧ್ಯಮಯವಾದ ಸ್ವರೂಪಗಳನ್ನು ಸೃಷ್ಟಿಸುವ ಶಕ್ತಿಗಳಿಂದ ಗೋಚರಿತ ಮತ್ತು ಆಕರ್ಷಣೀಯ ವಿವಿಧ ಮಜಲುಗಳನ್ನು ಈ ಪುಸ್ತಕವು ಪ್ರತಿಬಿಂಬಿಸುತ್ತದೆ.

ಸಂಪುಟ 2 ; ರೂ. 250/-




............ ಈ ಸಂಪುಟದಲ್ಲಿ ನಾವು ಜೀವಮಂಡಲ ಎಂಬ ನಾಲ್ಕನೆಯ ಮಂಡಲದ ಬಗ್ಗೆ ಪರಿಚಯ ಮಾಡಲು ಪ್ರಯತ್ನಿಸಿದ್ದೇವೆ... ಇಲ್ಲಿ ಜೀವ ಮಂಡಲದ ಪ್ರಾಮುಖ್ಯತೆ ಹಾಗೂ ಪರಿಸರದ ಮೇಲೆ ಮಾನವನ ಪ್ರಭಾವದಿಂದ ಉಂಟಾದ ಪರಿಸರದ ನಾಶ ಮತ್ತು ಪರಿಸರ ಮಾಲಿನ್ಯ ಕುರಿತು ಸವಿಸ್ತಾರವಾಗಿ ಬರೆಯಲಾಗಿದೆ.

ಸಂಪುಟ 3 ; ರೂ. 425/-




... 'ಭೂಗೋಳ ಸಂಗಾತಿ ಸಂಪುಟ 3 'ಪೃಥ್ವಿಯ ಮೇಲೆ ದೊರೆಯುವ ವಿವಿಧ ಬಗೆಯ ಸಂಪನ್ಮೂಲಗಳು, ವಿವಿಧ ಪ್ರದೇಶಗಳಲ್ಲಿ ಮಾನವ ಚಟುವಟಿಕೆಗಳಲ್ಲಿನ ವ್ಯತ್ಯಾಸಗಳು ಹಾಗೂ ಅವುಗಳ ಪರಿಣಾಮ ಸ್ವರೂಪ ವಾಗಿ ಮಾನವನ ವಿವಿಧ ಉದ್ಯೋಗ ಗಳ, ಉಂಟಾದ ಸಂಪನ್ಮೂಲಗಳ ಅಭಿವೃದ್ಧಿಗಳನ್ನು ವಿವರಿಸುತ್ತದೆ. ಶಿಕ್ಷಕರ ಮತ್ತು ವಿದ್ಯಾರ್ಥಿಗಳ ಸೃಜನಾತ್ಮಕ ಶಕ್ತಿ ಯನ್ನು ಹೆಚ್ಚಿಸಲು ಹಾಗೂ ಭೂಗೋಳ ಶಾಸ್ತ್ರದ ಅಧ್ಯಯನವನ್ನು ಚಟುವಟಿಕೆ ಆಧಾರಿತವನ್ನಾಗಿ ಮಾಡಲು ಸೂಕ್ತ ಚಟುವಟಿಕೆಗಳನ್ನು ಸೂಚಿಸ ಲಾಗಿದೆ... ಮಾನವನ ಚಟುವಟಿಕೆಗಳ ಮೇಲೆ ನೈಸರ್ಗಿಕ ಪರಿಸರವು ಪ್ರಭಾವ ಬೀರುತ್ತದೆ ಹಾಗೂ ಮಾನವನು ನೈಸರ್ಗಿಕ ಪರಿಸರದೊಳಗೆ ತನ್ನ ಲಾಭ ಕ್ಕಾಗಿ ಮಧ್ಯೆ ಪ್ರವೇಶಿಸುತ್ತಾನೆ ಎಂಬುದನ್ನು ಈ ಸಂಪುಟವು ವಿವರಿಸುತ್ತದೆ.

ರೂ. 995/-




... ಈ ಪುಸ್ತಕದ ವಿಷಯವು ಪ್ರೌಢಶಾಲಾ ಹಂತದ ಪಠ್ಯ ವಸ್ತುವನ್ನು ಒಳಗೊಂಡಿದೆ. ಭೂಮಿಯ ಉಗಮದಿಂದ, ಜೀವಿಗಳ ವಿಕಾಸದಿಂದ ಹಿಡಿದು ಆಧುನಿಕ ಯುಗದ ಘಟನೆಗಳನ್ನು ಒಳಗೊಂಡಿದೆ... ಚಿತ್ರ ನೋಡಿ ನಿರೂಪಣೆ ಓದುತ್ತ ಹೋದರೆ ಗತಕಾಲದ ವಾಸ್ತವ ಮನಸ್ಸಿನಲ್ಲಿ ಅಚ್ಚಳಿಯದೇ ಉಳಿಯುತ್ತದೆ.... ಚರಿತ್ರೆಯ ಸಾಮಾಜಿಕ, ಸಾಂಸ್ಕೃತಿಕ, ಸಾಧನೆಗಳ ದರ್ಶನ, ಜನತೆಯ ಜೀವನ ರೂಪುಗೊಂಡ ವಿಧಾನದ ಪರಿಚಯ, ಮಾನವ ಜನಾಂಗದ ಅಧ್ಯಯನ, ಕಾಲ ದೊಂದಿಗೆ ಮಾನವರ ಪಯಣ ಎಂಬ ಮಹತ್ವದ ಅಂಶಗಳನ್ನು ಮಕ್ಕಳಿಗೆ ತಿಳಿಯಹೇಳಿ, ಚರಿತ್ರೆಯ ಬೋಧನೆಗೆ ಹೊಸ ಆಯಾಮ ಗಳನ್ನೂ ಸೂಚಿಸುವುದು. ವೈಜ್ಞಾನಿಕ ದೃಷ್ಟಿಕೋನವನ್ನು ಮೂಡಿಸುವುದು ಹಾಗೂ ಚರಿತ್ರೆಯ ಅಭ್ಯಾಸವನ್ನು ಸುಸಂಗತಗೊಳಿಸುವುದೇ ಈ ಪುಸ್ತಕ ರಚನೆಯ ಮೂಲ ಆಶಯವಾಗಿದೆ.

## ಶ್ರೀ ಗಾಯತ್ರಿ ಎಂಟರ್‌ಪ್ರೈಸಸ್

285/ಎಫ್ - 6, ಉತ್ತರಾಧಿ ಮಠ ರಸ್ತೆ, 5ನೇ ಪಶ್ಚಿಮ ಅಡ್ಡರಸ್ತೆ

ಮೈಸೂರು -570004 ಇ-ಮೇಲ್ : kar_mas56@yahoo.co.in

ಮೊಬೈಲ್ : 9448074435, 9449853308, 9242459332

■ ಎಲ್. ಸಿ. ನಾಗರಾಜ್

# ಅವನತಿಯತ್ತ ಭಾರತದ ಕೃಷಿ



ಭಾರತದ ಕೃಷಿ ಮತ್ತು ಕೃಷಿ ಸಂಸ್ಕೃತಿಯ ಅವನತಿಗೆ ೪ ಪ್ರಮುಖ ಕಾರಣಗಳು ಎದ್ದು ಕಾಣುತ್ತವೆ.

೧. ಕೃಷಿ ಮತ್ತು ಕೃಷಿ ಆಧಾರಿತ ಕಸುಬು, ಕುಶಲತೆಗಳನ್ನು ಬಲ್ಲ ಶೇ. ೪೦ರಷ್ಟು ಗ್ರಾಮೀಣ ಜನತೆ ೨೦೨೦ರ ವೇಳೆಗೆ ನಗರಮುಖಿಗಳಾಗಲಿದ್ದಾರೆ.

೨. ಅನ್ಯಾಯಯುತ, ಅವೈಜ್ಞಾನಿಕ ಮಾರುಕಟ್ಟೆ ವ್ಯವಸ್ಥೆ.

೩. ಕೇಂದ್ರೀಯ ಅಂತರ್ಜಲ ಇಲಾಖೆ ಪ್ರಕಟಿಸಿರುವ ಅಂಕಿ-ಅಂಶಗಳ ಪ್ರಕಾರ ಅಂತರ್ಜಲ ಮಟ್ಟ ೩೦೦ರಿಂದ ೪೦೦ ಮೀಟರುಗಳಿಗೆ ಕುಸಿದಿದೆ; ಭಾರತದ ಬಹಳಷ್ಟು ಅಣೆಕಟ್ಟೆ ಮತ್ತು ಕೆರೆಗಳಲ್ಲಿ ಹೂಳು ತುಂಬಿಕೊಂಡಿದೆ.

೪. ೨೦೦೪ರಲ್ಲಿ ನಡೆದ ವಿಶ್ವಸಂಸ್ಥೆಯ ಭೂಮಿ ಬರಡಾಗುವಿಕೆ ತಡೆ ಅಧಿವೇಶನ (ಯುಎನ್‌ಸಿಸಿಡಿ)ದಲ್ಲಿ ಭಾರತ ಸರ್ಕಾರದ ಅಧಿಕಾರಿಗಳೇ ಒಪ್ಪಿಕೊಂಡಿರುವ ಪ್ರಕಾರ ಭಾರತದ ಶೇ. ೪೦ರಷ್ಟು ಮಣ್ಣು ಬರಡಾಗಿದೆ.

ಮೊದಲಿನ ಎರಡು ಕಾರಣಗಳು ಚರ್ಚೆಯಾಗುತ್ತಿವೆ ಆದ್ದರಿಂದ ಮೂರು ಮತ್ತು ನಾಲ್ಕನೆಯ ಕಾರಣಗಳನ್ನ ಇಲ್ಲಿ ಚರ್ಚಿಸಬಹುದು. ಭೂಮಿ ಬರಡಾಗುವಿಕೆಯ ಪ್ರಮಾಣವನ್ನು ಗುರುತಿಸುವಾಗ ಭಾರತದ ಅಧಿಕಾರಿಗಳು ಒಣಬೇಸಾಯ ವಲಯಗಳನ್ನ ಮಾತ್ರ ಪರಿಗಣಿಸಿದ್ದಾರೆ. ಭಾರತದ ಶೇ. ೬೦ರಷ್ಟು ದವಸ ಮತ್ತು ಕಾಳುಗಳು ಮಳೆ ಆಶ್ರಿತ ಪ್ರದೇಶಗಳಲ್ಲಿ ಉತ್ಪತ್ತಿಯಾಗುತ್ತಿರುವುದರಿಂದ ಈ ಪರಿಗಣನೆ ತುಂಬ ಮುಖ್ಯ.



ಆದರೆ ಅಣೆಕಟ್ಟೆಗಳ ನೀರಾವರಿ ಸೌಕರ್ಯವಿರುವ ಅಚ್ಚುಕಟ್ಟು ಪ್ರದೇಶಗಳಲ್ಲಿ ಕೂಡ ಭೂಮಿ ಬರಡಾಗುತ್ತಿದೆ. ಪಶ್ಚಿಮ ಬಂಗಾಳ ಅಚ್ಚುಕಟ್ಟು ಪ್ರದೇಶಗಳ ಮಣ್ಣಿನಲ್ಲಿ ತೀವ್ರ ಪ್ರಮಾಣದ ಆರ್ಸೆನಿಕ್, ಇತರೆ ರಾಜ್ಯಗಳ ಅಚ್ಚುಕಟ್ಟು ಪ್ರದೇಶಗಳ ಮಣ್ಣಿನಲ್ಲಿ ಕ್ಯಾಡ್ಮಿಯಂ ಮತ್ತು ಸೀಸದಂತಹ ಭಾರ ಲೋಹಗಳು ಪತ್ತೆಯಾಗಿವೆ. ಪಂಜಾಬಿನ ಹಸಿರುಕ್ರಾಂತಿ ಪ್ರದೇಶಗಳಲ್ಲಿ ಕ್ಯಾನ್ಸರ್ ಮತ್ತು ಪಾರ್ಕಿನ್‌ಸನ್ ಕಾಯಿಲೆಗಳು ವ್ಯಾಪಕ ಪ್ರಮಾಣದಲ್ಲಿ ಕಾಣಿಸಿಕೊಂಡಿವೆ. ಭಾರತ ಸರ್ಕಾರ ಪಂಜಾಬಿಗೆ ಒಂದು ವಿಶೇಷ ಸವಲತ್ತನ್ನ ಒದಗಿಸಿದೆ; ಪಂಜಾಬ್‌ನಿಂದ ಮುಂಬಯಿ ನಗರಕ್ಕೆ ವಿಶೇಷ ಕ್ಯಾನ್ಸರ್ ರೈಲು ಬಿಟ್ಟಿದೆ.

೨೦೦೮ರಲ್ಲಿ ಬಜೆಟ್ ಮಂಡಿಸುತ್ತಿದ್ದ ಆಗಿನ ಹಣಕಾಸು ಮಂತ್ರಿ ಪ್ರಣಬ್ ಮುಖರ್ಜಿ ಭಾರತದ ಕೃಷಿ ಮಣ್ಣಿನ ಬಗ್ಗೆ ಪ್ರಮುಖವಾದ ಮಾತುಗಳನ್ನ ಆಡುತ್ತಿದ್ದರು : ಭಾರತದ ಕೃಷಿ ಮಣ್ಣು ಪ್ರಧಾನ ರಾಸಾಯನಿಕ ಪೋಷಕಾಂಶಗಳಿಗೆ ಪ್ರತಿಕ್ರಿಯಿಸುತ್ತಿಲ್ಲ, ಆದ್ದರಿಂದ ಇನ್ನು ಮುಂದೆ ಲಘು ಪೋಷಕಾಂಶಗಳಿಗೆ ಸಬ್ಸಿಡಿ ಕೊಡಲಾಗುತ್ತದೆ (ಲೋಕಸಭೆಯಲ್ಲಿ ಈ ಆಘಾತಕಾರಿ ಅಂಶಗಳು ಚರ್ಚೆಯಾಗುತ್ತಿದ್ದಾಗ ಭಾರತ ಸರ್ಕಾರದ ಸನ್ಮಾನ್ಯ, ಕೃಷಿ ಮಂತ್ರಿ ಕ್ರಿಕೆಟ್ ಪಿಚ್ಚಿನಲ್ಲಿ ಶಿಳ್ಳೆ ಹೊಡೆಯುತ್ತಿದ್ದರಾ ?). ಹೀಗಾಗಿ ಮೆಗ್ನೀಷಿಯ ಸಲ್ಫೇಟ್, ಸತುವಿನ ಸಲ್ಫೇಟ್ ಮತ್ತು ಬೊರಾಕ್ಸ್ ಲಘು ಪೋಷಕಾಂಶಗಳು ರಾಸಾಯನಿಕಗಳ ರೂಪದಲ್ಲಿ ಮಾರುಕಟ್ಟೆ ಪ್ರವೇಶಿಸಿದವು. ಆದರೆ ೧೯೬೦ರ ದಶಕದಲ್ಲಿ ರೈತರು ರಾಸಾಯನಿಕ ಪ್ರಧಾನ ಪೋಷಕಾಂಶಗಳನ್ನ ಹ್ಯಾಗೆ ಸಂದೇಹದಿಂದ ಕಂಡರೋ ಅದೇ ರೀತಿ ಈಗ ರಾಸಾಯನಿಕ ಲಘು ಪೋಷಕಾಂಶಗಳನ್ನ ಅನ್ಯ ಪದಾರ್ಥವೆಂಬಂತೆ ಸಂದೇಹಿಸುತ್ತಿದ್ದಾರೆ. ಮಣ್ಣು ಯಾವುದೇ ಗೊಬ್ಬರಕ್ಕೆ ಪ್ರತಿಕ್ರಿಯಿಸಬೇಕೆಂದರೆ ಮಣ್ಣಿನ ಭೌತಿಕ ರಚನೆ



ಸಮಪ್ರಮಾಣದಲ್ಲಿರಬೇಕು ಮತ್ತು ಈ ಭೌತಿಕ ರಚನೆಯೊಳಗೆ ಕಳಿಯುವ ಸಾವಯವ ಪದಾರ್ಥಗಳ ಸೂಕ್ಷ್ಮ ಹೆಣಿಗೆಯಿರಬೇಕು; ದ್ವಿದಳ ಸಸ್ಯಗಳು ಬೆಳವಣಿಗೆ ಯಾಗಬೇಕಾದರೆ ಮಣ್ಣಿನಲ್ಲಿ ಮಾಲಿಬ್ಡಿನಂ ಎಂಬ ಖನಿಜ ಪೋಷಕಾಂಶ ನೈಸರ್ಗಿಕವಾಗಿ ಉತ್ಪತ್ತಿಯಾಗಬೇಕು. ಮಣ್ಣು ತನ್ನ ಭೌತಿಕ ಸಂರಚನೆ ಮತ್ತು ಸಾವಯವ ಹೆಣಿಗೆಯನ್ನು ಕಳೆದುಕೊಂಡಿರುವುದರಿಂದ ಅನೇಕ ಲಘು ಪೋಷಕಾಂಶಗಳು ನೈಸರ್ಗಿಕವಾಗಿ ಉತ್ಪತ್ತಿಯಾಗುತ್ತಿಲ್ಲ. ಜೊತೆಗೆ ಅನೇಕ ದಶಕಗಳ ಕಾಲ ಮಣ್ಣಿಗೆ ಸುರಿದಿರುವ ರಾಸಾಯನಿಕ ಪ್ರಧಾನ ಪೋಷಕಾಂಶಗಳು ಲಘು ಪೋಷಕಾಂಶಗಳ ನಡುವೆ ಪರಸ್ಪರ ವಿರೋಧ ಗುಣವನ್ನ ಪ್ರಚೋದಿಸಿವೆ; ವಾಸ್ತವಿಕವಾಗಿ ಭಾರತದ ಕೃಷಿ ಮಣ್ಣಿನಲ್ಲಿ ತೀವ್ರ ಪ್ರಮಾಣದ ಕೃತಕ ದಾಹ ತಲೆದೋರಿದೆ. ಆದ್ದರಿಂದ ರೈತರ ಈ ಸಂದೇಹವನ್ನ ಮಣ್ಣಿನ ಫಲವಂತಿಕೆ ಕುರಿತ ವಿಜ್ಞಾನ ಮತ್ತು ಕೃಷಿಯ ಚಾರಿತ್ರಿಕ ಅಂಶಗಳ ಚರ್ಚೆಯ ಬೆಳಕಿನಲ್ಲಿ ಕಾಣುವುದು ಸೂಕ್ತ.

* * *

ಇದು ಆದದ್ದು ಹೀಗೆ : ೧೮೨೦ ಮತ್ತು ೧೮೪೦ರ ಅವಧಿಯಲ್ಲಿ ಯೂರೋಪು ಮತ್ತು ಉತ್ತರ ಅಮೆರಿಕದ ಮಣ್ಣಿನಲ್ಲಿ ಕೂಡ ಇಂತಹದೇ ಕೃತಕ ದಾಹ ಉಂಟಾಗಿತ್ತು. ತನ್ನ ಮಣ್ಣಿನ ಫಲವಂತಿಕೆಯನ್ನು ಸುಧಾರಿಸಿಕೊಳ್ಳಲು ಬ್ರಿಟನ್ ೧೮೩೭ರ ವೇಳೆಯಲ್ಲಿ ಸುಮಾರು ೨೬,೦೦೦ ಪೌಂಡುಗಳಷ್ಟು ಮೂಳೆಗಳನ್ನ ಆಮದುಮಾಡಿಕೊಳ್ಳುತ್ತಿತ್ತು; ಸಮುದ್ರ ಪಕ್ಷಿಗಳ ಹಿಕ್ಕೆಯನ್ನು ಹೊತ್ತ ಹಡಗು ೧೮೩೫ರಲ್ಲಿ ಬ್ರಿಟನ್ನಿನ ಲಿವರ್ ಪೂಲ್ ಬಂದರಿಗೆ ಬಂದು ನಿಂತಿತು. ೧೮೪೧ರಲ್ಲಿ ಮತ್ತೆ ಬ್ರಿಟನ್ ೧೭೦೦ ಟನ್ ಮತ್ತು ೧೮೪೭ರಲ್ಲಿ ೨,೨೦,೦೦೦ ಟನ್‌ಗಳಷ್ಟು ಪಕ್ಷಿ ಹಿಕ್ಕೆಯನ್ನ ಪೆರು ದೇಶದ ಸಮುದ್ರ ತೀರಗಳಿಂದ ಆಮದು ಮಾಡಿಕೊಂಡಿತು; ಆದರೂ ಬ್ರಿಟನ್ನಿನ ಮಣ್ಣಿನ ಕೃತಕ ದಾಹ ಹಿಂಗಲಿಲ್ಲ. ಹತಾಶರಾದ ಬ್ರಿಟಿಷ್ ರೈತರು ಮೂಳೆಗಳನ್ನ ಆಯ್ದುಕೊಳ್ಳಲು ನೆಪೋಲಿಯನ್ನನ ವಾಟರ್ಲೂ ಯುದ್ಧ ಭೂಮಿಗೆ ಲಗ್ಗೆ ಹಾಕಿದರು. ಈ ಘಟನೆ ಚರಿತ್ರೆಯಲ್ಲಿ ಪ್ರಥಮವಾಗಿ ಆಧುನಿಕ ಕೃಷಿ ವಿಜ್ಞಾನ ಬೆಳವಣಿಗೆಗೆ ದಾರಿ ಮಾಡಿಕೊಟ್ಟಿತು. ೧೮೩೭ರಲ್ಲಿ ಬ್ರಿಟಿಷ್ ಅಸೋಸಿಯೇಷನ್ ಫಾರ್ ಅಡ್ವಾನ್ಸ್‌ಮೆಂಟ್ ಆಫ್ ಸೈನ್ಸ್ ಸಂಸ್ಥೆ ಮಣ್ಣಿನ ಫಲವಂತಿಕೆ ಕುರಿತಂತೆ ಅಧ್ಯಯನ ಮಾಡುವ ಹೊಣೆಗಾರಿಕೆಯನ್ನ ರಸಾಯನಶಾಸ್ತ್ರಜ್ಞ ವಾನ್ ಜಸ್ಟಿಸ್ ಲೀಬಿಗ್‌ಗೆ ವಹಿಸಿಕೊಟ್ಟಿತು. ಸಸ್ಯಗಳು ಆರೋಗ್ಯಕರವಾಗಿ ಬೆಳೆಯಲು ಯಾವ್ಯಾವ ಪೋಷಕಾಂಶಗಳು ಬೇಕೆಂಬುದನ್ನು ನಿರ್ಧರಿಸಲು, ಒಣಗಿದ ಸಸ್ಯವನ್ನು ಸುಟ್ಟು ರಾಸಾಯನಿಕ ವಿಶ್ಲೇಷಣೆಗೆ ಒಳಪಡಿಸಿದ ಲೀಬಿಗ್ ಸಸ್ಯಗಳ ಬೆಳವಣಿಗೆಗೆ ನೈಟ್ರೊಜನ್, ಫಾಸ್ಫರಸ್ ಮತ್ತು ಪೊಟ್ಯಾಷ್ ಇವಿಷ್ಟು ಪೋಷಕಾಂಶಗಳು ಬೇಕು ಎಂದು ಹೇಳಿದ. ಲೀಬಿಗ್‌ನ ರಾಸಾಯನಿಕ ವಿಚಾರಗಳಿಂದ ಪ್ರಭಾವಿತನಾದ ಶ್ರೀಮಂತ ರೈತ ಮತ್ತು ಕೃಷಿ ತಜ್ಞ ಜೆ. ಡಬ್ಲ್ಯೂ. ಲೇನ್ಸ್ ಸೂಪರ್ ಫಾಸ್ಪೇಟ್ ಕಾರ್ಖಾನೆ ಶುರುಮಾಡಿಕೊಂಡ. ಆದರೆ ಕೊಂಚ ನಿಯತ್ತಿನ ವಿಜ್ಞಾನಿಯಾಗಿದ್ದ ಲೀಬಿಗ್‌ಗೆ ತಾನು ಮಾಡಿರುವ ವಿಶ್ಲೇಷಣೆ ತಪ್ಪು ಎನಿಸತೊಡಗಿತ್ತು. ಮುಂದೊಂದು ದಿನ ಲಂಡನ್ನಿನ ರಾಯಲ್ ಸೈಂಟಿಫಿಕ್ ಸೊಸೈಟಿಯಲ್ಲಿ ಮಾತನಾಡುತ್ತ ಲೀಬಿಗ್ ತನ್ನ ತಪ್ಪೊಪ್ಪಿಕೊಳ್ಳುತ್ತಾ 'ನಾನು ತಪ್ಪು ಮಾಡಿದ್ದೇನೆ, ದೇವರ ಸೃಷ್ಟಿಯನ್ನು ಮೀರಿದ್ದೇನೆ' ಎಂದು ತನ್ನ ಮಣ್ಣು ಫಲವಂತಿಕೆ ತತ್ವದ ಬಗ್ಗೆ ಧಾರ್ಮಿಕ ನುಡಿಗಟ್ಟುಗಳಲ್ಲಿ ಪಶ್ಚಾತ್ತಾಪ ಪಟ್ಟ. ದೇವರು ರಥ ಬಿಟ್ಟು ಇಳಿದುಹೋದಮೇಲೆ ಅವನ ಭಕ್ತರು ರಥವನ್ನೇ ಲಪಟಾಯಿಸಿದರು ಎಂಬುದೊಂದು ಮಾತು ಪ್ರಚಲಿತದಲ್ಲಿದೆ; ವಿಜ್ಞಾನಿ ಲೀಬಿಗ್ ತಪ್ಪೊಪ್ಪಿಕೊಂಡ, ಆದರೆ ಆತನ ತಪ್ಪು ವಿಚಾರಗಳ ಆಧಾರದ ಮೇಲೆ ಕಟ್ಟಲಾಗಿದ್ದ ಸೂಪರ್ ಫಾಸ್ಪೇಟ್ ಕಾರ್ಖಾನೆಗಳು ಉತ್ಪಾದನೆ ನಿಲ್ಲಿಸಲಿಲ್ಲ. ಮುಂದಿನ ದಿನಗಳಲ್ಲಿ ಮಣ್ಣಿನ ಫಲವಂತಿಕೆ ವಿಚಾರದಲ್ಲಿ ರಾಸಾಯನಿಕ ವಿಜ್ಞಾನಿ ಲೀಬಿಗ್, ರಾಜಕೀಯ ತತ್ವಜ್ಞಾನಿ ಕಾರ್ಲ್ ಮಾರ್ಕ್ಸ್, ರಿಕಾರ್ಡೊ ಮತ್ತು ಮಾಲ್ತೂಸ್ ಇವರುಗಳ ನಡುವೆ ವಾದ ವಿವಾದಗಳು ನಡೆದಿವೆ. ಮಾಲ್ತೂಸ್ ಈ ಬಿಕ್ಕಟ್ಟನ್ನ ಜನಸಂಖ್ಯಾ ಸ್ಫೋಟದ ಸಂದರ್ಭದಲ್ಲಿ ಕಂಡ. ಆದರೆ ಇದರ ಮೇಲೆ ಸೂಕ್ತ ವಿಶ್ಲೇಷಣೆ ಮಾಡಿದ್ದು ಕಾರ್ಲ್ ಮಾರ್ಕ್ಸ್; ಮಾರ್ಕ್ಸ್ ಇದನ್ನ ಕೃಷಿ ಭೂಮಿ ಮತ್ತು ಬೆಳವಣಿಗೆಯಾಗುತ್ತಿದ್ದ ನಗರಗಳ ನಡುವಿನ ಪರಸ್ಪರ ವಿರೋಧಿ ಗುಣವಾಗಿ ಕಂಡರು; ಸರಳವಾಗಿ ಹೇಳಬೇಕೆಂದರೆ ಕೃಷಿ ಮಣ್ಣಿನಲ್ಲಿ ಒಂದು ಟನ್ ಆಹಾರ ಪದಾರ್ಥ ಉತ್ಪತ್ತಿಯಾದರೆ ಮಣ್ಣಿಗೆ ಅದೇ ಪ್ರಮಾಣದ ಪೋಷಕಾಂಶಗಳ ನಷ್ಟವಾಗಿರುತ್ತದೆ.

ಮುಂದೆ ಮಣ್ಣು ವಿಜ್ಞಾನದ ಬಗ್ಗೆ ಸಂಶೋಧನೆ ನಡೆಸಿದವರು ರಷ್ಯನ್ನರು, ಆದರೆ ಅವರ ಸಂಶೋಧನೆ ಮಣ್ಣನ್ನು ರೂಪಿಸಿರುವ ಮಾತ್ರ ಪದಾರ್ಥಗಳನ್ನ ಕುರಿತದ್ದು; ಅಂದರೆ ಮಣ್ಣಿನ ವಿಕಾಸಕ್ಕೆ ಕಾರಣವಾದ ಮಣ್ಣಿನ ತಳಭಾಗದ ಶಿಲಾಪದರಗಳ ಮೇಲೆ ರಷ್ಯನ್ನರು ಪ್ರಮುಖ ಸಂಶೋಧನೆ ನಡೆಸಿದರು. ರಷ್ಯಾದ ದೊಕೊಚೊವ್ ಮಣ್ಣು ವಿಜ್ಞಾನದ ಬಗ್ಗೆ 'ಪೆಡಾಲಾಜಿ' ಎಂಬ ಶಬ್ದವನ್ನೇ ಚಲಾವಣೆಗೆ ತಂದರು.

೧೯೬೦ರ ವೇಳೆಗೆ ಡಾ|| ವಿಲಿಯಂ ಆಲ್‌ಬ್ರೆಕ್ಟ್ ಮೇಲ್ಮಣ್ಣಿನ ಬಗ್ಗೆ ತನ್ನ ಸಂಶೋಧನೆಯನ್ನು ಪ್ರಕಟಿಸುವ ತನಕ ಜಗತ್ತಿನ ಜೀವಕೋಟಿಯನ್ನ ಸಲಹುತ್ತಿರುವ ಮಣ್ಣಿನ ಬಗ್ಗೆ ಯಾವುದೇ ನಿಖರ ಮಾಹಿತಿಗಳಿರಲಿಲ್ಲ. ಈ ಹಿಂದೆ ತತ್ವಜ್ಞಾನಿ ಅರಿಸ್ಟಾಟಲ್ ಎರೆಹುಳುವನ್ನ ಭೂಮಿತಾಯಿಯ ಕರುಳು ಎಂದಿದ್ದ, ವಿಕಾಸವಾದಿ ವಿಜ್ಞಾನಿ ಚಾರ್ಲ್ಸ್ ಡಾರ್ವಿನ್ ಎರೆಹುಳುವನ್ನ 'ಕೆಳಸ್ತರದ ಜೀವಿಯ ಕಾಯಕ ವಿಕಾಸವಾದದ ಪ್ರಮುಖ ಕೊಂಡಿ' ಎಂದಿದ್ದ, ಹೀಗೆ ಎಲ್ಲವೂ ಬಿಡಿ ಬಿಡಿ ವಿಚಾರಗಳು. ಆದರೆ ಮಣ್ಣಿನ ಫಲವಂತಿಕೆ, ಮಣ್ಣಿನ ವಿವಿಧ ಜೀವಗಳಿಂದ ಜರುಗುವ ನೈಸರ್ಗಿಕ ಕ್ರಿಯೆ ಎಂದು ಗುರುತಿಸಿದ್ದು ಡಾ|| ವಿಲಿಯಂ ಆಲ್‌ಬ್ರೆಕ್ಟ್. ಸಂಕ್ಷಿಪ್ತವಾಗಿ ಆಲ್‌ಬ್ರೆಕ್ಟ್ ಹೇಳಿದ್ದು ಇಷ್ಟು: ಮಣ್ಣು ಒಂದು ಏಕರೂಪಿ (ಹೋಮೊಜೆನಿಸೆಡ್) ಕಚ್ಚಾ ಸಾಮಗ್ರಿಯಲ್ಲ, ಅನೇಕ ಜೀವಿಗಳು ನಿರಂತರವಾಗಿ ದುಡಿಯುವ ಮತ್ತು ತಿನ್ನುವ ಜೀವಮಂಡಲ, ಮಣ್ಣು ವಿವಿಧ ಜೀವಿಗಳ ಆಹಾರ ವರ್ತುಲ. ಅಂದರೆ ನಾವು ಗೊಬ್ಬರ ಹಾಕಬೇಕಿರುವುದು ಗಿಡಗಳಿಗಲ್ಲ ಮಣ್ಣಿನಲ್ಲಿರುವ ಜೀವಿಗಳ ಆಹಾರ ವರ್ತುಲಕ್ಕೆ.

ಆಲ್‌ಬ್ರೆಕ್ಟ್‌ನ ಈ ಮಣ್ಣು ಫಲವಂತಿಕೆ ತಾತ್ವಿಕತೆ ಹೊರಬಿದ್ದದ್ದು ೧೯೬೦ರ ವೇಳೆಗೆ, ಆದರೆ ೧೯೬೦-೬೫ರ ವೇಳೆಗಾಗಲೇ ಭಾರತದ ಕೃಷಿ ವಿಜ್ಞಾನಿಗಳು ರಾಸಾಯನಿಕ ಪ್ರಧಾನ ಪೋಷಕಾಂಶಗಳ ಬಳಕೆ ಬಗ್ಗೆ ಕೃಷಿ ವಿಸ್ತರಣಾ ನಿರ್ದೇಶನಾಲಯಗಳ ಮೂಲಕ ಮತ್ತು ಆಕಾಶವಾಣಿಯ ಮೂಲಕ ಪುಂಗಿ ಊದತೊಡಗಿದ್ದರು. ಭಾರತದ ಕೃಷಿ ವಿಜ್ಞಾನಿಗಳು ಊದಿದ ಪುಂಗಿಯಲ್ಲಿ ಬಂದದ್ದು ಲೀಬಿಗ್‌ನ ಪ್ರಧಾನ ಪೋಷಕಾಂಶ ವಿಚಾರ. ಆದರೆ ಮಣ್ಣು ಒಂದು ಜೀವಮಂಡಲ ಎಂಬ ಆಲ್‌ಬ್ರೆಕ್ಟ್‌ನ ಕೊಳಲು ನಾದವಲ್ಲ. 'ತನ್ನ ಸಂಶೋಧನೆ ತಪ್ಪು ನಾನು ದೇವರ ಸೃಷ್ಟಿಯನ್ನ ಮೀರಿದ್ದೇನೆ' ಎಂದು ಲಂಡನ್ನಿನ ರಾಯಲ್ ಸೈಂಟಿಫಿಕ್ ಸೊಸೈಟಿ ಮುಂದೆ ಲೀಬಿಗ್ ತಪ್ಪೊಪ್ಪಿಕೊಂಡಿದ್ದನೋ ಅದೇ ವಿಚಾರಕ್ಕೆ ಭಾರತದ ಕೃಷಿ ವಿಜ್ಞಾನಿಗಳು ಗಂಟುಬಿದ್ದಿದ್ದರು ; ಈ ಮಹಾಶಯರು ಆಲ್‌ಬ್ರೆಕ್ಟ್‌ನ ಮಣ್ಣು ಫಲವಂತಿಕೆ ವಿಚಾರಗಳ ಥೀಸಿಸ್ಸನ್ನ ಮುಟ್ಟಿನೋಡುವ ಗೋಜಿಗೆ ಕೂಡ ಹೋಗಿಲ್ಲ.

ದೇವರು ರಥ ಬಿಟ್ಟು ಇಳಿದು ಹೋದ ಮೇಲೆ ಭಕ್ತರ ಗ್ಯಾಂಗು ರಥವನ್ನೇ ಲಪಟಾಯಿಸಿತು ಅಂದಿದ್ದೆನಲ್ಲಾ – ಆ ಮಾತು ಭಾರತದ ಕೃಷಿ ವಿಜ್ಞಾನಿಗಳಿಗೆ ಬಲು ಚೆನ್ನಾಗಿ ಒಪ್ಪುತ್ತದೆ. ಮಣ್ಣಿಗೆ ಪ್ರಧಾನ ರಾಸಾಯನಿಕ ಪೋಷಕಾಂಶಗಳನ್ನ ಸುರಿದು ಫಸಲು ಬೆಳೆದುಕೊಳ್ಳುವ ಮಾದರಿ ರಸಾಯನಶಾಸ್ತ್ರಜ್ಞ ಲೀಬಿಗ್‌ನ ಸಂಶೋಧನೆ; ಅದು ಮಣ್ಣನ್ನು ಒಂದು ಏಕರೂಪಿ ಕಚ್ಚಾ ಸಾಮಗ್ರಿ ಎಂದು ಹೀಗಳೆದಿದೆ, ಆದರೆ ನಿಯತ್ತಿನ ವಿಜ್ಞಾನಿ ಲೀಬಿಗ್ ತಾನು ಮಾಡಿದ ತಪ್ಪನ್ನ ಒಪ್ಪಿಕೊಂಡಿದ್ದಾನೆ. ಆದರೆ ಭಾರತೀಯ ಕೃಷಿ ವಿಜ್ಞಾನಿಗಳು ಪ್ರಧಾನ ರಾಸಾಯನಿಕ ಪೋಷಕಾಂಶಗಳ ಬಳಕೆಯನ್ನು ಭಾರತದಲ್ಲಿ ಪ್ರಚುರಪಡಿಸಲು ಪ್ರಾರಂಭಿಸಿದ ವೇಳೆಗಾಗಲೇ ಆಲ್‌ಬ್ರೆಕ್ಟರ ಮಣ್ಣು ವಿಜ್ಞಾನದ ಥೀಸಿಸ್ಸು ಚರ್ಚೆಯಾಗುತ್ತಿತ್ತು. ಭಾರತದ ವಿಜ್ಞಾನಿಗಳು ಯಾಕೆ ಅದನ್ನ ಗಮನಿಸಲಿಲ್ಲ? ಎರಡನೆಯ ಮಹಾಯುದ್ಧ ಮುಗಿದಿತ್ತು, ಬಂಗಾಳದ ಭೀಕರ ಕ್ಷಾಮ ಭಾರತವನ್ನ ಕಂಗೆಡಿಸಿತ್ತು ಆಹಾರ ಉತ್ಪಾದನೆಗೆ ಒತ್ತುಕೊಡಬೇಕಾಗಿತ್ತು ನಿಜ, ಆದರೆ ನಮ್ಮ ಕೃಷಿ ವಿಜ್ಞಾನಿ ಎಂ. ಎಸ್. ಸ್ವಾಮಿನಾಥನ್ನರ ಈ ಮಾತು ಮಾಲ್ಥೂಸಿಯನ್‌ನ ಜನಸಂಖ್ಯಾ ಸ್ಫೋಟದ ವಿಚಾರಗಳಿಂದ ಪ್ರಭಾವಿತವಾಗಿರುವಂತಿದೆ. ಮಣ್ಣಿನ ಫಲವಂತಿಕೆ ವಿಚಾರದಲ್ಲಿ ಮತ್ತೊಂದು ಪ್ರಮುಖ ಅಂಶವನ್ನಿಲ್ಲಿ ಕಾಣಿಸಬೇಕು. ಮಣ್ಣಿನಲ್ಲಿ ಯಾವುದೇ ಫಸಲು ಬೆಳವಣಿಗೆಯಾಗಿ, ಆರೋಗ್ಯಕರವಾಗಿ ಹೂಬಿಟ್ಟು ಫಲಕಚ್ಚಿ ನಿಲ್ಲಬೇಕೆಂದರೆ ಮಣ್ಣಿನಲ್ಲಿ ೨೧ಕ್ಕಿಂತ ಹೆಚ್ಚು ಪೋಷಕಾಂಶಗಳು ಬೇಕು, ಇವುಗಳ ಪೈಕಿ ಲೀಬಿಗ್ ಗುರುತಿಸಿದ್ದು ಮೂರು ಪ್ರಧಾನ ಪೋಷಕಾಂಶಗಳನ್ನ ಮಾತ್ರ. ಉಳಿದ ೪ ಮಾಧ್ಯಮಿಕ ಪೋಷಕಾಂಶಗಳು ಮತ್ತು ಇತರೆ ಖನಿಜ ಪೋಷಕಾಂಶಗಳು, ಧಾತುಗಳು ಲೀಬಿಗ್‌ನ ಸಂಶೋಧನೆಗೆ ದಕ್ಕಿರಲಿಲ್ಲ. ಮಣ್ಣು ವಿಜ್ಞಾನದ ಅಚ್ಚರಿಯ ಅಂಶಗಳೆಂದರೆ : ಸಸ್ಯಗಳು ಬೆಳೆಯಲು ಯಾವ್ಯಾವ ಪೋಷಕಾಂಶಗಳ ಅಗತ್ಯವಿದೆಯೋ ಆ ಎಲ್ಲ ಪೋಷಕಾಂಶಗಳು ಮಾನವ ಶರೀರಕ್ಕೂ ಅಗತ್ಯವಿದೆ. ಭಾರತ ಸರ್ಕಾರ ಪಂಜಾಬ್‌ನಿಂದ ಮುಂಬಯಿಗೆ ವಿಶೇಷ ಕ್ಯಾನ್ಸರ್ ರೈಲು ಬಿಡುತ್ತಿದೆ ಯಾಕೆಂದರೆ



ಫಸಲನ್ನು ಸಲಹುವ, ಈ ಮೂಲಕ ಮಾನವ ಶರೀರವನ್ನ ಸದೃಢಗೊಳಿಸುವ ಯಾವ ಪೋಷಕಾಂಶಗಳಾಗಲೀ, ವಿವಿಧ ಬಗೆಯ ಧಾತುಗಳಾಗಲೀ ಪಂಜಾಬಿನ ಮಣ್ಣಿನಲ್ಲಿ ಉಳಿದಿಲ್ಲ, ಭಾರತದ ಶೇ. ೬೦ರಷ್ಟು ಮಳೆ ಆಶ್ರಿತ ಭೂಮಿ ಬರಡಾಗಲು, ಅಚ್ಚುಕಟ್ಟು ಪ್ರದೇಶಗಳಲ್ಲಿ ಕಾಣಿಸಿಕೊಳ್ಳುತ್ತಿರುವ ಕ್ಷಾರೀಯತೆಗಳಿಗೂ ಇದೇ ಪ್ರಮುಖ ಕಾರಣ.

* * *

ಕೃಷಿಗೆ ಸಂಬಂಧಿಸಿದ ಒಂದು ಪ್ರಮುಖ ಆಚರಣೆಯನ್ನ ಕನ್ನಡ ಲೇಖಕರಾದ ಡಾ|| ಚಂದ್ರಶೇಖರ ಕಂಬಾರರು ದಾಖಲಿಸಿದ್ದಾರೆ, ಅದು ಕೊಂತಿ ಪೂಜೆ. ಕೊಂತಿ ಪೂಜೆ ಹ್ಯಾಗೆ ಸಾಂಸ್ಕೃತಿಕವೋ ಹಾಗೇ ಅನೇಕ ವೈಜ್ಞಾನಿಕ ಆಯಾಮಗಳನ್ನ ಕಾಣಿಸುತ್ತದೆ. ಹಳೆ ಮೈಸೂರು ಪ್ರಾಂತದಲ್ಲಿ ದ್ವಿದಳ ಧಾನ್ಯಗಳು, ದವಸ, ಎಣ್ಣೆ ಬೀಜಗಳು ಮತ್ತು ಜಾನುವಾರು ಮೇವುಗಳನ್ನ ಮಿಶ್ರ ಬೆಳೆಯಾಗಿ ಬೆಳೆಯುವ ಅಕ್ಕಡಿಸಾಲು ಪದ್ಧತಿ ಪಾರಂಪರಿಕವಾಗಿ ಅಸ್ತಿತ್ವದಲ್ಲಿತ್ತು; ಸರಿಸುಮಾರು ಇದೇ ಪದ್ಧತಿ ಉತ್ತರ ಕರ್ನಾಟಕ ಪ್ರದೇಶಗಳಲ್ಲೂ ಕಾಣಸಿಗುತ್ತದೆ. ಅಕ್ಕಡಿಸಾಲು ಪದ್ಧತಿಯಲ್ಲಿ ಬಿತ್ತನೆಯಾಗುವ ತೊಗರಿ, ಅವರೆ, ಹಲಸಂದೆ ಸಸ್ಯಗಳು ವಾತಾವರಣದಲ್ಲಿ ಹೇರಳವಾಗಿ ಸಿಗುವ ಅಮೋನಿಯಂ ಅನಿಲವನ್ನ ಹೀರಿಕೊಂಡು ಅದನ್ನ ಸಾರಜನಕವಾಗಿ ಪರಿವರ್ತಿಸುತ್ತವೆ; ಇವುಗಳ ಸಂಗಾತಿ ಸಸ್ಯಗಳಾಗಿ ಬೆಳೆಯುತ್ತಿರುವ ರಾಗಿ ಮತ್ತು ಜೋಳಗಳಿಗೆ ವಿಪರೀತ ಪ್ರಮಾಣದ ಸಾರಜನಕದ ಅವಶ್ಯಕತೆಯಿದೆ. ಯಾವ ಕೃಷಿ ವಿಶ್ವವಿದ್ಯಾಲಯವೂ ಇಲ್ಲದ ಕಾಲದಲ್ಲಿ, ಲೀಬಿಗ್ ತನ್ನ ಸಂಶೋಧನೆಯನ್ನು ಪ್ರಕಟಿಸುವುದಕ್ಕೂ ಮೊದಲೇ ಈ ಅಕ್ಕಡಿಸಾಲು ಪದ್ಧತಿ ರೂಪುಗೊಂಡಿದೆ. ಇದೇ ರೀತಿ ಅಮೆರಿಕದ ಇರುಕ್ವೋಯಿಸ್ ಇಂಡಿಯನ್ ಮೂಲ ನಿವಾಸಿ ಜನಾಂಗದ ಬೆಟ್ಟ ಕಾಡುಗಳಲ್ಲಿ ಅಕ್ಕತಂಗಿಯರ ಪದ್ಧತಿ ಎಂಬುದೊಂದು ಸಂಗಾತಿ ಸಸ್ಯ, ಬೆಳೆ ಪದ್ಧತಿ ಅಸ್ತಿತ್ವದಲ್ಲಿದೆ. ಅಕ್ಕಡಿ ಸಾಲು ಪದ್ಧತಿಯಲ್ಲಿ ವಿವಿಧ ಜಾತಿಯ ಸಸ್ಯಗಳು ಭೂಮಿಯ ವಿವಿಧ ಆಳಗಳಿಗೆ ಬೇರು ಬಿಟ್ಟು ವಿವಿಧ ಪೋಷಕಾಂಶಗಳನ್ನ ಹೀರಿಕೊಳ್ಳುತ್ತವೆ; ಎಲೆ ಉದುರಿಸುವ ಮೂಲಕ ಆ ಪೋಷಕಾಂಶಗಳು ಮೇಲ್ಮಣ್ಣಿಗೆ ಸೇರುತ್ತವೆ; ಹೀಗೆ ಮಣ್ಣಿನ ವಿವಿಧ ಜೀವಗಳ ವರ್ತುಲದ ಆಹಾರ ಸರಪಳಿಯನ್ನ ಪೋಷಿಸಿದಂತಾಗುತ್ತದೆ. ಈ ಪದ್ಧತಿ ಬಗ್ಗೆ ಅಧ್ಯಯನ ನಡೆಸಿದ ಸ್ವೀಡನ್ನಿನ ಕೃಷಿ ಶಾಸ್ತ್ರಜ್ಞೆ ಡಾ|| ಬ್ರಿಜಿಟಾ ಇದು ಭಾರತೀಯ ಪಾರಂಪರಿಕ ಕೃಷಿಯ ಅತ್ಯುತ್ತಮ ಉದಾಹರಣೆ ಎಂದಿದ್ದಾರೆ. ಭಾರತದ ಕೃಷಿ ಪದ್ಧತಿಗಳನ್ನು ಸುಧಾರಿಸಲು ಬಂದ ಸರ್. ಆಲ್ಬರ್ಟ್ ಹೊವಾರ್ಡ್ ಇಲ್ಲಿನ ಕೃಷಿ ಪದ್ಧತಿಗಳ ಬಗ್ಗೆ ಸುದೀರ್ಘ ಅಧ್ಯಯನ ನಡೆಸಿ 'ಭಾರತದ ಕೃಷಿಯಲ್ಲಿ ನಾವು ಮಾಡಬೇಕಾಗಿರುವ ಸುಧಾರಣೆ ಯಾವುದೂ ಇಲ್ಲ' ಎಂದು ವಸಾಹತುಶಾಹಿ ಸರ್ಕಾರಕ್ಕೆ ಪತ್ರ ಬರೆಯುತ್ತಾರೆ. ಆದರೆ ದುರಂತ ನೋಡಿ, ದೇವರು ಬಿಟ್ಟುಹೋದ ರಥ ಲಪಟಾಯಿಸಿದ ಭಕ್ತರ ಗ್ಯಾಂಗು ಇದ್ಯಾವುದನ್ನೂ ಗಮನಿಸಿಲ್ಲ.

ಮಣ್ಣಿಗೆ ಸುರಿಯುವ ರಾಸಾಯನಿಕ ಪ್ರಧಾನ ಪೋಷಕಾಂಶಗಳನ್ನ ಸಸ್ಯಗಳು ಹೀರಿಕೊಳ್ಳಲು ಒಂದು ಮಾಧ್ಯಮವಾಗಿ ಮಣ್ಣಿನಲ್ಲಿ ಸಾಕಷ್ಟು ಪ್ರಮಾಣದ ಹ್ಯೂಮಿಕ್ ಆಮ್ಲವಿರಬೇಕು, ಈ ಹ್ಯೂಮಿಕ್ ಆಮ್ಲ ಉತ್ಪಾದನೆಯಾಗುವುದು ಭೂಮಿಯ

ಜೇಡಿಮಣ್ಣು ಮತ್ತು ಕಳಿಯುವ ಸಾವಯವ ಪದಾರ್ಥಗಳ ಸುಸೂಕ್ಷ್ಮ ಹೆಣಿಗೆಯಿಂದ. ಆದರೆ ಭಾರತದಲ್ಲಿ ಉತ್ಪತ್ತಿಯಾಗುತ್ತಿರುವ ಸಗಣಿ ಪೈಕಿ ಶೇ. ೬೦ರಷ್ಟು ಉರುವಲಿಗೆ ಖರ್ಚಾಗುತ್ತಿದೆ. ಉಳಿದ ಶೇ. ೪೦ರಷ್ಟು ಸಗಣಿ ಬಿಸಿಲಿಗೆ ಒಣಗಿ, ಮಳೆಯಲ್ಲಿ ನೆನೆದು ಉಳಿಯುವುದು ಕಳಪೆ ಗುಣಮಟ್ಟದ ಲಿಗ್ನೊ ಪ್ರೊಟೀನ್ ಮಾತ್ರ. ಜಾಗತಿಕವಾಗಿ ಕಾರ್ಖಾನೆಗಳು ಉತ್ಪತ್ತಿ ಮಾಡುತ್ತಿರುವ ನೈಟ್ರೊಜನ್‌ನ ಪ್ರಮಾಣ ವರ್ಷಕ್ಕೆ ೧೦೦ ಮಿಲಿಯನ್ ಟನ್‌ಗಳು, ಜಾನುವಾರುಗಳ ಸಗಣಿಯಿಂದ ಸಿಗುವ ನೈಟ್ರೊಜನ್ನಿನ ಪ್ರಮಾಣ ವರ್ಷಕ್ಕೆ ೧೪೦ ಮಿಲಿಯನ್ ಟನ್ನುಗಳು. ಆದರೆ ಅಕ್ಕಡಿಸಾಲು ಪದ್ಧತಿಯಲ್ಲಿ ಬೆಳೆಯಲಾಗುವ ದ್ವಿದಳ ಧಾನ್ಯಗಳು ಮತ್ತು ಇತರೆ ಸಸ್ಯಗಳು ವರ್ಷವೊಂದಕ್ಕೆ ನೈಸರ್ಗಿಕವಾಗಿ ೧೬೦ ಮಿಲಿಯನ್ ಟನ್ ಸಾರಜನಕ ಉತ್ಪಾದನೆ ಮಾಡುತ್ತವೆ.

೧೯೭೦ರ ದಶಕದಲ್ಲಿ ಭಾರತದ ಕೃಷಿ ವಿಜ್ಞಾನಿಗಳು ಹೇಳುತ್ತಿದ್ದರು. ರಾಗಿ ಜೋಳಗಳ ಜೊತೆ ಅವರೆ, ಹಲಸಂದೆ, ತೊಗರಿ ಬಿತ್ತಬೇಡಿ ಇದರಿಂದ ಫಸಲಿನ ಎಫಿಷಿಯೆನ್ಸಿ ಕಡಿಮೆಯಾಗುತ್ತದೆ ಎಂದು. ಇತ್ತ ಭಾರತೀಯವೂ ಅಲ್ಲ, ಅತ್ತ ಪಾಶ್ಚಿಮಾತ್ಯವೂ ಅಲ್ಲ, ಇದ್ಯಾವ ಸೀಮೆಯ ಕೃಷಿ ವಿಜ್ಞಾನ? ಇದೇ ಆದದ್ದು: ೧೯೬೦-೬೫ರ ವೇಳೆಯಲ್ಲಿ ಹಸಿರು ಕ್ರಾಂತಿ ಪ್ರಾರಂಭವಾದ ವೇಳೆಗೆ ಭಾರತದಲ್ಲಿ ಚಾಲ್ತಿಯಲ್ಲಿ ಇದ್ದದ್ದು ಇಂತಹ ಒಂದು ಪರಕಿ ಕೃಷಿ ವಿಜ್ಞಾನ ಅಥವಾ ಅಮೆರಿಕದಲ್ಲಿ ಚೋಮ್‌ಸ್ಕಿಯವರಂತಹ ವಿಜ್ಞಾನಿಗಳ ಪ್ರಕಾರ ವಿಜ್ಞಾನ ದಿಗ್ಬಂಧನದಲ್ಲಿತ್ತು; 'ಹೌ ದ ಅದರ್ ಹಾಲ್ಫ್ ಡೈಸ್' ಪುಸ್ತಕದ ಲೇಖಕಿ ಸೂಸನ್ ಜಾರ್ಜ್ ಇದನ್ನ ಮತ್ತಷ್ಟು ನಿಷ್ಠುರ ಮಾತುಗಳಲ್ಲಿ ಹೇಳುತ್ತಾರೆ : ಭಾರತದ ಕೃಷಿ ವಿಜ್ಞಾನಿಗಳು ರಾಕ್‌ಫೆಲ್ಲರ್ ಪ್ರಾಯೋಜಿತ ಅಂತರರಾಷ್ಟ್ರೀಯ ಸೆಮಿನಾರುಗಳಲ್ಲಿ ಓಂ ಪ್ರಥಮವಾಗಿ ಸೂಟು ಬೂಟು ತೊಟ್ಟು ಅಮೇರಿಕನ್ ಅಧಿಕಾರಿಗಳ ಮುಂದೆ ಸೊಂಟ ನುಲಿಯುತ್ತಿದ್ದರು; ಅವರದೊಂದು ಕೃಪಾಕಟಾಕ್ಷಕ್ಕಾಗಿ ಪದೇ ಪದೇ ಟೈ ಸರಿಮಾಡಿಕೊಳ್ಳುತ್ತಿದ್ದರು.

ಮಣ್ಣು ವಿವಿಧ ಜೀವ ಪ್ರಭೇದಗಳ, ವಿವಿಧ ಹಂತಗಳ ಕ್ರಿಯಾತ್ಮಕ ಆಹಾರ ಸರಪಳಿ ; ಈ ಸರಪಳಿಯ ಕೊನೆಯ ಕೊಂಡಿ ಮನುಷ್ಯ. ಮಣ್ಣು ಏಕರೂಪಿ ಕಚ್ಚಾ ಸರಕಲ್ಲ, ವಿವಿಧ ಜೀವವ್ಯವಸ್ಥೆಗಳ, ಡಾರ್ವಿನ್ ಹೇಳುವಂತೆ ಕೆಳಸ್ತರದ ಜೀವಿಗಳ ಸುಸಂಘಟಿತ



ಆಹಾರ ಸರಪಳಿ ಮತ್ತು ಅರಿಸ್ಟಾಟಲ್ ಹೇಳುವಂತೆ ಅದು ಭೂಮಿತಾಯಿಯ ಕರುಳು; ಆಲ್‌ಬ್ರೆಕ್ಟ್ ಹೇಳುವಂತೆ 'ಇಟ್ಸ್ ಹೆಟರೋಜೀನಿಯಸ್ ಲಿವಿಂಗ್ ಸಿಸ್ಟಮ್' ಅಮೆರಿಕ ಸಂಯುಕ್ತ ಸಂಸ್ಥಾನ, ಇಥಾಕಾ ಸ್ಟೇಟ್ ಯೂನಿವರ್ಸಿಟಿಯ ಪ್ರೊಫೆಸರ್ ಜೇನ್ ಮೌಂಟ್ ಪ್ಲೆಸೆಂಟ್ ಅಲ್ಲಿನ ಕೃಷಿ ಇಲಾಖೆಗೆ ಒಂದು ಎಚ್ಚರಿಕೆ ಕೊಟ್ಟರು : ಅಮೆರಿಕದ ಮಣ್ಣಿನಲ್ಲಿ ಕಾಳು, ದವಸ ಬೆಳೆಯುವುದೇ ನಿಮ್ಮ ಇಚ್ಛೆಯಾಗಿದ್ದರೆ ನೀವು ಅಮೆರಿಕದ ಪಾರಂಪರಿಕ ಕೃಷಿ ಮಾದರಿಗಳನ್ನ ವೈಜ್ಞಾನಿಕ ಮೌಲ್ಯಮಾಪನಕ್ಕೊಳಪಡಿಸಬೇಕು. ಅಮೆರಿಕ ಸರ್ಕಾರ ಜೇನ್‌ರ ಮಾತು ಕೇಳಿಸಿಕೊಳ್ಳುವುದು ಸಾಧ್ಯವಿರಲಿಲ್ಲ, ಯಾಕೆಂದರೆ ಇಂದು ಕೃಷಿಯಲ್ಲಿ ಬಳಕೆಯಾಗುತ್ತಿರುವ ಅನೇಕ ಕೀಟನಾಶಕ, ಕಳೆನಾಶಕ ಮತ್ತು ಶಿಲೀಂಧ್ರನಾಶಕಗಳು ಅಮೆರಿಕ ಹೂಡಿದ ಯುದ್ಧಗಳಲ್ಲಿ ಮಿಕ್ಕು ಹೋಗಿರುವ ಯುದ್ಧ ರಾಸಾಯನಿಕಗಳು; ಅಷ್ಟೂ ಅಲ್ಲದೇ ಜೇನ್ ಬೆಟ್ಟಗಾಡಿನ ಹೆಂಗಸು. ದೇವರಿಂದ ಕದ್ದ ರಥದಲ್ಲಿ ಕುಳಿತ ಅಂಥ ಭಕ್ತರ ಗ್ಯಾಂಗಿನಿಂದ ಭಾರತದ ಹಸಿರು ಕ್ರಾಂತಿ ಪ್ರಾರಂಭದಲ್ಲೇ ಹೈಜಾಕಾಗಿ ಹೋಯಿತು. ಅತ್ಯುತ್ತಮ ಪಾರಂಪರಿಕ ಕೃಷಿ ಮಾದರಿಗಳ ಜೊತೆಗೆ ಮಣ್ಣಿನ ಮೂಲ ಭೌತಿಕ ಸಂರಚನೆ ಮತ್ತು ಜೀವಮಂಡಲದ ಹೆಣಿಗೆಯನ್ನೇ ನಾಶಮಾಡಿತು. ಮಗುವನ್ನ ಬಟ್ಟೆಯ ತೊಟ್ಟಿಲಿಗೆ ಹಾಕಿ, ಮರದ ರೆಂಬೆಗೆ ತೂಗುಹಾಕಿ, ಮರಳಿಬರುವ ಬೇಟೆಗಾರ ಗಂಡನಿಗಾಗಿ ಕಾಯುತ್ತಾ ಯಾವ ಗಿಡ, ಯಾವ ಗಿಡದ ಸಾಂಗತ್ಯದಲ್ಲಿ ಚೆನ್ನಾಗಿ ಬೆಳೆಯಬಲ್ಲುದು ಎಂಬ ಬೆಟ್ಟಗಾಡಿನ ಹೆಂಗಸಿನ ಗ್ರಹಿಕೆ ಮತ್ತು ಅರಿವುಗಳು ಮಾತ್ರ ಭಾರತದ ಕೃಷಿ ವಿಜ್ಞಾನಕ್ಕೆ ಮುಂದಿನ ದಾರಿ ತೋರಬಲ್ಲವು.

* * *

ಭಾರತದ ಹಳ್ಳಿಗಳು ಕೃಷಿ ಮತ್ತು ಕೃಷಿ ಆಧಾರಿತ ಸ್ಥಳೀಕ ಉದ್ದಿಮೆ ಮತ್ತು ಕುಶಲ ಕಸುಬುಗಳ ಹೆಟರೋಜೀನಿಯಸ್ ಸೋಷಿಯಲ್ ಸೆಟ್ಟಿಂಗ್; ಈ ನೆಲಾಧಾರಿತ ಕಸುಬು ಮತ್ತು ಅರಿವುಗಳ ಸಮಾಜವನ್ನ ಸಮಾಜಶಾಸ್ತ್ರಜ್ಞ ರಾಮ್‌ಗುಹಾ ಈಕೊ ಸಿಸ್ಟಮ್ ಸೊಸೈಟೀಸ್ ಅಂತಾ ಕರೆದಿದ್ದಾರೆ. ಅಂದರೆ ಇಲ್ಲಿನ ಬೆಟ್ಟ, ಗುಡ್ಡ, ಹೊಲ, ಗದ್ದೆ, ಹಳ್ಳಿ ಕೆರೆಗಳನ್ನ ರಕ್ಷಿಸಿಕೊಳ್ಳಬೇಕಾದ ಆತ್ಯಂತಿಕ ಪೋಷಕರು ಕೃಷಿ ಪರಿಸರ ವ್ಯವಸ್ಥೆಯ ಪೋಷಕರು ಸರ್ಕಾರ ಸ್ಥಾಪಿಸಿದ ರೈತ ಸಂತೆಗಳಲ್ಲಿ ತರಕಾರಿ, ದವಸ ಮಾರುತ್ತ ಕುಳಿತು ಕೊಳ್ಳುವುದು ವಾಸ್ತವಿಕವಲ್ಲ, ಇದಕ್ಕಾಗಿ ಅಂತಹ ಸರ್ಕಾರಿ ಸ್ವಾಮ್ಯದ ಎಪಿಎಂಸಿ ಹಾಪ್‌ಕಾಮ್ಸ್ ಸಂಸ್ಥೆಗಳಿವೆ. ಈ ಸಂಸ್ಥೆಗಳಲ್ಲಿರುವ ಕಳಪೆ ಅಧಿಕಾರಿಗಳು, ತೂಕಗಳ್ಳರು, ಹಫ್ತಾದಾರರು ಕೃಷಿಕರ ಬದುಕನ್ನು ಹೀಗಳೆದು ನಿಂದಿಸಿದರೆ ಅದು ನಿಸರ್ಗದ ಆತ್ಯಂತಿಕ ಪೋಷಕರನ್ನ ನಿಂದಿಸಿದಂತೆ. ಕೃಷಿ ತನ್ನ ಉಳಿವಿಗಾಗಿ ಸ್ವಂತ ಚಿಂತನೆ, ಕ್ರಿಯಾಶೀಲತೆ ಮತ್ತು ಕೃಷಿ ಹುಟ್ಟುವಳಿಗಳು ನೇರವಾಗಿ ಗ್ರಾಹಕರಿಗೆ ತಲುಪುವಂತೆ ಮತ್ತು ಅದರ ಪ್ರತಿಫಲಗಳು ರೈತರಿಗೆ ನ್ಯಾಯಯುತವಾಗಿ ಕೈಸೇರುವಂತೆ ತನ್ನ ರೂಪಾವಳಿಯಲ್ಲಿ ಬದಲಾವಣೆ ತಂದುಕೊಳ್ಳಬೇಕು. ದೇವರು ಇಳಿದು ಹೋದ ಮೇಲೂ ಕೃಷಿ ವಿಜ್ಞಾನಿಗಳು, ಕೃಷಿ ಅರ್ಥಶಾಸ್ತ್ರಜ್ಞರು ಕದ್ದ ರಥದಿಂದ ಇಳಿದು ಬಂದು ಈ ಭೂಮಿಗೆ ಮುತ್ತಿಡಬೇಕು. ಹೀಗಾಗದಿದ್ದರೆ ಈಗಾಗಲೇ ಪರಕಿಯಾಗಿರುವ ಕೃಷಿ ವಿಜ್ಞಾನ ಅಮೆರಿಕದ ಕೆಟ್ಟ ದಾರಿ ಹಿಡಿಯುತ್ತದೆ.


**ಎಲ್. ಸಿ. ನಾಗರಾಜ್**
'ಕಾಡು ಮನೆ', ಮಂಟನ ಕುರ್ಚಿ, ಸೊಂಡೇಕೊಪ್ಪ ಅಂಚೆ
ನೆಲಮಂಗಲ ತಾಲೂಕು ಬೆಂಗಳೂರು ಗ್ರಾಮೀಣ - ೫೬೨ ೧೩೦

# ಬ್ಯಾಂಕ್ ಕ್ಷೇತ್ರ–ಒಂದು ಪಕ್ಷಿನೋಟ

**ಕೊಳಲೂರು ರಾಧೇಯ**

ನಮ್ಮ ರಾಷ್ಟ್ರದ ಬ್ಯಾಂಕ್ ವ್ಯವಸ್ಥೆ ಸಂಕ್ರಮಣದಲ್ಲಿದೆ. ನಿಘಂಟನ್ನು ತಡಕಾಡಿದರೆ, 'ಸಂಕ್ರಮಣ'ಕ್ಕೆ : (೧) ಒಟ್ಟಿಗೆ ಹೋಗುವಿಕೆ - ಚಲಿಸುವಿಕೆ (೨) ಮುನ್ನಡೆ, ಪ್ರಗತಿ (೩) ವ್ಯತ್ಯಾಸಗೊಳ್ಳುತ್ತಿರುವ ಸಮಯ, ಸಂಧಿಕಾಲ ಇತ್ಯಾದಿ ಅರ್ಥಗಳಿರುವುದು ಕಂಡುಬರುತ್ತವೆ. 'ಸಂಕ್ರಮಣ'ದ ಜೊತೆ 'ಸಂಕಟ' ಎಂಬ ಪದವನ್ನು ಸೇರಿಸಿದರೆ, ಸಿನಿಕತನದ ಪ್ರತಿಕ್ರಿಯೆಯಾಗುವುದಿಲ್ಲ! ಕಳೆದ ಸುಮಾರು ಎರಡು ದಶಕಗಳಿಂದ ಭಾರತದ ಅನೇಕ ಕ್ಷೇತ್ರಗಳು ಸುಧಾರಣೆಗಳ ರಾಜ್‌ಗೆ ಪಕ್ಕಾಗಿರುವ ಹಾಗೆ, ಬ್ಯಾಂಕ್ ಕ್ಷೇತ್ರವೂ ಈಡಾಗಿದೆ. ಈ ಅವಧಿಯಲ್ಲಿ ಬ್ಯಾಂಕ್ ಕ್ಷೇತ್ರ ಸಕಾರಾತ್ಮಕ ಮತ್ತು ನಕಾರಾತ್ಮಕ ಬೆಳವಣಿಗೆಗಳನ್ನು ಕಂಡಿದೆ.

ಗಣಕಯಂತ್ರದ ಅನುಷ್ಠಾನದಿಂದ ಗ್ರಾಹಕರಿಗೆ ಅನೇಕ ಸೌಲಭ್ಯಗಳು ಲಭ್ಯವಾಗಿವೆ. ಒಂದು ಬ್ಯಾಂಕ್‌ನಿಂದ ಇನ್ನೊಂದಕ್ಕೆ ಗ್ರಾಹಕರು ಹಣವನ್ನು ಪ್ರಸ್ತುತ ಕ್ಷಿಪ್ರವಾಗಿ, ಕಡಿಮೆ ಸೇವಾಶುಲ್ಕದ ದರದಲ್ಲಿ ರವಾನಿಸಬಹುದಾಗಿದೆ. ವಿವಿಧ ತೆರಿಗೆಗಳನ್ನು ಸುಲಭವಾಗಿ ಪಾವತಿಸಬಹುದು. ಸರ್ಕಾರದ ಅನೇಕ ಯೋಜನೆಗಳು, ಬಡವರಿಗೆ ಅತ್ಯಂತ ಕಡಿಮೆ ಬಡ್ಡಿಯ ಸಾಲಗಳು, ಹಿರಿಯ ನಾಗರಿಕರಿಗೆ ಹಲವು ಸೌಲಭ್ಯಗಳು, ಪಿಂಚಣಿ ವಿತರಣೆ, ಆರ್ಥಿಕ ಸೇರ್ಪಡೆಯ ಯೋಜನೆಯಡಿ ಗ್ರಾಮೀಣ ಪ್ರದೇಶಗಳಲ್ಲಿ ಶಾಖಾ ವಿಸ್ತರಣೆ – ಮುಂತಾದುವು ಜಾರಿಯಾಗುತ್ತಿರುವುದು ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಂದ (ಹೊಸ ತಲೆಮಾರಿನ ಬ್ಯಾಂಕುಗಳು ಇವುಗಳಿಂದ ವಿಮುಖವಾಗಿವೆ ಎಂದರೆ ತಪ್ಪಾಗುವುದಿಲ್ಲ) ಕೊಳ್ಳುಬಾಕತನ ಹೆಚ್ಚುತ್ತಿರುವ ಸಂದರ್ಭವು ನಮ್ಮ ರಾಷ್ಟ್ರದ ಮಧ್ಯಮವರ್ಗದವರ ಮೇಲೆ ದಟ್ಟವಾದ ಪ್ರಭಾವವನ್ನು ಬೀರಿದೆ. ಇದರ ಹಿನ್ನೆಲೆಯಲ್ಲಿ, ಅವರ ಕೊಳ್ಳುಬಾಕತನ ಜಾಸ್ತಿಯಾಗುತ್ತಲೇ ಇದೆ. ಅವರ 'ಬೇಕು'ಗಳ ಪಟ್ಟಿ ನಮ್ಮ ಮಹಾಪುರಾಣ ರಾಮಾಯಣದ ಹನುಮಂತನ ಬಾಲದ ಹಾಗೆ ಬೆಳೆಯುತ್ತಲೇ ಇದೆ. ಈ ವರ್ಗವನ್ನು ಗಮನದಲ್ಲಿಟ್ಟುಕೊಂಡು ಬ್ಯಾಂಕುಗಳು ಅನೇಕ ಸಾಲ ಯೋಜನೆಗಳನ್ನು ಜಾರಿ ಮಾಡುತ್ತ ಬಂದಿವೆ. ರಾಷ್ಟ್ರಾದ್ಯಂತ ಬ್ಯಾಂಕುಗಳ ಶಾಖೆಗಳ ಸಂಖ್ಯೆಯಲ್ಲಿ ವೃದ್ಧಿ ಉಂಟಾಗಿದೆ. ಆದರೆ ನಿರೀಕ್ಷಿತ ಮಟ್ಟದಲ್ಲಿ ಆಗುತ್ತಿಲ್ಲ ಎಂಬುದು ಗಮನಾರ್ಹವಾದ ಸಂಗತಿ. ಇವೆಲ್ಲ ನಾಣ್ಯದ ಒಂದು ಮುಖ ಮಾತ್ರ. ನಾಣ್ಯದ ಇನ್ನೊಂದು ಮುಖವನ್ನೂ ಗಮನಿಸೋಣ.

ಬ್ಯಾಂಕ್ ಕ್ಷೇತ್ರದಲ್ಲಿ, ೧೯೮೫ರಲ್ಲೇ, ಕೇಂದ್ರ ಸರ್ಕಾರ (ವಿತ್ತ ಮಂತ್ರಾಲಯ) ನೇಮಕಾತಿಯ ಮೇಲೆ ನಿರ್ಬಂಧವನ್ನು ಹೇರಿತು. ಆಗಲೇ ಅಖಿಲ ಭಾರತ ಬ್ಯಾಂಕ್ ನೌಕರರ ಸಂಘ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸಿ, ಇದು ದೂರದರ್ಶಿತ್ವವಿಲ್ಲದ ಒಂದು ಕ್ರಮ ಎಂದು ಸಾರಿತು. ೧೯೯೧-೯೨ರಲ್ಲಿ, ನಮ್ಮ ರಾಷ್ಟ್ರದಲ್ಲಿ ಬ್ಯಾಂಕ್ ಮತ್ತು ಇತರ ಕ್ಷೇತ್ರಗಳಲ್ಲಿ 'ಉಖಾಜಾ' (ಉದಾರೀಕರಣ, ಖಾಸಗೀಕರಣ ಮತ್ತು ಜಾಗತೀಕರಣ) ನೀತಿಯಡಿ ಸುಧಾರಣೆಗಳನ್ನು ಪಿ. ವಿ. ನರಸಿಂಹರಾವ್ ನೇತೃತ್ವದ ಕಾಂಗ್ರೆಸ್ ಸರ್ಕಾರ ಜಾರಿಮಾಡಿತು. ಬ್ಯಾಂಕ್ ಕ್ಷೇತ್ರದಲ್ಲಿ ಸುಧಾರಣೆಗಳನ್ನು ಜಾರಿಮಾಡುವ ನಿಟ್ಟಿನಲ್ಲಿ ಕೇಂದ್ರ ಸರ್ಕಾರ ನರಸಿಂಹಂ ಸಮಿತಿಯನ್ನು ರಚಿಸಿತು. ಅದು ಅನೇಕ ಶಿಫಾರಸುಗಳನ್ನು ನೀಡಿತು. ಬ್ಯಾಂಕ್ ಕ್ಷೇತ್ರದಲ್ಲಿ ಈಗಾಗಲೇ ಶೇ. ೨೨.೫ರಷ್ಟು ಸಿಬ್ಬಂದಿ ಹೆಚ್ಚಿನ ಸಂಖ್ಯೆಗಳಲ್ಲಿದ್ದಾರೆಂದು ಸೂಚನೆಯನ್ನು ನೀಡಿತು. ಇದರಿಂದ ಸಿಬ್ಬಂದಿ ನೇಮಕಾತಿಯ ನಿರ್ಬಂಧದ ಕ್ರಮಕ್ಕೆ ಇನ್ನಷ್ಟು ಪುಷ್ಟಿ ದೊರೆಯಿತು. ಕ್ರಮೇಣ, ಬ್ಯಾಂಕುಗಳ ಆಡಳಿತ ಮಂಡಲಿಗಳು ನೇಮಕಾತಿಯನ್ನು




ಬ್ಯಾಂಕ್ ಕ್ಷೇತ್ರದಲ್ಲಿ ಉದ್ಭವಿಸಿರುವ ಈ ಆತಂಕಕಾರಿ ಸನ್ನಿವೇಶಕ್ಕೆ ಕಾರಣಕರ್ತರಾರು ? ಕೇಂದ್ರ ಸರ್ಕಾರವೇ ? ವಿತ್ತ ಸಚಿವಾಲಯವೇ ? ಬ್ಯಾಂಕುಗಳ ಆಡಳಿತ ಮಂಡಲಿಗಳೇ ? 'ಹೌದಪ್ಪ' ಬ್ಯಾಂಕ್ ಚೇರ್‌ಮನ್‌ರೇ ? ಅಥವಾ ಇವರೆಲ್ಲರೂ ಬಾಧ್ಯಸ್ಥರೇ ? ಒಟ್ಟಿನಲ್ಲಿ ಇದೊಂದು ಮುನ್ನೋಟವಿಲ್ಲದ ನೀತಿಯ ದುಷ್ಪರಿಣಾಮ ಎನ್ನಬಹುದು. ಬ್ಯಾಂಕುಗಳಲ್ಲಿ ಮತ್ತು ಇತರ ಉದ್ಯಮಗಳಲ್ಲಿ, ಉದ್ಯೋಗಿಗಳಿಂದ ತಮ್ಮ ಕೆಲಸ ಕಾರ್ಯಗಳಲ್ಲಿ ಲೋಪವುಂಟಾದರೆ, ಆಡಳಿತ ಮಂಡಲಿ/ಅಧಿಕಾರಿಗಳು ಅವರ ಮೇಲೆ ಶಿಸ್ತು ಕ್ರಮವನ್ನು ಜಾರಿಮಾಡುತ್ತದೆ/ತ್ತಾರೆ. ಆದರೆ ಸಿಬ್ಬಂದಿಗಳ ಕೊರತೆಯ ವಿಷಮಕಾರಿ ಪರಿಸ್ಥಿತಿಯನ್ನು ನಿರ್ಮಿಸಿದವರ ವಿರುದ್ಧ ಯಾರು ಶಿಸ್ತು ಕ್ರಮವನ್ನು ಜರುಗಿಸುತ್ತಾರೆ ? ಯಾವ ತೆರನಾದ ಶಿಕ್ಷೆಯನ್ನು ವಿಧಿಸಲಾಗುತ್ತದೆ ?

ಸ್ಥಗಿತಗೊಳಿಸುತ್ತಲೇ ಮುಂದೆ ಸಾಗಿದವು. ಈ ಹಿನ್ನೆಲೆಯಲ್ಲೇ ೨೦೦೧ರಲ್ಲಿ ಬ್ಯಾಂಕ್ ಕ್ಷೇತ್ರದಲ್ಲಿ ವಿಶೇಷ ಸ್ವಯಂ ನಿವೃತ್ತಿ ಯೋಜನೆಯನ್ನು ಜಾರಿಮಾಡಲಾಯಿತು. ಇದರಡಿ ಸುಮಾರು ೧.೨೫ ಲಕ್ಷ ನೌಕರರು - ಅಧಿಕಾರಿಗಳು ತಮ್ಮ ಉದ್ಯೋಗಕ್ಕೆ ವಿದಾಯ ಹೇಳಿದರು. ಖಾಲಿಯಾದ ಸ್ಥಾನಗಳನ್ನು ಭರ್ತಿ ಮಾಡಬಾರದೆಂದು ಕೇಂದ್ರ ಸರ್ಕಾರದ ವಿತ್ತ ಸಚಿವಾಲಯ ರಾಷ್ಟ್ರೀಕೃತ ಬ್ಯಾಂಕುಗಳಿಗೆ ನಿರ್ದೇಶನವನ್ನು ನೀಡಿತು. ಈ ಸಮಯದಲ್ಲೇ ಬ್ಯಾಂಕಿಂಗ್ ಸರ್ವೀಸ್ ರಿಕ್ರೂಟ್‌ಮೆಂಟ್ ಬೋರ್ಡ್‌ನ ಕದವನ್ನು ಮುಚ್ಚಲಾಯಿತು. ಒಂದೆಡೆ ಸಿಬ್ಬಂದಿಯ ಕೊರತೆ, ಇನ್ನೊಂದೆಡೆ ಗಣಕೀಕೃತ ವ್ಯವಸ್ಥೆಯ ಆದಿವಿಘ್ನಗಳು, ಇವುಗಳಿಂದ ಬ್ಯಾಂಕ್ ನೌಕರರು ನಲುಗಿದರು. ಗಣಕಯಂತ್ರಗಳು ಬಂದಮೇಲೆ, ಸಿಬ್ಬಂದಿ ಸಂಖ್ಯೆಯಲ್ಲಿ ಖೋತಾ ಆಗಬೇಕು ಎಂಬುದು ಬ್ಯಾಂಕುಗಳ ಉನ್ನತ ಅಧಿಕಾರಿವರ್ಗದ ಮಂತ್ರವಾಯಿತು. ಬ್ಯಾಂಕ್ ಚೇರ್‌ಮನ್ನರು 'ಹೌದಪ್ಪ'ಗಳಾದರು!

ಈ ನೀತಿಯ ವಿರುದ್ಧ ಎಐಬಿಇಎ ಅನೇಕ ಮತಪ್ರದರ್ಶನಗಳು, ಧರಣಿಗಳು, ವಿಚಾರ ಸಂಕಿರಣಗಳು ಮತ್ತು ಮುಷ್ಕರಗಳನ್ನು ನಡೆಸಿತು. ಸಮಾವೇಶಗಳು ಮತ್ತು ಸಮ್ಮೇಳನಗಳ ಮೂಲಕ ಸಾರ್ವಜನಿಕರನ್ನು ತಲುಪಲು ಪ್ರಯತ್ನಿಸಿತು. ಕೇಂದ್ರ ಸರ್ಕಾರದ 'ಉಖಾಜಾ' ನೀತಿಗಳ ವಿರುದ್ಧ ಸಮರ್ಥವಾಗಿ ಹೋರಾಡಲು ಬ್ಯಾಂಕ್ ನೌಕರ-ಅಧಿಕಾರಿಗಳ ಜಂಟಿ ವೇದಿಕೆಯನ್ನು ಹುಟ್ಟುಹಾಕಿತು. ಅದೇ ಬ್ಯಾಂಕ್ ಸಂಘಗಳ ಸಂಯುಕ್ತ ವೇದಿಕೆ ಯುಎಫ್‌ಬಿಯು. ಆದರೆ ಬ್ಯಾಂಕ್ ನೌಕರರ ಕೂಗನ್ನು ಕೇಂದ್ರ ಸರ್ಕಾರ, ವಿತ್ತ ಸಚಿವಾಲಯ ಮತ್ತು ಬ್ಯಾಂಕುಗಳ ಆಡಳಿತ ಮಂಡಲಿಗಳು ಕೇಳಿಸಿಕೊಳ್ಳಲೇ ಇಲ್ಲ.

ಪ್ರಸ್ತುತ ಬ್ಯಾಂಕುಗಳಲ್ಲಿನ ಪರಿಸ್ಥಿತಿ ಏನಾಗಿದೆ? ಕಳೆದ ೩-೪ ವರ್ಷಗಳಿಂದ, ಬ್ಯಾಂಕ್ ಸಂಘಗಳ ನಿರಂತರ ಒತ್ತಡದ ಪರಿಣಾಮದಿಂದ, ಅಧಿಕ ಸಂಖ್ಯೆಯಲ್ಲಿ ನೇಮಕಾತಿ ಜರಗುತ್ತಿದೆ. ಆದರೆ ಹೊಸಬರು ಬ್ಯಾಂಕ್ ಕ್ಷೇತ್ರದಲ್ಲಿ ಉಳಿಯುತ್ತಿಲ್ಲ. ಕೆಲಸಕ್ಕೆ ಸೇರಿದ ಅಲ್ಪ ಸಮಯದಲ್ಲೇ ತಮ್ಮ ಉದ್ಯೋಗಗಳಿಗೆ ವಿದಾಯ ಹೇಳುತ್ತಿದ್ದಾರೆ. ಮೊದಲು, ಈ ಪ್ರವೃತ್ತಿ ಅಧಿಕಾರಿ ವಲಯದಲ್ಲಿ ಹೆಚ್ಚಾಗಿ ಕಂಡುಬಂದಿತು. ಈಗೀಗ, ಅದು ಗುಮಾಸ್ತರಲ್ಲೂ ಜಾಸ್ತಿಯಾಗುತ್ತಿದೆ. ಬ್ಯಾಂಕ್ ಪರಿಭಾಷೆಯಲ್ಲಿ ಇದನ್ನು 'ಅಟ್ರಿಷನ್' ಎಂದು ಕರೆಯುತ್ತಾರೆ. ''ನಮಗೆ ಉತ್ತರಪ್ರದೇಶ, ಬಿಹಾರ್, ಒರಿಸ್ಸಾ, ಚತ್ತೀಸ್‌ಗಡ ಮತ್ತು ಜಾರ್ಖಂಡ್ ರಾಜ್ಯಗಳಿಂದ ಹೆಚ್ಚಿನ ಅಭ್ಯರ್ಥಿಗಳು ಸಿಗುತ್ತಿದ್ದಾರೆ. ಆದರೆ ಕರ್ನಾಟಕ ಮತ್ತು ತಮಿಳುನಾಡಿನಂಥ ರಾಜ್ಯಗಳಿಂದ ಹೆಚ್ಚಿನ ಮಂದಿ ಬ್ಯಾಂಕುಗಳಲ್ಲಿ ನೇಮಕಾತಿಯಾಗುತ್ತಿಲ್ಲ...'' ಎಂಬ ಉನ್ನತ ಬ್ಯಾಂಕ್ ಅಧಿಕಾರಿಯೊಬ್ಬರ ಮಾಹಿತಿ 'ಬಿಸಿನೆಸ್ ಲೈನ್'ನ' (೨೯-೮-೨೦೧೨) ಪುಟ ೬ರಲ್ಲಿ ಪ್ರಕಟವಾಗಿರುವುದು ಅನೇಕ ಚಿತ್ರಣಗಳನ್ನು ನೀಡುತ್ತದೆ. ಒಂದೆಡೆ ನಿವೃತ್ತಿ, ಇನ್ನೊಂದೆಡೆ ಈ 'ಅಟ್ರಿಷನ್' ಇವುಗಳಿಂದ ಬ್ಯಾಂಕುಗಳ ಕೌಂಟರ್ ಸೇವೆ ಬಾಧಿತಗೊಂಡಿದೆ. ಬ್ಯಾಂಕ್ ನೌಕರ-ಅಧಿಕಾರಿಗಳು ಅನೇಕ ರೀತಿಯ ಒತ್ತಡಗಳಿಗೆ ಸಿಲುಕಿದ್ದಾರೆ.

ಇತ್ತೀಚೆಗೆ 'ದಿ ಹಿಂದೂ' ಪತ್ರಿಕಾ ಬಳಗದ 'ಬಿಸಿನೆಸ್ ಲೈನ್' (೪-೯-೨೦೧೨ರ ಸಂಚಿಕೆ ಪುಟ ೬)ನಲ್ಲಿ ''ಬಾಸ್ಟನ್ ಕನ್ಸಲ್‌ಟಿಂಗ್ ಗ್ರೂಪ್''ನ (ಇತ್ತೀಚಿನ ದಶಕಗಳಲ್ಲಿ ಯಾವುದೇ ಕ್ಷೇತ್ರದಲ್ಲಿ ಸರ್ವೇಕ್ಷಣ ನಡೆಸಿದರೂ ವಿದೇಶಿ ಮೂಲದ ಸಂಸ್ಥೆಗಳಿಗೆ ಕೇಂದ್ರ ಸರ್ಕಾರ ಆದ್ಯತೆ ನೀಡುತ್ತಲೇ ಬಂದಿದೆ. ಅವುಗಳು ಕೇಳಿದಷ್ಟು ಹಣ ನೀಡುವುದು ಹಾಗೂ ಅವುಗಳು ಸಲ್ಲಿಸುವ ವರದಿಗಳಿಗೆ ಸಕಾರಾತ್ಮಕವಾಗಿ ಸ್ಪಂದಿಸುವುದು – ಇವು ಸರ್ಕಾರಗಳ ಪರಿಪಾಠವಾಗಿದೆ. – ಲೇಖಕ) ಒಂದು ವರದಿಯ ಅನ್ವಯ, ಬ್ಯಾಂಕ್ ಉದ್ಯಮಕ್ಕೆ ಮುಂದಿನ ಐದು ವರ್ಷಗಳಲ್ಲಿ ೯-೧೧ ಲಕ್ಷ ಉದ್ಯೋಗಿಗಳು ಬೇಕಾಗುತ್ತಾರೆ (ವರದಿಯಲ್ಲಿ 'ಹೈರ್' ಎಂಬುವ ಪದವನ್ನು ಬಳಸಲಾಗಿದೆ. – ಲೇಖಕ). ಸುಮಾರು ೧೪,೦೦೦ ಗ್ರಾಹಕರು, ೫೦,೦೦೦ ಬ್ಯಾಂಕ್ ಉದ್ಯೋಗಿಗಳು ಹಾಗೂ ೩೫ ಬ್ಯಾಂಕುಗಳಿಂದ ಪಡೆದ ದತ್ತಾಂಶಗಳ ವಿಶ್ಲೇಷಣೆಯ ಒಂದು ಸರ್ವೇಕ್ಷಣವನ್ನು ಈ ವರದಿ ಒಳಗೊಂಡಿದೆ. ಈ ಸಂಖ್ಯೆ(೯-೧೧ ಲಕ್ಷ ಉದ್ಯೋಗಿಗಳು)ಯ ಅರ್ಧದಷ್ಟು, 'ಅಟ್ರಿಷನ್'ನಿಂದ ಉಂಟಾಗುವ ಖಾಲಿ ಸ್ಥಾನಗಳನ್ನು ತುಂಬಲು ಬೇಕಾಗುತ್ತದೆ. ಮುಂದಿನ ಒಂದು ದಶಕದಲ್ಲಿ ಬ್ಯಾಂಕ್ ಕ್ಷೇತ್ರ ಸುಮಾರು ಶೇ. ೨೦ರ ದರದಲ್ಲಿ ಬೆಳೆಯಬಹುದು. ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಲ್ಲಿ ನಿವೃತ್ತಿಯಿಂದ ಪರಿಣಮಿಸುವ ಖಾಲಿ ಹುದ್ದೆಗಳನ್ನು ತುಂಬಲು ದೊಡ್ಡಮಟ್ಟದ ಪ್ರತಿಭಾಶಾಲಿಗಳ ಸೇರ್ಪಡೆ ಅವಶ್ಯ ಎಂಬ ಒಂದು ಸುದ್ದಿ ಪ್ರಕಟವಾಗಿದೆ. ಇದು ಏನನ್ನು ಸೂಚಿಸುತ್ತದೆ?

ಬ್ಯಾಂಕ್ ಕ್ಷೇತ್ರದಲ್ಲಿ ಉದ್ಭವಿಸಿರುವ ಈ ಆತಂಕಕಾರಿ ಸನ್ನಿವೇಶಕ್ಕೆ ಕಾರಣಕರ್ತರಾರು? ಕೇಂದ್ರ ಸರ್ಕಾರವೇ? ವಿತ್ತ ಸಚಿವಾಲಯವೇ? ಬ್ಯಾಂಕುಗಳ ಆಡಳಿತ ಮಂಡಲಿಗಳೇ? 'ಹೌದಪ್ಪ' ಬ್ಯಾಂಕ್ ಚೇರ್‌ಮನ್‌ರೇ? ಅಥವಾ ಇವರೆಲ್ಲರೂ ಬಾಧ್ಯಸ್ಥರೇ? ಒಟ್ಟಿನಲ್ಲಿ ಇದೊಂದು ಮುನ್ನೋಟವಿಲ್ಲದ ನೀತಿಯ ದುಷ್ಪರಿಣಾಮ ಎನ್ನಬಹುದು. ಬ್ಯಾಂಕುಗಳಲ್ಲಿ ಮತ್ತು ಇತರ ಉದ್ಯಮಗಳಲ್ಲಿ, ಉದ್ಯೋಗಿಗಳಿಂದ ತಮ್ಮ ಕೆಲಸ ಕಾರ್ಯಗಳಲ್ಲಿ ಲೋಪವುಂಟಾದರೆ, ಆಡಳಿತ ಮಂಡಲಿ/ಅಧಿಕಾರಿಗಳು ಶಿಸ್ತು ಕ್ರಮವನ್ನು ಜಾರಿಮಾಡುತ್ತದೆ/ತಾರೆ. ಆದರೆ ಸಿಬ್ಬಂದಿಗಳ ಕೊರತೆಯ ವಿಷಮಕಾರಿ ಪರಿಸ್ಥಿತಿಯನ್ನು ನಿರ್ಮಿಸಿದವರ ವಿರುದ್ಧ ಯಾರು ಶಿಸ್ತು ಕ್ರಮವನ್ನು ಜರುಗಿಸುತ್ತಾರೆ? ಯಾವ ತೆರನಾದ ಶಿಕ್ಷೆಯನ್ನು ವಿಧಿಸಲಾಗುತ್ತದೆ?

ಇನ್ನು, ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಬಗೆಗೆ ಕೇಂದ್ರ ಸರ್ಕಾರ, ಈ 'ಉಖಾಜಾ' ನೀತಿಗಳು ಜಾರಿಯಾದ ತರುವಾಯ ಅನುಸರಿಸುತ್ತ ಬಂದಿರುವುದು ಬಂಡವಾಳಶಾಹಿ ಪರವಾದ ಖಾಸಗೀಕರಣ ನೀತಿಗಳನ್ನು. ೨೦೦೭-೨೦೦೮ರಲ್ಲಿ ಪ್ರಪಂಚದ ಹಲವೆಡೆ ಆರ್ಥಿಕ ಬಿಕ್ಕಟ್ಟು ತಲೆದೋರಿ, ಅಂತರರಾಷ್ಟ್ರೀಯ ಮಟ್ಟದಲ್ಲಿ ಮನ್ನಣೆ ಪಡೆದಿದ್ದ ಲೇಮನ್ ಬ್ರದರ್ಸ್, ಮೆರ್ರಿಲ್ ಲಿಂಚ್, ಬೇರ್‌ಸ್ಟರ್ನ್ಸ್, ನಾರ್ದರ್ನ್ ರಾಕ್, ಫ್ರೆಡ್ಡೀ ಮ್ಯಾಕ್ ಇತ್ಯಾದಿ ಬ್ಯಾಂಕುಗಳು ದಿವಾಳಿಯಾದವು. ಬಂಡವಾಳಶಾಹಿಯ ಮೆಕ್ಕಾ ಎಂದು ಕರೆಯಲಾಗುವ ಅಮೆರಿಕಾದಲ್ಲಿ ಅನೇಕ ದೊಡ್ಡ ಬ್ಯಾಂಕುಗಳು ಮುಳುಗಿದವು. ಅಲ್ಲಿನ ಸರ್ಕಾರ, ಅವುಗಳ ಪುನಶ್ಚೇತನಕ್ಕೆ ತನ್ನ ಬೊಕ್ಕಸದಿಂದಲೇ ಬೃಹತ್ ಮೊತ್ತದ ಸಾರ್ವಜನಿಕರ ಹಣವನ್ನು ನೀಡಬೇಕಾಯಿತು. ಯುರೋಪ್, ಜಪಾನ್ ಇತ್ಯಾದಿ ದೇಶಗಳ ಬ್ಯಾಂಕ್‌ಗಳಿಗೂ ಇದರ ಬಿಸಿ ತಗುಲಿತು. ಆ ದೇಶಗಳಲ್ಲಿ ಆರ್ಥಿಕತೆ ತತ್ತರಿಸಿತು. ಆದರೆ ಭಾರತದ ಬ್ಯಾಂಕ್ ಕ್ಷೇತ್ರ ಇಂತಹ ಭೀಕರ ಪರಿಣಾಮಗಳಿಗೆ ಒಳಗಾಗಲಿಲ್ಲ. ಇದು ಸಾಧ್ಯವಾದದ್ದು ಈ ಕ್ಷೇತ್ರದ ಭದ್ರ ಬುನಾದಿಯಂತಿರುವ ಸಾರ್ವಜನಿಕ ಒಡೆತನದ ಬ್ಯಾಂಕುಗಳ ಸ್ವರೂಪ ಮತ್ತು ದೃಢತೆಯಿಂದ ಎಂಬುದನ್ನು ಯಾವುದೇ ಅನುಮಾನವಿಲ್ಲದೆ ಹೇಳಬಹುದು. ಇದರ ಹಿಂದೆ, ಮುಖ್ಯವಾಗಿ ಎಐಬಿಇಎ ಮತ್ತು ಯುಎಫ್‌ಬಿಯುನ ಇತರ ಬ್ಯಾಂಕ್ ಸಂಘಗಳ ನೌಕರ-ಅಧಿಕಾರಿಗಳ ಅವಿರತ ಹೋರಾಟಗಳ ಶ್ರಮವಿದೆ. ಸಾರ್ವಜನಿಕ ಕ್ಷೇತ್ರದ

ಬ್ಯಾಂಕುಗಳನ್ನು ಉಳಿಸುವುದರಲ್ಲಿ ಮತ್ತು ಬೆಳೆಸುವುದರಲ್ಲಿ ಅವರು ವಹಿಸುತ್ತ ಬಂದಿರುವ ಪಾತ್ರ ಶ್ಲಾಘನೀಯ ಮತ್ತು ಅನುಕರಣೀಯವೂ ಕೂಡ. ಆದರೆ ನಮ್ಮ ರಾಷ್ಟ್ರದ ಹೆಚ್ಚಿನ ಆರ್ಥಿಕ ತಜ್ಞರು, ವಿತ್ತಲೋಕದ ವಿಶೇಷಜ್ಞರು ಮತ್ತು ಮಾಧ್ಯಮಗಳು ಬ್ಯಾಂಕ್ ನೌಕರ-ಅಧಿಕಾರಿಗಳ ಈ ಇತ್ಯಾತ್ಮಕ ಪಾತ್ರವನ್ನು ಪ್ರಶಂಸಿಸುವುದಿರಲಿ, ಗುರುತಿಸಲೂ ಇಲ್ಲ ಎಂಬುದು ವಾಸ್ತವ ಸಂಗತಿ. ಅವರು ಹಾಡಿ ಹೊಗಳಿದ್ದು ಭಾರತೀಯ ರಿಸರ್ವ್ ಬ್ಯಾಂಕ್ ಗವರ್ನರ್‌ರನ್ನು ಮತ್ತು ಕೇಂದ್ರ ಬ್ಯಾಂಕಿನ ನೀತಿಗಳನ್ನು. ಆದರೆ ಈ ತರಹದ ಧೋರಣೆಯನ್ನು ಲಾಗಾಯ್ತಿನಿಂದಲೂ ಬ್ಯಾಂಕ್ ನೌಕರರು ಎದುರಿಸುತ್ತಲೇ ಬಂದಿದ್ದಾರೆ. 'ಸಾರ್ವಜನಿಕರ ಹಣ ಸಾರ್ವಜನಿಕರ ಕಲ್ಯಾಣಕ್ಕಾಗಿ' ಎಂಬ ಘೋಷವಾಕ್ಯದೊಡನೆ ಎಐಬಿಇಎ ಮತ್ತು ಇತರ ಬ್ಯಾಂಕ್ ಸಂಘಗಳು ಯುಎಫ್‌ಬಿಯ ಅಡಿ ತಮ್ಮ ನಡೆಯನ್ನು ಮುಂದುವರೆಸಿವೆ.

ಇಷ್ಟೆಲ್ಲ ನೇತ್ಯಾತ್ಮಕ ಬೆಳವಣಿಗೆಗಳು ಅಂತರರಾಷ್ಟ್ರೀಯ ಮಟ್ಟದ ದೊಡ್ಡ ಖಾಸಗಿ ಬ್ಯಾಂಕುಗಳ ವಲಯದಲ್ಲಿ ಜರುಗಿದ್ದರೂ, ನಮ್ಮ ಆಳುವ ಪ್ರಭುಗಳಿಗೆ ಬುದ್ಧಿ ಬಂದಿಲ್ಲ ಬದಲು ವಿಶ್ವಮಟ್ಟದ ವಿತ್ತೀಯ ಶಕ್ತಿಗಳ ತಾಳಕ್ಕೆ ಕುಣಿಯುತ್ತಲೇ ಇದ್ದಾರೆ ಎಂಬುದು ಅವರು ಎಚ್ಚರಗೊಂಡಿಲ್ಲ ಎನ್ನುವುದಕ್ಕೆ ಸಾಕ್ಷಿ. ಸರ್ಕಾರ ಸ್ಥಾಪಿಸಿದ ಎಲ್ಲ ಸಮಿತಿಗಳು (ಇತ್ತೀಚಿನ ಖಂಡೇಲ್‌ವಾಲ್ ಸಮಿತಿಯವರೆಗೆ) ಮತ್ತು ವಿದೇಶಿ ಸಲಹಾ ಸಂಸ್ಥೆಗಳಾದ ಮೆಕೆಂಜಿ, ಬಾಸ್ಟನ್ ಕನ್ಸಲ್ಟಿಂಗ್ ಗ್ರೂಪ್, ಗಾರ್ಟರ್ನ್, ಕೆಪಿಎಂಜಿ, ಪ್ರೈಸ್ ವಾಟರ್ ಹೌಸ್ ಕೂಪರ್ ಮುಂತಾದುವು ಬ್ಯಾಂಕುಗಳ ಖಾಸಗೀಕರಣಕ್ಕೆ ಒತ್ತು ನೀಡಿವೆ. ಇದಕ್ಕೆ ಕೇಂದ್ರ ಸರ್ಕಾರವೂ ಸಮ್ಮತಿ ಸೂಚಕವಾಗಿ ತನ್ನ ಗೋಣನ್ನು ಅಲ್ಲಾಡಿಸುತ್ತಿದೆ. ''ವೈದ್ಯ ಹೇಳಿದ್ದೂ ಹಾಲು, ರೋಗಿ ಬಯಸಿದ್ದೂ ಹಾಲು'' ಎಂಬ ಗಾದೆಯಂತೆ ಕೇಂದ್ರ ಸರ್ಕಾರ ಖಾಸಗೀಕರಣ ನೀತಿಯನ್ನು ಅನುಷ್ಠಾನಗೊಳಿಸಲು ಪ್ರಯತ್ನಿಸುತ್ತಲೇ ಇದೆ.

ಈ ಹಿನ್ನೆಲೆಯಲ್ಲೇ ಕೇಂದ್ರ ಸರ್ಕಾರ ಬ್ಯಾಂಕ್ ನಿಯಂತ್ರಣ ಕಾಯಿದೆ (೧೯೪೯) ಮತ್ತು ಬ್ಯಾಂಕ್ ಕಂಪನಿಗಳ (ಸ್ವಾಧೀನ ಮತ್ತು ಜವಾಬ್ದಾರಿಗಳ ಪರಭಾರೆ) ಕಾಯಿದೆ - ೧೯೭೦ ಮತ್ತು ೧೯೮೦ ಇವೆರಡಕ್ಕೂ ತಿದ್ದುಪಡಿ ತರಲು ಸನ್ನದ್ಧವಾಗಿದೆ. ಇದಕ್ಕೆ ಸಂಬಂಧಿಸಿದ ವಿಧೇಯಕದ ಉದ್ದೇಶ ಮತ್ತು ಕಾರಣಗಳನ್ನು ವಿವರಿಸುತ್ತ ''ಬ್ಯಾಂಕ್ ಕಂಪನಿಗಳು ಪ್ರಸ್ತುತ ಉದಾರೀಕೃತ ವಾತಾವರಣದಲ್ಲಿ ಕೆಲಸ ಮಾಡುತ್ತಿವೆ. ಅಂತರರಾಷ್ಟ್ರೀಯ ಸ್ತರದಲ್ಲಿ ನಮ್ಮ ಬ್ಯಾಂಕುಗಳು ಸ್ಪರ್ಧೆಯನ್ನು ಎದುರಿಸಬೇಕು. ಆದುದರಿಂದ ಅವು ತಮ್ಮ ಬಂಡವಾಳವನ್ನು ಹೆಚ್ಚಿಸಿಕೊಂಡು, ಬಲಿಷ್ಠವಾಗಬೇಕು'' ಎಂಬಿತ್ಯಾದಿಯಾಗಿ ಕೇಂದ್ರ ಸರ್ಕಾರ ತನ್ನ ನಿಲುವನ್ನು ವ್ಯಕ್ತಪಡಿಸಿದೆ. ಇದಕ್ಕೆ – ''ಅರೆ...! ಹೌದಲ್ಲ...'' ಎಂದು ಅನೇಕರು ಉದ್ಗಾರ ತೆಗೆಯಬಹುದು. ಆದರೆ ಸರ್ಕಾರದ ಹುನ್ನಾರ ಸ್ಪಷ್ಟವಾಗಿದೆ. ಅದೆಂದರೆ, ಬ್ಯಾಂಕುಗಳನ್ನು ಖಾಸಗೀಕರಣ ಗೊಳಿಸುವುದು. ಒಂದರ ಮೇಲೆ ಒಂದರಂತೆ ಹಗರಣಗಳ ಮಾಲೆ ತನ್ನ ಕೊರಳಿನ ಉರುಳಾಗುತ್ತಿರುವಾಗ, ಸರ್ಕಾರ ಸ್ವಲ್ಪ ಜನಪ್ರಿಯತೆ ಗಳಿಸಲು ಈ ದುಸ್ಸಾಹಸಕ್ಕೆ ಕೈ ಹಾಕಿದೆ. ಅದು ಜನರನ್ನು ಬೇರೆಡೆ ಸೆಳೆಯುವ ಪ್ರಯತ್ನವೂ ಆಗಿರಬಹುದು! ಈ ವಿಷಯ ಕುರಿತಂತೆ, ಕೆಲವು ಅಂಶಗಳನ್ನು ನಿಕಷಕ್ಕೆ ಒಳಪಡಿಸುವುದು ಸೂಕ್ತವೆನಿಸುತ್ತಿದೆ.

**✴ ಬ್ಯಾಂಕ್ ನಿಯಂತ್ರಣ ಕಾಯಿದೆ**

**✴ ಕಲಮು ೨-ಎ (ನೂತನ ಖಂಡ)**

ಇದರ ಅನ್ವಯ, ಪೈಪೋಟಿ ಕಾಯಿದೆ, ೨೦೦೨ರಿಂದ ಬ್ಯಾಂಕುಗಳ ವಿಲೀನೀಕರಣವನ್ನು ಹೊರಗಿಡಲಾಗುತ್ತದೆ (ವಿನಾಯತಿಯನ್ನು ನೀಡಲಾಗುತ್ತದೆ). ಅಂದರೆ, ಪೈಪೋಟಿ ಆಯೋಗ (ಇದು ವಿಲೀನೀಕರಣಗಳನ್ನು ನಿಯಂತ್ರಿಸುವ ಅಧಿಕಾರವನ್ನು ಹೊಂದಿರುವ ಸಂಸ್ಥೆ– ಲೇಖಕ) ದ ಪರವಾನಗಿ ಇಲ್ಲದೆ ಬ್ಯಾಂಕುಗಳನ್ನು ಇನ್ನು ಮುಂದೆ ವಿಲೀನೀಕರಿಸಬಹುದು.

**✴ ಕಲಮು ೧೨(೨)** (ಇದನ್ನು ವಿಲೋಪನಗೊಳಿಸಲು ಉದ್ದೇಶಿಸಲಾಗಿದೆ)

ಪ್ರಸ್ತುತ ಖಾಸಗಿ ಬ್ಯಾಂಕುಗಳ ಷೇರುದಾರರ ಮತದಾನಕ್ಕೆ ಸಂಬಂಧಿಸಿದಂತೆ ಶೇ.೧೦ರ ಮಿತಿಯಿದೆ. ಇದನ್ನು ಶೇ.೨೬ಕ್ಕೆ ಏರಿಸುವುದು ತಿದ್ದುಪಡಿಯ ಉದ್ದೇಶವಾಗಿದೆ. ಈ ಹೆಚ್ಚಿನ ಮತದಾನದ ಹಕ್ಕುಗಳನ್ನು ಬಳಸಿಕೊಂಡು ವಿದೇಶಿ ನೇರ ಬಂಡವಾಳ/ವಿದೇಶಿ ಸಾಂಸ್ಥಿಕ ಹೂಡಿಕಾದಾರರು ನಮ್ಮ ಖಾಸಗಿ ಬ್ಯಾಂಕುಗಳ ಮೇಲೆ ಇನ್ನೂ ಹೆಚ್ಚಿನ ನಿಯಂತ್ರಣವನ್ನು ಸಾಧಿಸಬಹುದು; ಅವುಗಳನ್ನು ಕಬಳಿಸಲೂಬಹುದು.

**✴ ಹೊಸ ಕಲಮು ೧೨-ಬಿಯ ಸೇರ್ಪಡೆ :**

ಇದರಡಿಯಲ್ಲಿ, ಭಾರತೀಯ ರಿಸರ್ವ್ ಬ್ಯಾಂಕ್, ಯಾವುದೇ ವ್ಯಕ್ತಿ ಅಥವಾ ಕಂಪನಿಗೆ, ಯಾವುದೇ ನಿರ್ಬಂಧವಿಲ್ಲದೆ, ಯಾವುದೇ ಖಾಸಗಿ ಬ್ಯಾಂಕ್‌ನಲ್ಲಿ ಹೂಡಿಕೆಯನ್ನು ತೊಡಗಿಸುವ ಪರವಾನಗಿಯನ್ನು ನೀಡಬಹುದು. ಕಲಮು ೧೨(೨)ರ ವಿಲೋಪನ, ಹೆಚ್ಚಿದ ಮತದಾನದ ಹಕ್ಕುಗಳು ಮತ್ತು ಕಲಮು ೧೨-ಬಿ ಅನುವು ಮಾಡಿಕೊಡುವ ಅನಿರ್ಬಂಧಿತ ಷೇರು ಹೊಂದಿರುವಿಕೆಯಿಂದ ಭಾರತದ ಖಾಸಗಿ ಬ್ಯಾಂಕುಗಳನ್ನು ಯಾವುದೇ ಕಾರ್ಪೊರೇಟ್ ಸಂಸ್ಥೆಯಾಗಲಿ ಅಥವಾ ವಿದೇಶಿ ಹೂಡಿಕೆದಾರನಾಗಲಿ ಸುಲಭವಾಗಿ ಕಬಳಿಸಬಹುದು.

**✴ ಕಲಮು ೩೬– ಎಸಿಎಯ ಸೇರ್ಪಡೆ**

ಯಾವುದೇ ಬ್ಯಾಂಕಿನ ಆಡಳಿತ ಮಂಡಲಿಯನ್ನು ರದ್ದುಗೊಳಿಸಿ, ಅದರ ಆಡಳಿತವನ್ನು ನಡೆಸಲು ಒಬ್ಬ ಆಡಳಿತಾಧಿಕಾರಿಯನ್ನು ನಿಯಮಿಸುವ ವ್ಯಾಪಕ ಅಧಿಕಾರವನ್ನು ಈ ಕಲಮು ಭಾರತೀಯ ರಿಸರ್ವ್ ಬ್ಯಾಂಕಿಗೆ ನೀಡುತ್ತದೆ.

**✴ ಕಲಮು ೮ಕ್ಕೆ ತಿದ್ದುಪಡಿ**

ಇದರಡಿಯಲ್ಲಿ, ಬ್ಯಾಂಕುಗಳು ವಾಯಿದೆ ವಹಿವಾಟುಗಳಂತಹ ಚಟುವಟಿಕೆಗಳಲ್ಲಿ ಭಾಗವಹಿಸಲು ಭಾರತೀಯ ರಿಸರ್ವ್ ಬ್ಯಾಂಕ್ ಅನುಮತಿ ನೀಡಬಹುದು. ಇದೊಂದು ತೆರನಾದ ಸಟ್ಟಾ ವ್ಯವಹಾರವಷ್ಟೆ. ಬ್ಯಾಂಕುಗಳಲ್ಲಿರುವ ಸಾರ್ವಜನಿಕರ ಹಣವನ್ನು ಈ ರೀತಿಯ ವ್ಯವಹಾರಗಳಲ್ಲಿ ತೊಡಗಿಸಿದರೆ, ಅದು ಮಾರುಕಟ್ಟೆಯ ಏಳು-ಬೀಳುಗಳಿಗೆ ಈಡಾಗಿ, ಅನೇಕ ರೀತಿಯ ಗಂಡಾಂತರಕಾರಿ ಸಂದರ್ಭಗಳಿಗೆ ಒಳಗಾಗುವ ಸಾಧ್ಯತೆಗಳೇ ಹೆಚ್ಚು.

**ಬ್ಯಾಂಕ್ ಕಂಪನಿಗಳ (ಸ್ವಾಧೀನ ಮತ್ತು ಜವಾಬ್ದಾರಿಗಳ ಪರಭಾರೆ) ಕಾಯಿದೆ, ೧೯೭೦/೮೦**

**✴ ಕಲಮು ೨-ಎಯಲ್ಲಿ ಬದಲಾವಣೆ :**

**ಈಗಿರುವ ಬ್ಯಾಂಕುಗಳ ಅಧಿಕೃತ ಬಂಡವಾಳದ ಮೇಲಿರುವ ಮಿತಿಯನ್ನು ತೆಗೆದುಹಾಕುವುದು.**

ನಮ್ಮ ರಾಷ್ಟ್ರೀಕೃತ ಬ್ಯಾಂಕುಗಳನ್ನು ಹೆಚ್ಚು ಹೆಚ್ಚಾಗಿ ಬಂಡವಾಳಕ್ಕೆ ಪರಾಧೀನಗೊಳಿಸುವ ಉದ್ದೇಶದಿಂದ ಈ ಬದಲಾವಣೆಯನ್ನು ತರಲು ಉದ್ದೇಶಿಸಲಾಗಿದೆ. ಇದರಿಂದ ಸರ್ಕಾರಿ ಸ್ವಾಮ್ಯದ ಬ್ಯಾಂಕುಗಳಲ್ಲಿ ಖಾಸಗಿ ಬಂಡವಾಳ ಜಾಸ್ತಿಯಾಗುತ್ತದೆ. ವಿಲೀನೀಕರಣಕ್ಕೂ ಕುಮ್ಮಕ್ಕು ನೀಡಿದಂತಾಗುತ್ತದೆ. ಆದುದರಿಂದ ಇದು ಅಪೇಕ್ಷಣೀಯವಲ್ಲ.

**✴ ಕಲಮು ೨-ಬಿಯ ಸೇರ್ಪಡೆ :**

**ಇದರ ಮೂಲಕ ಸರ್ಕಾರಿ ಬ್ಯಾಂಕುಗಳಲ್ಲಿ Rights Issues ಮತ್ತು Bonus Shares ನೀಡಿಕೆಗೆ ಅನುಕೂಲ ಮಾಡಿಕೊಡುವುದು.**

ಸರ್ಕಾರಿ ಬ್ಯಾಂಕುಗಳಿಗೆ, ಖಾಸಗಿ ಬ್ಯಾಂಕುಗಳು ಮತ್ತು ಖಾಸಗಿ ಕಂಪನಿಗಳಿಗೆ ಸಮಾನವಾದ ಸ್ಥಾನವನ್ನು ಕಲ್ಪಿಸುವುದು ಈ ಕಲಮಿನ ಉದ್ದೇಶ. ಇದರಿಂದ ರಾಷ್ಟ್ರೀಕೃತ ಬ್ಯಾಂಕುಗಳು ಹೆಚ್ಚು ಹೆಚ್ಚಾಗಿ ಲಾಭ ಗಳಿಸುವತ್ತ ಗಮನಹರಿಸುತ್ತವೆ. ತತ್ಪರಿಣಾಮವಾಗಿ, ಸಾಮಾಜಿಕ ಬಾಧ್ಯತೆಗಳು ಹಿಂದೆ ಸರಿಯುತ್ತವೆ.

**✴ ಕಲಮು ೨-ಇ :**

**ರಾಷ್ಟ್ರೀಕೃತ ಬ್ಯಾಂಕುಗಳಲ್ಲಿನ ಮತದಾನದ ಹಕ್ಕುಗಳ ಮಿತಿಯನ್ನು ಶೇ. ೧ರಿಂದ ಶೇ. ೧೦ಕ್ಕೆ ವೃದ್ಧಿಸುವುದು.**

ಈ ಜನವಿರೋಧಿಗಳು ತಿದ್ದುಪಡಿ ವಿರುದ್ಧ ಬ್ಯಾಂಕ್ ನೌಕರರ ಸಂಘಟನೆಗಳಾದ ಎ.ಐ.ಬಿ.ಇ.ಎ., ಬಿ.ಇ.ಎಫ್.ಐ., ಮತ್ತು ಎ.ಐ.ಬಿ.ಓ.ಎ. ರಾಷ್ಟ್ರವ್ಯಾಪಿ ಪ್ರತಿಭಟನಾ ಕಾರ್ಯಕ್ರಮಗಳನ್ನು ನಡೆಸಿದರೂ ವಾಯಿದೆ ವ್ಯಾಪಾರವನ್ನು ಹೊರತುಪಡಿಸಿದಂತೆ, ಮಿಕ್ಕೆಲ್ಲ ಅಂಶಗಳಿಗೂ, ಎಂದರೆ ಟಾಟಾ, ಬಿರ್ಲಾ, ರಿಲಯನ್ಸ್, ನಾಬಾರ್ಡ್ ನಂತರ ಸಂಸ್ಥೆಗಳು ತಮ್ಮದೇ ಆದ ಖಾಸಗಿ ಬ್ಯಾಂಕುಗಳನ್ನು ತೆರೆಯಲು ಇತ್ತೀಚೆಗೆ ಸಂಸತ್ತಿನಲ್ಲಿ ಒಪ್ಪಿಗೆ ನೀಡಲಾಗಿದೆ.

೧೯೭೦ರ ದಶಕದಿಂದಲೇ ರಾಷ್ಟ್ರೀಕೃತ ಬ್ಯಾಂಕುಗಳಲ್ಲಿನ ಖಾಸಗಿ ಷೇರುದಾರರ ಮತದಾನದ ಹಕ್ಕುಗಳನ್ನು ಶೇ. ೧ಕ್ಕೆ ಮಿತಿಗೊಳಿಸಲಾಗಿದೆ. ಇದನ್ನು ಶೇ.೧೦ಕ್ಕೆ ಏರಿಸಲು ಉದ್ದೇಶಿಸಲಾಗಿದೆ. ಈ ಕ್ರಮದಿಂದ ಸರ್ಕಾರಿ ಬ್ಯಾಂಕುಗಳಲ್ಲಿ ಖಾಸಗಿ ಬಂಡವಾಳ (ಖಾಸಗಿ ಮತ್ತು ವಿದೇಶಿ ಸಂಸ್ಥೆಗಳ) ಹೆಚ್ಚಾಗುತ್ತದೆ.

ಈ ಕಾಯಿದೆಗಳಲ್ಲಿ ತಿದ್ದುಪಡಿ ಹಾಗೂ ಕೆಲವು ಬದಲಾವಣೆಗಳನ್ನು ತರುವುದರ ಹಿಂದೆ ರಾಷ್ಟ್ರೀಕೃತ ಬ್ಯಾಂಕುಗಳನ್ನು ಕ್ರಮೇಣ ಖಾಸಗೀಕರಣದ ಪ್ರಕ್ರಿಯೆಗೆ ಸಂಪೂರ್ಣವಾಗಿ ಒಳಪಡಿಸುವ ಗುಪ್ತ ಕಾರ್ಯಸೂಚಿಯ ವಾಸನೆ ದಟ್ಟವಾಗಿ ಅಡಗಿರುತ್ತಿದೆ. ಹೀಗೆ ಮಾಡಬೇಕೆಂಬುದು ವಿಶ್ವಮಟ್ಟದ ವಿತ್ತೀಯ ಸಂಸ್ಥೆಗಳ ತಾಕೀತು ಆಗಿರುವುದು ಗುಪ್ತ ವಿಚಾರವೇನಲ್ಲ.

ಮತ್ತೊಂದು ಕಳವಳಕಾರಿ ಬೆಳವಣಿಗೆ ಬ್ಯಾಂಕ್ ಕ್ಷೇತ್ರವನ್ನು ಬಾಧಿಸುತ್ತಿರುವುದು, ವೃದ್ಧಿಸುತ್ತಲೇ ಸಾಗುತ್ತಿರುವ ಅನುತ್ಪಾದಕ ಆಸ್ತಿಗಳು (Non-Performing Assets - NPA), ಅಂದರೆ ಮರುಪಾವತಿಯಾಗದ ಸಾಲಗಳು. ೨೦೧೧-೧೨ರ ಸಾಲಿನಲ್ಲಿ, ಬ್ಯಾಂಕ್ ಕ್ಷೇತ್ರದ ರಾಷ್ಟ್ರೀಕೃತ ಬ್ಯಾಂಕುಗಳ ನಿವ್ವಳ ಎನ್.ಪಿ.ಎ. ಅನುಪಾತ (ಭಾರತೀಯ ಸ್ಟೇಟ್ ಬ್ಯಾಂಕ್ ಹಾಗೂ ಅದರ ಸಹವರ್ತಿ ಬ್ಯಾಂಕುಗಳನ್ನು ಹೊರತುಪಡಿಸಿ) ಶೇ. ೧.೪೩ರಷ್ಟಿತ್ತು. ಕಳೆದ ಐದು ವರ್ಷಗಳಲ್ಲಿ, ಇದು ಅತ್ಯಂತ ಹೆಚ್ಚಿನ ಪ್ರಮಾಣವಾಗಿದೆ (ಬಿಸಿನೆಸ್ ಸ್ಟಾಂಡರ್ಡ್ - ೨-೧೦-೨೦೧೨ರ ಸಂಚಿಕೆ, ಪುಟ ೫). ಮುಂದಿನ ವರ್ಷದ, ಅಂದರೆ ಮಾರ್ಚ್ ೨೦೧೩ರ ವೇಳೆಗೆ ಬ್ಯಾಂಕ್ ಕ್ಷೇತ್ರದ ನಿವ್ವಳ ಎನ್.ಪಿ.ಎ. ರೂ. ೧.೫೭ ಲಕ್ಷ, ಕೋಟಿಯಿಂದ (ಜೂನ್ ೨೦೧೨) ಸುಮಾರು ರೂ. ೨ ಲಕ್ಷ ಕೋಟಿ (ರೂ. ೨ ಟ್ರಿಲಿಯನ್) ಏರುವ ನಿರೀಕ್ಷೆಯಿದೆಯೆಂದು ಕೈಗಾರಿಕೆಗಳ ಒಕ್ಕೂಟದ ಸಂಸ್ಥೆ ತಿಳಿಸಿದೆ. (ಮಿಂಟ್ ಪತ್ರಿಕೆ - ಸಂಚಿಕೆ ೬-೧೦-೨೦೧೨ ಪುಟ ೧೦). ಮುಖ್ಯವಾಗಿ, ಆರ್ಥಿಕತೆಯಲ್ಲಿ ತಲೆದೋರಿರುವ ಹಿಂಜರಿತದ ಕಾರಣವೆಂದು ಅದು ತಿಳಿಸಿದೆ.

ಈ ಬೃಹತ್ ಮೊತ್ತದ ಎನ್.ಪಿ.ಎ.ಗಳಿಗೆ ಎಲ್ಲ ಕ್ಷೇತ್ರದ ಸಾಲಗಾರರ ಪಾತ್ರವಿದ್ದರೂ, ದೊಡ್ಡ ಕೈಗಾರಿಕೋದ್ಯಮಿಗಳು, ಕಾರ್ಪೊರೇಟ್ ಉದ್ಯಮಿಗಳು, ವರ್ತಕ ಗುಂಪುಗಳು ಮತ್ತು ಇತರ ದೊಡ್ಡ ಕುಳಗಳದ್ದು ಪ್ರಧಾನ ಪಾತ್ರವಿದೆ. ಇಂತಹ ಶಕ್ತಿಗಳಿಗೆ ೨೦೦೪-೨೦೧೧ರ ಅವಧಿಯ ಬಜೆಟ್‌ಗಳಲ್ಲಿ ಕಾರ್ಪೊರೇಟ್ ವರಮಾನ ತೆರಿಗೆ, ಉತ್ಪಾದನಾ ತೆರಿಗೆ ಮತ್ತು ಸೀಮಾ ಸುಂಕಗಳ ರಿಯಾಯಿತಿ ರೂಪದಲ್ಲಿ ದೊರೆತ ಮೊತ್ತ ರೂ. ೨೧,೨೫,೦೨೩ ಕೋಟಿ. ಇದರ ಜೊತೆಗೆ, ಅಂತಹವರಲ್ಲಿ ಇರುವ ವಂಚಕ ಕುಳಗಳು ಅನೇಕ ಬ್ಯಾಂಕುಗಳಿಗೆ ದೊಡ್ಡ ಮೊತ್ತದ ಸಾಲಗಳನ್ನು ಮರುಪಾವತಿ ಮಾಡದೆ ಪಂಗನಾಮ ಹಾಕಿದ್ದಾರೆ. 'ಉಂಡೂ ಹೋದ, ಕೊಂಡೂ ಹೋದ' ಎಂಬ ಗಾದೆಯ ಮಾತಿನಂತೆ ಇವರು ಎಲ್ಲ ಕಡೆ ಲೂಟಿ ಮಾಡುತ್ತಿದ್ದಾರೆ !!

ಇನ್ನು ದೊಡ್ಡ ಕುಳಗಳ ಮೂರು ಉದಾಹರಣೆಗಳನ್ನು ಗಮನಿಸೋಣ. ನಮ್ಮ ಕರ್ನಾಟಕದವರೇ ಆದ ಅನಭಿಷಿಕ್ತ ಮದ್ಯ ಸಾಮ್ರಾಟ ವಿಜಯ ಮಲ್ಯರ ಕಿಂಗ್‌ಫಿಷರ್ ಏರ್‌ಲೈನ್ಸ್ ತಲುಪಿರುವ ವಿಷಮಸ್ಥಿತಿ ಎಲ್ಲರಿಗೂ ತಿಳಿದ ಸಂಗತಿಯೇ ಆಗಿದೆ. ಈ ಸಂಸ್ಥೆಗೆ ಭಾರತೀಯ ಸ್ಟೇಟ್ ಬ್ಯಾಂಕ್ ಮತ್ತು ಹದಿನಾರು ಇತರ ಬ್ಯಾಂಕುಗಳು ನೀಡಿರುವ ಸಾಲದ ಮೊತ್ತ ಸುಮಾರು ರೂ. ೭,೦೦೦ ಕೋಟಿ. ಇದಕ್ಕೆ ವಿಜಯ ಮಲ್ಯರ ವೈಯಕ್ತಿಕ ಖಾತರಿಯಿದೆ ಎಂದು ಎಸ್‌ಬಿಐನ ಉನ್ನತಮಟ್ಟದ ಅಧಿಕಾರಿ ತಿಳಿಸಿದ್ದಾರೆ ಎಂದು ಒಂದು ವರದಿ ತಿಳಿಸುತ್ತದೆ (ಬಿಸಿನೆಸ್ ಲೈನ್ ಪತ್ರಿಕೆ, ಸಂಚಿಕೆ ೨೫-೯-೨೦೧೨ ಪುಟ ೬).

ದಿ ಸೆಕ್ಯೂರಿಟೈಸೇಷನ್ ಆ್ಯಂಡ್ ರೀಕನ್‌ಸ್ಟ್ರಕ್ಷನ್ ಆಫ್ ಫೈನಾನ್ಷಿಯಲ್ ಅಸೆಟ್ಸ್ ಆ್ಯಂಡ್ ಎನ್‌ಫೋರ್ಸ್‌ಮೆಂಟ್ ಆಫ್ ಸೆಕ್ಯೂರಿಟಿ ಇಂಟರೆಸ್ಟ್ ಆ್ಯಕ್ಟ್‌ನ (೨೦೦೨) ಅನ್ವಯ ಬ್ಯಾಂಕುಗಳು, ಸಾಲಗಾರರು ಅಡಮಾನ ಇಟ್ಟ ಆಸ್ತಿಗಳನ್ನು ಜಪ್ತಿ ಮಾಡಬಹುದು (ಮ್ಯಾಜಿಸ್ಟ್ರೇಟರ ಸಹಾಯದಿಂದ). ಅವುಗಳನ್ನು ಕ್ರಮಬದ್ಧವಾಗಿ ಗರಿಷ್ಠ ಬೆಲೆಗೆ ಮಾರಿ, ಸಾಲಗಳ ಮೊತ್ತವನ್ನು ಚುಕ್ತಾ ಮಾಡಬಹುದು. ಇವೆಲ್ಲವನ್ನೂ ಕೋರ್ಟಿನ ಪರಿವಾನಗಿ ಇಲ್ಲದೆಯೇ ನೆರವೇರಿಸಬಹುದು. ವಿಷಯ ಹೀಗಿರಬೇಕಾದರೆ, ಮದ್ಯ ಸಾಮ್ರಾಟರ ಸಾಲಗಳ ಪ್ರಕರಣದಲ್ಲಿ ಬ್ಯಾಂಕುಗಳು ಏಕೆ ಕಠಿಣ ಕ್ರಮಗಳನ್ನು ಜರುಗಿಸಲು ಹಿಂದೇಟು ಹಾಕುತ್ತಿವೆ ? ಅವುಗಳು ಎದುರಿಸುತ್ತಿರುವ ಒತ್ತಡಗಳೇನು ? ಇದರ ಹಿಂದೆ ಯಾವ ಶಕ್ತಿಗಳ ಕೈವಾಡವಿದೆ ? ಮಲ್ಯ ಒಬ್ಬ ಸಂಸದರಾಗಿರುವುದರಿಂದ, ಕರಾರುವಾಕ್ಕಾಗಿ ಕ್ರಮಗಳು ಜಾರಿಯಾಗುತ್ತಿಲ್ಲವೇ ? ಇಂತಹ ಪ್ರಶ್ನೆಗಳು ಏಳುವುದು ಸಹಜ. ಆದರೆ ಇದೇ ಸರ್ಫೇಸಿ ಆ್ಯಕ್ಟ್‌ನಡಿ, ಅನೇಕ ಚಿಲ್ಲರೆ ಸಾಲಗಳನ್ನು ಮರುಪಾವತಿ ಮಾಡದವರ ಮೇಲೆ ಯಶಸ್ವಿಯಾಗಿ ಕ್ರಮ ಜರುಗಿಸಿರುವುದಕ್ಕೆ ಅನೇಕ ನಿದರ್ಶನಗಳಿವೆ. ಕೆಲವು ಆರ್ಥಿಕ ತಜ್ಞ (?)ರಂತೂ, ಕೈಗಾರಿಕಾ ಸಾಲಗಳಿಗೆ ಇಂತಹ ಕಠಿಣ ಕ್ರಮಗಳನ್ನು ಜಾರಿ ಮಾಡಿದರೆ, ಅದು ಕೈಗಾರಿಕಾ ಬೆಳವಣಿಗೆಗೆ ಮಾರಕವಾಗುತ್ತದೆ ಎಂದು ವಾದಿಸುತ್ತಾರೆ !

ಕಿಂಗ್‌ಫಿಷರ್ ಏರ್‌ಲೈನ್ಸ್‌ನ ಹಾದಿಯಲ್ಲೇ ಮುಂಬೈ ಮೂಲದ ಸಂದೇಸರ ಪರಿವಾರದ ಸ್ಟರ್‌ಲಿಂಗ್ ಗುಂಪಿನ ಕಂಪನಿಗಳು ಮತ್ತು ಹೈದರಾಬಾದ್ ಮೂಲದ ಡೆಕ್ಕನ್ ಕ್ರಾನಿಕಲ್ ಹೋಲ್ಡಿಂಗ್ಸ್ ಕಂಪನಿ ಸಾಗಿವೆ. ಸ್ಟರ್‌ಲಿಂಗ್ ಗುಂಪಿನ ಕಂಪನಿಗಳು ಮತ್ತು ಡೆಕ್ಕನ್ ಕ್ರಾನಿಕಲ್ ಹೋಲ್ಡಿಂಗ್ಸ್ ಕಂಪನಿಗಳಿಂದ ವಸೂಲಾಗಬೇಕಿರುವ ಸಾಲಗಳ ಒಟ್ಟು ಮೊತ್ತ ಕ್ರಮವಾಗಿ ಸುಮಾರು ರೂ. ೬,೦೦೦ ಮತ್ತು ರೂ. ೪,೦೦೦ ಕೋಟಿಯಷ್ಟಿದೆ. ಇಂತಹ ಪ್ರಕರಣಗಳನ್ನು ಬಾಲಂಗೋಚಿ ಬಂಡವಾಳಶಾಹಿಯ ಕೊಡುಗೆಗಳು ಎಂದು ಹೇಳಬಹುದಲ್ಲವೇ ?

ಈ ಲೇಖನದಲ್ಲಿ ಬ್ಯಾಂಕ್ ಕ್ಷೇತ್ರ ಎದುರಿಸುತ್ತಿರುವ ಮೂರು ಸಮಸ್ಯೆ/ವಿಷಯಗಳನ್ನು ಮಾತ್ರ ಪ್ರಸ್ತಾಪಿಸಲಾಗಿದೆ. ಇನ್ನೂ ಹಲವಾರು ಸಮಸ್ಯೆಗಳು ಸವಾಲುಗಳು ಈ ಕ್ಷೇತ್ರವನ್ನು ಮುಕ್ಕಿ ತಿನ್ನುತ್ತಿವೆ. ಎಐಬಿಇಎ, ಈ ಮರುಪಾವತಿಯಾಗದ ಸಾಲಗಳು ಮತ್ತು ಇತರ ಗಹನ ವಿಷಯಗಳ ಬಗೆಗೆ ದೊಡ್ಡ ಹೋರಾಟವನ್ನು ಹೂಡುತ್ತಲೇ ಬಂದಿದೆ. ಸಾರ್ವಜನಿಕರು ನಮ್ಮ ರಾಷ್ಟ್ರದ ಹಿತದಲ್ಲಿ, ಬ್ಯಾಂಕ್ ನೌಕರರ ಈ ರಾಷ್ಟ್ರಪ್ರೇಮಿ ಆಂದೋಳನದಲ್ಲಿ ಕೈಜೋಡಿಸುವುದು ವರ್ತಮಾನದ ತುರ್ತು.

ಕೊಳಲೂರು ರಾಧೇಯ

---

**ಪಟಾಕಿ**

ಕತ್ತಲೆಯ
ಭವಿಷ್ಯವ
ಹೊಂದು
ಬೆಳಕಲ್ಲಿ ಪಟಾಕಿಯ
ತಯಾರು ಮಾಡುವರು
ಶಿವಕಾಶಿಯ
ಚಿಕ್ಕ ಹುಡುಗರು
ಹಣೆಬರಹವ ನೊಂದು !

ಡಾ|| ವಿ. ಪುಗಳೇಂದಿ
ಬಳ್ಳಾರಿ

---



ಸಂದರ್ಶನ ಮತ್ತು ಛಾಯಾಚಿತ್ರ : **ನೇಮಿಚಂದ್ರ**

# ಹಿತ್ತಲ ಗಿಡವೂ ಮದ್ದು

## (ಶ್ರೀಮತಿ ಕೆ. ಎನ್. ಮಾಲತಿ ಅವರ ಸಂದರ್ಶನ)

ಎಲ್ಲದರಲ್ಲೂ ನಮ್ಮ ಲಾಭವನ್ನೇ ನೋಡುವ ನಮ್ಮ ದೃಷ್ಟಿಕೋನ ಮೊದಲು ಬದಲಾಗಬೇಕು. ಸಮುದಾಯದ, ಸಮಾಜದ ಒಳಿತಿಗೆ ನಮ್ಮ ನಾಳಿನ ಪೀಳಿಗೆಯತ್ತ ಯೋಚಿಸುವ ವಿಶಾಲ ಮನೋಭಾವವನ್ನು ಬೆಳೆಸಿಕೊಳ್ಳಬೇಕಿದೆ. ಇಂದು ನಾವು ಪಟ್ಟಣಗಳಲ್ಲಿ 'ನಾಳೆ' ನಮಗೆ ಸೇರಿದ್ದಲ್ಲ ಎಂಬಂತೆ ಬದುಕುತ್ತಿದ್ದೇವೆ. ಇಲ್ಲಿ ಸುತ್ತ ಮುತ್ತ ಕೆಲವು ಫ್ಲ್ಯಾಟ್ ಮಂದಿಗೆ ನಾನು ಹೇಳಿದ್ದೇನೆ 'ನೀವು ಗೊಬ್ಬರ ಮಾಡಿ ಕೊಡಿ, ನಾನು ಕೊಂಡು ಕೊಳ್ಳುತ್ತೇನೆ.' ಹೀಗಾದರೂ ಅವರಿಗೆ ಪ್ರೋತ್ಸಾಹ ನೀಡಿದರೆ, ಉತ್ಸಾಹ ಬರಲಿ ಎಂದು. ಹೇಗೂ ನನ್ನ ಗಿಡಗಳಿಗೆ ನಮ್ಮ ಮನೆಯ ತ್ಯಾಜ್ಯದಿಂದ ತಯಾರಾದ ಗೊಬ್ಬರ ಸಾಲುವುದಿಲ್ಲ, ಹೊರಗಿನಿಂದ ಹಣ ಕೊಟ್ಟು ಕೊಳ್ಳುತ್ತೇನೆ. ಇವರಿಂದಲೇ ಕೊಳ್ಳಲು ನಾನು ಸಿದ್ಧ. ಹೀಗಾದರೂ ಇವರು ಕಸ ಬೀದಿಗೆ ಎಸೆಯದೆ ಗೊಬ್ಬರ ಮಾಡಲಿ ಎಂಬ ಆಸೆ. ಪ್ರತಿಯೊಬ್ಬರೂ ಬೀದಿಗೆ ಎಸೆಯುವ ಕಸದ ಪ್ರಮಾಣವನ್ನು ತಗ್ಗಿಸಿದರೆ, ಇಂದಿನಂತೆ ಬೀದಿಗಳು ತಿಪ್ಪೆಗುಂಡಿಗಳಾಗುವುದಿಲ್ಲ.

ಒಂದು 'ನೇಟಿವ್ ಅಮೆರಿಕನ್ ಪ್ರಾಫೆಸಿ' ಇದೆ, ತುಂಬಾ ಅರ್ಥಪೂರ್ಣವಾಗಿದೆ :

*ಕಟ್ಟಕಡೆಯ ಮರವನ್ನು ಕಡಿದ ಮೇಲೆ*
*ಕಟ್ಟಕಡೆಯ ನದಿಯನ್ನು ವಿಷಮಯಗೊಳಿಸಿದ ಮೇಲೆ*
*ಕಟ್ಟ ಕಡೆಯ ಮೀನನ್ನು ಹಿಡಿದ ಮೇಲೆ*
*ಮನುಷ್ಯನಿಗೆ ಅರಿವಾಗುತ್ತದೆ ಹಣವನ್ನು ತಿನ್ನಲಾಗದು ಎಂದು.*

**ವೈ**ಮಾನಿಕ ರಂಗದ ಸಂಶೋಧನೆ ಮತ್ತು ವಿನ್ಯಾಸದಲ್ಲಿ ಮೂರೂವರೆ ದಶಕಗಳಿಗೂ ಹೆಚ್ಚು ಕಾಲ ಸೇವೆ ಸಲ್ಲಿಸಿದ ಮಾಲತಿ ಅವರು ಜೂನ್ ೧೦, ೧೯೫೦ರಂದು ಬೆಂಗಳೂರಿನಲ್ಲಿ ಜನಿಸಿದರು. ಇವರು ಯು.ವಿ.ಸಿ.ಇ. ಕಾಲೇಜಿನಲ್ಲಿ ಓದಿ, ಎಲೆಕ್ಟ್ರಾನಿಕ್ಸ್ ವಿಭಾಗದಲ್ಲಿ ಇಂಜಿನಿಯರಿಂಗ್ ಪದವಿಯನ್ನು ಪಡೆದರು. ೧೯೭೩ರಲ್ಲಿ ಮೊತ್ತ ಮೊದಲ ಮಹಿಳಾ 'ಡಿಸೈನ್ ಟ್ರೈನೀ' ಆಗಿ ವಿಮಾನ ಕಾರ್ಖಾನೆಗೆ ಸೇರಿಕೊಂಡರು. ಭಾರತದ ದೇಶೀಯ ವಿನ್ಯಾಸದ 'ಅತ್ಯಾಧುನಿಕ ಹಗುರ ಹೆಲಿಕಾಪ್ಟರ್' ಯೋಜನೆಯಲ್ಲಿ 'ಏವಿಯಾನಿಕ್ಸ್' ಮತ್ತು 'ವೆಪನ್ ಸಿಸ್ಟಮ್ಸ್'ನಲ್ಲಿ ಪ್ರಮುಖ ಪಾತ್ರ ವಹಿಸಿದರು. ಮಾಲತಿ ಅವರು ಎರಡೂವರೆ ವರ್ಷಗಳ ಹಿಂದೆ

‘ಅಡಿಶನಲ್ ಜನರಲ್ ಮ್ಯಾನೇಜರ್’ ಆಗಿ ನಿವೃತ್ತಿ ಹೊಂದಿದರು. ನಮ್ಮ ವಿಮಾನ ಕಾರ್ಖಾನೆಯಲ್ಲಿ ‘ಅಡಿಶನಲ್ ಜನರಲ್ ಮ್ಯಾನೇಜರ್’ ಹುದ್ದೆಗೆ ಏರಿದ ಪ್ರಥಮ ಮಹಿಳೆ ಈಕೆ.

ಬೆಂಗಳೂರು ಇಂದು ವೈಮಾನಿಕ ಚಟುವಟಿಕೆಗಳ ಕೇಂದ್ರವಾಗಿದೆ. ನೂರಾರು ಸ್ವದೇಶಿ ಹಾಗೂ ವಿದೇಶಿ ಕಂಪನಿಗಳು ವೈಮಾನಿಕ ರಂಗವನ್ನು ಪ್ರವೇಶಿಸಿವೆ. ಇಂತಹ ಕಂಪನಿಗಳ ಕೆಲಸದ ಆಹ್ವಾನವನ್ನು ನಿರಾಕರಿಸಿ, ಮಾಲತಿ ಅವರು ನಿವೃತ್ತರಾದ ಮೇಲೆ ತಮ್ಮ ಆಸಕ್ತಿಯ ವಿಷಯ ‘ಸಸ್ಟೇನೆಬಲ್ ಲಿವಿಂಗ್’ ಕುರಿತು ತಮ್ಮದೇ ಆದ ರೀತಿಯಲ್ಲಿ ವೈಯಕ್ತಿಕ ನೆಲೆಯಲ್ಲಿ ಅಧ್ಯಯನ ಮತ್ತು ಪ್ರಯೋಗಗಳಲ್ಲಿ ತೊಡಗಿದ್ದಾರೆ. ತಮ್ಮ ಬಡಾವಣೆಯಲ್ಲಿ, ಸುತ್ತಲಿನ ಸಮುದಾಯಕ್ಕೆ ನಮ್ಮ ಇಂದಿನ ಸಮಸ್ಯೆಗಳನ್ನು ಹೆಚ್ಚಿಸದೆ, ಪರಿಹಾರದ ಭಾಗವಾಗುವ ಸರಳ ವಿಧಾನಗಳನ್ನು ತಮ್ಮ ಭಾಷಣ ಮತ್ತು ಉಚಿತ ಕಾರ್ಯಾಗಾರಗಳ ಮೂಲಕ ತಲುಪಿಸುತ್ತಾರೆ. ಸಂಪೂರ್ಣ ಬೆಂಗಳೂರಿನ ಹುಡುಗಿಯಾದ ಮಾಲತಿ ಅವರು ಬೆಂಗಳೂರು ‘ಗಾರ್ಡನ್ ಸಿಟಿ’ಯಿಂದ ‘ಗಾರ್ಬೇಜ್ ಸಿಟಿ’ ಆದದ್ದನ್ನು ಕಂಡವರು. ಆದರೆ ತಿಪ್ಪೆಯಾದ ಬೆಂಗಳೂರನ್ನು ಸುಧಾರಿಸಲು, ಬಂಜರಾದ ಭೂಮಿಯನ್ನು ಫಲವತ್ತಾಗಿಸಲು, ‘ನಾನು ಏನು ಮಾಡಬಲ್ಲೆ, ನಮ್ಮ ಬಡಾವಣೆ, ನಮ್ಮ ನೆರೆಹೊರೆಯ ಸಮುದಾಯದೊಡನೆ ಏನು ಮಾಡಬಲ್ಲೆ’ ಎಂದು ಯೋಚಿಸಿ, ಕಾರ್ಯರೂಪಕ್ಕೆ ಇಳಿಸುತ್ತಿರುವ ಅತ್ಯಂತ ಉತ್ಸಾಹಿ ಪ್ರಯೋಗಶೀಲೆ.

ಅವರ ತಾರಸಿಯ ಕೈದೋಟದಲ್ಲಿ ಕುಳಿತು ನಡೆಸಿದ ಸಂದರ್ಶನ ಇಲ್ಲಿದೆ :

**ನೇಮಿಚಂದ್ರ :** ಮಾಲತಿ ಅವರೆ, ದೀರ್ಘ ಕಾಲ ವೈಮಾನಿಕ ರಂಗದ ಅನುಭವವಿದ್ದ ನಿಮಗೆ ನಿವೃತ್ತರಾದ ಮೇಲೆ ಸುಲಭವಾಗಿ ಕೆಲಸ ಸಿಗುತ್ತಿತ್ತು. ಆದರೆ ನೀವು ತಾಂತ್ರಿಕ ರಂಗದ ಕೆಲಸವನ್ನು ನಿರಾಕರಿಸಿ, ನಿಮ್ಮ ತಾರಸಿಯ ಮೇಲೆ ಕೈದೋಟ ಮಾಡಿ, ಮನೆಯ ತಿಪ್ಪೆ ಹೊರಗೆ ಎಸೆಯದಂತೆ ‘ಕಾಂಪೋಸ್ಟ್ ಗೊಬ್ಬರ’ ಮಾಡುವ ಬಗ್ಗೆ ಪ್ರಯೋಗಕ್ಕೆ ಇಳಿದಿರಿ. ವೈಮಾನಿಕ ರಂಗದಲ್ಲಿ ಮುಂದುವರಿಯಲು ನಿಮಗೆ ಆಸಕ್ತಿ ಇರಲಿಲ್ಲವೆ ?

**ಕೆ. ಎಸ್. ಮಾಲತಿ :** ವೈಮಾನಿಕ ರಂಗದ ಸಂಶೋಧನೆ ಮತ್ತು ವಿನ್ಯಾಸದ ಕೆಲಸ ನನಗೆ ಅತ್ಯಂತ ಖುಷಿ ಮತ್ತು ತೃಪ್ತಿ ನೀಡಿದೆ. ಆದರೆ ನನಗೆ ಅನೇಕ ಆಸಕ್ತಿಗಳು ಇದ್ದ ಕಾರಣ, ಅವೆಲ್ಲಕ್ಕೂ ಪೂರ್ಣವಾಗಿ ತೊಡಗಿಕೊಳ್ಳಲು ನಿವೃತ್ತಳಾದ ಮೇಲೆ ಸಾಧ್ಯವಾಯಿತು.

**ನೇಮಿ :** ನೀವು ನಿವೃತ್ತರಾದ ಮೇಲೆ ‘ಎಕ್ಸ್‌ಪ್ಲೋರ್ ಮತ್ತು ಎಕ್ಸ್‌ಪ್ರೆಸ್ ಸೆಂಟರ್ ಫಾರ್ ಎಕ್ಸ್‌ಪ್ಲೋರಿಂಗ್ ಲಿಂಕ್ಸ್ ಬಿಟವೀನ್ ಸಯನ್ಸ್ ಆರ್ಟ್ ಅಂಡ್ ಟೆಕ್ನಾಲಜಿ’ ಆರಂಭಿಸಿದ್ದೀರಿ. ‘ಸಸ್ಟೇನೆಬಲ್ ಲಿವಿಂಗ್’ ಬಗ್ಗೆ ಕಾರ್ಯಾಗಾರಗಳನ್ನು ನಡೆಸುತ್ತೀರಿ. ನಿಮ್ಮ ಇಂದಿನ ಜೀವನಶೈಲಿ ನಿಮ್ಮ ಉತ್ಕಟ ಆಸಕ್ತಿಯನ್ನು ಪ್ರತಿಬಿಂಬಿಸುತ್ತಿದೆ.

**ಮಾಲತಿ :** ‘ಸಸ್ಟೇನೆಬಲ್ ಲಿವಿಂಗ್’ ಬಗ್ಗೆ ನನ್ನ ಆಸಕ್ತಿ ಮೊದಲಿಂದಲೂ ಇತ್ತು. ಪರಿಸರಕ್ಕೆ ಹಾನಿಯಲ್ಲದ, ಅಲ್ಪಕಾಲಿಕ ಅನುಕೂಲಕ್ಕೆ ನಾಳಿನ ನೆಮ್ಮದಿಯನ್ನು ಬಲಿಕೊಡದ, ಬೃಹತ್ ಪ್ರಮಾಣದ ತಿಪ್ಪೆಯನ್ನು ಉತ್ಪಾದಿಸದ, ಸರಳ ಮತ್ತು ಸಹಜ ಜೀವನಶೈಲಿಗೆ ಹಿಂತಿರುಗುವ ದಾರಿಗಳನ್ನು ಕಂಡುಕೊಳ್ಳುವ ಪ್ರಯೋಗಾತ್ಮಕ ಪ್ರಯತ್ನದಲ್ಲಿ ಈಗ ತೊಡಗಿದ್ದೇನೆ. ನನ್ನ ನೆರೆಹೊರೆಯವರನ್ನು, ಬಡಾವಣೆಯ ಸಮುದಾಯವನ್ನು ಒಳಗೊಳ್ಳುವ ಸಣ್ಣ ಪ್ರಯತ್ನ .

**ನೇಮಿ :** ನಿಮ್ಮ ಬ್ಲಾಗ್ ಬಹಳ ಆಸಕ್ತಿಯುತವಾಗಿದೆ. ವಿಸ್ಮೃತಿಗೆ ಹೋದ ಗೋಣಿಸೊಪ್ಪಿನಂತಹ ವಿಷಯಗಳನ್ನು ಹೊಸದಾಗಿ ತಿಳಿದುಕೊಳ್ಳಲು ಸಾಧ್ಯವಾಗುತ್ತಿದೆ.

**ಮಾಲತಿ :** ಗೋಣಿಸೊಪ್ಪು ನನ್ನ ಆವಿಷ್ಕಾರವೇನೂ ಅಲ್ಲ. ನಮ್ಮ ಕೆಲಸದಾಕೆಗೆ ಗೊತ್ತಿರುವಷ್ಟು ಸಸ್ಯಗಳ ಬಗ್ಗೆ, ಪೌಷ್ಟಿಕಾಂಶದ ಬಗ್ಗೆ ನಾವು ತಿಳಿದುಕೊಂಡರೆ, ಅತ್ಯಂತ ಕಡುಬಡವರು ತ್ಯಾಜ್ಯವನ್ನು ಉತ್ಪಾದಿಸದೆ ಬದುಕುವ ಪರಿಯನ್ನು ನಾವು ಅರಿತು ಅಳವಡಿಸಿಕೊಂಡರೆ, ಸಮಸ್ಯೆಯ ಭಾಗವಾಗದೆ, ಪರಿಹಾರದತ್ತ ಸಣ್ಣ ಹೆಜ್ಜೆಯನ್ನು ಇಟ್ಟ ಸಮಾಧಾನ ದೊರೆಯುತ್ತದೆ.

**ನೇಮಿ :** ನಿಮ್ಮ ಕೆಲಸದಾಕೆಯ ಸಸ್ಯದ ಜ್ಞಾನ ? ಏನು ಹಾಗಂದರೆ ಅರ್ಥವಾಗಲಿಲ್ಲ.

**ಮಾಲತಿ :** ಹೇಳ್ತೀನಿ ತಾಳಿ. ನೀವೆಂದಾದರೂ ಕಳೆ ಗಿಡವನ್ನು ತಿಂದಿದ್ದೀರಾ ?

**ನೇಮಿ :** ಕಳೆ ಗಿಡ ಯಾರು ತಿನ್ನುತ್ತಾರೆ ?

**ಮಾಲತಿ :** ಅಮೆರಿಕದ ಎಫ್. ಡಿ. ಐ. ಪ್ರಕಾರ ಅದು ಒಂದು ಕಳೆ ಗಿಡ. ಆದರೆ ಅದು ಅತ್ಯಂತ ಪೌಷ್ಟಿಕಾಂಶದಿಂದ ಕೂಡಿದ ಗಿಡ.

**ನೇಮಿ :** ಎಫ್. ಡಿ. ಐ. ಹೇಳಿದ್ದೆಲ್ಲ ನಂಬಬೇಕಿಲ್ಲ, ಬಿಡಿ. ಎಫ್. ಡಿ. ಐ. ಗೆ ಅರ್ಧ ಹಣ ಔಷಧಿ ಕಂಪನಿಗಳಿಂದ ಬರುತ್ತದೆ. ಅದಿರಲಿ, ಯಾವುದು ಈ ಕಳೆ ಗಿಡ, ಅತ್ಯಂತ ಪೌಷ್ಟಿಕಾಂಶ ಇರುವುದು ?






**ಮಾಲತಿ :** ಬನ್ನಿ ತೋರಿಸುತ್ತೇನೆ.

(ಮಾಲತಿಯವರ ತಾರಸಿಯ ಕೈದೋಟಕ್ಕೆ ಬಂದು ಕುಳಿತು, ಇಲ್ಲಿಯೇ ಸಂದರ್ಶನ ಮುಂದುವರಿಸಿದೆವು. ಮಾಲತಿ ಅವರ ತಾರಸಿಯಲ್ಲಿ ಮೂಲಂಗಿ, ಹುರುಳಿ, ಕೆಸವಿನ ದಂಟು, ಪಾಲಕ್, ಪುದೀನಾ, ಮೆಂತ್ಯಾ, ಕಡೆಗೆ ನುಗ್ಗೇಕಾಯಿ ಗಿಡವೂ ಇತ್ತು. ಟ್ಯೊಮ್ಯಾಟೋ ಗಿಡ ಕಾಯಿಯ ಭಾರಕ್ಕೆ ನೆಲಕ್ಕೆ ಒರಗಿತ್ತು).

**ಮಾಲತಿ :** ನೋಡಿ, ಇಲ್ಲಿ ಕುಂಡಗಳಿಂದ ಕಳೆ ಗಿಡ ಕೀಳುತ್ತಿದ್ದೆ. ನನ್ನ ಕೆಲಸದಾಕೆ ನನಗೆ ಸಹಾಯ ಮಾಡುತ್ತಿದ್ದಳು. ನಾನು ನೋಡುತ್ತೇನೆ, ನಾನು ಕಳೆ ಗಿಡ ಅಂತ ಕಿತ್ತು ಎಸೆದ ಈ ಗಿಡವನ್ನು ಆಕೆ ಆಯ್ದುಕೊಂಡು ಸೆರಗಲ್ಲಿ ಕಟ್ಟಿಕೊಳ್ಳುತ್ತಿದ್ದಳು. ''ಕಳೆ ಗಿಡ ತಗೊಂಡು ಏನು ಮಾಡುತ್ತೀಯಾ ?'' ಅಂತ ಕೇಳಿದೆ. ''ಅರೆ, ಇದು ಗೋಣಿ ಸೊಪ್ಪು ಅಮ್ಮ, ಕಳೆ ಗಿಡ ಅಲ್ಲ. ಸೊಪ್ಪು ಮಾಡ್ಕೊಂಡು ತಿನ್ನುತ್ತೇವೆ'' ಅಂದಳು.

**ನೇಮಿ :** ಗೋಣಿ ಸೊಪ್ಪು? ನಮ್ಮ ಹಳ್ಳಿಯ ಕಡೆಯಲ್ಲಿ ಕೇಳಿದ ಹೆಸರು, ಎಲ್ಲಿ ತೋರಿಸಿ, ಹೇಗೆ ಕಾಣಿಸುತ್ತದೆ ?

(ಮಾಲತಿ ತೋರಿಸಿದ ಸೊಪ್ಪು ನನಗೆ ಸಾಕಷ್ಟು ಪರಿಚಿತವಾಗಿ ಕಂಡಿತು.)

**ನೇಮಿ :** ಇದು ಗೋಣಿ ಸೊಪ್ಪಾ ? ಈ ಗಿಡ ಎಲ್ಲಾ ಕಡೆ ನೋಡುತ್ತೇನೆ, ಹೆಸರು ಮಾತ್ರ ಗೊತ್ತಿರಲಿಲ್ಲ. ಇದನ್ನು ತಿನ್ನುತ್ತಾರೆ ಎಂಬುದೂ ಗೊತ್ತಿರಲಿಲ್ಲ.

**ಮಾಲತಿ :** ನನಗೆ ಈ ಗೋಣಿಸೊಪ್ಪಿನ ಪೌಷ್ಟಿಕಾಂಶದ ಬಗ್ಗೆ ತಿಳಿಯಬೇಕಿತ್ತು. ಇಂಟರ್‌ನೆಟ್‌ನಲ್ಲಿ ವಿಪರೀತ ಅಲೆದಾಡಿ ಕಡೆಗೂ ಪತ್ತೆ ಹಚ್ಚಿದೆ. ಇದರ ವೈಜ್ಞಾನಿಕ ಹೆಸರು 'ಪಾರ್ಟುಲ್ಯಾಕಾ ಓಲೆರೇಸಿ' ಅದ್ಭುತ ಸೊಪ್ಪಿದು. ಇದರಲ್ಲಿ ಎಷ್ಟೊಂದು ಪೌಷ್ಟಿಕಾಂಶ ಇದೆ ಗೊತ್ತೆ? ಭಾರತದ ನಾಟಿ ಗಿಡ ಇದು, ಈ ನೆಲದ ಗಿಡ, ಈಯುಲ್ ಗಿಬ್ಬನ್ಸ್ ಎಂಬ ಅಮೆರಿಕದ 'ವೈಲ್ಡ್ ಫೂಡ್' ತಜ್ಞರು ಇದನ್ನು 'ಜಗತ್ತಿಗೆ ಭಾರತದ ಅದ್ಭುತದ ಕೊಡುಗೆ' ಎನ್ನುತ್ತಾರೆ. ಆದರೆ ಎಫ್.ಡಿ.ಐ. ಮಾತ್ರ ಇದನ್ನು ಕಳೆ ಅನ್ನುತ್ತದೆ.

**ನೇಮಿ :** ತುಂಬಾ ಕುತೂಹಲಕಾರಿಯಾಗಿ ಇದೆ.

**ಮಾಲತಿ :** ಇದು ಚೀನಾ, ಮೆಕ್ಸಿಕೋ, ಗ್ರೀಸ್ ದೇಶಗಳಲ್ಲಿ ಜನಪ್ರಿಯ ಸೊಪ್ಪೂ ಹೌದು, ಗಿಡಮೂಲಿಕೆಯೂ ಹೌದು. ಅಲ್ಲೆಲ್ಲ ಇದನ್ನು ಸಲಾಡ್ ರೂಪದಲ್ಲಿ ತಿನ್ನುತ್ತಾರೆ. ಬೇಯಿಸಿ ಅಡಿಗೆಯನ್ನೂ ಮಾಡುತ್ತಾರೆ.

**ನೇಮಿ :** ಇದನ್ನು ಸುಲಭವಾಗಿ ಬೆಳೆಯಬಹುದೆ ?

**ಮಾಲತಿ :** ಇದು ಎಷ್ಟು ಗಟ್ಟಿ ಗಿಡ ಗೊತ್ತೆ, ಏನೂ ಆರೈಕೆ ಇಲ್ಲದೆ ಹರಡಿ ಬೆಳೆಯುತ್ತದೆ. ಇದರ ದಪ್ಪನೆ ರಸ ತುಂಬಿದ ಸಕ್ಯುಲೆಂಟ್ ಎಲೆಗಳನ್ನು ನೋಡಿ. ಎಲೆಗಳಲ್ಲಿ, ಕಾಂಡದಲ್ಲಿ ನೀರನ್ನು ಸಂಗ್ರಹಿಸಿ ಇಟ್ಟುಕೊಳ್ಳುತ್ತದೆ.

**ನೇಮಿ :** ಇದರಿಂದ ಆರೋಗ್ಯದ ಲಾಭಗಳೇನು?

**ಮಾಲತಿ :** ಇದರಲ್ಲಿ ಒಮೆಗಾ-೩ ಫ್ಯಾಟಿ ಆಸಿಡ್ ಇದೆ. ನಮಗೆ ಗೊತ್ತಿರುವಂತೆ, ಸಂಶೋಧನೆಗಳು ಹೇಳುವಂತೆ ಒಮೆಗಾ-೩ ಫ್ಯಾಟಿ ಆಸಿಡ್ ಹೃದ್ರೋಗ, ಪಾರ್ಶ್ವವಾಯುವಿನ ಅಪಾಯವನ್ನು ತಗ್ಗಿಸುತ್ತದೆ ಹಾಗೂ ಮಕ್ಕಳಲ್ಲಿ ಆಟಿಸಂ ಬಾರದಂತೆ ತಡೆಯುವಲ್ಲಿ ಸಹಾಯಕವಾಗಿದೆ. ಅಷ್ಟೇ ಅಲ್ಲದೆ, ಇದರಲ್ಲಿ ಯಾವುದೇ ಹಣ್ಣು ಮತ್ತು ತರಕಾರಿಯಲ್ಲಿ ಇರುವುದಕ್ಕಿಂತ ಹತ್ತರಿಂದ ಇಪ್ಪತ್ತು ಪಟ್ಟು ಹೆಚ್ಚು ಮೆಲಟೋನಿನ್ ಇದೆ. ಮೆಲಟೋನಿನ್, ಆ್ಯಂಟಿ-ಆಕ್ಸಿಡೆಂಟ್ ಆಗಿದ್ದು ಕ್ಯಾನ್ಸರ್ ಬೆಳವಣಿಗೆಯನ್ನು ತಡೆಯುತ್ತದೆ. ಇದಲ್ಲದೆ ಗೋಣಿ ಸೊಪ್ಪಿನಲ್ಲಿ ವಿಟಮಿನ್ 'ಎ' ಮತ್ತು ವಿಟಮಿನ್ 'ಸಿ' ಕೂಡ ಸಾಕಷ್ಟು ಇವೆ. ರಾಗಿಮುದ್ದೆ, ಗೋಣಿಸೊಪ್ಪಿನ ಪಲ್ಯ ಒಳ್ಳೆ ಕಾಂಬಿನೇಶನ್.

**ನೇಮಿ :** ನಮ್ಮ ಮನೆಯಲ್ಲಿ ಅನೇಕ ಆಯುರ್ವೇದ ಹಾಗೂ ಗಿಡಮೂಲಿಕೆಗಳನ್ನು ಕುರಿತ ಪುಸ್ತಕಗಳಿವೆ. ಆದರೆ ಗೋಣಿಸೊಪ್ಪಿನ ಬಗ್ಗೆ ತಿಳಿದಿರಲಿಲ್ಲ. ಸ್ಥಳೀಯವಾದ, ಯಥೇಚ್ಛವಾಗಿ ಬೆಳೆಯುವ, ಆರೋಗ್ಯದ ಆಗರವಾಗಿರುವ ಇಂತಹ ಗಿಡಗಳ ಬಗ್ಗೆ ಸಾಮಾನ್ಯ ಅರಿವನ್ನು ಬೆಳೆಸುವುದು, ಗುಳಿಗೆ ನುಂಗುವುದಕ್ಕಿಂತ ಮುಖ್ಯ ಅಲ್ಲವೆ ?

**ಮಾಲತಿ :** ಖಂಡಿತಾ ಹೌದು.

**ನೇಮಿ :** ಅಕ್ಟೋಬರ್‌ನಲ್ಲಿ ನೀವು ಪಾರ್ಕಿನಲ್ಲಿ ನಿಂತುಕೊಂಡು ಗಿಡ ಹಂಚಿದಿರಿ ಅಂತಾ ಕೇಳಿದೆ.

**ಮಾಲತಿ :** ಹೌದು, ನಾನು ಮತ್ತು ನನ್ನ ಸ್ನೇಹಿತರಾದ ಬದ್ರಿ ಹಾಗೂ ಅವರ ಹೆಂಡತಿ ೨ರಿಂದ ೮ನೇ ತಾರೀಖು ಅಕ್ಟೋಬರ್ ತಿಂಗಳ ಒಂದು ವಾರ 'ಜಾಯ್ ಆಫ್ ಗಿವಿಂಗ್ ವೀಕ್' ಆಚರಿಸಿದೆವು. ನಮ್ಮ ಸ್ಥಳೀಯ ಸಮುದಾಯದಲ್ಲಿ 'ಕಿಚನ್ ಗಾರ್ಡನ್' ಬಗ್ಗೆ ಆಸಕ್ತಿ ಹುಟ್ಟಿಸಲು, ಜನರು ಮನೆ ಮನೆಗಳಲ್ಲಿ ರಾಸಾಯನಿಕಗಳಿಲ್ಲದ ಆರೋಗ್ಯಕರ ಹಣ್ಣು ತರಕಾರಿ ಗಿಡಗಳನ್ನು ಬೆಳೆಯುವುದನ್ನು ಪ್ರೋತ್ಸಾಹಿಸಲು, ನಾವು ಉಚಿತವಾಗಿ ಗಿಡಗಳನ್ನು ಹಂಚಲು ನಿರ್ಧರಿಸಿದೆವು. ಜೊತೆಗೆ 'ನಿಮ್ಮ ಮನೆಯನ್ನು ಹಸಿರಾಗಿಸುವುದು ಹೇಗೆ, ಮನೆಯಲ್ಲೇ ಕಾಂಪೋಸ್ಟ್ ಗೊಬ್ಬರ ಮಾಡುವುದು ಹೇಗೆ, ನಿಮ್ಮ ತರಕಾರಿಗಳನ್ನು ನೀವೇ ಬೆಳೆಯುವುದು ಹೇಗೆ' ಎಂದೂ ಒಂದಿಷ್ಟು ಪ್ರಚಾರ ಮಾಡಿದೆವು.

**ನೇಮಿ :** ಪಾರ್ಕಿಗೆ ಹೋಗಿ ಗಿಡ ಹಿಡಿದುಕೊಂಡು ನಿಂತಿದ್ದಿರಾ ?

**ಮಾಲತಿ :** ಹೌದು, ಆ ವಾರದಲ್ಲಿ ಪ್ರತಿ ದಿನವೂ ನಮ್ಮ ಬಡಾವಣೆಯ ಬೇರೆ ಬೇರೆ ಪಾರ್ಕ್‌ಗಳಿಗೆ ಬೆಳಗ್ಗೆ ೬.೩೦ಕ್ಕೆ ಹೋಗುತ್ತಿದ್ದೆವು. ಮುಂಜಾನೆ ವಾಕ್ ಮಾಡಲು ಬಂದ ಯಾರೇ ಕಿಂಚಿತ್ತು ಆಸಕ್ತಿ ತೋರಿಸಿದರೂ, ಅವರಿಗೆ ಉಚಿತವಾಗಿ ಬೀಜಗಳನ್ನು, ಗಿಡಗಳನ್ನು ಹಂಚಿದೆವು. ಅನೇಕರು 'ಮಾಡಿ ತೋರಿಸುವ, ನೋಡಿ ಕಲಿಯಬಲ್ಲ ವರ್ಕ್‌ಶಾಪ್' ನಡೆಸಲು ಕೇಳಿದರು. ಅಕ್ಟೋಬರ್ ಕೊನೆಯ ವಾರ ನಮ್ಮ ಮನೆಯ ತಾರಸಿಯ ಕೈದೋಟದಲ್ಲಿ



ಅರ್ಧದಿನದ ಉಚಿತ ಕಾರ್ಯಾಗಾರವನ್ನು ನಡೆಸಿದೆವು.

**ನೇಮಿ :** ಇಂತಹ ಕಾರ್ಯಾಗಾರ ಇದೆ ಎಂದು ನಿಮ್ಮ ಬಡಾವಣೆಯ ಜನಕ್ಕೆ ಹೇಗೆ ಸುದ್ದಿ ತಲುಪಿಸಿದಿರಿ?

**ಮಾಲತಿ :** ಇಲ್ಲಿ ನಮ್ಮ ರಾಜರಾಜೇಶ್ವರಿನಗರದ ಬಡಾವಣೆಯಲ್ಲಿ ನಿವೃತ್ತ ಪತ್ರಕರ್ತರಾದ ರಾಮಸ್ವಾಮಿ ಅವರಿದ್ದಾರೆ. ಅವರು ಸಣ್ಣ ಸಮುದಾಯ ಪತ್ರಿಕೆ 'ರೀಚ್ ಔಟ್' ಮೂಲಕ ನಮ್ಮ ಬಡಾವಣೆಯ ಜನರಿಗೆ ಸುದ್ದಿ ಮುಟ್ಟಿಸಿದರು. ವಿವಿಧ ಹಿನ್ನೆಲೆಯ ಜನರು ಬಂದಾಗ ಖುಷಿಯಾಯಿತು. ಜೊತೆಗೆ ನಮ್ಮ ಸುತ್ತ ಮುತ್ತಲ ಮನೆಯ ಪುಟಾಣಿಗಳು ಅನುಜಾ, ಶ್ರೇಯಾ, ನಿಧಿ, ಸ್ಮಿತ, ಸುಷ್ಮಾ ಎಲ್ಲಿಲ್ಲದ ಆಸಕ್ತಿ ತೋರಿದವು. ಬೀಜವನ್ನು ಬಿತ್ತುವುದು, ಗಿಡವನ್ನು ಬೆಳೆಸಿ ರಕ್ಷಿಸುವುದು, ಮರವಾಗಿ ಬೆಳೆಯುವಂತೆ ಪೋಷಿಸುವುದು ಇವನ್ನು ಎಳೆಯ ವಯಸ್ಸಿನಲ್ಲೇ ಕಲಿತರೆ, ನಮ್ಮ ನಾಳೆಗಳಿಗೆ ಭರವಸೆ ಇರುತ್ತದೆ. ನೀವು ಕೈಯಿಂದ ನೆಟ್ಟು, ನೀರೆರೆದ ಮರಗಳನ್ನು ಕಡಿಯಲು ಹೋಗುವುದಿಲ್ಲ.

**ನೇಮಿ :** ಕಾರ್ಯಾಗಾರವನ್ನು ಹೇಗೆ ನಡೆಸಿದಿರಿ ?

**ಮಾಲತಿ :** ಬಂದವರಿಗೆ ವಿವಿಧ ತರಕಾರಿ ಮತ್ತು ಗಿಡ ಮೂಲಿಕೆಗಳನ್ನು ಪರಿಚಯಿಸಿ, ಗುರುತಿಸಲು ಹೇಳಿಕೊಟ್ಟೆ. ಗೋಧಿ ಹುಲ್ಲನ್ನು ಎಷ್ಟು ಸುಲಭವಾಗಿ ಬೆಳೆಯಬಹುದು ಎಂದು ಹಲವರು ಅಚ್ಚರಿಗೊಂಡರು. ಗೋಧಿ ಹುಲ್ಲಿನ ಲಾಭಗಳು ಇಂದು ಬಹಳಷ್ಟು ಜನಕ್ಕೆ ಗೊತ್ತಿದೆ, ಅದರಲ್ಲೂ ಕ್ಯಾನ್ಸರ್ ಚಿಕಿತ್ಸೆಯಲ್ಲಿ ಇದು ಮುಖ್ಯ ಪಾತ್ರ ವಹಿಸಬಲ್ಲದು. ತುಂಬಾ ಖುಷಿಯಿಂದ ಕುತೂಹಲದಿಂದ ಭಾಗವಹಿಸಿದರು. ಪ್ಲಾಸ್ಟಿಕ್ ಬಾಟಲ್‌ಗಳನ್ನು ಕತ್ತರಿಸಿ ಗಿಡ ನೆಡಲು ಬಳಸುವುದನ್ನೂ ತೋರಿಸಿಕೊಟ್ಟೆವು. ನನ್ನ ಕೈದೋಟದ ಆಸಕ್ತಿಯನ್ನು ಹಂಚಿಕೊಳ್ಳುವ ನನ್ನ ಸ್ನೇಹಿತರಾದ ಬದ್ರಿ ಅವರ ಅನುಭವವಂತೂ ತುಂಬಾ ಜನಕ್ಕೆ ಸ್ಫೂರ್ತಿ ನೀಡಿತು.

**ನೇಮಿ :** ಬದ್ರಿ ಅವರು ಯಾರು ?

**ಮಾಲತಿ :** ಅವರು ವೃತ್ತಿಯಿಂದ ಐಟಿ ಇಂಜಿನಿಯರ್. ಆದರೆ ಅವರ ಪರಿಚಯ ನನಗೆ ಆದದ್ದು ಪರಿಸರ ಮತ್ತು ಕೈದೋಟ ಕುರಿತ ನಮ್ಮ ಸಮಾನ ಆಸಕ್ತಿಯಿಂದ. ಅವರಂತೂ ತಮ್ಮ ಬಾಲ್ಕನಿಯಲ್ಲಿ ಮುರಿದ ಬಕೆಟ್‌ನಲ್ಲಿ, ಪ್ಲಾಸ್ಟಿಕ್ ಥೈಲಿಯಲ್ಲಿ ಏನು ಸಿಕ್ಕರೆ ಅದರಲ್ಲಿ ತರಕಾರಿ ಬೆಳೆದಿದ್ದಾರೆ. ಇಷ್ಟು ಸಾಲದೆಂಬಂತೆ, ತಮ್ಮ ಕೆಲಸಕ್ಕೆ ಹೋಗುವ ಹಾದಿಯಲ್ಲಿ ಒಂದು ಖಾಲಿ ಸೈಟನ್ನು ತಿಂಗಳಿಗೆ ಸಾವಿರ ರೂಪಾಯಿ ಕೊಟ್ಟು ಬಾಡಿಗೆಗೆ ತೆಗೆದುಕೊಂಡು ವಾರಾಂತ್ಯದಲ್ಲಿ ಗಂಡ ಹೆಂಡತಿ ಅಲ್ಲಿ ತರಕಾರಿ ಬೆಳೆಯುತ್ತಾರೆ. ತರಕಾರಿ ಬೆಲೆ ದುಬಾರಿ ಎಂಬ ಕಾರಣಕ್ಕಲ್ಲ, ತಾಜಾ, ಸಾವಯವ ಕೃಷಿಯ ಸಹಜ ಆರೋಗ್ಯಕರ ತರಕಾರಿಯನ್ನು ಸ್ವತಃ ಬೆಳೆದು, ಭೂಮಿಯನ್ನು ಒಂದಿಷ್ಟು ಹಸಿರಾಗಿಸುವ ಯತ್ನ.

**ನೇಮಿ :** ನಿಜಕ್ಕೂ ಅದ್ಭುತ. ನಮ್ಮ ನಗರಗಳಲ್ಲಿ ಖಾಲಿ ಜಾಗ ಕಂಡಲೆಲ್ಲ ಸಣ್ಣ ಪ್ರಮಾಣದಲ್ಲಾದರೂ ಸರಿ, ಕಾಂಪೋಸ್ಟ್ ಗೊಬ್ಬರ ತಯಾರಿಸಿ, ತರಕಾರಿ ಬೆಳೆದರೆ ನಮ್ಮ ಆರ್ಗ್ಯಾನಿಕ್ ಆಹಾರದ ಕೊರತೆ ಕಡಮೆಯಾಗುತ್ತದೆ.

**ಮಾಲತಿ :** ನಾವು ಒಬ್ಬೊಬ್ಬರೂ ಒಂದಿಷ್ಟು ಸಮಯ ಸ್ವಲ್ಪ ಗಮನ ಹರಿಸಿದರೆ, ಬೆಂಗಳೂರು ಬದಲಾಗಬಲ್ಲದು. ಭೂಮಿತಾಯಿಯನ್ನು ಹಸಿರಾಗಿಸುವ ಕಮಿಟ್‌ಮೆಂಟ್ ನಮ್ಮದಾಗಬೇಕು. ೧೨ ಆಗಸ್ಟ್, ೨೦೧೨ರಂದು 'ವರ್ಲ್ಡ್ ಕಿಚನ್ ಗಾರ್ಡ್‌ನ್ ದಿನ'ವನ್ನು ಆಚರಿಸಿದೆವು.

**ನೇಮಿ :** ಹಾಗೊಂದು ದಿನ ಇದೆ ಎಂದೂ ನನಗೆ ಗೊತ್ತಿರಲಿಲ್ಲ.

**ಮಾಲತಿ :** ಇದೆ, ಈ ದಿನ ಜನರು ತಮ್ಮ ಪರಿಶ್ರಮದಿಂದ ಬೆಳೆದ ಆಹಾರವನ್ನು ಸವಿದು ಸಂಭ್ರಮಿಸುವ ದಿನ. ಈ ದಿನ ತಮ್ಮ ಕೈದೋಟದಲ್ಲಿ ಕುಟುಂಬ ಸ್ನೇಹಿತರು ಮತ್ತು ಸ್ಥಳೀಯ ಸಮುದಾಯದೊಡನೆ ಮನೆಯಲ್ಲಿ ಬೆಳೆದ ಅಥವಾ ಸ್ಥಳೀಯವಾಗಿ ಬೆಳೆದ ಆಹಾರವನ್ನು ಸೇವಿಸುವ ದಿನ. ಇಂದು ಬಡವರಿಗೆ ಹಣ್ಣು ತರಕಾರಿ ಕೊಳ್ಳುವುದು ತುಂಬಾ ದುಬಾರಿಯಾಗುತ್ತಿದೆ. ಮಧ್ಯಮ ವರ್ಗಕ್ಕೆ ಕೊಳ್ಳಲು ಸಾಧ್ಯವಿದ್ದರೂ, ರಾಸಾಯನಿಕ ಗೊಬ್ಬರ ಕೀಟನಾಶಕಗಳ ಹಾವಳಿಯಿಂದ, ಸಹಜವಾದ ಸಾವಯವ ಕೃಷಿಯಿಂದ ಬೆಳೆದ ಆಹಾರ ಸಿಗುವುದು ಕಷ್ಟವಾಗಿದೆ. ನಾವು ತರಕಾರಿಗಳನ್ನು ನಮ್ಮ ಮನೆ, ಕೈದೋಟಗಳಲ್ಲಿ, ಬಾಲ್ಕನಿ, ತಾರಸಿಗಳಲ್ಲಿ ಬೆಳೆಯಬಹುದು. ಅನೇಕ ಹೂವು ಮತ್ತು ತರಕಾರಿ ಗಿಡಗಳನ್ನು ಕೇವಲ ೬ ಅಂಗುಲ ಮಣ್ಣಿನಲ್ಲಿ ಬೆಳೆಯಬಹುದು. ಪತ್ರಿಕೆಗಳ ಹಾಳೆಗಳಿಂದ ಸಣ್ಣ ಕುಂಡಗಳನ್ನು ಮಾಡಿ ಬೀಜ ಬಿತ್ತಿ, ಚಿಗುರೊಡೆದು ಪುಟ್ಟ ಸಸಿಯಾದಾಗ, ದೊಡ್ಡ ಕುಂಡಗಳಿಗೆ ರವಾನಿಸಬಹುದು. ಇಲ್ಲಿ ನೋಡಿ, ನಾನು ತಾರಸಿ ಮೇಲೆ ಒಂದರ ಮೇಲೆ ಒಂದು ಇಟ್ಟಿಗೆ ಇಟ್ಟು ಮಣ್ಣು ತುಂಬಿ ತರಕಾರಿ ಬೆಳೆದಿದ್ದೇನೆ.

**ನೇಮಿ :** ನೀವು ನಿಮ್ಮ ಬಹಳಷ್ಟು ಭಾಷಣಗಳಲ್ಲಿ, ಕಾರ್ಯಾಗಾರಗಳಲ್ಲಿ ಸ್ಥಳೀಯವಾದ

ಆಹಾರ ಸೇವಿಸಿ, ಪರಿಸರ ರಕ್ಷಿಸಿ ಎನ್ನುತ್ತೀರ. ಇದನ್ನು ಸ್ವಲ್ಪ ವಿವರಿಸುತ್ತೀರಾ ?

**ಮಾಲತಿ :** ಸ್ಥಳೀಯವಾದ ತರಕಾರಿ ತಿನ್ನುವುದರ ಮೂಲಕ, ಭೂಮಿ ತಾಯಿಯ ಮೇಲೆ ನಮ್ಮ ಹೆಜ್ಜೆಗಳನ್ನು ಹಗುರವಾಗಿ ಮೆಲ್ಲನೆ ಇಡುತ್ತೇವೆ. ಅಲ್ಲೆಲ್ಲೋ ಅಮೆರಿಕದಲ್ಲಿ ಬೆಳೆದದ್ದನ್ನು ಇಲ್ಲಿ ತಿನ್ನುವ ಅಭ್ಯಾಸ ಮಾಡಿಕೊಂಡರೆ ಏನಾಗುತ್ತದೆ ಗಮನಿಸಿ – ಆ ಆಹಾರ ಅಲ್ಲಿಂದ ಸಾರಿಗೆಯ ಮೂಲಕ ಬರಬೇಕು, ಇಲ್ಲೆಲ್ಲೋ ಫ್ರೀಸರ್‌ನಲ್ಲಿರಬೇಕು. ಅಲ್ಲಿಂದ ಹಂಚಿಕೆದಾರರಿಗೆ ರವಾನೆಯಾಗಬೇಕು. ಭವ್ಯವಾದ ಅಂಗಡಿಗಳಿಗೆ ಬಂದು ಬೀಳಬೇಕು. ಇವೆಲ್ಲಕ್ಕೂ ಎಷ್ಟು ಇಂಧನ, ವಿದ್ಯುತ್‌ಶಕ್ತಿ ಖರ್ಚಾಗುತ್ತದೆ ಗುಣಿಸಿ ನೋಡಿ. ನಮ್ಮ ನೆಲದಲ್ಲಿ, ನಮ್ಮ ಊರಿನ ಸುತ್ತಮುತ್ತಲೇ ಬೆಳೆದ ತರಕಾರಿ, ಹಣ್ಣುಗಳು ಹೆಚ್ಚು ತಾಜಾ ಇರುತ್ತವೆ. ಹೆಚ್ಚು ಇಂಧನ ಹಾಗೂ ಶಕ್ತಿಯ ವೆಚ್ಚವಿಲ್ಲದೆ ಅವು ನಮ್ಮನ್ನು ತಲುಪುತ್ತವೆ. ಪರಿಸರ ರಕ್ಷಣೆಗೆ ಸ್ಥಳೀಯವಾದದ್ದನ್ನು ತಿನ್ನುವುದು ಕೂಡ ಅಗತ್ಯ. ತರಕಾರಿ ಮಾರಲು ನಮಗೆ ಝಗಮಗಿಸುವ ಅಂಗಡಿಗಳು, ಫ್ರೀಸರ್‌ಗಳು, ಆಕರ್ಷಕ ಮಳಿಗೆಗಳು, ವಾಲ್‌ಮಾರ್ಟ್‌ಗಳು ಬೇಕಿಲ್ಲ. ಇಲ್ಲೇ ಸ್ಥಳೀಯವಾಗಿ ಬೆಳೆದದ್ದನ್ನು, ಬೆಳೆದ ರೈತನೇ ತಂದು ಅಲ್ಲಿ ರಸ್ತೆಯ ಮೂಲೆಯಲ್ಲಿ ಎಲ್ಲೋ ಮಾರುವಾಗ, ಅವಕ್ಕೆ ನೂರೆಂಟು ಪ್ಲಾಸ್ಟಿಕ್ ಪ್ಯಾಕಿಂಗ್ ಬೇಕಿಲ್ಲ. ನಮ್ಮ ಅರ್ಧ ಕಸ, ಈ ಅನಗತ್ಯ ಪ್ಯಾಕಿಂಗ್‌ಗಳಿಂದ ಉತ್ಪನ್ನವಾಗುತ್ತದೆ.

**ನೇಮಿ :** ನಮ್ಮ ಆರೋಗ್ಯ ಹಾಗೂ ಆಹಾರದ ಅಗತ್ಯಗಳಿಗೆ ಜೆನಿಟಿಕ್ ಮಾಡಿಫಿಕೇಷನ್ ಬೇಕಿಲ್ಲ, ರಾಸಾಯನಿಕಗಳು ಬೇಕಿಲ್ಲ, ಸರಳ ಸಹಜ ರೀತಿಯಲ್ಲಿ ನಾವು ಪರಿಸರಕ್ಕೆ ಹಾನಿಮಾಡದೆ ನಮ್ಮ ಅಗತ್ಯಗಳನ್ನು ಪೂರೈಸಿಕೊಳ್ಳಬಲ್ಲೆವು.

**ಮಾಲತಿ :** ಖಂಡಿತಾ.

**ನೇಮಿ :** ಇಂತಹ ಕಿಚನ್ ಗಾರ್ಡನ್ ಬಗ್ಗೆ ಇಂಟರ್‌ನೆಟ್‌ನಲ್ಲಿ ಸಾಕಷ್ಟು ನೋಡುತ್ತೇನೆ, ಆದರೆ ನಿಮ್ಮ ಬಡಾವಣೆಯಲ್ಲಿ ಈ ಬಗೆಯಲ್ಲಿ ಕಿಚನ್ ಗಾರ್ಡನ್ ಅನ್ನು ಗಂಭೀರವಾಗಿ ತೆಗೆದುಕೊಂಡವರು ಇದ್ದಾರೆಯೆ ?

**ಮಾಲತಿ :** ಅನೇಕ ಜನರಿದ್ದಾರೆ. ನಮ್ಮ ಬಡಾವಣೆಯಲ್ಲೇ ಇರುವ ಆಶಾ, ಹೇಮಂತ, ಪೀಟರ್, ಅವರ ಮೂವರು ಮಕ್ಕಳು ತಮ್ಮ ಮನೆಯ ತಾರಸಿಯ ಮೇಲೆ ಹಸಿರನ್ನು ಹಾಸಿ ಬೆಳೆಸಿದ್ದಾರೆ. ಅವರು ಸಮೃದ್ಧವಾಗಿ ತರಕಾರಿ ಬೆಳೆಯುತ್ತಾರೆ. ಬಿತ್ತಿ, ಬೆಳೆಸುವ ಪೋಷಿಸುವ ಕ್ರಿಯೆ ಮನಸ್ಸಿಗೆ ಹಿತ, ನೆಮ್ಮದಿ ಮತ್ತು ಶಾಂತಿ ನೀಡುತ್ತದೆ. ದೇಹ ಮತ್ತು ಮನಸ್ಸಿನ ಆರೋಗ್ಯಕ್ಕೆ ಪೂರಕವಾಗುವ



ಕ್ರಿಯೆ ಇದು. ಹೇಮಂತ್ ಓದಿದ್ದು ಇಂಜಿನಿಯರಿಂಗ್, ಕಲೆ ಅವರ ಪ್ರವೃತ್ತಿ. ಇಡೀ ಕುಟುಂಬ ತಮ್ಮ ತಾರಸಿಯ ಕೈದೋಟದಲ್ಲಿ ಸಂಜೆಗಳನ್ನು ಖುಷಿಯಿಂದ ಕಳೆಯುತ್ತಾರೆ. ಎಲ್ಲಕ್ಕಿಂತ ಮುಖ್ಯವಾಗಿ, ಮನೆಯಂಗಳದ, ಹಿತ್ತಲಿನ, ಇಲ್ಲ ತಾರಸಿಯ ಕೈದೋಟಗಳು, ನಮ್ಮ ಮನೆಯ ಕಸವನ್ನೆಲ್ಲ ಕಾಂಪೋಸ್ಟ್ ಗೊಬ್ಬರವಾಗಿ ಪರಿವರ್ತಿಸಿ ಉಪಯೋಗಿಸಿಕೊಳ್ಳಲು ಒಳ್ಳೆಯ ಉತ್ತೇಜನ ನೀಡುತ್ತವೆ.

**ನೇಮಿ :** ಅಂದರೆ ಮನೆಯ ಹಸಿ ತ್ಯಾಜ್ಯವನ್ನೆಲ್ಲ ಬೀದಿಗೆ ಎಸೆಯದೆ ಗೊಬ್ಬರ ಮಾಡುವುದು ?

**ಮಾಲತಿ :** ಹೌದು. ಇಂದು ನಮ್ಮ ಉದ್ಯಾನನಗರಿ, ತಿಪ್ಪೆಯ ಗುಂಡಿಯಾಗಿದೆ. ಏಕೆ ? ಪ್ರತಿಯೊಬ್ಬರೂ ರಾಶಿ ರಾಶಿ ಕಸವನ್ನು ಉತ್ಪಾದಿಸಿ ಬೀದಿಗೆ ಎಸೆಯುತ್ತಾರೆ.

**ನೇಮಿ :** ನಿಮಗೆ ನೆನಪಿದೆಯೆ, ದಶಕದ ಹಿಂದೆ ನಾವು ಅಮೆರಿಕದ ಉದ್ದಗಲವನ್ನು ಅಲೆಯುವಾಗ, ಮನೆ ಮನೆಯ ಹೊರಗೆ ದೊಡ್ಡ ದೊಡ್ಡ ಕಪ್ಪು ಪ್ಲಾಸ್ಟಿಕ್ ಮೂಟೆಗಳಲ್ಲಿ ಕಸ ಇಡುವುದನ್ನು ನೋಡಿ, 'ಈ ಅಮೆರಿಕನ್ನರು ಅದೆಷ್ಟು ಕಸ ಉತ್ಪತ್ತಿ ಮಾಡುತ್ತಾರೆ' ಎಂದು ಬೈದುಕೊಂಡಿದ್ದೆವು. ನಾವು ಒಂದೇ ದಶಕದಲ್ಲಿ ಸುಧಾರಣೆಯ ಹೆಸರಿನಲ್ಲಿ, ನಾಗೇಶ್ ಹೆಗಡೆ ಅವರ ಮಾತಿನಲ್ಲಿ ಹೇಳಬೇಕಾದರೆ 'ಅಭಿವೃದ್ಧಿಯ ಅಂಧಯುಗ'ದಲ್ಲಿ, ಅಮೆರಿಕನ್ನರನ್ನೂ ಮೀರಿಸಿ ಕಸ ಉತ್ಪತ್ತಿ ಮಾಡುತ್ತಿದ್ದೇವೆ.

**ಮಾಲತಿ :** ಹೌದು, ನಮ್ಮ ಜೀವನಶೈಲಿ ಏಕಾಏಕಿ ಬದಲಾಗಿದೆ. 'ಬಳಸು ಬಿಸಾಕು ಸಂಸ್ಕೃತಿ' ನಮ್ಮ ಬದುಕಿನ ವೈಖರಿಯೇ ಆಗಿರಲಿಲ್ಲ.

**ನೇಮಿ :** ಬೆಂಗಳೂರಿನ ಈ ಬೃಹತ್ ತಿಪ್ಪೆಯ ಸಮಸ್ಯೆಗೆ ಜನ ಸಾಮಾನ್ಯರಲ್ಲಿ ಪರಿಹಾರವಿದೆಯೆ ?

**ಮಾಲತಿ :** ಖಂಡಿತಾ. ನಾವು ಒಬ್ಬೊಬ್ಬರೂ 'ನಾನು ಕಸವನ್ನು ಸೃಷ್ಟಿಸೋಲ್ಲ, ನಮ್ಮ ಮನೆಯ ಕಸವನ್ನು ಮನೆಯಲ್ಲಿಯೇ ಪರಿವರ್ತಿಸಿ, ಅತ್ಯಲ್ಪವನ್ನು ಮಾತ್ರ ಹೊರಗೆ ಎಸೆಯುತ್ತೇನೆ' ಎಂದು ಪ್ರಜ್ಞಾಪೂರ್ವಕ ಪ್ರತಿಜ್ಞೆ ಮಾಡಬೇಕು. ಕಸವನ್ನು ವಿಂಗಡಿಸಿ, ಹಸಿ ತ್ಯಾಜ್ಯವನ್ನೆಲ್ಲ ಕಾಂಪೋಸ್ಟ್ ಗೊಬ್ಬರ ಮಾಡಬೇಕು. 'ಬಳಸು ಬಿಸಾಕು' ಅಭ್ಯಾಸವನ್ನು ಹತೋಟಿಗೆ ತಂದರೆ, ಬೀದಿಗಿಳಿಯುವಾಗ ಕೈಚೀಲ ಹಿಡಿದು ಹೊರಟರೆ ಊರ ತುಂಬ ಹರಡಿ ತಲೆನೋವಾಗಿರುವ ಈ ತೆಳುವಾದ ಪ್ಲಾಸ್ಟಿಕ್ ಬ್ಯಾಗಿನ ಬಳಕೆ ತಗ್ಗುತ್ತದೆ. ನೀವು ನಿಮ್ಮ ಮನೆಯಿಂದ ಅತ್ಯಲ್ಪ ಕಸವನ್ನು ಹೊರಗೆ ಹಾಕಿದರೆ, ಬೆಂಗಳೂರು ತಿಪ್ಪೆಗುಂಡಿಯಾಗುವುದಿಲ್ಲ, ಕಸದ ವಿಲೇವಾರಿಗೆ ಇಷ್ಟು ಬೃಹತ್ ಯೋಜನೆಗಳು ಬೇಕಾಗುವುದಿಲ್ಲ. ಇಂದು ಬೆಂಗಳೂರು ನಮ್ಮ ಬೇಜವಾಬ್ದಾರಿಯಿಂದ ದಿನವೊಂದಕ್ಕೆ ೫೦೦೦ ಮೆಟ್ರಿಕ್ ಟನ್ ತ್ಯಾಜ್ಯವನ್ನು ಉತ್ಪಾದಿಸುತ್ತದೆ.



**ನೇಮಿ :** 'ನಾನು ಪರಿಸರದ ಮೇಲೆ ಹೊರೆಯಾಗುವುದಿಲ್ಲ, ಮೂಲದಲ್ಲಿಯೇ ಕಸವನ್ನು ವಿಂಗಡಿಸುತ್ತೇನೆ. ಮನೆಯಲ್ಲಿಯೇ ಕಂಪೋಸ್ಟ್ ಗೊಬ್ಬರ ಮಾಡುವೆ' ಎಂಬುದು ನಮ್ಮ ಇಚ್ಛೆ ಮತ್ತು ಆದ್ಯತೆ ಆಗಬೇಕು.

**ಮಾಲತಿ :** ಹೌದು.

**ನೇಮಿ :** ಜೂನ್ ೫ 'ವಿಶ್ವ ಪರಿಸರದ ದಿನ'ವನ್ನು ನೀವು ಆಚರಿಸುತ್ತಾ ಬಂದಿದ್ದೀರ. ಈ ವರ್ಷ ಅದನ್ನು ಯಾವ ಬಗೆಯಲ್ಲಿ ಆಚರಿಸಿದಿರಿ ?

**ಮಾಲತಿ :** ಆ ದಿನ ಬಡಾವಣೆಯ ನಾವು ಕೆಲವರು ಒಟ್ಟಿಗೆ ಸೇರುತ್ತೇವೆ. ನಮ್ಮ ಜೀವನಶೈಲಿ ಪರಿಸರದ ಮೇಲೆ ಎಂಥ ಪರಿಣಾಮ ಬೀರುತ್ತಿದೆ ಎಂದು ಗಮನಿಸುವ ದಿನ ಅದು. ಆ ದಿನ ಇಂತಹ ಕೆಲವು ಸಣ್ಣ ಸಕಾರಾತ್ಮಕ ಹೆಜ್ಜೆಗಳನ್ನು ಇಡಲು ನಿರ್ಧರಿಸುತ್ತೇವೆ. 'ಈ ದಿನ ಅಥವಾ ವಾರ ನಾನು ಬೀದಿಗೆ ಏನನ್ನೂ ಎಸೆಯೋಲ್ಲ, ಇವತ್ತು ಸಸ್ಯಹಾರವನ್ನು ಮಾತ್ರ ತಿನ್ನುತ್ತೇನೆ. ಬಾಟಲಿಯ ನೀರನ್ನು ಕೊಳ್ಳುವುದಿಲ್ಲ, ಕೈಚೀಲದಲ್ಲಿ ತರಕಾರಿ ತರುತ್ತೇನೆ' ಇತ್ಯಾದಿ.

**ನೇಮಿ :** ಎಷ್ಟು ವಿಚಿತ್ರ ಅನಿಸುತ್ತೆ ಅಲ್ಲವೆ ? ಇವೆಲ್ಲ ಒಂದೆರಡು ದಶಕಗಳ ಹಿಂದೆ ನಮ್ಮ ಜೀವನದ ಅಪ್ರಜ್ಞಾಪೂರ್ವಕ ಭಾಗವಾಗಿದ್ದವು. ಆದರೆ ಈ ಒಂದೆರಡು ದಶಕದಲ್ಲಿ ನಾವು

ಭೂಮಿಯ ಮೇಲೆ ಸಾಕಷ್ಟು ಅತ್ಯಾಚಾರ ಮಾಡಿದ್ದೇವೆ. ಕೊಳ್ಳುಬಾಕ ಬೇಜವಾಬ್ದಾರಿ ಜೀವನಶೈಲಿಯ ಮೋಹಕ್ಕೆ ಬಿದ್ದು ಅನುಕೂಲಕ್ಕಾಗಿ ಪರಿಸರವನ್ನು ಹಾಳುಗೆಡವಿದ್ದೇವೆ.

**ಮಾಲತಿ :** ಅದರ ಪರಿಣಾಮ, ನಮ್ಮ ಮನೆಯ ಎದುರೇ ತಿಪ್ಪೆಯ ರಾಶಿ ಕೊಳೆಯುತ್ತಿದೆ. ನಮ್ಮ ದೇಹದೊಳಗೆ ವಿಷವಾಗಿ, ಕ್ಯಾನ್ಸರ್ ಆಗಿ ಮನಸ್ಸಿನಲ್ಲಿ ಖಿನ್ನತೆಯಾಗಿ ಕಾಡುತ್ತದೆ. ಈಗಲಾದರೂ ನಾವು ಎಚ್ಚೆತ್ತುಕೊಳ್ಳಬೇಕು. ಮತ್ತೆ ನಾವು ಸರಳ ಜೀವನಶೈಲಿಗೆ 'ಸಸ್ಟೇನೆಬಲ್ ಬದುಕಿಗೆ' ಹಿಂತಿರುಗಬೇಕಿದೆ. ನಮ್ಮ ಬೇಕುಗಳನ್ನು ಮಿತಗೊಳಿಸಿ, ನಮ್ಮ ನಾಳೆಗಳನ್ನು ಉಳಿಸಿಕೊಳ್ಳಬೇಕಿದೆ. 'ಗ್ರೀನ್ ಎಕಾನಮಿ' ನಮ್ಮ ಆದ್ಯತೆ ಆಗಬೇಕಿದೆ.

**ನೇಮಿ :** ೨೨ ಏಪ್ರಿಲ್ ಅಂತರರಾಷ್ಟ್ರೀಯ ಭೂತಾಯಿಯ ದಿನ.

**ಮಾಲತಿ :** ಭೂಮಿಯನ್ನು ತಾಯಿ ಎಂದು ಪೂಜಿಸಿದ ಭಾರತಕ್ಕೆ ಪ್ರತಿ ದಿನವೂ ಭೂಮಿತಾಯಿಯ ದಿನವಾಗಿತ್ತು. ಇಂದು ನಾವು ಅದನ್ನು ಎಗ್ಗಿಲ್ಲದಂತೆ ಶೋಷಿಸಿರುವ ಕಾರಣ, ಇಂತಹ ದಿನಗಳ ನೆಪದಲ್ಲಾದರೂ ನಮ್ಮನ್ನು ನಾವು ಪರಿಸರ ರಕ್ಷಣೆಗೆ ರಿಕಮಿಟ್ ಮಾಡಿಕೊಳ್ಳಬೇಕಿದೆ.

**ನೇಮಿ :** 'ನಾವು ಮಾಡಬಹುದಾದದ್ದು ಬಹಳಷ್ಟಿದೆ. ನಮ್ಮ ಮನೆಯಿಂದ ಹೊರಗೆಸೆಯುವ ಕಸದ ಪ್ರಮಾಣವನ್ನು ತಗ್ಗಿಸುವುದು, ನಿಧಾನವಾಗಿ ಕಸದ ಸೃಷ್ಟಿಯನ್ನು ಮೂಲದಲ್ಲಿಯೇ ತಡೆಯುವುದು, ಬೇರ್ಪಡಿಸಿ, ಕಡಿಮೆ ಮಾಡುವುದು, ಮರುಬಳಕೆ ಮಾಡುವುದು. ಮನೆಯ ಹಸಿ ಕಸವನ್ನು ಗೊಬ್ಬರ ಮಾಡುವುದು. ಕೈದೋಟ ಮಾಡುವುದು'. ಇದು ನಿಮ್ಮ ಮೂಲ ಮಂತ್ರವಾಗಿದೆ.

**ಮಾಲತಿ :** ಎಲ್ಲವೂ ಕೊನೆಗೆ ನಮ್ಮ ಜೀವನಶೈಲಿಯ ಆಯ್ಕೆಯಲ್ಲಿದೆ. 'ನಾನು ಬಾಟಲ್ ನೀರು ಕೊಳ್ಳುವುದಿಲ್ಲ, ನಲ್ಲಿಯ ನೀರನ್ನೇ ಶೋಧಿಸಿ ಕುಡಿಯುತ್ತೇನೆ. ಪೆಪ್ಸಿ-ಕೋಲ ಬೇಡ, ಎಳನೀರು ಕುಡಿಯೋಣ. ಪ್ಲಾಸ್ಟಿಕ್, ಚರ್ಮದ ಚೀಲ ಏಕೆ. ಬಟ್ಟೆಯ ಚೀಲ, ಬಿದಿರು, ನಾರು, ಬೇರು, ಜ್ಯೂಟ್ ಚೀಲಗಳನ್ನು ಹಿಡಿದು ಓಡಾಡುತ್ತೇನೆ' - ಇವು ನಮಗೆ ನಾವು ಸದಾ ಹೇಳಿಕೊಳ್ಳುವ ಮಂತ್ರವಾಗಬೇಕು.

**ನೇಮಿ :** ೨೦೧೨ಅನ್ನು 'ಅಂತರರಾಷ್ಟ್ರೀಯ ಸಸ್ಟೇನೆಬಲ್ ಎನರ್ಜಿ ಫಾರ್ ಆಲ್' ವರ್ಷ ಎಂದು ಘೋಷಿಸಿದ್ದರು. ಈ ವರ್ಷ ನೀವು ಮಾಡಿದ ವಿಶೇಷವೇನು ?





**ಮಾಲತಿ :** ಈ ವರ್ಷವನ್ನು ಮನೆಗೊಂದು ಸೋಲಾರ್ ದೀಪ, ಸೋಲಾರ್ ಕುಕ್ಕರ್ ತಂದು ಆಚರಿಸಿದೆವು. ಅಂದಹಾಗೆ ನಿಮಗೆ ಗೊತ್ತೆ ಪ್ರಪಂಚದ ಅತ್ಯಂತ ದೊಡ್ಡ ಸೌರಶಕ್ತಿಯಿಂದ ನಡೆಯುವ ಅಡುಗೆ ಮನೆ (ಸೋಲಾರ್ ಕಿಚನ್) ಭಾರತದಲ್ಲಿದೆ. ಇದು ರಾಜಸ್ತಾನದ ಮೌಂಟ್ ಅಬುನಲ್ಲಿ ಟಲೇಟಿ ಎಂಬ ಜಾಗದಲ್ಲಿದೆ. ೯.೨ ಚದರ ಮೀಟರ್ ಅಗಲದ, ೮೪ ಪ್ಯಾರಬಾಲಿಕ್ ರಿಫ್ಲೆಕ್ಟರ್‌ಗಳು ಒಂದೊಂದೂ ೬೪೦ ಡಿಗ್ರಿ ಶಾಖವನ್ನು ಉತ್ಪತ್ತಿ ಮಾಡುತ್ತವೆ. ಈ ಸೋಲಾರ್ ಅಡುಗೆಮನೆಯಲ್ಲಿ ಬಿಸಿಲು ಚೆನ್ನಾಗಿದ್ದಾಗ, ದಿನವೊಂದಕ್ಕೆ ೩೮,೫೦೦ ಜನಕ್ಕೆ ಅಡುಗೆ ತಯಾರಿಸಿ ಬಡಿಸಬಹುದಿದೆ. ನಮ್ಮ ತಿರುಪತಿ ದೇವಸ್ಥಾನದಲ್ಲಿ ಕೂಡ ಪರಿಸರ ಮಾಲಿನ್ಯವಿಲ್ಲದ ಶುದ್ಧ ಶಕ್ತಿಯ ಬಳಕೆ ಇದೆ. ಸಾವಿರಾರು ಭಕ್ತರಿಗೆ ದಿನವೂ ಇಲ್ಲಿ ಊಟದ ವ್ಯವಸ್ಥೆ ಇದೆ. ಸೋಲಾರ್ ದೀಪಗಳು, ಸೋಲಾರ್ ಅಡಿಗೆ ಮನೆಗಳು, ವಿಂಡ್‌ಮಿಲ್‌ಗಳನ್ನು ಬಳಸುತ್ತಾರೆ.

**ನೇಮಿ :** ನಿಮ್ಮ ಬ್ಲಾಗ್‌ನಲ್ಲಿ ಸೌರಶಕ್ತಿಯ ಬಗ್ಗೆ ಋಗ್ವೇದದ ಒಂದು ಮಾತನ್ನು ಹೇಳಿದ್ದೀರಿ.

**ಮಾಲತಿ :** ಹೌದು, ಋಗ್ವೇದದಲ್ಲಿ ಒಂದು ಮಾತು ಬರುತ್ತದೆ 'ಸೃಷ್ಟಿಯಲ್ಲಿ ಇರುವುದೆಲ್ಲವೂ ಸೂರ್ಯನಿಂದ ಹುಟ್ಟಿದ್ದು, ಜನಿಸಿದ್ದು' (ನೂನಂ ಜನಃ ಸೂರ್ಯಾಣ್ ಪ್ರಸುತ್ತಃ). ಅಷ್ಟೇ ಅಲ್ಲ, ಋಗ್ವೇದದ ಮತ್ತೊಂದು ಶ್ಲೋಕ ಹೇಳುತ್ತದೆ : 'ಸೂರ್ಯನ ಶಕ್ತಿಯಿಂದ ಬೇಯಿಸಿದ ಆಹಾರ ನೋಡಲು ಚಂದ, ಪರಿಮಳಯುಕ್ತ, ರುಚಿಕರ, ಚರ್ಮದ ಕಾಂತಿಗೆ, ದೇಹದಲ್ಲಿ ಶಕ್ತಿ, ಚೈತನ್ಯಕ್ಕೆ ಇದು ಅತ್ಯುತ್ತಮ ಔಷಧಿ (ರೂಪ ರಸಗಂಧ ಸಮಾಯುಕ್ತಂ ಪೌರುಷ ಕಾಂತಿದಾಯಕಃ. ಸೂರ್ಯಪ್ರಕಾಶ ಮಹಾಔಷಧ ನ ಕಿಂಚಿದಪಿ ಸಂಶಯಃ)

ಇಷ್ಟು ಸೌರಶಕ್ತಿಯ ಬಗ್ಗೆ ತಿಳಿದುಕೊಂಡ ಮೇಲೆ ಹೊಗೆ ಉಗುಳದ ಭೂಮಿಯ ಒಡಲನ್ನು ಬಗೆಯದ ಸೌರಶಕ್ತಿಯಿಂದ ಅಡಿಗೆ ಮಾಡಲು ನಿರ್ಧರಿಸಿದೆ. ಹಾಗೆಂದೇ ಸೌರಶಕ್ತಿಯ ಒಲೆ ತರಿಸಿದೆ. ಅದಾಗಲೆ ನಮ್ಮ ಮನೆಯಲ್ಲಿ ನೀರು ಕಾಯಿಸಲು ತಾರಸಿಯ ಮೇಲೆ ಸೋಲಾರ್ ಪ್ಯಾನೆಲ್ ಹಾಕಿಸಿದ್ದೆವು.

**ನೇಮಿ :** ಸೋಲಾರ್ ಕುಕ್ಕರ್‌ನಲ್ಲಿ ಏನೇನು ಮಾಡಿದ್ದೀರಾ ?

**ಮಾಲತಿ :** ಸದ್ಯಕ್ಕೆ ನಮ್ಮ ಸೋಲಾರ್ ಕುಕುರ್‌ನಲ್ಲಿ ಅನ್ನ, ತರಕಾರಿ, ಬೇಳೆ ಬೇಯಿಸುತ್ತಿದ್ದೇನೆ. ಮೆಲ್ಲನೆ ಕಿಚಡಿ, ಬಿರಿಯಾನಿಗಳನ್ನು ಪ್ರಯತ್ನಿಸಬೇಕಿದೆ.

**ನೇಮಿ :** ಸಸ್ಟೇನೆಬಲ್ ಲಿವಿಂಗ್, ಆರೋಗ್ಯಕ್ಕೆ, ಸಂತಸಕ್ಕೆ, ನಮ್ಮ ನಾಳೆಗಳು ಬಾಡದಿರಲು ಅಗತ್ಯದ್ದು.

**ಮಾಲತಿ :** ಇಂದು ನಾವು ಬದುಕಿದರೆ ಸಾಕು ಎಂಬ ಕುರುಡಾದ ಅಭಿವೃದ್ಧಿ ನಮ್ಮ ನಾಳೆಗಳನ್ನು ಹಾಳುಗೆಡವುತ್ತದೆ. ವಿವೇಚನಾಯುತ ಅಭಿವೃದ್ಧಿ ಇಂದಿನ ಅಗತ್ಯಗಳನ್ನು ಪೂರೈಸುತ್ತಲೇ, ನಾಳೆಯ ಪೀಳಿಗೆ ತನ್ನ ಅಗತ್ಯಗಳನ್ನೂ ಪೂರೈಸಿಕೊಳ್ಳಲು ಆಗುವಂತೆ, ಅವರ ಪಾಲನ್ನು ಕಬಳಿಸದೆ, ನಾಶಮಾಡದೆ ವಿವೇಕದಿಂದ ಎಚ್ಚರದಿಂದ ಇಡುವ ಹೆಜ್ಜೆಗಳು. ನಾವು ನಮ್ಮ ಈ ಅಗತ್ಯಗಳನ್ನು ಭೂಮಿಯ ಮೇಲೆ ನಮ್ಮ ಭಾರದ 'ಕಾರ್ಬನ್ ಫುಟ್ ಪ್ರಿಂಟ್' ಉಳಿಸದೆ ಸಾಧಿಸಲು ಯತ್ನಿಸಬೇಕು.

**ನೇಮಿ :** ನನ್ನಮ್ಮನ ಮನೆಯಲ್ಲಿ, ಮನೆಯಿಂದ ಬೀದಿಗೆ ಏನೊಂದೂ

ಎಸೆಯುತ್ತಿರಲಿಲ್ಲ. ನನ್ನಮ್ಮ ಭೂಮಿ ತಾಯಿಯ ಎದೆಯ ಮೇಲೆ ಹೆಜ್ಜೆಗುರುತನ್ನು ಉಳಿಸದೆಯೇ ೮೬ ವರ್ಷ ಬದುಕಿ ಹೋದಳು. ಆದರೆ ನನ್ನದು ಫ್ಲ್ಯಾಟ್‌ನಲ್ಲಿ ಬದುಕು. ನಿನ್ನೆ ಮೊನ್ನೆಯವರೆಗೂ ಮನೆಯ ತ್ಯಾಜ್ಯವೆಲ್ಲ ಒಂದೇ ಕಸದ ಬುಟ್ಟಿಗೆ ಹೋಗುತ್ತಿತ್ತು. ಎಷ್ಟೇ ಜ್ಞಾಪಿಸಿಕೊಂಡರೂ, ಕೈ ಚೀಲ ಬಹಳಷ್ಟು ಬಾರಿ ಮರೆತು, ಪ್ಲಾಸ್ಟಿಕ್ ಥೈಲಿಗಳಲ್ಲಿ ತರಕಾರಿ ತಂದು, ಅವು ಕಸದ ಬುಟ್ಟಿ ಸೇರುತ್ತಿದ್ದವು. ಅಡಿಗೆ ಮನೆಯ ಕಾಯಿಪಲ್ಲೆ ಕತ್ತರಿಸಿದ ಸಿಪ್ಪೆ ಎಸೆಯುವಾಗ, ನಾನು ಚಿನ್ನ ಬೆಳ್ಳಿಯನ್ನೇ ಎಸೆಯುತ್ತಿದ್ದೇನೆ ಎಂಬಷ್ಟು ಸಂಕಟವಾಗುತ್ತಿತ್ತು. ಕಾರಣ, ನನ್ನಮ್ಮ ಇದನ್ನೆಲ್ಲ ನೆಲದಲ್ಲಿ ಹೂತು ಬಂಗಾರದಂತಹ ಗೊಬ್ಬರ ಮಾಡುತ್ತಿದ್ದಳು. ಈಗ ಕಡ್ಡಾಯವಾಗಿ ಬಿಬಿಎಂಪಿ ಬೇರ್ಪಡಿಸಲು ಹೇಳಿರುವುದು ನನ್ನ ಅಪರಾಧಿ ಪ್ರಜ್ಞೆಯನ್ನು ಕಿಂಚಿತ್ತಾದರೂ ಕಡಮೆಯಾಗಿಸಿದೆ.

**ಮಾಲತಿ :** ಹಿಂದೆ ಕೂಡ ನೀವು ಹಸಿ ತ್ಯಾಜ್ಯವನ್ನು ಬೇರ್ಪಡಿಸಬಹುದಿತ್ತು.

**ನೇಮಿ :** ನಾನೊಬ್ಬಳೇ ಆಗ ಹಸಿ ತ್ಯಾಜ್ಯವನ್ನು ಬೇರ್ಪಡಿಸಿ ಕೊಟ್ಟರೂ ಏನೂ ಉಪಯೋಗವಿರುತ್ತಿರಲಿಲ್ಲ, ಎಲ್ಲವನ್ನು ಒಟ್ಟಿಗೆ ಬೆರೆಸಿ ಹೊತ್ತೊಯ್ಯುತ್ತಿದ್ದರು. ನಾನಿರುವುದು ಮುಗಿಲಿನಲ್ಲಿ ಮನೆ, ನೆಲ ಕಾಣದ ಮಣ್ಣಿಲ್ಲದ ಅಪಾರ್ಟ್‌ಮೆಂಟುಗಳು. ಹಾಗಾಗಿ ಮನೆಯಲ್ಲಿ ಕಾಂಪೋಸ್ಟ್ ಗೊಬ್ಬರ ಮಾಡಲು ಸಾಧ್ಯವಿಲ್ಲ.

**ಮಾಲತಿ :** ನೀವು ಫ್ಲ್ಯಾಟ್‌ನಲ್ಲೇ ಇದ್ದರೂ ಮನೆಯ ತ್ಯಾಜ್ಯದಿಂದ ಗೊಬ್ಬರ ಮಾಡಲು ಸಾಧ್ಯವಿದೆ.

**ನೇಮಿ :** ಅದು ಹೇಗೆ ?

**ಮಾಲತಿ :** ಬನ್ನಿ ತೋರಿಸುತ್ತೇನೆ (ತಾರಸಿಯ ಒಂದು ಮೂಲೆಗೆ ಕರೆದೊಯ್ದರು. ಅಲ್ಲಿ ಮೂರು ಮಣ್ಣಿನ ಕುಂಡಗಳು ಒಂದರ ಮೇಲೊಂದು ಪೇರಿಸಲ್ಪಟ್ಟಿದ್ದವು). ಇದನ್ನು ಗೊಬ್ಬರದ ಕಂಬ ಎನ್ನುತ್ತಾರೆ. ನೋಡಿ ಇದರಲ್ಲಿ ನಮ್ಮ ಮನೆಯ ಹಸಿ ತ್ಯಾಜ್ಯವನ್ನೆಲ್ಲ ಹಾಕತೊಡಗಿದೆವು. ಮೂರು ತಿಂಗಳಲ್ಲಿ ಒಳ್ಳೆಯ ಗೊಬ್ಬರ. ಆದರೆ ಒಂದು ಸಮಸ್ಯೆ ಇತ್ತು, ಇದು ಬಹಳ ಬೇಗ ವಾಸನೆ ಬರುತ್ತಿತ್ತು. ಆಗಾಗ್ಗೆ ಕಲಕಬೇಕು. ಅದರಲ್ಲಿ ಸಣ್ಣ ಗುಂಗಾರಿಯಂತಹ ಹಾರುವ ಹುಳಗಳು ಬೇರೆ. ನಾನು ಈಗ ಇಂತಹ ಪುಟ್ಟ ಅಲಂಕಾರದ ಕಂಬದ ಬದಲು, ಇಲ್ಲಿ ಬನ್ನಿ, ಒಂದಿಷ್ಟು ಇಟ್ಟಿಗೆಯನ್ನು ಈ ಕಾಂಕ್ರೀಟ್ ತಾರಸಿಯ ನೆಲದ ಮೇಲೆ ಜೋಡಿಸಿಟ್ಟಿದ್ದೇನೆ. ಮನೆಯ ಹಸಿ ತ್ಯಾಜ್ಯವನ್ನೆಲ್ಲ ತಂದು ತುಂಬುತ್ತೇನೆ. ಅಷ್ಟು ತುಂಬಿದರೂ ಮೂರು ತಿಂಗಳ ಕೊನೆಗೆ ಸಿಗುವುದು ಇಷ್ಟೇ ಇಷ್ಟು ಗೊಬ್ಬರ - ಚಿನ್ನದಂತಹ ಗೊಬ್ಬರ. ಯೋಚಿಸಿ, ಇಡೀ ಬೆಂಗಳೂರಿನ ಮನೆ ಮನೆಗಳ ಈ ಹಸಿ ತ್ಯಾಜ್ಯವನ್ನು ಗೊಬ್ಬರ ಮಾಡಿದರೆ ಎಷ್ಟೆಲ್ಲ ಗೊಬ್ಬರದ ರಾಶಿಯಾಗಬಲ್ಲದು. ಸಾವಯವ ಕೃಷಿಗೆ ನೆರವಾಗಬಲ್ಲದು. ರೈತರು ದುಬಾರಿ ಬೆಲೆಯ ರಾಸಾಯನಿಕ ಗೊಬ್ಬರಗಳಿಗೆ ಹಣ ಹಾಕಬೇಕಿಲ್ಲ, ಆರೋಗ್ಯ ಹಾಳುಮಾಡಿಕೊಳ್ಳಬೇಕಿಲ್ಲ, ಭೂಮಿಯನ್ನು ಬಂಜರಾಗಿಸಬೇಕಿಲ್ಲ.

**ನೇಮಿ :** ನಿಮಗೆ ತಾರಸಿ ಇರುವುದರಿಂದ ಇದೆಲ್ಲ ಮಾಡಲು ಅನುಕೂಲವಿದೆ. ನಮ್ಮಂತಹ ಫ್ಲ್ಯಾಟ್ ಮಂದಿ ಸಣ್ಣ ಬಾಲ್ಕನಿಯಲ್ಲಿ ಇವುಗಳನ್ನು ಇಟ್ಟುಕೊಂಡರೆ ವಾಸನೆ ಬರುತ್ತದಲ್ಲ. ಇಷ್ಟಗಲ ಇಟ್ಟಿಗೆ ಜೋಡಿಸುವಷ್ಟು ಸ್ಥಳ ಇಲ್ಲ.

**ಮಾಲತಿ :** ಅದು ನಿಜ. ಅದಕ್ಕೆಂದೇ ನಾನು ಇನ್ನೊಂದು ಹೊಸ ಪ್ರಯೋಗ



ಮಾಡುತ್ತಿದ್ದೇನೆ. ಹೊಸದಾಗಿ ಈ 'ಬೊಕಾಸಿ ಕಾಂಪೋಸ್ಟರ್' ಕೊಂಡು ತಂದಿದ್ದೇನೆ. ಇದನ್ನು ಬಾಲ್ಕನಿಯಲ್ಲಿ ಇಟ್ಟುಕೊಳ್ಳಬಹುದು, ವಾಸನೆ ಇರುವುದಿಲ್ಲ ಎಂದು ಹೇಳಿದ್ದಾರೆ. ಹೊಸದಾಗಿ ತಂದಿರುವೆ, ಪ್ರಯೋಗ ಮಾಡಿನೋಡಿ ನಿಮಗೆ ತಿಳಿಸುವೆ.

**ನೇಮಿ :** ಸುತ್ತಮುತ್ತ ನಿಮ್ಮಂತೆ ಕಾಂಪೋಸ್ಟ್ ಗೊಬ್ಬರ ಮಾಡುವವರು ಇದ್ದಾರೆಯೆ?

**ಮಾಲತಿ :** ಬಹಳಷ್ಟು ಫ್ಲ್ಯಾಟ್ ಮಂದಿ 'ಗೊಬ್ಬರ ಮಾಡಿ ನಾನೇನು ಮಾಡಲಿ, ನಮಗಿಲ್ಲಿ ಗಿಡ ಮರ ಹಾಕಲು ನೆಲವೂ ಇಲ್ಲ, ತಾರಸಿಯೂ ಇಲ್ಲ' ಎನ್ನುತ್ತಾರೆ. ಎಲ್ಲದರಲ್ಲೂ ನಮ್ಮ ಲಾಭವನ್ನೇ ನೋಡುವ ನಮ್ಮ ದೃಷ್ಟಿಕೋನ ಮೊದಲು ಬದಲಾಗ ಬೇಕು. ಸಮುದಾಯದ, ಸಮಾಜದ ಒಳಿತಿಗೆ ನಮ್ಮ ನಾಳಿನ ಪೀಳಿಗೆಯತ್ತ ಯೋಚಿಸುವ ವಿಶಾಲ ಮನೋಭಾವವನ್ನು ಬೆಳೆಸಿಕೊಳ್ಳಬೇಕಿದೆ. ಇಂದು ನಾವು ಪಟ್ಟಣಗಳಲ್ಲಿ ನಾಳೆ ನಮಗೆ ಸೇರಿದ್ದಲ್ಲ ಎಂಬಂತೆ ಬದುಕುತ್ತಿದ್ದೇವೆ. ಇಲ್ಲಿ ಸುತ್ತ ಮುತ್ತ ಕೆಲವು ಫ್ಲ್ಯಾಟ್ ಮಂದಿಗೆ ನಾನು ಹೇಳಿದ್ದೇನೆ: 'ನೀವು ಗೊಬ್ಬರ ಮಾಡಿ ಕೊಡಿ, ನಾನು ಕೊಂಡುಕೊಳ್ಳುತ್ತೇನೆ.' ಹೀಗಾದರೂ ಅವರಿಗೆ ಪ್ರೋತ್ಸಾಹ ನೀಡಿದರೆ, ಉತ್ಸಾಹ ಬರಲಿ ಎಂದು. ಹೇಗೂ ನನ್ನ ಗಿಡಗಳಿಗೆ ನಮ್ಮ ಮನೆಯ ತ್ಯಾಜ್ಯದಿಂದ ತಯಾರಾದ ಗೊಬ್ಬರ ಸಾಲುವುದಿಲ್ಲ. ಹೊರಗಿನಿಂದ ಹಣ ಕೊಟ್ಟು ಕೊಳ್ಳುತ್ತೇನೆ. ಇವರಿಂದಲೇ ಕೊಳ್ಳಲು ನಾನು ಸಿದ್ಧ. ಹೀಗಾದರೂ ಇವರು ಕಸ ಬೀದಿಗೆ ಎಸೆಯದೆ ಗೊಬ್ಬರ ಮಾಡಲಿ ಎಂಬ ಆಸೆ. ಪ್ರತಿಯೊಬ್ಬರೂ ಬೀದಿಗೆ ಎಸೆಯುವ ಕಸದ ಪ್ರಮಾಣವನ್ನು ತಗ್ಗಿಸಿದರೆ, ಇಂದಿನಂತೆ ಬೀದಿಗಳು ತಿಪ್ಪೆಗುಂಡಿಗಳಾಗುವುದಿಲ್ಲ.

**ನೇಮಿ :** ಮತ್ತೆ ಮರಳಬೇಕಿದೆ ಸಹಜ ಹಾಗೂ ಸರಳ ಬದುಕಿಗೆ.

**ಮಾಲತಿ :** ನಿಜ. ಒಂದು 'ನೇಟಿವ್ ಅಮೆರಿಕನ್ ಪ್ರಾಫೆಸಿ' ಇದೆ, ತುಂಬಾ ಅರ್ಥಪೂರ್ಣವಾಗಿದೆ :

*ಕಟ್ಟಕಡೆಯ ಮರವನ್ನು ಕಡಿದ ಮೇಲೆ*
*ಕಟ್ಟಕಡೆಯ ನದಿಯನ್ನು ವಿಷಮಯಗೊಳಿಸಿದ ಮೇಲೆ*
*ಕಟ್ಟ ಕಡೆಯ ಮೀನನ್ನು ಹಿಡಿದ ಮೇಲೆ*
*ಮನುಷ್ಯನಿಗೆ ಅರಿವಾಗುತ್ತದೆ ಹಣವನ್ನು ತಿನ್ನಲಾಗದು ಎಂದು.*

**ನೇಮಿ :** ತುಂಬಾ ಸತ್ಯವಾದ ಮಾತು. ಆ ಕಡೆಯ ಮರವನ್ನು ಕಡಿಯುವ ಮೊದಲು, ಗಿಡ ನೆಡೋಣ, ಭೂಮಿಯನ್ನು ಹಸಿರಾಗಿಸೋಣ. ನಮಸ್ಕಾರ.

**ಮಾಲತಿ :** ನಮಸ್ಕಾರ.

ನಾವಿಂದು ಮರಗಳನ್ನು ಕಡಿದು ಕಾಡುಗಳನ್ನು ಬಯಲಾಗಿಸಿ, ಗಣಿಗಾರಿಕೆಯ ಹೆಸರಲ್ಲಿ ಬೆಟ್ಟಗುಡ್ಡಗಳನ್ನೇ ಪುಡಿಯಾಗಿಸಿ ಭೂತಾಯಿಯ ಎದೆಗೆ ಒದ್ದು ನಡೆಯುತ್ತಿದ್ದೇವೆ.





**ಸಂದರ್ಶಕರು : ನೇಮಿಚಂದ್ರ**
ನಂ. ೪೦೧, ವಿಜಯ ಟವರ್, ३ನೇ ಮುಖ್ಯರಸ್ತೆ
ಆರ್‌ಪಿಸಿ ಬಡಾವಣೆ ವಿಜಯನಗರ ३ನೇ ಹಂತ, ಬೆಂಗಳೂರು - ೫೬೦ ೦೪೦

# ಹೊಸ ಪ್ರಕಟಣೆಗಳು



**ಪ್ರಸಾರಾಂಗ**
**ಕನ್ನಡ ವಿಶ್ವವಿದ್ಯಾಲಯ, ಹಂಪಿ**

೧. **ನುಡಿಸಂಕರ ಸಾಹಿತ್ಯ** ೧೬೦.೦೦
ಡಾ. ರಹಮತ್ ತರೀಕೆರೆ

೨. **ದಲಿತರ ಬದುಕು ಮೆಲುಕು** ೨೦೦.೦೦
ಡಾ. ಎನ್. ಚಿನ್ನಸ್ವಾಮಿ ಸೋಸಲೆ

೩. **ತುಳುನಾಡು ಕನ್ನಡನುಡಿ** ೨೦೦.೦೦
ಡಾ. ಕೆ. ಮೋಹನ್‌ಕೃಷ್ಣ ರೈ

೪. **ಕನ್ನಡ ಮರಾಠಿ ಸಾಂಸ್ಕೃತಿಕ ಬಾಂಧವ್ಯ** ೧೨೦.೦೦
ಡಾ. ವಿಠಲರಾವ್ ಗಾಯಕ್ವಾಡ್

೫. **ಮರಗು ಭಾಷೆ** ೧೬೦.೦೦
ಡಾ. ಕೆ.ಎಂ. ಮೇತ್ರಿ

೬. **ಮಂಟೇಸ್ವಾಮಿ ಕಾವ್ಯ ಓದು ಪಠ್ಯ** ೧೨೦.೦೦
ಡಾ. ವೆಂಕಟೇಶ ಇಂದ್ವಾಡಿ

೭. **ಮಧುರಾ ವಿಜಯಂ ಅಥವಾ ವೀರಕಂಪರಾಜ ಚರಿತಂ** ೧೨೦.೦೦
ಅನು : ಡಾ. ಕೆ. ಕುಶಾಲಪ್ಪ ಗೌಡ

೮. **ದಕ್ಷಿಣ ಭಾರತೀಯ ಜಾನಪದ ಕೋಶ** ಸಂಪುಟ ೧ ಮತ್ತು ಸಂಪುಟ ೨ ೮೦೦.೦೦
ಪ್ರ. ಸಂ : ಡಾ. ಎ. ಮುರಿಗೆಪ್ಪ

೯. **ಬಹುಸಂಸ್ಕೃತಿ ಮತ್ತು ದೇಸಿ ಜಾತ್ರೆಗಳ ಮಹಾಸಮನ್ವಯ** ೬೦.೦೦
ಡಾ. ಹೆಬ್ಬಾಲೆ ಕೆ. ನಾಗೇಶ್

೧೦. **ಮುಕ್ಕೊಡೆ** (ಜೈನ ಸಂಸ್ಕೃತಿ ಕುರಿತ ಲೇಖನಗಳು) ೨೦೦.೦೦
ಸಂ : ಡಾ. ಸಿ.ಎಸ್. ವಾಸುದೇವನ್

೧೧. **ರಾಮಮನೋಹರ ಲೋಹಿಯಾ ಚಿಂತನೆ** (ಎರಡನೇ ಆವೃತ್ತಿ) ೨೦೦.೦೦
ಸಂ : ಡಾ. ನಟರಾಜ ಹುಳಿಯಾರ್

೧೨. **ರಾವ್‌ಸಾಹೇಬ ಮಲ್ಲಪ್ಪ ಶಂಕ್ರಪ್ಪ ಸಿಂಹಾಸನ** ೬೦.೦೦
ಲೇ : ಜಿ.ಡಿ. ಸಕ್ರಿ, ಸಂ : ಮಹೇಶ ತಿಪ್ಪಶೆಟ್ಟಿ

೧೩. **ರಾಮಾಜಿ ತಿರುಮಲ ಹರಿಕಾರೆಯ ರಾಮರಾಜನ ಬಖೈರು** ೮೦.೦೦
ಸಂ : ಪ್ರೊ. ಲಕ್ಷ್ಮಣ್ ತೆಲಗಾವಿ

೧೪. **ಡಾ. ಶಂಬಾ ಜೋಶಿಯವರ ಅಸಂಕಲಿತ ಲೇಖನಗಳು** ೧೦೦.೦೦
ಸಂ : ಪ್ರೊ. ಜ್ಯೋತಿ ಹೊಸೂರು

೧೫. **ಹಸ್ತಪ್ರತಿ ವ್ಯಾಸಂಗ-೧೧** ೧೬೦.೦೦
ಸಂ : ಡಾ. ಕೆ. ರವೀಂದ್ರನಾಥ

೧೬. **ಸಮಣಸುತ್ತಂ** (ಜೈನಧರ್ಮದ ಪ್ರಾತಿನಿಧಿಕ ಗ್ರಂಥ) ೧೨೦.೦೦
ಸಂಪಾದಕ–ಅನುವಾದಕ : ಡಾ. ಎಂ.ಎ. ಜಯಚಂದ್ರ

೧೭. **ಕರ್ನಾಟಕದಲ್ಲಿ ಶ್ವೇತಾಂಬರ ಜೈನ ಸಮಾಜ : ಸಾಂಸ್ಕೃತಿಕ ಅಧ್ಯಯನ** ೧೨೦.೦೦
ಸಂಪಾದಕರು: ಡಾ. ಎಸ್. ಚಿನ್ನಸ್ವಾಮಿ ಸೋಸಲೆ

೧೮. **ಭಾಷಾವಿಜ್ಞಾನ** ೮೦.೦೦
ಡಾ. ಬಿ.ಬಿ. ರಾಜಪುರೋಹಿತ

೧೯. **ಭಾಷಾಂತರ ಮತ್ತು ಲಿಂಗರಾಜಕಾರಣ** ೧೦೦.೦೦
ಡಾ. ಎಂ. ಉಷಾ

೨೦. **The Discovery of Vachanas** ೬೦.೦೦
Vijayakumar M. Boratti

೨೧. **ಡಾ ಬಿ.ಆರ್. ಹಿರೇಮಠರ ಶಾಸನ ಅಧ್ಯಯನ** ೨೦೦.೦೦
ಸಂ :ಡಾ. ಮಲ್ಲಿಕಾರ್ಜುನ ಕೆ. ಹಾಗೂ ಇತರರು

೨೨. **ಸಮುದಾಯಗಳ ಕನ್ನಡ ಪರಂಪರೆ** ೧೬೦.೦೦
ಡಾ. ಎ. ಮೋಹನ ಕುಂಟಾರ

೨೩. **ಪರ್ಯಾಯ ಸಮಾಜ ವಿಜ್ಞಾನ** ೬೦.೦೦
ಎಂ. ಚಂದ್ರ ಪೂಜಾರಿ

೨೪. **ಕರ್ನಾಟಕ ಜನಗಣತಿ ೨೦೧೧** ೮೦.೦೦
ಡಾ. ಟಿ.ಆರ್. ಚಂದ್ರಶೇಖರ್

೨೫. **ಅರಿಕೇರಿ ಅಮೋಘ ಸಿದ್ಧೇಶರ** ೬೦.೦೦
ಡಾ. ಚನ್ನಪ್ಪ ಕಟ್ಟಿ

೨೬. **ನಾಯಕರ ಮಹಾಸಂಸ್ಥಾನ ಸುರಪುರ** ೨೦೦.೦೦
ಸಂ : ಡಾ. ತಾರಿಹಳ್ಳಿ ಹನುಮಂತಪ್ಪ

೨೭. **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ** ೨೬೦.೦೦
ಡಾ. ವಾಸುದೇವ ಬಡಿಗೇರ

೨೮. **ಮಾನವ ಮತ್ತು ಸಾಂಸ್ಕೃತಿಕ ಪಲ್ಲಟಗಳು** ೧೨೦.೦೦
ಸಂ : ತಾರಿಹಳ್ಳಿ ಹನುಮಂತಪ್ಪ

೨೯. **ಕನ್ನಡ ಸಾಹಿತ್ಯ ವಾಗ್ವಾದಗಳು** ೧೨೦.೦೦
ಡಾ. ರಹಮತ್ ತರೀಕೆರೆ

೩೦. **ಮೈಲಾರ** ೮೦.೦೦
ಸಂ : ಡಾ. ಸಿ. ಮಹಾದೇವ

೩೧. **ಸಮಾಜವಾದಿ ಹೋರಾರಟಗಾರರ ಸಂದರ್ಶನ** ೨೦೦.೦೦
ಸಂ: ಬಿ. ಪೀರ್ ಭಾಷಾ

೩೨. **ಲೋಹಿಯಾ ವರ್ತಮಾನದ ಮುಖಾಮುಖಿ** ೩೦೦.೦೦
ಸಂ: ಡಾ. ಎ.ಎಸ್. ಪ್ರಭಾಕರ, ಬಿ. ಶ್ರೀಪಾದಶೆಟ್ಟಿ

೩೩. **ಸಮಾಜವಾದಿಗಳ ನೆನಪಿನ ಸಂಪುಟ** ೨೬೦.೦೦
ಸಂ : ವಡ್ಡಗೆರೆ ನಾಗರಾಜಯ್ಯ

೩೪. **ಸರಳಶಬ್ದಮಣಿದರ್ಪಣ** ತೃತೀಯ ಮುದ್ರಣ ೨೦೦.೦೦
ಸಂ : ಡಾ. ಎಸ್.ಎಸ್. ಅಂಗಡಿ

೩೫. **ದಿವಾನ್ ಸರ್ ಎಂ. ಮಿರ್ಜಾ ಇಸ್ಮಾಯಿಲ್** ೩೦೦.೦೦
ಸಂ : ಡಾ. ಎನ್. ಚಿನ್ನಸ್ವಾಮಿ ಸೋಸಲೆ

೩೬. **ಭಿಕ್ಷುಕರ ಬದುಕು : ಒಂದು ಪ್ರಯೋಗಿಕ ಅಧ್ಯಯನ** ೬೦.೦೦
ಡಾ. ಜನಾರ್ದನ

೩೭. **ಮಹಿಳೆ ದುಡಿಮೆ ಮತ್ತು ಬಿಡುವು** ೮೦.೦೦
ಸಂ : ಡಾ. ಎಚ್.ಎಸ್. ಶ್ರೀಮತಿ ಹಾಗೂ ಇತರರು

೩೮. **ಹೆಣ್ಣು ಮತ್ತು ಭಾಷೆ** ೮೦.೦೦
ಸಂ : ಡಾ. ಎಚ್.ಎಸ್. ಶ್ರೀಮತಿ ಹಾಗೂ ಇತರರು

೩೯. **ಮಹಿಳೆ ಮತ್ತು ಆರ್ಥಿಕತೆ** ೩೦.೦೦
ಸಂ : ಡಾ. ಎಚ್.ಎಸ್. ಶ್ರೀಮತಿ ಹಾಗೂ ಇತರರು

೪೦. **ಸ್ತ್ರೀವಾದಿ ಮತ್ತು ಮಹಿಳಾ ಅಧ್ಯಯನ ಒಂದು ಪ್ರವೇಶಿಕೆ** ೧೨೦.೦೦
ಮಂಗಳಾ ಪ್ರಿಯದರ್ಶಿನಿ

೪೧. **ಮಹಿಳಾ ಸಾಮಾಜಿಕತೆ** ೧೦೦.೦೦
ಡಾ. ಜ್ಯೋತಿ ಶಶಿಕುಮಾರ್

೪೨. **ಸ್ತ್ರೀವಾದಿ ಮನೋವಿಜ್ಞಾನ** ೧೦೦.೦೦
ಡಾ. ಇಂದಿರಾ ಜೈಪ್ರಕಾಶ್

೪೩. **ಮಹಿಳಾ ಹಕ್ಕುಗಳು : ಮಾನವ ಹಕ್ಕುಗಳ ನೆಲೆಯಲ್ಲಿ** ೧೨೦.೦೦
ಸಂ. ಡಾ. ಗೀತಾ ಕೃಷ್ಣಮೂರ್ತಿ

೪೪. **ಮುಕ್ತ ಸಂಸ್ಕೃತಿ ಮತ್ತು ಹಂಪಿ ಪರಿಸರ** ೮೦.೦೦
ಹೆಬ್ಬಾಲೆ ಕೆ. ನಾಗೇಶ್

೪೫. **ಕರ್ನಾಟಕ ದೇವಾಲಯ ಕೋಶ : ರಾಯಚೂರು ಜಿಲ್ಲೆ** ೧೨೦.೦೦
ಸಂ : ಡಾ. ಸಿ.ಎಸ್. ವಾಸುದೇವನ್

೪೬. **ಕನ್ನಡ ಸಂಶೋಧನೆಯ ವೈಧಾನಿಕತೆಗಳು** ಮರುಮುದ್ರಣ ೧೬೦.೦೦
ಸಂ. ಡಾ. ಅಮರೇಶ ನುಗಡೋಣಿ

೪೭. **ಅಧ್ಯಯನದ ವಿಧಿವಿಧಾನಗಳು** ಮರುಮುದ್ರಣ ೧೨೦.೦೦
ಸಂ. ಡಾ. ಕೆ. ರವೀಂದ್ರನಾಥ

೪೮. **ಸಂಶೋಧನ ಜವಾಬ್ದಾರಿ** ಮರುಮುದ್ರಣ ೮೦.೦೦
ಎಂ. ಚಂದ್ರ ಪೂಜಾರಿ

**ಮಾರಾಟ ವಿಭಾಗ, ಪ್ರಸಾರಾಂಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
**ವಿದ್ಯಾರಣ್ಯ ೫೮೩ ೨೭೬**
ಹೊಸಪೇಟೆ ತಾಲೂಕು, ಬಳ್ಳಾರಿ ಜಿಲ್ಲೆ
ದೂರವಾಣಿ : ೦೮೩೯೪-೨೪೧೩೧೩

**ಪುಸ್ತಕಗಳು ದೊರೆಯುವ ಸ್ಥಳ ಹಾಗೂ ಸಂಪರ್ಕ**

**ಕನ್ನಡ ವಿಶ್ವವಿದ್ಯಾಲಯ ಪ್ರಾದೇಶಿಕ ಕಚೇರಿ**
**ಮತ್ತು ಪ್ರಸಾರಾಂಗ ಪುಸ್ತಕ ಮಾರಾಟ ಮಳಿಗೆ**
ನಂ. ೧. ಹಳೆಯ ಕಾನೂನು ಕಾಲೇಜು ಕಟ್ಟಡ
ಮೈಸೂರು ಬ್ಯಾಂಕ್ ವೃತ್ತ, ಅರಮನೆ ರಸ್ತೆ, ಬೆಂಗಳೂರು ೫೬೦ ೦೦೯
ದೂರವಾಣಿ : ೦೮೦-೨೨೩೭೩೮೮

# ಅಂಬೇಡ್ಕರ್ ಮತ್ತು ಸಾಂಸ್ಕೃತಿಕ ಸಂವಿಧಾನ

ಡಾ॥ ಎಸ್. ನಟರಾಜ ಬೂದಾಳು

**ಭಾರತದಲ್ಲಿ ಹುಟ್ಟುವ ಪ್ರತಿ ಮಗುವೂ ಮಾತು ಕಲಿಯುವ ಮುನ್ನ, ಅಕ್ಷರ ಕಲಿಯುವ ಮುನ್ನ, ದೈವವಾದ, ಬ್ರಹ್ಮವಾದ, ಆತ್ಮವಾದ, ಜಾತಿವಾದ, ದ್ವೈತಾದ್ವೈತವಾದಗಳ ಮತ್ತು ಪ್ರಮಾಣ ವಾದಗಳನ್ನಾಧರಿಸಿದ ಸಾಂಸ್ಕೃತಿಕ ಸಂವಿಧಾನದ ಜೀತದಾಳಾಗುತ್ತದೆ. ಈ ಜೀತಸ್ಥಿತಿಯಿಂದ ಬಿಡುಗಡೆ ಪಡೆಯಲು ಇಡೀ ಜೀವನಪೂರ್ತಿ ಹೋರಾಡಬೇಕಾಗುತ್ತದೆ. ಅಷ್ಟು ಹೊತ್ತಿಗೆ ಜೀವನದ ಪ್ರಮುಖ ಭಾಗ ಮುಗಿದುಹೋಗಿರುತ್ತದೆ. ಅಂಬೇಡ್ಕರ್ ಅವರ ಎದುರಿಗೆ ಇದ್ದ ದೊಡ್ಡ ಸವಾಲು ಇದೇ ಆಗಿತ್ತು. ಇದು ಕೇವಲ ದಲಿತರ ಸಮಸ್ಯೆ ಅಲ್ಲ, ಭಾರತದಲ್ಲಿ ಹುಟ್ಟುವ ಪ್ರತಿ ಮನುಷ್ಯ ಜೀವಿಯ ಸಮಸ್ಯೆ.**

ಅಂಬೇಡ್ಕರ್ ಎರಡು ಸಂವಿಧಾನಗಳನ್ನು ಈ ದೇಶಕ್ಕೆ ಒದಗಿಸಿ ಕೊಟ್ಟಿದ್ದಾರೆ. ಒಂದು, ರಾಜಕೀಯ ಸಂವಿಧಾನ. ಇನ್ನೊಂದು, ಸಾಂಸ್ಕೃತಿಕ ಸಂವಿಧಾನ. ಅಂಬೇಡ್ಕರ್ ಅವರ ಬಗೆಗಿನ ಮಾತುಕತೆಯ ಸಂದರ್ಭದಲ್ಲಿ ಸಾಮಾನ್ಯವಾಗಿ ರಾಜಕೀಯ ಸಂವಿಧಾನದ ಬಗೆಗೆ ಮಾತ್ರ ಮಾತನಾಡುವ ಪರಿಪಾಠವಿದೆ. ಅವರ ಸಾಂಸ್ಕೃತಿಕ ಸಂವಿಧಾನವನ್ನು ಗಂಭೀರವಾಗಿ ಗಮನಿಸಿದಂತಿಲ್ಲ. ಆದರೆ ಅಂಬೇಡ್ಕರ್ ಅವರಿಗೆ ಈ ಎರಡನೆಯ ಸಂವಿಧಾನದ ಮಹತ್ವ ಚೆನ್ನಾಗಿ ಅರಿವಿತ್ತು. ಹಾಗಾಗಿ ಅವರ ಬದುಕಿನ ಒಟ್ಟು ಬರಹಗಳನ್ನು ಗಮನಿಸಿದಾಗ ಅವರ ಬರವಣಿಗೆಯ ಹೆಚ್ಚು ಭಾಗವನ್ನು ಸಾಂಸ್ಕೃತಿಕ ಸಂವಿಧಾನವೇ ಆವರಿಸಿದೆ. ಒಂದು ಸಮೂಹದ ರಾಜಕೀಯ-ಆಡಳಿತ ಶೈಲಿಯನ್ನು ರಾಜಕೀಯ ಸಂವಿಧಾನ ನಿರ್ವಹಿಸಿದರೆ, ಸಮೂಹದ ಜೀವನಶೈಲಿಯನ್ನು ಸಾಂಸ್ಕೃತಿಕ ಸಂವಿಧಾನ ನಿರ್ವಹಿಸುತ್ತದೆ. ಈ ಸಾಂಸ್ಕೃತಿಕ ಸಂವಿಧಾನ ಎಂದರೆ ಯಾವುದು? ಇದನ್ನು ಕೊಡುವವರು ಯಾರು? ಯಾವ ಸಂವಿಧಾನ ಹೆಚ್ಚು ಬಲಶಾಲಿ? ಇತ್ಯಾದಿ ಪ್ರಶ್ನೆಗಳಿಗೆ ನಾವು ಈಗ ಇದಿರಾಗಬೇಕಾಗಿದೆ.

೧೯೩೧ ಆಗಸ್ಟ್, ೧೪ರಂದು ಗಾಂಧೀಜಿಯವರನ್ನು ಮೊಟ್ಟ ಮೊದಲಿಗೆ ಭೇಟಿಯಾದಾಗ ಅಂಬೇಡ್ಕರ್ ಗಾಂಧೀಜಿಯವರಿಗೆ ಈ ಮಾತನ್ನು ಹೇಳಿದರು: ''ಗಾಂಧೀಜಿ, ನನಗೆ ತಾಯ್ನಾಡು ಎಂಬುದಿಲ್ಲ''. ಗಾಂಧೀಜಿ ಒಮ್ಮೆಗೇ ಮೆಟ್ಟಿಬಿದ್ದರು. ದುಂಡುಮೇಜಿನ ಪರಿಷತ್ತಿನಲ್ಲಿ ದೇಶದ ಬಗೆಗೆ ಅಷ್ಟು ಅಭಿಮಾನದಿಂದ ಮಾತನಾಡಿ ಬಂದಿದ್ದ ಅಂಬೇಡ್ಕರ್ ಹೀಗೇಕೆ ಹೇಳುತ್ತಿದ್ದಾರೆಂದು ಗಾಂಧೀಜಿಗೆ ತಕ್ಷಣ ತಿಳಿಯಲಿಲ್ಲ. ಅಸ್ಪೃಶ್ಯ ಸಮೂಹದಿಂದ ಬಂದವರೊಬ್ಬರು ಯಾರಾದರೂ 'ನನಗೆ ಯಾವ ಧರ್ಮವೂ ಇಲ್ಲ, ಯಾವ ದೇಶವೂ ಇಲ್ಲ' ಅಂತ ಪ್ರತಿಕ್ರಿಯಿಸಿದರೆ ಅಂಥವರನ್ನು ಸಮಾಧಾನಿಸುವ ನೈತಿಕತೆಯನ್ನು ಈ ದೇಶದ ಯಾವ ಸಮೂಹವೂ ಉಳಿಸಿಕೊಂಡಿಲ್ಲ. ಈ ಮಾತು ದೀರ್ಘಕಾಲೀನ ಚರಿತ್ರೆಯ ಕಡೆಗೆ ಕೈಮಾಡುತ್ತದೆ. ಡಾ॥ ಬಾಬಾಸಾಹೇಬ್ ಅಂಬೇಡ್ಕರ್ ಅವರಿಗೆ ಭಾರತೀಯ ಚರಿತ್ರೆಯಲ್ಲಿ, ಭಾರತೀಯ ಜೀವನಮೀಮಾಂಸೆಯಲ್ಲಿ, ಸಂಸ್ಕೃತಿಯಲ್ಲಿ ಅಭಿಮಾನ ಪಡುವಂಥದ್ದೇನೂ ಕಾಣಲಿಲ್ಲ. ಹಾಗಾಗಿಯೇ ಯಾವ ವಚನಕಾರನೂ ಕನ್ನಡದ ಸುಂದರ ಬದುಕಿನ ಬಗೆಗೆ ಒಂದು ಮಾತನ್ನೂ ಆಡಿಲ್ಲ. ಆಡಲು ಸಾಧ್ಯವೂ ಇರಲಿಲ್ಲ. ಇಲ್ಲಿ ತುಂಬಿ ತುಳುಕುತ್ತಿದ್ದ ಅಸ್ಪೃಶ್ಯತೆ, ಜಾತಿ ಅಸಮಾನತೆ, ಪುರೋಹಿತಶಾಹಿಯ ದುರಹಂಕಾರ, ದೇವಸ್ಥಾನಗಳು ಮಾಡುತ್ತಿರುವ ಅಪಮಾನಗಳು, ದೇಶದ ಎಲ್ಲ ಸಂಪತ್ತೂ ನಮಗೇ ಇರಲಿ ಎನ್ನುತ್ತಿರುವ ಮಠಗಳು – ಈ ಕುರೂಪಿ ಬದುಕಿನ ಬಗೆಗೆ ಏನು ಒಳ್ಳೆಯ ಮಾತನ್ನು ಹೇಳಲು ಸಾಧ್ಯ? ಇವ್ಯಾವುವೂ ಇಲ್ಲದೆ ಸಂಭ್ರಮಿಸಬಹುದಾದ ಬದುಕು ಚರಿತ್ರೆಯಲ್ಲಿ ಎಂದಾದರೂ ಇತ್ತೆ? ಈಗಲಾದರೂ ಇದೆಯೇ?

ಇದೊಂದು ಮುಖ್ಯ ಪ್ರಶ್ನೆ. ಕೆಳಸ್ತರದಿಂದ ಬಂದವರಿಗೆ ಚರಿತ್ರೆಯ ನೆನಪು ಎಂದಿಗೂ ಹಿತಕಾರಿ ಅಲ್ಲ. ಅವರಿಗೆ ಅದು ಎದೆಯಲ್ಲಿ ಉರಿಯುವ ಕೊಳ್ಳಿ. ನೆನಪಿಸಿಕೊಂಡಷ್ಟು ದಹಿಸುತ್ತೆ. 'ನಾವು ಮುಟ್ಟಬಾರದವರು, ನೋಡಬಾರದವರು, ದನಿ ಕೇಳಬಾರದವರು, ಬೀದಿಯಲ್ಲಿ ಹೆಜ್ಜೆಗುರುತನ್ನು ಕೂಡ ಬಿಡಬಾರದವರು, ದಾರಿಯಲ್ಲಿ ಎಂಜಲು ಉಗಿಯಬಾರದವರು, ದನಕರುಗಳನ್ನು ಕೂಡ ಸಾಕಬಾರದವರು, ಪಕ್ಕಾಮನೆ ಕಟ್ಟಿಕೊಳ್ಳುವ ಹಾಗಿಲ್ಲದವರು, ಒಳ್ಳೆ ಬಟ್ಟೆ ಧರಿಸಬಾರದವರು, ಒಳ್ಳೆಯ ಹೆಸರಿಟ್ಟುಕೊಳ್ಳಬಾರದವರು – ಅಕಸ್ಮಾತ್ ಒಳ್ಳೆಯ ಹೆಸರೇನಾದರೂ ಇದ್ದರೆ ಅದನ್ನು ಕುರೂಪಗೊಳಿಸಿ ಇಟ್ಟುಕೊಳ್ಳಬೇಕಾದವರು, ಎಲ್ಲರಿಗೂ ಚಪ್ಪಲಿ ಹೊಲಿದುಕೊಟ್ಟರೂ ತಾವು ಮಾತ್ರ ಚಪ್ಪಲಿ ಧರಿಸಬಾರದವರು, ಶುಚಿಯಾದ ಬಟ್ಟೆ ಧರಿಸಬಾರದವರು, ಸಾರ್ವಜನಿಕ ಬಾವಿ, ಕೆರೆಲಿ ನೀರನ್ನು ಮುಟ್ಟಬಾರದವರು, ಅಗಸರು, ಕ್ಷೌರಿಕರು ಇತ್ಯಾದಿಯವರಿಂದ ಸೇವೆ ಪಡೆಯಲು ಹಕ್ಕಿಲ್ಲದವರು.' ಈಗ ಇವೆಲ್ಲ ಇದೇ ರೂಪದಲ್ಲಿ ಇಲ್ಲದಿರಬಹುದು. ಆದರೆ ಇವುಗಳ ಬೇರೆ ಬೇರೆ ಆವೃತ್ತಿಗಳು ಇಲ್ಲವೆನ್ನಲಾಗದು. ಸಾವಿರಾರು ವರ್ಷಗಳ ಇಂತಹ ನಾಚಿಕೆಗೇಡಿ ಚರಿತ್ರೆಯನ್ನು ಹೇಗೆ ಎದುರಾಗಬೇಕು? ಹಾಗಾಗಿ ಅಂಬೇಡ್ಕರ್ ಚರಿತ್ರೆಯನ್ನು ಒಪ್ಪ

ಅಪರಾಧಿಯಂತೆ ಕಟಕಟೆಯಲ್ಲಿ ನಿಲ್ಲಿಸಿ ಮಾತನಾಡಿಸುತ್ತಾರೆ. ಆದರೆ ಗಾಂಧೀಜಿ ಅದನ್ನು ಹಾಗೆ ಎದುರಾಗಲಾರರು. ಅದು ಬೇರೆ ಸಂಗತಿ. ಆದರೆ ಇದೇ ಚರಿತ್ರೆಯನ್ನು ಕೆಲವು ದಲಿತ ಸಮೂಹಗಳು ಅಧಿಕಾರದ ಕಾರಣಕ್ಕೆ ವೈಯಕ್ತಿಕ ಆರ್ಥಿಕ ಲಾಭಕ್ಕೆ ಹೇಗೆ ಎದುರಾಗುತ್ತಿವೆ ಎನ್ನುವುದು ಮತ್ತೊಂದು ಇಬ್ಬಾಯಿಯ ಕತ್ತಿ. ದಲಿತಪರ, ದಲಿತೇತರ ಸಮೂಹಗಳನ್ನು ಧಿಕ್ಕರಿಸಿ ಕೆಲವು ದಲಿತ ಸಮೂಹಗಳು ಇಡುತ್ತಿರುವ ಹೆಜ್ಜೆಗಳು ಸಮೂಹಘಾತಕ ವೆನ್ನುವುದರಲ್ಲಿ ಅನುಮಾನವೇನೂ ಇಲ್ಲ.

ಗಾಂಧೀಜಿಗೆ ಭಾರತದ ಬಿಡುಗಡೆ ಎಂದರೆ ಬ್ರಿಟಿಷ್ ವಸಾಹತುಶಾಹಿಯಿಂದ ಬಿಡುಗಡೆ. ಆದರೆ ಅಂಬೇಡ್ಕರ್ ಅವರಿಗೆ ಬಿಡುಗಡೆ ಎಂದರೆ ಸಾಂಸ್ಕೃತಿಕ ವಸಾಹತುಶಾಹಿ/ಸಾಂಸ್ಕೃತಿಕ ದಾಸ್ಯದಿಂದ ಬಿಡುಗಡೆ. ಭಾರತವೆನ್ನುವುದು ಅನೇಕ ಸ್ತರಗಳ ಒಂದು ವಸಾಹತು. ವಸಾಹತುಶಾಹಿಯ ಪ್ರಾರಂಭವೆನ್ನುವುದು ಭಾರತೇತರ ರಾಷ್ಟ್ರಗಳಿಗೆ ಒಂದು ಚಾರಿತ್ರಿಕ ಘಟನೆ. ಸಾಮಾನ್ಯವಾಗಿ ಕ್ರಿಸ್ಟೋಫರ್ ಕೊಲಂಬಸ್ಸನ ಅಮೆರಿಕಾ ಯಾತ್ರೆಯೇ ವಸಾಹತುಶಾಹಿಯ ಮೊದಲ ಹೆಜ್ಜೆ ಎಂದು ಗುರುತಿಸಲಾಗುತ್ತದೆ. ಆದರೆ ಭಾರತದ ಮಟ್ಟಿಗೆ ಅದೊಂದು ಪೌರಾಣಿಕ ಘಟನೆ. ಉತ್ತರದಿಂದ ಕೊಡೆ ಹಿಡಿದು ಭಿಕ್ಷೆಗಾಗಿ ಬಂದವನು ನಿಲ್ಲಲು ನೆಲೆ ಕೇಳಿ ಕೊನೆಗೆ ನೆಲೆ ನಿಂತಮೇಲೆ ಕೊಟ್ಟವನ ತಲೆಯ ಮೇಲೆ ಕಾಲಿಟ್ಟು ಪಾತಾಳಕ್ಕೆ ತುಳಿದ ದಿನದಿಂದ ವಸಾಹತು ಶಾಹಿಯ ವಶಕ್ಕೆ ಹೋದ ಭಾರತಕ್ಕೆ ಇನ್ನೂ ವಸಾಹತೋತ್ತರ ಕಾಲವೆಂಬುದು ಬಂದಿಲ್ಲ. ಇನ್ನೂ ನಮ್ಮ ತಲೆಯ ಮೇಲಿಟ್ಟ ಅವನ ಕಾಲನ್ನು ತೆಗೆದಿಲ್ಲ. ನಮ್ಮ ನೆಲದಲ್ಲಿಯೇ ನಮ್ಮನ್ನು ನಿರ್ವಸಿತರನ್ನಾಗಿಸುವ ಈ ಪ್ರಕ್ರಿಯೆ ಪ್ರಾರಂಭವಾದದ್ದು ಹೇಗೆ? ಅಸಮಾನತೆಯನ್ನು ಉಂಟುಮಾಡುವ ಮಾರ್ಗಗಳು ಯಾವುವು? ಹೇಗೆ ಅಸಮಾನತೆಯನ್ನು ಒಂದು ಸಮೂಹ ಒಪ್ಪಿಕೊಳ್ಳುವಂತೆ ಮಾಡಲಾಗುತ್ತದೆ? ಸುಮಾರು ೨೦ ಕೋಟಿ ಜನರನ್ನು ನೀವು ಮುಟ್ಟಬಾರದವರು ಎಂಬ ಆಚರಣೆಗೆ ಒಪ್ಪಿ ಕೊಳ್ಳುವಂತೆ ಯಾವುದರ ಮೂಲಕ ಒಪ್ಪಿಗೆಯನ್ನು ಉತ್ಪಾದಿಸಿಕೊಳ್ಳಲಾಗುತ್ತದೆ?

ಈ ಸಾಂಸ್ಕೃತಿಕ ವಸಾಹತುಶಾಹಿಯಿಂದ ಬಿಡುಗಡೆಗೆ ಅಂಬೇಡ್ಕರ್ ಮುಂದಿಟ್ಟ ಮಾರ್ಗಗಳು ನಾಲ್ಕು: ೧) ಅಕ್ಷರ, ೨) ಹೋರಾಟ, ೩) ತರ್ಕವನ್ನಾಧರಿಸಿದ ಪ್ರಜಾಸತ್ತೆ, ೪) ಸಾಂಸ್ಕೃತಿಕ ರಾಜಕಾರಣ ಅಥವಾ ಸಾಂಸ್ಕೃತಿಕ ಸಂವಿಧಾನ... ಮೊದಲಿನ ಎರಡು ಮಾರ್ಗಗಳನ್ನು ಮಾತ್ರ ಇದುವರೆಗೆ ಬಳಸಿಕೊಳ್ಳುವ ಪ್ರಯತ್ನ ಮಾಡಿದ್ದೇವೆ, ಸ್ವಲ್ಪ ಮಟ್ಟಿಗೆ ಯಶಸ್ಸನ್ನೂ ಕಂಡಿದ್ದೇವೆ. ಆದರೆ ವಸಾಹತುಶಾಹಿಯು ಕೊನೆಯ ಎರಡನ್ನು ತಮ್ಮ ಅಸ್ತ್ರವನ್ನಾಗಿ ಮಾಡಿಕೊಂಡಿದೆ. ಇದನ್ನು ಒಂದು ನೇರ ಪ್ರಶ್ನೆಯ ಮೂಲಕ ಅರ್ಥಮಾಡಿ ಕೊಳ್ಳಲು ಪ್ರಯತ್ನಿಸಬಹುದು: ಅಂತಿಮವಾಗಿ ಅಧಿಕಾರ ವನ್ನು ರೂಢಿಸಿಕೊಡುವುದು ಯಾವುದು? ೧) ಸಂಖ್ಯಾ ಬಲವೋ? ೨) ಅಕ್ಷರ ಬಲವೋ? ೩) ಆರ್ಥಿಕ ಬಲವೋ? ೪) ಸಾಂಸ್ಕೃತಿಕ ರಾಜಕಾರಣವೋ?

ಸಾಂಸ್ಕೃತಿಕ ರಾಜಕಾರಣವೇ ನಿರ್ಣಾಯಕವೆಂದು ಮೇಲ್ನೋಟಕ್ಕೇ ಗೊತ್ತಾಗುತ್ತದೆ. ರಾಜಕೀಯ ಸಂವಿಧಾನವು ಸಮೂಹಕ್ಕೆ ಸಮಾನವಾಗಿ ಹಂಚುವ ಅಧಿಕಾರವನ್ನು ಸಾಂಸ್ಕೃತಿಕ ರಾಜಕಾರಣದ ಮೂಲಕ ಕಿತ್ತುಕೊಂಡು ಕೆಲವೇ ಜನರ ಸಮೂಹಕ್ಕೆ ನೀಡಲಾಗುತ್ತದೆ. ಹಾಗಾಗಿ ಈ ಸಾಂಸ್ಕೃತಿಕ ರಾಜಕಾರಣವನ್ನು ನಿಭಾಯಿಸದೇ ಹೋದರೆ ಸಮಾನ ಅವಕಾಶಗಳ ಪ್ರಜಾಸತ್ತೆ ಕೇವಲ ಕನಸಾಗಿ ಉಳಿಯುತ್ತದೆ. ಸಾಂಸ್ಕೃತಿಕ ರಾಜಕಾರಣ ನೇರವಾಗಿ ನಿತ್ಯದ ಬದುಕಿನೊಡನೆ ಸಂಘರ್ಷಕ್ಕಿಳಿಯುತ್ತದೆ. ಅದು ದೇಹ ಸಮಾನತೆಯನ್ನು ನಿರಾಕರಿಸುವ ಮೂಲಕ, ಅನ್ನ ಸಮಾನತೆಯನ್ನು ನಿರಾಕರಿಸುವ ಮೂಲಕ, ನೀರಿನ ಸಮಾನತೆಯನ್ನು ನಿರಾಕರಿಸುವ ಮೂಲಕ, ಭೂಮಿ, ಗಾಳಿ, ಬೆಳಕಿನ ಸಮಾನತೆಯನ್ನು ನಿರಾಕರಿಸುವ ಮೂಲಕ ಅಸಮಾನತೆಯನ್ನು ಮುಂದುಮಾಡುತ್ತದೆ. ದೀರ್ಘಕಾಲೀನ ಭಾರತೀಯ ಚರಿತ್ರೆಯಲ್ಲಿ ಯಾರ್‍ಯಾರು ದೀನರ ಪರ, ಸಮಾನತೆಯ ಪರ, ದಲಿತರ ಪರ, ಹಿಂದುಳಿದವರ ಪರ, ಅಶಕ್ತರ ಪರ ನಿಂತಿದ್ದಾರೋ ಅವರೆಲ್ಲರಿಗೆ ಮತ್ತು ಅವರ ತಾತ್ವಿಕತೆಗೆ ಆದ ಅವಸಾನವನ್ನು ಕಂಡರೆ ಅಂತಹ ಯಾರನ್ನೂ ಇಲ್ಲಿ ಉಳಿಯಗೊಟ್ಟಿಲ್ಲ. ಜಾತಿಯ ಅಸಮಾನತೆಯನ್ನು ಒಪ್ಪದ ಭಾರತದ ಅನೇಕ ತಾತ್ವಿಕ ಪಂಥಗಳಾದ ನಾಥ, ಸೂಫಿ, ಸಿದ್ಧ ಪರಂಪರೆಗಳನ್ನು ಮೂಲೆಗಟ್ಟಿ,

ಉಸಿರುಗಟ್ಟಿಸಿ ನಿರ್ಜೀವಗೊಳಿಸಲಾಗಿದೆ. ಮಹಾಮಾನವ ಬುದ್ಧಗುರುವಿನ ಕರುಣಾ ಮೈತ್ರಿಯ ಸಮಾನತೆಗೆ ವಿಶ್ವದ ದೊಡ್ಡ ಸಮೂಹ ಸ್ಪಂದಿಸಿತು. ಆದರೆ ಈ ನೆಲದಿಂದಲೇ ಅದನ್ನು ಹೊರಗೆ ಅಟ್ಟಲಾಯಿತು.

ಒಂದಂತೂ ನಿಶ್ಚಿತ. ನಾವು ಭಾರತೀಯರು ಊನಗೊಂಡ ಜೀವನಕ್ರಮವೊಂದನ್ನು ಅನ್ವಯಿಸಿ ಕೊಂಡು ಬಾಳುತ್ತಿದ್ದೇವೆ. ಈ ಊನ ಎಲ್ಲಿಂದ ಬಂದದ್ದು? ಇದನ್ನು ನಾವೇಕೆ ಒಪ್ಪಿ ಬಾಳುತ್ತಿದ್ದೇವೆ? ಹಾಗಾದರೆ ಭಾರತೀಯ ಸಮಾಜದ ಈ ಊನಗೊಂಡ ಜೀವನಮೀಮಾಂಸೆಯ ಆಕರ ಯಾವುದು? ನಮ್ಮ ಬದುಕಿನ ಈ ಅಪಾರ ಸಂಕಟಗಳಿಗೆ ಅದೇ ಕಾರಣವೆ? – ಈ ಪ್ರಶ್ನೆಗಳನ್ನು ಅಂಬೇಡ್ಕರ್ ಗಂಭೀರವಾಗಿ ಶೋಧಿಸಿದ್ದಾರೆ. ಬಾಬಾ ಸಾಹೇಬರಿಗೆ ತಾವು ಮುಂದಿಟ್ಟ ಪ್ರಜಾಸತ್ತೆ ಮತ್ತು ಸಂವಿಧಾನ ಉಳಿಯುವ ಜೀವನಕ್ರಮವೊಂದನ್ನು ಅನ್ವೇಷಿಸಿ ಕೊಡದೆ ಹೋದರೆ ಆಗುವ ಅಪಾಯಗಳ ಅರಿವಿತ್ತು. ಈ ಎಲ್ಲ ಅಪಮಾನಗಳಿಂದ ಮುಕ್ತಗೊಳಿಸುವುದಷ್ಟೇ ಅಲ್ಲ, ಪ್ರಜಾಸತ್ತೆಯನ್ನು ಉಳಿಸಿಕೊಂಡು ಬಾಳಬಲ್ಲ ಸಲಕರಣೆಗಳ ಶೋಧನೆ ಕೂಡ ಅಗತ್ಯವಾಗಿತ್ತು. ಬಿಡುಗಡೆ ಎಂದರೆ ಸ್ವತಂತ್ರವಾದ ಜಾಗ. ಆದರೆ ಅರಾಜಕತ್ವವಲ್ಲ. ಅದೊಂದು ಸಾಂಸ್ಕೃತಿಕ ರಾಜಕೀಯ ಮತ್ತು ಸಾಮಾಜಿಕ ಬಿಡುಗಡೆ ಕೂಡ ಆಗಿರಬೇಕು. ಅವರಿಗೆ ಇದೆಲ್ಲ ಆರ್ಯ ಯಜಮಾನಿಕೆಯಿರುವ ಹಿಂದೂ ವ್ಯವಸ್ಥೆಯಲ್ಲಿ ಸಾಧ್ಯವಿಲ್ಲ ಎಂಬ ಸಂಗತಿಯ ಅರಿವಿತ್ತು. ಸಾಧ್ಯವಿರುವುದು ಬೌದ್ಧ ಧರ್ಮದಲ್ಲಿ ಮಾತ್ರ ಎಂಬುದನ್ನು ತಮ್ಮ ಸುದೀರ್ಘವಾದ ಅಧ್ಯಯನದ ಮೂಲಕ ಬಾಬಾಸಾಹೇಬರು ಕಂಡುಕೊಂಡರು. ಅವರು ಬೌದ್ಧ ಧರ್ಮವನ್ನೇ ಏಕೆ ಬಿಡುಗಡೆಯ ಮಾರ್ಗವಾಗಿ ಮುಂದಿಟ್ಟರು? ಅವರು ನೀಡಿದ ಈ ಸಾಂಸ್ಕೃತಿಕ ಸಂವಿಧಾನದ ಪ್ರಮುಖ ಸಂಗತಿಗಳೇನು ಎನ್ನುವುದನ್ನು ನಾವೀಗ ಗಂಭೀರವಾಗಿ ಪರಿಭಾವಿಸಬೇಕಾಗಿದೆ.

ಅಂಬೇಡ್ಕರ್ ಬೌದ್ಧ ಧರ್ಮವನ್ನು ಆಯ್ಕೆ ಮಾಡಿಕೊಂಡುದರ ಹಿಂದೆ ಗಂಭೀರವಾದ ತಾತ್ವಿಕ ಶೋಧನೆ ಇದೆ. ಅದನ್ನು ಅರ್ಥೈಸಿಕೊಳ್ಳಲು ಅಸಮಾನತೆಯ ಕಾರಣಗಳ ಶೋಧನೆ ಅಗತ್ಯ. ಧರ್ಮವೊಂದು ಸಮೂಹದ ನಡುವೆ ಗಂಭೀರವಾದ ಅಸಮಾನತೆಗಳನ್ನು ಉಂಟುಮಾಡಲು ಬಳಸಿಕೊಳ್ಳುವ ಹತಾರುಗಳು ಯಾವುವು?

೧. ಮೊದಲನೆಯದು, ಅದು ನೀಡುವ ಲೋಕವಿವರಣೆ
೨. ಪ್ರಮಾಣಗಳ ನಿರ್ಮಾಣ ಮತ್ತು ನಿರ್ವಹಣೆ
೩. ನಿಸರ್ಗ ವಿವೇಕದ ನಾಶ
೪. ಸಂಸ್ಕೃತಿ ಸಂಕೇತಗಳನ್ನು ಭ್ರಷ್ಟಗೊಳಿಸುವುದು

ಈ ನಾಲ್ಕು ಸಂಗತಿಗಳ ವಿವರಣೆ ಅಗತ್ಯವಿದೆ. **ಆಸೆಯೇ ದುಃಖಕ್ಕೆ ಮೂಲ ಎಂದು ಬುದ್ಧಗುರು ಎಲ್ಲೂ, ಎಂದೂ ಹೇಳಿಲ್ಲ.** 'ತನ್ಹಾ' ಎನ್ನುವ ಪಾಲಿ ಭಾಷೆಯ ಪದವನ್ನು ಕನ್ನಡಕ್ಕೆ ಅನುವಾದ ಮಾಡುವಾಗ 'ಆಸೆ' ಎಂದು ತಪ್ಪಾಗಿ ಅನುವಾದ ಮಾಡಿದ್ದರಿಂದ ಆದ ಪ್ರಮಾದ ಇದು. ಆದರೆ ಇದು ಅಚಾನಕ್ಕಾಗಿ ಆಗಿರುವ ಪ್ರಮಾದವೆಂದೆನ್ನಿಸುವುದಿಲ್ಲ. ಬುದ್ಧಗುರು ತಿಳಿಸಿಕೊಟ್ಟ ತಿಳುವಳಿಕೆಯನ್ನು ತಡೆಯುವ, ತಿರುಚುವ ಸುಮಾರು ೨೦೦೦ ವರ್ಷಗಳ ದೀರ್ಘ ಸಾಂಸ್ಕೃತಿಕ ರಾಜಕಾರಣದ ಭಾಗ ಇದು. ಬುದ್ಧನ ಬಗೆಗಿನ ಇನ್ನೊಂದು ಕತೆಯಿದೆಯಲ್ಲ – ಅವನೊಬ್ಬ ಕೋಮಲ ರಾಜಕುಮಾರ, ಹದಿಹರೆಯದವರೆಗೆ ಅವನು ರೋಗಿಯನ್ನು ನೋಡಿರಲಿಲ್ಲ, ವೃದ್ಧನನ್ನು ನೋಡಿರಲಿಲ್ಲ, ಸಾವನ್ನು ಕಂಡಿರಲಿಲ್ಲ ಇತ್ಯಾದಿ – ಇದೂ ಅಂಥದ್ದೇ. ಕೆಳಸ್ತರದಿಂದ ಬಂದ ದಾರ್ಶನಿಕರು ಮತ್ತು ಕವಿಗಳನ್ನು ಹೀಗೆ ಕೃತಕಗೊಳಿಸಿ ಚಿತ್ರಿಸುವ ರಾಜಕಾರಣ ನಮ್ಮ ನಡುವೆ ಬಹಳ ಕಾಲದಿಂದ ಇದೆ. ವಾಲ್ಮೀಕಿ, ಕಾಳಿದಾಸರನ್ನು ಹೀಗೇ ಚಿತ್ರಿಸಿಲ್ಲವೆ? ಇವರೆಲ್ಲ ಹೇಗೋ ಇದ್ದವರು ದಿನ ಬೆಳಗಾಗುವುದರೊಳಗೆ ಮಹಾಮಹಿಮರಾಗಿ ರೂಪಾಂತರ ಹೊಂದಿದವರಲ್ಲ. ಇವರೆಲ್ಲ ಸಮೂಹದೊಳಗೇ ಇದ್ದು, ಗುದ್ದಾಡಿ, ತಾತ್ವಿಕ ಸಂಘರ್ಷಗಳನ್ನು ನಡೆಸಿ ಅರಿವಿನ ಹಾದಿಯನ್ನು ಸವೆಸಿದ್ದಾರೆ. ಬುದ್ಧಗುರು ಕೂಡ ಸಮೂಹದ ನಡುವಿನಿಂದ ಬಂದವನು. ಸಮೂಹದ ದುಃಖದ ಬಿಡುಗಡೆಗೆ ಹಂಬಲಿಸಿದವನು. ಅದಕ್ಕೋಸ್ಕರವೇ ಅರಿವಿನ ಹಾದಿಯನ್ನು ಶೋಧಿಸಿದವನು. ಬುದ್ಧಗುರು ಹೇಳಿದ್ದು ಏನು? ಎನ್ನುವಷ್ಟೇ ಮುಖ್ಯವಾದದ್ದು 'ಏನನ್ನು ಹೇಳಲಿಲ್ಲ?' ಎನ್ನುವುದು. ಏಕೆಂದರೆ 'ಇದು ಬುದ್ಧ ಹೇಳಿದ್ದು' ಎನ್ನುವ ದನಿಯಲ್ಲೇ ಇದನ್ನು



ಜೈಲು

ಪ್ರೀತಿ. ಸತ್ಯ. ನಂಬಿಕೆ
ಪ್ರಾಮಾಣಿಕತೆಗಳನ್ನು ಕೊಂದು
ಸುಳ್ಳು. ತಪ್ಪು. ಮೋಸ
ವಂಚನೆಗಳನ್ನು ಅಲಂಕರಿಸಿ
ಮೆರವಣಿಗೆ ಹೊರಟ ಸ್ಥಳ.

ಪ್ರಶ್ನಿಸಬೇಡ ಎನ್ನುವ ಬೆದರಿಕೆಯೊಂದಿರುತ್ತದೆ. ಅಂತಹ ಬೆದರಿಕೆಯನ್ನು ಬುದ್ಧಗುರು ಮೊದಲು ನಿವಾರಿಸಿದ.

ಬೌದ್ಧ ಧರ್ಮವನ್ನು ಬುದ್ಧನಿಂದಲೇ, ಬುದ್ಧನ ಶಿಷ್ಯರಿಂದಲೇ ಕೇಳಿ ತಿಳಿಯಬೇಕೆಂದಿಲ್ಲ. ಸರಿಯಾದ ಲೋಕವಿವರಣೆಯನ್ನು ಯಾವ ಮೂಲದಿಂದ ತಿಳಿದರೂ ಅದು ಬೌದ್ಧ ಧರ್ಮವೇ ಆಗಿರುತ್ತದೆ ಮತ್ತು ಅಂತಹ ವಿವರಣೆಯನ್ನಾಧರಿಸಿದ ಬದುಕನ್ನು ಬಾಳಿದರೆ ಅದು ನಿಶ್ಚಿತವಾಗಿ ಬೌದ್ಧ ಧರ್ಮದ ಬಾಳುವೆಯ ಕ್ರಮವೇ ಆಗಿರುತ್ತದೆ. ಬೌದ್ಧ ಮಧ್ಯಮಮಾರ್ಗವು ಲೋಕವನ್ನು ಸರಿಯಾಗಿ ಅರಿತು ಬಾಳುವ ಕ್ರಮವನ್ನು ಮುಂದಿಡುತ್ತದಾದ್ದರಿಂದಲೇ ಅಂಬೇಡ್ಕರ್ ಬೌದ್ಧ ಜೀವನಕ್ರಮ ಮಾತ್ರ ಪ್ರಜಾಸತ್ತಾತ್ಮಕ ಜೀವನಕ್ರಮ ಎಂಬ ತೀರ್ಮಾನಕ್ಕೆ ಬಂದದ್ದು ಸರಿಯಾಗಿಯೇ ಇದೆ. ಲೋಕದ ಬಗೆಗೆ ಸರಿಯಾದ ತಿಳುವಳಿಕೆ ಎಂದರೆ ಏನು? ಇದಕ್ಕೂ ನಮ್ಮ ನಿತ್ಯ ಬದುಕಿನ ದುಃಖಕ್ಕೂ ಏನು ಸಂಬಂಧ? ಇಂದು ಜಗತ್ತು ಬುದ್ಧನೆಡೆಗೆ ನೋಡಲು ಎರಡು ಪ್ರಮುಖ ಕಾರಣಗಳಿವೆ. ಒಂದು ಅವನು ಲೋಕವನ್ನು ಸರಿಯಾಗಿ ವಿವರಿಸಿಕೊಟ್ಟಿದ್ದಾನೆ ಮತ್ತು ಎಲ್ಲವನ್ನೂ ಅದು ಇರುವಂತೆ ನೋಡಲು ಕಲಿಸಿಕೊಟ್ಟಿದ್ದಾನೆ. ಎರಡನೆಯದಾಗಿ, ಈ ವಿವರಣೆಯು ನಮ್ಮನ್ನು ಲೋಕದೊಡನೆ ಕರುಣೆ - ಮೈತ್ರಿಯಿಂದ ವರ್ತಿಸುವಂತೆ ಪ್ರೇರೇಪಿಸುತ್ತದೆ. ಈ ಕರುಣಾಮೈತ್ರಿ ಮಾರ್ಗವು ಹೊರಗಿನಿಂದ ಆವಾಹಿಸಿಕೊಳ್ಳಬೇಕಾದ ಭಾವ ವಿಶೇಷವಾಗಿರದೆ ಲೋಕ ಸಂಬಂಧದ ಸರಿಯಾದ ಅರಿವಿನಿಂದ ಮೂಡುವ ಅಂತರ್ವಾಹಿನಿಯಾಗಿದೆ. ನಮ್ಮ ಸುತ್ತಲಿನ ಲೋಕ ಚಟುವಟಿಕೆಯನ್ನು ಮೊದಲು ಸರಿಯಾಗಿ ಅದೇನೆಂದು ವಿವರಿಸಿಕೊಳ್ಳಬೇಕು. ಹಾಗೆ ಲೋಕವನ್ನು ಸರಿಯಾಗಿ ವಿವರಿಸಿ ಕೊಡುತ್ತಿರುವುದು ಬೌದ್ಧ ಧರ್ಮ ಮತ್ತು ಆಧುನಿಕ ವಿಜ್ಞಾನ ಮಾತ್ರ.

**ನಮ್ಮ ನಿತ್ಯದ ಬದುಕನ್ನು ಸಂಕಟಕ್ಕೆ ನೂಕಿರುವ ಇನ್ನಾವ ಸಂಗತಿಗಳಿವೆ?**

ನಮಗೆ ಹುಟ್ಟಿನೊಡನೆಯೇ ಒಂದು ನಿಸರ್ಗ ವಿವೇಕ, ಒಂದು ಸಾಮಾನ್ಯ ತರ್ಕ ನಮ್ಮೊಡನೆ ಬಂದಿವೆ. ಅವು ನಾವು ಎದುರಾಗುವ ಎಲ್ಲ ಸಂಗತಿಗಳ ಸರಿ ತಪ್ಪುಗಳನ್ನು ಒಂದು ಹಂತಕ್ಕೆ ನಿರ್ಣಯಿಸಿಕೊಡಬಲ್ಲವು. ಆದರೆ ಈ ನಿಸರ್ಗ ವಿವೇಕವನ್ನು ದಿಕ್ಕು ತಪ್ಪಿಸುವ ಕೆಲವು ಸಂಗತಿಗಳಿವೆ. ಸಮೂಹದ ಬದುಕನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಕೆಲವು ಗುಂಪುಗಳು ಹೀಗೆ ನಮ್ಮ ನಿಸರ್ಗ ವಿವೇಕದ ದಿಕ್ಕು ತಪ್ಪಿಸುತ್ತವೆ. ಈ ದೇಶದ ಸುಮಾರು ಹದಿನೈದು ಕೋಟಿ ಜನರನ್ನು 'ನೀವು ಅಸ್ಪೃಶ್ಯರು, ಮುಟ್ಟಬಾರದವರು ಎಂದು ಸಾವಿರಾರು ವರ್ಷಗಳ ಕಾಲ ನಂಬಿಸುತ್ತಲೇ ಬಂದಿದ್ದಾರಲ್ಲ, ಅದು ಸಾಧ್ಯವಾದದ್ದು ಹೇಗೆ? ನಿಸರ್ಗ ವಿವೇಕವಿರುವ ಯಾರಿಗಾದರೂ ಇದೊಂದು ಅಪ್ಪಟ ಮೋಸ ಎಂದು ಗೊತ್ತಾಗುತ್ತದೆ. ಇಂತಹ ಮೋಸವನ್ನು ಪ್ರಮಾಣಗಳ ಮೂಲಕ ಮಾಡುತ್ತಾರೆ. ಇಂದು ಭಾರತೀಯ ಸಮಾಜಕ್ಕೆ ತಗಲಿಕೊಂಡಿರುವ ದೊಡ್ಡ ರೋಗವೆಂದರೆ ಪ್ರಮಾಣಗಳದ್ದು. ಪ್ರಮಾಣಗಳು ಎಂದರೆ 'ಇಂಥವರು ಹೇಳಿದ್ದಾರೆ,

ಇಂತಹ ಪುಸ್ತಕದಲ್ಲಿ ಹೇಳಿದೆ, ಆದುದರಿಂದ ಪ್ರಶ್ನಿಸದೆ ಒಪ್ಪಿಕೊಂಡು ನಡೆದುಕೊಳ್ಳಿ' ಎನ್ನುವ ಪ್ರಶ್ನಿಸಬಾರದ ಹೇಳಿಕೆಗಳು. ದಿನಬೆಳಗಾದರೆ ಬಹುಪಾಲು ದೇಶಿ ಚಾನಲ್‌ಗಳಲ್ಲಿ ನಾಮ, ವಿಭೂತಿ, ಮುದ್ರೆಗಳನ್ನು ಅಕರಾಳ ವಿಕರಾಳವಾಗಿ ಒತ್ತಿಕೊಂಡು ಟಿ.ವಿ. ಪರದೆಯ ತುಂಬ ಕುಳಿತು, ಎದುರಿಗೆ ಕುಳಿತು ಪಲುಕುವ ಮೊದ್ದು ಹುಡುಗಿಯೆದುರಿಗೆ ಬೊಗಳೆ ಬಿಡುವ ಬ್ರಹ್ಮಾಂಡಾದಿಗಳು ಮಾಡುತ್ತಿರುವ ಒಂದೇ ಕೆಲಸವೆಂದರೆ ಸಮೂಹಕ್ಕಿರುವ ನಿಸರ್ಗ ವಿವೇಕವನ್ನು, ತರ್ಕವನ್ನು ನಾಶಮಾಡುವುದು. ಒಮ್ಮೆ ಅದನ್ನು ನಾಶಮಾಡಿದರೆ ಮುಗಿಯಿತು. ಅಂತಹವರ ಕೈಲಿ ಏನು ಕೆಲಸವನ್ನಾದರೂ ಮಾಡಿಸಬಹುದು. ತಲೆಯ ಮೇಲೆ ಎಂಜಲು ಸುರಿಯ ಬಹುದು, ಮಲ ಹೊರಿಸಬಹುದು, ಪಾದ ಪೂಜೆ ಮಾಡಿಸಿಕೊಳ್ಳಬಹುದು, ಕೂತು ಆರಾಮಾಗಿ ಯಾರದೋ ದುಡಿಮೆಯನ್ನು ಉಣ್ಣಬಹುದು ಮತ್ತು ಸರ್ಕಾರಗಳನ್ನೇ ನಿಯಂತ್ರಿಸಬಹುದು. ಇಂತಹ ವಿವೇಕನಾಶದ ದೇಶದ್ರೋಹಿ ಕೆಲಸ ಇಷ್ಟು ದೊಡ್ಡ ಪ್ರಮಾಣದಲ್ಲಿ ಇಂದಿನ ಇಲೆಕ್ಟ್ರಾನಿಕ್ ಮಾಧ್ಯಮಗಳ ಸಹಕಾರದಿಂದ ಆಗುತ್ತಿದೆ.

ನಾವು ಅನ್ವಯಿಸಿಕೊಂಡು ಬಾಳುತ್ತಿರುವ ಬೌದ್ಧೇತರ ದರ್ಶನಗಳು ತಮ್ಮ ಲೋಕವಿವರಣೆಯನ್ನು ಸಮರ್ಥಿಸಲು ಪ್ರಮಾಣಗಳನ್ನು ರೂಪಿಸಿ ಬಳಸಿಕೊಂಡಿವೆ. ಪ್ರಮಾಣಗಳನ್ನು ತರ್ಕದ ಮೂಲಕ ಮಂಡಿಸಿದ್ದಾರೆ. ಇದೊಂದು ಇಬ್ಬಾಯಿಯ ಕತ್ತಿ. ಮೊದಲೇ ಅಕ್ಷರಹೀನ ಸಮಾಜ. ಅದರ ಮೇಲೆ ಹರಿತವಾದ ತರ್ಕವನ್ನು ಬಳಸಿದರೆಂದರೆ ಪ್ರತಿರೋಧದ ಎಲ್ಲ ಸಾಧ್ಯತೆಗಳೂ ಮುಚ್ಚಿಹೋಗುತ್ತವೆ. ಇಂದಿಗೂ ತರ್ಕ ಮತ್ತು ಪ್ರಮಾಣಗಳನ್ನು ಬೌದ್ಧೇತರ ಧರ್ಮಗಳು ಬಳಸಿ ಮೋಸಮಾಡುತ್ತಲೇ ಇವೆ. ನಮ್ಮ ಬದುಕಿನ ಬಹಳ ಮುಖ್ಯ ನಿರ್ಧಾರಗಳನ್ನು ನಾವು ತೆಗೆದುಕೊಳ್ಳಲು ಸಾಧ್ಯವಾಗದ ಹಾಗೆ ಅವುಗಳನ್ನು ನಿರ್ವಹಿಸಲಾಗುತ್ತಿದೆ. ನಮ್ಮ ಸಮಾಜವನ್ನು ಈಗಂತೂ 'ಪ್ರಮಾಣ'ಗಳೇ ನಿಯಂತ್ರಿಸುತ್ತಿವೆ. ತಿನ್ನುವ ಅನ್ನ, ಕಟ್ಟುವ ಮನೆ, ಪೂಜಿಸುವ ದೇವರು, ತೊಡುವ ಬಟ್ಟೆ, ಮದುವೆಯಾಗುವ ಸಂಗಾತಿ ಎಲ್ಲವನ್ನೂ 'ಪ್ರಮಾಣ'ಗಳು ನಿರ್ಧರಿಸುತ್ತಿರುವುದನ್ನು ನಾವೀಗ ನೋಡುತ್ತಿದ್ದೇವೆ.

ಸಾಮಾನ್ಯರ ಬದುಕನ್ನು ತಮ್ಮ ಅಂಕೆಗೆ ತೆಗೆದುಕೊಳ್ಳಲು ಹೇಗೆ ಪ್ರಮಾಣಗಳನ್ನು ಬಳಸುತ್ತಾರೆಯೋ ಹಾಗೆಯೇ, ತಮ್ಮ ದೋಷಪೂರ್ಣ ಲೋಕವಿವರಣೆಯನ್ನು ಸಮರ್ಥಿಸಿಕೊಳ್ಳಲು, ತಾವು ಮುಂದಿಡುವ ತಾತ್ವಿಕತೆಯ ದೋಷಗಳನ್ನು ಮುಚ್ಚಿಹಾಕಲು ಪ್ರಮಾಣಗಳನ್ನು ಮತ್ತು ತರ್ಕವನ್ನು ಬೌದ್ಧೇತರ ದರ್ಶನಗಳು ಬಳಸುತ್ತವೆ. ಬೌದ್ಧ ಮಧ್ಯಮಮಾರ್ಗವು ಪ್ರಮಾಣಗಳನ್ನು ನಿರಾಕರಿಸುತ್ತದೆ. ಬುದ್ಧಗುರು ಪ್ರಮಾಣಗಳ ಬಗೆಗೆ ಸ್ಪಷ್ಟವಾದ ನಿಲುವನ್ನು ವ್ಯಕ್ತಪಡಿಸಿದ್ದಾನೆ. ಯಾವುದೇ ಪುಸ್ತಕ : ಅದು ಜ್ಞಾನಿ ಎನಿಸಿಕೊಂಡವನಿಂದ ರಚಿತವಾಗಿರಲಿ, ದೈವಾಂಶಸಂಭೂತನಿಂದ ರಚಿತವಾಗಿರಲಿ, ಪ್ರವಾದಿಯಿಂದ ರಚಿತವಾಗಿರಲಿ, ಅವತಾರಿಯೆನಿಸಿಕೊಂಡವನಿಂದ ರಚಿತವಾಗಿರಲಿ ಅಂತಹ ಪುಸ್ತಕ ಹೇಳುವುದೇ ಕೊನೆ ಸತ್ಯವಲ್ಲ; ಯಾವುದೇ ವಾಕ್ಯ, ಮಾತು ಅದನ್ನು ಯಾರೇ ನುಡಿದಿರಲಿ, ಗುರು, ಹಿರಿಯರು, ತಂದೆ, ತಾಯಿ, ಅವತಾರಿ, ಋಷಿ, ಮತ್ತಾರೇ ಆಗಿರಲಿ ತನ್ನನ್ನೂ ಸೇರಿದಂತೆ, ಅದೇ ಕೊನೆಯ ಸತ್ಯವಲ್ಲ, ಯಾವುದನ್ನು ವರ್ತಮಾನದ ಅಂತರಂಗದ ಬೆಳಕಿನಲ್ಲಿಟ್ಟು ಪರೀಕ್ಷಿಸಿದಾಗ ಅದು ಲೋಕದ ಬದುಕಿಗೆ ಮಂಗಲಕರವಾಗಿರುತ್ತದೋ ಅದನ್ನು ಸತ್ಯವೆಂದು ನಂಬು ಮತ್ತು ಅಂತೆಯೇ ಬಾಳು ಎಂದಿದ್ದಾನೆ. ಇದು ಸ್ಪಷ್ಟವಾಗಿ ಶಬ್ದ ಪ್ರಮಾಣದ ನಿರಾಕರಣೆಯಾಗಿದೆ.

ತರ್ಕ ಮತ್ತು ಪ್ರಮಾಣ ಇವುಗಳನ್ನು ನಿರ್ವಹಿಸಲು ಬಲ್ಲ ಸಣ್ಣ ಗುಂಪೊಂದು ಇಡೀ ಭಾರತೀಯ ಜನಸಮೂಹವನ್ನೇ ದಿಕ್ಕು ತಪ್ಪಿಸಿದೆ. ಇಂದಿಗೂ ಬಹಳ ದೊಡ್ಡ ಸಮೂಹವನ್ನು ತನ್ನ ನಿಯಂತ್ರಣದಲ್ಲಿ ಇಟ್ಟುಕೊಳ್ಳಲು ಅದಕ್ಕೆ ಸಾಧ್ಯವಾಗಿರುವುದು ಪ್ರಮಾಣ ಮತ್ತು ತರ್ಕವನ್ನು ಅದು ಯಶಸ್ವಿಯಾಗಿ ಬಳಸುತ್ತಿರುವುದರಿಂದಲೇ. ಅಕ್ಷರಹೀನ ಸಮಾಜವನ್ನು ಅಕ್ಷರದ ಮೂಲಕ ನಿಯಂತ್ರಿಸಿದ ಹಾಗೆಯೇ ಪ್ರಮಾಣಗಳನ್ನು ಸ್ವೀಕರಿಸುವ ತರ್ಕಹೀನ ಸಮಾಜವನ್ನು ಪ್ರಮಾಣ ಮತ್ತು ತರ್ಕಗಳ ಮೂಲಕ ನಿಯಂತ್ರಿಸಲು ಸಾಧ್ಯ. ಯಾವುದಾದರೂ ತರ್ಕಹೀನ ಸಂಗತಿಯೊಂದನ್ನು ಒಪ್ಪಿಸುವ ಮೊದಲು ಪ್ರಮಾಣವನ್ನು ಸೃಷ್ಟಿಸಲಾಗುತ್ತದೆ. ತರ್ಕವೂ ಕೂಡ ಸಾಕ್ಷರತೆಯಂತೆಯೇ ಒಂದು ಮಾಧ್ಯಮ, ಗಣಿತದಂತೆ. ಅದನ್ನು ನಾವು ಪಡೆದು ಕೊಂಡರೆ ಆ ದಾರಿಯಲ್ಲಿ ನಡೆವ ಸಂದರ್ಭ ಬಂದಾಗ ಅಂಜಬೇಕಿಲ್ಲ. ಅದಿಲ್ಲದೆ ಹೋದರೆ ಸುಲಭವಾಗಿ ಸೋತುಹೋಗುತ್ತೇವೆ. ಅಕ್ಷರ, ಹೋರಾಟ, ತರ್ಕ ಮತ್ತು ಸಾಂಸ್ಕೃತಿಕ ರಾಜಕಾರಣ – ಈ ನಾಲ್ಕು ಅಂಶಗಳನ್ನು ತನ್ನದಾಗಿಸಿಕೊಂಡರೆ ಮಾತ್ರ ಭಾರತೀಯ ಸಮಾಜಕ್ಕೆ ಬಿಡುಗಡೆಯೆಂದು ಅಂಬೇಡ್ಕರ್ ನಂಬಿದ್ದರು. ಇವೆಲ್ಲ ಈ ಸಮಾಜಕ್ಕೆ ದೊರಕಲಿ ಎಂದು ನಾಲ್ಕೂ ಅಂಶಗಳನ್ನು ದೊರಕಿಸಿಕೊಳ್ಳುವ ಮಾದರಿಯನ್ನು ತಮ್ಮ ಬದುಕಿನ ಮೂಲಕವೇ ತೋರಿಸಿಕೊಟ್ಟರು. ಸಾವಿರಾರು ವರ್ಷಗಳಿಂದ ಅನ್ಯಾಯಕ್ಕೆ ಒಳಗಾದ ಶೂದ್ರ, ದಲಿತ ಸಮೂಹ ಮೊದಲಿನ ಎರಡು ಅಂಶಗಳಾದ ಅಕ್ಷರ ಮತ್ತು ಹೋರಾಟವನ್ನು ದಕ್ಕಿಸಿಕೊಳ್ಳುವುದರಲ್ಲಿಯೇ ಸೋತು ಸುಣ್ಣವಾಗಿದೆ... ಆದರೆ ಅಕ್ಷರ ಮತ್ತು ಹೋರಾಟಗಳು ಕೊಟ್ಟ ಬಿಡುಗಡೆಯ ರುಚಿಯನ್ನು ಕಾಣುತ್ತಿದ್ದಾರೆ. ಅಕ್ಷರ ವಂಚನೆಯ ಮೂಲಕ ಸಮೂಹವನ್ನು ವಂಚಿಸುತ್ತ ಬಂದ ವರ್ಗವೀಗ ತರ್ಕ ಮತ್ತು ಸಾಂಸ್ಕೃತಿಕ ರಾಜಕಾರಣವನ್ನು ವಂಚನೆಗೆ ಬಳಸುತ್ತಿದೆ. ಈ ನೆಲದಲ್ಲಿ ಈಗ ಅಧಿಕಾರ ನಿರ್ವಹಿಸುತ್ತಿರುವುದು ಅಕ್ಷರವೂ ಅಲ್ಲ, ಆರ್ಥಿಕತೆಯೂ ಅಲ್ಲ, ಸಂಖ್ಯಾಬಲವೂ ಅಲ್ಲ. ಬದಲಿಗೆ ತರ್ಕವನ್ನು ಸಮೂಹದ ಹತ್ತಿರಕ್ಕೆ ಬಿಡದಂತೆ ನೋಡಿಕೊಂಡು, ಪ್ರತಿದಿನವೂ ಹೊಸ ಹೊಸ ಪ್ರಶ್ನಿಸಲಾಗದ ಪ್ರಮಾಣಗಳನ್ನು ಸೃಷ್ಟಿಸುತ್ತಾ ಸಾಂಸ್ಕೃತಿಕ ರಾಜಕಾರಣವನ್ನು ನಿರ್ವಹಿಸುತ್ತಿರುವ ಸಣ್ಣ ಗುಂಪೊಂದು ಅಧಿಕಾರ ಕೇಂದ್ರಗಳನ್ನು ನಿಯಂತ್ರಿಸುತ್ತಿದೆ... ಇನ್ನು ಪ್ರಮಾಣಗಳನ್ನು ಕೇವಲ ಅಧಿಕಾರ ಕೇಂದ್ರಗಳನ್ನು ನಿಯಂತ್ರಿಸಲಷ್ಟೇ ಬಳಸುವುದಿಲ್ಲ. ಸಾಮಾನ್ಯರ ಬದುಕಿನ ನಿತ್ಯ ಸಂಗತಿಗಳನ್ನು ಪ್ರಮಾಣಗಳ ಮೂಲಕ ನಿಯಂತ್ರಿಸಲಾಗುತ್ತಿದೆ. ತರ್ಕಹೀನತೆ ಅಕ್ಷರಹೀನತೆಗಿಂತ ಕೇಡೆನ್ನುವುದರಲ್ಲಿ ಸಂಶಯವಿಲ್ಲ. ತಿಳುವಳಿಕೆಯನ್ನು ಪಡೆಯಲು ಅಕ್ಷರ ಹೇಗೆ ಮಾಧ್ಯಮವೋ ತರ್ಕವೂ ಹಾಗೆಯೇ ಒಂದು ಮಾಧ್ಯಮ. ತರ್ಕ ಮತ್ತು ಪ್ರಮಾಣಗಳು ಪ್ರತಿಷೇಧ ಅಸ್ತಿತ್ವವುಳ್ಳವು. ಅಂದರೆ ಒಂದು ಇದ್ದರೆ ಇನ್ನೊಂದು ಇರಲು ಸಾಧ್ಯವಿಲ್ಲ. ಪ್ರಾಚೀನ ಕಾಲದಿಂದಲೂ ನಡೆದು ಬಂದಿರುವ ತಾತ್ವಿಕ ಸಂಘರ್ಷವು ತರ್ಕಮಾಧ್ಯಮವನ್ನು ಬಳಸುತ್ತಲೇ ಬಂದಿದೆ. ಹಾಗಾಗಿ ತಾತ್ವಿಕ ಸಂಘರ್ಷದ ಸ್ವರೂಪ ಅರ್ಥವಾಗಬೇಕಾದರೆ ತರ್ಕವನ್ನು ಅವಲಂಬಿಸಲೇಬೇಕು. ಅನಕ್ಷರಸ್ಥ ಸಮೂಹ ಅಕ್ಷರವನ್ನು ದಕ್ಕಿಸಿಕೊಳ್ಳಲು ಪಟ್ಟ ಪಾಡನ್ನು ಈಗ ತರ್ಕವನ್ನು ದಕ್ಕಿಸಿಕೊಳ್ಳಲು ಪಡಬೇಕಾಗಿದೆ. ಈ ಕಠಿಣ ತರ್ಕದ ಸಹವಾಸ ಬೇಡ ಎಂದು ನಾವು ತಟಸ್ಥವಾಗಿರಲಾಗದು. ನಮಗೆ ನಿಸರ್ಗದತ್ತವಾಗಿ ದೊರಕಿರುವ ವಿವೇಕವನ್ನು ಕಾಪಾಡಿಕೊಳ್ಳಬೇಕಾಗಿದೆ. ಹಾಗಾಗಿ ತರ್ಕದ ಕೌಶಲವನ್ನು ನಾವು ದಕ್ಕಿಸಿಕೊಳ್ಳಬೇಕಾಗಿದೆ. ಅಂಬೇಡ್ಕರರ ರಾಜಕೀಯ ಸಂವಿಧಾನ ಮತ್ತು ಸಾಂಸ್ಕೃತಿಕ ಸಂವಿಧಾನ – ಎರಡೂ ಈ ತರ್ಕದ (ವಿಜ್ಞಾನದ) ತಳಹದಿಯ ಮೇಲೆ ನಿಂತಿವೆ. ನಾವು ನಮ್ಮನ್ನು ಸರಿಯಾಗಿ ನಿರ್ವಹಿಸಲು ಈ ಎರಡೂ ಸಂವಿಧಾನಗಳನ್ನು ಅಳವಡಿಸಿಕೊಳ್ಳಬೇಕಾಗಿದೆ. ನಾವೀಗ ಹೊಸದಾಗಿ ಕಲಿಯಬೇಕಾಗಿರುವುದು ಏನೂ ಇಲ್ಲ. ನಮ್ಮ ವಿವೇಕವನ್ನು ಕಳೆದುಕೊಳ್ಳದ ಹಾಗೆ ನೋಡಿಕೊಳ್ಳಬೇಕಾಗಿದೆ. ಆದರೆ ಸಮಸ್ಯೆ ಅಷ್ಟು ಸರಳವಿಲ್ಲ. ಏಕೆಂದರೆ ಭಾರತದಲ್ಲಿ ಹುಟ್ಟುವ ಪ್ರತಿ ಮಗುವೂ ಮಾತು ಕಲಿಯುವ ಮುನ್ನ, ಅಕ್ಷರ ಕಲಿಯುವ ಮುನ್ನ, ದೈವವಾದ, ಬ್ರಹ್ಮವಾದ, ಆತ್ಮವಾದ, ಜಾತಿವಾದ, ದ್ವೈತಾದ್ವೈತವಾದಗಳ ಮತ್ತು ಪ್ರಮಾಣವಾದಗಳನ್ನಾಧರಿಸಿದ ಸಾಂಸ್ಕೃತಿಕ ಸಂವಿಧಾನದ ಜೀತದಾಳಾಗುತ್ತದೆ. ಈ ಜೀತಸ್ಥಿತಿಯಿಂದ ಬಿಡುಗಡೆ ಪಡೆಯಲು ಇಡೀ ಜೀವನಪೂರ್ತಿ ಹೋರಾಡಬೇಕಾಗುತ್ತದೆ. ಅಷ್ಟುಹೊತ್ತಿಗೆ ಜೀವನದ ಪ್ರಮುಖ ಭಾಗ ಮುಗಿದುಹೋಗಿರುತ್ತದೆ. ಅಂಬೇಡ್ಕರ್ ಅವರ ಎದುರಿಗೆ ಇದ್ದ ದೊಡ್ಡ ಸವಾಲು ಇದೇ ಆಗಿತ್ತು. ಇದು ಕೇವಲ ದಲಿತರ ಸಮಸ್ಯೆ ಅಲ್ಲ. ಭಾರತದಲ್ಲಿ ಹುಟ್ಟುವ ಪ್ರತಿ ಮನುಷ್ಯ ಜೀವಿಯ ಸಮಸ್ಯೆ.

ಪಕ್ಕದ ತಮಿಳುನಾಡಿನ ರಾಜಕಾರಣವನ್ನು ಗಂಭೀರವಾಗಿ ಗಮನಿಸಿದರೆ ಸಾಂಸ್ಕೃತಿಕ ಸಂವಿಧಾನದ ಶಕ್ತಿಯ ಒಂದು ಮಾದರಿ ಸಿಗುತ್ತದೆ!



ಡಾ|| ಎಸ್. ನಟರಾಜ ಬೂದಾಳು
'ಗೌರಿ', ಸಪ್ತಗಿರಿ ಬಡಾವಣೆ, ನಲಂದ ಶಾಲೆ ಹಿಂಭಾಗ, ತುಮಕೂರು - ೫೭೨ ೧೦೨

# ಕರ್ನಾಟಕದ ನಂ.1 ಪ್ರಕಾಶಕರು

www.mastermindbooks.com



176 ಪುಟಗಳು ರೂ.95/–



184 ಪುಟಗಳು ರೂ.125/–



132 ಪುಟಗಳು ರೂ.85/–



170 ಪುಟಗಳು ರೂ.125/–



760 ಪುಟಗಳು ರೂ.145/–



224 ಪುಟಗಳು ರೂ.125/–



164 ಪುಟಗಳು ರೂ.85/–



488 ಪುಟಗಳು ರೂ.165/–



pp 192 Rs. 95/-



pp 200 Rs. 75/-



pp 200 Rs. 95/-



pp 92 Rs. 50/-



114 ಪುಟಗಳು ರೂ.150/–



164 ಪುಟಗಳು ರೂ.150/–



800 ಪುಟಗಳು ರೂ.275/–



pp 356 Rs. 225/-

ಲೇಖಕರು, ಪ್ರಕಾಶಕರು ಸಂಪರ್ಕಿಸಿ: 080–26705107/97402 94636

## ವಾಸನ್ ಪಬ್ಲಿಕೇಷನ್ಸ್

25, ವಾಸನ್ ಟವರ್ಸ್, ಗೂಡ್ಸ್‌ಶೆಡ್ ರಸ್ತೆ (ಮೆಜೆಸ್ಟಿಕ್ ಬಸ್‌ಸ್ಟ್ಯಾಂಡ್ ಮತ್ತು ಸಿಟಿ ರೈಲ್ವೇ ಸ್ಟೇಷನ್ ಸಮೀಪ) ಬೆಂಗಳೂರು–560 053




# ವೈದ್ಯಕೀಯವೆಂಬ ಉದ್ಯಮ

ವೈದ್ಯರ ಮೇಲಂತೂ ಈ ಕಂಪೆನಿಗಳು ಬೀರಿರುವ ಪ್ರಭಾವವನ್ನು ಹೇಳತೀರದು. ವೈದ್ಯರನ್ನು ಮೆಚ್ಚಿಸುವುದಕ್ಕಾಗಿ ಅಮೆರಿಕವೊಂದರಲ್ಲೇ ಈ ದೈತ್ಯ ಕಂಪೆನಿಗಳು ವರ್ಷಕ್ಕೆ ೨೦೦೦ ಕೋಟಿ ಡಾಲರುಗಳನ್ನು ವ್ಯಯಿಸುತ್ತವೆ. ಅಮೆರಿಕಾದಲ್ಲಿ ಪ್ರತೀ ವರ್ಷ ಔಷಧಗಳು ಮತ್ತು ಉಪಕರಣಗಳ ಬಗ್ಗೆ ೩೦೦೦೦೦ಕ್ಕೂ ಹೆಚ್ಚು ಸಮ್ಮೇಳನಗಳನ್ನೂ, ವಿಚಾರಗೋಷ್ಠಿಗಳನ್ನೂ, ತರಬೇತಿ ಕಾರ್ಯಕ್ರಮಗಳನ್ನೂ ಸ್ವರ್ಗಸದೃಶ ಪ್ರವಾಸಿ ತಾಣಗಳಲ್ಲಿಯೂ, ಐಷಾರಾಮಿ ಹೋಟೇಲುಗಳಲ್ಲಿಯೂ ನಡೆಸುವುದಕ್ಕೆ ಕನಿಷ್ಠ ೨೦೦ ಕೋಟಿ ಡಾಲರುಗಳಷ್ಟನ್ನು ವ್ಯಯಿಸಲಾಗುತ್ತದೆ. ಒಂದು ಅಂದಾಜಿನಂತೆ ೨೦೦೪ರಲ್ಲಿ ದೈತ್ಯ ಕಂಪೆನಿಗಳು ಔಷಧಗಳ ಸಂಶೋಧನೆಗೆ ಸುಮಾರು ೩೦೦೦ ಕೋಟಿ ಡಾಲರುಗಳನ್ನು ವ್ಯಯಿಸಿದ್ದರೆ, ಅವುಗಳ ಪ್ರಚಾರ ಮತ್ತು ಜಾಹೀರಾತುಗಳಿಗಾಗಿ ೫೮೦೦ ಡಾಲರುಗಳನ್ನು, ಅಂದರೆ, ಪ್ರತೀ ವೈದ್ಯನಿಗೆ ವರ್ಷವೊಂದಕ್ಕೆ ೬೧೦೦೦ ಡಾಲರು (೩೩ ಲಕ್ಷ ರೂ.)ಗಳನ್ನು ವ್ಯಯಿಸಿದವು !

---

**ಡಾ|| ಬಿ. ಶ್ರೀನಿವಾಸ ಕಕ್ಕಿಲ್ಲಾಯ**

ಅತಿ ಚತುರ ವ್ಯವಹಾರ ತಜ್ಞರಲ್ಲೊಬ್ಬನೆನಿಸಿಕೊಂಡ ಗೇಟ್ಸ್ ಮಹಾಶಯ ತಾನೇ ಬೆಳೆಸಿದ ಕಂಪ್ಯೂಟರ್ ಕಿಂಡಿಯಿಂದ ಹೊರ ಜಿಗಿದು ಅದನ್ನು ಬಿಟ್ಟು ಆರೋಗ್ಯ ಕ್ಷೇತ್ರದಲ್ಲಿ ಹೂಡಿಕೆ ಮಾಡುತ್ತಿದ್ದಾನೆಂದರೆ ಆರೋಗ್ಯವೂ ಎಷ್ಟು ದೊಡ್ಡ ವ್ಯಾಪಾರವಾಗಿದೆ ಎನ್ನುವುದಕ್ಕೆ ಬೇರೆ ಪುರಾವೆಯೇನೂ ಬೇಕಾಗುವುದಿಲ್ಲ. ತಿನ್ನುವುದು, ಮಲಗುವುದು, ಮಾತಾಡುವುದು, ಅತ್ತಿತ್ತ ಸಂಚರಿಸುವುದು ಎಲ್ಲವೂ ವ್ಯಾಪಾರದ ಸರಕುಗಳೇ ಆಗಿರುವಾಗ ಮನುಷ್ಯನನ್ನು ಕಾಡುವ ಅನಾರೋಗ್ಯಗಳಂಥ ಕಷ್ಟಗಳೂ ವ್ಯಾಪಾರಕ್ಕೆ ಬಳಕೆಯಾಗಬೇಡವೇ ? ರೋಗಗಳನ್ನು ಹುಡುಕುವುದಕ್ಕೆ ಅತ್ಯುನ್ನತ ಪರೀಕ್ಷೆಗಳು, ಚಿಕಿತ್ಸೆ ನೀಡುವುದಕ್ಕಾಗಿ ಔಷಧಗಳು, ಒಳರೋಗಿಗಳಿಗಾಗಿ ಆಸ್ಪತ್ರೆಗಳು – ಹೀಗೆ ಎಲ್ಲವೂ ವ್ಯಾಪಾರವೇ. ಇವೆಲ್ಲಕ್ಕೂ ಮೂಲವಾಗಿರುವ ವೈದ್ಯಕೀಯ ಶಿಕ್ಷಣವೇ ಈಗ ಬಲು ದೊಡ್ಡ ವ್ಯಾಪಾರ, ಇನ್ನುಳಿದದ್ದು ಯಾವ ಲೆಕ್ಕ ?

ಆರೋಗ್ಯ ಕ್ಷೇತ್ರವು ಜಗತ್ತಿನ ಅತಿ ದೊಡ್ಡ ಉದ್ದಿಮೆಗಳಲ್ಲೊಂದಾಗಿದ್ದು, ಅದರ ವಾರ್ಷಿಕ ವ್ಯವಹಾರವು ಸುಮಾರು ಮೂರು ಲಕ್ಷ ಕೋಟಿ ಡಾಲರುಗಳಷ್ಟಿದೆ. ಭಾರತದಲ್ಲೀಗ ಅದು ಸುಮಾರು ೩೦೦೦ ಕೋಟಿ ಡಾಲರುಗಳಷ್ಟು, ಅಂದರೆ ಒಟ್ಟು ರಾಷ್ಟ್ರೀಯ ಉತ್ಪನ್ನದ ಶೇ. ೫ರಷ್ಟಿದ್ದು, ಮುಂಬರುವ ವರ್ಷಗಳಲ್ಲಿ ತೀವ್ರಗತಿಯಲ್ಲಿ ವೃದ್ಧಿಗೊಂಡು ೨೦೨೫ರ ವೇಳೆಗೆ ೧೦೦೦೦ ಕೋಟಿ ಡಾಲರುಗಳಷ್ಟು, ರಾಷ್ಟ್ರೀಯ ಉತ್ಪನ್ನದ ಶೇ. ೮-೧೦ರಷ್ಟಾಗುತ್ತದೆಂದು ಅಂದಾಜಿಸಲಾಗಿದೆ. ಆ ವೇಳೆಗೆ ಹತ್ತು ದೊಡ್ಡ ಖಾಸಗಿ ಜಾಲಗಳು ಆರೋಗ್ಯಕ್ಷೇತ್ರದ ಶೇ. ೩೦ರಷ್ಟು ಸೌಲಭ್ಯಗಳ ಒಡೆತನವನ್ನು ಹೊಂದಿರುತ್ತವೆ ಎನ್ನಲಾಗಿದೆ. ವಿದೇಶಿ ರೋಗಿಗಳಿಗೆ ತಕ್ಷಣದಲ್ಲಿ ಚಿಕಿತ್ಸೆ ನೀಡುವ ಉನ್ನತ ಸೌಲಭ್ಯಗಳು, ದೇಶೀಯ ಮತ್ತು ವಿದೇಶೀಯ ರೋಗಿಗಳಿಗೆ ವಿವಿಧ ಉನ್ನತ ಪರೀಕ್ಷಾ ಸೌಲಭ್ಯಗಳನ್ನು ಒದಗಿಸುವ ಪ್ರಯೋಗಾಲಯಗಳು, ನಮ್ಮ ಅಮಾಯಕ ಪ್ರಜೆಗಳನ್ನು ಹೊಸ ಔಷಧಗಳ ಪರೀಕ್ಷೆಗಳಿಗೆ ಪ್ರಯೋಗಪಶುಗಳಾಗಿ ಬಳಸಿಕೊಳ್ಳುವುದು, ಆರೋಗ್ಯ ವಿಮೆ, ಹೊಸ ಆಸ್ಪತ್ರೆಗಳು, ದೂರ ಚಿಕಿತ್ಸೆ ಇವೇ ಮುಂತಾದ ಕ್ಷೇತ್ರಗಳತ್ತ ನಮ್ಮ ಖಾಸಗಿ ಹೂಡಿಕೆದಾರರು ಆಸೆಗಣ್ಣುಗಳಿಂದ ನೋಡುತ್ತಿದ್ದಾರೆ.

ಬೆರಳೆಣಿಕೆಯ ದೇಶಗಳಲ್ಲಷ್ಟೇ ಪ್ರಜೆಗಳ ಆರೋಗ್ಯಕ್ಕೆ ಅತ್ಯುನ್ನತ ಪ್ರಾಶಸ್ತ್ಯವನ್ನು ನೀಡಲಾಗಿದೆ. ಕ್ಯೂಬಾ, ಫಿನ್ಲೆಂಡ್, ಇಸ್ರೇಲ್ ಹಾಗೂ ಸ್ಪೇನ್‌ಗಳಲ್ಲಿ ಅತ್ಯುನ್ನತ ಆರೋಗ್ಯ ಸೇವೆಗಳೆಲ್ಲವನ್ನು ಸರಕಾರಗಳೇ ಉಚಿತವಾಗಿ ಒದಗಿಸಿದರೆ, ಇಂಗ್ಲೆಂಡಿನಲ್ಲೂ ಹೆಚ್ಚಿನ ಆರೋಗ್ಯ ಸೇವೆಗಳು ಹೀಗೇ ಲಭ್ಯವಿವೆ. ಕೆನಡಾದಲ್ಲಿ ಖಾಸಗಿ ವ್ಯವಸ್ಥೆಯು ಆರೋಗ್ಯ ಸೇವೆಯನ್ನೊದಗಿಸಿದರೂ ಅದರೆಲ್ಲಾ ವೆಚ್ಚವನ್ನೂ ಸರಕಾರವೇ ಭರಿಸುವ ವ್ಯವಸ್ಥೆಯಿದೆ. ಇನ್ನುಳಿದ ದೇಶಗಳಲ್ಲಿ ಸರಕಾರವು ಭಾಗಶಃ ಆರೋಗ್ಯ ಸೇವೆಯನ್ನೊದಗಿಸಿ, ಹೆಚ್ಚಿನದೆಲ್ಲವೂ ಖಾಸಗಿ ವಲಯದಲ್ಲೇ ಲಭ್ಯವಾಗುತ್ತದೆ. ಅಮೆರಿಕಾದಂತಹ ದೇಶಗಳಲ್ಲಿ ಆರೋಗ್ಯ ವಿಮೆಯು ಖಾಸಗಿ ಚಿಕಿತ್ಸೆಯ ವೆಚ್ಚವನ್ನು ಭರಿಸುವಲ್ಲಿ ನೆರವಾಗುವುದಿದ್ದರೂ, ವಿಮೆಯ ಮೌಲ್ಯವೂ ದುಬಾರಿಯಾಗಿರುವುದರಿಂದ ಸಾಕಷ್ಟು ಜನರಿಗೆ ಅದನ್ನೂ ಪಾವತಿಸಲು ಅಸಾಧ್ಯವಾಗುವಂತಹ ಸನ್ನಿವೇಶವಿದೆ. ಈ ದೇಶಗಳಲ್ಲಿ ಕೆಲಸ, ಸಂಬಳ ಹಾಗೂ ಸಾಕಷ್ಟು ಸಂಪತ್ತುಳ್ಳವರಿಗೆ ಆರೋಗ್ಯ ರಕ್ಷಣೆಯು ಸಾಧ್ಯವಿದ್ದು, ಇನ್ನುಳಿದವರು ಏನೂ ಮಾಡಲಾಗದೆ ನರಳುತ್ತಾರೆ, ಅನಾರೋಗ್ಯಗಳಿಂದ ದುಡಿಯಲಾಗದೆ ಅವರ ಬಡತನ ಇನ್ನಷ್ಟು ಹೆಚ್ಚಿ, ಅದೇ ವಿಷವರ್ತುಲದಲ್ಲಿ ತೊಳಲಾಡುತ್ತಿರುತ್ತಾರೆ.

ನಮ್ಮ ದೇಶದಲ್ಲಿ ಆರೋಗ್ಯ ಸೇವೆಗಳಿಗಾಗಿ ಮಾಡುತ್ತಿರುವ ಒಟ್ಟು ಖರ್ಚಿನಲ್ಲಿ ಶೇ. ೭೫ರಷ್ಟನ್ನು ಜನರು ತಮ್ಮ ಕಿಸೆಯಿಂದಲೇ ಭರಿಸಿದರೆ, ಸರಕಾರದ ಪಾಲು ಶೇ. ೨೫ ಮಾತ್ರ – ಅಂದರೆ ಆರೋಗ್ಯಕ್ಕಾಗಿ ನಮ್ಮ ಒಟ್ಟು ರಾಷ್ಟ್ರೀಯ



ಉತ್ಪನ್ನದಲ್ಲಿ ನಾವು ವ್ಯಯಿಸುವ ಶೇ. ೪.೨ರಲ್ಲಿ ಸರಕಾರದ ಪಾಲು ಶೇ. ೧ರಷ್ಟು ಮಾತ್ರ. ಸಾಮಾಜಿಕ ಆರೋಗ್ಯಕ್ಕಾಗಿ ಸರಕಾರಿ ವೆಚ್ಚದ ವಿಚಾರದಲ್ಲಿ ನಾವು ಜಗತ್ತಿನ ೧೭೫ ರಾಷ್ಟ್ರಗಳ ಪಟ್ಟಿಯಲ್ಲಿ ೧೭೧ನೇ ಸ್ಥಾನದಲ್ಲಿದ್ದೇವೆ, ಬ್ರೆಜಿಲ್, ಭಾರತ, ರಷ್ಯಾ, ಚೀನಾ, ದಕ್ಷಿಣ ಆಫ್ರಿಕಾಗಳ ಬ್ರಿಕ್ಸ್ ಸಮೂಹದಲ್ಲೂ ನಾವು ಕೊನೆಯ ಸ್ಥಾನದಲ್ಲಿದ್ದೇವೆ. ನಮ್ಮಲ್ಲಿ ಶೇ. ೭೦ರಷ್ಟು ಜನರ ಉಳಿತಾಯವೆಲ್ಲವೂ ಆರೋಗ್ಯ ಸೇವೆಗಳಿಗೂ, ಔಷಧಗಳಿಗೂ ವ್ಯಯವಾಗುತ್ತಿದ್ದರೆ, ಗ್ರಾಮೀಣ ಪ್ರದೇಶಗಳಲ್ಲಿ ಶೇ. ೩೦ರಷ್ಟು ಹಾಗೂ ನಗರಗಳಲ್ಲಿ ಶೇ. ೨೦ರಷ್ಟು ಜನರು ಆರ್ಥಿಕ ಅಡಚಣೆಗಳಿಂದಾಗಿ ಯಾವುದೇ ಚಿಕಿತ್ಸೆಯಿಂದ ವಂಚಿತರಾಗುತ್ತಿದ್ದಾರೆ. ಒಳರೋಗಿಗಳಲ್ಲಿ ಹಳ್ಳಿಗಳ ಶೇ. ೪೭ರಷ್ಟು ಹಾಗೂ ನಗರಗಳ ಶೇ. ೩೧ರಷ್ಟು ಮಂದಿ ಸಾಲದಿಂದ ಯಾ ಆಸ್ತಿಯನ್ನು ಮಾರುವ ಮೂಲಕ ಚಿಕಿತ್ಸೆಯನ್ನು ಪಡೆಯುತ್ತಾರೆ. ಹೀಗೆ, ಪ್ರತೀ ವರ್ಷ ನಾಲ್ಕು ಕೋಟಿ ಭಾರತೀಯರು ಅನಾರೋಗ್ಯದ ಕಾರಣದಿಂದಾಗಿ ಬಡತನಕ್ಕೆ ತಳ್ಳಲ್ಪಡುತ್ತಿದ್ದಾರೆ, ತಮಗಿನ್ನೇನು ಗತಿಯೆಂಬ ನಿರಾಶೆಯಿಂದ ದಿಟ್ಟಿಸುತ್ತಿದ್ದಾರೆ.

ಆರ್ಥಿಕ ಉದಾರೀಕರಣದ ಹುಚ್ಚಿಗೆ ಬಲಿಯಾಗಿರುವ ನಮ್ಮ ಸರಕಾರಗಳು ಸಾರ್ವತ್ರಿಕ ಆರೋಗ್ಯ ರಕ್ಷಣೆಯ ಜವಾಬ್ದಾರಿಗಳನ್ನು ಒಂದೊಂದಾಗಿ ಖಾಸಗೀಕರಣಗೊಳಿಸಿ, ಅಲ್ಲೂ ವ್ಯಾಪಾರವನ್ನು ತುರುಕಿಸಿ, ಉನ್ನತ ಆರೋಗ್ಯ ಸೇವೆಗಳಿಂದ ವಂಚಿತರಾಗಿರುವ ಜನಕೋಟಿಗೆ ಮೂಲಭೂತ ಸೌಕರ್ಯಗಳೂ ಕಗ್ಗಂಟಾಗುವಂತೆ ಮಾಡುತ್ತಿವೆ. ಮಹಿಳೆಯರು ಮತ್ತು ಮಕ್ಕಳ ಆರೋಗ್ಯ, ಸಾರ್ವತ್ರಿಕ ಲಸಿಕಾ ಕಾರ್ಯಕ್ರಮ, ಕಾರ್ಮಿಕರ ಕ್ಷೇಮನಿಧಿಯಂತಹ ದುಡಿಯುವ ಜನರ ಆರೋಗ್ಯಪಾಲನಾ ಯೋಜನೆಗಳು, ಕೊಳೆಗೇರಿಗಳಲ್ಲಿ, ಗ್ರಾಮೀಣ ಮತ್ತು ದುರ್ಗಮ ಪ್ರದೇಶಗಳಲ್ಲಿರುವ ಆರೋಗ್ಯ ಕೇಂದ್ರಗಳು ಇವೇ ಮುಂತಾದ ಮೂಲಭೂತ ಕಾರ್ಯಕ್ರಮಗಳೆಲ್ಲವನ್ನೂ ಖಾಸಗಿ ವ್ಯಾಪಾರಿಗಳಿಗೆ ವಹಿಸಿಕೊಡಲಾಗಿದೆ ಅಥವಾ ಕೊಡಲಾಗುತ್ತಿದೆ. ಸಮುದಾಯ ಆರೋಗ್ಯ ಕೇಂದ್ರಗಳಲ್ಲೂ, ಜಿಲ್ಲಾ ಆಸ್ಪತ್ರೆಗಳು ಹಾಗೂ ಇನ್ನಿತರ ಉನ್ನತ ಆಸ್ಪತ್ರೆಗಳಲ್ಲೂ ಹೊರಗುತ್ತಿಗೆಯೂ, ಖಾಸಗಿ ಪಾಲುದಾರಿಕೆಯೂ ನಿಧಾನವಾಗಿ ಹೆಚ್ಚುತ್ತಿವೆ.

ವೈದ್ಯಕೀಯ ಕ್ಷೇತ್ರದಲ್ಲಿ ಈ ವಿಧವಾಗಿ ಖಾಸಗೀಕರಣದ ಪ್ರವೃತ್ತಿ ಹೆಚ್ಚುತ್ತಿರುವುದರಿಂದ ವೈದ್ಯಕೀಯ ಶಿಕ್ಷಣದಿಂದ ಹಿಡಿದು ಚಿಕಿತ್ಸೆಯವರೆಗೆ ಎಲ್ಲವೂ ಲಾಭಕೋರತನದ ಪಿಡುಗಿಗೆ ಬಲಿಯಾಗುತ್ತಿವೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ನಾಯಿಕೊಡೆಗಳಂತೆ ಹುಟ್ಟಿಕೊಳ್ಳುತ್ತಿರುವ ಖಾಸಗಿ ವೈದ್ಯಕೀಯ ಕಾಲೇಜುಗಳು ವೈದ್ಯಕೀಯ ಶಿಕ್ಷಣದ ಧ್ಯೇಯೋದ್ದೇಶಗಳನ್ನೇ ಬುಡಮೇಲು ಮಾಡಿವೆ. ಅರವತ್ತರ ಮಧ್ಯಭಾಗದಲ್ಲಿ ನಮ್ಮಲ್ಲಿ ವೈದ್ಯಕೀಯ ಕಾಲೇಜುಗಳ ಸಂಖ್ಯೆಯು ೮೬ರಷ್ಟಿದ್ದರೆ, ೧೯೮೦ರ ವೇಳೆಗೆ ೧೧೨ ಆಗಿ, ೧೯೯೦ರ ವೇಳೆಗೆ ೧೪೩ಕ್ಕೆ ಏರಿ, ಈಗ ೩೪೮ಕ್ಕೆ ತಲುಪಿದೆ; ಈ ಪೈಕಿ ಸುಮಾರು ೯೦ರಷ್ಟು ಹೊಸ ಕಾಲೇಜುಗಳು ಕಳೆದ ಆರು ವರ್ಷಗಳಲ್ಲೇ ಕಾರ್ಯಾರಂಭ ಮಾಡಿವೆ. ಇವುಗಳಲ್ಲಿ ಖಾಸಗಿ ಒಡೆತನದಲ್ಲಿರುವ ೧೮೮ ಕಾಲೇಜುಗಳಲ್ಲಿ ೧೦೨ ಕಾಲೇಜುಗಳು ದಕ್ಷಿಣ ಭಾರತದಲ್ಲೇ ಇವೆ !

ಖಾಸಗಿ ವೈದ್ಯಕೀಯ ಕಾಲೇಜುಗಳು ವಿದ್ಯಾರ್ಥಿಗಳ ಪ್ರವೇಶಾತಿಯಿಂದ ಹಿಡಿದು ಪರೀಕ್ಷೆಗಳನ್ನು ನಡೆಸುವಲ್ಲಿಯವರೆಗೆ ವೈದ್ಯಕೀಯ ಶಿಕ್ಷಣದ ಎಲ್ಲ ಪ್ರಕ್ರಿಯೆಗಳ ಮೇಲೂ ತಮ್ಮ ಸಂಪೂರ್ಣ ನಿಯಂತ್ರಣವನ್ನು ಹೊಂದಿರುತ್ತವೆ. ಯಾವುದೇ ಸರಕಾರ, ಯಾವುದೇ ಕಾನೂನು, ಯಾವುದೇ ನ್ಯಾಯಾಲಯದ ತೀರ್ಪು ಏನೇ ಬಂದರೂ ಅವೆಲ್ಲವನ್ನೂ ತಮಗೆ ಬೇಕಾದಂತೆ ಬಳಸಿಕೊಳ್ಳುವಲ್ಲಿ ಇವು ಸಶಕ್ತವಾಗಿವೆ. ವೈದ್ಯಕೀಯ ಶಿಕ್ಷಣವನ್ನು ನಿಯಂತ್ರಿಸುವ ಭಾರತೀಯ ವೈದ್ಯಕೀಯ ಪರಿಷತ್ತಿನಲ್ಲಿ ಯಾರೇ ಪದಾಧಿಕಾರಿಗಳು ಬಂದರೂ ಖಾಸಗಿ ಕಾಲೇಜುಗಳ ಮೇಲೆ ಕಡಿವಾಣ ಹಾಕುವಲ್ಲಿ ವಿಫಲರಾಗುತ್ತಾರೆ. ಇವೇ ಕಾರಣಗಳಿಂದಾಗಿ ಖಾಸಗಿ ಕಾಲೇಜುಗಳು ಯಾವುದೇ ಸ್ವತಂತ್ರ ಪ್ರವೇಶ ಪರೀಕ್ಷೆಗಳಿಗೆ ಕಿಂಚಿತ್ತೂ ಬೆಲೆ ಕೊಡದೆ ತಮ್ಮದೇ ಆದ ಪ್ರವೇಶ ಪರೀಕ್ಷೆಗಳನ್ನು ನಡೆಸಿ ತಮ್ಮದೇ ಆಯ್ಕೆಯ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುತ್ತಿವೆ. ವೈದ್ಯಶಿಕ್ಷಣದ ಎಲ್ಲ ಹಂತಗಳ ಪರೀಕ್ಷೆಗಳೂ ಈ ಕಾಲೇಜುಗಳ ಮರ್ಜಿಯನುಸಾರವೇ ನಡೆಯುವುದರಿಂದಾಗಿ ಪ್ರವೇಶ ಗಿಟ್ಟಿಸಿದ ಹೆಚ್ಚಿನ ವಿದ್ಯಾರ್ಥಿಗಳು ತೇರ್ಗಡೆಯಾಗುವುದು ಮೊದಲೇ ಸುನಿಶ್ಚಿತವಾಗಿರುತ್ತದೆ. ಇಂತಹ ವ್ಯವಸ್ಥೆಯಲ್ಲಿ ವೈದ್ಯ ವಿಜ್ಞಾನದ ಮೂಲಭೂತ ವಿಚಾರಗಳನ್ನೂ ಕಲಿಯದಿರುವ ವಿದ್ಯಾರ್ಥಿಗಳು ವೈದ್ಯರಾಗಿ ಹೊರಬರುವಂತಹ ದುಸ್ಥಿತಿ ನಿರ್ಮಾಣವಾಗಿದೆ.

ಇಂದು ಖಾಸಗಿ ನಿಯಂತ್ರಣದಲ್ಲೇ ಇರುವ ಹೆಚ್ಚಿನ ಆಸ್ಪತ್ರೆಗಳು, ಔಷಧ ಕಂಪೆನಿಗಳು, ವೈದ್ಯಕೀಯ ಉಪಕರಣಗಳ ಕಂಪೆನಿಗಳಿಗೆ ಇಂತಹ ಅರೆಬೆಂದ ವೈದ್ಯರನ್ನು ದುಡಿಸಿಕೊಳ್ಳುವುದು ಸುಲಭವಾಗುತ್ತದೆ. ಹೊಸ ಔಷಧಗಳನ್ನೂ, ಹೊಸ ಪರೀಕ್ಷಾ

ತಂತ್ರಜ್ಞಾನಗಳನ್ನೂ ಅನ್ವೇಷಿಸಿ ಮಾರುವ ಖಾಸಗಿ ದೈತ್ಯ ಕಂಪೆನಿಗಳಿಗೆ ಆದಷ್ಟು ಬೇಗನೆ ಆದಷ್ಟು ಹೆಚ್ಚಿನ ಲಾಭ ಮಾಡಿಕೊಳ್ಳುವುದಕ್ಕೆ ಎಲ್ಲ ವಿಧಗಳಲ್ಲೂ ನೆರವಾಗುವ ವ್ಯವಸ್ಥೆಯಲ್ಲಿ ಈ ವೈದ್ಯರು ಸರಿಯಾಗಿ ಬೆರೆಯುತ್ತಾರೆ. ನಮ್ಮ ಆರೋಗ್ಯವನ್ನು ಉತ್ತಮಪಡಿಸುವುದಕ್ಕೆ ಹೊಸ ಆವಿಷ್ಕಾರಗಳೆಲ್ಲವೂ ಅತ್ಯಗತ್ಯವೆನ್ನುವುದು ನಿಸ್ಸಂದೇಹವಾದರೂ, ಖಾಸಗಿ ವ್ಯವಸ್ಥೆಯಲ್ಲಿ ಅವು ವ್ಯಾಪಾರದ ಸರಕುಗಳಾಗಿ, ಜನಸಾಮಾನ್ಯರ ಒಳಿತಿಗಿಂತಲೂ ಕಂಪೆನಿಗಳ ಲಾಭಕ್ಕೇ ಪೂರಕವಾಗಿ ಬಳಸಲ್ಪಡುತ್ತವೆ. ವಿಶ್ವ ಆರೋಗ್ಯ ಸಂಸ್ಥೆಯಿಂದ ಹಿಡಿದು ಹೆಚ್ಚಿನ ಎಲ್ಲ ದೇಶಗಳ ಆಡಳಿತಗಳೂ, ನಿಯಂತ್ರಣ ಸಂಸ್ಥೆಗಳೂ ಈ ದೈತ್ಯ ಕಂಪೆನಿಗಳ ಕೃಪೆಯಲ್ಲಿರುವುದರಿಂದ ಈ ಕಂಪೆನಿಗಳಿಗೆ ಅನುಕೂಲವಾಗುವ ನೀತಿಗಳೇ ರೂಪುಗೊಳ್ಳುವಂತಾಗುತ್ತದೆ. ಅಮೆರಿಕಾದ ಇಪ್ಪತ್ತು ದೊಡ್ಡ ಕಂಪೆನಿಗಳು ೧೯೯೮ರಿಂದ ೨೦೦೪ರ ನಡುವೆ ೧೬೦೦ರಷ್ಟು ಕಾನೂನುಗಳ ಮೇಲೆ ಪ್ರಭಾವ ಬೀರಿದವೆಂದೂ, ಅದಕ್ಕಾಗಿ ೯೦ ಕೋಟಿ ಡಾಲರುಗಳಷ್ಟನ್ನು (ಅದರಲ್ಲಿ ೬ ಕೋಟಿ ಡಾಲರುಗಳಷ್ಟು ರಿಪಬ್ಲಿಕನ್ ಪಕ್ಷದ ರಾಜಕಾರಣಿಗಳಿಗೆ, ೩ ಕೋಟಿ ಡಾಲರುಗಳಷ್ಟು ಡೆಮಾಕ್ರಾಟಿಕ್ ಪಕ್ಷದ ರಾಜಕಾರಣಿಗಳಿಗೆ) ವ್ಯಯಿಸಿದವೆಂದೂ ಹೇಳಲಾಗಿದೆ. ಅಮೆರಿಕಾದ ಆಡಳಿತದ ಮೇಲೆ ಪ್ರಭಾವ ಬೀರುವುದಕ್ಕೆಂದೇ ೧೨೫೦ಕ್ಕೂ ಹೆಚ್ಚು ವಿಶೇಷಜ್ಞರು ವಾಷಿಂಗ್ಟನ್‌ನಲ್ಲಿ ನಿಯುಕ್ತರಾಗಿದ್ದಾರೆಂದು ಹೇಳಲಾಗಿದೆ. ಇಂತಹ ಪ್ರಭಾವಗಳಿಂದಾಗಿ ಹೊಸ ಔಷಧಗಳ ಪ್ರಯೋಗಗಳ ನಿಯಮಗಳನ್ನು ವರ್ಷದಿಂದ ವರ್ಷಕ್ಕೆ ಸಡಿಲಿಸಿ, ಭಾರತದಂತಹ ಬಡ ರಾಷ್ಟ್ರಗಳ ಅಮಾಯಕ ಪ್ರಜೆಗಳೆಲ್ಲರೂ ಈ ಕಂಪೆನಿಗಳ ಔಷಧಗಳಿಗೆ ಪ್ರಯೋಗಪಶುಗಳಾಗುವಂತೆ ಮಾಡಲಾಗಿದ್ದು, ಅಂತಹ ಪ್ರಯೋಗಗಳಿಂದ ಸಾವುಂಟಾದರೂ ಸೂಕ್ತ ಪರಿಹಾರವು ದೊರೆಯದಂತಹ ವ್ಯವಸ್ಥೆಗಳನ್ನು ಮಾಡಲಾಗಿದೆ. ಇಂತಹ ಪ್ರಯೋಗಗಳ ವರದಿಗಳನ್ನು ಬರೆಯುವವರೂ, ಪ್ರಕಟಿಸುವ ಪತ್ರಿಕೆಗಳೂ, ಅವುಗಳ ಆಧಾರದಲ್ಲಿ ಔಷಧಗಳ ಮಾರಾಟಕ್ಕೆ ಅನುಮತಿ ನೀಡುವ ನಿಯಂತ್ರಣ ಸಂಸ್ಥೆಗಳೂ ಇವೇ ಕಂಪೆನಿಗಳ ಕೃಪೆಯಲ್ಲಿರುವುದರಿಂದ ಎಲ್ಲವೂ ಅವುಗಳ ಅನುಕೂಲಕ್ಕೆ ಹೊಂದಿಕೆಯಾಗುತ್ತವೆ. ಹೀಗೆ, ಪ್ರಯೋಜನಗಳು ಹಾಗೂ ಸುರಕ್ಷತೆಯ ಬಗ್ಗೆ ಸಾಕಷ್ಟು ವಿಶ್ವಾಸಾರ್ಹವಾದ ಪುರಾವೆಗಳಿಲ್ಲದೆಯೇ ಹಲವು ಬಗೆಯ ಔಷಧಗಳನ್ನು ಜನರ ಮೇಲೆ ಹೇರಿ ಲಾಭಗಳಿಸುವುದಕ್ಕೆ ಈ ಕಂಪೆನಿಗಳಿಗೆ ಸುಲಭ ಸಾಧ್ಯವಾಗುತ್ತಿದೆ.

ವೈದ್ಯರ ಮೇಲಂತೂ ಈ ಕಂಪೆನಿಗಳು ಬೀರಿರುವ ಪ್ರಭಾವವನ್ನು ಹೇಳತೀರದು. ವೈದ್ಯರನ್ನು ಮೆಚ್ಚಿಸುವುದಕ್ಕಾಗಿ ಅಮೆರಿಕವೊಂದರಲ್ಲೇ ಈ ದೈತ್ಯ ಕಂಪೆನಿಗಳು ವರ್ಷಕ್ಕೆ ೨೦೦೦ ಕೋಟಿ ಡಾಲರುಗಳನ್ನು ವ್ಯಯಿಸುತ್ತವೆ. ಅಮೆರಿಕಾದಲ್ಲಿ ಪ್ರತೀ ವರ್ಷ ಔಷಧಗಳು ಮತ್ತು ಉಪಕರಣಗಳ ಬಗ್ಗೆ ೩೦೦೦೦೦ಕ್ಕೂ ಹೆಚ್ಚು ಸಮ್ಮೇಳನಗಳನ್ನೂ, ವಿಚಾರಗೋಷ್ಠಿಗಳನ್ನೂ, ತರಬೇತಿ ಕಾರ್ಯಕ್ರಮಗಳನ್ನೂ ಸ್ವರ್ಗಸದೃಶ ಪ್ರವಾಸಿ ತಾಣಗಳಲ್ಲಿಯೂ, ಐಷಾರಾಮಿ ಹೋಟೇಲುಗಳಲ್ಲಿಯೂ ನಡೆಸುವುದಕ್ಕೆ ಕನಿಷ್ಠ ೨೦೦ ಕೋಟಿ ಡಾಲರುಗಳಷ್ಟನ್ನು ವ್ಯಯಿಸಲಾಗುತ್ತದೆ. ಒಂದು ಅಂದಾಜಿನಂತೆ, ೨೦೦೪ರಲ್ಲಿ ದೈತ್ಯ ಕಂಪೆನಿಗಳು ಔಷಧಗಳ ಸಂಶೋಧನೆಗೆ ಸುಮಾರು ೩೦೦೦ ಕೋಟಿ ಡಾಲರುಗಳನ್ನು ವ್ಯಯಿಸಿದ್ದರೆ, ಅವುಗಳ ಪ್ರಚಾರ ಮತ್ತು ಜಾಹೀರಾತುಗಳಿಗಾಗಿ ೫೮೦೦ ಡಾಲರುಗಳನ್ನು, ಅಂದರೆ, ಪ್ರತೀ ವೈದ್ಯನಿಗೆ ವರ್ಷವೊಂದಕ್ಕೆ ೬೧೦೦೦ ಡಾಲರು (೩೩ ಲಕ್ಷ ರೂ.)ಗಳನ್ನು ವ್ಯಯಿಸಿದವು! ಪ್ರತಿಷ್ಠಿತ ಬ್ರಿಟಿಷ್ ಮೆಡಿಕಲ್ ಜರ್ನಲ್‌ನಲ್ಲಿ ಆಗಸ್ಟ್ ೬, ೨೦೧೨ರಂದು ಪ್ರಕಟವಾದ ಲೇಖನದನುಸಾರ, ಇತ್ತೀಚಿನ ವರ್ಷಗಳಲ್ಲಿ ಇಂತಹ ವೆಚ್ಚವು ಇನ್ನಷ್ಟು ಹೆಚ್ಚಾಗಿದ್ದು, ಮೂಲಭೂತ ಸಂಶೋಧನೆಗಾಗಿ ಮಾಡುವ ಪ್ರತೀ ಡಾಲರ್ ವೆಚ್ಚಕ್ಕೆ ೧೯ ಡಾಲರುಗಳಷ್ಟನ್ನು ಪ್ರಚಾರಕ್ಕಾಗಿ ವ್ಯಯಿಸಲಾಗುತ್ತಿದೆ. ಜಗತ್ತಿನೆಲ್ಲೆಡೆ ಔಷಧಗಳ ಬೆಲೆಗಳು ಒಂದೇ ಸಮನೆ ಏರುತ್ತಿದ್ದು, ಇನ್ನೆರಡು ವರ್ಷಗಳಲ್ಲಿ ಒಟ್ಟು ಜಾಗತಿಕ ಔಷಧ ವ್ಯವಹಾರವು ಒಂದು ಲಕ್ಷ ಕೋಟಿ ಡಾಲರುಗಳಾಗಿ, ಕಂಪೆನಿಗಳ ಲಾಭವು ೨೨೦೦೦ ಕೋಟಿ ಡಾಲರುಗಳ ಮೊತ್ತವನ್ನು ಮೀರಬಹುದೆಂದು ಅಂದಾಜಿಸಲಾಗಿದೆ. ಇದೇ ವೇಳೆಗೆ, ಐದರಲ್ಲೊಬ್ಬ ರೋಗಿಯು ತನ್ನ ಚಿಕಿತ್ಸೆಯನ್ನು ಮುಂದುವರಿಸಲಾಗದೆ ಅದನ್ನು ಕಡಿತಗೊಳಿಸುವ ಯಾ ಸಂಪೂರ್ಣವಾಗಿ ನಿಲ್ಲಿಸುವ ಪರಿಸ್ಥಿತಿಯುಂಟಾಗಿದೆ.

ಆಧುನಿಕ ವಿಜ್ಞಾನ ಮತ್ತು ತಂತ್ರಜ್ಞಾನಗಳ ಅದ್ಭುತ ಪ್ರಗತಿಯು ವೈದ್ಯವಿಜ್ಞಾನಕ್ಕೆ ನೀಡಿರುವ ಕೊಡುಗೆಗಳನ್ನು ರೋಗಗಳಿಂದ ನರಳುವ ಜನರಿಗಿಂತಲೂ ಹೆಚ್ಚಾಗಿ ಔಷಧ ಕಂಪೆನಿಗಳೂ, ಉಪಕರಣ ತಯಾರಕರೂ ಬಳಸಿಕೊಂಡಿದ್ದು, ಅವರಷ್ಟೇ ಶ್ರೀಮಂತರಾಗುವಂತಾಗಿದೆ. ಖಾಸಗಿ ಕಾಲೇಜುಗಳಲ್ಲಿ ಯಂತ್ರಮಾನವರಂತೆ ಹೊರಬರುವ ವೈದ್ಯರುಗಳು ರೋಗಿಗಳಿಗಿಂತ ಹೆಚ್ಚಾಗಿ ದೈತ್ಯ ಕಂಪೆನಿಗಳ ಸೇವಕರಾಗುತ್ತಿರುವುದು ಜನಸಾಮಾನ್ಯರ ಕಷ್ಟಗಳನ್ನು ಇನ್ನಷ್ಟು ಹೆಚ್ಚಿಸಿವೆ. ಸಮುದಾಯದ ಆರೋಗ್ಯರಕ್ಷಣೆಗೆ ಸಂಬಂಧಿಸಿದ ರೀತಿನೀತಿಗಳನ್ನು ನಿರ್ಧರಿಸುವ ಸರಕಾರಗಳು, ನಿಯಂತ್ರಣ ಸಂಸ್ಥೆಗಳು ಹಾಗೂ ನೀತಿನಿರೂಪಣಾ ಸಂಸ್ಥೆಗಳೆಲ್ಲವೂ ಇವೇ ಕಂಪೆನಿಗಳ ಆಣತಿಯಂತೆ ನಡೆಯುವುದರಿಂದ ವೈಚಾರಿಕವಾದ, ವೈಜ್ಞಾನಿಕವಾದ, ಜನಪರವಾದ ವೈದ್ಯಕೀಯ ಚಿಕಿತ್ಸೆಯು ಗಗನಕುಸುಮವೇ ಆಗುತ್ತಿದೆ.

**ಡಾ|| ಬಿ. ಶ್ರೀನಿವಾಸ ಕಕ್ಕಿಲ್ಲಾಯ**
'ಅಕ್ಷಯ', ಕದ್ರಿ ಕೈಬಟ್ಟಲ್, ಆಳ್ವಾರಿಸ್ ರಸ್ತೆ, ಮಂಗಳೂರು - ೫೭೫ ೦೦೨

## ಮುಮ್ತಾಜಳಿಗೊಂದು ಪ್ರಶ್ನೆ

**ಹೇ**ಳಿ ಬಿಡೆ ಮಮ್ತಾಜ ಹೇಳಿಬಿಡೆ,
ನಿನಗಾಗೇ ಗಂಡ ಕಟ್ಟಿಸಿದ್ದೆ ಈ 'ತಾಜಮಹಲು'
ಕೊಟ್ಟಿದ್ದನೇ ಹೇಳು ಇನಿತಾದರೂ ಪ್ರೀತಿ
'ನಿನಗಾಗೇ' ಮಾತ್ರ?
ಇರಲಿಲ್ಲವೇ ನಿನಗೂ ಸವತಿಯರು
ಎಲ್ಲಾ ರಾಣಿಯರಂತೆ
ಅಪ್ಪಿದ್ದನೆ ನಿನ್ನ, ಬರದೆ ನೆನಪು, ಇತರರ
ಮೌನವೇಕೆ ಮಮ್ತಾಜ ? ಮಾತನಾಡಲೇ ಬೇಕು ನೀನು
ನೀ ಹೇಳುವ ಸತ್ಯದಲಿ
ತೂರಿಹೋಗಬಹುದಾದರೆ ಇತಿಹಾಸದ ಟೊಳ್ಳು
ಎಳೆದುಬಿಡಲಿ ಬಿಡು ತುಸುವೇ 'ತಾಜಾ' ಕಾಳು
ನಿನಗೇನು ನಷ್ಟ?
ಸುಳ್ಳು ಹೇಳುವ ಪುರುಷ ಅಹಂಕಾರಕ್ಕೆ
ಕೊಡೋಣ ಕೊಡಲಿ ಪೆಟ್ಟು

**ಭಾಗ್ಯ ಹಾಗಲಗಂಚಿ**
ಕುಂಚೆಬೈಲು ಅಂಚೆ, ಶೃಂಗೇರಿ ತಾಲ್ಲೂಕು
ಚಿಕ್ಕಮಗಳೂರು ಜಿಲ್ಲೆ



# ಸಾಮಾಜಿಕ ಪ್ರತಿಕೂಲತೆ, ಕಲಿಕೆ ಹಾಗೂ ಶಿಕ್ಷಣ

**ಸಾ**ಮಾಜಿಕ ಪ್ರತಿಕೂಲತೆ ಮತ್ತು ಶಿಕ್ಷಣ ಇವುಗಳ ಸಂಬಂಧ ತುಂಬ ಸಂಕೀರ್ಣ, ಸೂಕ್ಷ್ಮ ಹಾಗೆಯೇ ತುಂಬ ಗಂಭೀರ ಕೂಡ. ಇವೆರಡರ ಸಂಬಂಧ ಚರ್ಚೆಗೆ ಬಂದಾಗಲೆಲ್ಲಾ ಪ್ರತಿಕೂಲತೆಯನ್ನು ಕಡಿಮೆ ಮಾಡುವುದಕ್ಕಾಗಿ ಸರ್ಕಾರ ಮೀಸಲಾತಿ ನೀಡಿದೆ, ಆರ್ಥಿಕವಾಗಿ ದುರ್ಬಲರ ಶಿಕ್ಷಣಕ್ಕಾಗಿ ವಿದ್ಯಾರ್ಥಿವೇತನಗಳನ್ನು ನೀಡುತ್ತಿದೆ, ಇನ್ನೇನು ಬೇಕು ಎನ್ನುವ ದನಿ ಕೇಳಿಬರುತ್ತದೆ. ಜೊತೆಗೆ ಇವುಗಳಿಂದ ಏನೂ ಪ್ರಯೋಜನವೇ ಆಗಿಲ್ಲವೇ ಎನ್ನುವ ಪ್ರಶ್ನೆ ಕೂಡ ಏಳುತ್ತಿದೆ. ಏನೂ ಆಗಿಲ್ಲ ಎಂದು ಹೇಳುವುದಕ್ಕಾಗುವುದಿಲ್ಲ. ಆದರೆ ಆಗಬೇಕಾದ್ದು ಮತ್ತು ಸರಿಹೋಗಬೇಕಾದ್ದು ಇನ್ನೂ ಬೇಕಾದಷ್ಟಿದೆ ಎನ್ನುವುದನ್ನು ಮಾತ್ರ ಹೇಳಬಹುದು. ಈ ಕ್ರಮಗಳು ಖಾಯಿಲೆಗೆ ಔಷಧಿ ನೀಡುವ ಬದಲು ರೋಗಲಕ್ಷಣಗಳಿಗೆ ಔಷಧಿ ನೀಡುತ್ತಿವೆ. ಏಕೆಂದರೆ ಇವು ಸಾಮಾಜಿಕ ಪ್ರತಿಕೂಲತೆಯ ಯಾವುದೋ ಕೆಲವು ಅಂಶಗಳಿಗೆ ಮಾತ್ರ ಪರಿಹಾರವನ್ನು ಒದಗಿಸುತ್ತಿವೆಯೇ ಹೊರತು ಸಾಮಾಜಿಕ ಪ್ರತಿಕೂಲತೆಯ ಮೂಲಭೂತ ಹಾಗೂ ಪ್ರಮುಖ ಸಮಸ್ಯೆಗಳಿಗೆ ಪರಿಹಾರ ಒದಗಿಸುತ್ತಿಲ್ಲ. ಈ ಮೂಲಭೂತ ಸಮಸ್ಯೆಗಳನ್ನು ಅರ್ಥಮಾಡಿಕೊಳ್ಳುವುದು ಸಾಮಾಜಿಕ ಪ್ರತಿಕೂಲತೆಯನ್ನು ತಳಸ್ಪರ್ಶಿಯಾಗಿ ಅರ್ಥಮಾಡಿಕೊಳ್ಳಲು ಸಹಕಾರಿಯಾಗುತ್ತದೆ. ಪ್ರತಿಕೂಲತೆಯನ್ನು ಕಡಿಮೆ ಮಾಡುವಲ್ಲಿ ಶಿಕ್ಷಕರ ಹಾಗೂ ಈ ಸಮಾಜದ ಪ್ರಜೆಗಳ ಪಾತ್ರ ಏನು ಎನ್ನುವುದನ್ನೂ ಅರ್ಥಮಾಡಿಕೊಳ್ಳಬೇಕಾಗುತ್ತದೆ.

ಶಿಕ್ಷಣ ಮತ್ತು ಕಲಿಕೆಗೆ ಸಂಬಂಧಿಸಿದ ಸಮಸ್ಯೆಗಳಲ್ಲಿ ಪ್ರತ್ಯಕ್ಷವಾಗಿ ನಮ್ಮ ಗಮನಕ್ಕೆ ಬಾರದ ಕೆಲವು ಗಂಭೀರ ಅಂಶಗಳು ಹಿನ್ನೆಲೆಯಲ್ಲಿ ಕಾರ್ಯನಿರತವಾಗಿರುತ್ತವೆ. ಸಾಮಾಜಿಕ ಪ್ರತಿಕೂಲತೆಯನ್ನು ಅರ್ಥಮಾಡಿಕೊಳ್ಳುವಾಗ ಇಂತಹ ಹಲವಾರು ಹಿನ್ನೆಲೆ ಅಂಶಗಳನ್ನು ಗಮನಿಸದೇ ಹೋದರೆ, ಈ ಚರ್ಚೆ ಪೂರ್ಣವಾಗುವುದೇ ಇಲ್ಲ. ಸಾಮಾಜಿಕ ಪ್ರತಿಕೂಲತೆಯೆನ್ನುವುದು ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಕಾರಣಗಳ ಜೊತೆಗೆ ಧರ್ಮ, ಜಾತಿ, ಲಿಂಗ ಮುಂತಾದ ಕಾರಣಗಳಿಂದಲೂ ಉಂಟಾಗಬಹುದು. ಈ ರೀತಿ ಹುಟ್ಟಿಕೊಂಡ ಪ್ರತಿಕೂಲತೆಗಳು ಶಾಶ್ವತವಾಗಿ ಉಳಿದುಬಿಡುತ್ತವೆ



ಕುಟುಂಬದ ಆರ್ಥಿಕ ಮಟ್ಟಕ್ಕೂ ಮತ್ತು ಶಾಲೆಯ ಆಯ್ಕೆಗೂ ತುಂಬ ನೇರವಾದ ಸಂಬಂಧವಿದೆ. ಬಡತನದ ರೇಖೆಗಿಂತ ಕೆಳಗಿರುವ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಮಕ್ಕಳಿಗೆ ಭಾರತದಂತಹ ದೇಶದಲ್ಲಿ ಖಾಸಗಿ ಶಾಲೆಯ ಆಯ್ಕೆ ಸಾಧ್ಯವೇ ಇಲ್ಲ ಎನ್ನಬಹುದು. ಹಾಗಾಗಿ ಅವರು ಅನಿವಾರ್ಯವಾಗಿ ಸಾರ್ವಜನಿಕ ಇಲ್ಲವೆ ಸರ್ಕಾರಿ ಶಾಲೆಗಳನ್ನು ಆಯ್ಕೆಮಾಡಿಕೊಳ್ಳಬೇಕಾಗುತ್ತದೆ. ಆ ಶಾಲೆಗಳಲ್ಲಿ ಉತ್ತಮ ಸೌಲಭ್ಯಗಳು ಹಾಗೂ ಶಿಕ್ಷಕರು ಲಭ್ಯವಿರಬಹುದು ಅಥವಾ ಇಲ್ಲದಿರಬಹುದು. ಆದರೆ ಬೇರೆ ಜಾತಿಯ ಮಕ್ಕಳು ಹೆಚ್ಚು ಹೆಚ್ಚು ಖಾಸಗಿ ಶಾಲೆಗಳಿಗೆ ಸೇರುತ್ತಿರುವುದರಿಂದ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯೆನ್ನುವುದು ನಿಧಾನವಾಗಿ ಪರಿಶಿಷ್ಟ ಜಾತಿಯ ಮಕ್ಕಳಿಗಾಗಿ ಮಾತ್ರ ಇರುವ ವ್ಯವಸ್ಥೆಯಾಗಿ ಪರಿವರ್ತನೆಯಾಗುತ್ತಿದೆ ಎನ್ನುವ ಜಿಲ್ಲಾ ಶಿಕ್ಷಣಾಧಿಕಾರಿಯೊಬ್ಬರ ಹೇಳಿಕೆ ತುಂಬ ಮಾರ್ಮಿಕವಾಗಿದೆ ಮತ್ತು ವಾಸ್ತವಕ್ಕೆ ಹಿಡಿದ ಕನ್ನಡಿಯಾಗಿದೆ.

**ಪ್ರೊ॥ ಶೈಲಜಾ**

ಎಂದೂ ಹೇಳುವುದಕ್ಕಾಗುವುದಿಲ್ಲ, ಏಕೆಂದರೆ ಸಾಮಾಜಿಕ ಮೇಲ್ಚಲನೆಯ ಸಾಧ್ಯತೆಗಳಿರುವ ಸಂದರ್ಭದಲ್ಲಿ, ಲಿಂಗಾಧಾರಿತ ಮನಃಸ್ಥಿತಿ ಬದಲಾಗುವ ಸಂದರ್ಭದಲ್ಲಿ ಅಂತಹ ಪ್ರತಿಕೂಲತೆ ಕಡಿಮೆಯಾಗಬಹುದು ಅಥವಾ ಸಂಪೂರ್ಣವಾಗಿ ಇಲ್ಲವಾಗಿಬಿಡಬಹುದು. ಆದರೆ ಯಾವಾಗಲೂ ಹೀಗಾಗುವುದಿಲ್ಲ. ಮಕ್ಕಳು ಬೆಳೆಯುವ ಹಾಗೂ ಅವರ ವ್ಯಕ್ತಿತ್ವಗಳು ರೂಪುಗೊಳ್ಳುವ ಸಂದರ್ಭದಲ್ಲಿ ಅವರನ್ನು ಕಾಡುವ ಸಾಮಾಜಿಕ ಪ್ರತಿಕೂಲತೆಗಳು ಮತ್ತು ಅವುಗಳಿಂದ ಹುಟ್ಟಿಕೊಳ್ಳುವ ಸಮಸ್ಯೆಗಳು ಕಲಿಕೆಯ ಪ್ರಕ್ರಿಯೆಯ ಮೇಲೆ ಗಂಭೀರವಾದ ಪರಿಣಾಮವನ್ನು ಬೀರುತ್ತವೆ. ಹಾಗೆಯೇ ಕಲಿಸುವ ಪ್ರಕ್ರಿಯೆ ಮೇಲೂ ಅವು ಪರಿಣಾಮವನ್ನು ಬೀರುತ್ತವೆ. ಅಂದರೆ ಇವು ಇಡೀ ಶಿಕ್ಷಣದ ನಿರ್ಧಾರಕ ಅಂಶಗಳಾಗುತ್ತವೆ. ಈ ಸಂದರ್ಭದಲ್ಲಿ ಉಂಟಾಗುವ ಕೆಲವು ಹಾನಿಗಳು ಜೀವನದುದ್ದಕ್ಕೂ ಕಾಡುತ್ತವೆ.

ಹಾಗಾಗಿ ಶಿಕ್ಷಣ ಎನ್ನುವುದು ಕೇವಲ ಪಠ್ಯಕ್ರಮ, ಬೋಧನಶಾಸ್ತ್ರ (ಪೆಡಗಾಜಿ), ಗುಣಮಟ್ಟ, ಉತ್ಕೃಷ್ಟತೆ, ಅರ್ಹತೆ (ಮೆರಿಟ್) ಮಾತ್ರವಲ್ಲ ಮತ್ತು ಈ ಅಂಶಗಳು ಕೂಡ ಒಂದು ಶೂನ್ಯ ಸನ್ನಿವೇಶದಲ್ಲಿ ರೂಪುಗೊಳ್ಳುವುದಿಲ್ಲ. ಇವುಗಳನ್ನು ಶಿಕ್ಷಣೇತರ ಅಂಶಗಳು ನಿರ್ಧರಿಸುತ್ತವೆ. ಶಿಕ್ಷಣವನ್ನು ಯಾರು, ಯಾರಿಗಾಗಿ, ಯಾವ ಸಂದರ್ಭದಲ್ಲಿ ರೂಪಿಸುತ್ತಿದ್ದಾರೆ ಎನ್ನುವುದೂ ಇದನ್ನು ನಿರ್ಧರಿಸುತ್ತದೆ. ಶಿಕ್ಷಣ ಕ್ಷೇತ್ರದಲ್ಲಿ ಈ ಸಮಾಜದ ಪ್ರಜೆಗಳಾದ ನಾವೆಲ್ಲರೂ ಬೇರೆ ಬೇರೆ ರೀತಿಗಳಲ್ಲಿ - ಪಾಲಕರಾಗಿ, ಪೋಷಕರಾಗಿ, ವಿದ್ಯಾರ್ಥಿಗಳಾಗಿ, ಕಾರ್ಯನೀತಿ ರೂಪಿಸುವವರಾಗಿ, ಶಿಕ್ಷಕರಾಗಿ, ಪಠ್ಯಕ್ರಮದ ರೂವಾರಿಗಳಾಗಿ, ಆಡಳಿತಾಧಿಕಾರಿಗಳಾಗಿ, ಸಾಮಾನ್ಯ ಪ್ರಜೆಗಳಾಗಿ ತೊಡಗಿಕೊಂಡಿರುತ್ತೇವೆ. ಆದ್ದರಿಂದ ಈ ಕ್ಷೇತ್ರಕ್ಕೆ ಸಂಬಂಧಿಸಿದ ಸಂಕೀರ್ಣತೆಗಳು ಹಾಗೂ ಸಮಸ್ಯೆಗಳನ್ನು ಅರ್ಥಮಾಡಿಕೊಂಡರೆ, ಸಮಾಜದಲ್ಲಿ ಬಹುಮುಖ್ಯವಾದ ಈ ಕ್ಷೇತ್ರವನ್ನು ಸ್ವಲ್ಪ ಭಿನ್ನವಾಗಿ, ಮಾನವೀಯ ದೃಷ್ಟಿಕೋನದಿಂದ ನೋಡುವುದಕ್ಕೆ ಸಹಕಾರಿಯಾಗುತ್ತದೆ. ನಮ್ಮ ಗ್ರಹಿಕೆ ಬದಲಾದರೆ ಕ್ರಮೇಣ ಒಂದಿಷ್ಟು ಧನಾತ್ಮಕ ಬದಲಾವಣೆಗಳಾಗಬಹುದು.

ಸಾಮಾಜಿಕ ಪ್ರತಿಕೂಲತೆಯೆನ್ನುವುದು ಹೆಚ್ಚಿನ ಬಾರಿ ಆರ್ಥಿಕ ಹಾಗೂ ಸಾಂಸ್ಕೃತಿಕ ಪ್ರತಿಕೂಲತೆಯ ಪರಿಣಾಮವಾಗಿ ಉಂಟಾಗುತ್ತದೆ. ಆರ್ಥಿಕವಾಗಿ ಹಿಂದುಳಿದಿರುವ, ಕಡಿಮೆ ಸಂಬಳದ, ಬಡತನ ಹಾಗೂ ಕಡಿಮೆ ಶಿಕ್ಷಣ ಹೊಂದಿರುವ ಅಥವಾ ಶಿಕ್ಷಣರಹಿತ ಕುಟುಂಬಗಳಿಂದ ಬಂದಿರುವ ವಿದ್ಯಾರ್ಥಿಗಳು ಶಿಕ್ಷಣದಲ್ಲಿ ಪ್ರತಿಕೂಲತೆಯಿಂದ ಒದ್ದಾಡುತ್ತಿರುತ್ತಾರೆ. ಹಾಗೆಯೇ ಹಿಂದುಳಿದ ವರ್ಗಗಳು, ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದ ವಿದ್ಯಾರ್ಥಿಗಳು ಸಾಂಸ್ಕೃತಿಕ ಕಾರಣಗಳಿಗಾಗಿ ಪ್ರತಿಕೂಲತೆಯನ್ನು ಅನುಭವಿಸುತ್ತಿರುತ್ತಾರೆ. ಸಾಮಾನ್ಯವಾಗಿ ಸಾಂಸ್ಕೃತಿಕ ಪ್ರತಿಕೂಲತೆಯಿಂದ ಒದ್ದಾಡುತ್ತಿರುವವರು ಆರ್ಥಿಕವಾಗಿ ದುರ್ಬಲವರ್ಗಕ್ಕೆ ಸೇರಿರುತ್ತಾರೆ. ಅಷ್ಟೇ ಅಲ್ಲದೆ ಇವರು ಸಾಮಾಜಿಕವಾಗಿ ಹೊರಗಿಟ್ಟ ವರ್ಗ ಹಾಗೂ ಜಾತಿಗಳಿಗೆ ಸೇರಿರುತ್ತಾರೆ. ನ್ಯಾಷನಲ್ ಸ್ಯಾಂಪಲ್ ಸರ್ವೆ (೧೯೮೯-೯೧) ಇದನ್ನು ಸ್ಪಷ್ಟಪಡಿಸುತ್ತದೆ. ೭-೧೭ರ ಒಳಗಿನ ವಯೋಮಾನದ, ಶಾಲೆಗೆ ಹೋಗುವ ಮಕ್ಕಳಲ್ಲಿ ಪರಿಶಿಷ್ಟ ಜಾತಿಯ ಮಕ್ಕಳ ಸಂಖ್ಯೆಗಿಂತ ಉಳಿದ ಜಾತಿಯ ಮಕ್ಕಳ ಸಂಖ್ಯೆ ಶೇಕಡ ೧.೩೫ರಷ್ಟು ಹೆಚ್ಚಿಗೆ ಇದೆ. ಅಂತೆಯೇ ೧೧-೧೭ರ ವಯೋಮಾನದ ಮಕ್ಕಳಲ್ಲಿ ೫ನೇ ತರಗತಿಯನ್ನು ಪೂರೈಸುವ ಪರಿಶಿಷ್ಟ ಜಾತಿ ಮತ್ತು ಉಳಿದ ಹಿಂದುಳಿದ ಜಾತಿಯ ಮಕ್ಕಳಿಗಿಂತ ಉಳಿದ ಜಾತಿಯ ಮಕ್ಕಳ ಸಂಖ್ಯೆ ಶೇಕಡ ೧.೩೩ರಷ್ಟು ಹೆಚ್ಚಿಗೆ ಇದೆ. ಹಾಗಾಗಿ ಮಕ್ಕಳ ಶೈಕ್ಷಣಿಕ ಮಟ್ಟದ ಮೇಲೆ ಜಾತಿ ತೀರಾ ಗಮನಾರ್ಹವಾದ ಪ್ರಭಾವವನ್ನು ಬೀರುತ್ತದೆ. ಕೆಲವು ಬಾರಿ ಸಾಮಾಜಿಕ ಪ್ರತಿಕೂಲತೆ ಲಿಂಗಜನ್ಯವಾಗಿರುತ್ತದೆ. ಧಾರ್ಮಿಕ ಅಲ್ಪಸಂಖ್ಯಾಕತೆ ಕೂಡ ಕೆಲವೊಮ್ಮೆ ಸಾಮಾಜಿಕ ಪ್ರತಿಕೂಲತೆಗೆ ಕಾರಣವಾಗುತ್ತದೆ. ಇವುಗಳಲ್ಲಿ ಮೊದಲ ಮೂರು ಅಂಶಗಳು ಕಲಿಕೆಯ ಪ್ರಕ್ರಿಯೆ ಮೇಲೆ ತುಂಬ ಗಂಭೀರವಾದ ಪರಿಣಾಮವನ್ನು ಬೀರುತ್ತವೆ. ಲೇಖನದಲ್ಲಿ ಪ್ರತಿಕೂಲತೆಯ ಹಿಂದಿರುವ ಅಂಶಗಳನ್ನು ಹೀಗೆ ಬಿಡಿಬಿಡಿಯಾಗಿ ಚರ್ಚಿಸಬಹುದು. ಆದರೆ ವಾಸ್ತವವಾಗಿ ಪ್ರತಿಕೂಲತೆಯ ವಿಭಿನ್ನ ಅಂಶಗಳನ್ನು ಹೀಗೆ ಬೇರ್ಪಡಿಸುವುದು ತುಂಬ ಕಷ್ಟ. ಸಾಮಾನ್ಯವಾಗಿ ವಿಭಿನ್ನ ಬಗೆಯ ಪ್ರತಿಕೂಲತೆಗಳು ಒಂದರ ಜೊತೆ ಇನ್ನೊಂದು ತಳಕು ಹಾಕಿಕೊಂಡಿರುತ್ತವೆ ಮತ್ತು ಅವುಗಳ ಪರಿಣಾಮ ಸಂಕೀರ್ಣವಾಗಿರುತ್ತದೆ.

ಸಾಮಾಜಿಕ ಪ್ರತಿಕೂಲತೆಯನ್ನು ಹೊಂದಿರುವವರು ಸಾಮಾನ್ಯವಾಗಿ ಬಡ ಹಾಗೂ ಛಿದ್ರಗೊಂಡ ಕುಟುಂಬಗಳಿಗೆ ಹಾಗೂ ಹೆಚ್ಚಿನ ಬಾರಿ ತಾಯಿಯೇ ದುಡಿದು ಸಾಕುತ್ತಿರುವ ಮನೆಗಳಿಗೆ ಸೇರಿದವರಾಗಿರುತ್ತಾರೆ. ಅವರ ಆರೋಗ್ಯದ ಪರಿಸ್ಥಿತಿ ತುಂಬ ಶೋಚನೀಯವಾಗಿರುತ್ತದೆ. ಬಡತನ ಎನ್ನುವುದು ಕೇವಲ ಆದಾಯವನ್ನು ಆಧರಿಸಿರುವುದಲ್ಲ; ಅದು ಅವರು ಬದುಕುವ ಸ್ಥಿತಿಗೆ ಸಂಬಂಧಿಸಿರುತ್ತದೆ. ಈ ಬಡತನ ಮತ್ತು ತತ್ಪರಿಣಾಮವಾದ ಅನಾರೋಗ್ಯ ಇವು ಕಲಿಕೆಯ ಪ್ರಕ್ರಿಯೆಯ ಮೇಲೆ ಅಳಿಸಲಾಗದ ಪರಿಣಾಮ ಬೀರುವ ಮೊತ್ತ ಮೊದಲ ಗಂಭೀರ ಹಾಗೂ ಮೂಲಭೂತ ಅಂಶ. ದಿನ ತುಂಬುವ ಮೊದಲೇ ಮಗು ಹುಟ್ಟುವುದು, ಹುಟ್ಟಿದಾಗ ಮಗುವಿನ ತೂಕ, ಗರ್ಭಿಣಿಯಾಗಿದ್ದಾಗ ಮತ್ತು ಹೆರಿಗೆಯ ನಂತರ ತಾಯಿಗೆ ಉಂಟಾಗುವ ಆಹಾರ ಹಾಗೂ ಪೋಷಕಾಂಶಗಳ ಕೊರತೆ ಇವೆಲ್ಲವೂ ಮಕ್ಕಳ ಬೌದ್ಧಿಕ ಹಾಗೂ ಶೈಕ್ಷಣಿಕ ಹಿಂದುಳಿಯುವಿಕೆಗೆ ತುಂಬ ಸಲ ಕಾರಣವಾಗುತ್ತದೆ. ಈ ಸಂದರ್ಭಗಳಲ್ಲಿ ಉಂಟಾಗುವ ಸಮಸ್ಯೆಗಳಿಗೂ ಮತ್ತು ನರಗಳ ಬೆಳವಣಿಗೆಗೂ, ಕಲಿಕೆಯ ಕ್ಷಮ್ಯತೆಗೂ ನೇರವಾದ ಸಂಬಂಧವಿದೆ ಎಂಬ ಅಂಶವನ್ನು ಯುರೋಪು, ಅಮೆರಿಕಾ ಹಾಗೂ ಭಾರತದಲ್ಲಿನ ಎಲ್ಲಾ ಕ್ಲಿನಿಕಲ್ ಅಧ್ಯಯನಗಳೂ ಸಾಬೀತುಪಡಿಸಿವೆ. ಈ ವರ್ಗದ ಮಗುವಿಗೆ ಸಾಮಾಜಿಕ ಪ್ರತಿಕೂಲತೆ ತಾಯಗರ್ಭದಿಂದಲೇ ಪ್ರಾರಂಭವಾಗುತ್ತದೆ. ಹೆಣ್ಣುಮಕ್ಕಳು ಬಾಲ್ಯದಲ್ಲಿ ಹೊಂದಿರುವ ಆರೋಗ್ಯಕರ ಅಭ್ಯಾಸಗಳು ಮತ್ತು ಆಹಾರಕ್ರಮಕ್ಕೂ ಅವಳ ದೇಹದ ವಸ್ತಿಕುಹರದ (ಕಿಬ್ಬೊಟ್ಟೆಯ ಒಂದು ಭಾಗ) ಬೆಳವಣಿಗೆಗೂ ನೇರವಾದ ಸಂಬಂಧವಿದೆ. ಹೆಣ್ಣುಮಕ್ಕಳಲ್ಲಿ ಇವುಗಳ ಬೆಳವಣಿಗೆ ಚೆನ್ನಾಗಿದ್ದರೆ ಸಾಮಾನ್ಯವಾಗಿ ಮಕ್ಕಳು ದಿನ ತುಂಬಿದ ಮೇಲೆ ಜನಿಸುತ್ತವೆ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ದುರ್ಬಲ ವರ್ಗಕ್ಕೆ ಸೇರಿದ ಹೆಣ್ಣುಮಕ್ಕಳ ಆಹಾರಸೇವನೆ ತೃಪ್ತಿಕರವಾಗಿರುವುದಿಲ್ಲ, ಅವರ ಬೆಳವಣಿಗೆ ಕುಂಠಿತವಾಗಿರುತ್ತದೆ. ವಿವಾಹಿತರಾದ ಮೇಲೂ ಅವರ ಪರಿಸ್ಥಿತಿ ಹಾಗೇ ಮುಂದುವರಿದಲ್ಲಿ ಅವರು ಅಕಾಲಿಕ ಶಿಶುವಿಗೆ ಜನ್ಮ ನೀಡುವ ಸಾಧ್ಯತೆಗಳೇ ಹೆಚ್ಚು. ಹೀಗಾಗಿ ಮಗು ಕೂಡ ಕೊರತೆಯೊಂದಿಗೇ ಹುಟ್ಟುತ್ತದೆ. ಈ ಸಮಸ್ಯೆ ಒಂದು ತಲೆಮಾರಿನಿಂದ ಇನ್ನೊಂದು ತಲೆಮಾರಿಗೆ ಹೀಗೆ ಮುಂದುವರಿಯುವುದು ಅತ್ಯಂತ ದುರಂತದ ಸಂಗತಿ.

ಮಕ್ಕಳಲ್ಲಿನ ಈ ಕುಂಠಿತ ಬೆಳವಣಿಗೆ ಮೂಲತಃ ತೊಂದರೆ ಮಾಡುವುದು ಮಕ್ಕಳ ಭಾಷಾಕಲಿಕೆಗೆ, ಓದುವಿಕೆ, ಬರೆಯುವ ಮತ್ತು ಎಣಿಸುವಿಕೆಗೆ ಬೇಕಾದ ಅಮೂರ್ತ ಚಿಂತನೆಗೆ. ಈ ಕೊರತೆ, ಮಕ್ಕಳು ಬೆಳೆದಂತೆಲ್ಲಾ ಮತ್ತಷ್ಟು ಹೆಚ್ಚಾಗುತ್ತಾ ಹೋಗುತ್ತದೆ (ಆಸುಬೆಲ್). ಹಾಗಾಗಿ ಕಾಲ ಸರಿದಂತೆ ಪ್ರತಿಕೂಲತೆ ಹೊಂದಿರುವ ವಿದ್ಯಾರ್ಥಿಗಳು ಮತ್ತು ಅನುಕೂಲವಾಗಿರುವ ವಿದ್ಯಾರ್ಥಿಗಳ ನಡುವಿನ ಸಾಧನೆಯ ಅಂತರವೂ ಹೆಚ್ಚುತ್ತಾ ಹೋಗುತ್ತದೆ. ಹೀಗೆ ಸಾಮಾಜಿಕ ಪ್ರತಿಕೂಲತೆಯನ್ನು ಹೊಂದಿರುವ ವಿದ್ಯಾರ್ಥಿಗಳ ಶಾಲಾ ಶಿಕ್ಷಣ ಪ್ರಾರಂಭವಾಗುವುದು ಕೂಡ ಪ್ರತಿಕೂಲತೆಯೊಂದಿಗೆ. ಇವರು ಭಾಷಾ ಕಲಿಕೆಯಲ್ಲಿ ನಿರಂತರವಾಗಿ ತಮ್ಮ ಸಹಪಾಠಿಗಳಿಗಿಂತ ಹಿಂದಿರುತ್ತಾರೆ. ಕಡಿಮೆ ಆದಾಯದ ಮಕ್ಕಳಿಗೆ ಹೋಲಿಸಿದರೆ ಹೆಚ್ಚು ಆದಾಯದ ಮಕ್ಕಳಲ್ಲಿ ಭಾಷಾಭಂಡಾರ ನಾಲ್ಕರಷ್ಟು ಹೆಚ್ಚಿಗೆ ಇರುತ್ತದೆ (ಹಾರ್ಟ್ ಮತ್ತು ರಿಸ್ಲಿ, ೧೯೯೫). ಈ ಮೂಲಭೂತ ತೊಂದರೆ ಅವರ ಮುಂದಿನ ಶಿಕ್ಷಣದ ಮೇಲೆ ತುಂಬ ದುಷ್ಪರಿಣಾಮ ಬೀರುತ್ತದೆ. ಉನ್ನತ ಶಿಕ್ಷಣಕ್ಕೆ ಹೋಗುವ ಸಂದರ್ಭದಲ್ಲಿ ಹಾಗೆಯೇ ವೈದ್ಯಕೀಯ, ವಿಜ್ಞಾನ, ಇಂಜಿನಿಯರಿಂಗ್, ವಾಣಿಜ್ಯ ಮತ್ತು ನಿರ್ವಹಣೆ ಮುಂತಾದ ಶಿಕ್ಷಣ ಶಾಖೆಗಳಲ್ಲಿ ಉನ್ನತ ಮಟ್ಟದ ಸಾಧನೆಗೆ ತುಂಬ ತೊಂದರೆಯುಂಟಾಗುತ್ತದೆ. ಕುದುರೆಮಾಳ ಎನ್ನುವ ಒಂದು ಸ್ವೀಪರ್ಸ್ ಕಾಲೋನಿಯಲ್ಲಿ ಇರುವ ಶಾಲಾಮಕ್ಕಳೊಡನೆ ಸುಮಾರು ಮೂರು ವರ್ಷಗಳ ಕಾಲ ಒಡನಾಡಿಕೊಂಡು ಇಂಗ್ಲಿಷ್ ಮತ್ತು ಲೆಕ್ಕವನ್ನು ಕಲಿಸಲು ಪ್ರಯತ್ನಿಸಿದಾಗ ಈ ಅಂಶ ತುಂಬ ಸ್ಪಷ್ಟವಾಯಿತು. ಹಾಗೆಯೇ ನಾನು ಹಿಂದೆ ಕೆಲಸ ಮಾಡುತ್ತಿದ್ದ ಕಾಲೇಜಿನಲ್ಲಿ ಶೇಕಡ ೭೫ರಷ್ಟು ಮಕ್ಕಳು ಪರಿಶಿಷ್ಟ ಜಾತಿ-ಪಂಗಡ ಹಾಗೂ ಆರ್ಥಿಕ ಮತ್ತು ಸಾಮಾಜಿಕವಾಗಿ ಹಿಂದುಳಿದ ವರ್ಗಗಳಿಗೆ ಸೇರಿದವರಾಗಿದ್ದರು. ಅವರೆಲ್ಲರಲ್ಲೂ ಈ ಸಮಸ್ಯೆ ಎದ್ದು ಕಾಣುತ್ತಿತ್ತು. ಇಂದಿಗೂ ಕಾಲೇಜುಗಳಲ್ಲಿ ವಿಜ್ಞಾನ ಹಾಗೂ ವಾಣಿಜ್ಯಶಾಸ್ತ್ರ ವಿಭಾಗಗಳಲ್ಲಿ ಈ ವರ್ಗದವರ ಅನುಪಾತ ಕಡಿಮೆ ಇದೆ. ೨೦೧೨ರಲ್ಲಿ ಬಿಡುಗಡೆ ಮಾಡಿರುವ ಮಾನವಸಂಪನ್ಮೂಲದ ವರದಿಯ ಪ್ರಕಾರ ಉನ್ನತ ಶಿಕ್ಷಣ ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳ ವಿದ್ಯಾರ್ಥಿಗಳು ಉನ್ನತ ಶಿಕ್ಷಣದ ಲಾಭಪಡೆದುಕೊಂಡಿಲ್ಲ. ಈ ಸಂಸ್ಥೆಗಳಲ್ಲಿ ಪರಿಶಿಷ್ಟ ಜಾತಿಯ ವಿದ್ಯಾರ್ಥಿಗಳ ಪ್ರಮಾಣ ಕೇವಲ ಶೇಕಡ ೧೦.೨%ರಷ್ಟಿದೆ. ಅದರಲ್ಲೂ ಪರಿಶಿಷ್ಟ ವರ್ಗಗಳ ಪ್ರಮಾಣ ಕೇವಲ ಶೇಕಡ ೪.೪ರಷ್ಟಿದೆ. ಪ್ರವೇಶಾತಿಯಲ್ಲಿ ಮೀಸಲು ಅವಕಾಶ ಇದ್ದೂ ಪರಿಶಿಷ್ಟರ ದಾಖಲಾತಿ ಪ್ರಮಾಣದಲ್ಲಿ ಏರಿಕೆ ಏಕಿಲ್ಲ ಎನ್ನುವ ಪ್ರಶ್ನೆ ಸಹಜವಾಗಿಯೇ ಮೂಡುತ್ತದೆ. ಅಷ್ಟೇ ಅಲ್ಲ, ಕಾಲೇಜು ಹಾಗೂ ವಿಶ್ವವಿದ್ಯಾಲಯಗಳಲ್ಲಿ ಈ ಸಮುದಾಯಗಳಿಗೆ ಸೇರಿದ ಅಧ್ಯಾಪಕರ ಸಂಖ್ಯೆಯೂ ಕಡಿಮೆಯೇ ಇದೆ. ಈ ವರದಿಯ ಪ್ರಕಾರ ಕೇವಲ ಶೇಕಡ ೭.೪ರಷ್ಟು ಅಧ್ಯಾಪಕರು ಪರಿಶಿಷ್ಟ ಜಾತಿಗೆ ಸೇರಿದ್ದರೆ ಶೇಕಡ ೨.೯ರಷ್ಟು ಪರಿಶಿಷ್ಟ ಪಂಗಡಕ್ಕೆ ಸೇರಿದ್ದಾರೆ. ಪ್ರತಿಕೂಲ ಸಾಮಾಜಿಕ-ಆರ್ಥಿಕ ಹಿನ್ನೆಲೆಯಿಂದ ಬಂದ ಮಕ್ಕಳ ಭಾಷಾ ಗ್ರಹಿಕೆಯ ಸಾಮರ್ಥ್ಯದ ಕಾರಣದಿಂದಾಗಿ ಅವರು ಓದುವ ಪ್ರಮಾಣವೇ ಕಡಿಮೆ ಇರುತ್ತದೆ. ಮತ್ತು ಅವರಿಗೆ ಅನೇಕ ವೇಳೆ ಕಾಗುಣಿತ ಮತ್ತು ಸ್ಪೆಲ್ಲಿಂಗ್‌ನ ಸಮಸ್ಯೆ ಇರುತ್ತದೆ. ಭಾರತದಲ್ಲಷ್ಟೇ ಅಲ್ಲ ವಿಶ್ವದ ಎಲ್ಲೆಡೆ ಓದಿನ ಸಮಸ್ಯೆಯಿರುವ ಮಕ್ಕಳು ಸಾಮಾಜಿಕವಾಗಿ-ಆರ್ಥಿಕವಾಗಿ ಕೆಳವರ್ಗಕ್ಕೆ ಸೇರಿದವರಾಗಿರುತ್ತಾರೆ ಹಾಗೂ ಶೈಕ್ಷಣಿಕ ಸಾಧನೆಯಲ್ಲಿ ಹಿಂದುಳಿದಿರುತ್ತಾರೆ ಮತ್ತು ಒಟ್ಟಾರೆಯಾಗಿ ಅವರ ಸಾಧನೆಯ ಮಟ್ಟದಲ್ಲಿ ಕೊರತೆಯಿರುತ್ತದೆ (ಹ್ಯುಬರ್ಟ್ ಎ. ಕೋಲ್‌ಮನ್).

ಹೀಗೆ ಸಾಮಾಜಿಕ ಪ್ರತಿಕೂಲತೆ ಹೊಂದಿರುವ ಮಕ್ಕಳಿಗೆ ಹುಟ್ಟಿನಿಂದ ಬಂದಿರುವ ಸಮಸ್ಯೆಯು ಮನೆಯಲ್ಲಿನ ವಾತಾವರಣದಿಂದ ಮತ್ತಷ್ಟು ಉಲ್ಬಣಗೊಳ್ಳುತ್ತದೆ. ಮನೆಯಲ್ಲಿ ಓದು ಎಂದರೆ ಏನು ಎನ್ನುವ ಕಲ್ಪನೆಯೇ ಇರುವುದಿಲ್ಲ ಮತ್ತು ಓದಬೇಕೆಂಬ ಪ್ರೇರಣೆಯೂ ಇರುವುದಿಲ್ಲ. ಸಾಮಾಜಿಕ ಪ್ರತಿಕೂಲತೆಯನ್ನು ಹೊಂದಿರುವ ವರ್ಗಗಳ ಮಕ್ಕಳ ಶೈಕ್ಷಣಿಕ ಚಟುವಟಿಕೆಗಳಲ್ಲಿ ಪೋಷಕರ ಪಾತ್ರ ಹೆಚ್ಚುಕಡಿಮೆ ಇರುವುದೇ ಇಲ್ಲ. ಅಥವಾ ಇದ್ದರೂ ತುಂಬ ಕಡಿಮೆ ಇರುತ್ತದೆ. ಅವರು ಮಕ್ಕಳೊಡನೆ ಗುಣಾತ್ಮಕವಾಗಿ ಕಳೆಯುವ ಕಾಲ ತೀರಾ ಕಡಿಮೆ. ಭಾಷಾ ಕಲಿಕೆಯ ಸಾಮರ್ಥ್ಯ ರೂಪುಗೊಳ್ಳುತ್ತಿರುವ ಹಂತದಲ್ಲಿ ಮಕ್ಕಳೊಡನೆ ಪರಸ್ಪರ ಮಾತುಕತೆಯನ್ನಾಡುವುದು ಅಥವಾ ಪ್ರಿಟೆಂಡ್ ಪ್ಲೇ, ಅಥವಾ ಶೇರ್ಡ್ ಬುಕ್ ರೀಡಿಂಗ್ ಇವೆಲ್ಲವೂ ಮಕ್ಕಳಲ್ಲಿ ಭಾಷಾಸಾಮರ್ಥ್ಯವನ್ನು ಮತ್ತು ಶಬ್ದಭಂಡಾರವನ್ನು, ಕಲ್ಪನಾಶಕ್ತಿಯನ್ನು ಮತ್ತು ಊಹಿಸುವ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ. ತನ್ನನ್ನು ಇನ್ನೊಂದು ಸ್ಥಾನದಲ್ಲಿ ಊಹಿಸಿಕೊಳ್ಳುವ ಮೂಲಕ ಸಮಸ್ಯೆಗಳನ್ನು ಪರಿಹರಿಸುವ ಸಾಮರ್ಥ್ಯ, ಚಿಂತನೆಯಲ್ಲಿ ನಮ್ಯತೆ, ಸೃಜನಶೀಲತೆ ಇವೆಲ್ಲವೂ ಹೆಚ್ಚಾಗುತ್ತದೆ. ಆದರೆ ಪ್ರತಿಕೂಲತೆ ಹೊಂದಿರುವ ಮಕ್ಕಳಿಗೆ ಇಂತಹ ಅವಕಾಶ ಸಿಗುವುದು ತುಂಬ ಕಡಿಮೆ. ಏಕೆಂದರೆ ಹೆಚ್ಚಿನ ಬಾರಿ ಪೋಷಕರಿಬ್ಬರೂ ದುಡಿಯದಿದ್ದರೆ ಎರಡು ಹೊತ್ತಿನ ಊಟ ಸಿಗುವುದಕ್ಕೇ ಸಾಧ್ಯವಿಲ್ಲ. ಇನ್ನು ಹಲವು ಬಾರಿ ಅವರವು ಕೇವಲ ತಾಯಿಯೊಬ್ಬಳೇ ದುಡಿದು ನಿರ್ವಹಿಸುತ್ತಿರುವ ಮನೆಗಳು. ಹಾಗಾಗಿ ಹಿಡಿ ಅನ್ನಕ್ಕೆ ಮೈಮುರಿಯುವಷ್ಟು ದುಡಿಯಬೇಕಾಗುವ ಅವರಿಗೆ ಮೇಲಿನ ಯಾವುದೇ ಚಟುವಟಿಕೆಗಳಿಗೂ

ತ್ರಾಣ ಇರುವುದಿಲ್ಲ. ಅಷ್ಟೇ ಅಲ್ಲ, ಅದನ್ನೆಲ್ಲಾ ಯೋಚಿಸಲೂ ಸಮಯವಿರುವುದಿಲ್ಲ. ಮನೆಯಲ್ಲಿ ಈ ಮಕ್ಕಳನ್ನು ನೋಡಿಕೊಳ್ಳುವವರು ಆ ಮಕ್ಕಳಿಗಿಂತ ವಯಸ್ಸಿನಲ್ಲಿ ಒಂದು ನಾಲ್ಕೈದು ವರ್ಷ ದೊಡ್ಡದಿರುವ ಇನ್ನೊಂದು ಮಗು ಅಷ್ಟೇ. ಅದಕ್ಕೆ ಇದರೊಡನೆ ಮಾತನಾಡುವುದಕ್ಕಿಂತ ತಾನು ಆಡಬೇಕೆಂಬ ತವಕವೇ ಹೆಚ್ಚಾಗಿರುತ್ತದೆ. ಹಾಗಾಗಿ ಶೈಕ್ಷಣಿಕ ಪ್ರಗತಿಗೆ ಮೂಲವಸ್ತುಗಳಾದ ಭಾಷೆ ಹಾಗೂ ಅಮೂರ್ತ ಚಿಂತನೆಯ ಬೀಜಗಳು ಮೊಳೆಯದೆ ಹೋಗಿಬಿಡುತ್ತವೆ. ಈ ವಯಸ್ಸು ದಾಟಿಹೋದಮೇಲೆ ಎಷ್ಟೇ ಪ್ರಯತ್ನಿಸಿದರೂ ಈ ನ್ಯೂನತೆ ಉಳಿದೇ ಇರುತ್ತದೆ. ಟೂಕಿ- ಕ್ರೇಮರ್ ಟೆಸ್ಟ್ ಬಳಸಿಕೊಂಡು ಸೂಸನ್ ಲಿನ್ ಲುಟ್ಜ್ ಕ್ಲೌಡಾ ಅವರು ತಮ್ಮ ಮಹಾ ಪ್ರಬಂಧಕ್ಕಾಗಿ ಮಾಡಿರುವ ಅಧ್ಯಯನದಲ್ಲಿ ಮಕ್ಕಳ ಓದುವ ಹವ್ಯಾಸಕ್ಕೆ ಸಂಬಂಧಿಸಿದಂತೆ ಕೆಲವು ಮಹತ್ತರವಾದ ಮಾಹಿತಿಯನ್ನು ನೀಡುತ್ತಾರೆ. ಮೊದಲನೆಯದಾಗಿ, ಓದಬೇಕೆನ್ನುವುದು ಮಕ್ಕಳಲ್ಲಿ ಆಂತರಿಕವಾಗಿ ಪ್ರೇರೇಪಿತಗೊಂಡ ಪ್ರಕ್ರಿಯೆಯಲ್ಲ. ಎರಡನೆಯದಾಗಿ, ಓದುವ ಅಭ್ಯಾಸವನ್ನು ತುಂಬ ಮುಖ್ಯವೆಂದು ಭಾವಿಸುವ ತಮ್ಮ ಪೋಷಕರು, ಸಮಾನಸ್ಕಂದರು, ಹಾಗೂ ಮಕ್ಕಳ ಬದುಕಿನಲ್ಲಿ ಬಹು ಪ್ರಮುಖ ವ್ಯಕ್ತಿಗಳ ಪ್ರಭಾವ ಹಾಗೂ ಬೆಂಬಲ ಮಕ್ಕಳಲ್ಲಿ ಓದಬೇಕೆನ್ನುವ ಪ್ರಜ್ಞೆಯನ್ನು ರೂಪಿಸುತ್ತದೆ. ಹಾಗಾಗಿ ಓದುವ ಹವ್ಯಾಸ ಮಕ್ಕಳಲ್ಲಿ ಸಹಜವಾಗಿ ಬಂದುಬಿಡುವುದಿಲ್ಲ. ಸಾಮಾಜಿಕ ಪ್ರತಿಕೂಲತೆಯಿರುವ ಮಕ್ಕಳ ವಿಷಯದಲ್ಲಿ ಇದ್ಯಾವುದೂ ಸಾಧ್ಯವಾಗುವುದಿಲ್ಲ.

ಇಲ್ಲಿ ಮಧ್ಯಮ ಹಾಗೂ ಶ್ರೀಮಂತವರ್ಗದವರೂ ಕೆಲಸಕ್ಕೆ ಹೋಗುತ್ತಾರಲ್ಲಾ, ಹಾಗಾದರೆ ಆ ಮಕ್ಕಳಲ್ಲಿ ಈ ಸಮಸ್ಯೆ ಉಂಟಾಗುವುದಿಲ್ಲವೇ ಎನ್ನುವ ಪ್ರಶ್ನೆ ಸಹಜವಾಗಿಯೇ ಹುಟ್ಟಿಕೊಳ್ಳುತ್ತದೆ. ಆದರೆ ಅಲ್ಲಿ ಮಕ್ಕಳಿಗೆ ಈ ಬಗೆಯ ಸಮಸ್ಯೆ ಹುಟ್ಟಿಕೊಳ್ಳುವುದಿಲ್ಲ, ಏಕೆಂದರೆ ಈ ಹಂತದಲ್ಲಿ ಮಕ್ಕಳಿಗೆ ಯಾವ ವಾತಾವರಣ ಬೇಕೋ ಅದನ್ನವರು ಹಣದ ಮೂಲಕ ಹಾಗೂ ಸಾಮಾಜಿಕ ನೆಟ್‌ವರ್ಕ್ ಮೂಲಕ ಕೊಳ್ಳಬಲ್ಲರು. ಇನ್ನು ಕೆಲವು ಸಲ ಮನೆಯಲ್ಲಿ ಅಥವಾ ಗೆಳೆಯರ ಇಲ್ಲವೇ ಸಂಬಂಧಿಕರ ಮನೆಯಲ್ಲಿ ಇದಕ್ಕೆ ಪರ್ಯಾಯ ದೊರಕುತ್ತಿರುತ್ತದೆ. ಈ ವರ್ಗದ ಜನರ ಸಾಮಾಜಿಕ ಬದುಕಿನಲ್ಲಿ ವಿಭಿನ್ನ ಬಗೆಯ ಹಾಗೂ ವೃತ್ತಿಯ ಜನರು ಒಡನಾಡುತ್ತಿರುತ್ತಾರೆ. ವೈವಿಧ್ಯಮಯವಾದ



ಸನ್ನಿವೇಶಗಳಿಗೆ, ವಿಚಾರಗಳಿಗೆ ಮಕ್ಕಳು ತೆರೆದುಕೊಳ್ಳುತ್ತಾ ಹೋಗುತ್ತಾರೆ. ಹೀಗಾಗಿ ಅವರು ಬೆಳೆಯುವ ಪರಿ ಬದಲಾಗುತ್ತಾ ಹೋಗುತ್ತದೆ. ಆದರೆ ನಿಮ್ನ ವರ್ಗದ ವಿಚಾರದಲ್ಲಿ ಇದು ಕನಸಿನ ಮಾತೇ ಸರಿ. ಹಾಗಾಗಿ ಈ ಮಕ್ಕಳಿಗೆ ಪೇರೆಂಟಿಂಗ್ ಎನ್ನುವುದು ತಂದೆತಾಯಿಯರು ಮತ್ತು ಸುತ್ತಲಿನ ಸಮಾಜ ಎರಡೂ ಕಡೆಯಿಂದ ದೊರಕುವುದಿಲ್ಲ. ಹೀಗಿರುವಾಗ ಗುಣಮಟ್ಟದ ಪೇರೆಂಟಿಂಗ್ ಬಗ್ಗೆ ಮಾತನಾಡುವುದು ಹಾಸ್ಯಾಸ್ಪದವಾಗುತ್ತದೆ. ಈ ಸಂದರ್ಭದಲ್ಲಿ ಮತ್ತೊಮ್ಮೆ ಮೈಸೂರಿನ ಕುದುರೆಮಾಳದ ಅನುಭವವನ್ನು ಹಂಚಿಕೊಳ್ಳುವುದಕ್ಕೆ ಬಯಸುತ್ತೇನೆ. ಕುದುರೆಮಾಳದಲ್ಲಿ ಮಕ್ಕಳೊಡನೆ ಒಡನಾಡಲು ಹೋಗುತ್ತಿದ್ದಾಗ ಸಂಜೆ ಸುಮಾರು ೬ ಗಂಟೆಯಾಗಿರುತ್ತಿತ್ತು. ಮಕ್ಕಳು ಪಾಠ ಕಲಿಯುತ್ತಾ ಇದ್ದಾಗ ಕೆಲಸ ಮುಗಿಸಿ ಒಂದಿಷ್ಟು ಕುಡಿದು ಬರುತ್ತಿದ್ದ ಹೆಚ್ಚಿನ ಅಪ್ಪ ಅಮ್ಮಂದಿರು ಆ ಮಕ್ಕಳಿಗೆ ಜೋರುಮಾಡಿ 'ಒಂದು ರಾಶಿ ಕೆಲಸ ಇದೆ, ಎಲ್ಲಾ ಮುಗಿಸಲು ಬನ್ನಿ' ಎಂದು ಕರೆದುಕೊಂಡು ಹೋಗುತ್ತಿದ್ದ ಸನ್ನಿವೇಶಗಳಿದ್ದವು. ಕುದುರೆಮಾಳದೊಳಗಿದ್ದ ಸರ್ಕಾರಿ ಶಾಲೆಗೆ ಸುತ್ತಮುತ್ತಲಿನ ಗಂಗೋತ್ರಿ ಬಡಾವಣೆ ಅಥವಾ ಕುಕ್ಕರಹಳ್ಳಿಯಲ್ಲಿನ ಯಾವ ಮಕ್ಕಳೂ ದಾಖಲಾಗುತ್ತಿರಲಿಲ್ಲ ಎನ್ನುವ ವಿಚಾರವನ್ನು ಅದೇ ಸರ್ಕಾರಿ ಶಾಲೆಯಲ್ಲಿ ಕೆಲಸ ಮಾಡುತ್ತಿದ್ದ ಶಿಕ್ಷಕರೊಬ್ಬರು ವಿಷಾದದಿಂದ ತಿಳಿಸಿದರು. ಹಾಗಾಗಿ ಮತ್ತೆ ಆ ಶಾಲೆಯಲ್ಲಿ ಇರುತ್ತಿದ್ದವರು ಅದೇ ಕಾಲೋನಿಯ ಮಕ್ಕಳು. ಕೊನೆಗೂ ಅವರಿಗೆ ದಕ್ಕುತ್ತಿದ್ದುದು ಅದೇ ವಾತಾವರಣ, ಅದೇ ಭಾಷೆ ಮತ್ತು ಅದೇ ಮಾತು. ಹಾಗಾಗಿ ಹೊರಗಿನ ಬದುಕಿನ ಕಿಟಕಿಗಳು ತೆರೆಯುತ್ತಿದ್ದ ಸನ್ನಿವೇಶಗಳು ತುಂಬ ಅಪರೂಪವಾಗಿದ್ದವು. ಇನ್ನೂ ದುರಂತವೆಂದರೆ, ಅವರು ಅಲ್ಲೇ ಹತ್ತಿರದ ಕುಕ್ಕರಹಳ್ಳಿ ಶಾಲೆಗೆ ಹೈಸ್ಕೂಲ್ ಓದಲು ಸೇರಿದರೆ ಅಲ್ಲಿಯೂ ಅವರಿಗೆ ದಕ್ಕಿದ್ದು ತಾರತಮ್ಯದ ಆತಿಥ್ಯವೇ ಎನ್ನುವುದು ಕಾಲೋನಿಯ ವಿದ್ಯಾರ್ಥಿಯೊಬ್ಬರ ನೋವು.

ಇಂತಹ ಹಿನ್ನೆಲೆಯಿಂದ ಬರುವ ವಿದ್ಯಾರ್ಥಿಗಳಿಗೆ ಶಾಲೆಯ ಮೇಲಿನ ಅವಲಂಬನೆ ತುಂಬ ಹೆಚ್ಚಾಗಿರುತ್ತದೆ. ಆದರೆ ಅಲ್ಲಿ ಕೂಡ ಅವರಿಗೆ ತೊಂದರೆಯೇ ಎದುರಾಗುತ್ತದೆ. ಏಕೆಂದರೆ ನಮ್ಮ ಒಟ್ಟು ಶಿಕ್ಷಣ ವ್ಯವಸ್ಥೆ ರೂಪುಗೊಂಡಿರುವುದು ಈ ವಯಸ್ಸಿನ ಮಕ್ಕಳಿಗೆ ಮತ್ತು ಈ ತರಗತಿಯ ಮಕ್ಕಳಿಗೆ ಇಷ್ಟು ಗೊತ್ತಿರುತ್ತದೆ ಅಥವಾ ಗೊತ್ತಿರಬೇಕು ಮತ್ತು ಇಲ್ಲಿಂದ ಮುಂದಕ್ಕೆ ಅದನ್ನು ಕಲಿಸುತ್ತೇವೆ ಎನ್ನುವ ಪೂರ್ವ ಕಲ್ಪನೆಯೊಂದಿಗೆ. ಆದರೆ ವಾಸ್ತವವಾಗಿ ಅದು ಹಾಗಾಗಿರುವುದಿಲ್ಲ. ಅಸಮವಾದ ಬೌದ್ಧಿಕ ಬೆಳವಣಿಗೆ ಇರುವ, ಬಗೆಬಗೆಯ ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ತರತಮಗಳಿರುವ ಯಾವುದೇ ದೇಶದಲ್ಲಿ, ಅದರಲ್ಲೂ ಮುಖ್ಯವಾಗಿ ಭಾರತದಲ್ಲಿ ವಿದ್ಯಾರ್ಥಿಗಳಲ್ಲಿ ಸಮಾನವಾದ ಮಟ್ಟ ಇರುವುದಿಲ್ಲ. ಹಾಗಾಗಿ ಸಮಾನವಾದ ಮಟ್ಟ ಇದೆ ಎಂದು ಭಾವಿಸಿಕೊಂಡುಬಿಡುವುದು ಈಗಾಗಲೇ ಶಿಕ್ಷಣಕ್ಕೆ ಸಂಬಂಧಿಸಿದಂತೆ ಇರುವ ಪ್ರತಿಕೂಲತೆಯನ್ನು ಮತ್ತಷ್ಟು ತೀವ್ರಗೊಳಿಸುತ್ತದೆ. ಇದರಿಂದಾಗಿ ಅವರು ಅನುಭವಿಸುವ ವಿಫಲತೆ ಹಾಗೂ ಸೋಲು ಅವರಲ್ಲಿ ಹತಾಶೆಯನ್ನು ಹುಟ್ಟಿಸುತ್ತಾ ಹೋಗುತ್ತದೆ. ನಿಧಾನವಾಗಿ ಅವರು ಶಿಕ್ಷಣದಿಂದ ವಿಮುಖರಾಗುತ್ತಾ ಹೋಗುತ್ತಾರೆ.

ಇಂತಹ ಕುಟುಂಬಗಳಿಂದ ಬಂದ ಮಕ್ಕಳಿಗೆ ಮನೆಯಿಂದ ಶಾಲೆಯೆಡೆಗೆ ಆಗುವ ಪಲ್ಲಟ ತುಂಬ ಕಷ್ಟಕರವಾಗಿರುತ್ತದೆ. ಎರಡೂ ಕಡೆಯಲ್ಲಿನ ಮೌಲ್ಯಗಳು, ಅಭ್ಯಾಸಗಳು, ಭಾಷೆ, ನುಡಿಗಟ್ಟುಗಳು ಮತ್ತು ವಾತಾವರಣ ಇವೆಲ್ಲವೂ ತುಂಬ ಬೇರೆಯಾಗಿರುತ್ತವೆ. ಶಾಲೆ ಅವರಿಗೆ ಮನೆಯ ಒಂದು ತಾರ್ಕಿಕ ಮುಂದುವರಿಕೆಯಾಗಿರುವುದಿಲ್ಲ. ಹೀಗಾಗಿ ಪಠ್ಯಕ್ರಮಕ್ಕೆ ಹೊಂದಿಸಿಕೊಳ್ಳುವುದರ ಜೊತೆಗೆ ಅಲ್ಲಿನ ವಾತಾವರಣ ಹಾಗೂ ಭಾಷೆಗೆ ತಮ್ಮನ್ನು ತಾವು ಹೊಂದಿಸಿಕೊಳ್ಳುವುದು ಪ್ರಾರಂಭದಲ್ಲಿ ತುಂಬ ಪ್ರಯಾಸಕರವಾಗಿ

ಬಿಡುತ್ತದೆ. ಆದರೆ ಮಧ್ಯಮ ಮತ್ತು ಮೇಲ್ವರ್ಗದ ಮಕ್ಕಳ ವಿಚಾರದಲ್ಲಿ ಹೀಗಾಗುವುದಿಲ್ಲ. ಇದನ್ನು ಈ ಹಿಂದೆಯೇ ಗ್ರಾಂಶಿ ಗುರುತಿಸಿದ್ದಾರೆ: ''ಬೌದ್ಧಿಕವಾಗಿ ಮೇಲ್‌ಸ್ತರದ ಕುಟುಂಬಗಳ ಮಕ್ಕಳಿಗೆ ಕೌಟುಂಬಿಕ ವಾತಾವರಣವು ಶಾಲೆಯ ಅವಧಿಯನ್ನು ಮುಂದುವರಿಸಿ, ಪೂರೈಸಲು ಅವಶ್ಯಕವಾಗುವ ತಯಾರಿಯಾಗಿರುತ್ತದೆ. ಶೈಕ್ಷಣಿಕ ಪ್ರಕ್ರಿಯೆಯನ್ನು ಸುಗಮಗೊಳಿಸುವ ಚಿಂತನೆ ಹಾಗೂ ಧೋರಣೆಗಳು ಅವರಿಗೆ ರಕ್ತಗತವಾಗಿರುತ್ತವೆ. ಶಾಲೆ ನಿರೀಕ್ಷಿಸುವ ಸಾಹಿತ್ಯಕ ಭಾಷೆ ಹಾಗೂ ಅಭಿವ್ಯಕ್ತಿಯನ್ನು ಅವರು ಮನೆಯಲ್ಲೇ ರೂಢಿಸಿಕೊಂಡಿರುತ್ತಾರೆ. ಇದು ಅವರ ಶಾಲಾ ಜೀವನವನ್ನು ಸುಲಭಗೊಳಿಸಿ, ತ್ವರಿತಗೊಳಿಸುತ್ತದೆ ಮತ್ತು ಅದು ಲಾಭದಾಯಕವಾಗುವಂತೆ ಮಾಡುತ್ತದೆ.''

ಕುಟುಂಬದ ಆರ್ಥಿಕ ಮಟ್ಟಕ್ಕೂ ಮತ್ತು ಶಾಲೆಯ ಆಯ್ಕೆಗೂ ತುಂಬ ನೇರವಾದ ಸಂಬಂಧವಿದೆ. ಬಡತನದ ರೇಖೆಗಿಂತ ಕೆಳಗಿರುವ ಮತ್ತು ಆರ್ಥಿಕವಾಗಿ ಹಿಂದುಳಿದಿರುವ ಮಕ್ಕಳಿಗೆ ಭಾರತದಂತಹ ದೇಶದಲ್ಲಿ ಖಾಸಗಿ ಶಾಲೆಯ ಆಯ್ಕೆ ಸಾಧ್ಯವೇ ಇಲ್ಲ ಎನ್ನಬಹುದು. ಹಾಗಾಗಿ ಅವರು ಅನಿವಾರ್ಯವಾಗಿ ಸಾರ್ವಜನಿಕ ಇಲ್ಲವೆ ಸರ್ಕಾರಿ ಶಾಲೆಗಳನ್ನು ಆಯ್ಕೆಮಾಡಿಕೊಳ್ಳಬೇಕಾಗುತ್ತದೆ. ಆ ಶಾಲೆಗಳಲ್ಲಿ ಉತ್ತಮ ಸೌಲಭ್ಯಗಳು ಹಾಗೂ ಶಿಕ್ಷಕರು ಲಭ್ಯವಿರಬಹುದು ಅಥವಾ ಇಲ್ಲದಿರಬಹುದು. ಆದರೆ ಬೇರೆ ಜಾತಿಯ ಮಕ್ಕಳು ಹೆಚ್ಚು ಹೆಚ್ಚು ಖಾಸಗಿ ಶಾಲೆಗಳಿಗೆ ಸೇರುತ್ತಿರುವುದರಿಂದ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯೆನ್ನುವುದು ನಿಧಾನವಾಗಿ ಪರಿಶಿಷ್ಟ ಜಾತಿಯ ಮಕ್ಕಳಿಗಾಗಿ ಮಾತ್ರ ಇರುವ ವ್ಯವಸ್ಥೆಯಾಗಿ ಪರಿವರ್ತನೆಯಾಗುತ್ತಿದೆ ಎನ್ನುವ ಜಿಲ್ಲಾ ಶಿಕ್ಷಣಾಧಿಕಾರಿಯೊಬ್ಬರ ಹೇಳಿಕೆ ತುಂಬ ಮಾರ್ಮಿಕವಾಗಿದೆ ಮತ್ತು ವಾಸ್ತವಕ್ಕೆ ಹಿಡಿದ ಕನ್ನಡಿಯಾಗಿದೆ.

ಕುಟುಂಬದ ಒಟ್ಟಾರೆ ಶೈಕ್ಷಣಿಕ ಮಟ್ಟ ಹಾಗೂ ಸಾಧನೆಗೂ ಮತ್ತು ಮಕ್ಕಳು ಉನ್ನತ ಶಿಕ್ಷಣವನ್ನು ಪಡೆಯುವುದಕ್ಕೂ ನಿಕಟವಾದ ಸಂಬಂಧವಿದೆ. ಪೋಷಕರಲ್ಲಿ ಕೊನೇಪಕ್ಷ ಒಬ್ಬರಾದರೂ ಕಾಲೇಜು ಅಥವಾ ವಿಶ್ವವಿದ್ಯಾನಿಲಯ ಮಟ್ಟದ ಶಿಕ್ಷಣ ಹೊಂದಿಲ್ಲದ ಮನೆಗಳಲ್ಲಿ ಉನ್ನತ ಶಿಕ್ಷಣ ಪಡೆಯುವ ಮಕ್ಕಳ ಸಂಖ್ಯೆ ಸಾಪೇಕ್ಷವಾಗಿ ಕಡಿಮೆಯಿರುತ್ತದೆ. ಜೊತೆಗೆ ಪಾಲಕರ ಶೈಕ್ಷಣಿಕ ಮಟ್ಟಕ್ಕೂ ವಿದ್ಯಾರ್ಥಿಗಳು ಆರಿಸಿಕೊಳ್ಳುವ ಕೋರ್ಸುಗಳಿಗೂ ತುಂಬ ಸಂಬಂಧವಿದೆ. ಮೈಸೂರಿನ ಕೆಲವು ಕಾಲೇಜುಗಳಲ್ಲಿ ಸಮೀಕ್ಷೆ ನಡೆಸಿದಾಗ ವಿಜ್ಞಾನ ಓದುವ ಹೆಚ್ಚಿನ ವಿದ್ಯಾರ್ಥಿಗಳ ತಂದೆತಾಯಿಯರು ಪಿಯುಸಿ ಶಿಕ್ಷಣವನ್ನಾದರೂ ಮುಗಿಸಿರುತ್ತಾರೆ ಮತ್ತು ಸುಮಾರಾಗಿ ಒಳ್ಳೆಯ ಕೆಲಸದಲ್ಲಿರುತ್ತಾರೆ. ಇನ್ನು ಕಾಮರ್ಸ್ ಮತ್ತು ಮ್ಯಾನೇಜ್‌ಮೆಂಟ್ ವಿಭಾಗದಲ್ಲಿ ಕೂಡ ಹಾಗೆ. ಇನ್ನು ಮಾನವಿಕ ವಿಭಾಗದಲ್ಲಿ ಇರುವ ಹೆಚ್ಚಿನ ವಿದ್ಯಾರ್ಥಿಗಳು ಎಲ್ಲಾ ರೀತಿಯಿಂದಲೂ ತೀರಾ ಹಿಂದುಳಿದ ಹಾಗೂ ಅನಕ್ಷರಸ್ಥ ಕುಟುಂಬಗಳಿಂದ ಬಂದಿರುತ್ತಾರೆ, ಎಷ್ಟೋ ಬಾರಿ ಅವರೇ ಮೊದಲ ತಲೆಮಾರಿನ ಅಕ್ಷರಸ್ಥರಾಗಿರುತ್ತಾರೆ, ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿರುತ್ತಾರೆ, ಕಡಿಮೆ ಸಂಬಳದ ಕೆಲಸಗಳಿಗೆ ಸೇರಿರುತ್ತಾರೆ ಇಲ್ಲವೇ ಗ್ರಾಮೀಣ ಹಿನ್ನೆಲೆಯಿಂದ ಬಂದಿರುತ್ತಾರೆ. ಹಾಗಾಗಿ ಅಲ್ಲಿ ಕಲಿಯುವ ವಾತಾವರಣವೇ ಇರುವುದಿಲ್ಲ. ಮನೆಯಲ್ಲಿ ಹಾಗೂ ಕಾಲೇಜಿನಲ್ಲಿ ಶೈಕ್ಷಣಿಕವಾಗಿ ಒಂದು ಒತ್ತಾಸೆ ದೊರಕುವುದಿಲ್ಲ. ಹೀಗಾಗಿ ಮುಂದೆ ಅವರು ಸೇರಿಕೊಳ್ಳುವ ಕೋರ್ಸುಗಳು ಮತ್ತು ಕಾಲೇಜುಗಳು ಅವರನ್ನು ಬದುಕಿನ ಔನ್ನತ್ಯದ ಕಡೆಗೆ ಕೊಂಡೊಯ್ಯುವ ಕೋರ್ಸುಗಳು ಮತ್ತು ಸಂಸ್ಥೆಗಳಾಗಿರುವುದಿಲ್ಲ.

ಒಂದು ಕೌಟುಂಬಿಕ ವ್ಯವಸ್ಥೆಯಲ್ಲಿ ಯಾವ ಮೌಲ್ಯಗಳೊಡನೆ ಮತ್ತು ಯಾವ ಮನಸ್ಥಿತಿಯಲ್ಲಿ ಮಕ್ಕಳು ಬೆಳೆಯುತ್ತಾರೆ ಎನ್ನುವುದು ಕೂಡ ಅವರ ಶಿಕ್ಷಣವನ್ನು ನಿರ್ಧರಿಸುವ ಒಂದು ನಿರ್ಣಾಯಕ ಅಂಶ. ಹಾಗಾಗಿ ಶಿಕ್ಷಣ ಎನ್ನುವುದನ್ನು ಮಧ್ಯಮ ಹಾಗೂ ಮೇಲ್ವರ್ಗದ ಮಕ್ಕಳು ಮತ್ತು ಸಾಮಾಜಿಕ ಪ್ರತಿಕೂಲತೆ ಇರುವ ಮಕ್ಕಳು ಗ್ರಹಿಸಿಕೊಳ್ಳುವ ಕ್ರಮವೇ ಬೇರೆಯಾಗುತ್ತದೆ. ಮೊದಲನೆಯ ವರ್ಗಕ್ಕೆ ಶಿಕ್ಷಣವನ್ನು ತಕ್ಷಣದ ಪ್ರತಿಫಲವಿಲ್ಲದೆ ಜ್ಞಾನಕ್ಕಾಗಿಯೇ ಜ್ಞಾನ ಎಂದು ಕಲಿತು, ಅಂತರ್ಗತಗೊಳಿಸಿಕೊಳ್ಳುವ ಮನಃಸ್ಥಿತಿಯಿರುತ್ತದೆ. ಹಾಗಾಗಿ ಜ್ಞಾನಾರ್ಜನೆ ಎನ್ನುವುದು ಅವರ ದಿನಚರಿಯ ಭಾಗವಾಗಿಬಿಟ್ಟಿರುತ್ತದೆ. ಅವರ ಬದುಕಿನ ಕ್ರಮವೇ ಆಗಿಬಿಟ್ಟಿರುತ್ತದೆ. ಅಂದರೆ ಅದನ್ನು ಶಿಕ್ಷಣದ ಪರಿಭಾಷೆಯಲ್ಲಿಯೇ ಹೇಳುವುದಾದರೆ **ಡೆಫರ್ಡ್ ಗ್ರಾಟಿಫಿಕೇಷನ್** ಎನ್ನುವುದು ಅವರಿಗೆ ಸಾಧ್ಯ. ಹಾಗಾಗಿ ಜ್ಞಾನಕ್ಕಾಗಿಯೇ ಜ್ಞಾನ ಎನ್ನುವುದು ಈ ವರ್ಗದ ವಿದ್ಯಾರ್ಥಿಗಳಿಗೆ ಮಾತ್ರ ಸಾಧ್ಯವಾಗುತ್ತದೆ. ಆದರೆ ಸಾಮಾಜಿಕ ಪ್ರತಿಕೂಲತೆಯ ವಿದ್ಯಾರ್ಥಿಗಳ ಒಟ್ಟು ಮನಸ್ಥಿತಿಯೇ ಈ ಬಗೆಯದಲ್ಲ. ಅವರಿಗೆ ವರ್ತಮಾನವೇ ಎಲ್ಲವೂ ಆಗಿರುತ್ತದೆ. ಯಾವ ಶಿಕ್ಷಣ ಇಲ್ಲಿ, ಈಗ, ಈ ಕ್ಷಣಕ್ಕೆ ಸಂಬಂಧಿಸಿರುತ್ತದೋ ಅದು ಮಾತ್ರವೇ ಅವರಿಗೆ ಅರ್ಥಪೂರ್ಣ. ಇದು ಮುಂದೆ ಉಪಯೋಗವಾಗುತ್ತದೆ, ನಾಳೆ ಇದು ಉಪಯೋಗಕ್ಕೆ ಬರುತ್ತದೆ ಎನ್ನುವಂತಹ ಮಾತುಗಳಿಗೆ ಅವರ ಬಳಿ ಅವಕಾಶವೇ ಇಲ್ಲ. ಕುದುರೆಮಾಳದಲ್ಲಿ ಇದು ಮತ್ತೆ ಅನುಭವಕ್ಕೆ ಬಂದಿತು. ಇಂಗ್ಲಿಷ್ ಮಾತನಾಡಲು ಪ್ರಯತ್ನ ಮಾಡುವ ದಿನ ಮಕ್ಕಳು ತುಂಬ ಹೊತ್ತು ತುಂಬ ಉತ್ಸುಕತೆಯಿಂದ ಉಳಿಯುತ್ತಿದ್ದರು. ಆದರೆ ಬರೆಯುವುದು ಅಥವಾ ಲೆಕ್ಕ ಮಾಡುವುದು ಎಂದಾಗ ಏನಾದರೂ ಕಾರಣ ಹೇಳಿ ಹೆಚ್ಚಿನವರು ಹೋಗಿಬಿಡುತ್ತಿದ್ದರು, ಇನ್ನು ಕೆಲವರು ಮುಲಾಜಿಗಾಗಿ ಉಳಿಯುತ್ತಿದ್ದರು ಆದರೆ ಉತ್ಸಾಹಿತರಾಗಿರುತ್ತಿರಲಿಲ್ಲ. ಬಹಳಷ್ಟು ಮಕ್ಕಳು ಓದುವುದನ್ನು ಕೂಡ ಅಷ್ಟಾಗಿ ಇಷ್ಟಪಡುತ್ತಿರಲಿಲ್ಲ. ಹೀಗೆ ಅವರ ಇಡೀ ಮನಃಸ್ಥಿತಿ ಸಾಮಾನ್ಯವಾಗಿ ಯುಟಿಲಿಟೇರಿಯನ್ ಆಗಿರುತ್ತದೆ. ಈ ಮನಸ್ಥಿತಿಯಿಂದಾಗಿ ಅವರಿಗೆ ಅಕೆಡೆಮಿಕ್ ಆಗಿ ಆಲೋಚಿಸುವುದು ಸ್ವಲ್ಪ ಕಷ್ಟವಾಗುತ್ತದೆ. ಹಾಗಾಗಿಯೇ ಫ್ರೇಯರೆಯಂಥ ಚಿಂತಕರು ದಮನಿತರ ಕಲಿಕೆಗೆ ಉದ್ದೇಶ ಸಾಧನೆಯ ಮೌಲ್ಯವಿರಬೇಕು ಎನ್ನುತ್ತಾರೆ (ಪೆಡಗಾಜಿ ಆಫ್ ದಿ ಅಪ್ರೆಸ್ಡ್ ಶುಡ್ ಹ್ಯಾವ್ ಇನ್‌ಸ್ಟ್ರುಮೆಂಟಲ್ ವ್ಯಾಲ್ಯೂಸ್).

ಅಂತೆಯೇ ಶಾಲೆ ಹಾಗೂ ಕಾಲೇಜುಗಳಲ್ಲಿ ಅದರಲ್ಲೂ ನಿರ್ದಿಷ್ಟವಾಗಿ ಕಾಲೇಜುಗಳಲ್ಲಿ ತರಗತಿಗೆ ಬಾರದೆ ತಪ್ಪಿಸಿಕೊಳ್ಳುವ ವಿದ್ಯಾರ್ಥಿಗಳು (ಅಬ್ಸೆಂಟೀಇಸಂ) ಅಥವಾ/ಮತ್ತು ತರಗತಿಗಳಿಗೆ ತಡವಾಗಿ ಬರುವ ವಿದ್ಯಾರ್ಥಿಗಳೂ ಕೂಡ ಸಾಮಾಜಿಕ ಪ್ರತಿಕೂಲತೆಯ ಮಕ್ಕಳೇ ಆಗಿರುತ್ತಾರೆ. ನಂಜನಗೂಡಿನ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ವಿದ್ಯಾರ್ಥಿಗಳು ಕಾಲೇಜಿಗೆ ತಡವಾಗಿ ಬರುವ ಅಥವಾ ತಪ್ಪಿಸಿಕೊಳ್ಳುವ ವಿದ್ಯಾರ್ಥಿಗಳು ಯಾರು ಮತ್ತು ಹಾಗಾಗಲು ಕಾರಣವೇನು ಎನ್ನುವ ಮಾಹಿತಿಯನ್ನು ಸಂಗ್ರಹಿಸಲು ತಮ್ಮ ಕಾಲೇಜಿನ ಹಾಗೂ ಪಕ್ಕದ ಕಾಲೇಜಿನ ವಿದ್ಯಾರ್ಥಿಗಳನ್ನು ಕುರಿತು ಸಮೀಕ್ಷೆಯನ್ನು ನಡೆಸಿದರು. ಆರ್ಥಿಕ ತೊಂದರೆ, ದೂರದ ಸ್ಥಳದಿಂದ ಕಾಲೇಜಿಗೆ ನಡೆದು ಬರಬೇಕಾಗಿರುವುದು, ಮನೆ ಕೆಲಸ, ಅಂಗಡಿ ಕೆಲಸ, ಸರ್ಕಾರಿ ಬಸ್ಸು ಬಿಟ್ಟು ಬೇರೆ ಸಾರಿಗೆ ವ್ಯವಸ್ಥೆ ಮಾಡಿಕೊಳ್ಳುವುದಕ್ಕೆ ಸಾಧ್ಯವಿಲ್ಲದಿರುವುದು, ಜಾತಿಯ ಕಾರಣಕ್ಕೆ ವಸತಿಯು ಊರಿನ ಹೊರವಲಯದಲ್ಲಿರುವುದು, ಹಸಿವು, ಬಿಸಿಲು, ಮಳೆ, ಆಯಾಸ, ನಿಶ್ಶಕ್ತತೆ, ತಾಯಿತಂದೆಯರು ಕೃಷಿಕಾರ್ಮಿಕರಾಗಿರುವ ಸಂದರ್ಭದಲ್ಲಿ ಕೃಷಿ ಕೆಲಸಕ್ಕೆ ಹೋಗಬೇಕಾಗಿರುವ ಅನಿವಾರ್ಯ, ಮುಂತಾದ ಅಂಶಗಳು ಇದಕ್ಕೆ ಕಾರಣ ಎನ್ನುವುದು ಸಮೀಕ್ಷೆಯಿಂದ ಮೂಡಿಬಂದಿತು. ಈ ಹಿನ್ನೆಲೆಯಲ್ಲಿ ಇಂದು ಸರ್ಕಾರಿ ಶಾಲೆಗಳನ್ನು ಬೇರೆ ಬೇರೆ ಕಾರಣ ನೀಡಿ ಮುಚ್ಚುತ್ತಿರುವುದರ ದುಷ್ಪರಿಣಾಮವನ್ನು ಅರ್ಥಮಾಡಿಕೊಳ್ಳಬೇಕಾದ ತುರ್ತು ನಮ್ಮೆಲ್ಲರ ಹೊಣೆಗಾರಿಕೆಯಾಗುತ್ತದೆ.

ಗ್ರಾಮೀಣ ಹಿನ್ನೆಲೆ ಮತ್ತು ಕೃಷಿ ಇವುಗಳು ಸಂಯುಕ್ತವಾಗಿ ಈಗಾಗಲೇ



ಪ್ರತಿಕೂಲತೆ ಹೊಂದಿರುವ ಮಕ್ಕಳಿಗೆ ಮತ್ತಷ್ಟು ತೊಂದರೆ ಉಂಟುಮಾಡುತ್ತದೆ. ಸಾಮಾನ್ಯವಾಗಿ ಕಳೆ ಕೀಳುವ, ನಾಟಿ ಮಾಡುವ ಹಾಗೂ ಕುಯಿಲಿನ ಸಂದರ್ಭಗಳಲ್ಲಿ ಕೃಷಿಕಾರ್ಮಿಕರ ಮಕ್ಕಳ ಶೈಕ್ಷಣಿಕ ಚಟುವಟಿಕೆಗೆ ತುಂಬ ತೊಂದರೆ ಉಂಟಾಗುತ್ತದೆ. ಹಾಗೆ ತುಂಬ ಕೆಲಸವಿರುವ ಸಂದರ್ಭದಲ್ಲಿ ಹೆಚ್ಚಿನ ಗಂಡುಮಕ್ಕಳು ಕೆಲಸಕ್ಕೆ ಹೋಗುತ್ತಾರೆ ಮತ್ತು ಹುಡುಗಿಯರು ಮನೆಗೆಲಸದ ಹೊಣೆಯನ್ನು ಸಂಪೂರ್ಣವಾಗಿ ಹೊರಬೇಕಾಗುತ್ತದೆ. ಹಾಗಾಗಿ ಈ ಮಕ್ಕಳಿಗೆ ಶಿಕ್ಷಣದತ್ತ ಕೇಂದ್ರೀಕರಿಸುವುದಕ್ಕೆ ಆಗುವುದಿಲ್ಲ. ಇನ್ನು ಕೆಲವು ಬಾರಿ ಆರ್ಥಿಕ ಹಾಗೂ ನೈಸರ್ಗಿಕ ಸಮಸ್ಯೆಗಳ ಕಾರಣಕ್ಕಾಗಿ ಅವರು ತಮ್ಮೂರನ್ನು ಬಿಟ್ಟು ಬೇರೆ ಕಡೆಗೆ ಹೋಗಬೇಕಾಗಿ ಬಂದ ಸಂದರ್ಭದಲ್ಲಿಯೂ ಅವರ ಶಿಕ್ಷಣ ಸಂಪೂರ್ಣವಾಗಿ ನಿರ್ಲಕ್ಷ್ಯಕ್ಕೊಳಗಾಗುತ್ತದೆ. ಈ ಸಂದರ್ಭವನ್ನು ಕುರಿತು ಅಮರ್ತ್ಯ ಸೇನ್ ತಮ್ಮ ಲಾಕ್ಡ್ ಹೋಮ್ಸ್ ಅಂಡ್ ಎಂಪ್ಟಿ ಸ್ಕೂಲ್ಸ್ ಪುಸ್ತಕದಲ್ಲಿ ಸಾಕಷ್ಟು ವಿವರವಾಗಿ ಪ್ರಸ್ತಾಪಿಸುತ್ತಾರೆ.

ಹೀಗಿದ್ದಾಗ ಶಿಕ್ಷಣದಲ್ಲಿ ಒಂದು ಏಕರೂಪ ಮಾನದಂಡವನ್ನು ಇಟ್ಟುಕೊಂಡು ಗುಣಮಟ್ಟ ಅಥವಾ ಉತ್ಕೃಷ್ಟತೆ ಎಂದು ಮಾತನಾಡುವುದಾದರೆ ಅದು ಈ ಸಮಾಜದ ವಾಸ್ತವಿಕತೆಯನ್ನು ಮತ್ತು ನೈಜ ಪರಿಸ್ಥಿತಿಯನ್ನು ಮರೆತು ಮಾತನಾಡಿದಂತಾಗುತ್ತದೆ. ವಾಸ್ತವವಾಗಿ ಶಿಕ್ಷಣದ ಗುಣಮಟ್ಟ ಎನ್ನುವುದು ಇಡೀ ವ್ಯವಸ್ಥೆಯ ಗುಣಮಟ್ಟಕ್ಕೆ ಸಂಬಂಧಿಸಿದ ವಿಚಾರ. ಶಿಕ್ಷಣ ವ್ಯವಸ್ಥೆಯು ವಾಸ್ತವ ವ್ಯವಸ್ಥೆಯೊಳಗಿರುವ ಅಸಮಾನತೆ, ನ್ಯೂನತೆಗಳು, ದೌರ್ಬಲ್ಯಗಳು ಮತ್ತು ವೈರುಧ್ಯಗಳ ಪ್ರತಿಬಿಂಬವೇ ಆಗಿರುತ್ತದೆ. ಹಾಗಾಗಿ ಹಲವು ಬಗೆಯ ವೈರುಧ್ಯಗಳಿರುವ ವ್ಯವಸ್ಥೆಯ ಭಾಗವಾಗಿರುವ ವಿದ್ಯಾರ್ಥಿಗಳು ಶಿಕ್ಷಣ ಕ್ಷೇತ್ರದಲ್ಲೂ ವಿಭಿನ್ನ ಬಗೆಯ ಸಮಸ್ಯೆಗಳಿಂದ ತೊಳಲಾಡುತ್ತಿರುತ್ತಾರೆ. ಹಾಗಾಗಿ ಇವುಗಳನ್ನು ಗಂಭೀರವಾಗಿ ಪರಿಗಣಿಸದೇ ಇದ್ದಲ್ಲಿ, ಶಿಕ್ಷಣ ಕ್ಷೇತ್ರದಲ್ಲಿ ನಡೆಯುವ ಪ್ರಯತ್ನಗಳು ಅರ್ಥಹೀನವಾಗಿ ವಿಫಲವಾಗಿಬಿಡುತ್ತವೆ. ''ನಮ್ಮ ಕಳೆದೆಲ್ಲಾ ಶತಮಾನಗಳ ಕಲಿಸುವಿಕೆಯಲ್ಲಿದ್ದ ಅತಿದೊಡ್ಡ ತಪ್ಪೆಂದರೆ, ಎಲ್ಲಾ ವಿದ್ಯಾರ್ಥಿಗಳೂ ಒಂದೇ ಎಂದು ಭಾವಿಸಿ, ಎಲ್ಲಾ ವಿಷಯಗಳನ್ನೂ ಒಂದೇ ಬಗೆಯಲ್ಲಿ ಅವರೆಲ್ಲರಿಗೂ ಕಲಿಸುವುದನ್ನು ಸಮರ್ಥಿಸಿಕೊಳ್ಳುವುದು'' ಎಂದು ಈ ಅಂಶವನ್ನು ಮಲ್ಟಿಪಲ್ ಇಂಟೆಲಿಜೆನ್ಸ್ ಸಿದ್ಧಾಂತದ ಪ್ರತಿಪಾದಕರೂ ಮತ್ತು ವಿಶ್ವವಿಖ್ಯಾತ ಶಿಕ್ಷಣ ಮನೋವಿಜ್ಞಾನಿ ಹವರ್ಡ್ ಗಾರ್ಡ್ನರ್ ತುಂಬ ಸೊಗಸಾಗಿ ವಿವರಿಸುತ್ತಾರೆ.




ಶಿಕ್ಷಣಕ್ಕೆ ಸಂಬಂಧಿಸಿದ ನಮ್ಮ ಎಲ್ಲಾ ಚಿಂತನೆಗಳೂ ಸಮಸ್ಯೆಯ ಮೂಲದತ್ತ ಗಮನ ಹರಿಸಬೇಕು. ಆದರೆ ನಮ್ಮ ಇಡೀ ಶಾಲಾವ್ಯವಸ್ಥೆ ಈ ಸಮಸ್ಯೆಗಳನ್ನು ತುಂಬ ಗಂಭೀರವಾಗಿ ಪರಿಗಣಿಸುವುದಿಲ್ಲ. ಅಷ್ಟೇ ಅಲ್ಲ ಅನೇಕ ಬಾರಿ ಶಿಕ್ಷಣದ ವಿವಿಧ ಹಂತಗಳನ್ನು ನಿರ್ಧರಿಸುತ್ತಿರುವ ಶಿಕ್ಷಕರು, ಆಡಳಿತ ಮಂಡಳಿ, ಪೋಷಕರು ಇವರಿಗೆ ಸಾಮಾನ್ಯವಾಗಿ ಈ ಅಂಶಗಳ ಬಗ್ಗೆ ಅರಿವೇ ಇರುವುದಿಲ್ಲ. ಹಾಗಾಗಿಯೇ ಹಲವಾರು ವರ್ಷಗಳ ಪ್ರಯೋಗ, ಸಂಶೋಧನೆ, ಅಧ್ಯಯನ, ಕ್ಷೇತ್ರ ಸಮೀಕ್ಷೆ ಇವುಗಳ ಮೂಲಕ ನಿಜವಾದ ಶಿಕ್ಷಣ ಹೇಗಿರಬೇಕು ಎಂದು ಶಿಕ್ಷಣತಜ್ಞರು ರೂಪಿಸುವ ಪರಿಕಲ್ಪನೆಗಳಿಗೆ ನಮ್ಮ ಇಡೀ ಶಿಕ್ಷಣ ವ್ಯವಸ್ಥೆ ತದ್ವಿರುದ್ಧವಾಗಿರುತ್ತದೆ. ಶಿಕ್ಷಣತಜ್ಞರ ಪ್ರಕಾರ ಶಿಕ್ಷಣದ ಉದ್ದೇಶ ಸಾಮಾಜಿಕ ಪರಿವರ್ತನೆ. ಆರೋಗ್ಯಕರ ಹಾಗೂ ಸಮಾನತೆಯ ತತ್ವಗಳನ್ನು ಆಧರಿಸಿರುವ ಸಮಾಜವನ್ನು ಕಟ್ಟುವತ್ತ ಶಿಕ್ಷಣವು ಕೊಂಡೊಯ್ಯಬೇಕು. ಸಮಾಜದ ವಿಭಿನ್ನ ಸ್ತರಗಳನ್ನು ಹಾಗೂ ಅವುಗಳ ಸಮಸ್ಯೆಗಳನ್ನು ಅರಿತುಕೊಂಡು ಪ್ರಜ್ಞಾಪೂರ್ವಕವಾಗಿ ಅಥವಾ ಅಪ್ರಜ್ಞಾಪೂರ್ವಕವಾಗಿ ಅವುಗಳನ್ನು ಬದಲಿಸುವ ನಿಟ್ಟಿನಲ್ಲಿ ಕಾರ್ಯನಿರತರಾಗುವುದು. ಆದ್ದರಿಂದ ಶಿಕ್ಷಣತಜ್ಞರೆಲ್ಲರೂ ಆರೋಗ್ಯಕರ ಹಾಗೂ ಅರ್ಥಪೂರ್ಣ ಶಿಕ್ಷಣ ವ್ಯವಸ್ಥೆ ಎಂದು ಯಾವುದನ್ನು ಕರೆಯುತ್ತಾರೆಯೋ ಅದರತ್ತ ಒಂದಿಷ್ಟು ಗಮನಹರಿಸಬೇಕು.

ಭಾರತವೂ ಸೇರಿದಂತೆ ವಿಶ್ವದಾದ್ಯಂತ ಗಂಭೀರ ಶಿಕ್ಷಣತಜ್ಞರೆಲ್ಲರೂ ಭಿನ್ನ ಸಾಮರ್ಥ್ಯದ ತರಗತಿಗಳು, ಭಿನ್ನ ಮಟ್ಟದ ತರಗತಿಗಳು, ಸಹಶಿಕ್ಷಣ, ವಿಭಿನ್ನ ಜಾತಿ, ಧರ್ಮ ಹಾಗೂ ವರ್ಣೀಯರಿರುವ ತರಗತಿಗಳು, ಹೆಚ್ಚು ಆರೋಗ್ಯಕರ ಎಂದು ಅಭಿಪ್ರಾಯಪಡುತ್ತಾರೆ. ವಿಭಿನ್ನ ಬಗೆಯ ಆಸಕ್ತಿಯ, ವಿಭಿನ್ನ ಬೌದ್ಧಿಕ ಮಟ್ಟದ ಹಾಗೂ ವಿಭಿನ್ನ ಆರ್ಥಿಕ ಹಿನ್ನೆಲೆಯ ವಿದ್ಯಾರ್ಥಿಗಳು ಒಂದು ತರಗತಿಯೊಳಗಿರಬೇಕು ಎನ್ನುವುದು ತಜ್ಞರೆಲ್ಲರ ಅಭಿಪ್ರಾಯ. ತರಗತಿ ಎನ್ನುವುದು ವಾಸ್ತವ ಸಮಾಜದ ಒಂದು ಸಣ್ಣ ಪ್ರತಿಕೃತಿಯೇ ಆಗಿರಬೇಕು. ಆಗಷ್ಟೇ ಕಲಿಕೆ ಎನ್ನುವುದು ಬದುಕಿನೊಡನೆ ಬೆಸೆದುಕೊಂಡು ವಿದ್ಯಾರ್ಥಿಗಳು ಮನುಷ್ಯರಾಗುತ್ತಾರೆ ಎಂದು ಅಭಿಪ್ರಾಯಪಡುತ್ತಾರೆ.

ಹಾಗೆಯೇ ಮಕ್ಕಳ ಮೇಲೆ ಪಾಲಕರ ಮತ್ತು ಪೋಷಕರ ಪ್ರಭಾವಕ್ಕಿಂತಲೂ ಸಮವಯಸ್ಕರ ಮತ್ತು ಪರಿಸರದ ಪ್ರಭಾವ ತುಂಬ ಗಾಢ ಮತ್ತು ಗಮನಾರ್ಹವಾಗಿರುತ್ತದೆ. ಅವರು ಪರಸ್ಪರ ಒಬ್ಬರನ್ನೊಬ್ಬರು ಪ್ರಭಾವಿಸುತ್ತಿರುತ್ತಾರೆ ಮತ್ತು ಬದಲಿಸುತ್ತಿರುತ್ತಾರೆ ಎನ್ನುವುದನ್ನು ವಿಭಿನ್ನ ಸಂದರ್ಭ ಹಾಗೂ ಸನ್ನಿವೇಶಗಳಲ್ಲಿ ಮಾಡಿರುವ ಅಧ್ಯಯನಗಳ ಮೂಲಕ ಸಮರ್ಥಿಸಿದ್ದಾರೆ. ಹೀಗೆ ಒಟ್ಟಿಗಿರುವ ಸಂದರ್ಭದಲ್ಲಿ ಅವರು ಒಬ್ಬರನ್ನೊಬ್ಬರು ಅರಿತುಕೊಳ್ಳುವ ಕ್ರಮ ಕೂಡ ಬೇರೆಯಾಗುತ್ತದೆ ಮತ್ತು ಆರೋಗ್ಯಪೂರ್ಣವೂ ಆಗಿರುತ್ತದೆ. ಆದರೆ ಅವರೆಲ್ಲರೂ ವ್ಯಕ್ತಪಡಿಸುವ ಅಭಿಪ್ರಾಯಗಳಿಗೆ ವಿರುದ್ಧವಾದಂತಹ ಶೈಕ್ಷಣಿಕ ಆಚರಣೆಗಳು ನಮ್ಮವಾಗಿರುತ್ತವೆ. ಹಾಗಾಗಿಯೇ ಹುಡುಗಿಯರಿಗೆಂದೇ ಬೇರೆ ಶಾಲಾ ಕಾಲೇಜುಗಳು, ಬುದ್ಧಿವಂತ ಮಕ್ಕಳಿಗೆಂದೇ ಒಂದು ತರಗತಿ, ದಡ್ಡರಿಗಾಗಿಯೇ ಒಂದು ತರಗತಿ, ಚೆನ್ನಾಗಿ ಪಾಠಮಾಡಬಲ್ಲ ಸಮರ್ಥ ಶಿಕ್ಷಕರನ್ನು ಬುದ್ಧಿವಂತ ಹುಡುಗರಿರುವ ತರಗತಿಗೆ ನೇಮಿಸುವುದು, ಬುದ್ಧಿವಂತ ಹುಡುಗರಿಗೆ ಹೆಚ್ಚಿನ ತರಬೇತಿ ನೀಡುವುದು ಮುಂತಾದ ಅವೈಜ್ಞಾನಿಕ ಆಚರಣೆಗಳು ನಮ್ಮಲ್ಲಿ ಜಾರಿಯಲ್ಲಿರುತ್ತವೆ. ಹಾಗಾಗಿ ನಿಜವಾದ ಶಿಕ್ಷಣದ ಕಲ್ಪನೆಯೇ ಇಲ್ಲದಿರುವ ಈ ಸಂದರ್ಭದಲ್ಲಿ ಶ್ರೀಮಂತರ ಹಾಗೂ 'ಉತ್ಕೃಷ್ಟ ಗುಣಮಟ್ಟದ ಶಾಲೆ' ಎಂದು ಭಾವಿಸಿಕೊಂಡಿರುವ ಸಂಸ್ಥೆಗಳಿಗೆ ವಿಭಿನ್ನ ಬಗೆಯ ಹಾಗೂ ಹಿನ್ನೆಲೆಯ ಹುಡುಗರು ದಾಖಲಾತಿ ಆಗುತ್ತಾರೆ ಎಂದಾಕ್ಷಣ ಅದನ್ನು ಕೊಚ್ಚೆನೀರು ಬಂದು ಸೇರುವುದು, ಅರ್ಹತೆಗೆ ಅನ್ಯಾಯವಾಗುತ್ತಿದೆ ಎನ್ನುವಂತಹ ಮಾತುಗಳು ಕೇಳಿಬರುತ್ತವೆ. ಆದರೆ ವಾಸ್ತವವಾಗಿ ನಿಜವಾದ ಶಿಕ್ಷಣದ ಪರಿಕಲ್ಪನೆ ಇದಕ್ಕಿಂತ ಭಿನ್ನವಾಗಿರುತ್ತದೆ. ವಿಭಿನ್ನ ಹಿನ್ನೆಲೆಗಳಿಂದ ಬಂದಂಥ ವಿದ್ಯಾರ್ಥಿಗಳು ಪರಸ್ಪರ ಒಬ್ಬರಿಂದೊಬ್ಬರು ಕಲಿಯುತ್ತಾರೆ ಮತ್ತು ತರ್ಕಹೀನವಾದ ಸಿದ್ಧಮಾದರಿಗಳಿಂದ ಹೊರಬಂದು ನಾಯಕತ್ವದ ಗುಣವನ್ನು ಪಡೆಯುತ್ತಾರೆ ಎನ್ನುವುದನ್ನು ಎಲ್ಲಾ ಉನ್ನತ ವಿಶ್ವವಿದ್ಯಾನಿಲಯಗಳೂ ಒಪ್ಪಿಕೊಳ್ಳುತ್ತವೆ. ಇತ್ತೀಚೆಗೆ ಅಕ್ಟೋಬರ್ ೧೧ರಂದು ಅಮೇರಿಕೆಯ ಪ್ರಸಿದ್ಧ ವಿಶ್ವವಿದ್ಯಾನಿಲಯದಲ್ಲಿ ವಿದ್ಯಾರ್ಥಿಗಳು ವ್ಯಕ್ತಪಡಿಸಿರುವ ಅಭಿಪ್ರಾಯಗಳನ್ನು 'ದಿ ಹಿಂದೂ' ಪತ್ರಿಕೆ ವರದಿ ಮಾಡಿದೆ. ಆ ವಿದ್ಯಾರ್ಥಿಗಳು ಕೂಡ ಜನಮಾನಸದಲ್ಲಿರುವ ಅಭಿಪ್ರಾಯ ತಪ್ಪು ಎನ್ನುವುದನ್ನು ವಿವಾದಾತೀತವಾಗಿ ವ್ಯಕ್ತ

ಪಡಿಸಿದ್ದಾರೆ (ಆಡಂ ಲಿಪ್‌ಟಕ್, ರೇಸ್ ಅಂಡ್ ಯುಎಸ್ ಕಾಲೇಜ್ ಅಡ್ಮಿಷನ್).

ಹಾಗಾಗಿ ಸಾಮಾಜಿಕ ಪ್ರತಿಕೂಲತೆಯಿಂದ ತೊಳಲಾಡುತ್ತಿರುವ ಹಾಗೂ ಸಾಂಸ್ಕೃತಿಕವಾಗಿ ಹೊರಗಿಡಲಾಗಿರುವ ಸಮುದಾಯದ ಮಕ್ಕಳು ಶಿಕ್ಷಣ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳುವಂತೆ ಮಾಡಲು ಶಿಕ್ಷಣ ಹಾಗೂ ಇಡೀ ರಾಷ್ಟ್ರದ ಅಭಿವೃದ್ಧಿಯನ್ನು ಕುರಿತ ಸಮಗ್ರ ದೃಷ್ಟಿಕೋನದ ಅವಶ್ಯಕತೆಯಿದೆ. ಶಾಲೆಗೆ ಮಕ್ಕಳು ಬರುವಂತೆ ಮಾಡಲು ಪಠ್ಯಪುಸ್ತಕಗಳನ್ನು ಹಾಗೂ ಸಮವಸ್ತ್ರಗಳನ್ನು ನೀಡುವುದು, ಮಧ್ಯಾಹ್ನದ ಊಟ ನೀಡುವುದು, ಧನಸಹಾಯ ಮಾಡುವುದು ಇವು ಒಂದಿಷ್ಟು ಸಹಕಾರಿಯಾದರೂ ಕೂಡ ಅವು ಕುಟುಂಬದೊಳಗೆ ಹಾಗೂ ಶಾಲೆಯೊಳಗೆ ಇರುವ ತುಂಬ ಗಂಭೀರವಾದ ಉಳಿದ ಸಮಸ್ಯೆಗಳತ್ತ ಗಮನ ಹರಿಸುವುದಿಲ್ಲ. ಆದ್ದರಿಂದ ಉಳಿದ ಸವಲತ್ತುಗಳು ನಿರೀಕ್ಷಿಸಿದಷ್ಟು ಪರಿಣಾಮಕಾರಿಯಾಗುವುದಿಲ್ಲ ಮತ್ತು ಮೂಲ ಸಮಸ್ಯೆಗಳು ಉಳಿದೇ ಇರುತ್ತವೆ. ಅಂತರ ಮತ್ತು ತಾರತಮ್ಯ ಮುಂದುವರಿಯುತ್ತಲೇ ಹೋಗುತ್ತದೆ. ಈ ಸಂದರ್ಭದಲ್ಲಿ ಶಿಕ್ಷಣದ ವ್ಯವಸ್ಥೆಯೊಳಗೆ ಅಂದರೆ ಪರೀಕ್ಷೆ, ಮೌಲ್ಯಮಾಪನ, ಪಠ್ಯಪುಸ್ತಕಗಳು, ಅಂತೆಯೇ ತರಗತಿಯೊಳಗೆ ಶಿಕ್ಷಕರ ಧೋರಣೆ ಇವೆಲ್ಲವೂ ಒಟ್ಟಾಗಿ ಒಂದಿಷ್ಟು ಬದಲಾವಣೆಯಾಗಬೇಕು. ಆ ಬದಲಾವಣೆ ಹೀಗೇ ಇರಬೇಕು ಎಂದು ಹೇಳುವುದಕ್ಕಾಗುವುದಿಲ್ಲ. ಆಯಾ ಸಂದರ್ಭಕ್ಕೆ, ಸಮಸ್ಯೆಗೆ ಅನುಗುಣವಾಗಿ ಒಂದಿಷ್ಟು ಬದಲಾವಣೆ ಮಾಡಿಕೊಳ್ಳುವುದಕ್ಕೆ ಸಾಧ್ಯವಾಗುವಷ್ಟು ಇಡೀ ವ್ಯವಸ್ಥೆ ನಮ್ಯವಾಗಿರಬೇಕಾಗುತ್ತದೆ. ಜೊತೆಗೆ ಈ ವ್ಯವಸ್ಥೆಯಲ್ಲಿ ಪಾಲ್ಗೊಳ್ಳುತ್ತಿರುವ ಪ್ರತಿಯೊಬ್ಬರೂ ಇಂತಹ ಸಂದರ್ಭಗಳಲ್ಲಿ ವಿಶ್ವದಾದ್ಯಂತ ಏನೆಲ್ಲಾ ಪ್ರಯೋಗಗಳು ನಡೆಯುತ್ತಿವೆ, ಅವುಗಳು ಎಷ್ಟು ಪರಿಣಾಮಕಾರಿಯಾಗಿವೆ ಇವೆಲ್ಲವನ್ನೂ ಸೂಕ್ಷ್ಮವಾಗಿ ಗಮನಿಸಬೇಕಾದ ತುರ್ತಿದೆ.

**ಪ್ರೊ|| ಶೈಲಜಾ**
ನಂ. ಸಿ. ಎಚ್. ೭೩, ೭ನೇ ಮುಖ್ಯರಸ್ತೆ, ಸರಸ್ವತಿಪುರ, ಮೈಸೂರು - ೫೭೦ ೦೦೯

ನವಕರ್ನಾಟಕ ಪ್ರಕಾಶನ ಕಳೆದ ಡಿಸೆಂಬರ್ ೧೬, ಭಾನುವಾರದಂದು ನಗರದ 'ನಯನ' ಸಭಾಂಗಣದಲ್ಲಿ ಅವಿಸ್ಮರಣೀಯ ಕಾರ್ಯಕ್ರಮವೊಂದನ್ನು ಆಯೋಜಿಸಿತ್ತು. ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪುರಸ್ಕೃತ ಸಾಹಿತಿಗಳ ಬದುಕು ಬರೆಹ ಬಗೆಗೆ ನವಕರ್ನಾಟಕ ಹೊರತರುತ್ತಿರುವ 'ಸಾಹಿತ್ಯ ಸಂಪದ' ಮಾಲೆಯ ಎಂಟು ಪುಸ್ತಕಗಳನ್ನು ಅಂದು ಲೋಕಾರ್ಪಣೆ ಮಾಡಲಾಯಿತು. ಈ ಸಮಾರಂಭದ ಅಧ್ಯಕ್ಷತೆ ವಹಿಸಿ, ಕೃತಿಗಳನ್ನು ಬಿಡುಗಡೆ ಮಾಡಿದ ನೂರು ವಸಂತಗಳನ್ನು ಕಾಣುತ್ತಿರುವ ಆದರಣೀಯ ನಾಡೋಜ ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರನ್ನು ಇದೇ ವೇದಿಕೆಯಲ್ಲಿ ಸನ್ಮಾನಿಸಿ ಗೌರವಿಸಲಾಯಿತು. ಪ್ರಶಸ್ತಿ ಪುರಸ್ಕೃತರು, ಕೃತಿಗಳ ಲೇಖಕರು ವೇದಿಕೆಯಲ್ಲಿ ಉಪಸ್ಥಿತರಿರುವುದನ್ನು ಮೊದಲ ಚಿತ್ರದಲ್ಲೂ, ಪ್ರೊ|| ಜಿ. ವೆಂಕಟಸುಬ್ಬಯ್ಯ ಅವರನ್ನು ಸನ್ಮಾನಿಸುತ್ತಿರುವುದನ್ನು ಎರಡನೆಯ ಚಿತ್ರದಲ್ಲೂ, ನೆರೆದಿರುವ ಅಪಾರ ಜನಸ್ತೋಮವನ್ನು ಮೂರನೆಯ ಚಿತ್ರದಲ್ಲೂ ಕಾಣಬಹುದು.

# ಹನುಮಂತ ಬರಿಸಿದ ಹಾರ್ಟ್ ಅಟ್ಯಾಕು

**ಎಚ್. ಎಲ್. ಕೇಶವಮೂರ್ತಿ**

‘ಅಪ್ಪಾ’ ಅಂದ ಮಗ ಹನುಮಂತ.

ಕ್ಯಾತೇಗೌಡರು ಕತ್ತೆತ್ತಿ ಮಗನನ್ನು ನೋಡಿದರು.

‘ಇನ್ನು ಎಷ್ಟು ದಿನ ಅಂತ ಹಿಟ್ಟಿನ ಮಡಕೆ ಅಂಡು ಸುಟ್ಕೋಯೆ – ನನ್ಜೊತೆ ಬಂದಿರು’

‘ಅದೆಂಗಾದತ್ತೋ ಮಗ. ಪೂರ್ವೀಕರು ಬಾಳಿ ಬದುಕಿದ ಮನೆ. ಇದ ಬುಟ್ಟು ಬರ್ನಾರೆ’

ಅವ್ವನೂ ಇದೇ ಮಾತು ಹೇಳುತ್ತಿದ್ದಳು. ಅವಳು ಮಣ್ಣಾಗಿ ಮೂರು ತಿಂಗಳೇ ಕಳೆಯಿತು. ಈಗ ಅಪ್ಪನದೂ ಅದೇ ರಾಗ.

ಹನುಮಂತನೇನೂ ಈರಬದ್ರ ಆಗಿ ಪಟ್ಟಣ ಸೇರಿದವನಲ್ಲ, ಯಾವುದೋ ಮದುವೆಯಲ್ಲಿ ತೆಳ್ಳಗೆ ಬೆಳ್ಳಗಿನ ಹೆಣ್ಣು ಆತನ ಹೃದಯವನ್ನೇ ಹಾರಿಸಿತ್ತು. ಹೆಣ್ಣು ಕೇಳಲು ಕಳುಹಿಸಿದ್ದ, ಆಕೆ ‘ಆ ಕೊಂಪೇಲಿ ನಾನು ಬಾಳ್ವೆ ಮಾಡ್ನಾರೆ’ ಎಂದು ಕಡ್ಡಿ ಎರಡು ತುಂಡು ಮಾಡಿದಂತೆ ಹೇಳಿದ್ದಳು. ಪತ್ನಿಗಾಗಿ ಪತಿ ಪಟ್ಟಣ ಸೇರುವುದು ಅನಿವಾರ್ಯ ಆಯಿತು.

ಅತ್ತೆ ತೀರಿಕೊಂಡನಂತರ ‘ಕೊಂಪೆ’ಗೆ ಅವಳ ಹೋಗಾಟ ಬರಾಟ ಜೋರಾಯಿತು. ‘ಅದ ಮಾಡ್ಲ ಮಾವಯ್ಯ’, ‘ಇದ ಮಾಡ್ಲ ಮಾವಯ್ಯ’ ಅಂತೆಲ್ಲ ಕೇಳುತ್ತ ಮಾವನನ್ನು ವೈನ ಮಾಡಿಕೊಂಡಳು. ತಮ್ಮಲ್ಲಿಗೆ ಬಂದು ನೆಮ್ಮದಿಯಾಗಿರುವಂತೆ ಒತ್ತಾಯಿಸಿದಳು. ‘ಹೊಲ ಮನೆ ಅದಲ್ಲವ್ವಾ’ ಎಂದು ರಾಗ ಎಳೆದ ಮಾವ. ‘ಅದ್ರಲ್ಲೇನು ಬಂದತ್ತು. ಯಾವತ್ತೂ ಹೆಂಗಪ್ಪ ಅನ್ನೋದು ತಪ್ಪಂಗಿಲ್ಲ. ಬಂದಷ್ಟಕ್ಕೆ ಅವ ಸುಟ್ಟಾಕಿ ಅತ್ಲಾಗಿ. ಅದೇ ದುಡ್ಡ ಬ್ಯಾಂಕಲ್ಲಿಟ್ಟರೆ ರಾಜನಂಗೆ ಬಾಳ್ವೆ ಮಾಡಬಹುದು’ ಎಂದು ಮುಂದಿನ ಮಾರ್ಗ ತೋರಿದಳು ‘ಕೊಂಪೆ’ ಒಲ್ಲದ ಸೊಸೆ. ಊರಿನ ಸರೀಕರನ್ನೂ ಒಳಗಾಕಿಕೊಂಡಳು. ‘ಕ್ಯಾತ ನಿಂಗೂ ವಯಸ್ಸಾಯಿತು. ಕಸ್ಟ ಸುಕಕ್ಕೆ ಯಾರಾದಾರು ? ಹೋಗಿ ಮಗನೊಂದಿಗಿರು’ ಅಂತ ಅವರೂ ತಾಕೀತು ಮಾಡಿದರು. ‘ನಿಮ್ಮೆಲ್ಲ ಬುಟ್ಟು ಹೆಂಗಿರ್ಲಿ’ ಅಂದಾಗ ‘ಅದೇನು ದೂರ ಇದ್ದಾತಾ. ಹೋಗ್ತಾ ಬರ್ತಾ ಇರ್ತೀವಿ’ ಎಂಬ ಭರವಸೆ ನೀಡಿದರು. ಅಂತೂ ಇಂತೂ ಮನೆಮಠ ಮಾರಾಟ ಆಯಿತು.

ಮಾವ ಬಂದ ಮೇಲೆ ಮನೆ ರೂಪಾಂತರಗೊಂಡಿತು. ಸೊಸೆಯ ಮುಖದಲ್ಲೂ ಕಳೆ ತುಂಬಿಕೊಂಡಿತು. ಮೈಮೇಲೆ ತರಾವರಿ ಒಡವೆಗಳೂ ಬಂದವು. ಒಂದು ರೀತೀಲಿ ಅವರು ‘ದಿಂಡಾದ ಕುಳ’ ಅನ್ನಿಸಿಕೊಂಡರು. ಅಲ್ಲಿ ‘ಸುಟ್ಟು’ ಇಲ್ಲಿ ಬದುಕಿದರು !

✶ ✶ ✶

ಕ್ಯಾತೇಗೌಡರು ವಾಕಿಂಗ್‌ಗೆ ಅಂತ ಸಮಯ ನಿಗದಿಪಡಿಸಿಕೊಂಡ ಜಾಯಮಾನದವರಲ್ಲ. ಈ ವಾಕಿಂಗು ಅನ್ನೋದು ಚಾಡಿ ಹೇಳುವುದಕ್ಕೆ, ಅವರಿವರನ್ನು ಆಡಿಕೊಳ್ಳುವುದಕ್ಕೆ ಇನ್ನೊಬ್ಬರ ಜನ್ಮ ಜಾಲಾಡುವುದಕ್ಕೆ ಪ್ರಶಸ್ತವಾದ ಕಾಲ ಎಂಬ ಅರಿವೂ ಇದ್ದವರಲ್ಲ, ಇಂತಹವುಗಳ ಅವಶ್ಯಕತೆಯೂ



ಅವರಿಗಿರಲಿಲ್ಲ. ಆದರೂ ಅಭ್ಯಾಸಬಲ. ಹೊತ್ತಿಗೆ ಮುಂಚೆಯೇ ಎಚ್ಚರವಾಗುತ್ತಿತ್ತು. ಹಾಗಾದ ಮೇಲೂ ಹಾಸಿಗೆಯ ಮೇಲೆ ಬಿದ್ದುಕೊಂಡಿರಲು ಮನಸ್ಸಿಗೆ ಹಿಡಿಸುತ್ತಿರಲಿಲ್ಲ. ಕೈಕಾಲು ಆಡಿಸಿಕೊಂಡು ಬರಲು ಹೊರಗೆ ಹೋಗುತ್ತಿದ್ದರು. ಗೌಡರ ವಾಕಿಂಗು ಅಪಾರ್ಟ್‌ಮೆಂಟಿನ ಹಲವರಿಗೆ ಅಲಾರಂ ಆಗಿತ್ತು.

ಹೀಗೇ ಒಂದು ದಿವಸ ಗೌಡರು ಕೈಕಾಲು ಆಡಿಸಿಕೊಂಡು ಬರಲು ಮನೆಯಿಂದ ಹೊರ ಬಂದರು. ಮೈ ನೀರು ಬಿಡಲು ಅವಸರವಾಯಿತು. ಅಪಾರ್ಟ್‌ಮೆಂಟ್ ಪಕ್ಕದಲ್ಲೇ ಪಾಳಿತ್ತು. ಅದರಲ್ಲಿ ಬಳ್ಳಾರಿ ಜಾಲಿ ಸಮೃದ್ಧಿಯಾಗಿ ಬೆಳೆದಿತ್ತು. ಗೌಡರು ಪಂಚೆಯನ್ನು ಎತ್ತಿ ಮೇಲಕ್ಕೆ ಕಟ್ಟಿ ಜಾಲಿಮೆಳೆಯ ಬಳಿ ಕುಕ್ಕರಗಾಲಿನಲ್ಲಿ ಕುಳಿತರು. ಏನಾಯಿತೋ ಏನೋ. 'ಹ್ಹಾಂ' ಎನ್ನುತ್ತಾ ಹಾಗೇ ಉರುಳಿಕೊಂಡರು.

ಗೌಡರು ಒಂದ ಮಾಡುತ್ತಿದ್ದಂತೆಯೇ ಉರುಳಿ ಬಿದ್ದದ್ದು ಅಪಾರ್ಟ್‌ಮೆಂಟಿಗೆಲ್ಲ ಸುದ್ದಿ ಆಯಿತು. ನೋಡ ನೋಡುತ್ತಿದ್ದಂತೆಯೇ ಜನ ಸೇರಿದರು. ಮನೆಯವರಿಗೆ ವಿಷಯ ತಿಳಿಸಬೇಕೆಂದರೆ ಅವರು ಮದುವೆಗೆಂದು ಯಾವುದೋ ಊರಿಗೆ ಹೋಗಿ ಮೂರು ದಿನ ಆಗಿತ್ತು. ಹನುಮಂತನ ಮೊಬೈಲು 'ವ್ಯಾಪ್ತಿ ಪ್ರದೇಶದ ಹೊರಗೆ' ಇತ್ತು. ಅವರಿಗಾಗಿ ಕಾಯಲು ಸಮಯ ಇರಲಿಲ್ಲ. ಯಾರೋ ಗೌಡರನ್ನು ಕಾರಿನಲ್ಲಿ ಹಾಕಿಕೊಂಡು ಆಸ್ಪತ್ರೆಗೆ ಹೊರಟರು.



ಗುಂಪು ಕರಗಲಿಲ್ಲ. ಗೌಡರು ಒಮ್ಮೆಲೇ ಹೀಗೆ ಬೀಳಲು ಕಾರಣ ಏನಿರಬಹುದು ಎಂಬುದನ್ನು ತಿಳಿಯುವ ಕುತೂಹಲ ಹಲವರಿಗೆ ಇತ್ತು. ಯಾವುದಾದರೂ ಅಪಾಯಕಾರಿ ಪ್ರಾಣಿ ಮೆಳೆಯಲ್ಲಿ ಅಡಗಿರಬಹುದೆ ಎಂಬ ಗುಮಾನಿಯೂ ಬಂತು. ಜನರ ಕೂಗಾಟ, ಕಿರುಚಾಟಕ್ಕೆ ಬೆದರಿದ ನಾಯಿ ಪೊದೆಯೊಳಗಿಂದ ಓಡಿಹೋಗಿದ್ದನ್ನು ಕಂಡಿದ್ದ ಒಬ್ಬ ಧೈರ್ಯ ತಾಳಿದ. ಕ್ಯಾತೇಗೌಡರು ಕುಳಿತಿದ್ದ ಜಾಗದಲ್ಲಿ ಕುಕ್ಕರಗಾಲಿನಲ್ಲಿ ಕುಳಿತು ನೋಡಿದ. ಅಲ್ಲಿ ಆಗತಾನೆ ಜನಿಸಿದ ಮಗುವೊಂದು ಮೆಳೆ ಒಳಗಿತ್ತು!

'ಮಗ ನಾಯಿ ತಿಂದದೆ'

ಎಲ್ಲರ ಕಿವಿಯೂ ನೆಟ್ಟಗಾದವು.

'ಎಂಥ ಮಗ ?'

'ಸರ‍್ಯಾಗಿ ಕಾಣ್ತಿಲ್ಲ್ದು'

'ಹತ್ರ ಹೋಗಿ ನೋಡ್ಲ'

'ಹೆಣ್ಮಗ'

ಕುತೂಹಲ ಕೆರಳಿತು. ನಾಯಿ ಬಾಯಿ ಹಾಕಿದ್ದ ಮಗುವನ್ನ ನೋಡಲು ತಾ ಮುಂದು, ನಾ ಮುಂದು ಎಂದು ನುಗ್ಗಿದರು. ಇಂತಹ ದೃಶ್ಯ ಕಂಡಾಗ ಏನೇನು ಮಾತು ಬರಬಹುದೋ ಅವೆಲ್ಲ ಬಂದಾಯಿತು. ಯಾವೋಳೋ ಕದ್ದು ಬಸುರಾದವಳ ಕೆಲಸವೇ ಇದಾಗಿದೆ; ಇಲ್ಲೇ ಬಿದ್ದದೆ ಅಂದಮೇಲೆ ಅಪಾರ್ಟ್‌ಮೆಂಟಿನ ಯಾವುದೋ ಮುಂಡೆ ಕೆಲಸಾನೆ ಇದು ಎಂಬ ತೀರ್ಮಾನವೂ ಹೊರಬಂದಿತು. ವಯಸ್ಸಿಗೆ ಬಂದ ಹೆಣ್ಣಮಕ್ಕಳ ಜಾತಕವನ್ನೂ ಜಾಲಾಡಿದ್ದಾಯಿತು.

'ಟಿವಿಯೋರ‍್ಗೆ ಹೇಳ್ಬೇಕಿತ್ತು' ಯಾರೋ ಒಬ್ಬರ ಸಲಹೆ.

ಎಲ್ಲರಿಗೂ ಈ ಸಲಹೆ ಆಪ್ಯಾಯಮಾನವಾಗಿತ್ತು.

# ಭೂಮಿಯ ಮಗಳ ವನದಲಿ ನೋಡಿ

ಭೂಮಿಯ ಮಗಳ ವನದಲಿ ನೋಡಿ
ಅಡವಿಯ ಅಳಲಿಗೆ ತಲೆಬಿಸಿಯಾಗಿ
ಅತ್ತಾ ಇತ್ತ ಮೇಲೆ ಕೆಳಗೆ
ಸುತ್ತಾ ಮುತ್ತ ಓಡಾಡಿತ್ತು;
ಅತ್ತೂ ಕರೆದು ಕೇಳ್ವಂತಿತ್ತು;
ಯಾಕೀ ಕತೆ ಹೀಗಾಯ್ತು?

ಸೇತುವೆ ಕಟ್ಟಲು ಹೊಯಿಗೆಯ ಹೊತ್ತರೆ
ನಗುತಿತ್ತಂದು ಕಡಲ ತೆರೆ;
ರಾಮದೇವರೇ ಹೊಗಳುತ ಮತ್ತೆ
ಬರೆದರು ಬೆನ್ನಲಿ ಮೂರು ಗೆರೆ
ಆದಿನ ಹೋಗಿ ಈ ಗತಿ ಬಂತು ;
ಯಾಕೀ ಕತೆ ಹೀಗಾಯ್ತು?

ಹೂಗಳ ನೋಡಿ ಸೀತೆಯ ನೆನೆದು
ಮರುಗಿದ ಮನಸೆಲ್ಲಿ?
ದೂರದ ಕೋಗಿಲೆ ದನಿಯನು ಕೇಳಿ
ಕೊರಗಿದ ಜನವೆಲ್ಲಿ?
ಆ ದಿನ ಹೋಗಿ ಈ ಗತಿ ಬಂತು;
ಯಾಕೀ ಕತೆ ಹೀಗಾಯ್ತು?



ಸಣ್ಣವ ದೊಡ್ಡವ ಅಂಗದ ಜಾಂಬವ
ಕಾಡಿಗೆ ಕಾಡೇ ಸೈನಿಕರಾಗಿ
ಪುಡಿಪುಡಿಗೈದರು ಲಂಕೆಗೆ ಹೋಗಿ
ಕದ್ದವ, ಕಳ್ಳ, ಸತ್ತೇ ಹೋದ;
ರಾವಣ ಸತ್ತರು ಕತೆ ಹೀಗಾಯ್ತು!

ಪರೀಕ್ಷೆಗೊಡ್ಡಿದ ಕೆಂಡದ ರಾಶಿಯ
ಉರಿಯುವ ನಾಲಿಗೆ ಹೂವಾಗಿತ್ತು;
ಸೀತೆಯ ಪಾದಕೆ ತಂಪಾಗಿತ್ತು!
ಹುಟ್ಟಿದ ಸಂಶಯ ಸುಟ್ಟೇ ಹೋಯ್ತು;
ಆದರು ಯಾಕೀ ಕತೆ ಹೀಗಾಯ್ತು?

ಎಲ್ಲೋ ಯಾರೋ ಏನೋ ಹೇಳಲು
ಸೀತೆಗೆ ಈ ಗತಿ ಯಾಕೆ?
ಮಾಡದ ತಪ್ಪಿಗೆ ಕಾಡಿನ ವಾಸ;
ನುಂಗುವ ಕತ್ತಲೆ; ಚಂದ್ರನೆ ದೀಪ;
ಕರುಣೆಗು ಬರವೆ? ಅಯ್ಯೋ ಪಾಪ
ಕಾಡಿಗೆ ಬಂದಳೆ ಸೀತಾಮಾತೆ
ಪಡೆಯಲು ಹಿಂದಿನ ದುಃಖದ ಖಾತೆ!

**ಕುತ್ಯಾಳ ನಾಗಪ್ಪ ಗೌಡ (ಕಿರಣ)**
ಕಿರಣ ಕುಟೀರ, ಸುಳ್ಯ - ೫೭೪೨೩೯

''ನನ್ನ ಹತ್ರ ನಂಬರ್ ಅದೆ. ಹೇಳಿಬತ್ತೀನಿ' ಎಂದು ಹೇಳುತ್ತಾ ಒಬ್ಬಾಕೆ ಹೋದರೆ, 'ನನ್ನ ಹತ್ರಾನೂ ಅದೆ. ನಾನೂ ಮಾಡ್ತೀನಿ' ಎನ್ನುತ್ತಾ ಒಬ್ಬಳು ಕಳಚಿಕೊಂಡಳು. ಹೀಗೆ ಕಾರಣ ಹೇಳುತ್ತಾ ಬಹುತೇಕ ಮಹಿಳಾಮಣಿಗಳು ಅಲ್ಲಿಂದ ಹೋದವರೇ ತೆಳುವಾಗಿ ಮೇಕಪ್ ಮಾಡಿಕೊಂಡು ಒಂದು ಚಾನೆಲ್‌ನವರ ಆಗಮನಕ್ಕಾಗಿ ಕಾಯುತ್ತಾ ನಿಂತರು. ಇಂತಹ ಸುದ್ದಿಗಾಗಿಯೇ ಚಾನೆಲ್‌ನವರು ಕಾಯುತ್ತಿದ್ದರೇನೊ ಎನ್ನುವಂತೆ ಕೆಲವೇ ಸಮಯದಲ್ಲಿ ಅವರೂ ಬಂದರು. ಏನೆಲ್ಲ ಚಿತ್ರೀಕರಿಸಬೇಕಾಯಿತೋ ಅದೆಲ್ಲ ಆಯಿತು. ಕೆಲವರು ವಿವರಣೆ ನೀಡಿದ್ದ ಚಿತ್ರೀಕರಣವೂ ಮುಗಿಯಿತು. ನೆರೆದಿದ್ದವರ ಪ್ರಯತ್ನ, ಚಾನೆಲ್‌ನವರ ಸಹಕಾರಗಳಿಂದಾಗಿ ಎಲ್ಲರ ಮುಖಗಳೂ ಕ್ಯಾಮರಾದೊಳಗೆ ಸೇರಿದವು. ಮುಖಗಳೆಂಬ ಮುಖಗಳಲ್ಲಿ ಮಂದಹಾಸ ಮೂಡಿತ್ತು ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲವಷ್ಟೆ!

'ಪೊಲೀಸ್ನೋರ್ಗೆ ತಿಳಿಸಿದ್ರಾ' ಯಾವುದೋ ಚಾನೆಲ್‌ನವರ ಪ್ರಶ್ನೆ'

ಟಿವಿ ಸಂಭ್ರಮದಲ್ಲಿ ಪೊಲೀಸು ಮರತೇಹೋಗಿತ್ತು!

ಇರಲಿ. ತುರ್ತು ಕೆಲಸಗಳನ್ನೂ ಮರೆತು ಸುದ್ದಿಗಾಗಿ ಅಲ್ಲಿದ್ದವರೆಲ್ಲರೂ ಟಿವಿಯ ಮುಂದೆ ಕುಳಿತಿದ್ದರೆಂಬುದು ಮಾತ್ರ ಸತ್ಯ ಸಂಗತಿಯಾಗಿತ್ತು.

* * *

ಅತ್ತ ಕ್ಯಾತೇಗೌಡರನ್ನು ಹೊತ್ತ ಕಾರು ಸರ್ಕಾರಿ ಆಸ್ಪತ್ರೆ ತಲುಪಿತು. ಚಿಕಿತ್ಸೆ ದೊರೆಯಲಿಲ್ಲ. ತೀವ್ರ ಹೃದಯಾಘಾತ ಆಗಿರುವುದರಿಂದ ಪ್ರಾಣಕ್ಕೆ ಅಪಾಯವಿದೆ; ತುರ್ತಾಗಿ 'ಹಾರ್ಟ್ ಫೌಂಡೇಷನ್'ಗೆ ಸೇರಿಸುವ ಸಲಹೆ ದೊರೆಯಿತು!

ರೋಗಿಯ ಜೊತೆ ಬಂದಿದ್ದವರಿಗೆ ಪೀಕಲಾಟಕ್ಕಿಟ್ಟುಕೊಂಡಿತು. ಹನುಮಂತನನ್ನು ಸಂಪರ್ಕಿಸಲು ಪ್ರಯತ್ನಿಸಿದರು. ಅವನು ಇನ್ನೂ 'ವ್ಯಾಪ್ತಿಪ್ರದೇಶದ ಹೊರಗೇ' ಇದ್ದ. ಒಂದು ಜೀವದ ಪ್ರಶ್ನೆ ಇದಾಗಿತ್ತು. ಅವರೆಲ್ಲ ಅಲ್ಲಿ ಇಲ್ಲಿ ಕಿತ್ತು, ಹೇಗೋ ಹಣ ಹೊಂದಿಸಿ ಸೂಕ್ತ ಚಿಕಿತ್ಸೆ ದೊರೆಯುವಂತೆ ನೋಡಿಕೊಂಡರು.

ಸಂಜೆಯ ವೇಳೆಗೆ ಹನುಮಂತ ವ್ಯಾಪ್ತಿಪ್ರದೇಶದ ಒಳಕ್ಕೆ ಬಂದಿದ್ದ. ವಿಷಯ ತಿಳಿಸಿದರು.

'ಯಾವ ಆಸ್ಪತ್ರೆಗೆ ಸೇರಿಸಿದ್ದೀರಿ'

ಇವರು ಪ್ರವರ ಒಪ್ಪಿಸಿದರು.

'ಅಲ್ಲಿಗ್ಯಾಕೆ ಸೇರಿಸಿದ್ರಿ' ಅಸಹನೆಯ ದನಿ.

'ಅಲ್ಲಪ್ಪಾ. ಒಂದು ಜೀವದ ಪ್ರಶ್ನೆ.'

'ಸತ್ತರೆ ಸಾಯಿತ್ತಿದ್ದೋನು ನಮ್ಮಪ್ಪ. ನಿಮ್ಮನ್ಯಾರು ಅಲ್ಲಿಗೆ ಸೇರಿಸು ಅಂದಿದ್ದೋರು'

'ಡಾಕ್ಟ್ರೇ ಹಂಗಂದ್ರು'

'ಹೋಗಿ ದುಡ್ನೂ ಅವರತ್ರಾನೆ ಇಸ್ಕೊ ಹೋಗಿ' ಎನ್ನುತ್ತಾ ಮೊಬೈಲ್ ಕಟ್ ಮಾಡಿದ.

ಹಾರ್ಟ್ ಅಟ್ಯಾಕ್ ಆಗುವ ಸರದಿ ಇವರದಾಗಿತ್ತು!

**ಎಚ್. ಎಲ್. ಕೇಶವಮೂರ್ತಿ**
ನಂ. ೧೩, ಹೌಸಿಂಗ್ ಬೋರ್ಡ್ ಅಪಾರ್ಟ್‌ಮೆಂಟ್, ಫೈರ್ ಬ್ರಿಗೇಡ್ ಎದುರು
ಗುತ್ತಲ ಪೋಸ್ಟ್, ಮಂಡ್ಯ - ೫೭೧ ೪೦೩.



# ವಿವೇಕ ಚಿಂತಾಮಣಿ

(ಸ್ವಾಮಿ ವಿವೇಕಾನಂದರ ಸೂಕ್ತಿಗಳನ್ನಾಧರಿಸಿ)

ಮಾನವನ ಮನದಲಡಗಿಹುದು ವಿವಿಧ ಬಗೆ ಜ್ಞಾನ
ಮುಚ್ಚಿದ ಮುಸುಕ ತೆರೆಯಬಲ್ಲವನೆ ಜಾಣ,
ಇನ್ನಷ್ಟು ತೆರೆಯಬಲ್ಲರೆ ತಾನಾಗುವನು ಜ್ಞಾನಿ
ಸಂಪೂರ್ಣ ತೆರೆದುಬಿಟ್ಟರೆ ಆಗ ಸರ್ವಜ್ಞ-
ನಾವೆಲ್ಲ ಅವನಿಗೆ ಋಣಿ.

* * *

ಪ್ರಪಂಚದಲಿ ಅತ್ಯಂತ ಉನ್ನತಃ ಮಾತೃ ಸ್ಥಾನ
ನಿಸ್ವಾರ್ಥದಭಿವ್ಯಕ್ತಿ -
ನೋಡಿ ಕಲಿಯಲು ಅದುವೆ ತಕ್ಕ ತಾಣ.
ಭಗವತ್ಪ್ರೇಮವೊಂದೇ ಮಾತೃವಾತ್ಸಲ್ಯಕ್ಕು ಮಿಗಿಲು
ಅದು ನಿತ್ಯ ಹಗಲು.

* * *

ಸತ್ಕಾರ್ಯದಿಂದ ಬರುವ ಸತ್ಫಲಗಳನು
ತಡೆಯುವ ಶಕ್ತಿ ಜಗದೊಳಿಲ್ಲ;
ಪಾಪ ಕಾರ್ಯದ ಫಲವನನುಭವಿಸಲೇ ಬೇಕು
ಬೇರೆ ವಿಧಿಯಿಲ್ಲ.

* * *

ಆತ್ಮ ಸಂಯಮಿಯನಾವ ವಸ್ತುವೂ
ಬದಲಿಸದು;
ಅವಗಿಲ್ಲ ದಾಸ್ಯ, ಮನಸೂ ಮುಕ್ತ,
ಬಾಳೂ ಹಸನು.

* * *

ನಿಜವಾದ ಧರ್ಮ ಎಂದಿಗೂ ಬದಲಾಗದು.
ಧರ್ಮವೆಂದರೆ ಸಾಕ್ಷಾತ್ಕಾರ,
ಬರಿಯ ನಂಬಿಕೆ, ಮಾತು, ಸಿದ್ಧಿಯಲ್ಲ -
ಅವೆಲ್ಲ ಬೇಕಾದಷ್ಟು ಸುಂದರವಾಗಿದ್ದರೂ ಕೂಡ
ಬೋಧಿಸಿದಂತೆ ಇರುವುದು, ಅದರಂತೆ
ಆಗುವದು ಇದುವೆ ಧರ್ಮ;
ಕೇವಲ ಶ್ರವಣವಲ್ಲ, ಸಮ್ಮತಿಯಲ್ಲ
ಜೀವ ತಾನಾವುದನು ನಂಬುವದೊ ಅದರಂತೆ
ಪರಿವರ್ತನೆಗೊಳ್ಳುವದು.

* * *

ಕತ್ತಲೆಯೆಂದರೆ ಕಡಿಮೆ ಬೆಳಕು
ಕೆಟ್ಟದು ಎಂದರೆ ಕಡಿಮೆ ಒಳ್ಳೆಯದು
ಮಲಿನತೆ ಎಂದರೆ ಕಡಿಮೆ ಪಾವನತೆ

* * *

ಸತ್ಯವೆಂದರೆ ನಿತ್ಯವಾದುದು
ಅದು ಯಾರ ಸ್ವಂತ ಆಸ್ತಿಯಲ್ಲ,
ಯಾವುದೇ ವ್ಯಕ್ತಿ, ಯಾವುದೇ ಜನಾಂಗ
ತನ್ನ ಹಕ್ಕನ್ನು ಪ್ರತ್ಯೇಕವಾಗಿ ಅದರ ಮೇಲೆ
ಸ್ಥಾಪಿಸಬಹುದು.
ಸರ್ವಜೀವಿಗಳ ನೈಜ ಸ್ವಭಾವವೇ ಸತ್ಯ
ಅದಕ್ಕಾಗಿ ಯಾರು ಹಕ್ಕು ಸ್ಥಾಪಿಸಬಲ್ಲರು ?
ಅದು ಅನುಷ್ಠಾನದಲಿ ಬರಲಿ,
ಸುಲಭವಾಗಿ ತಿಳಿಯುವಂತಿರಲಿ,
ಉತ್ತಮ ಸತ್ಯ ಯಾವಾಗಲೂ ಅತ್ಯಂತ ಸುಲಭ.
ಸಮಾಜದ ಅಂಗಾಂಗದಲ್ಲಿ ಅದು ಪ್ರವಹಿಸಲಿ
ಸರ್ವಸಾಮಾನ್ಯರ ಆಸ್ತಿಯಾಗಿರಲಿ,
ಪ್ರತಿಯೊಂದು ಜೀವದಲ್ಲಿರುವ ಸತ್ಯವೇ ಪೂಜ್ಯ ವಸ್ತು.
ಪ್ರತಿಯೊಬ್ಬರೂ ಅದರುಪಾಸಕರಾಗುವ
ಪುಣ್ಯಯುಗ ಉದಯಿಸುವಂತೆ ಮಾಡೋಣ.

* * *

ಬೌದ್ಧಿಕವಾಗಿ ಗ್ರಹಿಸಿದವನ ಸೋಲಿಸಬಹುದು
ಇನ್ನೊಂದು ಪ್ರಬಲವಾದ;
ಸಾಕ್ಷಾತ್ಕಾರ ಮಾಡಿಕೊಂಡವನಿಂದ ಮಾತ್ರ
ಎಲ್ಲ ವಾದಗಳು ದೂರ.

* * *

ಮರಣವಿಲ್ಲದ ಹಾಗೆ ಮಾಡುವರೆ
ಜನನವೂ ನಿಷೇಧ;
ಮರಣವಿಲ್ಲದ ಜನನ, ದುಃಖವಿಲ್ಲದ ಸುಖ ಅರ್ಥಹೀನ,
ಯಾವುದನೂ ಪ್ರತ್ಯೇಕ ಪಡೆಯಲಾರೆವು ನಾವು
ಒಂದೇ ವಸ್ತು : ಅಭಿವ್ಯಕ್ತಿ ಬೇರೆ ಬೇರೆ, ಅದಕದರ ಠಾವು.

* * *

ನನ್ನ ಸ್ನೇಹಿತನೊಬ್ಬ ಪ್ರಖ್ಯಾತ ಅಮೆರಿಕದ ವಿಜ್ಞಾನಿ,
ಬುದ್ಧ ಜೀವನ ಚರಿತೆ ಓದುವಾಸಕ್ತಿ.
ಓದಿದ ಮೇಲೆ ಅವನ ಮರಣದ ರೀತಿ ಮಾತ್ರ
ಇವನು ಮೆಚ್ಚಲಿಲ್ಲ; ಏಕೆನೆ -
ಜನರವನ ಶಿಲುಬೆಗೇರಿಸಲಿಲ್ಲ!
ಮನುಷ್ಯ ಮಹಾತ್ಮನಾಗಬೇಕಾದರೆ
ಅವನ ಕೊಲೆಯಾಗಬೇಕೇ ?
ಇಂಥ ಅಂಧಾಭಿಮಾನಿಗಳೂ ಇದ್ದಾರೆ, ಜೋಕೆ.

* * *

ನೀರು ಪಾತ್ರೆಯಲಿ ಕುದಿವಾಗ
ಮೊದಲೊಂದು ಗುಳ್ಳೆ
ಮೇಲೇಳುವದು, ನಂತರ ಮತ್ತೊಂದು,
ಮಗುದೊಂದು,
ಕೊನೆಗೆ ಎಲ್ಲಾ ಸೇರಿ ಒಟ್ಟಿಗೇ ಕುದಿಯಲಾರಂಭ.
ಈ ಪ್ರಪಂಚವೂ ಹಾಗೆ ಪ್ರತಿಯೊಬ್ಬರೂ ಗುಳ್ಳೆ
ದೇಶ ಕೋಶಗಳೆಲ್ಲ ಹಲವಾರು ಗುಳ್ಳೆ
ಕ್ರಮೇಣ ದೇಶಗಳೆಲ್ಲ ಒಂದಾಗುವವು
ಭೇದವಿರದೆ
ಏಕತ್ವ ವ್ಯಕ್ತವಾಗುವ ಕಾಲ ಬಂದೆ ಬರುವದು -
ಎಂಬುದು ನನ್ನ ಹಾರೈಕೆ.

* * *

ನಾನು ವರ್ತಮಾನದಲ್ಲಿರುವೆ
ಅನಂತ ಭವಿಷ್ಯಕ್ಕೆ ಬಾಗಿಲನು ತೆರೆದಿರುವೆ.
ಹಿಂದೆ ಆಗಿರುವುದನೆಲ್ಲ ಸ್ವೀಕರಿಸುವೆ.
ಹೃದಯದ ಪ್ರತಿಯೊಂದು ಕಿಟಕಿ ತೆರೆದಿರುವೆ.
ಹಿಂದಿನ ಮಹಾತ್ಮರಿಗೆಲ್ಲ ವಂದನೆ
ಈಗಿನವರಿಗೂ ಮುಂದಿನವರಿಗೂ ಕೂಡ.

* * *

ಮನುಷ್ಯ ಉತ್ತಮನಾದರೆ
ಒಳ್ಳೆಯವರು ಕೆಟ್ಟವರು ಎಂಬ ಭೇದ ಕಾಣಿಸದು.
ಮಡಕೆಯನೊಂದು ಸಲ ಸುಟ್ಟ ಮೇಲೆ
ಅದರ ಆಕಾರ ಪುನಃ ಬದಲಾಗದು.
ಒಮ್ಮೆ ದೈವೀ ಸ್ಪರ್ಶ ಪಡೆದು
ಜ್ಞಾನದ ಬೆಂಕಿಯಲಿ ಬೆಂದಾಗ ಜೀವಿ
ಪುನಃ ಬದಲಾಗನು.

* * *

ಮಾನವ ಜೀವನಕ್ಕಿರುವ ಗುರಿಗಳೆರಡು :
ನಿಜವಾದ ಅರಿವು ಮತ್ತು ಆನಂದ.
ಸ್ವಾತಂತ್ರ್ಯವಿಲ್ಲದಿರೆ ಎರಡೂ ಅಸಾಧ್ಯ.
ಇವೇ ಎಲ್ಲ ಜೀವನದ ಒರೆಗಲ್ಲು.
ನಿತ್ಯವೂ ಏಕತೆಯ ಅನುಭವಿಸುತಿರಬೇಕು.
ಎಲ್ಲ ಪಾಪಿಗಳಿಗೂ ತಾವು ಅಳಬೇಕು.
ಏಕೆಂದರೆ ಅಲ್ಲಿ ಪಾಪ ಗೈಯುತಿರುವವರೂ ತಾವೇ.
ಆತ್ಮ ತ್ಯಾಗವೆ ಸನಾತನ ನಿಯಮ, ಆತ್ಮಪ್ರತಿಷ್ಠೆಯಲ್ಲ.

**ಚೆನ್ನವೀರ ಕಣವಿ**
'ಚೆಂಬೆಳಕು', ಕಲ್ಯಾಣನಗರ, ಧಾರವಾಡ - ೫೮೦ ೦೦೭



# ಹೇಮಂತ ಸಾಹಿತ್ಯ ಪ್ರಕಾಶನದ ಅಮೂಲ್ಯಕೊಡುಗೆ

## ಶ್ರೀಮದ್ ವಾಲ್ಮೀಕಿ ಮಹರ್ಷಿ ಪ್ರಣೀತ ಯೋಗವಾಸಿಷ್ಠ

ಯೋಗ ವಾಸಿಷ್ಠವು ಅದ್ವೈತ ವೇದಾಂತದ ಪ್ರತಿಪಾದನೆಯಾಗಿದ್ದು ಪುರಾಣಗ್ರಂಥಗಳಲ್ಲೆಲ್ಲ ಬೃಹತ್ ಮತ್ತು ಮಹತ್ ಎಂದು ಪರಿಗಣಿತವಾಗಿದೆ. ಖಂಡವಲ್ಲದ ಅಖಂಡ ಕಲ್ಪನೆಯೇ ಅದ್ವೈತದ ಸಾರ. ಇವುಗಳ ಶ್ಲೋಕಗಳು ಮೂಲ ಸಂಸ್ಕೃತದಲ್ಲಿದ್ದು ಇಕ್ಷ್ವಾಕು ಕುಲ ಪುರೋಹಿತ ವಸಿಷ್ಠಮುನಿ ಶ್ರೀರಾಮಚಂದ್ರನಿಗೆ ಉಪದೇಶಿಸಿದಂತೆ ಗುರು–ಶಿಷ್ಯರ ನಡುವಿನ ಸಂವಾದ ರೂಪದಂತಿವೆ. ಪ್ರಾಪಂಚಿಕ ಬದುಕಿನ ಬಗ್ಗೆ ಗಂಭೀರವಾಗಿ ಹೇಳಲ್ಪಟ್ಟ ಜ್ಞಾನೋಪದೇಶವಾಗಿದೆ. ವಸಿಷ್ಠರು ಇಲ್ಲಿ ಜ್ಞಾನ ಯೋಗಕ್ಕೆ ಹೆಚ್ಚು ಒತ್ತು ಕೊಟ್ಟು ವಿಶೇಷವಾಗಿ ಹೇಳಿರುವುದರಿಂದಲೇ ಇದು 'ಯೋಗ ವಾಸಿಷ್ಠ' ಎನಿಸಿದೆ. ಹಿಂದಿನ ಯುಗಗಳಲ್ಲಿ ಅತಿ ಶ್ರೇಷ್ಠರೆಂದು ಮಾನ್ಯರಾದ, ಋಷಿಮುನಿ ಪುಂಗವರೆಂದು ಖ್ಯಾತರಾದ, ಇಂದಿಗೂ ಪೂಜ್ಯರೆಂದು ಗೌರವಿಸಲ್ಪಡುವ ಮಹಾಜ್ಞಾನಿಗಳಿಂದ ಅನಂತ ವಿಶ್ವದ ಬಗ್ಗೆ ಮತ್ತೂ ತಿಳಿಯುವ ಹಂಬಲ ತೀವ್ರವಾಗಿತ್ತು. ಅವರ ವಿಚಾರ–ವಿಶ್ಲೇಷಣೆಗಳು ಬ್ರಹ್ಮಾಂಡದ ಉತ್ಪತ್ತಿ – ಜೀವದ ಉಗಮ – ಜೀವಿಯ ಜನನ–ಜೀವನ–ಮರಣ ಮುಂತಾದ ಅಧ್ಯಾತ್ಮಗಳತ್ತ ಹರಿದಿದ್ದವು. ಅಂದಿನವರು ತಮ್ಮ ಬುದ್ಧಿಗೋ ದಿವ್ಯದೃಷ್ಟಿಗೋ ಹೊಳೆದುದನ್ನು ಶ್ಲೋಕಗಳಾಗಿ, ಉಪಕಥೆಗಳೊಂದಿಗೆ, ನೀತಿಕಥೆಗಳೊಂದಿಗೆ ತಮ್ಮ ಮುಂದಿನ ಪೀಳಿಗೆಗೆ ದಾಟಿಸುತ್ತ ಬಂದಿದ್ದಾರೆ. ಈ ಜಿಜ್ಞಾಸೆ ಅಂದಿನಿಂದ ಇಂದಿನವರೆಗೂ ನಡೆದಿದೆ. ಪ್ರಾಪಂಚಿಕ ಸುಖಗಳು ಕ್ಷಣಿಕವಾದುವು, ಪರಬ್ರಹ್ಮವೊಂದೇ ಶಾಶ್ವತ ಎಂಬ ತತ್ತ್ವವು ಅಂದು ಮಾನ್ಯವಾಗಿದ್ದು ತತ್ತ್ವಶಾಸ್ತ್ರಗಳು, ದರ್ಶನಗಳು, ವೇದಪುರಾಣಗಳು ಅದನ್ನೇ ಸಾರಿದವು. ಜ್ಞಾನ –ವೈರಾಗ್ಯಗಳು ಮೇಲುಗೈ ಪಡೆದು ವಿವಿಧ ಚಿಂತನೆಗಳಿಂದಾಗಿ ಬಹು ಶಾಖೆಯ ಜ್ಞಾನದರ್ಶನಗಳು ರೂಪುಗೊಂಡವು. ಕೊನೆಗೆ ಇಡೀ ವಿಶ್ವವೇ ಪರಬ್ರಹ್ಮ ಎಂಬ ಅಂತಿಮ ಸತ್ಯದೊಂದಿಗೆ ಐಕ್ಯಗೊಳ್ಳುವುದೆಂದೂ, ಮತ್ತೆ ಉಗಮವಾಗುವುದೆಂದೂ ನಂಬಲಾಯಿತು. ಬುದ್ಧಿ ವಿಕಾಸಗೊಂಡಂತೆಲ್ಲ, ಜ್ಞಾನಶಾಖೆಗಳು ಬೆಳೆದಂತೆಲ್ಲ ಮಾನವ ಮಾತ್ರವಲ್ಲ, ಸಕಲ ಜೀವಿಗಳು, ಅಣು–ರೇಣು ತೃಣ–ಕಾಷ್ಟಗಳಲ್ಲಿಯೂ ಸರ್ವ ಅಂತರಗಾಮಿಯಾದ ಯಾವುದೋ ಶಕ್ತಿ ಎಲ್ಲವನ್ನೂ ನಿಯಂತ್ರಿಸುವುದೆಂಬ ನಿರ್ಧಾರವೇ ಅಂತಿಮವಾಯಿತು. ಮುಂದೆ ಪರಸ್ಪರ ವಿಚಾರ ವಿನಿಮಯ – ಶ್ರೇಷ್ಠರೆಲ್ಲ ಸೇರಿಚರ್ಚೆಗಳು – ವಾಗ್ವಾದಗಳು ಬೆಳೆದಂತೆಲ್ಲ ಅತಿಶ್ರೇಷ್ಠರು ಯಾರೆಂದೂ, ಅತ್ಯುನ್ನತ ಜ್ಞಾನಿ ಯಾರೆಂದೂ ಸಕಲ ವಿದ್ಯಾಪಾರಂಗತರೆಲ್ಲ ಸೇರಿ ಚರ್ಚಿಸಿದರು. – ಹೀಗೆ ಕಥೆಗಳು – ಉಪಕಥೆಗಳು ಬೆಳೆದು ಪ್ರಪಂಚದ ಜ್ಞಾನವನ್ನೆಲ್ಲ ಕ್ರೋಢೀಕರಿಸ ತೊಡಗಿದಾಗ ಇಂತಹ ಮಹಾನ್ ವ್ಯಕ್ತಿಗಳಿಂದ ಬೃಹತ್ ಗ್ರಂಥಗಳ ರಚನೆಯಾಯಿತು. ಭಾರತೀಯ ಸಂಸ್ಕೃತಿಯ ವೈಶಿಷ್ಟ್ಯತೆಯನ್ನು ಎತ್ತಿ ತೋರಿಸುವ ಈ ದರ್ಶನ ಗ್ರಂಥವು ಏಳು ಸಂಪುಟಗಳಲ್ಲಿ ಸುಮಾರು 5600 ಪುಟಗಳಷ್ಟಿದ್ದು ಜ್ಞಾನಧಾರೆಯೇ ಹರಿದು ಬಂದು ಜನಸಾಗರವನ್ನು ಸೇರುವಷ್ಟು ಅಗಾಧವಾಗಿದೆ. ಹೇಮಂತ ಸಾಹಿತ್ಯದ ಅಗಾಧ ಪರಿಶ್ರಮದ ಪ್ರಕಟಣೆಯಾದ 28,000 ಶ್ಲೋಕಗಳಿರುವ ಇಂಥ ಮಹತ್ವದ ಉದ್ಗ್ರಂಥವನ್ನು ನಾಡಿನ ಶ್ರೇಷ್ಠ ಸಾಹಿತ್ಯ ಪ್ರತಿಭೆಯೆಂದು ಗೌರವಕ್ಕೆ ಪಾತ್ರರಾದ ದೇವುಡು ಕನ್ನಡೀಕರಿಸಿದ್ದಾರೆ.

**ಒಟ್ಟು 7 ಸಂಪುಟಗಳ**

**ಬೆಲೆ ₹ 3150/-**



# ಭ್ರಷ್ಟಾಚಾರಕ್ಕೆ ಕಡಿವಾಣ- ನಾಗರಿಕರ ಜವಾಬ್ದಾರಿ



**ಭ್ರಷ್ಟಾಚಾರಕ್ಕೆ ಏನು ಕಾರಣ ? ಒಂದೇ ಎರಡೇ ? ಭ್ರಷ್ಟಾಚಾರಕ್ಕೆ ಅನೇಕ ಕಾರಣಗಳನ್ನು ಪಟ್ಟಿಮಾಡಬಹುದು. ಅದಕ್ಕೆ ಸಾಮಾಜಿಕ, ಆರ್ಥಿಕ, ರಾಜಕೀಯ, ಆಡಳಿತಾತ್ಮಕ ಮತ್ತು ಕಾನೂನುಗಳಲ್ಲಿರುವ ಲೋಪದೋಷಗಳು ಕಾರಣ. ಆದರೆ ಭ್ರಷ್ಟಾಚಾರಕ್ಕೆ ಬಹು ಮುಖ್ಯ ಕಾರಣ ವ್ಯಕ್ತಿಗಳಲ್ಲಿ ಮಾಯವಾಗುತ್ತಿರುವ ನೈತಿಕ ಮೌಲ್ಯಗಳು. ತನ್ನ ಆದಾಯಕ್ಕಿಂತ ಹೆಚ್ಚು ಆಸ್ತಿಪಾಸ್ತಿ ಮತ್ತು ಗೃಹೋಪಕರಣಗಳನ್ನು ಖರೀದಿಸಿ ಅದನ್ನು ಅನುಭವಿಸುವ ದುರಾಸೆ ಹೆಚ್ಚಾದಂತೆ ಅನೈತಿಕವಾಗಿ ಹಣ ಸಂಪಾದಿಸಲು ವ್ಯಕ್ತಿಗಳು ಮುಂದಾದಾಗ ಲಂಚಕ್ಕೆ ಕೈಚಾಚುವುದು ಅನಿವಾರ್ಯವಾಗುತ್ತದೆ.**



**ಕ**ಳೆದ ಮೂರು ವರ್ಷಗಳಿಂದ ದೇಶಾದ್ಯಂತ ಕೇಳಿಬರುತ್ತಿರುವ ಭ್ರಷ್ಟಾಚಾರದ ಹಗರಣಗಳು ಸಾಮಾನ್ಯ ನಾಗರಿಕರಲ್ಲಿ ಹತಾಶೆಯನ್ನು ಉಂಟುಮಾಡಿವೆ. ಯಾರು ಭ್ರಷ್ಟಾಚಾರವನ್ನು ತಡೆಗಟ್ಟಬೇಕೋ, ಯಾರು ಭ್ರಷ್ಟಾಚಾರದ ವಿರುದ್ಧ ಕಾನೂನುಗಳನ್ನು ರಚಿಸಿ ಅದನ್ನು ಪರಿಣಾಮಕಾರಿಯಾಗಿ ಆಚರಣೆಗೆ ತರಬೇಕೋ ಅವರೇ ಭ್ರಷ್ಟಾಚಾರದಲ್ಲಿ ಮುಳುಗಿರುವುದು ನಾಗರಿಕರು ಇಡೀ ವ್ಯವಸ್ಥೆಯ ಬಗ್ಗೆ, ಆಡಳಿತದ ಬಗ್ಗೆ ತಮ್ಮ ವಿಶ್ವಾಸ ಕಳೆದುಕೊಂಡಿದ್ದಾರೆ. ಶುದ್ಧವಾದ, ಸ್ವಚ್ಛವಾದ ಮತ್ತು ನಾಗರಿಕ ಸ್ನೇಹಿ ಆಡಳಿತದ ಬಗ್ಗೆ ಕನಸು ಕಾಣುತ್ತಿದ್ದ ನಾಗರಿಕರು ಈಗ ಅದಾವುದೂ ಬೇಡ, ನಮ್ಮನ್ನು ಭ್ರಷ್ಟಾಚಾರದಿಂದ ಮುಕ್ತಗೊಳಿಸಿದರೆ ಸಾಕು ಎಂದು ಕೇಳುವಂತಾಗಿದೆ. ಈಗ ಭ್ರಷ್ಟಾಚಾರ ಬೃಹದಾಕಾರವಾಗಿ ಬೆಳೆದಿದೆ ಎಂಬುದರಲ್ಲಿ ಸಂದೇಹವಿಲ್ಲ. ಅದಕ್ಕೆ ರಾಜಕಾರಣಿಗಳು, ಅಧಿಕಾರಿಗಳು, ಮಂತ್ರಿಗಳು, ಉದ್ಯಮಿಗಳು ಎಲ್ಲರೂ ಕಾರಣರು ನಿಜ. ಅದೇ ರೀತಿ ಭ್ರಷ್ಟಾಚಾರ ಹೆಚ್ಚಲು ನಾಗರಿಕರೂ ಕಾರಣರು ಎಂಬುದನ್ನು ಮರೆಯುವಂತಿಲ್ಲ.

ಭ್ರಷ್ಟಾಚಾರ, ಅದರ ದುಷ್ಪರಿಣಾಮ ಮತ್ತು ಅದನ್ನು ತಡೆಗಟ್ಟಲು ಕೈಗೊಳ್ಳಬೇಕಾದ ಕ್ರಮದ ಬಗ್ಗೆ ಸಾಕಷ್ಟು ಚರ್ಚೆ ನಡೆಯುತ್ತಿರುವ ಹಿನ್ನೆಲೆಯಲ್ಲಿ ಒಬ್ಬ ನಾಗರಿಕ ತನ್ನ ವೈಯಕ್ತಿಕ ಮಟ್ಟದಲ್ಲಿ ಏನು ಮಾಡಬಹುದು ಎಂಬ ಪ್ರಶ್ನೆ ಎದುರಾದಾಗ ಎಲ್ಲರೂ ಅಸಹಾಯಕರಾಗುತ್ತಾರೆ. ಭ್ರಷ್ಟಾಚಾರವೆಂಬ ಪೆಡಂಭೂತವನ್ನು ಒಬ್ಬನಿಂದ ನಾಶಪಡಿಸಲು ಸಾಧ್ಯವಿಲ್ಲ ಎಂದು ಹೇಳುವವರೇ ಹೆಚ್ಚು. ಇದನ್ನು ಒಪ್ಪಿಕೊಳ್ಳಲೇಬೇಕು. ಕಾರಣ ಭ್ರಷ್ಟಾಚಾರದ ವ್ಯಾಪ್ತಿ ಮತ್ತು ಆಳ. ಯಾವುದಾದರೂ ಒಂದು ಕ್ಷೇತ್ರದಲ್ಲಿ ಭ್ರಷ್ಟಾಚಾರವಿದ್ದರೆ ಅದನ್ನು ಹೇಗಾದರೂ ಮಾಡಿ ನಿಗ್ರಹಿಸಬಹುದು.

**ವೈ. ಜಿ. ಮುರಳೀಧರ**

ಆದರೆ ಜನಜೀವನದ ಎಲ್ಲ ಅಂಗಗಳಿಗೂ ಈ ಸೋಂಕು ಹರಡಿದ್ದರೆ, ಎಲ್ಲಿಂದ ಚಿಕಿತ್ಸೆ ಆರಂಭಿಸುವುದು ? ನಮ್ಮ ಮುಂದಿರುವ ಭ್ರಷ್ಟಾಚಾರವನ್ನು ನಿಗ್ರಹಿಸಲು ಒಂದು ಅಸ್ತ್ರದಿಂದ ಸಾಧ್ಯವಿಲ್ಲ, ಅದಕ್ಕೆ ನಾನಾ ರೀತಿಯ ಪ್ರಯತ್ನ ಅವಶ್ಯ. ಅದರಲ್ಲಿ ನಾಗರಿಕರ ಪಾತ್ರವೂ ಒಂದು. ವೈಯಕ್ತಿಕವಾಗಿ ನೀವು ಏನು ಮಾಡಬಹುದು ? ಯಾವ ಕ್ರಮ ಅನುಸರಿಸಬಹುದು ?

ಭ್ರಷ್ಟಾಚಾರದ ಬಗ್ಗೆ ಇಷ್ಟೊಂದು ಚರ್ಚೆ ನಡೆಯುತ್ತಿದ್ದರೂ, ವಿಪುಲವಾದ ಮಾಹಿತಿ ಪ್ರಕಟವಾಗುತ್ತಿದ್ದರೂ ಮೂಲಭೂತವಾಗಿ ಭ್ರಷ್ಟಾಚಾರದ ಪರಿಕಲ್ಪನೆ ಬಗ್ಗೆ ಅನೇಕರಿಗೆ ತಿಳಿದಿಲ್ಲ. ಭ್ರಷ್ಟಾಚಾರದ ವಿರುದ್ಧ ಹೋರಾಟ ನಡೆಸಲಿಚ್ಛಿಸುವವರು ಪ್ರಥಮವಾಗಿ ಭ್ರಷ್ಟಾಚಾರವನ್ನು ಅರ್ಥಮಾಡಿಕೊಳ್ಳಬೇಕು. ಭ್ರಷ್ಟಾಚಾರವನ್ನು ಸಾವಿರಾರು ರೀತಿಯಲ್ಲಿ ವರ್ಣಿಸಲಾಗಿದೆ. ಅದರ ಮುಖ್ಯಾಂಶಗಳನ್ನು ವಿವರಿಸಲಾಗಿದೆ. ಆದರೂ ಭ್ರಷ್ಟಾಚಾರದ ಸಂಪೂರ್ಣ ಚಿತ್ರಣ ದೊರಕಿಲ್ಲ. ಸ್ಥೂಲವಾಗಿ ಹೇಳುವುದಾದರೆ ಭ್ರಷ್ಟಾಚಾರ ನಾಲ್ಕು ಅಂಶಗಳಿಂದ ಕೂಡಿದೆ. ಅವು ಗಳೆಂದರೆ (೧) ಸ್ಥಾನ ಮತ್ತು ಅಧಿಕಾರದ ದುರುಪಯೋಗ, (೨) ಅಧಿಕಾರ ದುರುಪಯೋಗಪಡಿಸಿಕೊಂಡವರಿಗೆ ಲಾಭ, (೩) ಅಧಿಕಾರದ ದುರುಪಯೋಗ ಇತರೆ ವ್ಯಕ್ತಿಗಳ ಮೇಲೆ ಉಂಟುಮಾಡುವ ದುಷ್ಪರಿಣಾಮ, ಹಾಗೂ (೪) ಅಧಿಕಾರದ ದುರುಪಯೋಗದ ಗೌಪ್ಯತೆ. ಒಟ್ಟಾರೆ ಹೇಳುವುದಾದರೆ, ಸಾರ್ವಜನಿಕ ಅಧಿಕಾರವನ್ನು ಸ್ವಂತ ಉಪಯೋಗಕ್ಕೆ ದುರುಪಯೋಗ ಪಡಿಸಿಕೊಳ್ಳುವ

## ವ್ಯತ್ಯಾಸ

ಬೀದಿ
ಬದಿಯ
ಕಲ್ಲಿಗೆ
ತಾತ್ಸಾರ
ಗರ್ಭಗುಡಿಯ
ಶಿಲೆಗೆ
ಭಕ್ತಿ
ಮಹಾಪೂರ

ಮ. ಶ್ರೀ. ಮುರಳಿ ಕೃಷ್ಣ
ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ
ಬೆಂಗಳೂರು – 560 061

ಎಲ್ಲ ಕ್ರಮಗಳನ್ನೂ ಭ್ರಷ್ಟಾಚಾರ ಎಂದು ಹೇಳಬಹುದು. ಆದ್ದರಿಂದ ಭ್ರಷ್ಟಾಚಾರ ಕೇವಲ ಹಣ ಗಳಿಕೆ ಅಥವಾ ಅಕ್ರಮ ಆಸ್ತಿಗೆ ಸಂಬಂಧಿಸಿದ್ದಲ್ಲ, ಇತರೆ ಮಾದರಿ ದುರುಪಯೋಗವೂ ಭ್ರಷ್ಟಾಚಾರವಾಗುತ್ತದೆ.

ನಾಗರಿಕರು ಏತಕ್ಕಾಗಿ ಭ್ರಷ್ಟಾಚಾರದ ವಿರುದ್ಧ ಧ್ವನಿಗೂಡಿಸಬೇಕು ? ಬಹುಶಃ ನಾಗರಿಕರು ಇದಕ್ಕೆ ಸೂಕ್ತ ಉತ್ತರವನ್ನು ಕಂಡುಕೊಳ್ಳಬೇಕು. ಕಾರಣ ಭ್ರಷ್ಟಾಚಾರದಿಂದ ತಮಗೆ ಯಾವುದೇ ತೊಂದರೆ ಆಗುವುದಿಲ್ಲ ಎಂದು ಭಾವಿಸುವ ನಾಗರಿಕರೇ ಹೆಚ್ಚು. ಅಧಿಕಾರಿಯೊಬ್ಬ ಉದ್ಯಮಿಯಿಂದ ಲಂಚ ಪಡೆದರೆ ಅದರಿಂದ ನನ್ನ ಮೇಲೆ ಯಾವುದೇ ದುಷ್ಪರಿಣಾಮ ಉಂಟಾಗುವುದಿಲ್ಲ ಎಂದು ತಿಳಿದು ಭ್ರಷ್ಟಾಚಾರದ ವಿರುದ್ಧ ಧ್ವನಿ ಎತ್ತದವರ ಸಂಖ್ಯೆ ಹೆಚ್ಚಾಗಿರುವುದರಿಂದಲೇ ಭ್ರಷ್ಟಾಚಾರ ಎಲ್ಲ ದಿಕ್ಕುಗಳಲ್ಲೂ ಕಾಣಿಸಿಕೊಂಡಿದೆ. ಇದಕ್ಕೆ ಮೂಲ ಕಾರಣ ಭ್ರಷ್ಟಾಚಾರ ಕಂಡರೂ ಅದನ್ನು ವಿರೋಧಿಸುವ ನಾಗರಿಕರ ಸಂಖ್ಯೆ ಕಡಿಮೆ. ಲಂಚ ಕೊಟ್ಟವನೊಬ್ಬ, ಅದನ್ನು ಪಡೆದುಕೊಂಡವನು ಮತ್ತೊಬ್ಬ. ಇದರಿಂದ ನನಗೆ ಯಾವುದೇ ನಷ್ಟ ಅಥವಾ ಲಾಭ ಇಲ್ಲದಾಗ ಅದನ್ನು ಏಕೆ ವಿರೋಧಿಸಿ ಕೆಟ್ಟವನಾಗಬೇಕು ?

ಭ್ರಷ್ಟಾಚಾರವನ್ನು ಇಷ್ಟೊಂದು ಸುಲಭವಾಗಿ ಪರಿಗಣಿಸಲು ಸಾಧ್ಯವಿಲ್ಲ, ಕಾರಣ ಭ್ರಷ್ಟಾಚಾರದ ಪರಿಣಾಮ ಅತ್ಯಂತ ಗಂಭೀರವಾದದ್ದು. ಎಲ್ಲ ನಾಗರಿಕರ ಮೇಲೂ ಅದರ ದುಷ್ಪರಿಣಾಮವನ್ನು ಕಾಣಬಹುದು. ಭ್ರಷ್ಟಾಚಾರ ಸಾಮಾಜಿಕ ಮತ್ತು ಆರ್ಥಿಕ ಅಭಿವೃದ್ಧಿಯ ಮೇಲೆ ಕೆಟ್ಟ ಪರಿಣಾಮ ಉಂಟುಮಾಡುತ್ತದೆ. ಸರ್ಕಾರದ ಬಂಡವಾಳ ಕೆಲವೇ ವ್ಯಕ್ತಿಗಳ ಕೈವಶವಾಗಿ ಇಡೀ ಸಮುದಾಯದ ಅಭಿವೃದ್ಧಿಯನ್ನು ಕುಂಠಿತಗೊಳಿಸುತ್ತದೆ. ಶಿಕ್ಷಣ, ಆರೋಗ್ಯ ಮುಂತಾದ ಕ್ಷೇತ್ರಗಳಿಗೆ ಅಗತ್ಯವಾದ ಸಂಪನ್ಮೂಲವನ್ನು ಮತ್ತೊಂದೆಡೆಗೆ ವರ್ಗಾಯಿಸುವುದೇ ಭ್ರಷ್ಟಾಚಾರ. ಭ್ರಷ್ಟಾಚಾರ ಇಡೀ



# ರೂಪಾಂತರ

ಕರೆದಿಟ್ಟ ಹಾಲು
ಕಾಯಿಸುವ ಕಾತರತೆಯಲ್ಲಿ
ಅರೆಗಳಿಗೆ ಉಕ್ಕಿಬಿಡುವುದೋ
ಕ್ಷಣ ಕ್ಷಣ ಜತನ
ಅಂತೂ ನೊರೆಹಾಲು
ಕುದಿಬಂದು
ಕೆನೆಗಟ್ಟಿದಾಗ ಸಮಾಧಾನ
ಉಕ್ಕಿದರೆ ಗತಿಯೇನು ?
ಎಂದು ಬಿಕ್ಕಳಿಸಿದ
ಮನಸಿಗೀಗ ಸಾಂತ್ವನ.

ತೆಗೆದಿರಿಸಿದ ಕೆನೆಯೆಲ್ಲಾ
ಮತ್ತೆ ಸಣ್ಣಗೆ ಕಳಿತು
ಮೊಸರಾಗುವ ಪ್ರಕ್ರಿಯೆ
ಅದೇ ಕಣಕಣದಲ್ಲು
ಸಣ್ಣದೊಂದು ಸುಳಿ
ಜೀವನದಿಯ ತಿರುವಿನೊಳಗೆ
ಸಿಹಿ, ಹುಳಿಗಳ ಮಿಶ್ರಣ.

ಮೊಸರಿನೊಳಗವಿತ
ನವನೀತ
ಈಗ ಬರುವುದೆಂಬ
ಕಾಯುವಿಕೆಗೂ
ಒಂದರ್ಥ ನೀಡಿದ
ಚಡಪಡಿಕೆ
ಬೆಸೆದ ಬಾಂಧವ್ಯ
ಬೆಣ್ಣೆಗಿಂತ ಮೃದು !

ಬೆಣ್ಣೆ ಕರಗಿ ಹದವಾಗಿ
ಕಾಲ ಕಾಲಕ್ಕೆ ಬದಲಾಗಿ ಕಾದು
ಪಕ್ವತೆ ತುಪ್ಪವಾಗಿ
ಪರಿಮಳ ನಾಲ್ಕೆಡೆ ಸೂಸಿದರೆ
ತುಪ್ಪ ಭಾಷ್ಯ ಬರೆದಂತೆ
ಸಾರ್ಥಕ ಸಾಲುಗಳು ಎದೆಯೊಳಗೆ

ತುಪ್ಪ ಸವೆಸಿ ಬಂದ
ದಿನಗಳ ನಲ್ನುಡಿ
ರೂಪ ರೂಪಗಳನ್ನು ದಾಟಿ
ಸಮನ್ವಯ ಸಾಟಿಯಾಗಿ
ಜೀವನನುಭೂತಿಗೊಂದು ಮುನ್ನುಡಿ.

**ಸಂಗೀತ ರವಿರಾಜ್**
ಹೊಸೂರು ಮನೆ, ಬಾಲಂಬಿ ಅಂಚೆ, ಚೆಂಬು ಗ್ರಾಮ
ಮಡಿಕೇರಿ ತಾಲ್ಲೂಕು, ಕೊಡಗು - ೫೭೧ ೨೩೧

ಆಡಳಿತ ವ್ಯವಸ್ಥೆಯನ್ನೇ ಕಲುಷಿತಗೊಳಿಸುತ್ತದೆ. ಚುನಾವಣೆ ಮತ್ತು ಪ್ರಜಾಪ್ರಭುತ್ವದ ಮೌಲ್ಯ ಕುಸಿಯುತ್ತಿರುವುದಕ್ಕೆ ಕಾರಣ ಭ್ರಷ್ಟಾಚಾರ. ಅಂತಿಮವಾಗಿ, ಭ್ರಷ್ಟಾಚಾರ ಸಮಾಜದಲ್ಲಿರುವ ಅಸಮತೋಲನವನ್ನು ಮತ್ತಷ್ಟು ಹೆಚ್ಚಿಸುತ್ತದೆ. ಭ್ರಷ್ಟಾಚಾರ ವೈಯಕ್ತಿಕವಾಗಿ ದುಷ್ಪರಿಣಾಮ ಉಂಟುಮಾಡದಿದ್ದರೂ, ದೀರ್ಘಾವಧಿಯಲ್ಲಿ ಇಡೀ ಸಮಾಜವನ್ನೇ ನಾಶಪಡಿಸುತ್ತದೆ. ಆದ್ದರಿಂದ ಪ್ರತಿಯೊಬ್ಬ ವ್ಯಕ್ತಿಯೂ ಭ್ರಷ್ಟಾಚಾರದ ವಿರುದ್ಧ ಧ್ವನಿಗೂಡಿಸಬೇಕಿದೆ. ಆ ಧ್ವನಿ ಅದೆಷ್ಟೇ ಕ್ಷೀಣವಾಗಿದ್ದರೂ ಚಿಂತೆಯಿಲ್ಲ ಧ್ವನಿ ಎತ್ತುವುದು ಮುಖ್ಯ. ಉದಾಹರಣೆಗೆ ಸಾರ್ವಜನಿಕ ವಿತರಣಾ ವ್ಯವಸ್ಥೆಯಲ್ಲಿರುವ ಭ್ರಷ್ಟಾಚಾರವನ್ನು ಉಲ್ಲೇಖಿಸಬಹುದು. ವ್ಯಕ್ತಿಯೊಬ್ಬ ರೇಷನ್ ಅಂಗಡಿಯಲ್ಲಿ ಆಹಾರ ಧಾನ್ಯ ಖರೀದಿಸದಿರಬಹುದು. ಆದರೆ ಈ ಯೋಜನೆಯಲ್ಲಿ ಆಗುತ್ತಿರುವ ವಂಚನೆ, ಪೋಲಾಗುತ್ತಿರುವ ಹಣ, ಕಳ್ಳಸಂತೆಯಲ್ಲಿ ಮಾರಾಟವಾಗುತ್ತಿರುವ ಆಹಾರ ಧಾನ್ಯಗಳ ಪ್ರಮಾಣ ಇತ್ಯಾದಿ ಪ್ರತಿಯೊಬ್ಬ ಭಾರತೀಯ ಪ್ರಜೆಯ ಮೇಲೆ ದುಷ್ಪರಿಣಾಮ ಉಂಟುಮಾಡುತ್ತದೆ.

ಭ್ರಷ್ಟಾಚಾರಕ್ಕೆ ಏನು ಕಾರಣ ? ಒಂದೇ ಎರಡೇ ? ಭ್ರಷ್ಟಾಚಾರಕ್ಕೆ ಅನೇಕ ಕಾರಣಗಳನ್ನು ಪಟ್ಟಿಮಾಡಬಹುದು. ಅದಕ್ಕೆ ಸಾಮಾಜಿಕ, ಆರ್ಥಿಕ, ರಾಜಕೀಯ, ಆಡಳಿತಾತ್ಮಕ ಮತ್ತು ಕಾನೂನುಗಳಲ್ಲಿರುವ ಲೋಪದೋಷಗಳು ಕಾರಣ. ಆದರೆ ಭ್ರಷ್ಟಾಚಾರಕ್ಕೆ ಬಹು ಮುಖ್ಯ ಕಾರಣ ವ್ಯಕ್ತಿಗಳಲ್ಲಿ ಮಾಯವಾಗುತ್ತಿರುವ ನೈತಿಕ ಮೌಲ್ಯಗಳು. ತನ್ನ ಆದಾಯಕ್ಕಿಂತ ಹೆಚ್ಚು ಆಸ್ತಿಪಾಸ್ತಿ ಮತ್ತು ಗೃಹೋಪಕರಣಗಳನ್ನು ಖರೀದಿಸಿ ಅದನ್ನು ಅನುಭವಿಸುವ ದುರಾಸೆ ಹೆಚ್ಚಾದಂತೆ ಅನೈತಿಕವಾಗಿ ಹಣ ಸಂಪಾದಿಸಲು ವ್ಯಕ್ತಿಗಳು ಮುಂದಾದಾಗ ಲಂಚಕ್ಕೆ ಕೈಚಾಚುವುದು ಅನಿವಾರ್ಯವಾಗುತ್ತದೆ. ಇದಕ್ಕೆ ತಕ್ಕಂತೆ ಸಾಮಾಜಿಕ ಮೌಲ್ಯಗಳು ಬದಲಾಗುತ್ತಿವೆ. ಯಾರು ಹೆಚ್ಚು ಆಸ್ತಿ ಹೊಂದಿರುತ್ತಾರೋ ಅವರಿಗೆ ಹೆಚ್ಚಿನ ಗೌರವ ದೊರೆಯುತ್ತದೆ. ಆ ಆಸ್ತಿ ಸಂಪಾದನೆಗೆ ಅವರು ಯಾವ ಹಾದಿ ಅನುಸರಿಸಿದರೋ ಅದು ಮುಖ್ಯವಾಗುವುದಿಲ್ಲ, ಅವರಲ್ಲಿರುವ ಆಸ್ತಿಯ ಮೌಲ್ಯ ಮುಖ್ಯವಾಗುತ್ತದೆ. ಮಾಧ್ಯಮ ಸಹ ನಾಗರಿಕರಲ್ಲಿ ಕೊಳ್ಳುಬಾಕ ಸಂಸ್ಕೃತಿಯನ್ನು ಸೃಷ್ಟಿಸುತ್ತಿದೆ. ಆಸ್ತಿಪಾಸ್ತಿ ಇಲ್ಲದವರನ್ನು ಮೂರ್ಖರೆಂದು ಅಥವಾ ಅದಕ್ಷರೆಂದು ಪರಿಗಣಿಸುವ ಸಂಪ್ರದಾಯ ಆಳವಾಗಿ ಬೇರುಬಿಟ್ಟಿದೆ. ಭ್ರಷ್ಟಾಚಾರಕ್ಕೆ ಮತ್ತೊಂದು ಕಾರಣ ಆದರ್ಶ ವ್ಯಕ್ತಿಗಳ ಕೊರತೆ. ಸತ್ಯ, ಧರ್ಮ, ವಿನಯತೆ, ಸರಳತೆ ಇತ್ಯಾದಿ



ಮೌಲ್ಯಗಳನ್ನು ರೂಢಿಸಿಕೊಂಡಿರುವ ವ್ಯಕ್ತಿಗಳನ್ನು ಹುಡುಕಬೇಕಿದೆ. ಉನ್ನತ ಸ್ಥಾನದಲ್ಲಿರುವ ವ್ಯಕ್ತಿಗಳನ್ನು ಆರಾಧಿಸುವ ಮತ್ತು ಗೌರವಿಸುವ ನಮ್ಮ ಸಮಾಜದಲ್ಲಿ ಆ ರೀತಿಯ ವ್ಯಕ್ತಿಗಳ ಕೊರತೆ ಭ್ರಷ್ಟಾಚಾರಕ್ಕೆ ಕಾರಣವಾಗಿದೆ. ನಾಗರಿಕರಿಗೆ ಹಣ ಮಾಡುವ ಗುರಿಯೊಂದನ್ನು ಹೊರತುಪಡಿಸಿ ಉಳಿದ ಮೌಲ್ಯಗಳನ್ನು ಮೈಗೂಡಿಸಿಕೊಳ್ಳುವಂತೆ ತಮ್ಮ ಸ್ವಂತ ನಡವಳಿಕೆಯ ಮೂಲಕ ತೋರಿಸಿಕೊಡುವವರ ಕೊರತೆ ಎದ್ದು ಕಾಣುತ್ತಿದೆ.

ಭ್ರಷ್ಟಾಚಾರಕ್ಕೆ ಮತ್ತೊಂದು ಕಾರಣ ಅದನ್ನು ಒಪ್ಪಿಕೊಂಡಿರುವುದು. ಬಹುತೇಕ ನಾಗರಿಕರು ಭ್ರಷ್ಟಾಚಾರವನ್ನು ಸಹಜವೆಂದು ನಂಬಿದ್ದಾರೆ. ಭ್ರಷ್ಟಾಚಾರ ನಿತ್ಯಜೀವನದ ಭಾಗ ಎಂಬಷ್ಟು ಅದು ಹರಡಿದೆ. ಇದರ ವಿರುದ್ಧ ಧ್ವನಿ ಎತ್ತದೆ ಇರುವುದು ಭ್ರಷ್ಟಾಚಾರವನ್ನು ಮತ್ತಷ್ಟು ಹೆಚ್ಚಿಸಿದೆ. ಭ್ರಷ್ಟಾಚಾರವನ್ನು ಒಪ್ಪಿಕೊಂಡಿರುವುದನ್ನು ಮತ್ತೊಂದು ರೀತಿಯಲ್ಲಿ ನೋಡಬಹುದು. ಯಾವುದೇ ಸಾರ್ವಜನಿಕ ಸಮಾರಂಭವಾಗಲಿ ಅಲ್ಲಿ ಭ್ರಷ್ಟ ನಾಯಕರು, ರಾಜಕಾರಣಿಗಳು, ಮಂತ್ರಿಗಳು, ಅಧಿಕಾರಿಗಳು ಅಥವಾ ಉದ್ಯಮಿಗಳನ್ನು ಕರೆದು, ಕುಳ್ಳಿರಿಸಿ, ಹಾರ- ತುರಾಯಿ ಕೊಟ್ಟು, ಶಾಲು ಹೊದಿಸಿ ಸನ್ಮಾನಿಸಲಾಗುತ್ತದೆ. ಯಾವುದೇ ಸರ್ಕಾರವಾಗಲಿ ಅದರ ಆಡಳಿತಗಾರರಿಗೆ ವಿವೇಚನಾ ಅಧಿಕಾರ ನೀಡಬೇಕಾಗುತ್ತದೆ. ಅದಿಲ್ಲದೆ ಆಡಳಿತ ಅಸಾಧ್ಯ. ಆದರೆ ಅಧಿಕಾರಿಗಳು ಈ ವಿವೇಚನಾ ಅಧಿಕಾರವನ್ನು ದುರುಪಯೋಗ ಮಾಡಿಕೊಳ್ಳುವುದು ಸಾಮಾನ್ಯವಾಗಿದೆ. ಇದೊಂದು ರೀತಿಯ ಭ್ರಷ್ಟಾಚಾರ.

ಕಾನೂನುಗಳಲ್ಲಿರುವ ಲೋಪದೋಷಗಳು ಸಹ ಭ್ರಷ್ಟಾಚಾರಕ್ಕೆ ಕಾರಣವಾಗಿವೆ. ಈ ಲೋಪದೋಷಗಳನ್ನು ಉಪಯೋಗಿಸಿಕೊಂಡು ಅದೆಷ್ಟೋ ಭ್ರಷ್ಟರು ಯಾವುದೇ ಶಿಕ್ಷೆಗೆ ಗುರಿಯಾಗದೆ ಅನುಚಿತವಾಗಿ ಸಂಪಾದಿಸಿದ ಆಸ್ತಿಪಾಸ್ತಿಯನ್ನು ಅನುಭವಿಸುತ್ತಿದ್ದಾರೆ. ಕಡೆಯದಾಗಿ, ನಾಗರಿಕರಲ್ಲಿರುವ ಮಾಹಿತಿಯ ಕೊರತೆ ಸಹ ಭ್ರಷ್ಟಾಚಾರಕ್ಕೆ ಎಡೆಮಾಡಿಕೊಟ್ಟಿದೆ. ಬಹುತೇಕ ನಾಗರಿಕರಿಗೆ ತಮ್ಮ ಹಕ್ಕುಗಳ ಬಗ್ಗೆ, ತಮಗೆ ದೊರೆಯಬೇಕಾದ ಸೌಲಭ್ಯಗಳ ಬಗ್ಗೆ ಮಾಹಿತಿ ಇಲ್ಲವಾಗಿದೆ. ಕೆಲ ಅಧಿಕಾರಿಗಳು ಬೇಕೆಂದೇ ಮಾಹಿತಿಯನ್ನು ಮುಚ್ಚಿಡುತ್ತಾರೆ. ಗೌಪ್ಯತೆ ಸಹ ಭ್ರಷ್ಟಾಚಾರಕ್ಕೆ ಒಂದು ಕಾರಣ.



**ಭ್ರಷ್ಟಾಚಾರದ ನಿಗ್ರಹಕ್ಕೆ ಬಳಸಬಹುದಾದ ಅಸ್ತ್ರಗಳು**

ವೈಯಕ್ತಿಕ ಮಟ್ಟದಲ್ಲಿ ಭ್ರಷ್ಟಾಚಾರ ನಿಗ್ರಹಕ್ಕೆ ಪ್ರಯತ್ನಿಸುವವರು ಅನೇಕ ರೀತಿಯ ಅಸ್ತ್ರಗಳನ್ನು ಬಳಸಬಹುದು. ಅವುಗಳಲ್ಲಿ ಮುಖ್ಯವಾದದ್ದು ವೈಯಕ್ತಿಕ ನಡತೆ ಮತ್ತು ಚಾರಿತ್ರ್ಯ. ಭ್ರಷ್ಟಾಚಾರದ ವಿರುದ್ಧ ಧ್ವನಿಗೂಡಿಸಲು ಇಚ್ಛಿಸುವವರು ಪ್ರಥಮವಾಗಿ ತಾವು ಸತ್ಯವಂತರಾಗಿರುತ್ತೇವೆ ಎಂದು ನಿರ್ಧರಿಸಬೇಕು. ಯಾವುದೇ ಕಾರಣಕ್ಕೂ ಲಂಚ ತೆಗೆದುಕೊಳ್ಳುವುದಿಲ್ಲ ಅಥವಾ ನೀಡುವುದಿಲ್ಲ ಎಂಬ ಸಂಕಲ್ಪ ಮಾಡಬೇಕು. ಬಹುತೇಕ ನಾಗರಿಕರು ಇದಕ್ಕೆ ಪ್ರಾಮುಖ್ಯತೆ ನೀಡುವುದಿಲ್ಲ. ಲಂಚದ ವಿಷಯದಲ್ಲಿ ಮಾತ್ರವಲ್ಲ ವ್ಯಕ್ತಿಗಳಾಗಿ ನಾವು ಎಷ್ಟರಮಟ್ಟಿಗೆ ಕಾನೂನುಗಳನ್ನು ಪಾಲಿಸುತ್ತೇವೆ? ದಿನನಿತ್ಯದ ಚಟುವಟಿಕೆಗಳಲ್ಲಿ ಅನೇಕರು ಕಾನೂನಿಗೆ ವಿರುದ್ಧವಾಗಿ ನಡೆದುಕೊಳ್ಳುತ್ತಾರೆ. ಅದು ಟ್ರಾಫಿಕ್ ಸಿಗ್ನಲ್ ಇರಬಹುದು ಅಥವಾ ಕ್ಯೂ ಮುರಿಯುವುದಾಗಬಹುದು. ಸರಕುಗಳನ್ನು ಖರೀದಿಸಿದಾಗ ಬಿಲ್ ಬೇಡವೆಂದು ಅದಕ್ಕೆ ತಗಲುವ ತೆರಿಗೆಯನ್ನು ನೀಡದಿರುವುದೂ ಸಹ ಭ್ರಷ್ಟಾಚಾರದ ಒಂದು ಮುಖವಲ್ಲವೆ? ಇದರಲ್ಲಿ ತಾವೂ ಭ್ರಷ್ಟರಾಗಿ ಮಾರಾಟಗಾರನನ್ನೂ ಭ್ರಷ್ಟಾಚಾರಕ್ಕೆ ಪ್ರೇರೇಪಿಸಿದಂತಲ್ಲವೆ?



ರಾಜಕಾರಣಿಗಳ ಮತ್ತು ಅಧಿಕಾರಿಗಳ ಸುಳ್ಳು, ಕಳ್ಳತನ ಇತ್ಯಾದಿ ವಿರೋಧಿಸುವ ನಾಗರಿಕರು ತಾವು ಅಂಗಡಿಗೆ ಹೋದಾಗ ಹೇಗೆ ನಡೆದುಕೊಳ್ಳುತ್ತಾರೆ? ಅಂಗಡಿಯವನು ಆಕಸ್ಮಾತ್ ಹೆಚ್ಚು ಚಿಲ್ಲರೆ ನೀಡಿದರೆ ಅದನ್ನು ಹಿಂದಕ್ಕೆ ನೀಡುವ ನಾಗರಿಕರ ಸಂಖ್ಯೆ ಎಷ್ಟು? ಅಂಗಡಿಯವರ ಕಣ್ಣುತಪ್ಪಿಸಿ ಸರಕುಗಳನ್ನು ಕದಿಯುವ (ಶಾಪ್ ಲಿಫ್ಟಿಂಗ್) ಅನೇಕರು ನಮ್ಮಲ್ಲಿದ್ದಾರೆ. ಗ್ಲೋಬಲ್ ರೀಟೇಲ್ ಥೆಫ್ಟ್ ಬಾರೋಮೀಟರ್ ಸ್ಟಡಿ ಎಂಬ ವರದಿಯ ಪ್ರಕಾರ ಅಂಗಡಿಗಳಲ್ಲಿ ನಡೆಯುವ ಕಳ್ಳತನ ಭಾರತದಲ್ಲಿ ಅತ್ಯಂತ ಹೆಚ್ಚು. ಶಾಪ್ ಲಿಫ್ಟಿಂಗ್‌ನಿಂದಾಗಿ ಭಾರತದ ಚಿಲ್ಲರೆ ಮಾರಾಟಗಾರರು ೨೦೧೦ರಲ್ಲಿ ೯೭೫೫ ಕೋಟಿ ರೂಪಾಯಿಗಳನ್ನು ಕಳೆದುಕೊಂಡಿದ್ದಾರೆ. ಪರೀಕ್ಷೆಯಲ್ಲಿ ಕಾಪಿ ಮಾಡುವ ವಿದ್ಯಾರ್ಥಿಗಳ ಸಂಖ್ಯೆ ಹೆಚ್ಚುತ್ತಲಿದೆ. ಇವೆಲ್ಲವೂ ಭ್ರಷ್ಟಾಚಾರದ ವಿವಿಧ ಮುಖಗಳು. ಆದ್ದರಿಂದ ಭ್ರಷ್ಟಾಚಾರದ ವಿರುದ್ಧ ಹೋರಾಟ ನಡೆಸುವ ಮುನ್ನ ವ್ಯಕ್ತಿಗಳು ಉತ್ತಮ ಗುಣ, ಚಾರಿತ್ರ್ಯ ಬೆಳೆಸಿಕೊಳ್ಳುವುದು ಅತ್ಯಗತ್ಯ.

ಇತರೆ ನಾಗರಿಕರಲ್ಲಿ ಭ್ರಷ್ಟಾಚಾರದ ದುಷ್ಪರಿಣಾಮದ ಬಗ್ಗೆ ಅರಿವು, ಜಾಗೃತಿ ಮತ್ತು ಎಚ್ಚರಿಕೆ ನೀಡುವುದರಿಂದ ಭ್ರಷ್ಟಾಚಾರದ ಪ್ರಮಾಣವನ್ನು ಕಡಿಮೆ ಮಾಡಬಹುದು. ಪ್ರಸ್ತುತ ಭ್ರಷ್ಟಾಚಾರದ ಬಗ್ಗೆ ಏನೇ ಮಾತನಾಡಿದರೂ ಅದನ್ನು ಹಾಸ್ಯ ಎಂದು ಭಾವಿಸಲಾಗುತ್ತಿದೆ. ಯಾರೂ ಈ ಸಮಸ್ಯೆಯನ್ನು ಗಂಭೀರವಾಗಿ ಪರಿಗಣಿಸಿಲ್ಲ, ಇದಕ್ಕೆ ಕಾರಣ ಅನೇಕರಲ್ಲಿ ಭ್ರಷ್ಟಾಚಾರದ ಪರಿಣಾಮದ ಬಗ್ಗೆ ಮಾಹಿತಿ ಇಲ್ಲದಿರುವುದು. ಕುಡಿಯುವ ನೀರಿನ ಅಭಾವ, ಕಸ ವಿಲೇವಾರಿ ಸಮಸ್ಯೆ, ರಸ್ತೆಗಳ ದುಸ್ಥಿತಿ, ಸಾರ್ವಜನಿಕ ಆಸ್ಪತ್ರೆಗಳ ಕಳಪೆ ಗುಣಮಟ್ಟ ಇತ್ಯಾದಿಗೆ ಮೂಲ ಕಾರಣ ಭ್ರಷ್ಟಾಚಾರ ಎಂಬ ಸತ್ಯವನ್ನು ನಾಗರಿಕರಿಗೆ ಮನನ ಮಾಡಿಕೊಡಬೇಕಿದೆ. ಭ್ರಷ್ಟಾಚಾರದ ವಿರುದ್ಧ ಹೋರಾಡುತ್ತಿರುವ ಅನೇಕ ಸರ್ಕಾರೇತರ ಸಂಸ್ಥೆಗಳು ಲಂಚದ ಬಗ್ಗೆ ಸಮೀಕ್ಷೆ ನಡೆಸಿ ವರದಿಯನ್ನು ಪ್ರಕಟಿಸುತ್ತಿವೆ. ಇದನ್ನೇ ಆಧಾರವಾಗಿಟ್ಟುಕೊಂಡು ನಾಗರಿಕರಲ್ಲಿ ಭ್ರಷ್ಟಾಚಾರದ ಭೀಕರತೆಯನ್ನು ತಿಳಿಸುವುದೇ ಒಂದು ಅಸ್ತ್ರವಾಗಬಹುದು. ಮಾಹಿತಿ ನೀಡುವುದರಿಂದ ಭ್ರಷ್ಟಾಚಾರ ಕಡಿಮೆ ಮಾಡಬಹುದು ಎಂಬುದು ಇತ್ತೀಚಿನ ವರ್ಷಗಳಲ್ಲಿ ತಿಳಿದುಬಂದಿದೆ. ವಿಶೇಷವಾಗಿ ಮಾಹಿತಿ ಹಕ್ಕು ಕಾನೂನು ಬಳಸುವ ಮೂಲಕ ಕೆಳಸ್ತರದಲ್ಲಿರುವ ಲಂಚಕ್ಕೆ ಕಡಿವಾಣ ಹಾಕಬಹುದು. ಆದ್ದರಿಂದ ಮಾಹಿತಿ ಹಕ್ಕು ಬಳಸಿ. ನಾಗರಿಕರಿಗೆ ಇರುವ ಹಕ್ಕುಗಳು, ದೊರೆಯುವ ಸೌಲಭ್ಯಗಳು, ಅದಕ್ಕೆ ಸಲ್ಲಿಸಬೇಕಾದ ದಾಖಲೆಗಳು, ಪಾವತಿಸಬೇಕಾದ ಶುಲ್ಕ ಇತ್ಯಾದಿಗಳ ಬಗ್ಗೆ ಜನರಿಗೆ ಮಾಹಿತಿ ಹಂಚುವುದರ ಮೂಲಕ ಭ್ರಷ್ಟಾಚಾರದ ಪ್ರಮಾಣ ಕಡಿಮೆ ಮಾಡಬಹುದು.

ಇತ್ತೀಚೆಗೆ ಕರ್ನಾಟಕವೂ ಸೇರಿದಂತೆ ಅನೇಕ ರಾಜ್ಯಗಳು ಸಾರ್ವಜನಿಕ ಸೇವಾ ಖಾತ್ರಿ ಕಾಯ್ದೆ ರಚಿಸಿ ಅದನ್ನು ಜಾರಿಗೊಳಿಸಿದೆ. ಈ ಕಾಯ್ದೆ ಪ್ರಕಾರ ಸರ್ಕಾರದ ಕಚೇರಿಗಳಲ್ಲಿ ನೀಡುವ ಸೇವೆಗಳಲ್ಲಿ ಕೆಲವೊಂದನ್ನು ಇಂತಿಷ್ಟು ದಿನಗಳಲ್ಲೇ ನೀಡಬೇಕೆಂದು ನಿಗದಿಪಡಿಸಲಾಗಿದೆ. ಒಂದು ವೇಳೆ ವಿಳಂಬವಾದರೆ ನಾಗರಿಕರಿಗೆ ಪರಿಹಾರ ದೊರೆಯುತ್ತದೆ. ಜೊತೆಗೆ ಪರಿಹಾರದ ಮೊತ್ತವನ್ನು ಸಂಬಂಧಪಟ್ಟ ಅಧಿಕಾರಿಗಳ ಸಂಬಳದಿಂದ ಮುರಿದುಕೊಳ್ಳಲಾಗುತ್ತದೆ. ಕರ್ನಾಟಕದಲ್ಲಿ ಇದನ್ನು 'ಸಕಾಲ' ಎಂದು ಕರೆಯಲಾಗಿದೆ. ಬಹುಶಃ ಸರ್ಕಾರಿ ಸೇವೆಗಳನ್ನು ಪಡೆಯುವಲ್ಲಿ ಕಂಡುಬರುವ ಭ್ರಷ್ಟಾಚಾರವನ್ನು ತಡೆಗಟ್ಟಲು ಇದೊಂದು ಉತ್ತಮ ಸಾಧನ. ಆದ್ದರಿಂದ ಇದನ್ನು ಬಳಸುವುದು ಹಾಗೂ ಇತರರಿಗೆ ಇದರ ಬಗ್ಗೆ ಮಾಹಿತಿ ನೀಡುವುದರಿಂದ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಬಹುದು. ಕೆಲವು ಸರ್ಕಾರೇತರ ಸಂಸ್ಥೆಗಳು ಭ್ರಷ್ಟಾಚಾರದ ವಿರುದ್ಧ ಹೋರಾಡುವವರನ್ನು ಒಂದೆಡೆ ಸೇರಿಸಿ ಅದಕ್ಕೊಂದು ವೇದಿಕೆ ನಿರ್ಮಾಣ ಮಾಡಿದೆ. ಉದಾಹರಣೆಗೆ ಬೆಂಗಳೂರಿನ ಕೊಯ್‌ಲೇಷನ್ ಅಗೇನ್ಸ್ಟ್ ಕರಪ್ಶನ್, ಐಪೇಡ್ ಬ್ರೈಬ್ ಇತ್ಯಾದಿ. ಈ ರೀತಿಯ ಸಂಘಟನೆಗಳೆಲ್ಲ ಸೇರಿ ಉತ್ತೇಜನ ನೀಡುವ ಮೂಲಕ ಭ್ರಷ್ಟಾಚಾರಕ್ಕೆ ಕಡಿವಾಣ ಹಾಕಲು ಸಾಧ್ಯ.


**ವೈ. ಜಿ. ಮುರಳೀಧರ**
ನಂ. ೨೯೬, ೫ನೇ 'ಸಿ' ರಸ್ತೆ, ರೆಮ್ಕೊ ಬಡಾವಣೆ, ಹಂಪಿನಗರ, ಬೆಂಗಳೂರು - ೫೬೦ ೧೦೪

೧೯೪೧ರಲ್ಲಿ ಜನಿಸಿದ ಟೆರಿ ಈಗಲ್‌ಟನ್ ಮೂಲತಃ ಐರ್ಲೆಂಡಿನ ಒಂದು ಕುಟುಂಬದವನು. ಆದರೆ ಹುಟ್ಟಿದ್ದು, ವಿದ್ಯಾಭ್ಯಾಸ ಪಡೆದಿದ್ದು ಮತ್ತು ಕೆಲಸ ಮಾಡಿದ್ದು ಇಂಗ್ಲೆಂಡಿನಲ್ಲಿ. ಕೇಂಬ್ರಿಜ್, ಆಕ್ಸ್‌ಫರ್ಡ್, ಮ್ಯಾಂಚೆಸ್ಟರ್ ಮತ್ತು ಲೆಸ್ಟರ್ ವಿಶ್ವವಿದ್ಯಾನಿಲಯಗಳೊಡನೆ ಅವನದು ಐವತ್ತಕ್ಕೂ ಹೆಚ್ಚು ವರ್ಷಗಳ ಸಂಬಂಧ. ವ್ಯಾಸಂಗ ಕೇಂಬ್ರಿಜ್‌ನಲ್ಲಿ, ಆದರೆ ಪ್ರಾಧ್ಯಾಪಕನಾಗಿದ್ದುದು ಲೆಸ್ಟರ್‌ನಲ್ಲೇ ಹೆಚ್ಚು. ಬೇರೆ ಎರಡು ವಿಶ್ವವಿದ್ಯಾನಿಲಯಗಳಲ್ಲೂ ಬೋಧನೆ ಮತ್ತು ಸಂಶೋಧನೆ ನಡೆಸಿದ್ದಾನೆ. ಸಾಹಿತ್ಯ, ಇತಿಹಾಸ ಮತ್ತು ತತ್ತ್ವಶಾಸ್ತ್ರ ಅವನ ಆಸಕ್ತಿಯ ಕ್ಷೇತ್ರಗಳು. ಸಾಹಿತ್ಯ ಮೀಮಾಂಸೆ ಮತ್ತು ವಿಮರ್ಶೆಯಲ್ಲಿ ಆತನ ಕೃಷಿ ಅತ್ಯಂತ ಮೌಲಿಕವಾದ್ದು, ಅದಕ್ಕೆ ವಿಶೇಷ ಮಾನ್ಯತೆ ಲಭ್ಯವಾಗಿದೆ. ಮಾರ್ಕ್ಸ್‌ವಾದಿ ಸಿದ್ಧಾಂತದ ಬಗೆಗಿನ ಅವನ ತಿಳಿವು ಕೇವಲ ಅಧ್ಯಯನದಿಂದ ಬಂದಿದ್ದಲ್ಲ, ಅವನೊಬ್ಬ ಖ್ಯಾತ ಸಂಘಟಕ ಮತ್ತು ಹೋರಾಟಗಾರ ಕೂಡ. ಅಮೆರಿಕಾದಲ್ಲಿ ಇರುವ ಯೇಲ್ ವಿಶ್ವವಿದ್ಯಾನಿಲಯ ೨೦೧೧ರಲ್ಲಿ ''ಮಾರ್ಕ್ಸ್ ಹೇಳಿದ್ದು ಏಕೆ ಸರಿ ?'' ಎಂಬ ಅವನ ೨೪೦ ಪುಟಗಳ ಪುಸ್ತಕವನ್ನು ಪ್ರಕಟಿಸಿತು. ಮಾರ್ಕ್ಸ್‌ವಾದವನ್ನು ಖಂಡಿಸುವವರು ಸಾಮಾನ್ಯವಾಗಿ ಎತ್ತುತ್ತಲೇ ಬಂದಿರುವ ಆಕ್ಷೇಪಗಳನ್ನು ಪರೀಕ್ಷಿಸಿ ಸತ್ವಯುತವಾದ ವಿಮರ್ಶೆ ಮಾಡುವುದು ಅವನ ಉದ್ದೇಶ. ಈ ಪುಸ್ತಕವನ್ನು ಅನುಸರಿಸಿ ಡಾ|| ಜಿ. ರಾಮಕೃಷ್ಣ ಅವರು ಸಂಗ್ರಹ ರೂಪದಲ್ಲಿ ಮಾರ್ಕ್ಸ್‌ವಾದದ ಬಗೆಗಿನ ಪ್ರತಿವಾದನೆಯನ್ನು ಪರಿಚಯಿಸಿದ್ದಾರೆ.

ಇದು ಏಳನೆಯ ಕಂತು.

# ಭೌತವಾದ ಮತಧರ್ಮ ಅಧ್ಯಾತ್ಮ

ಪ್ರಪಂಚವು ಏತರಿಂದ ಮಾಡಲಾಗಿದೆ ? ಭೌತದ್ರವ್ಯದಿಂದಲೊ, ಪರಬ್ರಹ್ಮ ವಸ್ತುವಿನಿಂದಲೊ, ಅಥವಾ ಹಾಗಲಕಾಯಿ ಗೊಜ್ಜಿನಿಂದಲೊ ? ಮಾರ್ಕ್ಸ್ ಈ ಪ್ರಶ್ನೆಗೆ ಉತ್ತರ ಹುಡುಕುತ್ತಾ ನಿದ್ದೆ ಕೆಡಿಸಿಕೊಂಡಂತೆ ಕಾಣುವುದಿಲ್ಲ. ಇಂತಹ ಅಮೂರ್ತ ಆಧ್ಯಾತ್ಮಿಕ ವಿಷಯಗಳನ್ನು ಊಹಾಪೋಹಗಳ ಕಂತೆಯೆಂದು ಅವನು ತಳ್ಳಿಹಾಕುತ್ತಿದ್ದುದುಂಟು. ಅವನೊಬ್ಬ ಸಾಂದ್ರ ಸಿದ್ಧಾಂತಿಯೆಂದು ಹೇಳುವವರು ಅವನೊಬ್ಬ ರೊಮ್ಯಾಂಟಿಕ್ ಚಿಂತಕನೂ ಆಗಿದ್ದನೆಂಬುದನ್ನು ಗಮನಿಸಬೇಕು. ಅಮೂರ್ತದ ಬಗ್ಗೆ ಶಂಕೆ, ಮೂರ್ತ ಮತ್ತು ನಿರ್ದಿಷ್ಟವಾದುದರ ಬಗ್ಗೆ ಅತೀವ ಆಸಕ್ತಿ ಅವನದು. ಅಮೂರ್ತವು ಸರಳವಾದ್ದು, ಲಕ್ಷಣರಹಿತವಾದ್ದು; ಮೂರ್ತವಾದ್ದು ಶ್ರೀಮಂತಿಕೆ ಮತ್ತು ಸಂಕೀರ್ಣತೆಗಳಿಂದ ಕೂಡಿದೆ. ಹೀಗಾಗಿ ಭೌತವಾದವೆಂದರೆ ಪ್ರಪಂಚ ಏತರಿಂದ ಮಾಡಲಾಗಿದೆ ಎಂಬ ಪ್ರಶ್ನೆಯ ಸುತ್ತ ಸುತ್ತುವ ಅಗತ್ಯವಿಲ್ಲವೆಂದೇ ಅವನ ಭಾವನೆ. ಅವನೊಬ್ಬನೇ ಅಲ್ಲ, ೧೮ನೆಯ ಶತಮಾನದ ಜ್ಞಾನಬೋಧೆಯ ಯುಗದಲ್ಲಿ ಎಲ್ಲ ಭೌತವಾದಿ ತತ್ತ್ವಶಾಸ್ತ್ರಜ್ಞರೂ ಅಂಥದೇ ಅಭಿಪ್ರಾಯ ಹೊಂದಿದ್ದರು. ಅವರಲ್ಲಿ ಕೆಲವರು ಮಾನವನು ಭೌತಿಕ ವಿಶ್ವದ ಯಾಂತ್ರಿಕ ಕ್ರಿಯೆಯ ಒಂದು ಭಾಗವೆಂದು ಸಹ ನಂಬಿಬಿಟ್ಟಿದ್ದರು. ಮಾರ್ಕ್ಸ್ ಅದನ್ನು ನಿರಾಕರಿಸಿದ, ಮಾನವ ಕೇವಲ ಅನಾಸಕ್ತನಲ್ಲವೆಂದು ಭಾವಿಸಿದ. ಬೇರೆ ಕೆಲವರು ಭಾವಿಸಿದ್ದಂತೆ ಮಾರ್ಕ್ಸ್ ಮಾನವನ ಮನಸ್ಸು ಒಂದು ಖಾಲಿ ಹಾಳೆ, ಅದರ ಮೇಲೆ ಬೇಕಾದ್ದನ್ನು ಬರೆದುಬಿಡಬಹುದು, ಆದ್ದರಿಂದ ಮಾನವನಲ್ಲಿ ''ಋಜು'' ಅಭಿಪ್ರಾಯಗಳನ್ನು ಸುಲಭವಾಗಿ ಬಿತ್ತಬಹುದು, ಎಂದೆಲ್ಲಾ ಭ್ರಮಿಸಲಿಲ್ಲ. ಹಾಗೆ ನಂಬಿದ್ದವರು ಮಧ್ಯಮ ವರ್ಗದ ಪ್ರತಿಷ್ಠಿತ ಚಿಂತಕರು; ಅವರಿಗೆ ವ್ಯಕ್ತಿವಾದ ಅತಿರಂಜನೆಯ ವಿಷಯವಾಗಿತ್ತು. ಮುಂದುವರಿದು ಅವರೆಲ್ಲಾ ಖಾಸಗಿ ಆಸ್ತಿ, ಮುಕ್ತ ಮಾರುಕಟ್ಟೆ, ನ್ಯಾಯಬದ್ಧತೆ, ಮಾನವ ಹಕ್ಕುಗಳು, ಮುಂತಾದವುಗಳ ಬಗೆಗೂ ಅತಿಯಾಗಿ ಮಾತನಾಡುತ್ತಿದ್ದರು. ಮಾತು, ಅಷ್ಟೆ; ಕ್ರಿಯೆ ಏನೂ ಇಲ್ಲ. ಅವರು ಯಾರನ್ನು ''ಸಾಮಾನ್ಯ ಜನ'' ಎಂದು ಹೆಸರಿಸಿದರೋ ಅವರನ್ನು ಸುಲಭವಾಗಿ ಪ್ರಭಾವಿಸಬಹುದೆಂದು ಅವರು ಎಣಿಸಿದ್ದರು. ಮಾರ್ಕ್ಸ್ ಅಂಥವರಿಂದ ಗಾವುದ ದೂರ ನಿಂತವನು. ಭೌತವಾದವು ಮಧ್ಯಮ ವರ್ಗದ ಸಂಪದಭಿವೃದ್ಧಿಯ ಸಾಧನವೆಂದು ಪರಿಗಣಿಸಲಾಗಿದೆಯೆಂದು ಅವನು ಬೆಚ್ಚಿದ.

ಹಾಗಿದ್ದರೆ ಮಾರ್ಕ್ಸ್‌ನ ಭೌತವಾದ ಎಂಥದು ? ಉತ್ತರ ಅವನು ಫ಼ಾವರ್‌ಬಾಕ್ ಬಗೆಗೆ ಬರೆದ ಟೀಕಾಸಿದ್ಧಾಂತ ಮತ್ತು ಇತರ ಗ್ರಂಥಗಳಲ್ಲಿದೆ. ಅವನ ಹಿಂದಿನ ಭೌತವಾದದ ನೆಲೆಯನ್ನು ತೊರೆದು ಅದಕ್ಕೆ ಪರ್ಯಾಯವೊಂದನ್ನು ಮಾರ್ಕ್ಸ್ ನೀಡಿದ. ಮಾನವ ವಾಸ್ತವವಾಗಿ ಏನಾಗಿದ್ದಾನೆಂಬುದು ಭೌತವಾದದ ಆರಂಭ ಸ್ಥಾನ; ಏನೋ ಊಹಿಸಿಕೊಂಡು ಅಥವಾ ಕಟ್ಟಿಕೊಂಡು ಆಮೇಲೆ ಮಾನವನನ್ನು ನೋಡಿ ಅವನಿಗೆ ಅನ್ವಯಿಸಹೊರಡುವುದು ಭೌತವಾದವಲ್ಲ. ಮಾನವ ಏನಾಗಿದ್ದಾನೆ ? ಶರೀರ ಹೊಂದಿದ್ದಾನೆ, ಭೌತ ಶರೀರ ಅದು, ಮತ್ತು ಅವನು ಪ್ರಯೋಗಶೀಲ. ಮಿಕ್ಕ ಲಕ್ಷಣಗಳೆಲ್ಲಾ ಈ ಮೂಲಭೂತ ಅಂಶಗಳಿಂದ ಹೊಮ್ಮುತ್ತವೆ. ಬೇರೆಲ್ಲಾ ಏನೇ ಇರಲಿ, ಸ್ತ್ರೀ-ಪುರುಷರು ಕ್ರಿಯೆಗಳ ಕರ್ತೃಗಳು ಎಂಬುದು ಮೂಲ ಅಂಶ. ಅವರು ತಮ್ಮ ಸುತ್ತಣ ಭೌತ ಪ್ರಪಂಚವನ್ನು ಬದಲಾಯಿಸುತ್ತಾ ಹೋಗುತ್ತಾರೆ ಮತ್ತು ಹಾಗೆ ಮಾಡುತ್ತಾ ತಮ್ಮನ್ನು ಸಹ ಬದಲಾಯಿಸಿಕೊಳ್ಳುತ್ತಾರೆ. ಇತಿಹಾಸ, ಭೌತದ್ರವ್ಯ, ಅಥವಾ ಬ್ರಹ್ಮವಸ್ತುವಿನ ಕೈಕೂಸಲ್ಲ ಮಾನವ; ಅವನು ಕ್ರಿಯಾಶೀಲ ವ್ಯಕ್ತಿ, ಸ್ವಯಂ-ನಿರ್ಧಾರಕ ಶಕ್ತಿಯುಳ್ಳವನು, ತನ್ನ ಇತಿಹಾಸವನ್ನು ತಾನೇ ಕಟ್ಟಿಕೊಳ್ಳಬಲ್ಲವನು. ಅಂದರೆ, ಮಾರ್ಕ್ಸ್‌ನ ಭೌತವಾದವು ಪ್ರಜಾಪ್ರಭುತ್ವವಾದಿ ನೆಲೆಯುಳ್ಳದ್ದು. ಅದರ ಮೂಲಸಾರವೇ ಅದು: ನಮ್ಮ ಜೀವನವನ್ನು ನಿರ್ಣಾಯಕವಾಗಿ ಪ್ರಭಾವಿಸುವ ವಿಚಾರಗಳು ಬದಲಾಗುವುದು ಬಹುಸಂಖ್ಯಾತ ಜನರು ಸಾಮುದಾಯಿಕವಾಗಿ ಪ್ರಯೋಗಾತ್ಮಕ

ಕ್ರಿಯೆಗಳಲ್ಲಿ ತೊಡಗುವುದರಿಂದ ಮತ್ತು ತೊಡಗಿದಾಗ. ಏಕೆ ಹಾಗೆ ? ಏಕೆಂದರೆ, ನಮ್ಮ ವಾಸ್ತವ ನಡತೆಯಲ್ಲಿ ಆ ವಿಚಾರಗಳು ಆಳವಾಗಿ ಬೇರೂರಿವೆ.

ಇವನೇನು ತತ್ತ್ವಶಾಸ್ತ್ರಜ್ಞನೋ ತತ್ತ್ವಶಾಸ್ತ್ರ ವಿರೋಧಿಯೋ ಎನಿಸುತ್ತದೇನೊ ! ಎತ್ಯೆನ್ ಬಲಿಬಾರ್ ಅವನನ್ನು ''ಆಧುನಿಕ ಯುಗದ ಅತಿಶ್ರೇಷ್ಠ ತತ್ತ್ವಶಾಸ್ತ್ರ ವಿರೋಧಕ'' ಎಂದೇ ಕರೆದಿದ್ದ. ಹಾಗೆಂದರೇನು ? ರೂಢಿಗತ ಬಾಯಿಪಾಠದ ತತ್ತ್ವಶಾಸ್ತ್ರ ಚಿಂತನೆಯನ್ನು ಸಂಶಯದಿಂದ ನೋಡುವವನು, ಎಂದು. ಅದು ಓಶೋ ಅಥವಾ ಶೋಭಾ ಡೆ ಪ್ರಕಟಿಸುವಂತಹ ಸಂಶಯವಲ್ಲ; ವಿಚಾರಗಳನ್ನು ಸಂಶಯದಿಂದ ಕಾಣುವಂತಹ ವಿಚಾರಗಳು. ಅವು ಬಹುಮಟ್ಟಿಗೆ ವೈಚಾರಿಕ, ಆದರೆ ಎಲ್ಲವೂ ತರ್ಕಸಿದ್ಧವಾಗುವಂಥವು ಎಂಬ ಹುಂಬ ವಿಧಾನದಿಂದಲ್ಲ. ಫ಼ಾವರ್‌ಬಾಕ್ ಒಂದರ್ಥದಲ್ಲಿ ಮಾರ್ಕ್ಸ್‌ಗೆ ಗುರು. ಅವನಿಂದ ಮಾರ್ಕ್ಸ್ ಭೌತವಾದವನ್ನು ಸಾಕಷ್ಟು ಕಲಿತ. ಅವನ ಪ್ರಸಿದ್ಧ ಹೇಳಿಕೆ ಇದು : ''ಎಲ್ಲ ತತ್ತ್ವಶಾಸ್ತ್ರವೂ ಅದರ ವಿರೋಧಿ ನೆಲೆಯಿಂದ ಆರಂಭವಾಗಬೇಕು, ಅಂದರೆ ಅ-ತತ್ತ್ವಶಾಸ್ತ್ರದಿಂದ. ...ತತ್ತ್ವಶಾಸ್ತ್ರಜ್ಞನು ಅಂಗೀಕರಿಸ ಬೇಕಾದ್ದು ಏನನ್ನು ಗೊತ್ತೆ? ಮನುಷ್ಯನು ಯಾವುದನ್ನು ತತ್ತ್ವಶಾಸ್ತ್ರವೆಂದು ದೂರಕ್ಕೆ ತಳ್ಳುವುದಿಲ್ಲವೋ ಅದನ್ನು. ಅಂದರೆ, ಅಮೂರ್ತ ಚಿಂತನೆಗೆ ವಿರುದ್ಧವಾದುದನ್ನು ಎಂದರ್ಥ.'' ಅವನ ಇನ್ನೊಂದು ಮಾತು ಹೀಗಿದೆ : ''ಚಿಂತನೆ ಮಾಡುವವನು ಮಾನವ; ಯಾವುದೋ ಅಹಂ ಆಗಲಿ, ಶುದ್ಧ ತರ್ಕವಾಗಲಿ ಅಲ್ಲ.'' ಮಾನವನ ಪ್ರಜ್ಞೆಗೆ ಒಂದು ದೇಹವಿದೆ. ದೇಹವೆಂದರೆ ಬರಿ ದೇಹವಲ್ಲ, ಆಯಕಟ್ಟು ಎಂದು ಅದರ ಸೂಚನೆ. ಶರೀರ ಎಂಬುದಿದೆಯಲ್ಲ, ಅದು ಸದಾ ಅಪೂರ್ಣ, ಅಸಾಧ್ಯವಾದ ಸಾಧ್ಯತೆ ಇರುವಂಥದು, ಹೊಸಹೊಸ ಸೃಷ್ಟ್ಯಾತ್ಮಕ ಕ್ರಿಯೆಗೆ ಸಾಮರ್ಥ್ಯ ಉಳ್ಳದ್ದು. ಯಾವುದೋ ಒಂದು ಘಟ್ಟದಲ್ಲಿ ಗೋಚರಿಸುವುದಷ್ಟೇ ಅದರ ಅಂತಿಮ ಅಭಿವ್ಯಕ್ತಿಯಲ್ಲ.

ಈಗ ಯೋಚನೆ ಮಾಡಿ : ನಾವು ಏನೋ ಒಂದು ವಿಧದಲ್ಲಿ ಚಿಂತಿಸುತ್ತೇವಲ್ಲ, ಏಕೆ ? ಏಕೆಂದರೆ, ನಾವು ಅಂತಹ ಪ್ರಾಣಿಗಳು. ಆ ಚಿಂತನೆಯು ಕಾಲಕ್ಕೆ ಅಧೀನವಾದ್ದು. ಕೆಲವು ತತ್ತ್ವಶಾಸ್ತ್ರಜ್ಞರು ಕೇಳಿ ಕೊಳ್ಳುತ್ತಾರೆ, ಯಂತ್ರಗಳು ಚಿಂತಿಸುತ್ತವೆಯೇ, ಎಂದು. ಚಿಂತಿಸುತ್ತವೇನೋ, ಆದರೆ ನಾವು ಚಿಂತಿಸುವು ದಕ್ಕಿಂತಲೂ ಭಿನ್ನವಾಗಿ ಎಂಬುದಂತೂ ನಿಜ. ಏಕೆಂದರೆ ಯಂತ್ರವನ್ನು ಮಾಡಿರುವುದು ಮಾನವನನ್ನು ಮಾಡಿದಂತೆ ಅಲ್ಲ, ಅದಕ್ಕೆ ದೈಹಿಕ ಅಗತ್ಯಗಳಿಲ್ಲ, ಭಾವನಾತ್ಮಕ ಜೀವನವಿಲ್ಲ; ಮಾನವನಿಗೆ ಅವು ಇವೆ. ಮಾನವನ ಚಿಂತನೆಯು ಆ ಅಗತ್ಯ ಮತ್ತು ಭಾವನೆ ಗಳನ್ನುಳಿದು ಮೂಡುವಂಥದಲ್ಲ. ಮಾನವನಿಗೆ ಇಂದ್ರಿಯ, ಪ್ರಯೋಗಶೀಲತೆ ಮತ್ತು ಭಾವನೆಗಳ ಹಿನ್ನೆಲೆಯುಂಟು. ಆದ್ದರಿಂದ, ಯಂತ್ರವೇನಾದರೂ ಚಿಂತನೆಯಲ್ಲಿ ತೊಡಗಿದರೆ ಅದೇನು ಚಿಂತನೆ ನಡೆಸು ತ್ತಿರಬಹುದೆಂಬ ಅರಿವು ನಮಗುಂಟಾಗಲಾರದು.

ಜ್ಞಾನದ ವಸ್ತುವು ಶಾಶ್ವತವಾಗಿ ಒಂದೇ ಆಗಿರುವುದಿಲ್ಲ, ಅದು ನಮ್ಮ ಚಾರಿತ್ರಿಕ ಕ್ರಿಯೆಯ ಉತ್ಪನ್ನ. ಜ್ಞಾನವನ್ನು ಪಡೆಯುವವರು ಭಿನ್ನರಾಗುವಂತೆ ಜ್ಞಾನವೂ ಭಿನ್ನವಾಗುತ್ತಿರುತ್ತದೆ. ವೈಶೇಷಿಕರಿಗೆ ಪರಮಾಣು ತಿಳಿದಿತ್ತು, ಆದರೆ ಪರಮಾಣು ಬಾಂಬ್ ತಿಳಿದಿರಲಿಲ್ಲವಲ್ಲ, ಹಾಗೆ. ತತ್ತ್ವಶಾಸ್ತ್ರಜ್ಞರ ಗಮನವನ್ನು ಸದಾ ಸೆಳೆಯುತ್ತಾ ಬಂದಿರುವ ಪ್ರಶ್ನೆಗೆ ಉತ್ತರ ದೊರೆಯಬೇಕಾದರೆ ಮಾನವನು ಕ್ರಿಯಾವಂತ ಮತ್ತು ಪ್ರಯೋಗಶೀಲ ಎಂಬುದನ್ನು ಮೊದಲು ಗುರುತಿಸ ಬೇಕು, ಬದಲಾಗುತ್ತಲೇ ಹೋಗುವ ಮಾನವನ ಹಿನ್ನೆಲೆಯನ್ನು ಗುರುತಿಸಬೇಕು. ಕ್ರಿಯಾವಂತ ವ್ಯಕ್ತಿಯು ಪ್ರಪಂಚವು ಶೂನ್ಯವೆಂದು ಭಾವಿಸುವುದು ಶಕ್ಯವಿಲ್ಲ; ದೂರದಲ್ಲೆಲ್ಲೋ ನಿಂತು ವಿರಾಮದಲ್ಲಿ ಧ್ಯಾನಿಸುವವರು ಹಾಗೆ ಮಾಡಬಲ್ಲರೇನೊ, ಅಷ್ಟೆ. ಪ್ರಪಂಚವು ಶೂನ್ಯ ವೆಂದಾದರೆ ಶಂಕಿಸುವುದಾದರೂ ಏನನ್ನು ? ಭೌತಿಕ ಪ್ರಪಂಚವು ಇರದಿದ್ದರೆ ನಮಗೆ ಆಹಾರವೇ ದೊರೆಯದೆ ಗತಿಸಬೇಕಾಗುತ್ತಿತ್ತು, ನಮ್ಮೊಡನೆ ತತ್ತ್ವಶಾಸ್ತ್ರದ ಶಂಕೆಗಳೂ ಗತಿಸಿಹೋಗುತ್ತಿದ್ದವು. ನಮಗೆ ಬೇಕಾದುವೆಲ್ಲಾ ಯಾವಾಗಲೂ ದೊರೆಯದಿರುವುದು ವಾಸ್ತವ; ಅದಷ್ಟೇ ಸಾಕು, ವಾಸ್ತವ ಜಗತ್ತೊಂದಿದೆ ಎಂಬುದಕ್ಕೆ ಪ್ರಮಾಣವಾಗಿ. ದೊರೆಯುವಿಕೆ ಅಥವಾ ದೊರೆಯದಿರು ವಿಕೆಯು ಸಹ ಮಾನವ ಕರ್ತೃತ್ವವನ್ನು ಅವಲಂಬಿಸಿದೆ.

ತತ್ತ್ವಶಾಸ್ತ್ರಜ್ಞರು ಎತ್ತುವ ಇನ್ನೊಂದು ಪ್ರಶ್ನೆ ಇದೆ : ''ಬೇರೆ ಮನಸ್ಸುಗಳು'' ಎಂಬುವುವು ಇವೆಯೆ ?

ನೀವು ನೋಡುವ ಮಾನವ ಶರೀರಿಗಳಿಗೆಲ್ಲ ಮನಸ್ಸುಗಳಿವೆಯೆ? ಭೌತವಾದಿಯ ಉತ್ತರ ಸರಳವಾಗಿರುತ್ತದೆ: ಅವಿಲ್ಲದಿದ್ದರೆ ಆ ಪ್ರಶ್ನೆಯನ್ನು ಎತ್ತಲು ನಾವೆಲ್ಲಿರುತ್ತಿದ್ದೆವು? ಇತರರೊಡನೆ ಸಂವಹನ ನಡೆಸುವ ಸಾಮರ್ಥ್ಯವು ನಾವು ಮನಸ್ಸೆಂದು ಕರೆಯುವುದರ ಭಾಗವೇ ತಾನೆ? ಅಂತಹ ಇತರರೊಡನೆ ಸಾಮಾಜಿಕ ಸಹಕಾರವಿಲ್ಲದೆ ಭೌತವಸ್ತುಗಳ ಉತ್ಪಾದನೆ ಸಾಧ್ಯವಾಗುವುದಿಲ್ಲವಲ್ಲ! ಹೋಗಲಿ, ಮನಸ್ಸು ಎಂಬುದೇನು? ಒಂದು ನಿರ್ದಿಷ್ಟ ವಿಧವಾದ ಶರೀರದ ನಡತೆಯನ್ನು ಬಣ್ಣಿಸುವ ಒಂದು ಬಗೆ. ಆ ಶರೀರವು ಸೃಷ್ಟಿ ಮಾಡಬಲ್ಲದು, ಪ್ರಯೋಗ ನಡೆಸಬಲ್ಲದು, ಸಂವಹನದಲ್ಲಿ ತೊಡಗಬಲ್ಲದು. ಮಾನವನ ತಲೆಯೊಳಗೆ ಹೊಕ್ಕು ಅಥವಾ ಅದನ್ನು ಎಂಥದೋ ಯಂತ್ರಕ್ಕೆ ಜೋಡಿಸಿ ವಿಸ್ಮಯಕರವಾದ ಒಂದು ಮನಸನ್ನು ನಾವು ಹುಡುಕುವ ಅಗತ್ಯವಿಲ್ಲ, ನಾವೆಲ್ಲಾ ಏನು ಮಾಡುತ್ತೇವೋ ಅದರಿಂದಲೇ ಮನಸ್ಸು ಗೊತ್ತಾಗುತ್ತದೆ. ಪ್ರಜ್ಞೆ ಎಂಬುದು ತೀರಾ ಅಗೋಚರವಾದುದೇನಲ್ಲ; ಅದನ್ನು ನಾವು ನೋಡಬಹುದು, ಕೇಳಬಹುದು, ನಿರ್ವಹಿಸಬಹುದು. ಮಾನವ ಶರೀರವು ಭೌತವಸ್ತುಗಳ ಮುದ್ದೆ, ಆದರೆ ಅದು ಸೃಷ್ಟ್ಯಾತ್ಮಕವಾದ್ದು, ಅಭಿವ್ಯಕ್ತಿ ಸಾಮರ್ಥ್ಯ ಉಳ್ಳದ್ದು. ಅದನ್ನೇ 'ಮನಸ್ಸು' ಎನ್ನುತ್ತೇವೆ. ಮಾನವನು ವೈಚಾರಿಕ ದೃಷ್ಟಿಯುಳ್ಳವನು ಎಂದು ಹೇಳಿದಾಗ ನಾವು ಸೂಚಿಸುವುದು ಅವನ ನಡತೆಯಲ್ಲಿನ ಒಂದು ನಿರ್ದಿಷ್ಟ ನಡತೆಯ ಮಾದರಿಯನ್ನು. ಮಾರ್ಕ್ಸ್‌ಗೆ ಮುಂಚಿನ 'ಜ್ಞಾನಯುಗ'ದ ಭೌತವಾದಿಗಳು ಪ್ರಪಂಚವನ್ನು ನಿರ್ಜೀವಿಯೋ ಎಂಬಂತೆ, ಅರ್ಥವಿಲ್ಲದ ಭೌತದ್ರವ್ಯ ಎಂಬಂತೆ, ವ್ಯಾಖ್ಯಾನಿಸಿಕೊಂಡಿದ್ದರು. ಮಾರ್ಕ್ಸ್ ಅದನ್ನು ತಿರುಗುಮುರುಗ ಮಾಡಿದ.

ಸಂದೇಹವಾದಿಗಳನ್ನು ಭೌತವಾದಿಯು ಬಗ್ಗುಬಡಿಯಲು ತವಕಿಸುವುದಿಲ್ಲ. ಉದಾಹರಣೆಗೆ, ಸಾಮಾಜಿಕ ಸಹಕಾರ, ನಮ್ಮ ಯಾವುದೋ ಯೋಜನೆಗೆ ಪ್ರಪಂಚವು ಒಡ್ಡುವ ಅಡೆತಡೆ, ಇತ್ಯಾದಿಗಳ ಅನುಭವವು ವಿಶ್ವಾಸಾರ್ಹವೇ ಅಲ್ಲವೆಂಬ ವಾದವಿದೆಯೆನ್ನೋಣ. ಅಂದರೆ, ಅದೆಲ್ಲಾ ನಮ್ಮ ಕಲ್ಪನೆ ಎಂಬ ಮಾತು. ಭೌತವಾದಿ ದೃಷ್ಟಿಯು ಅದಕ್ಕೆ ಸಮರ್ಥ ಪರ್ಯಾಯ ಒದಗಿಸಬಲ್ಲದು. ಒಬ್ಬ ಬುದ್ಧಿಜೀವಿ ಇದ್ದಾಳೆಂದು ಭಾವಿಸಿಕೊಳ್ಳೋಣ. ಆಕೆಯ ಆರಂಭ ಮತ್ತು ಕೊನೆ ಅಮೂರ್ತವಾದ ಮನಸ್ಸಿನ ವ್ಯಾಪಾರದಲ್ಲಿ. ಈ ಮನಸ್ಸಿಗೂ ದೇಹಕ್ಕೂ ಸಂಬಂಧವೆಂಥದೆಂಬ ಸಮಸ್ಯೆ ಆಕೆಯನ್ನು ಕಾಡಿದರೆ ಏನರ್ಥ? ಆಕೆಯ ಮನಸ್ಸು ಮತ್ತು ಪ್ರಪಂಚದ ನಡುವೆ ಕಂದರವಿದೆ ಎಂದರ್ಥ. ವ್ಯಂಗ್ಯವಿರುವುದೇ ಇಲ್ಲಿ: ಪ್ರಪಂಚದ ಬಗೆಗಿನ ಸಂಬಂಧವು ಸಮಸ್ಯೆ; ಆದರೆ ಅದನ್ನು ಭಾವಿಸಿಕೊಳ್ಳುವ ಮನಸ್ಸು ರೂಪಿತವಾದ್ದು ಆ ಪ್ರಪಂಚದಲ್ಲೇ. ಈ ಬುದ್ಧಿಜೀವಿಗಳದ್ದು ಒಂದು ಜಾತಿಯಾಗಿಬಿಟ್ಟಿದೆ; ಭೌತಿಕ ಪ್ರಪಂಚದಿಂದ ದೂರವಿರುವವರ ಜಾತಿ! ಸಮಾಜದ ಭೌತಿಕ ಮಿಗುತಾಯದಿಂದ ಜೀವಿಸುವವರು ಇವರು, ಆದರೆ ಆ ಪ್ರಪಂಚದ ಬಗೆಗೆ ಅವರಿಗೆ ಶಂಕೆ. ಮಿಗುತಾಯವಿಲ್ಲದಿದ್ದರೆ ಪುರೋಹಿತರು, ಋಷಿಗಳು, ಕಲಾವಿದರು, ಐಐಟಿ ಪ್ರಾಧ್ಯಾಪಕರು, ಇತ್ಯಾದಿ ಎಲ್ಲರೂ

> **ಹನಿಗವಿತೆ**
>
> ಹೊಸೆ ಹೊಸೆದು
> ಹುರಿ ಮಾಡಿ
> ಗಂಟು ಹೂಡಿದರೂ
> ಜಾರಿ ಜಾರಿ
> ನುಣುಚಿಕೊಳ್ಳುವ
> ನೈಲಾನ್‌ದಾರ
> ಬದುಕು
>
> **ಆಲೂರು ದೊಡ್ಡನಿಂಗಪ್ಪ**
> ರಂಗಾಯಣ, ಮೈಸೂರು

ಹೇಗಿರುತ್ತಿದ್ದರೊ! ಪ್ಲೇಟೊ ಒಂದು ಮಾತು ಹೇಳಿದ್ದ: ತತ್ತ್ವಶಾಸ್ತ್ರಜ್ಞರು ಆವಿರ್ಭಾವವಾಗಲು ವಿರಾಮವಿರುವ ಶ್ರೀಮಂತ ವರ್ಗವಿರಬೇಕು, ಎಂದು. ಇಲ್ಲದಿದ್ದರೆ ವಾಕ್ಯಾರ್ಥಕ್ಕೆ ಸ್ವಾಮಿಗಳ ಮಠ ಹೇಗಿರಬಲ್ಲದು? ಎಲ್ಲರೂ ದುಡಿಯಬೇಕೆಂಬ ಅನಿವಾರ್ಯತೆ ಇರುವ ಬುಡಕಟ್ಟು ಸಮಾಜದಲ್ಲಿ ಗಾಲ್ಫ್ ಆಡಲು ಆಟದ ಮೈದಾನ ಇರುವುದಿಲ್ಲವಲ್ಲ! ದಂತಗೋಪುರ ಅಲ್ಲಿಲ್ಲ. ಅಂತೆಯೇ ನಮ್ಮ ವಿಶ್ವವಿದ್ಯಾಲಯಗಳು ಕಾರ್ಪೊರೇಟ್ ಜಗತ್ತಿನ ಅಂಗವಾಗಿಬಿಟ್ಟಾಗಲೂ ದಂತಗೋಪುರ ಇರುವುದಿಲ್ಲ, ಅದು ಬೇರೆ ಮಾತು. ಇಟ್ಟಿಗೆ ಮಾಡುವವನಂತೆ ಬುದ್ಧಿಜೀವಿಯು ದುಡಿಯುವುದಿಲ್ಲ; ಆದ್ದರಿಂದ ಅವಳ ವಿಚಾರಗಳಿಗೂ ಸಾಮಾಜಿಕ ಇರುವಿಕೆಗೂ ಸಂಬಂಧವಿಲ್ಲವೆಂಬ ಭ್ರಮೆ ಅವಳನ್ನಾವರಿಸಲು ಸಾಧ್ಯ. ಮಾರ್ಕ್ಸ್‌ವಾದಿಗಳು ಸಿದ್ಧಾಂತ ಅಥವಾ ಐಡಿಯಾಲಜಿ ಎಂದಾಗ ಈ ಅರ್ಥ ಅದರಲ್ಲಡಗಿರುತ್ತದೆ. ಅಂತಹ ಬುದ್ಧಿಜೀವಿಗಳು ಪ್ರಪಂಚದಿಂದ ದೂರದಲ್ಲಿ ಉಳಿಯಲು ಸಾಮಾಜಿಕ ಸನ್ನಿವೇಶದ ಪಾತ್ರವೂ ಅದರಲ್ಲಿ ಇರುತ್ತದೆ. ಚಿಂತನೆಯು ಸತ್ತ್ವ ಅಥವಾ ವಾಸ್ತವದಿಂದ ಸ್ವತಂತ್ರವಾದ್ದೆಂಬ ಪೂರ್ವಗ್ರಹವನ್ನು ರೂಪಿಸುವುದು ಸ್ವತಃ ಸಾಮಾಜಿಕ ವಾಸ್ತವವೇ. ಮಾರ್ಕ್ಸ್ ಹೇಳುವುದು ಚಿಂತನೆ (ಅಥವಾ ಅದರ ವೈಖರಿ) ರೂಪುಗೊಳ್ಳುವುದು ಸುತ್ತಣ ಪ್ರಪಂಚದೊಡನೆ ವ್ಯವಹರಿಸಲು ಆರಂಭಿಸಿದಾಗ, ಎಂದು. ಆ ವ್ಯವಹಾರ ಅನಿವಾರ್ಯ. ಅದಿಲ್ಲದಿದ್ದರೆ ಊಟ, ಬಟ್ಟೆ, ಮನೆ, ಇತ್ಯಾದಿ ಭೌತಿಕ ಅವಶ್ಯಕತೆಗಳ ಪೂರೈಕೆ ಆಗದು. ಅಂದರೆ, ಚಿಂತನೆ ಸಹ ಒಂದು ಭೌತಿಕ ಸನ್ನಿವೇಶದ ಅನಿವಾರ್ಯತೆಯನ್ನು ಹೊಂದಿದೆ. ಅದು ನೀಶೆಯದಾಗಬಹುದು, ಯಾಜ್ಞವಲ್ಕ್ಯನದಾಗಬಹುದು, ಕಾಮಶಾಸ್ತ್ರದ ವಾತ್ಸ್ಯಾಯನದೂ ಆಗಬಹುದು. ನಮ್ಮ ಮತ್ತು ನಮ್ಮ ಸುತ್ತಣ ಪ್ರಪಂಚದೊಡಣ ಪರಸ್ಪರ ಕ್ರಿಯೆಯಿಂದ ಪ್ರಜ್ಞೆ ರೂಪುಗೊಳ್ಳುತ್ತದೆ. ಅದು ಒಂದು ಚಾರಿತ್ರಿಕ ಸನ್ನಿವೇಶದ ಕೊಡುಗೆ. ಮಾನವನು ತಾನಾಗುವುದು ಇತರರ ಮೂಲಕ; ವೈಯಕ್ತಿಕ ಸ್ವಂತಿಕೆ ಸಹ ಸಾಮಾಜಿಕ ಉತ್ಪನ್ನವೆಂದಂತಾಯಿತು. ಒಂದು ಮಾತ್ರ ಇರುವಾಗ ಸಂಖ್ಯೆಗಳು ಅಪ್ರಸ್ತುತ. ಅಂತೆಯೇ, ಒಬ್ಬನೇ ಎಂಬ ಮಾತು ಸಹ ಅಸಂಭವ.

ವಾಸ್ತವದ ನಿರ್ಮಾಣವಾಗುವುದು ನಮ್ಮ ಕೈಗಳಿಂದ. ನಮ್ಮ ಕ್ರಿಯೆಯಿಂದ ಸ್ವತಂತ್ರವಾಗಿ, ಅದೊಂದು ವಿವರಣೆಗೆ ನಿಲುಕದ ಸಂಗತಿ ಎಂದು ತಿಳಿಯುವುದನ್ನು ಮಾರ್ಕ್ಸ್ ಪರಕೀಯ ಪ್ರಜ್ಞೆ ಎನ್ನುತ್ತಾನೆ. (ಕನ್ನಡದಲ್ಲಿ ಕೆಲವರು ಇದನ್ನು ಅನಾಥಪ್ರಜ್ಞೆ ಎಂದು ಕರೆದಿದ್ದಾರೆ. ಇಂಗ್ಲಿಷಿನಲ್ಲಿ ಅದು 'ಏಲಿನಿಯೇಶನ್' ಎಂದಿದೆ). ಅವನ ಇಂಗಿತ ಇದು: ಚರಿತ್ರೆಯು ಮಾನವನಿಂದ ನಿರ್ಮಾಣವಾಗುತ್ತದೆಂಬುದನ್ನು ಮರೆತು, ಅದೆಲ್ಲೋ ಹೊರಗಣ ಶಕ್ತಿ, ಅದು ನಮ್ಮನ್ನು ಆಕ್ರಮಿಸಿ ನಿಂತಿದೆ ಎಂಬ ಭಾವವು ಪರಕೀಯ ಪ್ರಜ್ಞೆ. ಪ್ರಪಂಚದ ವಾಸ್ತವವು ಮಾನವ ಜೀವಿಗಳ ದೈಹಿಕ ಸಂಘಟನೆಯ ಅಡಿಪಾಯ ಹೊಂದಿದೆ, ಮತ್ತು ಈ ದೈಹಿಕ ಸಂಘಟನೆಯು ಕ್ರಿಯೆಯ ಸಾಮರ್ಥ್ಯ ಹೊಂದಿದೆ. ನಾವಿರುವುದು ಭೌತಿಕ ಹಿನ್ನೆಲೆಯಲ್ಲಿ, ಆದ್ದರಿಂದ ನಮ್ಮ ಚಿಂತನೆ ಎಷ್ಟೇ ಅಮೂರ್ತವಾಗಿರಲಿ, ಅದು ಭೌತಿಕ ಸನ್ನಿವೇಶದಿಂದ ರೂಪಿತವಾಗಿರುತ್ತದೆ. ನಮ್ಮ ವಿಚಾರಗಳು ಆಚರಣೆಯ ಆಧಾರ ಹೊಂದಿವೆಯೆಂಬುದನ್ನು ನಿರಾಕರಿಸುವುದು ದಾರ್ಶನಿಕ ಭಾವನಾವಾದವೆನಿಸಿಕೊಳ್ಳುತ್ತದೆ. ಇದನ್ನು ಗುರುತಿಸದಿದ್ದಾಗ ಚಿಂತನೆಯು ವಾಸ್ತವವನ್ನು ಸೃಷ್ಟಿಸುತ್ತದೆಂಬ ಮೋಹಕ್ಕೆ ಒಳಗಾಗಬೇಕಾಗುತ್ತದೆ. ಮಾರ್ಕ್ಸ್, ಈ ಕಾರಣದಿಂದ, ಶಾರೀರಿಕ ಜೀವನಕ್ಕೂ ತರ್ಕಶೀಲತೆಗೂ ಸಂಬಂಧ ಕಲ್ಪಿಸಿದ್ದಾನೆ. ಮಾನವನ ಇಂದ್ರಿಯಗಳು ಇವೆರಡರ ನಡುವಣ ಸೀಮಾರೇಖೆ. ಇದಕ್ಕೆ ಭಿನ್ನವಾಗಿ ಭಾವನಾವಾದಿ ತತ್ತ್ವಶಾಸ್ತ್ರಜ್ಞರು ''ಭೌತದ್ರವ್ಯ'' ಮತ್ತು ವಿಚಾರಗಳು ಅಥವಾ ''ಚೇತನ'' ಬೇರೆಬೇರೆ ಎಂದು ಹೇಳುತ್ತಾರೆ. ಕ್ರಿಯೆಯಲ್ಲಿ ತೊಡಗಿದ ಮಾನವ ಶರೀರವು ಈ ತಿಳಿವನ್ನು ಸುಳ್ಳಾಗಿಸುತ್ತದೆ. ಏಕೆಂದರೆ ಕ್ರಿಯೆ ಅಥವಾ ಆಚರಣೆಯು ಒಂದು ಭೌತಿಕ ಸಂಗತಿ. ಆದರೆ, ಅದೇ ವೇಳೆ ಅದು (ಕ್ರಿಯೆ) ಅರ್ಥ, ಮೌಲ್ಯ, ಉದ್ದೇಶ, ಆಶಯ, ಎಲ್ಲವನ್ನೂ ಪ್ರಕಟಿಸುತ್ತಿರುತ್ತದೆ. ಏಕಕಾಲಕ್ಕೆ ಅದು ವ್ಯಕ್ತಿನಿಷ್ಠವೂ ಹೌದು, ವಸ್ತುನಿಷ್ಠವೂ ಹೌದು. ಅಥವಾ, ಅಂತಹ ವಿಂಗಡಣೆಯನ್ನೇ ಅದು ಪ್ರಶ್ನಿಸುತ್ತದೆಂದರೂ ಆದೀತು. ಮಾರ್ಕ್ಸ್‌ನ ಮುಂಚೆ ಕೆಲವು ಚಿಂತಕರು ಮನಸ್ಸು ಸಕ್ರಿಯ ಮತ್ತು ಇಂದ್ರಿಯಗಳು ನಿಷ್ಕ್ರಿಯ ಅಥವಾ ಅನಾಸಕ್ತ ಎಂದು ಭಾವಿಸಿದ್ದರು. ಆದರೆ ಮಾರ್ಕ್ಸ್ ಇಂದ್ರಿಯಗಳು ವಾಸ್ತವದೊಡನೆ ಸಕ್ರಿಯವಾಗಿ ತೊಡಗಿಸಿಕೊಳ್ಳುವುದರ ರೂಪ ಎಂದು ಬಗೆದ. ಅವನ ಮಾತೊಂದಿದೆ: ''ಪಂಚೇಂದ್ರಿಯಗಳನ್ನು ರೂಢಿಸಿಕೊಳ್ಳುವುದು ಪೂರ್ವದ ಇತಿಹಾಸದಿಂದ ಮಾನವ ಕಲಿತಿರುವ ಅಂಶ.'' ಅಂದರೆ, ಭೌತಿಕ ಜಗತ್ತು ಮತ್ತು ಮಾನವನ ಇಂದ್ರಿಯಗಳ ನಡುವೆ ದೀರ್ಘಕಾಲೀನ ಪಾರಸ್ಪರಿಕ ಸಂಬಂಧವಿದೆ.

ಲಾಕ್ ಮತ್ತು ಹ್ಯೂಮ್ ಇಂದ್ರಿಯಗಳಿಂದ ಆರಂಭಿಸುತ್ತಾರೆ; ಅವು ಮೂಲತಃ ಬಂದದ್ದೆಲ್ಲಿಂದ ಎಂದು ಮಾರ್ಕ್ಸ್ ಕೇಳುತ್ತಾನೆ. ಉತ್ತರ ಹೀಗಿರುತ್ತದೆ: ನಮ್ಮ ಜೈವಿಕ ಅವಶ್ಯಕತೆಗಳು ಇತಿಹಾಸದ ಬುನಾದಿ.

ನಮಗೇನೇನೋ ಇಲ್ಲ ಎಂಬುದು ನಮ್ಮ ಚರಿತ್ರೆಯ ಮೂಲ. ಆ ಅರ್ಥದಲ್ಲಿ ಮಾನವನಿಗೆ ಇತಿಹಾಸವು ಸ್ವಾಭಾವಿಕ. ಪ್ರಕೃತಿ ಮತ್ತು ಇತಿಹಾಸ ಒಂದೇ ನಾಣ್ಯದ ಎರಡು ಮುಖಗಳು. ನಮ್ಮ ಅವಶ್ಯಕತೆಗಳು ಸದಾ ಒಂದೇ ಅಲ್ಲ, ಇತಿಹಾಸದುದ್ದಕ್ಕೂ ಅವು ಬದಲಾಗುತ್ತಿರುತ್ತವೆ. ಆದಿಮ ಮಾನವನಿಗೆ ಕಾವ್ಯದ ಅವಶ್ಯಕತೆ ಎಲ್ಲಿತ್ತು! ಆದರೆ ಇಂದು ಕೆಲವರಿಗಾದರೂ ಅದು ಅವಶ್ಯಕ. ಅವಶ್ಯಕತೆಗಳನ್ನು ಪೂರೈಸಿಕೊಳ್ಳುತ್ತಾ ನಾವು ಹೊಸ ಅವಶ್ಯಕತೆಗಳನ್ನು ಸೃಷ್ಟಿಸಿಕೊಳ್ಳುತ್ತೇವೆ. ಈ ಪ್ರಕ್ರಿಯೆಯಲ್ಲಿ ನಮ್ಮ ಐಂದ್ರಿಯಕ ಜೀವನ ರೂಪುಗೊಳ್ಳುತ್ತಾ ಮತ್ತು ಹಸನುಗೊಳ್ಳುತ್ತಾ ಸಾಗುತ್ತದೆ. ಇಂದಿಲ್ಲದ್ದು ನಾಳೆ ಆವಿಷ್ಕಾರಗೊಳ್ಳುವುದು ಹಾಗೆ. ಅವಶ್ಯಕತೆಗಳ ಪೂರೈಕೆಗೆ ಪ್ರೇರಣೆ ಆಸೆ, ಅದನ್ನು ಫ್ರಾಯ್ಡ್ ವಿಶದೀಕರಿಸಿದ್ದಾನೆ. ಒಟ್ಟಿನಲ್ಲಿ ''ಮಾನವನ ಇತಿಹಾಸ'' ಎನ್ನುವ ಬದಲು ''ಮಾನವನೇ ಇತಿಹಾಸ'' ಎಂಬುದು ಹೆಚ್ಚು ಸೂಕ್ತ. ಅದನ್ನು ಗಾರ್ಡನ್ ಚೈಲ್ಡ್ ತನ್ನೊಂದು ಪುಸ್ತಕದ ಶೀರ್ಷಿಕೆಯಲ್ಲಿ ಸೂಚಿಸಿದ್ದಾನೆ: ''ತನ್ನನ್ನು ತಾನು ರೂಪಿಸಿಕೊಳ್ಳುವ ಮಾನವ'' ಎಂದು. ಪ್ರಾಣಿಗಳಿಗೆ ಆಸೆಯುಂಟೆ? ಇರಬೇಕಲ್ಲವೆ, ಇಲ್ಲದಿದ್ದರೆ ಸಂತಾನಾಭಿವೃದ್ಧಿ ಹೇಗೆ ಸಾಧ್ಯ? ಆದರೆ ಸಂಕೀರ್ಣವಾದ ದುಡಿಮೆ ಮತ್ತು ವ್ಯಾಪಕ ಸಂವಹನಾ ಕ್ರಮಗಳು ಅವಕ್ಕೆ ತಿಳಿಯದು. ಅವುಗಳ ಜೀವನ ಚಕ್ರವು ಪ್ರಕೃತಿಸಹಜವಾಗಿ ಸಾಗುತ್ತದೆ. ತಮಗೆ ಬೇಕಾದಂತೆ ಅದನ್ನು ರೂಪಿಸಿಕೊಳ್ಳುವುದು ಅವಕ್ಕೆ ಆಗಿಬಂದಿಲ್ಲ. ಮಾನವನಿಗೆ ಅದು ಸಾಧ್ಯ. ಅದನ್ನೇ ಮಾರ್ಕ್ಸ್ ''ಸ್ವಾತಂತ್ರ್ಯ'' ಎಂದು ಕರೆದಿದ್ದಾನೆ. ಆದರೆ ಇದರಲ್ಲೊಂದು ಅಗಾಧ ವ್ಯಂಗ್ಯವಿದೆ: ಮಾನವನಿಗೆ ಸ್ವಯಂನಿರ್ಧಾರವು ಜೀವನದ ಸಾರ, ಆದರೆ ಅಗಾಧ ಸಂಖ್ಯೆಯ ಸ್ತ್ರೀಯರು ಮತ್ತು ಪುರುಷರು ಆ ಸ್ವಯಂ ನಿರ್ಧಾರವನ್ನು ಕಾರ್ಯಗತಗೊಳಿಸಲು ಸಮರ್ಥರಾಗಿಲ್ಲ, ಇತಿಹಾಸದುದ್ದಕ್ಕೂ ಕಂಡು ಬಂದಿರುವ ಸಂಗತಿ ಅದು. ಅಂದರೆ, ಸಂಪೂರ್ಣ ಅರ್ಥದಲ್ಲಿ ಮಾನವರಾಗಿರಲು ಅವರಿಗೆ ಪರವಾನಗಿ ದೊರೆತಿಲ್ಲ, ವರ್ಗ ಸಮಾಜದ ಬರಡು ಚಕ್ರದಲ್ಲಿ ಅವರ ಜೀವನ ಸಿಲುಕಿ, ಅದರ ನಿಯಮದಂತೆ ಅವರ ಜೀವನ ನಿರ್ಧಾರವಾಗುತ್ತಾ ಬಂದಿದೆ. ಅದೇಕೆ ಹಾಗೆ ಆಗಿದೆ, ಅದನ್ನು ಸರಿಪಡಿಸುವುದೆಂತು? ಮಾರ್ಕ್ಸ್‌ನ ಇಡೀ ಕೆಲಸ ಅದಕ್ಕೆ ಸಂಬಂಧಿಸಿದ್ದೇ. ಅವನ ಮಾತಿನಲ್ಲಿ ಹೇಳುವುದಾದರೆ, ನಾವು ನಿರ್ಬಂಧಗಳ ಆಧಿಪತ್ಯದಿಂದ ಸ್ವಾತಂತ್ರ್ಯದ ಸಾಮ್ರಾಜ್ಯಕ್ಕೆ ಮುಂದಡಿ ಇಡುವುದು ಹೇಗೆ? ಆ ಸ್ವಾತಂತ್ರ್ಯವನ್ನು ತಲುಪಿದ ಮೇಲೇನು? ಮಾರ್ಕ್ಸ್ ಅಲ್ಲಿಂದ ಮುಂದಕ್ಕೆ ಮೌನಿ. ಮುಂದಕ್ಕೇನೆಂದು ಕಂಡುಕೊಳ್ಳುವುದು ಅಂದಿನವರ ಸ್ವಾತಂತ್ರ್ಯ ತಾನೆ!

ಕೆಲವು ತತ್ತ್ವಶಾಸ್ತ್ರಜ್ಞರ ದ್ವಿಧಾಭಾವದಿಂದ ಹೊರಗುಳಿಯಲು ಮಾನವ ಜೀವಿಯ ನೈಜ ನಡತೆಯನ್ನು ಗಮನಿಸುವುದಷ್ಟೇ ಸಾಕು. ಮಾನವ ಶರೀರವು ಒಂದು ಭೌತಿಕ ವಸ್ತು. ಅದು ಪ್ರಕೃತಿಯ ಒಂದು ಭಾಗ, ಅಂತೆಯೇ ಇತಿಹಾಸದ ಒಂದು ಭಾಗ. ಆದರೆ ಅದು ಹಲಸಿನಕಾಯಿಯಂತಹ ಭೌತಿಕ ವಸ್ತುವಲ್ಲ, ಕಲ್ಲಿದ್ದಲಿನಂತಹದೂ ಅಲ್ಲ. ಅವುಗಳ ಸ್ಥಿತಿ ಮತ್ತು ಚಲನೆ ಪ್ರಕೃತಿಯ ಕೈಲಿದೆ. ಮಾನವ ಹಾಗಲ್ಲ, ಅವನು ತನ್ನ ಸನ್ನಿವೇಶವನ್ನು ಮಾರ್ಪಾಡಿಸಿಕೊಳ್ಳಬಲ್ಲ. ಪ್ರಕೃತಿಯನ್ನು ತನ್ನ ಆಯಾಮದಲ್ಲಿ ಬದಲಾಯಿಸಿಕೊಳ್ಳುವಂತೆ ಮಾಡಬಲ್ಲ ಶಕ್ತಿ ಮಾನವ ದೇಹಕ್ಕಿದೆ, ಹಲಸಿನಕಾಯಿಗಿಲ್ಲ. ಹೈಬ್ರಿಡ್ ಹಲಸಿನಕಾಯಿ ಬರಬೇಕಾದರೂ ಮಾನವನ ಮಧ್ಯಪ್ರವೇಶ ಬೇಕು. ಮಾನವನ ದುಡಿಮೆಯು ಪ್ರಕೃತಿಯನ್ನು ಅನುಸರಿಸುತ್ತಲೇ ಮಾನವನ ಅಂಗಾಂಗಗಳನ್ನು ವೃದ್ಧಿಗೊಳಿಸುತ್ತಿರುತ್ತದೆ. ಸಾವಿರ ವರ್ಷಗಳ ಹಿಂದೆ ಮಾನವನ ಕೈ ಮಾಡಲಾಗದಿದ್ದುದನ್ನು ಇಂದಿನ ಮಾನವನ ಕೈ ಮಾಡುತ್ತದೆ. ಉದಾಹರಣೆಗೆ, ಮರ ಕೊಯ್ಯಲು ಗರಗಸದ ಬದಲು ಇಂದಿನ ಮಾನವ ಮಶೀನ್ ಗರಗಸ ಬಳಸಬಹುದು. ಅಂದರೆ ಅವನ ಅಂಗವಾದ ಕೈ ವೃದ್ಧಿ ಹೊಂದಿದೆ. ಅದೇ ನಾಗರಿಕತೆ ಎನ್ನುವುದು. ಎಲ್ಲ ಮಾನವ ಸಂಸ್ಥೆಗಳೂ ಈ ಉತ್ಪಾದಕ ಶಕ್ತಿಯುಳ್ಳ ಮಾನವ ಶರೀರದ ಪರಿಣಾಮಗಳೇ. ಅದು ಕ್ರೀಡಾಂಗಣ, ಕಾವ್ಯಕಮ್ಮಟ, ವಿಧಾನಸೌಧ, ಜೂಜುಕೇಂದ್ರ, ಚುಂಚನಗಿರಿ ಸ್ವಾಮಿಯ ಮಠ, ಕಮ್ಯುನಿಸ್ಟ್ ಪಕ್ಷದ ಕಚೇರಿ, ಸ್ಥಳೀಯ ಆಸ್ಪತ್ರೆ, ಹೀಗೆ ಯಾವುದೂ ಆಗಬಹುದು. ಅವೆಲ್ಲವೂ ಮಾನವ ಪ್ರಜ್ಞೆಯ ಸಾಕಾರ ರೂಪಗಳೂ ಆಗಿವೆ. ಮಾರ್ಕ್ಸ್ ಹೇಳುತ್ತಾನೆ: ''ಮಾನವನ ಉದ್ಯಮ (ಇಲ್ಲಿ 'ಉದ್ಯಮ' ಎಂದರೆ ಎಲ್ಲ ವ್ಯವಹಾರಗಳೂ ಸೇರಿವೆ) ಎಂಬುದು ಮಾನವ ಪ್ರಜ್ಞೆಯ, ಮಾನವ ಮನೋಭಾವದ ತೆರೆದ ಪುಸ್ತಕ. ಅದು ಕಾಣಬರುವುದು ಐಂದ್ರಿಯಕ ವಿಧದಲ್ಲಿ.'' ಶರೀರಕ್ಕೆ ಇದೆಲ್ಲಾ ಸಾಧ್ಯವಾಗುವುದು ತನ್ನನ್ನು ತಾನು ಮೀರಲು ಸಾಮರ್ಥ್ಯ ಹೊಂದಿರುವುದರಿಂದ. ತನ್ನನ್ನು ಹಾಗೂ ತನ್ನ ಸನ್ನಿವೇಶವನ್ನು ಪರಿವರ್ತಿಸಿಕೊಳ್ಳಲು ಅದಕ್ಕೆ ಸಾಧ್ಯವಿದೆ. ತನ್ನಂತಹ

ಬೇರೆ ಶರೀರ-ಶರೀರಿಗಳೊಂದಿಗೆ ಅದು ಸಂಕೀರ್ಣ ಸಂಬಂಧಗಳನ್ನು ಬೆಳೆಸಿಕೊಳ್ಳ ಬಲ್ಲದು. ಯಜಮಾನ, ಆಳು, ಹೆಂಡತಿ, ಮಂತ್ರಿ, ಅಧ್ಯಾಪಕ, ವಿದ್ಯಾರ್ಥಿ, ಹೀಗೆ ಸಂಬಂಧಗಳು ಅಸಂಖ್ಯ. ಹೀಗೆ ಸಂಬಂಧ ಬೆಳೆಸಿಕೊಳ್ಳದ ಮಾನವ ಶರೀರಗಳೆಂದರೆ ಶವಗಳು ಮಾತ್ರ! ಎಲೆಕೋಸು ಅಂತಹ ಸಂಬಂಧ ಬೆಳೆಸಿಕೊಳ್ಳುವ ಅಗತ್ಯವಿಲ್ಲ, ಅದಕ್ಕೆ ಮಾನವನಿಗಿರುವಂತಹ ಅಗತ್ಯಗಳಿಲ್ಲ; ಪ್ರಕೃತಿ ನಿಯಮದಂತೆ ಬೆಳೆಯುತ್ತದೆ ಇಲ್ಲ ಸೊರಗುತ್ತದೆ. ಅದಕ್ಕೆ ಭಿನ್ನವಾಗಿ, ಮಾನವ ಇತಿಹಾಸ ನಿರ್ಮಿಸಬಲ್ಲ, ಏಕೆಂದರೆ ಅವನು ಉತ್ಪಾದಕ ಶಕ್ತಿ ಪಡೆದಿರುವವನು. ಉತ್ಪಾದನೆ ಮಾಡದೆ ಅವನಿಗೆ ಗತ್ಯಂತರವಿಲ್ಲ, ಏಕೆಂದರೆ, ಅಭಾವ ಪೀಡಿಸಿದಾಗ ಭೌತಿಕ ಜೀವನ ಸಾಗಿಸಬೇಕಲ್ಲ, ಅದಕ್ಕೆ. ಅದನ್ನು ಮಾಡಲು ಇನ್ನೂ ಕಲಿತಿಲ್ಲದಿದ್ದಾಗ ಅವನು ಅಲೆಮಾರಿಯಾಗಿದ್ದ, ನಂತರ ಉತ್ಪಾದನೆಯ ಸತತ ಕ್ರಿಯೆಗೆ ಅವನನ್ನು ದೂಡಿತು; ಅಗತ್ಯವು ಅವನನ್ನು ಚರಿತ್ರೆಯ ನಿರ್ಮಾತೃವನ್ನಾಗಿಸಿದೆ. ಭೌತಿಕ ಅಗತ್ಯಗಳು ಹೇರಳವಾಗಿ ದೊರೆಯು ವಂತಾದಾಗಲೂ ಅವನು ಇತಿಹಾಸದ ನಿರ್ಮಾತೃವೇ; ಆದರೆ ಇತಿಹಾಸದ ವಿಧಾನ ಬೇರೆಯಾಗಿರುತ್ತದೆ. ಸದ್ಯದಲ್ಲಿ ಮಾನವ ತನ್ನ ಸಹಜ ಅಗತ್ಯಗಳ ಪೂರೈಕೆಗೆ ಸಾಮಾಜಿಕ ಸಾಧನಗಳನ್ನು ಬಳಸುತ್ತಿದ್ದಾನೆ; ತನ್ನ ಉತ್ಪಾದನಾ ಸಾಧನಗಳನ್ನು ಸಾಮೂಹಿಕವಾಗಿ ಉತ್ಪಾದಿಸುವುದರ ಮೂಲಕ. ಅದರಿಂದ ಇನ್ನಷ್ಟು ಅಗತ್ಯಗಳು, ಮತ್ತಷ್ಟು ಅಗತ್ಯಗಳು, ಹುಟ್ಟಿಕೊಳ್ಳುತ್ತವೆ. ಅದರ ಪರಿಣಾಮವೇ ಸಂಸ್ಕೃತಿ, ಇತಿಹಾಸ, ನಾಗರಿಕತೆ, ಎಂದೆಲ್ಲಾ ಕರೆಸಿಕೊಳ್ಳುವ ವಿದ್ಯಮಾನಗಳು. ಮೂಲದಲ್ಲಿ ಅದಕ್ಕೆ ಕಾರಣ ಅಗತ್ಯಗಳ ಪೂರೈಕೆಯನ್ನು ಬೇಡುವ ಮಾನವ ಶರೀರ ಮತ್ತು ಅದು ಇರುವ ಭೌತಿಕ ಸನ್ನಿವೇಶಗಳು. ಬೇರೆ ರೀತಿಯಲ್ಲಿ ಹೇಳುವುದಾದರೆ, ನಮ್ಮ ಸಾಮೂಹಿಕ ಜೀವನಕ್ಕೆ ಆರ್ಥಿಕತೆಯು ಅಡಿಪಾಯ ವಾಗಿದೆ. ಜೈವಿಕ ಮತ್ತು ಸಾಮಾಜಿಕಗಳ ನಡುವೆ ಅದುವೇ ಜೀವಂತ ಕೊಂಡಿ.

ಈಗ ಯೋಚನೆ ಮಾಡೋಣ : ಚೇತನವೆಂಬುದು ಇತಿಹಾಸದ ನಿರ್ಮಾಣದಲ್ಲಿ ತಾನೆ ತೋರಿಬರುವುದು? ಅಧ್ಯಾತ್ಮದ ವಿಚಾರವು ಪರಲೋಕದ ವಿಷಯವಲ್ಲ, ಶರೀರದ ಅಭಾವದಲ್ಲಿ ಮೂಡುವಂಥದಲ್ಲ. ದಿನನಿತ್ಯದ ಜೀವನದಿಂದ ದೂರವಾದದ್ದೆಂದು ಅದನ್ನು ಒಬ್ಬ ಶ್ರೀಮಂತ ಬೂರ್ಷ್ವಾ ಕಲ್ಪಿಸಿಕೊಳ್ಳಬಹುದು, ಏಕೆಂದರೆ ತನ್ನ ಒಡ್ಡ ಭೌತಿಕ ಜೀವನದಲ್ಲಿ ಅವಿತುಕೊಳ್ಳಲು ಅಂತಹ ಕಲ್ಪನೆಯ ಅಗತ್ಯ ಅವನಿಗಿದೆ. ಇಲ್ಲದಿದ್ದರೆ ಜಯಮಾಲಾಳಂತಹ ಹುಡುಗಿ ಶಬರಿಮಲೆಗೆ ಏಕೆ ಹೋಗುತ್ತಿದ್ದಳು, ಜನಾರ್ದನ ರೆಡ್ಡಿ ತಿರುಪತಿ ತಿಮ್ಮಪ್ಪನಿಗೆ ನಲವತ್ತು ಕೋಟಿಯ ವಜ್ರ ಕಿರೀಟ ಏಕೆ ಕೊಡುತ್ತಿದ್ದ! ಮಾರ್ಕ್ಸ್‌ಗೆ ಚೇತನ ಅಥವಾ ಅಧ್ಯಾತ್ಮವೆನ್ನುವುದು ಎಲ್ಲೋ ಇರುವುದಲ್ಲ, ಅದಿರುವುದು ಕಲೆ, ಸ್ನೇಹ, ತಮಾಷೆ, ದಯೆ, ನಗು, ಲೈಂಗಿಕ ಪ್ರೇಮ, ದಂಗೆ, ಕ್ರಿಯಾಶೀಲತ್ವ, ಐಂದ್ರಿಯಕ ಸಂತೋಷ, ನ್ಯಾಯಕ್ಕಾಗಿ ಕೋಪ, ಜೀವನ ಸಮೃದ್ಧಿ, ಇತ್ಯಾದಿಗಳಲ್ಲಿ. ಮಾರ್ಕ್ಸ್‌ನ ತಮಾಷೆ ಕೆಲವೇಳೆ ಅತಿಯಾಗಿ ಅವನನ್ನು ಫಜೀತಿಗೆ ಸಿಲುಕಿಸುತ್ತಿತ್ತು. ಒಮ್ಮೆ ಕೆಲವು ಸ್ನೇಹಿತರೊಡನೆ ಲಂಡನ್ನಿನ ಆಕ್ಸ್‌ಫರ್ಡ್ ಸ್ಟ್ರೀಟ್‌ನಿಂದ ಹ್ಯಾಂಪ್‌ಸ್ಟೆಡ್ ರೋಡ್‌ವರೆಗೆ ದಾರಿಯುದ್ದಕ್ಕೂ ಬರುವ ಎಲ್ಲ ಮದ್ಯದಂಗಡಿಗಳಲ್ಲೂ ಕೊಂಚ ಕೊಂಚ ಮದ್ಯ ಸೇವಿಸುತ್ತಾ ನಡೆದನಂತೆ. ದಾರಿಯಲ್ಲಿ ಒಂದೆರಡು ದಾರಿದೀಪಗಳಿಗೆ ಕಲ್ಲು ಹೊಡೆದರು, ಪೊಲೀಸರು ಅವರನ್ನಟ್ಟಿ ಬಂದರು! ಅಂದು ''ಪ್ರಭುತ್ವದ ದಮನ''ದ ಪರಿಚಯ ಅವನಿಗೆ ನೇರವಾಗಿಯೇ ಲಭಿಸಿದ್ದಿರಬೇಕು.

ತನ್ನ ಲೂಯಿ ಬೋನಪಾರ್ಟೆಯ ಹದಿನೆಂಟನೆಯ ಬ್ರೂಮೇರ್ ಎಂಬ ಗ್ರಂಥದಲ್ಲಿ ಮಾರ್ಕ್ಸ್ ರಾಜಕೀಯವನ್ನು ಸಾಮಾಜಿಕ ಹಿತಾಸಕ್ತಿಗಳ ನಿಟ್ಟಿನಲ್ಲಿ ಚರ್ಚಿಸಿದ್ದಾನೆ; ಅದರಲ್ಲೇನೂ ಆಚ್ಚರಿಯಿಲ್ಲ. ಆದರೆ ಅಲ್ಲೊಂದೆಡೆ ಹೇಳುತ್ತಾನೆ : ''ರಾಜಕೀಯವು ಏನೆಲ್ಲಾ ಅಂಶಗಳನ್ನು ಅಭಿವ್ಯಕ್ತಿಗೊಳಿಸಬಹುದು : ಹಳೆಯ ಕಾಲದ ನೆನಪುಗಳು, ವೈಯ್ಯಕ್ತಿಕ ವೈರ, ಭಯ ಮತ್ತು ಭರವಸೆ, ಪೂರ್ವಗ್ರಹ ಮತ್ತು ಭ್ರಾಂತಿಗಳು, ಸಾಂತ್ವನ ಮತ್ತು ಕ್ರೋಧ, ನಂಬಿಕೆಗಳು, ತತ್ವಗಳು, ಇತ್ಯಾದಿ.'' ಇವೆಲ್ಲಾ ಶರೀರಸಂಬಂಧಿ ಚೇತನದ ವ್ಯಾಪಾರಗಳು ತಾನೆ? ಮಾನವನ ಲಕ್ಷಣ ಅದು. ನನ್ನ ಶರೀರವಿಲ್ಲದೆ ನಾನಿಲ್ಲ, ನಾನು ನಿಮಗೆ ದೂರವಾಣಿ ಕರೆ ಮಾಡಿದರೆ ನಿಮಗೆ ನಾನು ಶರೀರಿಯಾಗಿ ಗೋಚರಿಸಿದಂತೆಯೇ; ದೈಹಿಕವಾಗಿ ಅಲ್ಲದಿರಬಹುದು, ಅಷ್ಟೇ. ಲುಡ್ವಿಗ್ ವಿಡ್‌ಗೆನ್‌ಸ್ಟೇನ್ ಎಂಬ ತತ್ತ್ವಶಾಸ್ತ್ರಜ್ಞ ಒಮ್ಮೆ ಹೇಳಿದ್ದ, ''ಆತ್ಮದ ಒಂದು ಪ್ರತಿಮೆ ಬೇಕಾದರೆ ನೀವು ಮಾನವ ಶರೀರವನ್ನು ನೋಡಿ,'' ಎಂದು. ಸುಖ ಎಂಬುದೇನು? ಅರಿಸ್ಟಾಟಲ್ ಮತ್ತು ಮಾರ್ಕ್ಸ್ ಇಬ್ಬರೂ ನೀಡುವುದು ಒಂದೇ ಉತ್ತರ, ''ಅದು ಮನಸ್ಸಿನ ಆಹ್ಲಾದ ಸ್ಥಿತಿಯಲ್ಲ, ಬದಲಾಗಿ ಒಂದು ಜೀವಂತ ಕ್ರಿಯೆ,'' ಎಂದು. ಮಾರ್ಕ್ಸ್ ಹುಟ್ಟಿದ್ದು ಯಹೂದಿ ಮನೆತನದಲ್ಲಿ, ಯಹೂದಿ ಮತಧರ್ಮದ ಪರಂಪರೆಯಲ್ಲಿ ಅವನಿಗೇನೂ ಆಸ್ಥೆ ಇರಲಿಲ್ಲವಾದರೂ ಅದರ ಚೈತನ್ಯದ ಸ್ಫೂರ್ತಿ ಯೊಂದನ್ನು ಅವನು ತುಂಬಿಕೊಂಡಿದ್ದ: ಹಸಿದವರಿಗೆ ಅನ್ನ ನೀಡು, ನಿರಾಶ್ರಿತರಾಗಿ ಬಂದವರಿಗೆ ಆಸರೆ ಕೊಡು, ಶ್ರೀಮಂತರ ಹಿಂಸೆಯಿಂದ ಬಡವರನ್ನು ಪಾರುಮಾಡು. ಇವೆಲ್ಲಾ ಐಹಿಕದ ವಿರೋಧಿ ನೆಲೆಗಳಲ್ಲ; ಅವು ದಿನನಿತ್ಯದ ಅಸ್ತಿತ್ವದ ಒಂದು ಭಾಗ, ಜೀವನದಲ್ಲಿ ಅದರ ಅಳವಡಿಕೆಯ ಪ್ರಶ್ನೆ. (ಇಸ್ರೇಲಿನ ರಾಜಕೀಯ ನಾಯಕತ್ವವು ಯಹೂದಿ ಪರಂಪರೆಯದೆಂದು ಹೇಳಲಾಗುತ್ತದೆ. ಅದು ಯಹೂದಿ ''ಚೈತನ್ಯ''ವನ್ನು ಹೇಗೆ ಮೈದುಂಬಿಸಿಕೊಳ್ಳುತ್ತಿದೆಯೆಂಬುದು ಪ್ರತಿದಿನ ವರ್ತಮಾನ ಪತ್ರಿಕೆಗಳಲ್ಲಿ ವರದಿಯಾಗುತ್ತಿರುತ್ತದಲ್ಲವೆ?)

ಶರೀರದ ಒಂದು ಕ್ರಿಯೆಯಲ್ಲಿ 'ಚೇತನ'ವು ಸ್ಪಷ್ಟವಾಗಿ ಪ್ರಕಟಗೊಳ್ಳುತ್ತದೆ : ಅದು ಭಾಷೆ. ಮಾನವ ಪ್ರಜ್ಞೆಯ ಭೌತಿಕ ಮೂರ್ತರೂಪ ಅದು. ''ದ ಜರ್ಮನ್ ಐಡಿಯಾಲಜಿ''ಯಲ್ಲಿ ಮಾರ್ಕ್ಸ್ ಹೇಳುವುದು ಹೀಗೆ : ''ಭಾಷೆಯು ಪ್ರಜ್ಞೆಯಷ್ಟೇ ಹಳೆಯದು. ಅದು ಕಾರ್ಯ ಪ್ರವೃತ್ತಿ ಉಳ್ಳದ್ದು, ಬೇರೆಯವರಿಗಾಗಿಯೂ ಇರುವ ನೈಜ ಪ್ರಜ್ಞೆ ಅದಾದ್ದರಿಂದ ಸ್ವತಃ ನಮಗೂ ಲಭ್ಯ. ಪ್ರಜ್ಞೆಯಂತೆ ಭಾಷೆ ಸಹ ಒಂದು ಅವಶ್ಯಕತೆಯ ಸಂದರ್ಭದಲ್ಲಿ ಉದ್ಭವವಾಗಿದೆ : ಬೇರೆಯವರೊಡನೆ ಸಂವಹನ ಮಾಡುವುದು ಆ ಸಂದರ್ಭ.'' ಪ್ರಜ್ಞೆಯು ಸರ್ವಥಾ ಸಾಮಾಜಿಕ ಹಾಗೂ ಪ್ರಾಯೋಗಿಕ, ಆದ್ದರಿಂದಲೇ ಭಾಷೆಯು ಅದರ ಉನ್ನತ ಸಂಕೇತ. ಎಲ್ಲರೂ ಭಾಷೆಯ ಅರ್ಥವನ್ನು ಏಕಪ್ರಕಾರವಾಗಿ ಗ್ರಹಿಸುವುದರಿಂದಲೇ ಮಾನವನು ಮನಸ್ಸು ಹೊಂದಿದ್ದಾನೆಂಬುದು ಸಿದ್ಧವಾಗುತ್ತದೆ. ಸಾಮುದಾಯಿಕ ಮಾನವ ತನ್ನ ಪರವಾಗಿ ಮಾತನಾಡುವುದನ್ನು ಭಾಷೆಯೆಂದು ಹೇಳಬಹುದು. ತತ್ತ್ವಶಾಸ್ತ್ರದ ಭಾಷೆಯು ನಿಜ ಪ್ರಪಂಚದ ಭಾಷೆಯ ತಿರುಚಲಾದ ರೂಪ, ಎನ್ನುತ್ತಾನೆ ಮಾರ್ಕ್ಸ್. ಚಿಂತನೆ ಮತ್ತು ಭಾಷೆ ತಮ್ಮದೇ ವೃತ್ತದಲ್ಲಿ ಇರುವಂಥವಲ್ಲ; ಅವು ನಿಜ ಜೀವನದ ಅಭಿವ್ಯಕ್ತಿ ರೂಪಗಳು. ಯಾವುದೇ ಪರಿಕಲ್ಪನೆ ಇರಲಿ, ಅದು ಕಟ್ಟಕಡೆಗೆ ನಮ್ಮ ಸಮಾನ ಅಸ್ತಿತ್ವದ ಮೂಲದಿಂದಲೇ ಹೊಮ್ಮಿರುತ್ತದೆ.

ಮಾನವ ಪ್ರಜ್ಞೆ ಎಂಬುದಕ್ಕೆ ಭೌತಿಕ ಸರಂಜಾಮು ಸಾಕಷ್ಟಿದೆ. ಅದನ್ನು ಕಡೆಗಾಣಿಸಿ ಕೆಲವು ತತ್ತ್ವಶಾಸ್ತ್ರ ಶಾಖೆಗಳು ಮಾನವ ಪ್ರಜ್ಞೆಯಿಂದ ಚರ್ಚೆಯನ್ನು ಆರಂಭಿಸುತ್ತವೆ. ಅಂದರೆ, ಅವು ಹಿಂದಿನದನ್ನೆಲ್ಲಾ ಅವಗಣಿಸಿ ಮಧ್ಯದಿಂದೆಲ್ಲೋ ಆರಂಭವಾಗಿಬಿಡುತ್ತವೆ. ವಿಚಾರಗಳು ಹೊಮ್ಮುವುದು, ಆ ವಿಚಾರಗಳ ಹಿಂದಿನ ತುಡಿತ, ವಿಚಾರಗಳ ಸಂಬಂಧದಲ್ಲಿ ಅಧಿಕಾರಕ್ಕಾಗಿ ಉಂಟಾಗುವ ಘರ್ಷಣೆಗಳು, ವಿಚಾರಗಳು ಪೂರೈಸುವ ಭೌತಿಕ ಅಗತ್ಯಗಳು, ಇವೆಲ್ಲಾ ಸಾಮಾಜಿಕ ಸನ್ನಿವೇಶಗಳ ಹಿನ್ನೆಲೆ ಹೊಂದಿವೆ. ತತ್ತ್ವಶಾಸ್ತ್ರವು ಮೊದಲಿಗೆ ಹಾಕಿಕೊಳ್ಳಬೇಕಾದ ಪ್ರಶ್ನೆಗಳು ಇವು : ಈ ಮಾನವ ವಿಷಯ ಬಂದದ್ದು ಎಲ್ಲಿಂದ? ವಸ್ತುವು ಉತ್ಪನ್ನವಾದದ್ದು ಹೇಗೆ? ಈ ಪ್ರಶ್ನೆಗಳು ಏಕೆ ಪ್ರಸ್ತುತವೆಂದರೆ ಚಿಂತಿಸುವ ಮುನ್ನ ನಾವು ಉಣ್ಣಬೇಕು. ''ತಿನ್ನು'' ಎಂಬ ಒಂದು ಪದವು ಸಾಮಾಜಿಕ ಉತ್ಪಾದನೆಯ ಮಾದರಿಯನ್ನು ಕುರಿತಂತೆ ಅದೆಷ್ಟು ಪ್ರಶ್ನೆಗಳನ್ನು ಒಳಗೊಂಡಿದೆ, ನೋಡಿ. ಅದಕ್ಕೂ ಮೊದಲು ನಾವು ಹುಟ್ಟಿರಬೇಕಲ್ಲ, ಈ ''ಹುಟ್ಟುವುದು'' ಎಂಬ ಪದವೂ ಅಸಾಮಾನ್ಯವಾದ್ದೇ. ಅದರ ಹಿಂದೆ ನೆಂಟಸ್ತನದ ದೊಡ್ಡ ಪ್ರಪಂಚ ಅಡಗಿದೆ. ಲೈಂಗಿಕತೆ, ಪಿತೃಪ್ರಾಧಾನ್ಯ, ಲೈಂಗಿಕ ಪುನರುತ್ಪಾದನೆ, ಇತ್ಯಾದಿಗಳೆಲ್ಲಾ 'ಹುಟ್ಟು' ಎಂಬುದಕ್ಕೆ ಆಯಾಮಗಳನ್ನು ಕಲ್ಪಿಸುತ್ತವೆ. ಅದೇ ಸ್ವಾರಸ್ಯದ ಸಂಗತಿ : ವಾಸ್ತವವನ್ನು ಕುರಿತು ಚಿಂತನೆ ಮಾಡುವ ಮೊದಲೇ ನಾವು ವಾಸ್ತವದೊಡನೆ ಪ್ರಾಯೋಗಿಕವಾಗಿ ಮತ್ತು ಭಾವನಾತ್ಮಕವಾಗಿ ಗಂಟುಹಾಕಿಕೊಂಡು ಬಿಟ್ಟಿರುತ್ತೇವೆ. ನಮ್ಮ ಚಿಂತನೆ ಸಾಗುವುದು ಆ ಹಿನ್ನೆಲೆಯಲ್ಲೇ. ಜಾನ್ ಮ್ಯಾಕ್‌ಮರ್ರೆ ಹೇಳುವಂತೆ ''ಪ್ರಪಂಚದ ಬಗೆಗಿನ ನಮ್ಮ ಜ್ಞಾನವು ಮೂಲತಃ ಪ್ರಪಂಚದಲ್ಲಿ ನಮ್ಮ ಕ್ರಿಯೆಯ ಒಂದು ರೂಪ.'' ವ್ಯಾಗ್ನರ್ ಎಂಬ ಸಂಗೀತಸಮ್ರಾಟನ ಬಗ್ಗೆ ವ್ಯಾಖ್ಯಾನಿಸುತ್ತಾ ಮಾರ್ಕ್ಸ್ ಹೇಳುತ್ತಾನೆ : ''ಹೊರಗಣ ಪ್ರಪಂಚದೊಡನೆ ಒಂದು ನಿಯಮಬದ್ಧ ಸಂಬಂಧ ಕಲ್ಪಿಸಿಕೊಂಡ ನಂತರವಷ್ಟೆ ಮಾನವ ತಿಳಿವು ಪಡೆಯಹೊರಡುವುದಿಲ್ಲ.'' ಅಂದರೆ, ವಿಷಯಗಳನ್ನು ತರ್ಕಿಸುವ ಮೊದಲೇ ಎಷ್ಟೋ ಆವಿಷ್ಕಾರಗಳಾಗಿರಬೇಕು ಎಂದರ್ಥ.

*(ಈ ವಿಷಯದ ಮುಂದುವರಿದ ಭಾಗವನ್ನು ಮುಂದಿನ ಕಂತಿನಲ್ಲಿ ನಿರೀಕ್ಷಿಸಿ.)*

**ಡಾ|| ಜಿ. ರಾಮಕೃಷ್ಣ**
೨-ಎಫ್, ಪವನ ಪರಂಜ್ಯೋತಿ ಅಪಾರ್ಟ್‌ಮೆಂಟ್ಸ್, ೨೨/೧, ೪ನೇ ಕ್ರಾಸ್, ಕಾವೇರಿನಗರ
ಬನಶಂಕರಿ ೩ನೇ ಹಂತ, ಬೆಂಗಳೂರು - ೫೬೦ ೦೮೫



## ಅರವಿಂದ ಚೊಕ್ಕಾಡಿ

# ಮಕ್ಕಳ ಸಾಹಿತ್ಯದ ಬಗ್ಗೆ ಪಳಕಳ ಸೀತಾರಾಮ ಭಟ್ಟ ಅವರ ದೃಷ್ಟಿಕೋನ

ಪಳಕಳ ಸೀತಾರಾಮ ಭಟ್ಟರು ತಮ್ಮ ಮೊದಲ ಕಥೆಯನ್ನು ಬರೆದ ಹಿನ್ನೆಲೆಯೇ ಬಹಳ ಸ್ವಾರಸ್ಯಕರವಾಗಿ ಇದೆ. ಅದನ್ನು ಅವರ ಮಾತಿನಲ್ಲಿಯೇ ಕೇಳಿ: ''೧೯೪೫-೪೬ನೇ ಇಸವಿಯಲ್ಲಿ ನಾನು ಎಂಟನೆಯ ತರಗತಿಯಲ್ಲಿದ್ದಾಗ 'ಅರುಣ' ಎಂಬ ಭಿತ್ತಿಪತ್ರಿಕೆ ಶಾಲೆಯಲ್ಲಿತ್ತು. ಅದಕ್ಕೆ ವಿದ್ಯಾರ್ಥಿಗಳು ಬರೆಹವನ್ನು ಕೊಡಬೇಕೆಂದು ಹೇಳಿದರು. ಈ ಭಿತ್ತಿಪತ್ರಿಕೆಗಾಗಿ ಬರೆದದ್ದೇ ನನ್ನ ಮೊದಲ ಕಥೆ. ಆ ಕಥೆಯು ಜೀವನದ ಒಂದು ಘಟನೆಯನ್ನು ಆಧರಿಸಿದ್ದಾಗಿತ್ತು. ರಜಾ ದಿನಗಳಲ್ಲಿ ನಾವು ಮಕ್ಕಳೆಲ್ಲ ಸೇರಿ ಆಟವಾಡುತ್ತಿದ್ದೆವು. ಆಟಕ್ಕೆ ಹೋಗುವಾಗ ಅಮ್ಮನನ್ನು ಕಾಡಿ, ಬೇಡಿ ಹಪ್ಪಳಗಳನ್ನು ತೆಗೆದುಕೊಂಡು ಹೋಗಿದ್ದೆ. ಅಂದಿನ ದಿನ ಆಟವಾಡಲು ಯಾವಾಗಲೂ ಬರುವ ಗೆಳತಿಯೊಬ್ಬಳು ಬಂದಿರಲಿಲ್ಲ. ಒಂದು ಹಪ್ಪಳ ಹೆಚ್ಚಿಗೆ ಉಳಿದಿತ್ತು. ಆಗ ಶೀನಿ ಎಂಬ ಒಬ್ಬ ಗೆಳೆಯ ತನ್ನ ವಿಚಾರಧಾರೆಯನ್ನು ಹರಿಯಲು ಬಿಟ್ಟ. ಮನೆಯ ಹೊರಗೆ ಎಣ್ಣೆಯಲ್ಲಿ ಕಾಯಿಸಿದ ತಿಂಡಿಯನ್ನು ತಿಂದರೆ ಹೊಟ್ಟೆನೋವು ಬರುತ್ತದೆ. ಭೂತವು ಹೊಟ್ಟೆನೋವನ್ನು ತರುತ್ತದೆ. ಹೊಟ್ಟೆನೋವು ಬಾರದೆ ಇರಬೇಕಾದರೆ ಒಂದು ಪಾಲನ್ನು ಭೂತಕ್ಕೆ ತೆಗೆದಿರಿಸಬೇಕು. ಭೂತವು ನಾವಿಲ್ಲದೆ ಇದ್ದಾಗ ಬಂದು ತಿಂದುಕೊಂಡು ಹೋಗುತ್ತದೆ ಎಂದ. ಸರಿ, ಇನ್ನು ನಮಗೆ ಹೊಟ್ಟೆನೋವು ಬರುವುದು ಬೇಡವೆಂದು ಒಂದು ಹಪ್ಪಳವನ್ನು ತೆಗೆದು ಅಲ್ಲೇ ಮರದ ಬುಡದಲ್ಲಿದ್ದ ಕಲ್ಲಿನ ಮೇಲಿಟ್ಟೆವು. ಆಟವೆಲ್ಲ ಮುಗಿಯಿತು. ಎಲ್ಲರೂ ಮನೆಗೆ ಹೊರಟೆವು. ಮನೆಗೆ ಬರುತ್ತಿದ್ದ ಹಾಗೆ ನನಗೊಂದು ಕುತೂಹಲ ಉಂಟಾಯಿತು. ಭೂತ ಹಪ್ಪಳವನ್ನು ತಿಂದಿತೋ ಇಲ್ಲವೋ ನೋಡೋಣವೆಂದು ಮತ್ತೆ ಆಟವಾಡುತ್ತಿದ್ದ ಸ್ಥಳಕ್ಕೆ ಹೋದೆ. ಮಬ್ಬುಗತ್ತಲಿನಲ್ಲಿ ಭೂತ ಹಪ್ಪಳವನ್ನು ತಿಂದು ಕೈಯನ್ನು ಚಡ್ಡಿಗೆ ಒರೆಸಿಕೊಂಡು ಹೋಗುತ್ತಿರುವುದು ಕಂಡಿತು. ಆ ಭೂತ ಯಾವುದು ಗೊತ್ತಾ? ಸ್ವತಃ ಶೀನಿಯೇ ಆಗಿದ್ದ! ಈ ಘಟನೆಯನ್ನೇ ಆಧರಿಸಿ 'ಹೊಟ್ಟೆನೋವಿನ ಭೂತ' ಎಂಬ ಕಥೆಯನ್ನು ಬರೆದೆ. ಇದೇ ನಾನು ಬರೆದ ಮೊದಲ ಕಥೆ.''

ಹೀಗೆ ಬರೆವಣಿಗೆ ಪ್ರಾರಂಭಿಸಿದ ಪಳಕಳ ಸೀತಾರಾಮ ಭಟ್ಟರು ಕಳೆದ ಅರವತ್ತೇಳು ವರ್ಷಗಳಿಂದ ಮಕ್ಕಳ ಸಾಹಿತ್ಯ ಕ್ಷೇತ್ರದಲ್ಲಿ ಕೆಲಸ ಮಾಡುತ್ತಾ ಬಂದಿದ್ದಾರೆ. ಅವರು ಐವತ್ತೆಂಟು ಮಕ್ಕಳ ಕಥಾ ಸಂಗ್ರಹಗಳನ್ನು, ಮೂವತ್ತೈದು ಕವನ ಸಂಗ್ರಹ, ಇಪ್ಪತ್ತನಾಲ್ಕು ನಾಟಕ, ಇಪ್ಪತ್ತೆಂಟು ಕಿರು ಕಾದಂಬರಿ ಮತ್ತು ಪ್ರಬಂಧ ಸಂಕಲನ, ಪತ್ರಲೇಖನ ಹಾಗೂ ಜೀವನಚರಿತ್ರೆಗಳನ್ನು ಬರೆದಿದ್ದಾರೆ. 'ಇಲಿಯೇ ಹೇಳಿದ್ದು', 'ಕಾಡಿನ ಕಣ್ಮಣಿ', 'ಚುಟುಕ-ಗುಟುಕು', 'ಆಟಿಕೆಗಳ ಕೂಟದಲ್ಲಿ', 'ಅವನ ಕಣ್ಣುಗಳಿಂದ ಅವಳು ನೋಡುತ್ತಿದ್ದಾಳೆ', 'ನೆನಪಿನ ಸುರುಳಿ' ಮುಂತಾದವು ಅವರ ಕೆಲವು ಕೃತಿಗಳ ಹೆಸರುಗಳು. 'ಚಿಣ್ಣರ ಹಾಡುಗಳು', 'ಕಿರಿಯರ ಕಿನ್ನರಿ', 'ಮಕ್ಕಳ ಮುದ್ದು', 'ಜಾಣ ನರಿ ಪೆದ್ದು ಸಿಂಹ', 'ಮಕ್ಕಳ ಮಾಣಿಕ್ಯ', 'ಹಸಿರು ಹಾಡು', 'ಕಥೆ ಹೇಳಜ್ಜೀ', 'ಬಾ ನನ್ನ ಮನೆಗೆ', 'ಪುಟ್ಟನ ಪೀಪಿ', 'ಬಣ್ಣದ ಬೊಂಬೆ', 'ಪಟಾಕಿ', 'ಹಣ್ಣಿನ ಬುಟ್ಟಿ' ಮುಂತಾದವು ಸೀತಾರಾಮ ಭಟ್ಟರ ಮಕ್ಕಳ ಕವನಗಳು. 'ಪುಟಾಣಿ ಕಥೆಗಳು', 'ಕುಟುಂ ಕುಟುಂ ಕಪ್ಪೆಯಣ್ಣ', 'ಹೂದೋಟದ ಹುಡುಗಿಯರು', 'ರನ್ನದ ಪದಕ', 'ಪುಟ್ಟ ಬಿಲ್ಲಿ ಕಿಟ್ಟನ ಕಥೆ', 'ಮಹಾ ಸಾಹಸಿ', 'ಬಂಗಾರದ ಬಾತು', 'ಹೂವಾದಳು ಹುಡುಗಿ', 'ಉದ್ದ ಕೂದಲ ಮುದ್ದು ಹುಡುಗಿ', 'ಸಜ್ಜನಿಕೆ ಗೆದ್ದಿತು', 'ಒಂದು ಗಿಡದ ಆತ್ಮಕಥೆ' ಮುಂತಾದವು ಮಕ್ಕಳ ಕಥೆಗಳು. 'ಏಕಲವ್ಯ', 'ಭಕ್ತಧ್ರುವ', 'ಒಲವಿನ ಗೆಲುವು', 'ಕಣ್ಣು ತೆರೆಯಿತು', 'ಪ್ರೀತಿಯ ಧರ್ಮ' ಮುಂತಾದವು ಮಕ್ಕಳ ನಾಟಕಗಳು.





ಸೀತಾರಾಮ ಭಟ್ಟರ ಮಕ್ಕಳ ಸಾಹಿತ್ಯದಲ್ಲಿ ಮಕ್ಕಳಿಗೆ ಪ್ರಿಯವಾಗುವ ಕಾಗೆ, ಗುಬ್ಬಿ, ಆಟಿಕೆಗಳು ಎಲ್ಲ ಬರುತ್ತವೆ. ಆದರೆ ಅದು ಕಾಗಕ್ಕ-ಗುಬ್ಬಕ್ಕನ ಮಾಮೂಲಿ ಕಥೆಗಳಾಗಿ ಯಷ್ಟೇ ಉಳಿಯುವುದಿಲ್ಲ ಅವು ಹೊಸ ಅನುಭವಗಳನ್ನು ಹೊಮ್ಮಿಸುತ್ತವೆ. ಯಾವುದೋ ಒಂದು ಮೌಲ್ಯವನ್ನು ಹೇಳಲು ಹೊರಡುತ್ತವೆ. 'ಶಮ್ಮಿಯ ಸತ್ಯಾಗ್ರಹ' ಎಂಬ ಕಥೆಯಲ್ಲಿ ಸೀತಾರಾಮ ಭಟ್ಟರು ಗಾಂಧೀಜಿಯವರ ಸತ್ಯಾಗ್ರಹದ ಬೃಹತ್ ಕಲ್ಪನೆಯನ್ನು ತೆಗೆದು ಕೊಂಡು ಕೂಲಿ ಕುಟುಂಬವೊಂದಕ್ಕೆ ಅದನ್ನು ಅನ್ವಯಿಸಿ ಪುಟ್ಟ ಮಗುವೊಂದು ತನ್ನ ತಂದೆಯ ಕುಡಿತದ ಚಟವನ್ನು ಹೇಗೆ ಬಿಡಿಸಬಹುದು ಎಂಬುದನ್ನು ನಿರೂಪಿಸುತ್ತಾರೆ. 'ರಟ್ಟಾಗದ ಗುಟ್ಟು' ಎಂಬ ಕಥೆಯಲ್ಲಿ ಕಾಡಿನ ಮೃಗಗಳೆಲ್ಲ ಸೇರಿ ತಮಗೆ ಎಂತಹ ಆಡಳಿತ ಬೇಕು ಎಂದು ಚರ್ಚಿಸುತ್ತವೆ. ಕೊನೆಗೆ ಚೀಟಿ ಎತ್ತುವ ಮೂಲಕ ಆಯ್ಕೆ ಮಾಡುವ ಪ್ರಜಾಪ್ರಭುತ್ವ ಮಾದರಿಯನ್ನು ಅನುಸರಿಸುತ್ತವೆ. ನರಿ ಮಂತ್ರಿಯಾಗುತ್ತದೆ. ಯಾಕೆಂದರೆ ಎಲ್ಲ ಚೀಟಿಗಳಲ್ಲಿಯೂ ನರಿ ತನ್ನ ಹೆಸರನ್ನೇ ಬರೆದಿರುತ್ತದೆ. ಈ ಕಥೆಯಲ್ಲಿರುವ ನರಿ, ಹುಲಿ, ಆನೆ, ಆಮೆ, ಹಂದಿ – ಎಲ್ಲವೂ ಮಕ್ಕಳಿಗೆ ಪ್ರಿಯವಾಗುವ ಪ್ರಾಣಿಗಳೇ. ಆದರೆ ಪ್ರಾಣಿಗಳು ಕೇವಲ ಕಥಾ ವಿನ್ಯಾಸಕ್ಕೆ ಸೀಮಿತ. ಕಥೆಯ ತಾತ್ವಿಕತೆ ಪ್ರಸ್ತುತ ಪ್ರಜಾಪ್ರಭುತ್ವ ವ್ಯವಸ್ಥೆಯ ವಿಡಂಬನೆಯಾಗಿ ಮಕ್ಕಳಲ್ಲಿ ಪ್ರಜಾಸತ್ತಾತ್ಮಕ ರಾಜಕೀಯದ ಅರಿವನ್ನು ಮೂಡಿಸುವುದೇ ಆಗಿದೆ. ಅವರು ನೇತ್ರದಾನದ ಬಗ್ಗೆ ಕಥೆ ಬರೆಯುತ್ತಾರೆ. ಇಲಿಗಳ ದೇಹವನ್ನು ಇಲಿಗಳೇ ಪರಿಚಯಿಸುವ ಹಾಗೆ 'ಇಲಿಯೇ ಹೇಳಿದ್ದು' ಎಂದು ಬರೆಯುತ್ತಾರೆ. ಒಟ್ಟಂದದಲ್ಲಿ ಅವರು ಮಕ್ಕಳಿಗೆ ಪ್ರಿಯವಾಗುವ ವಿವರಗಳ ಮೂಲಕ ಒಂದು ದೊಡ್ಡ ವೈಚಾರಿಕ ಜಗತ್ತನ್ನು ಮಕ್ಕಳಿಗೆ ಪರಿಚಯಿಸುತ್ತಾರೆ.

ಸೀತಾರಾಮ ಭಟ್ಟರ ಮಕ್ಕಳ ಕವನಗಳೂ ವೈಚಾರಿಕ ಅವಶ್ಯಕತೆಯನ್ನು ಒಳಗೊಳ್ಳುತ್ತವೆ. 'ಪುಟ್ಟನ ಮೊರೆ' ಎಂಬ ಕವನದಲ್ಲಿ ಅವರು ಹೀಗೆ ಬರೆಯುತ್ತಾರೆ :

ಅಯ್ಯೋ ಅಮ್ಮ ನನ್ನ ಚೀಲ<br>
ಎಷ್ಟು ಭಾರ<br>
ಹೇಗೆ ನಾನು ಹೊರಲಿ ಹೇಳು<br>
ಇಷ್ಟು ಭಾರ ?<br>
ದಪ್ಪ ದಪ್ಪ ಪುಸ್ತಕಗಳ<br>
ಹೊರೆಯು ಮತ್ತು<br>
ಶಾಲೆಗೇನು ಬೇಕೋ ಅಂಥ<br>
ಮುಖ್ಯ ವಸ್ತು...

ಈ ಕವನವು ಮಗುವಿನ ಭಾವನೆಗಳನ್ನು ಅಭಿವ್ಯಕ್ತಿಪಡಿಸುವುದರ ಜೊತೆಗೇನೆ ಪ್ರಸ್ತುತ ಶಿಕ್ಷಣ ವ್ಯವಸ್ಥೆಯ ಸಮಸ್ಯೆಯನ್ನೂ ವಿವರಿಸುತ್ತದೆ. ಈ ಮೂಲಕ ಅವರು ಏಕ ಕಾಲಕ್ಕೆ ಮಕ್ಕಳನ್ನೂ - ಹಿರಿಯರನ್ನೂ ತಲುಪಬಲ್ಲವರಾಗುತ್ತಾರೆ.

ಸೀತಾರಾಮ ಭಟ್ಟರ ಸಾಹಿತ್ಯದಲ್ಲಿ ಬಹಳ ಮಹತ್ವದ ವಿಚಾರವೆಂದರೆ ಭಾಷೆಯ ಬಳಕೆ. ಅವರು 'ಅಪರೂಪ' ಎಂದು ಬರೆಯುವುದಿಲ್ಲ. 'ಅಪೂರ್ವ' ಎಂದೇ ಬರೆಯುತ್ತಾರೆ. ಯಾಕೆಂದರೆ ಭಾಷಾಶಾಸ್ತ್ರದಲ್ಲಿ 'ಅಪರೂಪ' ಎನ್ನುವುದು ಅರ್ಥಪೂರ್ಣವಲ್ಲ. 'ಅಪೂರ್ವ' ಎಂಬ ಶಬ್ದವೇ ಅರ್ಥಪೂರ್ಣವಾದದ್ದು. ಮಕ್ಕಳನ್ನು ತಲುಪುವ ಸಾಹಿತ್ಯದಲ್ಲಿ ಭಾಷೆ ಸರಿಯಾದ ರೀತಿಯಲ್ಲಿ ಬಳಕೆಯಾಗಬೇಕು ಎಂಬ ಸೀತಾರಾಮ ಭಟ್ಟರ ಎಚ್ಚರ ಗಮನಾರ್ಹವಾದ ಸಂಗತಿಯಾಗಿದೆ. ಸೀತಾರಾಮ ಭಟ್ಟರನ್ನು ಮಾತನಾಡಿಸಿ ಮಕ್ಕಳ ಸಾಹಿತ್ಯ ಹೇಗಿರಬೇಕೆಂದು ಕೇಳಿದಾಗ ಅವರೇ ಹೇಳಿದ ಮಾತುಗಳು ಹೀಗಿವೆ: ''ನಮ್ಮಲ್ಲಿ ಈಗ ಕೆಲವು ಮಕ್ಕಳ ಸಾಹಿತ್ಯ ಬರುತ್ತಿವೆ. ಅವು ಸ್ವಾರಸ್ಯಕರವಾಗಿರುತ್ತವೆ. 'ಹೊರಗೆ ಬಂದಿತು ಬಸ್ಸು, ಒಳಗೆ ಬಂದರು ಮಿಸ್ಸು' ಎಂದರೆ ಗೀತೆ ಕೇಳಲು ಚೆನ್ನಾಗಿರುತ್ತದೆ. ಸ್ವಾರಸ್ಯ ಹೌದು. ಆದರೆ ಪ್ರತ್ಯಯಗಳನ್ನು ಹೊರತುಪಡಿಸಿ ಉಳಿದವೆಲ್ಲ ಇಂಗ್ಲಿಷ್ ಶಬ್ದಗಳೇ ಆಗಿ ಭಾಷೆಯನ್ನು ಬಳಸಬೇಕೆ ? ಮಕ್ಕಳ ಸಾಹಿತ್ಯದಲ್ಲಿ ಮಕ್ಕಳ ಭಾಷೆಯನ್ನು ಬಳಸಬೇಕು. ಆದರೆ ಭಾಷಾಶುದ್ಧತೆ ಇರಬೇಕು. ಮಕ್ಕಳಿಗೆ ಹಿತಾನುಭವ ವಾಗುವ ವಸ್ತು ಮತ್ತು ನಿರೂಪಣೆ ಇರಬೇಕು. ಭಾಷೆ ಸರಳವಾಗಿರಬೇಕು. ಸರಳ ಅಂದರೆ ಹೇಗೆ ? ವೃಕ್ಷದಿಂದ ವೃಕ್ಷಕ್ಕೆ ಲಂಘಿಸುವ ಮರ್ಕಟ ಎಂದರೆ ಭಾಷೆ ಜಟಿಲವಾಗುತ್ತದೆ. ಮರದಿಂದ ಮರಕ್ಕೆ ಹಾರುವ ಮಂಗ ಎಂದರೆ ಭಾಷೆ ಸರಳ. ಮಕ್ಕಳ ಸಾಹಿತಿಗಳು ಸರಳವಾಗಿ ಭಾಷೆಯನ್ನು ಬಳಸಬೇಕು. ಸರಿಯಾಗಿಯೂ ಭಾಷೆಯನ್ನು ಬಳಸಬೇಕು.''

ಕನ್ನಡದಲ್ಲಿ ಮಕ್ಕಳ ಸಾಹಿತ್ಯದ ಕೊರತೆಯ ನಾನಾ ಕಾರಣಗಳಲ್ಲಿ ಮಕ್ಕಳ ಸಾಹಿತ್ಯಕ್ಕೆ ದೀರ್ಘಾವಧಿಯ ಚರಿತ್ರೆ ಇಲ್ಲದಿರುವುದೂ ಕಾರಣ ಎನ್ನುವ ಸೀತಾರಾಮ ಭಟ್ಟರು ಅದನ್ನು ವಿವರಿಸುವುದು ಹೀಗೆ : ''ಮಕ್ಕಳ ಸಾಹಿತ್ಯ ಪ್ರಾರಂಭವಾದದ್ದು ಇಂಗ್ಲಿಷ್



ಶಿಕ್ಷಣವು ಜಾರಿಗೊಂಡ ನಂತರ. ಆಗ ಪಠ್ಯಪುಸ್ತಕಗಳು ಬೇಕಾದವು. ೧೮೬೦ರ ನಂತರ ಪಠ್ಯಪುಸ್ತಕಕ್ಕಾಗಿ ಮಕ್ಕಳ ಸಾಹಿತ್ಯವು ಹೆಚ್ಚು ಅಭಿವೃದ್ಧಿ ಹೊಂದಿತು. ತಿಳಿದುಕೊಂಡವರಿಂದ ಮಕ್ಕಳಿಗೆ ತಿಳಿವು ನೀಡುವ ಪಾಠಗಳನ್ನು ಬರೆಯಿಸಲಾಯಿತು. ನಂತರ ಇದು ಸಾಹಿತ್ಯದ ರೂಪಕ್ಕೆ ಬಂದಿತು. ಈ ವಿಚಾರದಲ್ಲಿ ಹೆಚ್ಚು ಕೆಲಸ ಮಾಡಿದವರು ಪಂಜೆಯವರು. ಅಂತಹ ರಚನೆಗಳಲ್ಲಿಯೂ ಇಂಗ್ಲಿಷ್ ಸಾಹಿತ್ಯದ ಹಿನ್ನೆಲೆಯೇ ಇದೆ. ಆದರೆ ಪಂಜೆಯವರು ಅದನ್ನು ಕನ್ನಡಕ್ಕೆ ಒಗ್ಗುವ ಹಾಗೆ ಬರೆದರು. 'ಟ್ವಿಂಕಲ್ ಟ್ವಿಂಕಲ್ ಲಿಟ್ಲ್ ಸ್ಟಾರ್' ಎನ್ನುವುದನ್ನು ಕನ್ನಡಕ್ಕೆ ಒಗ್ಗುವ ಹಾಗೆ 'ಮಿನುಗೆಲೆ ಮಿನುಗೆಲೆ ನಕ್ಷತ್ರ' ಎಂದು ಬರೆದರು. ಬಾಲ ಸಾಹಿತ್ಯ ಮಂಡಲದ ಮೂಲಕ ಅವರೇ ಮಕ್ಕಳ ಪುಸ್ತಕಗಳನ್ನೂ ಪ್ರಕಟಿಸಿದರು. ಅದೇ ಹೊತ್ತಿಗೆ ಅರಗಂ ಲಕ್ಷ್ಮಣರಾವ್ (ಹೊಯ್ಸಳ) ಅವರು ಮಕ್ಕಳ ಸಾಹಿತ್ಯವನ್ನು ಬರೆದರು. ಮಕ್ಕಳ ಸಾಹಿತ್ಯವು ಸರಳವಾಗಿ; ಪ್ರಾಸ-ಲಯಗಳಿಗೆ ಬದ್ಧವಾಗಿ, ದೊಡ್ಡ ಗಾತ್ರದ ಅಕ್ಷರಗಳ ಚಿಕ್ಕ ಪುಸ್ತಕವಾಗಿ ಮಕ್ಕಳಿಗೆ ಪ್ರಿಯವಾಗುವ ವಸ್ತು-ವಿಷಯಗಳನ್ನು ಒಳಗೊಂಡು ಬರಬೇಕು ಎಂಬ ಕಲ್ಪನೆಗಳೆಲ್ಲ ಸೇರಿ ಮಕ್ಕಳ ಸಾಹಿತ್ಯ ಎಂಬ ಪ್ರಕಾರ ಬೆಳೆಯಿತು. ಆದರೆ ಇದಕ್ಕೆ ದೊಡ್ಡವರ ಸಾಹಿತ್ಯಕ್ಕೆ ಸಿಕ್ಕಿದಂತಹ ಬೆಳವಣಿಗೆ ಸಿಗಲಿಲ್ಲ.''

ಮಕ್ಕಳ ಸಾಹಿತ್ಯವೂ ಶಿಕ್ಷಣವೂ ಜೊತೆ ಜೊತೆಗೇ ಸಾಗುವಂಥಾದ್ದು ಎಂಬ ನೆಲೆಯಲ್ಲಿ ಮಕ್ಕಳಲ್ಲಿ ಸಾಹಿತ್ಯದ ಅಭಿರುಚಿಯ ಬೆಳವಣಿಗೆಯಲ್ಲಿ ಶಿಕ್ಷಕರ ಪಾತ್ರದ ಕುರಿತು ಕೇಳಿದಾಗ ಸೀತಾರಾಮ ಭಟ್ಟರು ಹೇಳಿದ್ದು ಹೀಗೆ : ''ನಾನೊಂದು ಶಾಲೆಗೆ ಪುಸ್ತಕ ಕೊಡಲು ಹೋದಾಗ ಈ ಪುಸ್ತಕಗಳೆಲ್ಲ ಬೇಡ. ನಾವು ಮಕ್ಕಳಿಗೆ ಗ್ರಂಥಾಲಯದ ಪುಸ್ತಕವನ್ನು ಕೊಡುವುದಿಲ್ಲ. ಕೊಟ್ಟರೆ ಅವರು ಪಾಠ ಓದುವುದಿಲ್ಲ ಎಂದು ಹೇಳಿದ್ದು ಇದೆ. ಶಿಕ್ಷಕರ ಮನೋಭಾವ ಹೀಗಿದ್ದರೆ ಮಕ್ಕಳಲ್ಲಿ ಸಾಹಿತ್ಯದ ಆಸಕ್ತಿ ಬರಲು ಸಾಧ್ಯವಿಲ್ಲ. ಹಾಗೆಂದು ಶಿಕ್ಷಕರಿಂದಲೇ ಎಲ್ಲವೂ ಸಾಧ್ಯ ಎಂದೇನೂ ಅಲ್ಲ. ಒಂದು ಉದಾಹರಣೆಯನ್ನು ಹೇಳುತ್ತೇನೆ. ಇಬ್ಬರು ಹುಡುಗರು ಸಿಗರೇಟು ಸೇದಿದಾಗ ಶಿಕ್ಷಕರು ಅವರನ್ನು ಗದರುತ್ತಾರೆ. ಮುಂದೆ ಅವರು ಶಾಲೆ ಬಿಟ್ಟುಹೋದ ನಂತರ ಅವರಿಬ್ಬರೂ ಸಿಗರೇಟು ಸೇದುತ್ತಿರುತ್ತಾರೆ. ಆಗ ಅಲ್ಲಿಗೆ ಅದೇ ಶಿಕ್ಷಕರು ಬರುತ್ತಾರೆ. ಒಬ್ಬನು ಶಿಕ್ಷಕರನ್ನು ಕಾಣುತ್ತಲೇ ಸಿಗರೇಟನ್ನು ಕೆಳಗೆ ಹಾಕಿ ಹೊಸಕಿ ಬಿಡುತ್ತಾನೆ. ಇನ್ನೊಬ್ಬನು ಈಗೇನು ಮಾಡುವೆ ? ಎನ್ನುವ ಶೈಲಿಯಲ್ಲಿ ಶಿಕ್ಷಕರ ಮುಖಕ್ಕೇ ಹೊಗೆ ಬಿಟ್ಟುಕೊಂಡು ಸಿಗರೇಟು ಸೇದುತ್ತಾನೆ. ಇಬ್ಬರಲ್ಲಿಯೂ ವ್ಯಕ್ತವಾಗುವ ಈ ಭಿನ್ನ ರೀತಿಯ ನಡೆವಳಿಕೆಗೆ ಶಿಕ್ಷಕರು ಕಾರಣರಾಗಿರುವುದಿಲ್ಲ. ಕುಟುಂಬದಲ್ಲಿ ಅವರವರಿಗೆ ಸಿಕ್ಕಿದ ಸಂಸ್ಕಾರ ಕಾರಣವಾಗಿರುತ್ತದೆ. ಆದ್ದರಿಂದ ತಾಯಿ-ತಂದೆಯರು ಮಕ್ಕಳಲ್ಲಿ ಓದಿನ ಸಂಸ್ಕಾರವನ್ನು ಬೆಳೆಯಿಸಬೇಕು. ಓದಲು ಪುಸ್ತಕಗಳನ್ನು ಕೊಡಿಸಬೇಕು. ಶಿಕ್ಷಕರೂ ಓದಬೇಕು. ಆಗ ಮಕ್ಕಳು ಅವರನ್ನು ಅನುಕರಿಸಿ ಓದುತ್ತಾರೆ.''

ಸೀತಾರಾಮ ಭಟ್ಟರ ಸಾಹಿತ್ಯ ಎಷ್ಟು ಮೌಲಿಕವೋ ಮಕ್ಕಳ ಸಾಹಿತ್ಯದ ಕುರಿತ ಅವರ ದೃಷ್ಟಿಕೋನವೂ ಕನ್ನಡ ಸಾಹಿತ್ಯಕ್ಕೆ ಅಷ್ಟೇ ಮೌಲಿಕವಾದುದಾಗಿದೆ.

**ಅರವಿಂದ ಚೊಕ್ಕಾಡಿ**

'ಪ್ರೀತಿ ದೀಪ', ಪೆರಿಂಜೆ ಅಂಚೆ, ವಯಾ : ಮೂಡುಬಿದಿರೆ, ಬೆಳ್ತಂಗಡಿ ತಾಲೂಕು, ದಕ್ಷಿಣ ಕನ್ನಡ ಜಿಲ್ಲೆ - ೫೭೪ ೨೨೬

✷

**ಬೀರಣ್ಣ**

# ಗೊಂದಲಪುರಕ್ಕೆ ಪಬ್ಲಿಸಿಟಿ ಚಿಂತೆ !

ಅಂದು ತರ್ಲೆತಿಪ್ಪನ ಮೂಡು ಕೆಟ್ಟು ಕೆರಹಿಡಿದಿತ್ತು. ಅತ್ತೆ ಕೋಪ ಕೊತ್ತಿ ಮ್ಯಾಲೆ – ಅನ್ನೋ ಗಾದೆಯಂತೆ ಮನೆಯಲ್ಲಿ ಎಲ್ಲರ ಮೇಲೂ ಎಗರಾಡಿದ. ಆತನ ಉಗ್ರಕೋಪಕ್ಕೆ ಕಾರಣ ತಿಳಿಯದೆ ಹೆಂಡತಿ ಮಕ್ಕಳು ಬೆದರಿ ಪಲಾಯನ ಮಾಡಿದರು.

'ಬೆಂಗಳೂರಿನ ಕೀರ್ತಿ ಪಾತಾಳಕ್ಕೆ' – ಎಂಬ ಸುದ್ದಿ ಆತನ ಕಿವಿಗೆ 'ಗಟಾರಕ್ಕೆ' ಎಂದು ಕೇಳಿಸಿದಂತಾಗಿ ಕಸಿವಿಸಿಯಾಯಿತು. ಗೊಂದಲಪುರದ ಕೀರ್ತಿಯ ಮಾತು ಒಂದು ಕಡೆಗಿರಲಿ, ಗೊಂದಲಪುರದ ಯಾವ ಸುದ್ದಿಯೂ ಪೇಪರುಗಳಲ್ಲಿ ಬರುತ್ತಿಲ್ಲವಲ್ಲ ಎಂದು ಕಳವಳವಾಯಿತು. ತರ್ಲೆತಿಪ್ಪನ ಎಗರಾಟಕ್ಕೆ ಇದು ಮುಖ್ಯ ಕಾರಣ. ಇದನ್ನು ಹೀಗೇ ಬಿಟ್ಟರೆ ಗೊಂದಲಪುರದ ಹೆಸರೇ ಮರೆತುಹೋಗಬಹುದು, ಇದಕ್ಕೇನಾದರೂ ಪರಿಹಾರ ಕಾಣಬೇಕಲ್ಲ ಎಂದುಕೊಂಡು ಚೌಕ ಒದರಿ ಹೆಗಲಮೇಲೆ ಹಾಕಿಕೊಂಡು ಸೋಮಾರಿ ಕಟ್ಟೆಯತ್ತ ಹೊರಟ.

ಆದರೆ ಯಜಮಾನ ಗುರುವಜ್ಜನ ಪೀಠ ಖಾಲಿಯಾಗಿತ್ತು. ತರ್ಲೆಯ ಕೋಪ ಗುರುವಜ್ಜನ ಕಡೆಗೆ ಹರಿಯಿತು. 'ಆಳೂರಿಗೆ ಉಳಿದೋನೆ ಗೋಡ ಅನ್ನುವಂಗೆ, ಇವ್ನೊಬ್ಬ ಲೋಕ್ದಲ್ಲಿಲ್ಲದ ಯಜಮಾನ. ಊರು ಕೇರಿ ಅಂತ ಒಂದ್ ಚೂರೂ ಗ್ಯಾನಾ ಇಲ್ಲೋನು !' – ಎಂದು ಗೊಣಗಿಕೊಂಡ.



ಅಷ್ಟರಲ್ಲಿ ಬೊಂಬಾಯಿ ಬಿರುಸಾಗಿ ನಡೆಯುತ್ತ ಬಂದು ತಿಪ್ಪನ ಮುಂದೆ ನಿಂತ. ತರ್ಲೆ ತಿಪ್ಪನ ವಾರಿಗೆಯವ. ಆಗಿನ ಕಾಲದಲ್ಲೇ ಮುಕ್ಕುರಿದು ಮಿಡ್ಲ್ ಸ್ಕೂಲ್‌ವರೆಗೆ ಹೋಗಿ ಬಂದವ. ಗೊಂದಲಪುರದವರ ಪಾಲಿಗೆ ಆತ 'ಎಲ್ಲ ಬಲ್ಲ' ಸರ್ವಗ್ನ. ಎಲ್ಲರಿಗೂ ತಿಳಿದಿರುವಂತೆ ಬೊಗಳೆ ಅತಿ ಎನ್ನುವಷ್ಟು. ಆತನ ಬೊಗಳೆಬಾಯಿ ಯಿಂದಾಗಿ 'ಬೊಂಬಾಯಿ' – ಎಂಬ ಅಡ್ಡಹೆಸರು. ಶಾಲೆಯ ದಾಖಲೆಯಲ್ಲಿ ಆತನ ಹೆಸರು ಗುಂಜ ಎಂದಿರುವುದು ಈಗ ಯಾರಿಗೂ ನೆನಪಿಲ್ಲ. ಗೊಂದಲಪುರದ ಅಧಿಕೃತ ವಕ್ತಾರ. ಗೊಂದಲಪುರವಾಸಿಗಳ ಮಧ್ಯೆ ವಿಶೇಷ ವೇಗವಾಗಿ ಸುದ್ದಿ ಹರಡಬಲ್ಲ ಬಾತ್ಮೀದಾರ ! ಗೊರಗುಂಟೆ ಪಾಳ್ಯದ ಈರಾಂಜಣಿ ದರಬಾರಿನಲ್ಲಿ, ಗೊಂದಲಪುರದ ಸೋಮಾರಿಕಟ್ಟೆಯಲ್ಲಿ, ಬಂಗಾರಿ ಹೊಟೆಲಿನಲ್ಲಿ, ಸ್ಟೋನ್ ಹೆಂಜ್ ಇಂಗ್ಲಿಷ್ ಕಾನ್ವೆಂಟಿನಲ್ಲಿ, ಮರಿಕುಂಟೆ ಮೇಸ್ಟರ ಸರಕಾರಿ ಪ್ರೈಮರಿ ಇಸ್ಕೂಲಿನಲ್ಲಿ, ಸಿದ್ದೇಶ್ವರಾನಂದಜಿಯ ಬಂಡೆ ಮಠದಲ್ಲಿ – ಹೀಗೆ ಎಲ್ಲೆಲ್ಲಿಯೂ ಸಲ್ಲುವವನು ! ಊರಿನವರ ಬಾಯಲ್ಲಿ ತಾನು ಬೊಂಬಾಯಿ ಆಗಿರುವುದನ್ನು ಆತ ಅತ್ಯಂತ ವಿನೀತಭಾವದಿಂದ ಸ್ವೀಕರಿಸಿಬಿಟ್ಟಿದ್ದಾನೆ !

'ಗುಲ್ಲೂರು ವಾಣಿ', 'ಬೆಂಗಾಡು ಕ್ರಾನಿಕಲ್' ಪತ್ರಿಕೆಗಳ ಸಂಪಾದಕರುಗಳು, 'ಟಿವಿ-ಪೆಯ್ನ್!' ಮತ್ತು 'ಹಾಯ್-ಟಿವಿ'ಯ ಪ್ರೊಡ್ಯೂಸರುಗಳು ತನಗೆ ಪರಿಚಯ ವೆನ್ನುತ್ತಾನೆ. ಇನ್ನು ದೂರದರ್ಶನದ ಜೋಶಿಯವರಂತೂ ಎದುರಿಗೆ ಸಿಕ್ಕಿದರೆ 'ಏನ್ರಪಾ ಆರಾಮಾ ?' ಎನ್ನುತ್ತಾರಂತೆ. ಇನ್ನು ರಾಜಕೀಯ ಪಕ್ಷಗಳಲ್ಲಿ ಬೊಂಬಾಯಿಗೆ ಪರಿಚಯವಿಲ್ಲದವರೇ ಯಾರೂ ಇಲ್ಲವಂತೆ. ಆತನೇ ಹೇಳಿಕೊಳ್ಳುವಂತೆ ಪರಮೇಶ್ವರ್ 'ಕಾಂಗ್ರೆಸಿಗೆ ಬನ್ನಿ ಬದಲಾವಣೆ ತನ್ನಿ' – ಎಂದು ಈತನಿಗೆ ಫೋನ್ ಮಾಡಿದ್ದರಂತೆ, ಬೊಂಬಾಯಿ ಎಡೂರಪ್ಪನ ಪಕ್ಷ ಸೇರಬಹುದು ಎನ್ನುವ ವದಂತಿ ಕೇಳಿ ಸೆಟ್ರು 'ಬರ್ರೆಪ್ಪಾ ನಮ್ ಕಡೀಕೆ' - ಎಂದರಂತೆ. ಗೌಡ್ರು ಆವಾಗಾವಾಗ 'ಏನ್ಲಾ ಚಂದಾಗಿದ್ದೀಯೇನ್ಲಾ' – ಎಂದು ವಿಚಾರಿಸಿಕೊಳ್ಳುವುದಲ್ಲದೆ, 'ಸುಮ್ನೆ ಜೇಡೀಸ್‌ಗೆ ಬಾರ್ಲಾ, ನಿಂಗೆ ಪಾರ್ಲಿಮೆಂಟ್ ಸೀಟು ಗ್ಯಾರಂಟಿ' – ಎಂದಿದ್ದಾರಂತೆ. ಇನ್ನು ಕಮ್ಯುನಿಸ್ಟ್ ಪಾರ್ಟಿಯೋರಂತೂ ನಮ್ ಕಡೀಕೆ ನಮ್ ಕಡೀಕೆ ಅಂತ ಈತನ್ನ ಎರಡೂ ಕಡೆಗೆ ಎಳೀತಾ ಇದ್ದಾರಂತೆ. ಜೈಲಲ್ತಮ್ಮ 'ನಿಮ್ ಮಂತ್ರಿಗಳಿಗೇಳಿ ಒಂದ್ ಟ್ಯಾಂಕ್‌ನಷ್ಟಾದ್ರೂ ಕಾವೇರಿ ನೀರ್ ಕೊಡ್ಸಿ ಬೊಂಬಾಯಿ ಅವರೇ' - ಅಂತ ಫೋನ್ ಮಾಡಿದರಂತೆ. ಹೀಗಾಗಿ ಯಾವ್ ಕಡೇಗೆ ಅಂತ ಬೊಂಬಾಯಿಗೇ ಕನ್‌ಫ್ಯೂಶನ್ ಆಗಿದೆಯಂತೆ. ಇವು ಆತನ ಬೊಗಳೆಗಳ ಕೆಲವು ಸ್ಯಾಂಪಲ್‌ಗಳು. ಇದರಿಂದ ಒಮ್ಮೊಮ್ಮೆ ಎಡವಟ್ಟುಗಳಾಗಿರುವುದುಂಟು ! ಆತನನ್ನು ಛೇಡಿಸುವುದಕ್ಕೋಸ್ಕರ ಯಾರಾದರೂ 'ಸುಮ್ನೆ ಯಾವ್ದಾದ್ರೂ ಪಾರ್ಟಿ ಸೇರ್ಕೊಳೊ ಬೊಂಬಾಯಿ. ನಮ್ಮೂರ್ಗೆ ಒಂದ್ ಮರ್ಯಾದಿ ಸಿಕ್ಕಂಗಾಯ್ತದೆ' ಎಂದರೆ, 'ಅಂಗೈ ನೋಡ್ತಾ ಇರ್ರಿ. ಬೊಂಬಾಯ್ನ ಕರಾಮತ್ತ...' – ಎಂದು ಮಳ್ಳನಗೆ ನಗುತ್ತಾನೆ !

ಬೊಂಬಾಯಿ ನೋಡಿದ ಕೂಡಲೇ ನಮ್ಮೂರ ಹೆಸರು ಪೇಪರಿನಲ್ಲಿ ಬರೋಹಾಗೆ ಮಾಡಬೇಕಾದರೆ ಅದಕ್ಕೆ ಈತನೇ ಸರಿಯಾದ ಆಸಾಮಿ ಎನ್ನಿಸಿತು ತರ್ಲೆಗೆ. ಅದೇ ವೇಳೆ ಆತನ ಬಗ್ಗೆ ಕೋಪವೂ ಬಂತು. ''ಲೋ ಬೊಂಬಾಯಿ. ದಂಡ ಕಣ್ಲ ನೀನು. ಸುಮ್ಮೆ ನಾರದನಂಗೆ ಮೂರ್ಲೋಕ ತಿರ್ಗಾಡಿ ಏನ್ಬಂತು ಬೋಮಾನ !'' ಎಂದು ಎಗರಾಡಿದ.

''ಏನಾಯಿತ್ಲ ತರ್ಲೆ, ಯಾಕೊ ಒಂಥರಾ ಮಾತಾಡ್ತಿಯಲ್ಲ...''

''ಏನಾಯ್ತು ಅಂದ್ರೆ ಏನೇಳಾನ, ಬೇಜಾರಾಯ್ತದಪ್ಪ! ನಾನೂ ಒಂದ್ ವರ್ಷದಿಂದ ನೋಡ್ತಾ ಇವ್ನಿ. ನಮ್ಮೂರ್ ಸುದ್ದಿ ಅಂತ ಯಾವ್ ಪೇಪರ್ನಲ್ಲೂ ಇಲ್ಲ, ನಿನ್ ಟೀವಿಗಳಲ್ಲೂ ಇಲ್ಲ. ಅವ್ರಿಗೆಲ್ಲ ಯಾವ್ ಮೊಲ್ಲಾಗ್ರ ಬಡ್ಕಂಡಿದ್ದದ್ಲ ?''

ಬೊಂಬಾಯಿಗೆ ನಗು ಬಂತು. ಪ್ರಚಾರ ಸಿಕ್ಕಲಿಲ್ಲ ಎಂಬ ಕೊರತೆ. ''ತಗಳಪ್ಪ ಇವನ್ ಕತೇಯಾ ! ಪಬ್ಲಿಸಿಟಿ ಅಂದ್ರೆ ಪುಗಸ್ಟೆ ಬರುತ್ತೇನ್ಲಾ. ನಾಲಕ್ ಒಳ್ಳೆ ಕೆಲ್ಸ್, ಒಂದ್ ಕೆಟ್ಟ ಕೆಲ್ಸನಾದ್ರೂ ಮಾಡಿರ್ಬೇಕು. ಸುಮ್ನೆ ಊರ್ನೋರೆಲ್ಲ ಯೂಸ್‌ಲೆಸ್ ಗೂಸ್‌ಗಳಾಗಿದ್ರೆ

ಕೀರ್ತಿ ಸನಿ ನಿನ್ನ ಉಡೀಕಂಡ್ ಬರುತ್ತೇನ್ಲ? ನೀನೇನ್ ಕುವೆಂಪು ಅನ್ಕಂಡಿದ್ದಿಯ ?'' ಎಂದು ದಬಾಯಿಸಿದ.

''ಏ ತಡೀಲಾ ರಾಂಗ್ ಆಗ್‌ಬ್ಯಾಡ! ನಮ್ಮೂರಿನ್ ಸುದ್ದಿ ಪೇಪರ್‌ಗಳಲ್ಲಿ ಬರ್‍ತಾ ಇಲ್ವಲ್ಲ ಅಂತ ನಾನ್ ತಲೆ ಕೆಡಿಸ್ಕಂಡ್ ಕೂತಿವ್ನಿ!''

''ನೀನೊಬ್ಬ ತಲೆ ಕೆಡಿಸ್ಕಂಡ್ರೆ ಆಯ್ತ? ಎಲ್ರೂ ಸೇರಿ ತಲೆ ಓಡಿಸ್ಬೇಕು. ನಂಗೊತ್ತಿರು ಉಪಾಯ ಏಳ್ತೀನಿ...''

''ಆಗ್ಲಿ ಕಣ್ಲ ಒಟ್ನಲ್ಲಿ ನಮ್ಮೂರೆಸ್ರು ಪೇಪರ್‌ಗಳಲ್ಲಿ ಬಂದ್ರೆ ಸಾಕು...''

''ಅಂಗ್ ಬಾ ದಾರಿಗೆ. ಅದೇನೂ ಗನಂದಾರಿ ಕೆಲ್ಸ ಅಲ್ಲ, ನಮ್ಮೂರೆಸ್ರು ಪೇಪರ್‌ಗಳಲ್ಲಿ, ಟೀವಿ ಚಾನೆಲ್‌ಗಳಲ್ಲಿ ಬರ್‍ಬೇಕು ಅಂದ್ರೆ ಊರ್‍ನಲ್ಲಿ ಎರಡು ಐನಾತಿ ರೌಡಿ ಗ್ಯಾಂಗ್‌ಗಳಿರ್‍ಬೇಕು. ಒಂದ್ಸಲ ಒಂದ್ ಗ್ಯಾಂಗ್‌ನೋರು ಆಪೋಸಿಟ್ ಗ್ಯಾಂಗ್‌ನ ಒಬ್ ರೌಡೀನ ಕೊಚ್ಹಾಕ್ಬೇಕು. ಇನ್ನೊಂದ್ಸಲ ಆ ಗ್ಯಾಂಗ್‌ನೋರು ಈ ಗ್ಯಾಂಗ್‌ನೋರ ಕೊಚ್ಬೇಕು. ಈಗ ಆವಮ್ಮ ಜೈಲಲ್ಲಮ್ಮ ಮಾಡ್ತಾ ಇರುವಂತೆ ಊರ್‍ನಲ್ಲಿ ಸೀನಿದ್ದು, ಕೆಮ್ಮಿದ್ದಕ್ಕೆಲ್ಲ ಸುಪ್ರೀಂ ಕೋರ್ಟ್‌ಗೆ ದಿನಕ್ಕೊಂದ್ ಲಟ್ರು ಬರೀಬೇಕು. ಕದೀಮ ಕಳ್ರು ಯಾರಾದ್ರೂ ನಮ್ ದೇವ್ರ ಉಂಡೀನಾ ಒಡ್ದು ಇರೂದ್ನೆಲ್ಲ ಕದೀಬೇಕು! ಅದೂ ಇಲ್ಲಾಂದ್ರೆ ನಮ್ಮೂರ್‍ನಲ್ಲಿ ಯಾರಾದ್ರೂ ಗಣಿಗಾರ್‍ಕೆ ಮಾಡಿ ಗಣಿಕೊಳ್ಳೆ ಹೊಡೀಬೇಕು. ಅವೆಲ್ಲ ಆಗೂ ಮಾತಲ್ಲ ತಗೀಲ ಅನ್ನುವಂಗಿದ್ರೆ ಕಡೇಪಕ್ಷ ನೀನೂ ನಿನ್ ಎಂಡ್ರು ಬೀದಿಲ್ ನಿಂತ್ಕಂಡು ಲಟಾಪಟಿ ಜಗ್ಳ ಮಾಡ್ಬೇಕು. ರೆಡಿ ಅನ್ನುವಂಗಿದ್ರೆ ಈಗ್ಲೆ ಏಳು, ಡೌನ್-ಟೀವಿಯೋರ್‍ಗೆ ಫೋನೊಡಿತೀನಿ! ಇವೆಲ್ಲ ಏನೂ ಇಲ್ದೇನೆ ನಮ್ಮೂರ್‍ಗೆ ಪ್ರಚಾರ ಕೊಡ್ತಪ್ಪ ಅಂದ್ರೆ ಯಾರ್‍ಲಾ ನಿನ್ನ ಕ್ಯಾರೆ ಅನ್ನೋರು ?''

ತರ್‍ಲೆ ತಿಪ್ಪನಿಗೆ ಒಂದು ಕ್ಷಣ ಕಣ್ಣು ಕತ್ತಲೆ ಬಂದಂತಾಯಿತು. ಕಣ್ಣು ತೆರೆಯದೇನೇ ತಲೆ ಓಡಾಡಿಸತೊಡಗಿದ.

ಯಜಮಾನ ಗುರುವಜ್ಜ ನಿಧಾನವಾಗಿ ಹೆಜ್ಜೆ ಹಾಕುತ್ತ ಸೋಮಾರಿ ಕಟ್ಟೆಯ ಕಡೆಗೆ ಬರುತ್ತಿರುವುದು ಕಾಣಿಸಿತು. ಬೊಂಬಾಯಿ ತಲೆಯಲ್ಲಿ ನೂರು ಮಿಂಚು ಸುಳಿದಂತಾಯಿತು! ಮುಖದಲ್ಲಿ ಕಿಡಿಗೇಡಿತನದ ಹುಸಿನಗೆ, ಬೆರಳಿನಲ್ಲಿ ಒಂದು ಚಿಟಿಕೆ ಹಾಕಿ ಭಾರಿ ಐಡಿಯಾ ಹೊಳೆದವನಂತೆ ಸ್ವಲ್ಪ ತಗ್ಗಿದ ದನಿಯಲ್ಲಿ ಹೇಳಿದ : ''ಈ ಗುರುವಜ್ಜ ನ್ಯಾಯ ತೀರ್ಮಾನ ಮಾಡ್ತಿದ್ದಂಗೆ ಗೊಟಕ್ ಅಂದ ಅಂತ ಇಟ್ಕೊ. ಸುಮ್ನೆ ಒಂದಾತ್ಗೇಳ್ತೀನಿ. ಒಳ್ಳೆ ಸುದ್ದಿಯಾಯ್ತದೆ. ಪೇಪರ್‍ನೋರು ದೂಸ್ರ ಮಾತಾಡ್ದೇನೆ ಸುದ್ದಿ ಪ್ರಿಂಟ್ ಮಾಡ್ತಾರೆ. 'ಕಳೆದ ನೂರಾರು ವರ್ಷಗಳಿಂದ ಗೊಂದಲಪುರವೆಂಬೋ ಊರಿನ ಯಜಮಾನಿಕೆ ಮಾಡುತ್ತ ಮೆರೆದಿದ್ದ ಪೂಜ್ಯ ಮತ್ತು ಪ್ರಾಚೀನ ಗುರುವಜ್ಜ ದೇವರ ಪಾದ ಸೇರಿ, ಗೊಂದಲಪುರದ ಜನರು ದಿಕ್ಕುಗೆಟ್ಟು ಶೋಕಸಾಗರದಲ್ಲಿ ಈಜುವಂತೆ ಮಾಡಿದ್ದಾನೆ. ಇಂಥ ಯಜಮಾನ ಇಲ್ಲಿಯೇ ಹುಟ್ಟಿ ಬರಲಿ ಎಂದು ಎಲ್ಲರೂ ಮೊರೆಯಿಡುತ್ತಿದ್ದಾರೆ. ಅದೇ ವೇಳೆ ಪಟ್ಟದ ಶಿಷ್ಯನಾದ ತರಲೆ ತಿಪ್ಪಯ್ಯನವರು, ಯಜಮಾನಿಕೆ ದಕ್ಕಿಸಿಕೊಂಡು ಅಜ್ಜ ಹಾಕಿದ ದಾರಿಯಲ್ಲಿ ಮುನ್ನಡೆಯಲು ಯಾವ ತ್ಯಾಗಕ್ಕೂ ಸಿದ್ಧವಾಗಿರುವುದಾಗಿ ದುಃಖತಪ್ತ ಹೇಳಿಕೆ ನೀಡಿದ್ದಾರೆ!' ಅಂತ ಪೇಪರ್‍ನೋರು ಬರೀತಾರೆ. ನಮ್ಮೂರ್‍ಗೆ ಪುಗಸಟ್ಟೆ ಪಬ್ಲಿಸಿಟಿ ಗ್ಯಾರಂಟಿ - ಏನಂತಿ ?''

ಬೊಂಬಾಯಿಯ ಈ ಮಾತು ಗುರುವಜ್ಜನ ಕಿವಿಗೆ ಬಿದ್ದರೆ ಏನು ಗತಿ ಎಂದು ತರ್‍ಲೆಗೆ ಗಾಬರಿಯಾಯಿತು. ಬೊಂಬಾಯಿಯ ಪಕ್ಕೆಗೆ ತಿವಿದೇ ಬಿಡುವವನಂತೆ ಕೈ ಮುಂದೆ ತಂದು, ''ಥೂ ನಿನ್ ಬಾಯ್ಗೆ ಬೆಂಕಿ ಬೀಳ. ಬುಡ್ತು ಅನ್ಲ!'' ಎಂದು ಥೀಮಾರಿಯ ದನಿಯಲ್ಲಿ ಹೇಳಿದ. ಏನೋ ಕಾರಣಕ್ಕೆ ಇಬ್ಬರಿಗೂ ನಗು. ತಡೆಯಲಾಗದಷ್ಟು. ಏನೂ ತಿಳಿಯದ ಮಳ್ಳರಂತೆ ಇಬ್ಬರೂ ಗಹಗಹಿಸಿ ನಗತೊಡಗಿದರು.

ತನ್ನನ್ನೇ ಏನೋ ತಮಾಷೆ ಮಾಡಿಕೊಂಡು ಈ ಕತ್ತೆಗಳು ನಗುತ್ತಿವೆ ಎಂಬುದನ್ನು ಗ್ರಹಿಸಿದ ಗುರುವಜ್ಜ ಯಜಮಾನನ ಠೀವಿಯಿಂದ ತನ್ನ ಪೀಠದಲ್ಲಿ ಆಸೀನನಾದ.

ಇಬ್ಬರೂ ತಮ್ಮ ಕುಂದುಕೊರತೆಗಳನ್ನು ಹೇಳಿಕೊಂಡರು. ಗುರುವಜ್ಜ ಅವರ ಮಾತುಗಳನ್ನು ಅಳೆದು - ತೂಗಿ ನೋಡಿದ. ಅವರ ಕಳಕಳಿ ನಿಜವಾದದ್ದು. ಗೊಂದಲಪುರದ ಮರ್ಯಾದೆ ಪ್ರಶ್ನೆ. ಊರಿಗೆ ಸಿಕ್ಕಬೇಕಾದ ಪ್ರಚಾರ ಸಿಗುತ್ತಿಲ್ಲ. ಪ್ರಚಾರ ಕೊಡುವವರೂ ಯಾರೂ ಕಾಣಿಸುತ್ತಿಲ್ಲ ಎಂದುಕೊಂಡ.




ಕೀರ್ತಿಶನಿಯನ್ನು ಹಿಡಿದು ತರುಬುವ ಬಗೆಗೆ ಮೂವರೂ ಗಂಭೀರ ಚರ್ಚೆ ಅಭಿಪ್ರಾಯ ವಿನಿಮಯ ನಡೆಸಿದರು. ತಲೆ ಚಿಟ್ಟು ಹಿಡಿಸಿಕೊಂಡರು. ಮರಳಿ ಮರಳಿ ಯತ್ನವ ಮಾಡುವ ಬಗ್ಗೆ ಸಮ್ಮತಿಸಿದರು. ಫಲ ಎಣಿಸಿದಷ್ಟು ಸುಲಭ ಲಭ್ಯವಲ್ಲ ಎಂದು ನಿರಾಶೆಯ ನಿಟ್ಟುಸಿರುಬಿಟ್ಟರು. ಒಬ್ಬೊಬ್ಬರದೂ ಒಂದೊಂದು ಸಲಹೆ, ಅದರ ಬಗ್ಗೆ ವಾದ-ವಿವಾದ, ಗೊಂದಲಪುರದ ವಿಷಯಗಳು ಸುದ್ದಿ ರೂಪದಲ್ಲಿ ಮಾಧ್ಯಮಗಳಲ್ಲಿ ಸತತ ಬರುತ್ತಲೇ ಇರಬೇಕಾದರೆ ಯಾರು ಏನು ಮಾಡಬಹುದು ಎಂಬ ಬಗ್ಗೆ ಚರ್ಚೆ. ಇದನ್ನು ಕಾರ್ಯರೂಪಕ್ಕೆ ತರಲು ಒಂದು ಸಮಿತಿ, ಅದಕ್ಕೊಂದು ಉಪಸಮಿತಿ ರಚಿಸಲು ಪ್ರಸ್ತಾಪ - ಹೀಗೆ ತಲೆಬುಡ ಇಲ್ಲದ ಚರ್ಚೆ.

ಕೊನೆಗೆ, ಬೊಂಬಾಯಿ ಊರಿನಲ್ಲಿ ಎಲ್ಲ ಕಡೆ ತಿರುಗಾಡಿ ಗೊಂದಲಪುರದ ಹೆಸರು ನಾಡಿನ ಎಲ್ಲರ ನಾಲಿಗೆಗಳ ಮೇಲೂ ಹರಿದಾಡುವಂತೆ ಮಾಡಲು ಯಾರು ಯಾವ ರೀತಿಯಲ್ಲಿ ಸಹಾಯಕರಾಗಬಹುದು ಎಂಬುದನ್ನು ಕುರಿತು ಒಂದು ಸರ್ವೇಕ್ಷಣೆ ನಡೆಸಿ ವರದಿ ತಯಾರಿಸಬೇಕೆಂದು ತೀರ್ಮಾನಕ್ಕೆ ಬರಲಾಯಿತು. ಬೊಂಬಾಯಿ ಕೂಡಲೇ ಕೆಲಸ ಪ್ರಾರಂಭಿಸತಕ್ಕದ್ದೆಂದೂ ಗುರುವಜ್ಜ ಅಪ್ಪಣೆ ಕೊಡಿಸಿದ.

ಬೊಂಬಾಯಿ ಊರಿನವರ ಸಲಹೆ, ಸೂಚನೆ, ಅಭಿಪ್ರಾಯ ಸಂಗ್ರಹಿಸಿದ.

ಸಿದ್ಧೇಶ್ವರಾನಂದಜಿಯ ಹುಟ್ಟು ಸೋಮಾರಿತನವನ್ನು ಅನುಭವಿಸುತ್ತ ಕಷ್ಟ-ಕೋಟಲೆಗಳ ಮಧ್ಯೆ ಮಕ್ಕಳನ್ನು ಸಾಕಿದ ಚೆಲುವಕ್ಕನಂಥವರನ್ನು ಹೊರತುಪಡಿಸಿ, ಉಳಿದವರು ಒಳ್ಳೆಯ ವಿಧಾಯಕ ಸಲಹೆಗಳನ್ನೇ ನೀಡಿದರೆನ್ನಬಹುದು.

'ಟೀವಿ-ಡೌನ್', 'ಹಾಯ್-ಟೀವಿ'ಯವರು ಬರುತ್ತಾರೆಂದು ಮಾಸ್ತಮ್ಮನ ಸೊಸೆ ಬಹಳ ಉತ್ಸಾಹ ತೋರಿದಳು. ಅತ್ತೆಯ ಕಾಟದಿಂದ ಬೇಸತ್ತು ಹೋಗಿರುವ ಆಕೆ ಟಿವಿ ಕ್ಯಾಮರಾ ಮುಂದೆ ಅತ್ತೆಗೆ ನಾಲ್ಕು ತದುಕಿ ತನ್ನ ಕೋಪ ತೀರಿಸಿಕೊಳ್ಳುವ ಅವಸರ ತೋರಿಸಿದಳು.

ಕಾನ್ವೆಂಟ್ ಮೇಡಂ ಚಿಂಗಾರಿ, ತಾನು ನರ್ಸರಿ ರೈಮ್ಸ್‌ಗಳನ್ನು ಪ್ರಿಂಟ್ ಮಾಡಿಸಿ, ಶಿಕ್ಷಣ ಮಂತ್ರಿಗಳನ್ನು ಗೊಂದಲಪುರಕ್ಕೇ ಕರೆಸಿ ಅವರ ಅಮೃತಹಸ್ತದಿಂದ ಪುಸ್ತಕ ಬಿಡುಗಡೆ ಮಾಡಿದರೆ ಪತ್ರಿಕೆಗಳಲ್ಲಿ ತಮ್ಮೂರ ಸುದ್ದಿ ಬರುವುದು ಗ್ಯಾರಂಟಿ ಎಂದಳು.

ಟಿವಿಯವರು ಬಂದರೆ ತಾನು ದೆವ್ವ ಬಿಡಿಸುವ ಪ್ರೋಗ್ರಾಂ ಕೊಡುವುದಾಗಿ ಪೂಜಾರಿ ಮಾಂತಪ್ಪ ಹೇಳಿದ.

ಮರಿಕುಂಟೆ ಮೇಸ್ಟ್ರು ''ಶಾಲೆಯ ಮಕ್ಕಳಿಗೆ 'ಷರೀಫನ ಮಹಾತ್ಮೆ' ನಾಟಕ ಕಲಿಸಿ ಉದ್ಘಾಟನೆಗೆ ಅಂಬರೀಷರನ್ನು ಕರೆಸಿದರೆ ಪೇಪರುಗಳಲ್ಲಿ ಸುದ್ದಿ ಬಂದೇ ಬರ್‍ತಾವ'' ಎಂದರು. ಬೊಂಬಾಯಿ ಕೂಡ ತನ್ನ ಸಲಹೆ ದಾಖಲಿಸಿದ. ಮಳೆಗಾಗಿ ಭಜನೆ ಮಾಡುತ್ತ ಊರಿನವರೆಲ್ಲ ಗೊಂದಲಪುರದಿಂದ ಜಂಟಿಕೊಪ್ಪಲಿನವರೆಗೆ 'ಮಳೆಗಾಗಿ ನಡಿಗೆ' ಮಾಡುವುದು. ಬಂಡೇಶ್ವರನ ಜಾತ್ರೆ ಮಾಡಿಸಿ ದೇವರಿಗೆ ಗುಂಡಿನ ಹರಕೆ ತೀರಿಸುವ ಮೂಲಕ ಊರು ಸುದ್ದಿಯಲ್ಲಿ ಬರಲು ಕಾರಣವಾಗಬಹುದು ಎಂದು ಗುಂಡುಪ್ರಿಯರ ಗುಂಪು ಸಲಹೆ ಮಾಡಿತು.

ಹಿರಿಯರ ಮಂಗಾಟದಿಂದ ಬೇಸರಗೊಂಡಿದ್ದ ಅರ್ಧ ವಿದ್ಯಾವಂತರ ಒಂದು ಗುಂಪು ಮತ್ತೊಂದು ಘನಂದಾರಿ ಸಲಹೆ ಕೊಟ್ಟಿತು: ಹೇಗಾದರೂ ಮಾಡಿ ಲೋಕಾಯತರು ಪೂಜಾರಿ ಮಾಂತಪ್ಪನ ಬಡ್ಡಿಕೋರತನಕ್ಕೆ ಮುಕ್ತಾಯ ಹಾಕುವಂತೆ, ಒಂದು ದಿನ ಟಿವಿಯವರ ಸಹಿತ ಬಂದು ಮಾಂತಪ್ಪನ ಮನೆ ರೇಡ್ ಮಾಡುವುದು.

ಸಿದ್ಧೇಶ್ವರಾನಂದಜಿ ಸಲಹೆ : ಭಕ್ತರು ಬಂಡೆ ಮಾಲೆ ಧರಿಸಿ ಬಂಡೆಮಠದಲ್ಲಿ ಹಗಲು ರಾತ್ರಿ ನಲವತ್ತೆಂಟು ದಿನ ಭಜನೆ ಮಾಡುವುದು.

ಬೊಂಬಾಯಿ ಗೊಂದಲಪುರದವರು ನೀಡಿದ ಮೇಲಿನಂಥ ನೂರಾರು ಸಲಹೆಗಳನ್ನು ಸಂಗ್ರಹಿಸಿ ಯಜಮಾನನಿಗೆ ಅರ್ಪಿಸಲು ಕಾಯುತ್ತಿದ್ದಾನೆ.

— ಬೀರಣ್ಣ

**ಕೆ. ಪಿ. ಸ್ವಾಮಿ**
ನಂ. ೧೦, ೧ನೇ ಮಹಡಿ, ಶ್ರೀ ರಾಮ ದೇವಾಲಯದ ರಸ್ತೆ
ಶ್ರೀ ರಾಮ ದೇವಾಲಯದ ಎದುರು, ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು - ೫೬೦ ೦೪೭




'ಮಾಧ್ಯಮಗಳಲ್ಲಿ ಭವಿಷ್ಯವಾಣಿ' – ಈ ಕುರಿತಂತೆ ತಮ್ಮ ಅನಿಸಿಕೆಗಳನ್ನು 'ಹೊಸತು' ಪತ್ರಿಕೆಯೊಂದಿಗೆ ಹಂಚಿಕೊಳ್ಳಬೇಕೆಂದು ಓದುಗರಲ್ಲಿ ವಿನಂತಿಸಿದ್ದೆವು. ಅನೇಕ ಓದುಗರು, ಲೇಖಕರು ಇದಕ್ಕೆ ಸ್ಪಂದಿಸಿ ತಮ್ಮ ಪ್ರತಿಕ್ರಿಯೆಗಳನ್ನು ಕಳಿಸಿದ್ದಾರೆ. ಅವರೆಲ್ಲರಿಗೆ ವಂದನೆಗಳನ್ನು ತಿಳಿಸುತ್ತ ನಿಗದಿತ ಅವಧಿಯೊಳಗೆ ನಮಗೆ ತಲುಪಿದ ಕೆಲವನ್ನು ಆಯ್ದು ಇಲ್ಲಿ ಪ್ರಕಟಿಸಿದ್ದೇವೆ. ಇದರಿಂದ ಉತ್ತಮ ಫಲಿತಾಂಶ ಸಮಾಜಕ್ಕಾದರೆ ನಮಗೆ ಸಂತೋಷ.

– ಸಂಪಾದಕ

# ಮಾಧ್ಯಮಗಳಲ್ಲಿ ಭವಿಷ್ಯವಾಣಿ

''ಜನ ಮರುಳೋ ಜಾತ್ರೆ ಮರುಳೋ'' ಎಂಬಂತೆ ಮಾಧ್ಯಮಗಳು ಮರುಳೋ ಅವುಗಳ ಪ್ರಚಾರದ ಆಟಗಳಿಗೆ ಜನರು ಮರಳೊ ಎಂಬಂತಾಗಿದೆ. ಮಾಧ್ಯಮಗಳಲ್ಲಿ ಪ್ರಸಾರವಾಗುತ್ತಿರುವ ಭವಿಷ್ಯವನ್ನು ಕುರಿತ ಕಾರ್ಯಕ್ರಮಗಳು ಇಂದಿನ ವೈಜ್ಞಾನಿಕ ಯುಗದಲ್ಲಿಯೂ ಜನರು ಭವಿಷ್ಯವನ್ನಾಧಾರಿತ ಕಾರ್ಯಕ್ರಮಗಳನ್ನು ವೀಕ್ಷಿಸುತ್ತಿದ್ದಾರೆ ಎಂದರೆ ನಾವೆಷ್ಟು ಸಾಮಾಜಿಕವಾಗಿ ಮುಂದುವರಿಯುತ್ತಿದ್ದೇವೆ ಎಂಬುದು ತಿಳಿಯುತ್ತದೆ.

ಉದಾಹರಣೆಯೊಂದಿಗೆ ಹೇಳುವುದಾದರೆ ತಮ್ಮ ಬೆಳಗಿನ ದಿನಚರಿಯನ್ನು ಸಮೂಹ ಮಾಧ್ಯಮಗಳೊಂದಿಗೆ ಪ್ರಾರಂಭಿಸುವ ಜನರಲ್ಲಿ, ಆ ದಿನದಲ್ಲಿನ ತಮ್ಮ ರಾಶಿ ಮತ್ತು ಜನ್ಮ ದಿನಾಂಕದ ಸಹಾಯದೊಂದಿಗೆ ಮಾಧ್ಯಮಗಳಲ್ಲಿ ಬಿತ್ತರವಾಗುವ ಕಾರ್ಯಕ್ರಮವನ್ನು ಕೆಲವರಾದರೂ ನೋಡದೆ ಸುಮ್ಮನಿರಲು ಸಾಧ್ಯವೇ? ವಿಚಿತ್ರವಾದರೂ ನಂಬಲೇಬೇಕಾದ ಸತ್ಯವೇನೆಂದರೆ, ಆ ದಿನ ಯಾವ ಬಣ್ಣದ ವಸ್ತ್ರವನ್ನು ಧರಿಸಿದರೆ ಶುಭ ಮತ್ತು ಅಶುಭ ಎಂಬ ವಿಷಯದಿಂದ ಪ್ರಾರಂಭವಾಗಿ, ಯಾವ ಕಾಲದಲ್ಲಿ (ರಾಹು, ಗುಳಿಕ, ಯಮಗಂಡ) ಯಾವ ಕಾರ್ಯವನ್ನು ಮಾಡಿದರೆ ಶುಭವಾಗುತ್ತದೆ ಎಂಬುವವರೆಗೂ ವಿಚಾರಗಳು ಪ್ರಸಾರವಾಗುತ್ತಿರುತ್ತದೆ.

ಇಷ್ಟಕ್ಕೇ ನಿಲ್ಲದ ಕಾರ್ಯಕ್ರಮಗಳು ಕಾಲಕಾಲಕ್ಕೆ ಕೆಲವು ಗಿಮಿಕ್‌ಗಳನ್ನು ಮಾಡುತ್ತಿರುತ್ತವೆ. ಅವುಗಳಲ್ಲಿ ಕೆಲವನ್ನು ಹೇಳಲೇಬೇಕು. ಇಲ್ಲದಿದ್ದರೆ ಈ ಲೇಖನ ಅಪೂರ್ಣವಾದೀತು. ಕೆಲವು ದಿನಗಳ ಹಿಂದೆ ನಮಗೆಲ್ಲಾ ತಿಳಿದಂತೆ ಶ್ರೀ ಸತ್ಯಸಾಯಿಬಾಬಾರ ಕಣ್ಣುಗಳಲ್ಲಿ ಕಣ್ಣೀರು ಸುರಿಯುತ್ತಿದೆಯೆಂದೋ, ಮತ್ತಾರದೋ ಮನೆಯ ದೇವರ ಫೋಟೋದಲ್ಲಿ ಅರಿಸಿನ, ಕುಂಕುಮ ತಾವಾಗಿಯೇ ಕೆಳಗೆ ಉದುರುತ್ತಿದೆಯೆಂದೋ, ಗಣೇಶನ ಮೂರ್ತಿ ಹಾಲು ಕುಡಿದನು ಎಂದೋ, ಹಸು ಎಂಟು ಕಾಲಿನ ಕರುವಿಗೆ ಜನ್ಮ ನೀಡಿತೆಂದೋ, ನಾಯಿಯ ಹೊಟ್ಟೆಯಲ್ಲಿ ಬೆಕ್ಕು ಜನಿಸಿತೆಂದೋ, ಕಲ್ಲಿನ ಕೋಳಿ ಕೂಗಿದರೆ ಪ್ರಳಯವಾಗುತ್ತದೆ ಎಂದೋ, ನಾನಾ ಬಗೆಯಲ್ಲಿ ನಂಬಿಸುವ ಮಾಧ್ಯಮಗಳು, ಜ್ಯೋತಿಷ್ಯಗಳ ಮೊರೆಹೋಗುತ್ತಾರೆ. ಭಕ್ತಿಯ ಪರವಶಕ್ಕೆ ಒಳಗಾದ ಜನ ಅಂತಹ ಸ್ಥಳಗಳಿಗೆ ಖುದ್ದು ಭೇಟಿ ನೀಡಿ, ಅಲ್ಲಿನ ಕೌತುಕಭರಿತ ವಿಚಾರಗಳನ್ನು ಕಣ್ತುಂಬಿಕೊಳ್ಳುವ ಮೊದಲೇ ಮಾಧ್ಯಮ ಮತ್ತು ಜ್ಯೋತಿಷಿಗಳ ಮೊರೆಹೋಗುತ್ತಾರೆ. ಸಿಕ್ಕ ಅವಕಾಶಗಳನ್ನು ಬಳಸಿಕೊಳ್ಳುವ ಕಾತುರದಲ್ಲಿ ಮುನ್ನುಗ್ಗುವ ಚಾನೆಲ್‌ಗಳು ಮತ್ತು ಜ್ಯೋತಿಷ್ಯಗಳು ಮತ್ತಷ್ಟು ರೆಕ್ಕೆಪುಕ್ಕಗಳನ್ನು ಕಟ್ಟಿ ದಿನವಿಡೀ ಈ ಘಟನೆ ಹಾಗೂ ಕಾರ್ಯಕ್ರಮವನ್ನು ನಿರಂತರವಾಗಿ ಪ್ರಸಾರ ಮಾಡುತ್ತಿರುತ್ತವೆ. ೨೪ ಗಂಟೆಗಳ ಅವಧಿಯಲ್ಲಿಯೂ ಈ ಸುಪ್ರಸಿದ್ಧ(?) ಕಾರ್ಯಕ್ರಮವನ್ನು ಕಣ್ತುಂಬಿಕೊಳ್ಳಲು ಅವಕಾಶವನ್ನು ನೀಡುತ್ತವೆ. ಆದರೆ ಘಟನೆ ನಡೆದ ಮನೆ ಮತ್ತು ದೇವಾಲಯದಲ್ಲಿನ ಪರಿಸ್ಥಿತಿಯನ್ನು ಗಮನಿಸಿದ ಮಾಲೀಕರು ಹಾಗೂ ಮೇಲ್ವಿಚಾರಕರಿಗೆ ಹುಚ್ಚು ಹಿಡಿಸುವಷ್ಟು ಕಾರ್ಯಕ್ರಮಗಳು ನಡೆದರೂ, ಮೂಕವಿಸ್ಮಿತರಾಗಿ ಇರಬೇಕೇ ಹೊರತು ಮರು ಮಾತನಾಡುವಂತಿಲ್ಲ, ನಾವು ಯಾಕಾದರೂ ಇದನ್ನು ಪ್ರಚುರಪಡಿಸಿದ್ದೇವೋ ಎಂಬ ಪೇಚಿಗೆ ಸಿಲುಕಿ ಒದ್ದಾಡುತ್ತಿರುತ್ತಾರೆ. ಕೂಡಲೇ ಎಚ್ಚೆತ್ತ ಮಾಧ್ಯಮದವು ಕೆಲವು ಸುಪ್ರಸಿದ್ಧ ಜ್ಯೋತಿಷಿಗಳನ್ನು ಕರೆಯಿಸಿ, ಅವರಿಂದ ನಾನಾ ಬಗೆಯ ಪರಿಹಾರ ಕಾರ್ಯಗಳು ಮತ್ತು ಮುಂದೇನಾಗಬಹುದು (ಆಗದಿದ್ದರೂ ಸರಿ) ಎಂಬುದನ್ನು ಚರ್ಚಿಸುತ್ತಾರೆ.

ನನಗೆ ತಿಳಿದಂತೆ ಕೆಲವೇ ದಿನಗಳ ಹಿಂದೆ ಮನೆಯಲ್ಲಿನ ಹಿರಿಯ ಗಂಡು ಮಗನಿಗೆ ವಿಶೇಷ ಪೂಜೆ ಮಾಡಿಸಬೇಕೆಂಬ ವದಂತಿ ಹಬ್ಬಿತ್ತು. ಒಂದು ವೇಳೆ ಪೂಜೆ ಮಾಡಿಸದಿದ್ದರೆ ಭವಿಷ್ಯದಲ್ಲಿ ಆತನಿಗೆ ಗಂಡಾಂತರ ಕಾದಿದೆಯೆಂದು ಸುಳ್ಳು ಸುದ್ದಿ ಹಬ್ಬಿತ್ತು. ಹುಚ್ಚೆದ್ದ ಮೂಢಜನರು ಸಾಲಮಾಡಿಯಾದರೂ ಆ ಪೂಜೆಯನ್ನು ನೆರವೇರಿಸಿದ್ದನ್ನು ಕಣ್ಣಾರೆ ಕಂಡಿದ್ದೇನೆ. ಪ್ರಶ್ನೆ ಮಾಡಿದ ನನ್ನನ್ನು ಸಂಶಯಾಸ್ಪದವಾಗಿ ನೋಡಿದ್ದು ನನ್ನನ್ನೇ ದಂಗುಬಡಿಸಿತು. ಸರದಿಯಂತೆ ಹೆಣ್ಣುಮಕ್ಕಳಿಗೂ ಸಂಬಂಧಿಸಿದ ಇಂತಹ ಮತ್ತೊಂದು ಸುದ್ದಿ ಕೆಲವೇ ದಿನಗಳಲ್ಲಿ ಪ್ರಚಾರ ಪಡೆಯಿತು. ಅವುಗಳೆಂದರೆ, ದಂಪತಿಗೆ ಒಬ್ಬಳೇ ಅಪ್ರಾಪ್ತ ವಯಸ್ಸಿನ ಮಗಳಿದ್ದರೆ, ಅವಳ ಕೈಯಿಂದ ವಿಶೇಷ ದಾನ, ದಕ್ಷಿಣೆಗಳನ್ನು ದೇವರು ಮತ್ತು ಜನರಿಗೆ ಕೊಡಬೇಕು, ಇಲ್ಲದಿದ್ದರೆ ಅವಳಿಗೂ ಮುಂದೆ ಅಪಾಯವಿದೆ ಎಂಬ ಮುನ್ಸೂಚನೆ ನೀಡಲಾಗಿದ್ದಿತು. ಇದರ ಜೊತೆಯಲ್ಲಿಯೇ ವಿವಾಹವಾದ ಸೋದರಿಯರು ತಮ್ಮ ವಿವಾಹವಾದ ಸಹೋದರಿಯರಿಗೆ ವಸ್ತ್ರವನ್ನು ದಾನಮಾಡಿ ಸತ್ಕರಿಸಬೇಕೆಂಬ ಮಾತುಕತೆಗಳು ಕೇಳಿಬಂದಿದ್ದವು.

ಇಷ್ಟೆಲ್ಲಾ ಹೇಳುತ್ತಿರುವಾಗ ನಮ್ಮ ನೀಲಿ ಕಂಗಳ ಸುಂದರಿ ಐಶ್ವರ್ಯ ರೈ ಬಚ್ಚನ್‌ರನ್ನು ನೆನಪಿಸಿಕೊಳ್ಳಲೇಬೇಕು. ಏಕೆಂದರೆ ಕಳೆದ ವರ್ಷ ಇದೇ ಅವಧಿಯಲ್ಲಿ ಈ ವಿಚಾರ ಹೆಚ್ಚು ಚಾಲ್ತಿಯಲ್ಲಿತ್ತು. ಪ್ರಸವದ ದಿನಾಂಕ ಮತ್ತು ವೇಳೆಯನ್ನು ಮೊದಲೇ ಸಿದ್ಧಪಡಿಸಿಕೊಂಡ ಮಾಧ್ಯಮದವರು ಮತ್ತು ಕೆಲವು ಪ್ರಚಾರಪ್ರಿಯ ಜ್ಯೋತಿಷಿಗಳು ಜನರನ್ನು ಮರುಳುಮಾಡಿ, ನಮ್ಮೆಲ್ಲರ ಎಷ್ಟೋ ಹೆಸರಿಸಲು ಅಸಾಧ್ಯವಾದ ಭಾವೀ ತಾಯಂದಿರು ಅದೇ ದಿನ ಮತ್ತು ಅದೇ ಸಮಯದಲ್ಲಿ ತಮ್ಮ ಕಂದಮ್ಮನು ಜನಿಸಬೇಕೆಂದು ಹಠ ಹಿಡಿದು ವೈದ್ಯರಲ್ಲಿಗೆ ಹೋಗಿ ಅವರಿಂದ ಛೀಮಾರಿ ಹಾಕಿಸಿಕೊಂಡ ಉದಾಹರಣೆಗಳನ್ನು ಮರೆಯಲಾದೀತೆ?

ವಿಷಾದನೀಯವೆಂದರೆ, ತಾಂತ್ರಿಕತೆಯನ್ನು ಅಳವಡಿಸಿಕೊಂಡ ನಗರವಾಸಿಗಳು ಮತ್ತು ಸಾಕ್ಷರರೇ ಇಂತಹ ಅಂಧಾನುಕರಣೆಯ ನಂಬಿಕೆಗೆ ಒಳಗಾಗುತ್ತಿರುವುದು. ನಾವು ನೋಡಿರುವಂತೆ ಎಷ್ಟೋ ನಗರವಾಸಿಗಳು ತಮ್ಮ ವೈವಾಹಿಕ, ಸಂತಾನಪ್ರಾಪ್ತಿ, ಕೌಟುಂಬಿಕ, ಹಣಕಾಸು, ಶೈಕ್ಷಣಿಕ ಮುಂತಾದ ಹಲವು ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಲು ಹಳ್ಳಿಗಾಡಿಗೆ ಹೋಗಿ ಬರುತ್ತಿದ್ದಾರೆ. ನನಗೂ ವಿಚಿತ್ರವೆನಿಸಿರುವ 'ನಿರ್ದಿಷ್ಟ ಸಮುದಾಯ ಮತ್ತು ಜಾತಿ'ಗೆ ಸೇರಿದ ವ್ಯಕ್ತಿಗಳ ಮೈಮೇಲೆ ಪೂರ್ವನಿಯೋಜಿತ ದಿನ ಮತ್ತು ಸಮಯದಲ್ಲಿ ''ದೇವರು'' ಎಂಬ ಕೌತುಕಭರಿತ ಸನ್ನಿವೇಶ ಸೃಷ್ಟಿಯಾಗುತ್ತದೆ. ನಂತರ ಆ ದೇವಮಾನವ ಆಡುವ ಪ್ರತಿಯೊಂದು ನುಡಿಗಾಗಿ ಜನರು ಹಾತೊರೆಯುತ್ತಾರೆ. ಇದರ ಬಗ್ಗೆ ಪ್ರಶ್ನೆ ಮಾಡಿದ ನಾನು ಬೆಚ್ಚಿಬಿದ್ದಿದ್ದೀನಿ. ಏಕೆಂದರೆ ಆ ಸ್ಥಳಕ್ಕೆ ಬರುವ ವ್ಯಕ್ತಿಗಳು






ಬಹಳ ಆತ್ಮವಿಶ್ವಾಸದಿಂದ ತಮ್ಮ ಸಮಸ್ಯೆಗಳು ಪರಿಹಾರವಾಗಿರುವುದನ್ನು ಸವಿವರವಾಗಿ ಒಪ್ಪಿರುತ್ತಾರೆ. ಹೀಗೆ ಒಬ್ಬರಿಂದ ಪ್ರಚಾರ ಪಡೆದ ಆ ದೇವಮಾನವ ಕೆಲವೇ ದಿನಗಳಲ್ಲಿ ಸುಪ್ರಸಿದ್ಧನಾಗುತ್ತಾನೆ. ಇದನ್ನು ಕೇಳಿದ ಕೆಲವರಿಗಾದರೂ ಆ ದೇವಮಾನವನನ್ನು ಒಮ್ಮೆ ಸಂದರ್ಶಿಸಬೇಕು ಎಂದೆನಿಸಿದರೆ ಆಶ್ಚರ್ಯವಿಲ್ಲ.

ಮೇಲೆ ವಿವರಿಸಲಾದ ವಿಚಾರಗಳು ಮತ್ತು ಉದಾಹರಣೆಗಳು, ಜನರನ್ನು ಆಧುನಿಕ ಮತ್ತು ತಾಂತ್ರಿಕಯುಗದಲ್ಲೂ ಜನರು ಮಾಧ್ಯಮಗಳ ಪ್ರಭಾವಕ್ಕೆ ಹೇಗೆ ಒಳಗಾಗುತ್ತಿದ್ದಾರೆ ಎಂಬುದನ್ನು ತಿಳಿಸುತ್ತವೆ. ಆದರೆ ಇವೆಲ್ಲ ಮೂಢ ಕಾರ್ಯಕ್ರಮಗಳ ಹಿಂದೆ ಮಾಧ್ಯಮದವರ ವೈಯಕ್ತಿಕ ಲಾಭಗಳು ಅಡಗಿರುತ್ತವೆ ಎಂಬುದು ಜಾಣಕುರುಡರಾದ ಜನರಿಗೆ ತಿಳಿಯುತ್ತಿಲ್ಲ.

ಬಹುತೇಕ ಭವಿಷ್ಯಾಧಾರಿತ ಕಾರ್ಯಕ್ರಮಗಳು ಮತ್ತು ಲೇಖನಗಳು ಜಾತಿ ಆಧಾರಿತವಾಗಿರುತ್ತದೆ ಎಂಬುದು ಗೊತ್ತಿರುವ ವಿಷಯ. ಮನುವಾದಿಗಳ ಕುತಂತ್ರಕ್ಕೆ ಇನ್ನೂ ಬಲಿಯಾಗುತ್ತಿದ್ದೇವೆ ಎಂದರೆ ಪ್ರಜಾಪ್ರಭುತ್ವದಲ್ಲಿನ ಸಮಾನತೆಯ ಕನಸು ನನಸಾಗುತ್ತದೆಯೇ? ಎಲ್ಲಿಯವರೆಗೂ ಇಂತಹ ಅಪಪ್ರಚಾರ ಮತ್ತು ಮೂಢನಂಬಿಕೆಯ ಕಾರ್ಯಕ್ರಮಗಳು ವರದಿಗಳು ಪ್ರಸಾರವಾಗುತ್ತವೆಯೋ, ಅಲ್ಲಿಯವರೆಗೂ ನಾವು ಸಾಕ್ಷರರಾಗಿದ್ದರೂ ನಿರಕ್ಷರರೇ, ದೂರದರ್ಶನ ಕಾರ್ಯಕ್ರಮಗಳ, ಪ್ರಚಾರ ಪ್ರಿಯ ವರದಿಗಳ ಹಿಂದೆ ಅದರ ಟಿಆರ್‌ಪಿ ದರದ ಹೆಚ್ಚಳ ಮಾಡಿಕೊಳ್ಳುವ ಗುಮ್ಮ ಅಡಗಿದೆ ಎಂಬುದು ತಿಳಿಯುತ್ತಿಲ್ಲ. ಪೂರ್ಣಪ್ರಮಾಣದಲ್ಲಿ ಭವಿಷ್ಯಾಧಾರಿತ ಕಾರ್ಯಕ್ರಮಗಳ ಪ್ರಸಾರ ಮತ್ತು ವರದಿಗಳನ್ನು ನಿಷೇಧಿಸಬೇಕು. ಬೇಡದ ವಿಚಾರಗಳಿಗೆ ಮೂಗು ತೂರಿಸುವ ವಿಚಾರವಾದಿಗಳು, ಚಿಂತಕರು, ಸಂಘಟನೆಗಳು ಮುಂತಾದವರು ಈ ವಿಚಾರಗಳಲ್ಲಿ ಜಾಣ ಮೂಕರಾಗುತ್ತಾರೆ. ಅವರಿಗೂ ಪ್ರಚಾರ ಬೇಕೇ ಹೊರತು ಸಮಾಜದ ಬದಲಾವಣೆ, ಪ್ರಗತಿ ಅಲ್ಲ.

ಉದಾಹರಣೆ : ಸುಪ್ರಸಿದ್ಧ ಕುಕ್ಕೆ ಸುಬ್ರಮಣ್ಯ ಸನ್ನಿಧಾನದಲ್ಲಿನ 'ಮಡೆಸ್ನಾನ'ದ ಆಚರಣೆಯನ್ನು ವಿರೋಧಿಸಿದ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಸಿಕ್ಕ ಗೌರವವಾದರೂ ಏನು? ಪರ-ವಿರೋಧದ ಕಿತ್ತಾಟದಲ್ಲಿ ಪರ ವಹಿಸಿದ್ದವರೇ ಹೆಚ್ಚು. ಇದರ ಪ್ರಚಾರಕ್ಕೆ ಪುಷ್ಟಿ ನೀಡಿದ ಕೆಲವು ಚಾನೆಲ್‌ಗಳು ವರದಿ ಮಾಡಿದ್ದಾದರೂ ಏನನ್ನು? ಜನರಿಗೆ ಜಾಗೃತಿಯನ್ನುಂಟುಮಾಡಬೇಕಾದ ಮಾಧ್ಯಮಗಳೇ ಕೆಲವು ಬಾರಿ ಜನರನ್ನು ಗೊಂದಲಕ್ಕೀಡುಮಾಡುತ್ತವೆ. ನಮ್ಮ ಘನ ಕೋರ್ಟ್ ಮಡೆಸ್ನಾನದ ಬದಲು ಎಡೆಸ್ನಾನವನ್ನು ಮಾಡಬಹುದು ಎಂದಿರುವುದು ಕೊಂಚ ಸಮಾಧಾನವಾದರೂ, ಮಡೆಸ್ನಾನದ ಕೂಸು ಎಡೆಸ್ನಾನ ಎಂಬುದೂ ಅಷ್ಟೇ ನಿಜ. ಮಡೆಯಾದರೇನು? ಎಡೆಯಾದರೇನು? ಮಾಡುವ ಸ್ನಾನ ಮಡಿಯಲ್ಲವೇ? ಇಂತಹ ಬಹುತೇಕ ಕಾರ್ಯಕ್ರಮಗಳು ಜನರ ನಂಬಿಕೆಗಳನ್ನು ಘಾಸಿಮಾಡುತ್ತವಾದರೂ, ನಿಷೇಧದ ಹಿಂದೆ ಒಳ್ಳೆಯ ವಿಚಾರವಿರುತ್ತದೆ. ಅವಕಾಶವಾದಿಗಳಿಂದ ಕೆಲವು ಭವಿಷ್ಯಕಾರರು ಜನರಲ್ಲಿ ಮಾಧ್ಯಮಗಳ ಮುಖಾಂತರ ಅಪಪ್ರಚಾರವನ್ನುಂಟುಮಾಡುತ್ತಾರೆ.

ಕೆಲವು ಮಾಧ್ಯಮಗಳು ಭವಿಷ್ಯಾಧಾರಿತ ಕಾರ್ಯಕ್ರಮಗಳ ಬಗ್ಗೆ ಜಾಗೃತರಾಗಿರ ಬೇಕೆಂದು ಪ್ರಚಾರವನ್ನು ಕೈಗೊಂಡರೂ ನಿರೀಕ್ಷೆಯಷ್ಟು ಪ್ರಮಾಣದಲ್ಲಿ ಅದು ಜನರನ್ನು ತಲುಪುತ್ತಿಲ್ಲ. ಜನರನ್ನು ವಿಚಾರಶೀಲರಾಗಿ ರೂಪಿಸಬೇಕಾದ ಮಾಧ್ಯಮಗಳೇ ಕೆಲವು ನಕಲಿ ಜ್ಯೋತಿಷಿಗಳನ್ನು ಬಳಸಿಕೊಂಡು, ವೈವಿಧ್ಯಮಯ ಕಾರ್ಯಕ್ರಮಗಳನ್ನು ಪ್ರಸಾರ ಮಾಡುವುದರ ಜೊತೆಗೆ, ಅದೇ ಜ್ಯೋತಿಷಿಯ ಅಸಲಿ ಬಣ್ಣವನ್ನು ಬಯಲು ಮಾಡುತ್ತಿರುವ ಉದಾಹರಣೆಗಳು ನಮ್ಮ ಕಣ್ಣಮುಂದಿವೆ. ಇದೇ ಬೆಳವಣಿಗೆ ಮುಂದುವರಿದರೆ ಬೀದಿಬೀದಿಗಳಲ್ಲಿ ನಾಯಿಕೊಡೆಗಳಂತೆ ತಲೆ ಎತ್ತಿ ನಿಂತಿರುವ ಜ್ಯೋತಿಷ್ಯಾಲಯಗಳೇ ನಮ್ಮ ಜೀವನ ಮತ್ತು ಸಮಾಜವನ್ನು ಆಳಬೇಕಾದ ಪರಿಸ್ಥಿತಿ ಉದ್ಭವಿಸಬಹುದು. ನಾವೇ ಇಂತಹ ಕಾರ್ಯಕ್ರಮಗಳಿಗೆ ಅವಕಾಶ ಕೊಡುತ್ತಾ ಹೋದಂತೆ ದಿನೇ ದಿನೇ ಸಾಕಷ್ಟು ಕುಪ್ರಸಿದ್ಧ ಕಪಟ ಜ್ಯೋತಿಷಿಗಳನ್ನು ಸೃಷ್ಟಿಮಾಡುತ್ತಿದ್ದೇವೆ.

**ರೇಖಾ**
ಸಂಶೋಧನಾ ವಿದ್ಯಾರ್ಥಿನಿ, ಶಿಕ್ಷಣ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು

# ಮಾಧ್ಯಮಗಳಲ್ಲಿ ಭವಿಷ್ಯವಾಣಿ

೨೦ನೇ ಶತಮಾನದ ಪ್ರಖ್ಯಾತ ಗಣಿತ ಶಾಸ್ತ್ರಜ್ಞ ಡೇವಿಡ್ ಹಿಲ್ಬರ್ಟ್ ಹೇಳುತ್ತಾನೆ: ''ಒಂದು ವೇಳೆ ಜಗತ್ತಿನ ೧೦ ಮಂದಿ ಅತೀ ಬುದ್ಧಿಶಾಲಿ ವ್ಯಕ್ತಿಗಳನ್ನು ಆಯ್ಕೆ ಮಾಡಿ, ಅವರಿಗೆ ಜಗತ್ತಿನಲ್ಲಿ ಅಸ್ತಿತ್ವದಲ್ಲಿರುವ ಅತ್ಯಂತ ಮೂರ್ಖತನದ ವಿಷಯ ಯಾವುದೆಂದು ಪತ್ತೆ ಹಚ್ಚಲು ಹೇಳಿದರೆ, ಬಹುಶಃ ಅವರಿಗೆ ಜ್ಯೋತಿಷ್ಯ ಶಾಸ್ತ್ರಕ್ಕಿಂತ ಮೂರ್ಖತನದ ವಿಷಯ ಬೇರೊಂದು ಸಿಗಲಾರದು.'' ಆದರೆ ಈ ಮೂರ್ಖ ವಿಷಯದ ಬಗ್ಗೆ ಮಾಧ್ಯಮಗಳಲ್ಲಿ ಅದರಲ್ಲೂ ಇಂದಿನ ದೃಶ್ಯ ಮಾಧ್ಯಮಗಳಲ್ಲಿ ದಿನನಿತ್ಯ ಪ್ರಸಾರವಾಗುತ್ತಿರುವ ಕಾರ್ಯಕ್ರಮಗಳನ್ನು ನೋಡಿದರೆ ನಮ್ಮ ದೃಶ್ಯ ಮಾಧ್ಯಮಗಳಿಗೂ ಕೂಡ ಮೌಢ್ಯತೆಯ ಸಮೂಹ ಸನ್ನಿ ಆವರಿಸಿಕೊಂಡಿರುವುದು ಸ್ಪಷ್ಟವಾಗಿ ಗೋಚರವಾಗುತ್ತದೆ. ಜನರಲ್ಲಿ ಭವಿಷ್ಯದ ಬಗ್ಗೆ ಅನವಶ್ಯಕ ಭಯ ಕವಿಯುವಂತೆ ಮಾಡಿ ಅವರನ್ನು ಅವರು ನಿರ್ವಹಿಸುತ್ತಿರುವ ಕಾಯಕಗಳಿಂದ ವಿಮುಖರನ್ನಾಗಿಸಿ ಅರ್ಥಹೀನ ವ್ರತ, ಪೂಜೆ, ಪುನಸ್ಕಾರಗಳಲ್ಲಿ ತೊಡಗಿಸಿಕೊಳ್ಳುವಂತೆ ಮಾಡಿ ತರ್ಕಬದ್ಧವಾಗಿ ಯೋಚಿಸದ ಮತಿಗೇಡಿಗಳನ್ನು ಶೋಷಿಸುವ ಹೈಟೆಕ್ ಪ್ರಯತ್ನವಿದು. ಇವರು ಹೇಳುವ ಭವಿಷ್ಯವಾಣಿಗೆ ನವಗ್ರಹಗಳು ಆಧಾರವಂತೆ. ಆದರೆ ಈ ೯ ಗ್ರಹಗಳಲ್ಲಿ ಒಂದು, ನಕ್ಷತ್ರ, ಒಂದು ಉಪಗ್ರಹ ಹಾಗೂ ಮತ್ತೆರಡು ಗ್ರಹಗಳು ಅಸ್ತಿತ್ವದಲ್ಲೇ ಇಲ್ಲ. ತಾವು ಕಲ್ಪಿಸಿಕೊಂಡ ಈ ಕುರುಡು ಪರಿಕಲ್ಪನೆಗಳಿಗೆ ವೈಜ್ಞಾನಿಕ ಆಯಾಮ ಕೊಡಲು ತಾವು ಕಲಿತಿರುವ ಎಲ್ಲ ಬಗೆಯ ಮಾತಿನ ಚಮತ್ಕಾರಗಳನ್ನು ಈ ಮಂದಿ ಯಾವುದೇ ಸಂಕೋಚವಿಲ್ಲದೆ ಪ್ರದರ್ಶಿಸುತ್ತಾರೆ. ಇದಕ್ಕೆ ನಮ್ಮ ಮಾಧ್ಯಮಗಳು ಮತ್ತಷ್ಟು ಒಗ್ಗರಣೆ ಹಾಕಿ ರಂಜನೀಯವಾಗಿ ಪ್ರಸಾರ ಮಾಡುತ್ತವೆ ಹಾಗೂ ಆ ಮೂಲಕ ಜನರ ಮೌಢ್ಯವನ್ನೇ ಬಂಡವಾಳವಾಗಿಸಿಕೊಂಡು ತಮ್ಮ ಟಿ.ಆರ್.ಪಿ. ಹೆಚ್ಚಿಸಿಕೊಳ್ಳಲು ಪ್ರಯತ್ನಿಸುತ್ತಿವೆ. ನಮ್ಮ ದೇಶದ ಸಂವಿಧಾನದ ಅನುಚ್ಛೇದ ೫೧-ಎ (ಹೆಚ್)ನಲ್ಲಿ ವೈಜ್ಞಾನಿಕ ಮನೋಭಾವ, ಮಾನವತೆ, ಪ್ರಶ್ನಿಸುವ ಹುರುಪು ಹಾಗೂ ಸುಧಾರಣಾ ಪ್ರವೃತ್ತಿಯನ್ನು ಬೆಳೆಸಿಕೊಳ್ಳುವುದು ಪ್ರತಿಯೊಬ್ಬ ಭಾರತೀಯ ನಾಗರಿಕನ ಕರ್ತವ್ಯವೆಂದು ಹೇಳಲಾಗಿದೆ. ಮಾಧ್ಯಮಗಳಲ್ಲಿ ಭವಿಷ್ಯವಾಣಿಯನ್ನು ರೋಚಕವಾಗಿ ಪ್ರಸಾರ ಮಾಡುವುದು ಸಂವಿಧಾನವನ್ನು ಉಲ್ಲಂಘನೆ ಮಾಡಿದಂತಾಗುವುದಿಲ್ಲವೆ? ತಾನೇ ಮುಹೂರ್ತ ನಿಶ್ಚಯಿಸಿ ಮದುವೆ ಮಾಡಿದ ಮಗಳು ವಿಧವೆಯಾದಾಗ ನೊಂದ ಭಾಸ್ಕರಾಚಾರ್ಯರು ತಮ್ಮ ಸಿದ್ಧಾಂತ ಶಿರೋಮಣಿ ಗ್ರಂಥದಲ್ಲಿ ಹೇಳುತ್ತಾರೆ: ''ಕರ್ತವ್ಯೇ ಸ್ಫುಟ ವಾಸನಾ ಪ್ರಕಥನೇ ಪೂರ್ವೋಕ್ತಿ ವಿಶ್ವಾಸಿನಾಂ/ತತ್ತದ್ದೂಷಣ ಮಂತರೇಣ ನಿತರಾಂ ನಾಸ್ತಿ ಪ್ರತೀತೀರ್ಯತಃ.'' ಇದರರ್ಥ ಸಂಪ್ರದಾಯದಲ್ಲಿ (ಕುರುಡು) ನಂಬಿಕೆಯುಳ್ಳವರ ಮುಂದೆ ಸತ್ಯವನ್ನು ನಿರ್ದಾಕ್ಷಿಣ್ಯವಾಗಿ ಹೇಳಲೇಬೇಕಾಗುತ್ತದೆ. ಹಿಂದಿನವರ ಎಲ್ಲ ಹೇಳಿಕೆಗಳಲ್ಲಿರುವ ಪ್ರತಿಯೊಂದು ದೋಷವನ್ನು ಖಂಡಿಸದೆ ನಂಬಲು ಸಾಧ್ಯವಿಲ್ಲ. ಹಿಂದಿನ ಆಚಾರ್ಯರ ಗ್ರಂಥಗಳನ್ನು ಉದ್ಗರಿಸುತ್ತಾ ಜ್ಯೋತಿಷ್ಯವನ್ನು ವೈಭವೀಕರಿಸುವವರಿಗೆ ಭಾಸ್ಕರಾಚಾರ್ಯರ ಈ ನುಡಿಮುತ್ತುಗಳು ಮಾತ್ರ ಕಣ್ಣಿಗೇ ಬೀಳುವುದಿಲ್ಲ.

ಭವಿಷ್ಯವಾಣಿಯ ಬಗ್ಗೆ ಸ್ವಾಮಿ ವಿವೇಕಾನಂದರು ಹೇಳಿದ ದೃಷ್ಟಾಂತ ಕಥೆಯೊಂದು ಇಲ್ಲಿ ಪ್ರಸ್ತುತವೆನಿಸುತ್ತದೆ. ಒಬ್ಬ ರಾಜ ತನಗೆ ಶೀಘ್ರ ಸಾವು ಸಂಭವಿಸುವುದಾಗಿ ಹೇಳಿದ ಜ್ಯೋತಿಷಿಯೊಬ್ಬನ ಮಾತಿನಿಂದ ಕಂಗೆಟ್ಟು ಪೂರ್ಣವಾಗಿ ಕರ್ತವ್ಯದಿಂದ ವಿಮುಖನಾದ. ವಿಷಯ ತಿಳಿದ ಮಂತ್ರಿ ರಾಜನೆದುರು ಆ ಜ್ಯೋತಿಷಿಯನ್ನು ಕರೆಸಿ, ನಿನ್ನ ಆಯುಷ್ಯವೆಷ್ಟು ಹೇಳು ಎಂದು ಅವನನ್ನು ಕೇಳಿದಾಗ, ಆತ ತನಗೆ ೮೦ ವರ್ಷ ಆಯಸ್ಸು ಎಂದು ಉತ್ತರಿಸಿದ. ತಕ್ಷಣವೇ ಮಂತ್ರಿ ತನ್ನ ಒರೆಯಿಂದ ಖಡ್ಗವನ್ನಿರಿದು ಜ್ಯೋತಿಷಿಯ ಶಿರಚ್ಛೇದ ಮಾಡಿದ. ನಂತರ ರಾಜನನ್ನು ಕುರಿತು, ಪ್ರಭು ತನ್ನ ಸಾವು ಈ ಕ್ಷಣವೇ ಸಂಭವಿಸುತ್ತಿದೆಯೆಂಬ ತನ್ನ ಭವಿಷ್ಯವನ್ನೇ ಅರಿಯದ ಈ ಜ್ಯೋತಿಷಿ ನಿಮ್ಮ ಭವಿಷ್ಯದ ಬಗ್ಗೆ ಏನು ಹೇಳಲು ಸಾಧ್ಯ ಎಂದು ವಿವರಿಸಿ ರಾಜನ ಸಾವಿನ ಭಯದ ಆತಂಕವನ್ನು ದೂರ ಮಾಡುತ್ತಾನೆ. ೧೯೯೪ರಲ್ಲಿ ಬೆಂಗಳೂರಿನಲ್ಲಿ ನಡೆದ ಭಾರತೀಯ ಜ್ಯೋತಿಷ್ಯ ಶಾಸ್ತ್ರಜ್ಞರ ಸಮ್ಮೇಳನವೊಂದು ನಡೆದಾಗ ಅಲ್ಲಿ ಹಾಜರಿದ್ದ ವಿಚಾರವಾದಿ ಸಂಘಟನೆಯ ಸದಸ್ಯರೊಬ್ಬರು ತಾನು ದೇಶದ ೫ ಪ್ರಮುಖ ನಾಯಕರುಗಳ ಜಾತಕವನ್ನು ನೀಡುವುದಾಗಿ, ಅದನ್ನು ಅಧ್ಯಯನ ಮಾಡಿ ಅವರು ಎಲ್ಲಿ - ಯಾವಾಗ - ಹಾಗೂ ಹೇಗೆ ಸಾಯುತ್ತಾರೆ ಎಂಬುದನ್ನು ಹೇಳಿದರೆ ಲಕ್ಷಾಂತರ ರೂಪಾಯಿ ಪಣದ ಹಣದ ಜೊತೆಗೆ ತಾನು ಜೀವಮಾನಪರ್ಯಂತ ಅವರ (ಜ್ಯೋತಿಷಿಗಳ) ಅಡಿಯಾಳಾಗುವುದಾಗಿ ಸವಾಲೆಸೆದಿದ್ದರು. ಇದರಿಂದ ಪ್ರತಿಕೂಲ ಪರಿಣಾಮಗಳಾಗುವ ಸಾಧ್ಯತೆಯಿರುವುದರಿಂದ ಹಾಗೆ ಬಹಿರಂಗವಾಗಿ ಹೇಳಲು ಆಗುವುದಿಲ್ಲ ಎಂದು ಹೇಳಿದ ಜ್ಯೋತಿಷಿಗಳಿಗೆ, ಅವರು ಬರೆದುಕೊಟ್ಟ ಜ್ಯೋತಿಷ್ಯವನ್ನು ಬ್ಯಾಂಕ್‌ನ ಲಾಕರ್‌ನಲ್ಲಿಡುವುದಾಗಿಯೂ, ಸಂಬಂಧಿಸಿದ ವ್ಯಕ್ತಿ ಮೃತಪಡುವವರೆಗೆ ಅದನ್ನು ತೆಗೆಯುವುದಿಲ್ಲವೆಂದು ವಾದಿಸಿದ ಆ ವಿಚಾರವಾದಿಗೆ ಸಿಕ್ಕಿದ್ದು ನಕಾರಾತ್ಮಕ ಉತ್ತರ ಹಾಗೂ ಏಟುಗಳ ಬಹುಮಾನ. ಅಲ್ಲದೆ ಅವರ ರಕ್ಷಣೆಗೆ ಹೋದ ಪತ್ರಕರ್ತನಿಗೂ ದೊರೆತದ್ದು ಧರ್ಮದೇಟುಗಳು? ಇದೆಲ್ಲಾ ವಿವರಗಳು ಪತ್ರಿಕೆಗಳಲ್ಲಿ ವರದಿಯಾಗಿದ್ದವು. ಇಲ್ಲಿ ಜ್ಯೋತಿಷಿಗಳಿಗೆ ಭವಿಷ್ಯವಾಣಿ ನುಡಿಯುವುದು ಗೊತ್ತಿದೆಯೋ ಇಲ್ಲವೋ ಆದರೆ ಜ್ಯೋತಿಷ್ಯ ಶಾಸ್ತ್ರಜ್ಞರ ಆ ಸಮ್ಮೇಳನ ಪ್ರದೇಶವನ್ನು ಪ್ರವೇಶಿಸಿ ಹೀಗೆ ಪ್ರಶ್ನಿಸಿದರೆ ತನಗೆ ಈ ಬಗೆಯ ಏಟುಗಳು ಉಡುಗೊರೆಯಾಗಿ ದೊರೆಯುತ್ತದೆಂಬ ಭವಿಷ್ಯ ಮಾತ್ರ ವಿಚಾರವಾದಿ ಗೆಳೆಯರಿಗೆ ಖಂಡಿತವಾಗಿ ಗೊತ್ತಿದ್ದಿರಲೇಬೇಕು.

ಅಮೆರಿಕೆಗೆ ಸ್ಯಾಂಡಿ ಚಂಡಮಾರುತ ಹಾಗೂ ಭಾರತದ ಪೂರ್ವ ಕರಾವಳಿ ಪ್ರದೇಶಗಳಿಗೆ ನೀಲಂ ಚಂಡಮಾರುತ ಅಪ್ಪಳಿಸುವ ಸಹಜ ಪ್ರಾಕೃತಿಕ ವಿದ್ಯಮಾನಗಳು ಸಂಭವಿಸಿದಾಗ ಅವುಗಳನ್ನು ಡಿಸೆಂಬರ್ ೨೦೧೨ಕ್ಕೆ ನಡೆಯಲಿರುವ ಜಗತ್ ಪ್ರಳಯದ ಸೂಚಕವೆಂದು ಪದೇ ಪದೇ ಸುದ್ದಿಯನ್ನು ರೋಚಕವಾಗಿ ಪ್ರಸಾರ ಮಾಡಿ ಮಾಧ್ಯಮಗಳು ತಮ್ಮ ಅವೈಜ್ಞಾನಿಕತೆ ಮೆರೆದುದಂತೂ ಭಾರತದ ಸಂವಿಧಾನದ ಆಶಯಗಳ ಅಣಕು ಪ್ರದರ್ಶನದಂತಿತ್ತು. ಇದಕ್ಕೆ ಬದಲಾಗಿ ಭಾರತ ಹಾಗೂ ಅಮೆರಿಕೆಯಲ್ಲಿ ಇಂತಹ ಭೀಕರ ಅನಾಹುತಗಳ ಬಗ್ಗೆ ಮುನ್ಸೂಚನೆ ನೀಡುವ ವೈಜ್ಞಾನಿಕ ಕಣ್ಗಾವಲು ವ್ಯವಸ್ಥೆಯ ಬಗ್ಗೆ ಜನರ ಗಮನ ಸೆಳೆಯುವ ಹಾಗೂ ಅರಿವುಂಟು ಮಾಡುವ ಜವಾಬ್ದಾರಿಯುತ ಪ್ರಯತ್ನವನ್ನು ನಮ್ಮ ಮಾಧ್ಯಮಗಳು ಮಾಡಿದ್ದರೆ ಶ್ಲಾಘನೀಯವೆನಿಸುತ್ತಿತ್ತು. ದಿನನಿತ್ಯ ಭವಿಷ್ಯ ಹೇಳುವ ಡೋಂಗಿ ಮುಖಗಳನ್ನು ತೋರಿಸುತ್ತಾ, ಪತ್ರಿಕೆಗಳಲ್ಲಿ ದಿನಭವಿಷ್ಯದ ಸುದ್ದಿಗಳನ್ನು ಪ್ರಕಟಿಸುತ್ತಾ ಜನರನ್ನು ಸಮೂಹ ಸನ್ನಿಗೆ ದೂಡುವ ವ್ಯವಸ್ಥಿತ ಪ್ರಯತ್ನಗಳಿಗೆ ಬದಲಾಗಿ, ಮಾನವ ಪ್ರಯತ್ನದ ಮಹತ್ವವನ್ನು ತಿಳಿಸಿ, ಕಾಯಕತತ್ವದ ಹಿರಿಮೆಯನ್ನು ಅರಿವು ಮಾಡಿಕೊಡುವ, ಆ ಮೂಲಕ ಶ್ರಮಿಕ ಸಮಾಜದಿಂದ ಕೂಡಿದ ಬಲಿಷ್ಠ ದೇಶಕಟ್ಟುವ ಕೆಲಸವನ್ನು ಮಾಡುವ ಗುರುತರ ಜವಾಬ್ದಾರಿ ತಮ್ಮ ಮೇಲಿರುವುದಾಗಿ ನಮ್ಮ ಸುಶಿಕ್ಷಿತ ಮಾಧ್ಯಮ ಸ್ನೇಹಿತರಿಗೆ ಏಕೆ ಅರ್ಥವಾಗುತ್ತಿಲ್ಲ ಎಂಬುದೇ ಆಶ್ಚರ್ಯಕರವಾದ ಸಂಗತಿ.



**ಸಿದ್ದರಾಜು, ಕೊತ್ತತ್ತಿ**
ಅಧ್ಯಕ್ಷರು, ವಿಜ್ಞಾನ ಮತ್ತು ಪರಿಸರ ಶಿಕ್ಷಣ ಅಕಾಡೆಮಿ
ನಂ. ೧೩೨೪/೨೫೫ಎ, ೨ನೇ ಕ್ರಾಸ್, ನೆಹರು ನಗರ, ಮಂಡ್ಯ - ೫೭೧ ೪೦೧

---

ಇಂದು ಮಾಧ್ಯಮಗಳಲ್ಲಿ- ಅದರಲ್ಲೂ ಟಿ. ವಿ. ಚಾನೆಲ್‌ಗಳಲ್ಲಿ- ಪೈಪೋಟಿಯಿಂದೆಂಬಂತೆ ರಾಶಿಫಲ, ಭವಿಷ್ಯ, ಜ್ಯೋತಿಷ್ಯ, ಹಸ್ತರೇಖೆ ಮುಂತಾಗಿ ಜನರಲ್ಲಿ ಮೂಢನಂಬಿಕೆಗಳನ್ನು ಬೆಳೆಸಿ ಮೋಸಗೊಳಿಸುವ ಧಂದೆ ವ್ಯವಸ್ಥಿತವಾಗಿ ನಡೆದಿದೆ, ಮಿತಿಮೀರಿ ಬೆಳೆದಿದೆ. ವಿಜ್ಞಾನದ ಕೊಡುಗೆಯಾದ ದೂರದರ್ಶನದಂತಹ ಉತ್ತಮ ಮಾಧ್ಯಮವೊಂದನ್ನು ಅಸಂಬದ್ಧ ಕಾರ್ಯಕ್ರಮಗಳಿಂದ ಕುಲಗೆಡಿಸಿರುವ ನತದೃಷ್ಟರು ನಾವು ಎಂದರೂ ತಪ್ಪಲ್ಲ. ಕೂಡುದೊಡ್ಡಿಗೆ ದನಗಳನ್ನಟ್ಟಿಕೊಂಡು ಹೋಗುವಂತೆ ಜನರನ್ನು ಬಲತ್ಕಾರವಾಗಿಯೋ ಹಾದಿತಪ್ಪಿಸಿಯೋ ಪೊಳ್ಳುನಂಬಿಕೆಗಳತ್ತ ಎಳೆದೊಯ್ಯಲಾಗುತ್ತದೆ. ಕಣ್ಮುಚ್ಚಿಕೊಂಡು ಶ್ಲೋಕ ಹೇಳುತ್ತಾ ಆಕರ್ಷಕ ಮಾತು - ಹಾವಭಾವ - ವೈಯಾರ - ವಿನೀತಭಾವದಿಂದ ಕಾಣಿಸಿಕೊಳ್ಳುವ ಮುಖ್ಯ ಮಾತಿನ ಮೋಡಿಗಾರ ಮತ್ತು ಆತನನ್ನನುಸರಿಸಿ ಪಾಲ್ಗೊಳ್ಳುವ 'ಸುಂದರ ಯುವತಿ' ತಮ್ಮ ಕಾರ್ಯಕ್ರಮಗಳ ಮೂಲಕ ಜನರನ್ನು ಮರುಳು ಮಾಡಿ ತಪ್ಪುದಾರಿಗೆಳೆಯುವ ಹೀನಕೃತ್ಯದಲ್ಲಿ ನಿರತರಾಗಿದ್ದಾರೆಂದು ಧಾರಾಳವಾಗಿ ಹೇಳಬಹುದು.

ಕಾರ್ಯಕ್ರಮಕ್ಕೆ ಮಧ್ಯದಲ್ಲೊಂದು ಫೋನ್ ಕರೆ: ''ಗುರೂಜಿ, ತುಂಬಾನೇ ಕಷ್ಟ-ನಷ್ಟ ಆಗ್ತಿದೆ. ಕೈ ಇಟ್ಟಲ್ಲೆಲ್ಲ ಸೋಲೇ. ಯಾವುದೂ ಕೈ ಹತ್ತುತ್ತಿಲ್ಲ. ಸಣ್ಣ ನೌಕರಿ, ಆರ್ಥಿಕ ಅಡಚಣೆ, ಹತ್ತಾರು ಕಡೆಗಳಿಂದ ಸಮಸ್ಯೆಗಳೇ ಬೆನ್ನು ಹತ್ತಿವೆ; ಮಾಡುವುದೇನೆಂದು ತೋಚ್ತಾ ಇಲ್ಲ.'' ಹೌದು, ಗುರೂಜಿಗೆ ಇಂಥ ಪ್ರಶ್ನೆಗಳೇ ಬೇಕು!

## ಓದುಗರ ವೇದಿಕೆ

ನಿಮ್ಮ ತೊಂದರೆ ಸಮಸ್ಯೆಗಳನ್ನು ದೊಡ್ಡದನ್ನಾಗಿಸಿ ಅದನ್ನೇ ಬಂಡವಾಳವಾಗಿಸಿ, ನಿಮ್ಮಿಂದಲೇ ವ್ರತ-ಹೋಮ - ಅಭಿಷೇಕ - ಪೂಜೆಗಳನ್ನು ಮಾಡಿಸುತ್ತಾರೆ. ಇವರ ಪೂರ್ವಿಕರೇ ಬರೆದಿಟ್ಟದ್ದನ್ನು ಶಾಸ್ತ್ರಗಳು ಎಂದು ನಂಬಿಸುತ್ತಾರೆ. ಎಲ್ಲಿ ಕಂಗಾಲಾಗಿ ದಿಕ್ಕೆಟ್ಟು ಮಾಡುವುದೇನೆಂದು ತೋಚದ ಮುಗ್ಧ ಜನರಿರುತ್ತಾರೋ ಅಲ್ಲೆಲ್ಲ ಜ್ಯೋತಿಷ್ಯ - ಕಾಳಸರ್ಪದೋಷ - ವಾಸ್ತುಪೀಡೆ - ಗ್ರಹಗತಿಗಳ ಅನಿಷ್ಟಗಳು ಮೇಲ್ಗೈ ಪಡೆದು ಜನರನ್ನು ಇನ್ನಷ್ಟು ಹಿಂಡಿ ಬುದ್ಧಿಗೆ ಮಂಕು ಕವಿಸುತ್ತವೆ. ನಿಮ್ಮ ಎಲ್ಲ ದೋಷನಿವಾರಣೆಗೆ ಅವರ ಸಲಹೆ ದೇಗುಲದರ್ಶನ - ಪೂಜೆ ಪುನಸ್ಕಾರ. ಅಲ್ಲಿ ಹೇರಳ ಧನಕನಕಗಳ ಅಭಿಷೇಕ ಜನರಿಂದ !

ದೇಶದಲ್ಲಿ ಸಮಸ್ಯೆಗಳಿವೆ, ನಿಜ. ದುರ್ಬಲರನ್ನು ತುಳಿದು ಬಲಾಢ್ಯರು ಸಂಪತ್ತನ್ನು ಅತಿಯಾಗಿ ಶೇಖರಿಸಿಟ್ಟುಕೊಂಡ ಸಮಾಜದಲ್ಲಿ ದೀನರಿಗೆ, ಬಡಜನರಿಗೆ ನೋವು-ಸಂಕಟಗಳೇ ನಿತ್ಯದ ಸಂಗಾತಿಗಳು. ಎಲ್ಲ ಕಡೆ ಸೋತು ಸುಣ್ಣವಾಗಿ ಯಾರಾದರೂ ಸಹಾಯ ಮಾಡಿದರೆ ಸಾಕೆಂಬ ಸ್ಥಿತಿ ತಲುಪಿರುತ್ತಾರೆ. ಪ್ರತಿಯೊಬ್ಬರೂ ನೆಮ್ಮದಿಯನ್ನೇ ಬಯಸುತ್ತಾರೆ. ಇದು ಮಧ್ಯಮ ವರ್ಗದವರ ಗೋಳು. ಭವಿಷ್ಯಕಾರರಿಗೆ ಎಲ್ಲರನ್ನೂ ಮೋಡಿ ಮಾಡುವ ಸಾಮರ್ಥ್ಯವಿದೆ, ಮಾತಿನ ವೈಖರಿ ಹೇಗಿರುತ್ತದೆಂದರೆ ಯೋಚನಾ ಲಹರಿ ಮುಗ್ಗರಿಸಿ ಅವರು ಹೇಳಿದಂತೆ ಮಾಡಿ ನೋಡೋಣ, ಕಷ್ಟನಿವಾರಣೆಯಾಗುವುದಾದರೆ ಪೂಜೆ ಮಾಡಿಸಿದಲ್ಲಿ ತಪ್ಪೇನು – ಎಂಬ ರಾಜಿಸೂತ್ರಕ್ಕೆ ಮನಸ್ಸು ಒತ್ತಾಯಿಸುತ್ತದೆ. ಜ್ಯೋತಿಷಿಗಳು ತಮ್ಮ ಸಲಹೆಗಳನ್ನು ನೀಡುತ್ತ ಪ್ರತಿ ಚಾನೆಲ್‌ಗಳಲ್ಲೂ ವ್ಯವಸ್ಥಿತವಾಗಿ ತಮ್ಮ ವಿಳಾಸ, ಮೊಬೈಲ್ ನಂಬರ್‌ಗಳನ್ನು ನೀಡಿ ಸಂಪರ್ಕಿಸಲು ಕೋರುತ್ತಾರೆ. ಅವರು ನಿಮ್ಮನ್ನು ಹೆದರಿಸುವುದೇನೆಂದರೆ : ‘‘ನೋಡೀ, ಚಂದ್ರನು ಏಳನೇ ಮನೇಲಿದ್ದು ವಕ್ರನಾಗಿದ್ದಾನೆ. ಶನಿಯು ಏಳೂವರೆ ವರ್ಷ ಕಾಡ್ತಾನೆ. ಶನಿ ಹರಿಶ್ಚಂದ್ರ, ನಳ ಮಹರಾಜನನ್ನೇ ಬಿಟ್ಟಿಲ್ಲ, ನೀನ್ಯಾವ ಲೆಕ್ಕ ? ತ್ರಿಪಾದ ನಕ್ಷತ್ರಗಳಲ್ಲಿ ಸತ್ತರೆ ಆ ಮನೆಯಲ್ಲಿ ಮೂವರು, ಧನಿಷ್ಠಾ ಪಂಚಕದಲ್ಲಿ ಸತ್ತರೆ ಐದು ಜನರು ವರ್ಷದೊಳಗೆ ಸಾಯ್ತಾರೆ. ಗಂಡಸರಿಗೆ ಕುಜ-ರಾಹುಸಂಧಿ ಪ್ರಾಣಾಂತಿಕ, ಹೆಣ್ಣುಮಕ್ಕಳಿಗೆ ಶುಕ್ರಾದಿತ್ಯ ಸಂಧಿ ಸರ್ವನಾಶ. ಮೂಲಾ ನಕ್ಷತ್ರ, ಉತ್ತರಾ ನಕ್ಷತ್ರದ ಹೆಣ್ಣುಮಕ್ಕಳಿಗೆ ಭವಿಷ್ಯ ಇಲ್ಲ!’’ ಎಷ್ಟೆಲ್ಲಾ ದೋಷಗಳಿದ್ದರೂ ಶಾಂತಿ ಮಾಡಿಸಿದರೆ (ಲಂಚಕೊಟ್ಟರೆ) ಎಲ್ಲವೂ ಶುಭವಾಗುತ್ತದೆ !

ಇನ್ನೇನು, ನಿಮ್ಮ ಜೇಬಿನಿಂದ ಅವರ ಜೇಬಿಗೆ ದಕ್ಷಿಣೆಯ ರೂಪದಲ್ಲಿ ಹಣದ ವರ್ಗಾವಣೆ. ಅವರವರ ಆರ್ಥಿಕ ಮಟ್ಟಕ್ಕೆ ತಕ್ಕಂತೆ ಪರಿಹಾರದ ವಿಧಾನಗಳು ಜ್ಯೋತಿಷಿ, ಪುರೋಹಿತರ ಬಳಿ ಇವೆ. ನಿಮಗೆ ಅದರಿಂದ ಒಳ್ಳೆಯದಾಗೇ ಆಗುತ್ತದೆಂಬ ಭರವಸೆಯನ್ನೇನೂ ಅವರು ನೀಡುವುದಿಲ್ಲ. ಏನೋ ಪಾಪ, ಹೊಟ್ಟೆಪಾಡು ಬದುಕಿಕೊಳ್ಳಲಿ ಎಂದು ಬಿಟ್ಟರೆ ಅವರ ಕಾಟ ಇತ್ತೀಚೆಗೆ ಸೊಳ್ಳೆಗಳ ಕಾಟಕ್ಕಿಂತ ಜಾಸ್ತಿಯಾಗಿದೆ. ನೀವು ಬೆಳಗ್ಗೆ ಏಳಬೇಕಾದ ರೀತಿಯಿಂದ ರಾತ್ರೆ ಮಲಗುವವರೆಗೂ ಅವರ ನಿರ್ದೇಶನಗಳನ್ನು ಪಾಲಿಸಬೇಕಾಗುತ್ತದೆ. ನೀವು ಧರಿಸಬೇಕಾದ ಬಟ್ಟೆಯ ಬಣ್ಣ, ಕಲ್ಲಿನ ಉಂಗುರ, ತಾಯಿತ, ಹೊರಡಬೇಕಾದ ದಿಕ್ಕು, ಜಪಿಸುವ ಸ್ತೋತ್ರ... ಅಬ್ಬಬ್ಬಾ ! ನೀವೇಕೆ ಅವರು ಹೇಳಿದಂತೆ ಕೇಳಬೇಕು ? ನೀವು ಸ್ವತಂತ್ರವಾಗಿ ಯೋಚಿಸಲಾರಿರಾ ? ಯಾಕೆ ಹೀಗೆ ? ಇಲ್ಲಿ ಕೇಳಿ – ಮಿಲಿಯಾಂತರ ಪ್ರಭೇದಗಳಿಂದ ಕೂಡಿದ ಜೀವವೈವಿಧ್ಯವಿರುವ ಈ ಜಗತ್ತಿನಲ್ಲಿ ಗ್ರಹಗತಿಗಳು ಕೇವಲ ಮನುಷ್ಯ ಜೀವಿಗೆ ಮಾತ್ರ ಸೀಮಿತವೇ ? ಯೋಚಿಸಿ, ಇತರ ಪ್ರಾಣಿಗಳನ್ನು ಗ್ರಹಗಳು ಕಣ್ಣೆತ್ತಿಯೂ ನೋಡುವುದಿಲ್ಲವೆ ? ಕಾಟ ಕೊಡುವುದಿಲ್ಲವೆ ?

‘‘ಗುರುಗಳೇ, ನೀವು ಹೇಳಿದಂತೆ ಮಾಡುತ್ತಿದ್ದೇನೆ, ಪ್ರಯೋಜನ ಇಲ್ಲ. ನನ್ನ ಹಣ, ಸಮಯ ವ್ಯರ್ಥ ! ತೊಂದರೆ ಹೆಚ್ಚಾಗಿದೆ’’ ಎಂದು ನೀವು ಕರೆ ಮಾಡಿದರೆ ಅದು ಅಲ್ಲಿ ಪ್ರಸಾರ ಆಗುವುದಿಲ್ಲ. ಅದು ಕಿರಿಕಿರಿ ಕರೆ. ಪ್ರಸಾರ ಮಾಡಿದರೆ ಅವನ ಗ್ರಹಚಾರ ಚೆನ್ನಾಗಿರುವುದಿಲ್ಲ.

‘‘ಜನಗಳೇ, ನಿಮ್ಮ ಬಡತನಕ್ಕೆ - ಸಮಸ್ಯೆಗೆ ಕಾರಣ ಸಾವಿರಾರು ಕೋಟಿ ಮೈಲಿಗಳ ಅಂತರದಲ್ಲಿರುವ ಗ್ರಹಗಳಲ್ಲ. ಈ ಭೂಮಿಯ ಮೇಲೆ ಇರುವ ದಶಮ ಗ್ರಹಗಳೇ. ಎಲ್ಲರಲ್ಲಿ ಹಂಚಿಕೊಂಡಿರಬೇಕಾದ ಸಂಪತ್ತು ಕೆಲವೇ ಜನರಲ್ಲಿ ಶೇಖರಗೊಂಡಿದೆ. ಧನಸಂಗ್ರಹ ನೆಮ್ಮದಿಯನ್ನು ಕೊಡುವುದಿಲ್ಲ. ಎಷ್ಟೇ ಕೊಟ್ಟಾದರೂ ಕೊಂಡುಕೊಳ್ಳುವ ಶ್ರೀಮಂತರಿಂದಾಗಿ ಬೆಲೆಗಳು ಇಳಿಯದೆ ನಿಮಗೆ ಯಾವುದೂ ಎಟಕುತ್ತಿಲ್ಲ. ಬಲಿಷ್ಠರು ಎಲ್ಲವನ್ನೂ ಕಬಳಿಸುತ್ತಿದ್ದಾರೆ. ಯಾವುದೋ ಕಾರಣದಿಂದ ನಿಮಗೆ ಸಿಗಬೇಕಾದ ಎಲ್ಲವೂ

ಕೆಲವೇ ಕೆಲವರಲ್ಲಿ ಶೇಖರಗೊಂಡಿದೆ'' ಎನ್ನುವ ಸತ್ಯ ಕೂಗಿ ಹೇಳಬೇಕಾದವರ ಜಾಗದಲ್ಲಿ ನಮ್ಮ ''ದುರದೃಷ್ಟ'' ಎಂಬಂತೆ ಜ್ಯೋತಿಷಿಗಳು ವಕ್ಕರಿಸಿದ್ದಾರೆ. ಅವರನ್ನು ಸರ್ವಥಾ ನಂಬಬೇಡಿ !

**ಇಂದಿರಾ ಕುಮಾರಿ**
ನಂ. ೩೪/೧೧, ೨ನೇ ಅಡ್ಡರಸ್ತೆ, ೨ನೇ ಮುಖ್ಯರಸ್ತೆ, ಬಾಂಬೆ ಡೈಯಿಂಗ್ ಸಮೀಪ
ಯಶವಂತಪುರ, ಬೆಂಗಳೂರು - ೫೬೦ ೦೨೨

ಭವಿಷ್ಯ, ಮೂಢನಂಬಿಕೆಗಳಿಂದ ದೂರವಾಗಿದ್ದ ನಾನು ಪತ್ರಿಕೆಗಳಲ್ಲಿ ಬರುವ ಭವಿಷ್ಯದ ಕಡೆಗೆ ಗಮನ ಕೊಡುತ್ತಿರಲಿಲ್ಲ. ಜನ ಸಾಹಿತ್ಯದ ಪರವಾಗಿದ್ದ ದಿ.ಬ.ಮ. ಏಳುಕೋಟೆಯವರು ಪತ್ರಿಕೆ ಓದುವಾಗ ನನ್ನನ್ನು ವಿಚಾರಿಸಿದರು. ''ಪಾಟೀಲ, ನೀನು ಭವಿಷ್ಯ ಓದುತ್ತಿಯೊ ?'' ಎಂದು. ನಾನು ಇಲ್ಲ ಎಂದು ಹೇಳಿದೆ. ನೀನೊಬ್ಬ ಕಠೋರ ಮನುಷ್ಯ ಎಂದರು. ಅವರೂ ತಮ್ಮ ಜನಜೀವಾಳ ಪತ್ರಿಕೆಯಲ್ಲಿ ಭವಿಷ್ಯ ಪ್ರಕಟಿಸುತ್ತಿರಲಿಲ್ಲ. ಹಾಗೆ 'ಹೊಸತು' ಮಾಸಿಕವೂ ಭವಿಷ್ಯವನ್ನು ಪ್ರಕಟಿಸುತ್ತಿಲ್ಲ. ನಾನು ಭವಿಷ್ಯ, ಕುಂಡಲಿ ವಿಚಾರಿಸದೆ ಮದುವೆಯಾದವ. ಬೆಕ್ಕು ಅಡ್ಡ ಹಾಯ್ದುಹೋದಾಗ ನನ್ನ ಪತ್ರಿಕಾ ಮಿತ್ರ ಆ ದಾರಿಬಿಟ್ಟು ಹಿಂದಕ್ಕೆ ಓಡಿ ಹೋದ ಘಟನೆ ನನಗೆ ನೆನಪಿದೆ.

ಇಂದು ಮಾಧ್ಯಮಗಳಲ್ಲಿ ಭವಿಷ್ಯ ವಾಣಿ ಅತಿರೇಕಕ್ಕೆ ತಲುಪಿದೆ. ದಿನಪತ್ರಿಕೆ, ಸಾಪ್ತಾಹಿಕ, ಮಾಸಿಕ, ವಿಶೇಷ ಸಂಚಿಕೆಗಳು ಕೂಡ ಭವಿಷ್ಯವಾಣಿಯಿಲ್ಲದೆ ಪ್ರಕಟವಾಗುತ್ತಿಲ್ಲ. ಯಾಕೆಂದರೆ ಪತ್ರಿಕೆಗಳು ಮಾರಾಟವಾಗಬೇಕಲ್ಲವೆ ? ಇಂದು ಟಿ.ವಿ. ಮಾಧ್ಯಮಗಳು ಭವಿಷ್ಯವಾಣಿಯಿಂದಾಗಿ ಜನರನ್ನು ದಿಕ್ಕು ತಪ್ಪಿಸುತ್ತಲಿವೆ. ಎಲ್ಲ ಟಿ.ವಿ. ಚಾನಲ್‌ಗಳಿಗೆ ಭವಿಷ್ಯವಾಣಿ ಬೇಕೇಬೇಕು. ಮಹಿಳೆಯರಂತೂ ತಮ್ಮ ಮನೆಗೆಲಸ ಬಿಟ್ಟು ಭವಿಷ್ಯವಾಣಿ ನೋಡಲು ತಾಸುಗಟ್ಟಲೆ ಕುಳಿತುಬಿಡುತ್ತಾರೆ. ಯಾರಾದರೂ ಅದನ್ನು ಬದಲಿಸಿದರೆ ದೊಡ್ಡ ಜಗಳವೇ ಮನೆಯಲ್ಲಿ ಆರಂಭವಾಗಿ ಮನೆಯ ವಾತಾವರಣವೇ ಕೆಟ್ಟು ಹೋಗುತ್ತಲಿದೆ. ಇಷ್ಟು ಕೆಟ್ಟ ಪರಿಣಾಮವನ್ನು ಟಿ.ವಿ.ಗಳು ಜನರಲ್ಲಿ ವಿಶೇಷವಾಗಿ ಮಹಿಳೆಯರಲ್ಲಿ ಬಿತ್ತುತ್ತಲಿವೆ. ಟಿ.ವಿ.ಯಲ್ಲಿ ಭವಿಷ್ಯ ಹೇಳುವ ಜ್ಯೋತಿಷಿಯೊಬ್ಬ ಯಾರ ಹಣೆಯ ಮೇಲೆ ಕುಂಕುಮವಿರುವುದಿಲ್ಲವೊ ಆ ಹಣೆ ಸ್ಮಶಾನವೆಂದು ಸಾರಿದ. ಒಬ್ಬೊಬ್ಬ ಜ್ಯೋತಿಷಿ ಹೇಳುವ ಮಾತಿಗೆ ಮರುಳಾಗಿ ಅನೇಕ ಹೆಂಗಳೆಯರು ಮೂರು ಗಂಟೆಗೋ ನಾಲ್ಕು ಗಂಟೆಗೋ ರಾತ್ರಿಯಲ್ಲಿ ಎದ್ದು ಗಿಡಗಳನ್ನು ಸುತ್ತು ಹಾಕಲು ಕರೆ ಕೊಡುತ್ತಾರೆ. ಆಗ ಅವರಿಗೆ ಆಪತ್ತು ಒದಗಿದರೆ ಯಾರು ರಕ್ಷಣೆ ಕೊಡುತ್ತಾರೆ ?

ಇನ್ನು ಕೆಲವು ದಿನಪತ್ರಿಕೆಗಳು ಭವಿಷ್ಯ ಕೇಳುವವರಿಗೆ ಪುಟಗಟ್ಟಲೆ ಮೀಸಲಾಗಿಟ್ಟಿರುತ್ತಾರೆ. ಇಂದಿನ ರಾಜಕಾರಣಿಗಳು, ಭವಿಷ್ಯದ ಮೇಲೆ ನಂಬಿಕೆಯಿಟ್ಟು ನಡೆಯುವವರು ನಮ್ಮ ನಾಯಕರಾಗುತ್ತಾರೆ. ರಾಹುಕಾಲ ನೋಡಿಯೇ ಕೆಲಸ ಮಾಡುವ ಜನರಿಗೆ ಕಡಿಮೆ ಇಲ್ಲ. ಇದಕ್ಕೆಲ್ಲ ಮಾಧ್ಯಮಗಳೇ ಕಾರಣ. ಚಾಮರಾಜನಗರಕ್ಕೆ ಹೋದ ಸಿ.ಎಂ. ತನ್ನ ಪದವಿ ಕಳೆದುಕೊಳ್ಳುತ್ತಾನೆ ಎಂದು ಮಾಧ್ಯಮಗಳೇ ತಲೆ ಕೆಡಿಸುತ್ತವೆ. ಭವಿಷ್ಯವಾಣಿಯ ದೆಸೆಯಿಂದ ಜನಸಾಮಾನ್ಯರನ್ನಷ್ಟೇ ಅಲ್ಲ, ಅನೇಕರನ್ನು ಮಾಧ್ಯಮಗಳು ದಾರಿ ತಪ್ಪಿಸುತ್ತಲಿವೆ. ಭವಿಷ್ಯವಾಣಿಯ ಬಗ್ಗೆ ಮಾಧ್ಯಮಗಳಿಗೂ ಸತ್ಯ ಗೊತ್ತಿದೆ ! ಆದರೆ ತಮ್ಮ ಪ್ರಸಾರ, ಜನಪ್ರಿಯತೆ ಹೆಚ್ಚಾಗಲಿ ಎಂಬ ದುರುದ್ದೇಶದಿಂದ ಜನರ ಬದುಕನ್ನು ಬೆಳಕಿನತ್ತ ಒಯ್ಯದೆ ಕತ್ತಲೆಯತ್ತ ಕರೆದೊಯ್ಯುತ್ತಲಿವೆ. ಈ ದುರಂತಕ್ಕೆ ಕೊನೆ ಮಾತ್ರ ಕನಸಿನ ಮಾತೆಂದು ಹೇಳಬಹುದು.

**ಪುಂಡಲೀಕ ಪಾಟೀಲ**
'ಶಾಂತಲಾ', ಪ್ಲಾಟ್ ನಂ. ೨೧೮, ವಿದ್ಯಾನಗರ, ಬಾಕ್ಸಾಯಿಟ್ ರೋಡ
ಹಿಂಡಲಗಿ ಅಂಚೆ, ಬೆಳಗಾವಿ - ೫೯೧ ೧೦೮

ಇತ್ತೀಚಿನ ನಮ್ಮ ಬೆಳವಣಿಗೆಗಳನ್ನು ನೋಡುತ್ತಿದ್ದರೆ, ನಾವೆತ್ತ ಸಾಗುತ್ತಿದ್ದೇವೆ ?... ಎಂಬ ಪ್ರಶ್ನೆಗೆ ಹನ್ನೆರಡು ಜನ ಬುದ್ಧಿವಂತರಲ್ಲಿಗೆ ಹೋಗಿ ದಕ್ಷಿಣೆ ಇಟ್ಟು ಕೇಳಿ ಎನ್ನುವರೇನೋ ! ಒಬ್ಬ ಅನಾಮಧೇಯ ಸಾಧಕನನ್ನು ಬೇಗ ಗುರುತಿಸದ ಮಾಧ್ಯಮಗಳು 'ಭವಿಷ್ಯವಾಣಿ'ಗೆ ಮೀಸಲಿಡುತ್ತವೆ ! ವೈಜ್ಞಾನಿಕತೆಯನ್ನು ಪ್ರತಿಪಾದಿಸಬೇಕಾಗಿರುವ ಪತ್ರಿಕೆಗಳು ವಿಶೇಷಾಂಕದಲ್ಲಿ ಏಳೆಂಟು ಪುಟಗಳಷ್ಟನ್ನು ವರ್ಷದ ಭವಿಷ್ಯಕ್ಕಾಗಿ ಮೀಸಲಿಡುವುದು ಎಂತಹ ವಿಪರ್ಯಾಸ ? ಇದು ಪತ್ರಿಕೆಯದ್ದಾದರೆ, 'ಭವಿಷ್ಯವೇ ಇಲ್ಲದ ಭವಿಷ್ಯವನ್ನು' ಬಿತ್ತರಿಸುವ ಚಾನೆಲ್‌ಗಳು ಹತ್ತು ಬೆರಳುಗಳಲ್ಲಿ ಹತ್ತಿಪ್ಪತ್ತು ವಜ್ರದ ಉಂಗುರಗಳು ಶೋ ಮಾಡುವ ರ‍್ಯಾಂಪ್ ಎಂದುಕೊಂಡಿರುವ ಬೊಗಳೆ ಭವಿಷ್ಯಕಾರರಿಗೆ ಗಂಟೆಗಟ್ಟಲೆ ಮಣೆಹಾಕುವುದು ಯಾವ ಪುರುಷಾರ್ಥಕ್ಕೋ ?

ಶ್ರೀ ನಿಜಗುಣಾನಂದ ಸ್ವಾಮಿಗಳು, ''ಜ್ಯೋತಿಷ್ಯ ಹೇಳುವವರು ಮಾನಸಿಕ ಭಯೋತ್ಪಾದಕರಾಗಿದ್ದಾರೆ. ಅಷ್ಟೇ ಅಲ್ಲ, ಇವರು ದಿನ ನಿತ್ಯದ ಸುಲಿಗೆಕೋರರು. ಹೋಮ - ಹವನಗಳ ಹಿಂದೆ ಹೋಗುವ ರಾಜಕಾರಣಿಗಳಿಗೆ ಇವರು ಗುರುಗಳು. ಇವರಿಗೆ ಪೂರಕವಾಗಿ ಬಂಡವಾಳಶಾಹಿಗಳು ಇದ್ದಾರೆ. ಮೊದಲು ಇವರನ್ನು ನಿಗ್ರಹಿಸುವ ಕೆಲಸ ಆಗಬೇಕಾಗಿದೆ''... ಎಂದಿರುವುದು ಎಷ್ಟು ನಿಜ ! ಆಯಾ ಪಾರ್ಟಿಯ ಅಧಿಕಾರವಂತರು ತಲೆಕೆಟ್ಟ ಜೋತಿಷಿಗಳ ಮಾತು ಕೇಳಿ, ರಾಜ್ಯದ ಹಿತವನ್ನು ಮರೆತು ತಂತಮ್ಮ ಕುರ್ಚಿಗಳನ್ನು ಉಳಿಸಿ ಕೊಳ್ಳುವತ್ತ ವೇಷ ಮರೆಸಿಕೊಂಡು ಪ್ರತಿಷ್ಠಿತ ದೇವಾಲಯಗಳಲ್ಲಿ ಯಜ್ಞ-ಯಾಗಾದಿ ಮಾಡುತ್ತಿದ್ದಾರೆ, ಸಾರ್ವಜನಿಕರ ಸ್ವತ್ತಿನಲ್ಲಿ! ನಾಯಕರಾದವರು ತನ್ನ ಪ್ರಜೆಗಳಲ್ಲಿಯ ಅಜ್ಞಾನ, ಮೂಢನಂಬಿಕೆ ಗಳನ್ನು ಅಳಿಸಿ, ವೈಜ್ಞಾನಿಕವಾಗಿ ಮತ್ತು ತಾರ್ಕಿಕವಾಗಿ ಯೋಚಿಸಿ ಅವುಗಳನ್ನು ಜಾರಿಗೆ ತಂದು, ಮಾದರಿಯಾಗಬೇಕೇ ವಿನಾ ಹೀಗೆ ಮಾರಿಯಾಗಬಾರದು. ಎಡವಿದಲ್ಲೇ ಮತ್ತೆ ಎಡವುತ್ತ ಸಾಗುವ ಈ 'ಮಂದಿ'ಗೆ ಮತ್ತು ಮೌನವಾಗಿ ಅವರನ್ನು ಅನುಸರಿಸುವ ನಮಗೆ ಏನನ್ನಬೇಕೋ ?

ನಮ್ಮಂಥ ಕೆಲವು ಮೂರ್ಖರಿಂದ ಮತ್ತು ಮೂರ್ಖ ಶಾಸಕರಿಂದಾಗಿ, ಲಕ್ಷಗಟ್ಟಲೆ ಭವಿಷ್ಯಕಾರರ ಕುಟುಂಬಗಳು ಬೆವರು ಸುರಿಸದೆ ರಾಜವೈಭೋಗವನ್ನು ಅನುಭವಿಸುತ್ತಿವೆ ! ಇಂತಹ ಬೊಗಳೆ ದಾಸಯ್ಯರಿಗೆ ಮತ್ತು ಅಂಧಾಭಿಮಾನಿಗಳಿಗಾಗಿ ಈ ಕೆಳಗಿನ ವಿಚಾರಗಳನ್ನು ಪ್ರಸ್ತುತಪಡಿಸಲಾಗುತ್ತಿದೆ:

೧) ಹಾಲಿ, ಹನ್ನೊಂದು ಗ್ರಹಗಳಿದ್ದಾಗ್ಯೂ ಈ ಭವಿಷ್ಯಕಾರರು ಇನ್ನೂ ನವಗ್ರಹಗಳಲ್ಲೇ ಇದ್ದಾರಲ್ಲ! ಸರಿ. ನವಗ್ರಹಗಳನ್ನು ರಾಕೆಟ್ಟುಗಳಿಂದಲೇ ಮುಟ್ಟಲು ಸಾಧ್ಯವಾಗದಿರುವಾಗ, ಇಲ್ಲಿ ಕುಳಿತೇ ನಮ್ಮ ಗ್ರಹಚಾರ ಬಿಡಿಸುವಷ್ಟು ತಾಕತ್ತಿರುವ ಭವಿಷ್ಯಕಾರರು ಕುಬೇರರಾಗಬೇಕಿತ್ತು. ಅಜರಾಮರರಾಗಬೇಕಿತ್ತು! ದೇಹಧಾರಿಗಳಾಗಿ ಸ್ವರ್ಗವನ್ನೇರಬೇಕಾಗಿತ್ತು!!

೨) ಋಷಿ-ಮುನಿಗಳ ಸಂಶೋಧನೆಯನ್ನು ಮುಂದುವರಿಸುವ ತಾಕತ್ತಿಲ್ಲದೆ ಉದರಂಭರಣಕ್ಕೆ ಇಂಥವರು ಸಂಸ್ಕೃತವನ್ನು ಸಾಧನವನ್ನಾಗಿ ಬಳಸಿ ಕೊಳ್ಳುತ್ತಿದ್ದಾರೆಂದು ಓದಿದ ನೆನಪು. ನಿಜವಲ್ಲವೇ ?

೩) ಇಲ್ಲಿಯವರೆಗೆ ಭವಿಷ್ಯಕಾರರಿಗೆ ನಿರ್ದಿಷ್ಟ ಹಣ ತೆತ್ತು, ಭವಿಷ್ಯ ಕೇಳಿಸಿಕೊಂಡವರ ಮನೆಗಳೆಲ್ಲ ಉದ್ಧಾರವಾಗಿ, ನಡುರಸ್ತೆಗೆ ಬಂದ ಉದಾಹರಣೆಗಳಿವೆಯೇ ? ಭವಿಷ್ಯ ಮತ್ತು ಇವರದೇ ಪಿತೂರಿಯಾದ ವಾಸ್ತು ಕೇಳದೆ ನಮ್ಮ ಪೂರ್ವಜರು ಆರಾಮವಾಗಿ ಬಾಳಿ-ಬದುಕಿಲ್ಲವೇ ?

೪) ಹಣೆಬರಹವನ್ನು ಬದಲಾಯಿಸುವ ತಾಕತ್ತು ಈ ಭವಿಷ್ಯಕಾರರಿಗಿದ್ದಿದ್ದರೆ, ಅವರು ಮನೆಯಲ್ಲಿ ಕುಳಿತೇ ದೇವರನ್ನು ಒಲಿಸಿಕೊಂಡು ಕುಬೇರರಾಗಬಹುದಿತ್ತಲ್ಲ! ಬದಲಿಗೆ ಸುಸಂಸ್ಕೃತರೆಂದುಕೊಂಡಿರುವ ಇವರು ಸುಳ್ಳು ಹೇಳಿ ಸುಲಿಗೆ ಮಾಡುವುದು ಆತ್ಮವಂಚನೆಯಲ್ಲವೇ ?

೫) ನಮ್ಮ ಕಣ್ಣ ಮುಂದೆ ಭವಿಷ್ಯಕಾರರನ್ನು ನಂಬಿ ಲಾಗ ಹಾಕಿದ ಯಡಿಯೂರಪ್ಪ ಮತ್ತು ಅವರಂಥವರು ಇಂದು ಏನಾಗಿದ್ದಾರೆ ? ಹಾಸನದಲ್ಲಿಯೇ ಕುಳಿತು ಗುಡುಗುವ ಮಾಜಿ ಪ್ರಧಾನಿ ಭವಿಷ್ಯಕಾರರನ್ನು ಕೇಳಿ ಮಾಡಿದ ಯಜ್ಞ-ಯಾಗಾದಿಗಳಿಗೆ ಲೆಕ್ಕವಿದೆಯೇ ?

**ಶರಣಗೌಡ ಎರಡೆತ್ತಿನ**
'ವ್ಯೋಮಕೇಶ', ಟೀಚರ್ಸ್ ಕಾಲೊನಿ, ತಮಟಕಲ್ಲುರಸ್ತೆ ಚಿತ್ರದುರ್ಗ - ೫೭೭ ೫೦೨

ಭವಿಷ್ಯದಲ್ಲಾಗುವ ಘಟನೆಗಳ ನಿಖರ ವಿವರಗಳು, ಅದರ ಪರಿಣಾಮ ಮತ್ತು ಪರಿಹಾರ ಕುರಿತು ಹೇಳುವುದು ಯಾರಿಂದಲೂ ಸಾಧ್ಯವಿಲ್ಲ. ಈ ವಾಣಿಗಳು ವೈಜ್ಞಾನಿಕ ಆಧಾರಗಳ ಮೇಲೆ ರೂಪಿತವಾದವುಗಳಲ್ಲ. ಈ ಭವಿಷ್ಯವಾಣಿಗಳ ಬಗ್ಗೆ ವಿಜ್ಞಾನ ಶಾಸ್ತ್ರದಲ್ಲಿ




ಏನಾದರೂ ಇದ್ದಲ್ಲಿ, ಅದು ನಿತ್ಯಭವಿಷ್ಯವಾಣಿ ಎಂದು ಹೇಳಬಹುದು. ಉದಾಹರಣೆಗೆ ಸೂರ್ಯಗ್ರಹಣ, ಚಂದ್ರಗ್ರಹಣ, ಚಂದುರುತುಗಳು, ... ಮುಂತಾದವುಗಳು ವಿಜ್ಞಾನ ಸೂತ್ರಗಳ ಮುಖಾಂತರ ಅವು ಪರಿಭವಿಸುವ ಭವಿಷ್ಯದ ಘಟನೆಗಳು, ಉಳಿದ ಮಾರ್ಗಗಳು (ಶಾಸ್ತ್ರಗಳು) ಇವನ್ನು ನಿಖರವಾಗಿ ಹೇಳಲು ಅಸಮರ್ಥ ಮತ್ತು ವಾಮಮಾರ್ಗವಾಗಿದೆಯೆಂದು ಸ್ಪಷ್ಟವಾಗಿ ಹೇಳಬಹುದು. ಇತ್ತೀಚಿನ ದಿನಗಳಲ್ಲಿ ಭವಿಷ್ಯವಾಣಿಯನ್ನು ವಿವಿಧ ಮಾಧ್ಯಮಗಳಲ್ಲಿ ರಂಗುರಂಗಿನ ರೂಪದಲ್ಲಿ ಪ್ರಕಟಿಸುತ್ತಿರುವುದು ಒಂದು ದುರಂತ. ಭವಿಷ್ಯವಾಣಿಯನ್ನು ಮಾಧ್ಯಮದಲ್ಲಿ ಹೇಳುವವರು, ವಾಮಮಾರ್ಗದಿಂದ ಹಣ ಸಂಪಾದಿಸುವುದೇ ಅವರ ಪರಮ ಗುರಿ. ಇದು ಎಲ್ಲ ಪ್ರಜ್ಞಾವಂತ ಜನರು ಚಿಂತಿಸುವ ಗಂಭೀರ ವಿಷಯವಾಗಿದೆ.

ಇತ್ತೀಚೆಗೆ ವಿವಿಧ ಮಾಧ್ಯಮದವರಿಗೆ ಇದು ಸರಳವಾಗಿ ಹಣ ಸಂಪಾದಿಸುವ ಸುಲಭ ಪರಮ ಮಾರ್ಗವಾಗಿದೆ. ಜನರಿಗೆ ಬೇಕಾಗಿರುವುದು ತಕ್ಷಣದಲ್ಲಿ ಅವರ ಸಮಸ್ಯೆಗೆ ಪರಿಹಾರ ಅಥವಾ ಶಮನ ಪಡೆಯುವುದಾಗಿದೆ. ಸಾರ್ವಜನಿಕ ಆರೋಗ್ಯ ಕಾಪಾಡುವ, ಮನರಂಜನೆ ನೀಡುವ, ಉತ್ತಮ ಕಾರ್ಯಕ್ರಮ ನೀಡಿ ಸಮಾಜದಲ್ಲಿನ ಅನಿಷ್ಟ ಪದ್ಧತಿಗಳನ್ನು ತೊಡೆದುಹಾಕಿ ಸಮೃದ್ಧ ಸಮಾಜ ನಿರ್ಮಿಸುವ ಒಳ್ಳೆಯ ಉದ್ದೇಶ ಇಲ್ಲದಿದ್ದರೆ ಇಲ್ಲ, ಕೆಡುಕನ್ನುಂಟುಮಾಡುವ ಉದ್ದೇಶವಿರಬಾರದು.

ಮುದ್ರಣ ಮಾಧ್ಯಮಗಳಲ್ಲಿ ದಿನನಿತ್ಯದ ರಾಶಿ ಆಧಾರಿತ ಭವಿಷ್ಯವಾಣಿ ತಪ್ಪದೇ ಪ್ರಕಟವಾಗುತ್ತಿವೆ. ಈ ವಿವಿಧ ಮಾಧ್ಯಮಗಳಲ್ಲಿ ಕೆಲಸ ನಿರ್ವಹಿಸುವವರೆಲ್ಲ ವಿದ್ಯಾವಂತರೂ ಪ್ರಜ್ಞಾವಂತರೂ ಆಗಿದ್ದಾರೆ. ಆದರೆ ಈ ರೀತಿಯ ಮೂಢನಂಬಿಕೆಗಳನ್ನು ಜನಸಾಮಾನ್ಯರಲ್ಲಿ ಬಿತ್ತುತ್ತಿರುವುದನ್ನು ನೋಡಿದರೆ ಇದು ಕೇವಲ ಹಣ ಸಂಪಾದನೆಯೇ ಹೊರತು ಬೇರೆ ಯಾವುದೇ ಒಳ್ಳೆಯ ಉದ್ದೇಶವಿಲ್ಲ ಎಂದು ಅನಿಸುತ್ತದೆ.

**ವಾಮನ ರಾವ್**
'ಶ್ರೀದತ್ತ ನಿಲಯ', ೧೧ನೇ ಅಡ್ಡರಸ್ತೆ
ಜಯನಗರ ಪೂರ್ವ, ತುಮಕೂರು - ೫೭೨ ೧೦೨



**ಪೂ**ರ್ವಜನ್ಮ, ಪುನರ್ಜನ್ಮಗಳನ್ನು ಬೊಗಸೆಯಲ್ಲಿಟ್ಟು 'ಜನ್ಮಾಂತರ' ರಹಸ್ಯಗಳಿಂದ ಹಿಡಿದು 'ಜಗತ್ಪ್ರಳಯ'ಗಳಂಥ ವಿಷಯಗಳನ್ನು ತಮ್ಮ ಸ್ವಯಂ ಉವಾಚಗಳಿಂದಲೇ ನಿರ್ಧರಿಸಿಬಿಡುವ 'ಭವಿಷ್ಯ ಮುನಿ'ಗಳು ಬೆಳಗಿನ ಆಹ್ಲಾದತೆಯಲ್ಲಿ ಕಣ್ಣು ತೆರೆಯುವ ಮಾಧ್ಯಮ ಪ್ರಪಂಚದಲ್ಲಿ ವಿರಾಜಮಾನರಿರುತ್ತಾರೆ. ಜೀವನದ ಯಾವುದೋ ಹಂತದಲ್ಲಿ ಸೋಲುಂಡ, ನೋವು ಅನುಭವಿಸಿದ ಹತಾಶ ಮನಸ್ಸುಗಳಿಗೆ 'ಭವಿಷ್ಯ' ಹೇಗಿರುತ್ತದೆಯೆಂದು ತಿಳಿಯುವ ಹಂಬಲ ಇದ್ದೇ ಇರುತ್ತದೆ. ಅತೃಪ್ತ, ಅಸಹಾಯಕ ಹಾಗೂ ಪಲಾಯನವಾದದ ಮನಸ್ಥಿತಿ ಇಂಥದ್ದೊಂದು ಕಾಯಕಲ್ಪಕ್ಕೆ ಹಾತೊರೆಯುವುದು ಸ್ವಾಭಾವಿಕವೇ ! ಅಜ್ಞಾನ, ಅನಕ್ಷರತೆ, ಮೂಢನಂಬಿಕೆಗಳು ವ್ಯರ್ಥ ಕಾಲಹರಣಕ್ಕೆ ಪ್ರೇರೇಪಿಸುತ್ತವೆ. ಭವಿಷ್ಯವಾಣಿಗಳನ್ನು ನೆಚ್ಚಿಕೊಂಡು ಕೈಯಲ್ಲೊಂದು ಲಾಟರಿ ಟಿಕೆಟ್ ಹಿಡಿದುಕೊಂಡು ಪಾರ್ಕ್‌ಗಳಲ್ಲಿ ಅಲೆಯುವ ಅನಾಮಿಕನಂತೆಯೇ ದಿನ ಭವಿಷ್ಯ ನೋಡಿ ಕಚೇರಿ, ಉದ್ಯೋಗಕ್ಕೆ ತೆರಳುವ 'ವಿದ್ಯಾವಂತ' ಅಧಿಕಾರಿ, ಉದ್ಯಮಪತಿಯೂ ಕಾಣುತ್ತಾನೆ. ವಿಚಾರ ದುರ್ಬಲತೆ, ತಿಳವಳಿಕೆಯ ಕೊರತೆ, ಅನಿರೀಕ್ಷಿತ ಆಘಾತಗಳೇ 'ಮಾಧ್ಯಮ ಭವಿಷ್ಯವಾಣಿ'ಗಳ ಮೂಲ ಬಂಡವಾಳ. ಮಾಧ್ಯಮ ಯಾವುದಾದರೂ ಸರಿ 'ಭವಿಷ್ಯವಾಣಿ'ಗೆ ಅಗ್ರ ಮಣೆ.

ಪ್ರಭಾವೀ ಮಾಧ್ಯಮಗಳ ಡಂಭಾಟೋಪ ಯಾವ ಮಟ್ಟದ್ದೆಂದರೆ ಕಾರ್ಯಕಾರಣ ಸಂಬಂಧವಿರದ ಯಾವ ವೈಜ್ಞಾನಿಕ ತಳಹದಿಯೂ ಇಲ್ಲದ, ಕೇವಲ ಕಾಲ್ಪನಿಕ ಸಂಗತಿಗಳನ್ನೇ ಆಧರಿಸಿದ ಉತ್ಪ್ರೇಕ್ಷೆಗಳನ್ನು ನಿರಂತರ ಪ್ರಸರಿಸುತ್ತಲೇ ಅದನ್ನು ನಿಜಗೊಳಿಸುವ ವ್ಯವಸ್ಥಿತ ಪ್ರಯತ್ನಗಳನ್ನು ಸ್ಪರ್ಧಾತ್ಮಕಗೊಳಿಸುತ್ತಿರುತ್ತವೆ. ಮೌಢ್ಯತೆ, ಅಂಧಕಾರ, ತೀವ್ರ ಭಾವುಕತೆ, ಬೌದ್ಧಿಕ ದಾರಿದ್ರ್ಯತನಗಳನ್ನು ಸಮಾಜದಲ್ಲಿ ಹಾಗೆಯೇ ಇರಿಸಿಕೊಂಡು ಸಾಗುವ, ಆ ಮೂಲಕ ತಮ್ಮ ಟಿ.ಆರ್.ಪಿ. ಹಾಗೂ ಪ್ರಸಾರ ಸಂಖ್ಯೆಯನ್ನು ಎತ್ತರಿಸುವ ಲಾಭಕೋರತನವಿದೆ !

ವಿಜ್ಞಾನ, ತಂತ್ರಜ್ಞಾನಗಳ ಮುಂದುವರಿದ ಕ್ರಾಂತಿಯ ಪರಿಣಾಮವಾಗಿಯಾದರೂ : 'ಸನಾತನ ಮಿಥ್ಯ'ಗಳು ಕ್ರಮೇಣ ಕಡಿಮೆಯಾಗುತ್ತವೆಂದು ಸಹೃದಯರು ಆಶಿಸಿದ್ದರೆ ಅದು ಈಡೇರುವ ಸಾಧ್ಯತೆಗಳು ಸದ್ಯಕ್ಕೆ ಕಾಣುತ್ತಿಲ್ಲ. ಆಯಾಯ ಕಾಲಘಟ್ಟದಲ್ಲಿ ವೈಚಾರಿಕತೆ, ವೈಜ್ಞಾನಿಕ ದೃಷ್ಟಿಕೋನ ಆಧಾರಿತ ಚಿಂತನೆಗಳು ಪ್ರಸರಣವಾಗಿದ್ದರೂ, 'ಮೌಢ್ಯತೆ' ಎಂಬ 'ಸಾಮಾಜಿಕ ಬಳುವಳಿ'ಯನ್ನು ಹಾಗೆಯೇ ಮುಂದುವರಿಸಿಕೊಂಡು ಬರುತ್ತಿರುವುದು ನಾಗರಿಕ ಇತಿಹಾಸದ ವಿಪರ್ಯಾಸ! ಮಾಧ್ಯಮಗಳಲ್ಲಿ ಭವಿಷ್ಯವಾಣಿಗಳನ್ನು ಉದ್ಗರಿಸುತ್ತಾ ದೇವಮಾನವರಾಗಿ, ಅವತಾರಪುರುಷರಾಗಿ ವಿಜೃಂಭಿಸುವ ಮಾನವಮೂರ್ತಿಗಳು ತಮ್ಮ ಭವಿಷ್ಯವನ್ನು ಸುಧಾರಿಸಿಕೊಳ್ಳುವರೇ ವಿನಾ ಯಾವೊಬ್ಬಾತನ ಭವಿಷ್ಯತ್ತನ್ನು ಕ್ರಮಗೊಳಿಸರು. ದೈನಂದಿನ ಬದುಕಿನಲ್ಲಿ ಉತ್ತಮ ಭರವಸೆ, ಪ್ರಯತ್ನ, ಸಕಾರಾತ್ಮಕ ಜೀವನಶೈಲಿಗಳಿಂದ ಪ್ರತೀ ವ್ಯಕ್ತಿಯೂ ತನ್ನ ಭವಿಷ್ಯವನ್ನು ಉತ್ತಮಗೊಳಿಸಿಕೊಳ್ಳಬಲ್ಲನು. ಮಾಧ್ಯಮಗಳು ಉತ್ತಮ ನಾಗರಿಕ ಸುಂದರ ಸಮಾಜದ ಔನ್ನತ್ಯಕ್ಕೆ ಸತ್ಪ್ರೇರಣೆಯೊದಗಿಸಬೇಕು.

**ಹೊಸಕೊಪ್ಪ ಶ್ರೀಧರ**
ಆಲೂರು - ಹೊಸಕೊಪ್ಪ, ದೇಮ್ಲಾಪುರ ಅಂಚೆ, ಕೋಣಂದೂರು ಮಾರ್ಗ
ತೀರ್ಥಹಳ್ಳಿ ತಾಲ್ಲೂಕು - ೫೭೭ ೪೨೨, ಶಿವಮೊಗ್ಗ ಜಿಲ್ಲೆ

**ಮುಂ**ದೆ ಏನಾಗುವುದು, ಮುಂದಿನ ಸ್ಥಿತಿ-ಗತಿ ಏನು ಎಂಬುದನ್ನು ತಿಳಿಸುವುದೇ ಭವಿಷ್ಯವಾಣಿ. ವರ್ತಮಾನವನ್ನು ನೋಡುತ್ತಿರುತ್ತೇವೆ. ಅನುಭವಿಸುತ್ತಿರುತ್ತೇವೆ ಅಥವಾ ತಿಳಿಯುತ್ತಿರುತ್ತೇವೆ. ಇದು ಸ್ಪಷ್ಟ. ಹಿಂದೆ ನಡೆದಿರುವುದನ್ನು, ಆಗು-ಹೋಗುಗಳನ್ನು ಸಾಕ್ಷಿ ಸಮೇತ ತಿಳಿಯಲು ಸಾಧ್ಯ. ಆದರೆ ಮುಂದೆ ಆಗುವುದನ್ನು ಹೇಳುವುದು ಕಷ್ಟ. ಭೂಕಂಪದ ಪರಿಣಾಮ, ಚಂಡಮಾರುತದ ಪರಿಣಾಮ, ಬಿರುಗಾಳಿ-ಬಿರು ಮಳೆಯ ಪರಿಣಾಮ, ಅಗ್ನಿ ಪರ್ವತದ ಪರಿಣಾಮ... ಹೀಗೆ ಪರಿಣಾಮಗಳನ್ನು ಹೇಳಬಹುದೇ ವಿನಾ; ಇವುಗಳ ವಿಚಾರವಾಗಿ, ಇಂಥದೇ ನಿರ್ದಿಷ್ಟ ದಿನ ಅಥವಾ ತಿಂಗಳು ಅಥವಾ ವರ್ಷ... ಇವುಗಳು ನಡೆಯುತ್ತವೆ ಎಂದು ಹೇಳಲು ಯಾರಿಂದಲೂ ಸಾಧ್ಯವಿಲ್ಲ, ಇದುವರೆವಿಗೂ ಯಾರೂ ಹೇಳಿಲ್ಲ, ಮುಂದೆ ಹೇಳಲೂ ಸಾಧ್ಯವಿಲ್ಲ. ಇವು ನಿತ್ಯ ನಿರಂತರವಾಗಿ ನಡೆಯುವ ನೈಸರ್ಗಿಕ ಕ್ರಿಯೆಗಳಷ್ಟೇ... ಇವುಗಳಿಂದ ಆಗುವ ಪರಿಣಾಮವನ್ನು; ಮಾನವನೂ ಸೇರಿದಂತೆ, ಪಶು-ಪಕ್ಷಿ-ಪ್ರಾಣಿಗಳಲ್ಲದೆ, ಸಸ್ಯವರ್ಗವೂ ಸೇರಿ, ಭೂಮಿಯ ಮೇಲಿರುವ ಹಾಗೂ ಭೂಮಿಯ ಒಳಗಿರುವ ಸಕಲ ವಸ್ತುಗಳೂ ಅನುಭವಿಸಬೇಕಾಗುತ್ತದೆ.

ಮಾಧ್ಯಮ ಎಂದಾಗ... ಪತ್ರಿಕೆಗಳು, ದೂರದರ್ಶನ, ರೇಡಿಯೋ ಮುಂತಾದುವುಗಳಲ್ಲಿ – ಮುಂದಿನ ಆಗು-ಹೋಗುಗಳನ್ನು ಹೇಳುವುದು ಪ್ರಶ್ನಾರ್ಹ. **ಹಿಂದಿನಿಂದ – ಇಂದಿನವರೆವಿಗೂ ಯಾವುದೇ ಒಬ್ಬ ಭವಿಷ್ಯ ಹೇಳುವ ವ್ಯಕ್ತಿ, ಮುಂದೆ ಆಗುವ ವಿಚಾರದಲ್ಲಿ (ಭವಿಷತ್ ಕಾಲದಲ್ಲಿ) ನಿಖರವಾಗಿ ಹೇಳಿಲ್ಲ**, ಹೇಳಲೂ ಸಾಧ್ಯವೂ ಇಲ್ಲ, ಪ್ರಕೃತಿ ಮಾನವನನ್ನೇನೂ ಅವಲಂಬಿಸಿಲ್ಲ.

ಸುಲಭವಾದ ಜೀವನೋಪಾಯದ ಸಲುವಾಗಿ, ಮನುಷ್ಯನಿಗೂ - ಗ್ರಹಗಳ ಚಲನೆಗೂ, ನಕ್ಷತ್ರ ರಾಶಿಗಳಿಗೂ ಸಂಬಂಧವನ್ನು ಕಲ್ಪಿಸಿದ್ದಾರಷ್ಟೆ. ಮನುಷ್ಯರಿಗೆ ಇಟ್ಟಿರುವ ಹೆಸರುಗಳಿಗೂ ಗ್ರಹಗಳ ಚಲನೆಗೂ, ನಕ್ಷತ್ರಗಳಿಗೂ ಏನೇನೂ ಸಂಬಂಧವಿಲ್ಲ, ಗ್ರಹಗಳು ಭೂಮಿಯಂತೆ ಜಡವಸ್ತುಗಳು ಭೂಮಿಯಲ್ಲಿ ಇರುವಂತೆಯೇ ಅನೇಕ ವಸ್ತುಗಳು... ಅನಿಲಗಳು... ಇತ್ಯಾದಿ... ಇತ್ಯಾದಿ ಇರಬಹುದು. ಅಥವಾ ಇವುಗಳ ಪ್ರಮಾಣದಲ್ಲಿ ವ್ಯತ್ಯಾಸಗಳು ಇರಬಹುದು. ಸುಖ ಜೀವನದ ಕನಸನ್ನು ನನಸು ಮಾಡಿಕೊಳ್ಳಲು... ಪುರೋಹಿತವರ್ಗ, ಪೂಜಾರಿವರ್ಗ, ಭವಿಷ್ಯ ಹೇಳುವವರು, ಸೃಷ್ಟಿ ಮಾಡಿಕೊಂಡಿರುವುದೇ ದೇವರು - ವಿವಿಧ ರೀತಿಯ ಪೂಜೆ - ಪುನಸ್ಕಾರಗಳು - ಕ್ಷುದ್ರ ದೇವತೆಗಳು - ಅವುಗಳ ಕಾಟ - ಕಾಟ ತಡೆಯಲು ಶಾಂತಿ ಕಾರ್ಯಗಳು. ಮಾನವರನ್ನು ಹೆದರಿಸಿ - ಬೆದರಿಸಿ, ಖಡ್ಗ - ಗುರಾಣಿ ಹಿಡಿಯದೆ, ಮಾತಿನ ಚಕಮಕಿಯಿಂದಲೇ ಮನುಷ್ಯರನ್ನು ಮರುಳು ಮಾಡಿ; ಬುದ್ಧಿಗೆ ತುಕ್ಕು ಹಿಡಿಸಿ, ವಿಚಾರವಂತಿಕೆಗೆ, ದೇವರು-ಧರ್ಮ-ಸಂಪ್ರದಾಯದ- ಕಟ್ಟು ಕಟ್ಟಳೆಯ ಹೆಸರಲ್ಲಿ ತಡೆಹಾಕಿ, ಸುಖಜೀವನ ನಡೆಸುವ ತಂತ್ರಜ್ಞರೇ ಭವಿಷ್ಯವಾಣಿ ಹೇಳುವವರಾಗಿದ್ದಾರೆ. ಪ್ರತಿದಿನ ದೂರದರ್ಶನ ಮಾಧ್ಯಮಗಳಲ್ಲಿ ಹೇಸಿಗೆ ಆಗುವಷ್ಟು ಹೇಳುತ್ತಾ... ಮೂಢರನ್ನು ಬಲೆಗೆ ಬೀಳಿಸಿಕೊಳ್ಳುತ್ತಾ, ತಮ್ಮ - ಅಜ್ಞಾನ ಅಂಧಕಾರದ ಕೃಷಿ ಕ್ಷೇತ್ರವನ್ನು ವಿಸ್ತರಿಸಿಕೊಳ್ಳುತ್ತಲೇ ಇದ್ದಾರೆ. ಮಾಧ್ಯಮಗಳಲ್ಲಿ ಭವಿಷ್ಯ ಹೇಳುವುದನ್ನು ಕಡ್ಡಾಯವಾಗಿ ನಿಲ್ಲಿಸಬೇಕು.

**ಎಸ್. ಸಿ. ರಂಗನಾಥ್**
ಹಿರಿಯ ನಾಗರಿಕರು, 'ಮಾತೃಶ್ರೀ ನಿಲಯ' ನಂ. ೯/೭
೩ನೇ 'ಡಿ' ಮುಖ್ಯರಸ್ತೆ, ೮೦ ಅಡಿ ರಸ್ತೆ, ೯ನೇ ಕ್ರಾಸ್, ಸಾರಕ್ಕಿ
೧ನೇ ಹಂತ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮

**ಮಾ**ಧ್ಯಮ, ಬರಿ ಮಾಧ್ಯಮವಲ್ಲ; ಜನಜೀವನದ ಬಹುಮುಖ್ಯ ಅವಿಭಾಜ್ಯ ಭಾಗ. ಅದಕ್ಕೇ ಇದನ್ನ ಪ್ರಜಾಪ್ರಭುತ್ವದ ನಾಲ್ಕು ಅಂಗಗಳಲ್ಲಿ ಒಂದೆಂದು; ಮಾಧ್ಯಮ ಸ್ವಾತಂತ್ರ್ಯ ಅಭಿವ್ಯಕ್ತಿ ಸ್ವಾತಂತ್ರ್ಯ ಮೂಲಭೂತ ಸ್ವಾತಂತ್ರ್ಯವಾಗಿ ಪರಿಗಣಿಸಲ್ಪಟ್ಟಿದೆ. ಸತ್ಯ ನ್ಯಾಯಕ್ಕೆ, ವೃತ್ತಿ ಪಾವಿತ್ರ್ಯಕ್ಕೆ ಅದನ್ನ ಪತ್ರಿಕಾ (ಮಾಧ್ಯಮ) ಧರ್ಮ ಕರೆಯಲಾಗಿದೆ.

ಇಂತಹದ್ದರಲ್ಲಿ ಮಾಧ್ಯಮದಲ್ಲಿ ಪತ್ರಿಕಾ (ಮಾಧ್ಯಮ-ರೇಡಿಯೊ, ದೂರದರ್ಶನ ಮುಂತಾದವೂ ಸೇರಿ) ಧರ್ಮ, ಜ್ಯೋತಿರ್ವಿಜ್ಞಾನ ಸತ್ಯ ನ್ಯಾಯಕ್ಕೆ ವ್ಯತಿರಿಕ್ತ, ಅಸ್ಪಷ್ಟ, ತಪ್ಪುತಪ್ಪಾದ, ಭ್ರಮೆ ಭಯ ಹುಟ್ಟಿಸುವ, ಸತ್ಯ ಉದಾಸೀನ ಪಲಾಯನ ಹಿಡಿಸುವ, ಹಸಿಸುಳ್ಳು ಹೌದುಹೌದೆನ್ನಿಸುವ ! ಮೂಗಿಗೆ ನೇರ ಹರಸುವ, ಕೃತಕ ಅಭಯ ನೀಡುವ, ನಂಬಿಕೆ ಕೆಡಿಸುವ, ಭೇದ ಸೃಷ್ಟಿಸುವ, ದಿಕ್ಕು ದಾರಿ ತಪ್ಪಿಸುವ, ಸತ್ಯ ವಿಮುಖರನ್ನಾಗಿಸುವ ಆವೊತ್ತಿಂದ ಈವತ್ತಿಗೂ ಯಥಾಸ್ಥಿತಿ ಮಂಕು ಕವಿಸುವ ಅರ್ಥಾತ್ ವಂಚನ ಆತ್ಮವಂಚನ ಭೇದ ಕಲ್ಪನ ಮೌಢ್ಯ ವಿಜೃಂಭಣ !; ಹಿತವಚನ, ಮಾರ್ಗದರ್ಶನ ಮುನ್ಸೂಚನೆ ಮುಖವಾಡದಿಂದ ಓಲೈಸುವ, ಹೆದರಿಸುವ ಜೊತೆ ಸುಳ್ಳು ಸಮಾಧಾನದ ದಿನ ಭವಿಷ್ಯ ! ವಾರ ಭವಿಷ್ಯ ! ತಿಂಗಳ ಭವಿಷ್ಯ ! ವರ್ಷ ಭವಿಷ್ಯ ! ರಾಜ ಭವಿಷ್ಯ ! ದೇಶ ಭವಿಷ್ಯ ! ಭೂಮಿ ಭವಿಷ್ಯ ! ಪ್ರಳಯಾಂತಕ ! ರಾಶಿಗೊಂದೊಂದು, ಎಲ್ಲಾ ರಾಶಿಗೆ ಸೇರಿ ಒಂದು ಅದೃಷ್ಟ ಸಂಖ್ಯೆ ! ಶುಭ ವಾರ. ಅಶುಭ ವಾರ ! ಒಂದೊಂದು ಪತ್ರಿಕೆಯಲ್ಲಿ, ಒಂದೊಂದು ಚಾನಲ್‌ನಲ್ಲಿ ಒಬ್ಬೊಬ್ಬರದ್ದು ಒಂದೊಂದು ಥರ ! ಒಬ್ಬೊಬ್ಬರಿಗೆ ಒಂದೊಂದು ಥರ ! ಊಹಾಪೋಹ ! ದೌರ್ಬಲ್ಯ ಬಂಡವಾಳ ! ಮಾತ್ರ ಇಲ್ಲಿ ಎಲ್ಲಾ ಒಂದೇ ಥರ ! ಇದು ಜ್ಯೋತಿರ್ವಿಜ್ಞಾನವ !? ಮಾಧ್ಯಮಕ್ಕೆ ಹೇಳಿದ್ದ !? ಇದರಿಂದಾಗುವ ಅನಾಹುತ ಜನರು ಮೌಢ್ಯಕ್ಕೆ ಮೋಸದ ಬಲೆಗೆ ಬೀಳುವುದಕ್ಕೆ, ದುಡಿಮೆ ಧನ ಆಯುಷ್ಯ ದುರ್ವ್ಯಯಕ್ಕೆ, ಸಂಬಂಧ ಕೆಡಿಸುವ ಸಮಾಜ ಕಂಟಕಕ್ಕೆ, ವಿನಾಶಕ್ಕೆ. ಉತ್ತರದಾಯಿತ್ವ ಬೇಡವೆ ಮಾಧ್ಯಮಕ್ಕೆ !? ಇಂಥ ಭವಿಷ್ಯವಾಣಿ ಹೇಳುವುದನ್ನು ಪ್ರಬಲವಾಗಿ ಪ್ರಶ್ನಿಸಬೇಕಾದ ಮಾಧ್ಯಮಗಳೇ ಹೀಗೆ ಉತ್ತರದಾಯಿತ್ವವಿಲ್ಲದೆ ಸೊರಗಿದರೆ !

ನೈತಿಕಶಕ್ತಿ ಎಲ್ಲಿಂದ ? ಅಜಾಗೃತಿ ಸಮಾಜವಂಚನ ಬಂಡವಾಳ, ಸತ್ಯಕ್ಕೆ ಜ್ಞಾನಕ್ಕೆ ಅಪಚಾರ ಅಡ್ಡ ಸಂಪಾದನೆಗೆ ಸೊಪ್ಪು ಹಾಕುವ ಅಡ್ಡ ಸಂಪಾದನೆಗೆ ಮಾಧ್ಯಮ !? ಅಭಿವ್ಯಕ್ತಿ ಸ್ವಾತಂತ್ರ್ಯ ಹೀಗೆ !? ಸಮಾಜ ಜಾಗೃತಿ ಹೀಗೆ !?

**ಡಾ|| ಬಿ. ಶಶಿಕರ್**, ಸಾಗರ

# ಮಾಧ್ಯಮಗಳಲ್ಲಿ ಭವಿಷ್ಯವಾಣಿ

**ಮಾ**ಧ್ಯಮಗಳು ಸಮಾಜದ ಕನ್ನಡಿಗಳಾಗಿರಬೇಕು. ಆದರೆ ನಮ್ಮ ದುರ್ದೈವವೋ ಏನೋ ಇಂದಿನ ಬಹುತೇಕ ಪತ್ರಿಕೆ/ ದೂರದರ್ಶನಗಳು ತಮ್ಮದೇ ಆದಂತಹ ಜಾತಿ ಮತ ಪಂಥ ಪಕ್ಷಗಳ ಸ್ವಾರ್ಥಗಳನ್ನಿಟ್ಟುಕೊಂಡು, ತಮ್ಮ ನಂಬಿಕೆ ನಿಲುವುಗಳೇ ಸತ್ಯವೆಂದು ಓದುಗರನ್ನ/ನೋಡುಗರನ್ನ ತಮ್ಮ ಅಡ್ಡದಾರಿಯತ್ತ ಸೆಳೆದುಕೊಳ್ಳುತ್ತಿದ್ದಾರೆ. 'ಬೆಕ್ಕಿನ ಕೊರಳಿಗೆ ಗಂಟೆ ಕಟ್ಟುವವರ್ಯಾರು...?' ಅನ್ನೊ ಮಾತಿನಂತೆ ಮೂಢನಂಬಿಕೆಯಲ್ಲಿಯೇ ಮುಚ್ಚಿ ಮುಳುಗಿರುವ ಮಾಧ್ಯಮಗಳನ್ನ ಇಂದು ಹೊರತರುವವರ್ಯಾರು ? ಎಂಬ ಪ್ರಶ್ನೆಯು ಕೂಡ ಉತ್ತರ ಸಿಗದೆ ನನ್ನೊಳಗೆ ಪರಿತಪಿಸುತ್ತಿದೆ.

ಮಾಧ್ಯಮಗಳು ವೈಚಾರಿಕವಾಗಿ, ವೈಜ್ಞಾನಿಕವಾಗಿ, ತಾರ್ಕಿಕವಾಗಿ ಸತ್ಯಾಸತ್ಯತೆಯನ್ನ ಪರಿಶೀಲಿಸಿದ ಮೇಲೆಯೇ ಸುದ್ದಿ/ಲೇಖನಗಳನ್ನ ಪ್ರಕಟಿಸಿ ಜನರನ್ನ ಜಾಗೃತಗೊಳಿಸಬೇಕು ಆದರೆ ಆ ಕೆಲಸ ಇಂದು ಆಗದಿರುವದು ಮತ್ತು ವಾಸ್ತವತೆಗೆ ವಿರುದ್ಧವಾಗಿರುವ ಭವಿಷ್ಯವನ್ನ ಪ್ರಕಟಿಸುತ್ತಿರುವದು ತುಂಬ ವಿಷಾದನೀಯ...! ಮಿಥ್ಯವನ್ನೆ ಸತ್ಯವೆಂದು ನಂಬಿಸಿ ಹಣ ಮಾಡಿಕೊಳ್ಳುವ ಹುನ್ನಾರವನ್ನ ಮಾಧ್ಯಮಗಳು ತಮ್ಮ ಒಡಲೊಳಗಿಟ್ಟುಕೊಂಡಿರುವದಂತೂ ತೀರಾ ಕೆಟ್ಟ ಸಂಸ್ಕೃತಿ...! ನಾಡಿನ ತುಂಬ ಪ್ರತಿನಿತ್ಯ ಹಲವಾರು ಪ್ರತಿಭಟನೆ ಹೋರಾಟಗಳು ನಡೆಯುತ್ತಿವೆ. ಇನ್ನುಮುಂದೆ ಮಾಧ್ಯಮಗಳಲ್ಲಿ ಬರುವ ಭವಿಷ್ಯ ವಾಣಿಯ ವಿರುದ್ಧ ಬೀದಿಗಿಳಿದು ಹೋರಾಟ ಮಾಡುವ ಪ್ರಕ್ರಿಯೆ ಕೂಡಲೆ ಆರಂಭವಾಗಬೇಕಿದೆ.

ಮಾಟ-ಮಂತ್ರ, ಯಂತ್ರ-ತಂತ್ರ, ಜಪತಪಗಳ ನೆಪದಲ್ಲಿ ಗೊಡ್ಡು ಭವಿಷ್ಯ ಹೇಳಿ ದುಡಿಯದೆ ದುಡ್ಡು ಗಳಿಸುತ್ತಿರುವ ಸ್ವಯಂ ಘೋಷಿತ ದಡ್ಡ ಗುರೂಜಿ/ಸ್ವಾಮೀಜಿಗಳ ಮುಖವಾಡವನ್ನ ಬಯಲು ಮಾಡುವ ತುರ್ತು ಅಗತ್ಯವಿದೆ.



**ಕೆ. ಬಿ. ವೀರಲಿಂಗನ ಗೌಡ್ರ**
ನಂ. ೧೦೩/ಎ, 'ಮಹಾಕೂಟ'
ನಂದಿಕೇಶ್ವರ - ೫೮೭ ೨೦೧, ಬಾಗಲಕೋಟ ಜಿಲ್ಲೆ

**ದೃ**ಶ್ಯ ಮಾಧ್ಯಮ (ಟಿ.ವಿ.) ಪ್ರಾರಂಭವಾದಾಗ 'ಭವಿಷ್ಯವಾಣಿ' ಎಲ್ಲಿಯೂ ಕಂಡು ಬರುತ್ತಿರಲಿಲ್ಲ, ದೃಶ್ಯ ಮಾಧ್ಯಮದಲ್ಲಿ ಅನೇಕ ಚಾನಲ್‌ಗಳ ಪ್ರಸಾರ ಪ್ರಾರಂಭವಾದಾಗ ಪೈಪೋಟಿ ಏರ್ಪಟ್ಟಿತು. ಹಣಗಳಿಕೆಯೇ ಪ್ರಮುಖವಾದಾಗಿನಿಂದ ವೀಕ್ಷಕರ ಅಭಿಪ್ರಾಯಗಳಿಗೆ, ಬಯಕೆಗಳಿಗೆ ಮನ್ನಣೆ ನೀಡುತ್ತೇವೆಂದು ಜಂಭ ಕೊಚ್ಚಿಕೊಳ್ಳುತ್ತಾ ಬಹುತೇಕ ಚಾನಲ್‌ಗಳು ಪ್ರತಿ ದಿನ ಮುಂಜಾನೆ ಸುಮಾರು ಎರಡು ತಾಸುಗಳವರೆಗೆ ವಿಜೃಂಭಣೆಯ ವೇಷಧಾರಿಗಳಾದ ಜ್ಯೋತಿಷಿಗಳನ್ನು ಕರೆತಂದು 'ಭವಿಷ್ಯವಾಣಿ'ಯ ಹೆಸರಿನಿಂದ ಮೂಢನಂಬಿಕೆಯನ್ನು ವೈಭವೀಕರಿಸುತ್ತಿರುವವು. ಇದಲ್ಲದೆ ವೀಕ್ಷಕರಿಗೆ ಅವರ ಬದುಕಿನ ನೂರಾರು ಸಂಕಷ್ಟಗಳಿಗೆ ಪರಿಹಾರ ನೀಡುತ್ತೇವೆಂದು ಪ್ರಶ್ನೆಗಳನ್ನು ಕೇಳುವಂತೆ ಪುಸಲಾಯಿಸಿ ಅವರನ್ನು ಇನ್ನೂ ಕಷ್ಟದ ಮಡಿಲಿಗೆ ನೂಕುತ್ತಿರುವವು.

ದೃಶ್ಯ ಮಾಧ್ಯಮಗಳು ದೇಶದ ಮತ್ತು ಜನರ ಪ್ರಗತಿಗೆ ಪೂರಕವಾಗುವ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕು. ಜನರಲ್ಲಿ ವೈಜ್ಞಾನಿಕ ಮನೋಭಾವನೆಯನ್ನು ಮೂಡಿಸುವ ಕನಿಷ್ಠ ಒಂದೇ ಒಂದು ಕಾರ್ಯಕ್ರಮವನ್ನೂ ಪ್ರಸಾರ ಮಾಡುವ ಸಾಹಸ ಮಾಡುವುದಿಲ್ಲ, ಗೊಂದಲದ ಗೂಡಾಗಿರುವ ಜನತೆಯ ಮನಸ್ಸನ್ನು ಕದಡುವುದಕ್ಕೆ ಈ 'ಭವಿಷ್ಯವಾಣಿ'ಯ ಕಾರ್ಯಕ್ರಮಗಳು ಪ್ರಚೋದನೆ ನೀಡುತ್ತಿರುವವು.

**ಸಿದ್ಧರಾಮರೆಡ್ಡಿ ಇಟಗಿ**
ಯಲಸತ್ತಿ ಅಂಚೆ, ಮಾಧವಾರ ಮಾರ್ಗ
ಯಾದಗಿರಿ ತಾಲ್ಲೂಕು ಮತ್ತು ಜಿಲ್ಲೆ - ೫೮೫ ೩೧೫




**ಬೆ**ಳಗ್ಗೆ ಏಳುತ್ತಲೇ ಎಲ್ಲರ ಮನೆಯೊಳಗಿನ ಮಾಯಾಪೆಟ್ಟಿಗೆ ಮೂರ್ಖರನ್ನು ಕೈ ಬೀಸಿ ಕರೆಯುತ್ತದೆ 'ಭವಿಷ್ಯ ಹೇಳುವೆ ಬನ್ನಿ' ಎಂದು. ಹಣೆಗೆ ಗಂಧ-ಚಂದನಗಳ ನಾಮ, ವಿಭೂತಿ-ಕುಂಕುಮಗಳ ಮೇಕಪ್ ಮತ್ತು ಪಂಚೆ ಜುಬ್ಬಾ-ಮಿರಿಮಿರಿ ಮಿಂಚುವ ಶಾಲುಗಳ ಭರ್ಜರಿ ವೇಷಭೂಷಣಗಳೊಂದಿಗೆ ಕುಳಿತ ಭಾರತೀಯ ಸಂಸ್ಕೃತಿಯ ಪ್ರತಿರೂಪ ಎಂದುಕೊಳ್ಳುವ ಓರ್ವ ವ್ಯಕ್ತಿಯೊಂದಿಗೆ ಕಳೆಕಳೆಯಾಗಿರುವ, ಮರುಳು ಮಾತಿನ ಸುಂದರ ನಿರೂಪಕಿ ತೆರೆಯ ಮೇಲೆ ಕಾಣಿಸಿಕೊಳ್ಳುತ್ತಾಳೆ. 'ಇವರು ಮಹಾನ್ ಜ್ಯೋತಿಷಿಗಳು. ಪಂಡಿತರು, ತ್ರಿಕಾಲ ಜ್ಞಾನಿಗಳು ನಿಮ್ಮ ರಾಶಿ, ನಕ್ಷತ್ರ, ಹುಟ್ಟಿದ ದಿನ ಹೇಳಿ. ನಿಮ್ಮ ಭವಿಷ್ಯ ಹೇಳಿ ನಿಮ್ಮ ಎಲ್ಲ ಸಮಸ್ಯೆಗಳಿಗೆ ಇವರು ಪರಿಹಾರ ಹೇಳುತ್ತಾರೆ. ಫೋನ್ ಮಾಡಿ' ಅನ್ನುತ್ತ ನಿರೂಪಕಿ ಲಕಲಕ ಮಿಂಚಿ ಹಿಂದೆ ಸರಿಯುತ್ತಾಳೆ. ಮುಂದೆ ವೀಕ್ಷಕರು 'ರೋಹಿಣಿ ನಕ್ಷತ್ರ, ವೃಷಭ ರಾಶಿ, ಜುಲೈ ೨೦' ಅಂದರೆ ಒಂದಷ್ಟು ಗುಣಾಕಾರ ಭಾಗಾಕಾರ ಹಾಕಿ (ಕೆಲವೊಮ್ಮೆ ಅದೂ ಇಲ್ಲದೆ) ಪಂಡಿತರ ಉತ್ತರ ಬರುತ್ತದೆ: 'ನೀವು ಸ್ವಭಾವತಃ ಪರೋಪಕಾರಿ, ಶ್ರಮಜೀವಿ. ಆದರೆ ಇತರರಿಂದ ಸುಲಭವಾಗಿ ಮೋಸ ಹೋಗುತ್ತೀರಿ. ನಿಮ್ಮ ಮುಗ್ಧತೆಯನ್ನು ಇತರರು ದುರುಪಯೋಗಪಡಿಸಿಕೊಳ್ಳುತ್ತಾರೆ. ಈಗ ನಿಮ್ಮ ಸಮಯ ಚೆನ್ನಾಗಿಲ್ಲ, ಒಂದು ಕಂಟಕ ಇದೆ. ದಿನಾ ಸಂಜೆ ಆಂಜನೇಯನಿಗೆ ಎಳ್ಳೆಣ್ಣೆ ದೀಪ ಹಚ್ಚಿ. ಆಂಜನೇಯ ಸ್ತೋತ್ರ ಪಠಿಸಿ. ಶುಭಫಲ ಸಿಗುತ್ತೆ' ಅನ್ನುತ್ತಾರೆ. ನೀವು ಇನ್ನೊಂದು ಪ್ರಶ್ನೆ ಕೇಳಬೇಕು ಅನ್ನುವಷ್ಟರಲ್ಲಿ ನಿರೂಪಕಿ ನಿಮ್ಮ ಫೋನ್ ಕಟ್ ಮಾಡಿ ಇನ್ನೊಬ್ಬರಿಗೆ ಲೈನ್ ಕೊಡುತ್ತಾಳೆ. ಅಲ್ಲೂ ಅದೇ ಪ್ರಶ್ನೆಗಳು ಮತ್ತು ಪರಿಹಾರಗಳು. 'ನೋಡಿ ನಿಮ್ಮ ಜೀವಕ್ಕೆ ಅಪಾಯವಿದೆ. ಮೃತ್ಯುಂಜಯ ಹೋಮ ಮಾಡಿಸಿ.' 'ನಾಗ ದೋಷ ಇದೆ. ಆಶ್ಲೇಷ ಬಲಿ ಮಾಡಿಸಿ. ಒಳ್ಳೇದಾಗುತ್ತೆ' ಇತ್ಯಾದಿ.

ಚಾನೆಲ್ಲುಗಳಿಗೆ ಈ ರೀತಿಯ ವಾಮಮಾರ್ಗಗಳಿಂದಾದರೂ ಜನರನ್ನು ಆಕರ್ಷಿಸುವ ತೆವಲು. ಅದಕ್ಕಾಗಿ ದ್ರಾವಿಡ ಪ್ರಾಣಾಯಾಮ. ಜನರ 'ಅಕಿಲ್ಲೀಸ್ ಹೀಲ್' ಎಲ್ಲಿದೆ ಅಂತ ಹೊಂಚು ಹಾಕಿ ನೋಡಿ ಹೊಡೆದು ತಮ್ಮ 'ವೀಕ್ಷಕರ' ಸಂಖ್ಯೆ ಹೆಚ್ಚಿಸಿಕೊಂಡೆವೆಂದು ಬೀಗುತ್ತಾರೆ. ಪತ್ರಿಕೆ ನಿಯತಕಾಲಿಕಗಳೂ ಈ ಗಿಮಿಕ್ಸ್‌ನಲ್ಲಿ ಹಿಂದೆ ಬಿದ್ದಿಲ್ಲ. ಆದರೆ ಇಂಥ ಮಹಾಸುಳ್ಳುಗಳನ್ನು ನಂಬಿ ಪಂಡಿತರು ನೀಡುವ ಪರಿಹಾರ ಮಾರ್ಗಗಳನ್ನು ಚಾಚೂ ತಪ್ಪದೆ ಅನುಸರಿಸುವ ವೀಕ್ಷಕರ ಬಗ್ಗೆ 'ಅಯ್ಯೋ ಪಾಪ' ಅನ್ನಿಸುತ್ತದೆ.

ನಾವು ವೈಜ್ಞಾನಿಕ ಮನೋಭಾವ ಬೆಳೆಸಿಕೊಳ್ಳದಿದ್ದರೆ ಬದುಕನ್ನು ಅದು ಇದ್ದಂತೆ ಅರ್ಥಮಾಡಿಕೊಳ್ಳಲಾರೆವು. ಹುಟ್ಟು-ಸಾವುಗಳು ಹೇಗೆ ನಿಶ್ಚಿತವೋ ಅವುಗಳ ನಡುವಣ ಕಷ್ಟ-ಸುಖಗಳು ನಿಶ್ಚಿತ. ಸುಖವನ್ನು ಅನುಭವಿಸಲು ನಮಗೆ ಯಾವ ಪೂರ್ವ ತಯಾರಿಯೂ ಬೇಕಿಲ್ಲ. ಆದರೆ ಕಷ್ಟಗಳನ್ನೆದುರಿಸಲು ನಾವು ಸದಾ ಎದೆಗಟ್ಟಿ ಮಾಡಿ ಸಿದ್ಧರಿರಬೇಕು. ಹೋಮ-ಹವನ, ಮಂತ್ರ-ತಂತ್ರಗಳಿಂದ ನಮ್ಮ ಯಾವ ಸಮಸ್ಯೆಗಳೂ ಪರಿಹಾರವಾಗಲಾರವು. ಪರಿಹಾರವಾಗುತ್ತವೆ ಎಂದು ಹೇಳಿದರೆ ಅದು ತೀರಾ ಸತ್ಯಕ್ಕೆ ದೂರವಾದ ಅವೈಜ್ಞಾನಿಕ ಹೇಳಿಕೆ. ಧೈರ್ಯವನ್ನು ರೂಢಿಸಿಕೊಂಡವನಿಗೆ ಯಾವ ಜ್ಯೋತಿಷಿಗಳ ಅಗತ್ಯವೂ ಇರುವುದಿಲ್ಲ. ನಮ್ಮ ಭವಿಷ್ಯಕ್ಕೆ ನಾವೇ ಹೊಣೆ ಎಂಬ ನಂಬಿಕೆಯೊಂದೇ ನಮ್ಮ ನೆಮ್ಮದಿಯ ಗುಟ್ಟು. ಅದು ಬಿಟ್ಟು ಹೋಮ-ಹವನ, ದೇವರ ಸೇವೆಯೆಂದು ಹೊರಟರೆ ಮೊದಲೇ ಅನ್ಯಾಯ-ವಂಚನೆಗಳ ಬೀಡಾಗಿಬಿಟ್ಟಿರುವ ದೇವಸ್ಥಾನ ಮತ್ತು ಪುರೋಹಿತವರ್ಗವನ್ನು ನಾವು ಇನ್ನಷ್ಟು ಪ್ರೋತ್ಸಾಹಿಸಿದಂತಾಗುತ್ತದೆ. ಈ ಬಗ್ಗೆ ನಾವೆಲ್ಲರೂ ಎಚ್ಚೆತ್ತುಕೊಳ್ಳುವುದು ಅತೀ ಅಗತ್ಯ.

**ಡಾ|| ಪಾರ್ವತಿ ಜಿ. ಐತಾಳ್**
ಸುರಗಂಗಾ, ಬಿ. ಸಿ. ರಸ್ತೆ, ಕುಂದಾಪುರ - ೫೭೬ ೨೦೧

---

**ಜ**ನವರಿ ೨೦೧೫ರ ವಿಶೇಷ ಸಂಚಿಕೆಗೆ 'ಮಾಧ್ಯಮಗಳಲ್ಲಿ ಭವಿಷ್ಯವಾಣಿ' ಎಂಬ ವಿಷಯದಲ್ಲಿ ಓದುಗರ ಅಭಿಪ್ರಾಯ ಆಹ್ವಾನಿಸಿದ್ದೀರಿ. ನೀವು ಆರಿಸಿದ ವಿಷಯವೇ ನನಗೆ ಆಶ್ಚರ್ಯ ತಂದಿದೆ. ಹೊಸತುವಿನಂತೆ ವೈಚಾರಿಕ ಪತ್ರಿಕೆಯಲ್ಲಿ ವೈಜ್ಞಾನಿಕವಾಗಿ ಇನ್ನೂ ಎಲ್ಲರ ಮನ್ನಣೆ ಪಡೆಯದೆ ಇರುವ ವಿಷಯದ ಬಗ್ಗೆ ಚರ್ಚೆಯೇ ಎಂದು ?

ಈಗ ಎಲ್ಲ ಮಾಧ್ಯಮಗಳಲ್ಲಿ ಎಂದರೆ ವಿಶೇಷವಾಗಿ ಮುದ್ರಣ ಹಾಗೂ ಟೆಲಿವಿಷನ್ ಮಾಧ್ಯಮಗಳ ಮುಖಾಂತರ 'ಭವಿಷ್ಯವಾಣಿ' ಬಹುಶಃ ಸಮಾಜದ ಎಲ್ಲ ಸ್ಥರಗಳಲ್ಲಿ ತನ್ನ ಪ್ರಭಾವ ಬೀರ ಹತ್ತಿದೆ. ಇದರಿಂದ ಈ ಅವೈಜ್ಞಾನಿಕ ವಿಚಾರ ಪ್ರವಾಹದಲ್ಲಿ ಎಲ್ಲಿ ನಮ್ಮ ಯುವ ಜನಾಂಗ ಕೊಚ್ಚಿಕೊಂಡು ಹೋಗುವದೋ ಎಂಬ ಹೆದರಿಕೆ ನನ್ನದಾಗಿದೆ.

ಮೊಟ್ಟಮೊದಲು ಪತ್ರಿಕೆ ಕೈ ಸೇರಿದೊಡನೆ ಓದುಗರು ದಿನ ಪತ್ರಿಕೆಯಲ್ಲಿ **ಇಂದಿನ ಭವಿಷ್ಯ,** ವಾರ ಪತ್ರಿಕೆಗಳಲ್ಲಿ 'ಈ ವಾರದ ಭವಿಷ್ಯ', ಮಾಸ ಪತ್ರಿಕೆಗಳಲ್ಲಿ 'ಈ ತಿಂಗಳ ಭವಿಷ್ಯ' ನೋಡುವ **ಚಟವನ್ನು** ಬೆಳೆಸಿಕೊಂಡದ್ದನ್ನು ನಾನು ಗಮನಿಸುತ್ತಿದ್ದೇನೆ. ಇದಕ್ಕೆ ನನ್ನ ಕುಟುಂಬದ ಸದಸ್ಯರೂ ಹೊರತಾಗಿಲ್ಲ. ಇನ್ನು ನನ್ನ ಬಂಧುಗಳು ತಮ್ಮ ಕಾರ್ಯಕ್ರಮಗಳನ್ನು 'ಭವಿಷ್ಯವಾಣಿಗೆ' ಪೂರಕವಾಗಿಯೇ ರೂಪಿಸುತ್ತಿದ್ದಾರೆ. ಉದಾಹರಣೆಗೆ ಹೇಳಬೇಕೆಂದರೆ ''ಈ ವಾರ ನೀವು ಪ್ರವಾಸ ಕೈಕೊಳ್ಳಬೇಡಿರಿ ಎಂದು ಬರೆದಿದ್ದರೆ ಹಾಗೆಯೇ ತಮ್ಮ ಕಾರ್ಯಕ್ರಮಗಳನ್ನು ರೂಪಿಸಿಕೊಳ್ಳುತ್ತಿದ್ದಾರೆ. ಇದು ನಮ್ಮಂಥ ಮಧ್ಯಮವರ್ಗದ ಜನರಲ್ಲಿ ಹೆಚ್ಚಾಗಿ ಕಂಡುಬರುತ್ತಿದೆ.

ಟೆಲಿವಿಷನ್ ಚಾನೆಲ್‌ನಲ್ಲಿ ಪ್ರಸಾರವಾಗುವ ಭವಿಷ್ಯವಾಣಿಯ ಬಗ್ಗೆ ಎಷ್ಟು ಬರೆದರೂ ಕಡಿಮೆಯೆ. ಗುರುಗಳು ಎಂಬ ಪಟ್ಟ ಕಟ್ಟಿಕೊಂಡ ಆ ವ್ಯಕ್ತಿಗಳು ವೇಷಭೂಷಣಗಳು, ರುದ್ರಾಕ್ಷಿ ಮಾಲೆಗಳು, ಕೈ ಬೆರಳಲ್ಲಿಯ ಉಂಗುರಗಳು ಸಾಮಾನ್ಯ ಮನುಷ್ಯನ ಮೇಲೆ ಅಸಾಮಾನ್ಯ ಪ್ರಭಾವ ಬೀರುತ್ತವೆ. ಇದು ಹಿತಕರ ಬದಲಾವಣೆಯಲ್ಲ. ಇದರಿಂದ ವೈಜ್ಞಾನಿಕವಾಗಿ ವಿಚಾರ ಮಾಡುವ ಸ್ವಭಾವ/ಪ್ರವೃತ್ತಿ ಕಡಿಮೆಯಾಗಬಹುದು.

**ಹ. ಶ್ರೀ ಆಡೂರ**
ಕಾಂದಿವಿಲಿ (ಪೂರ್ವ), ಮುಂಬಯಿ - ೪೦೦ ೧೦೧

**ಡಾ|| ಜಿ. ಎನ್. ಮೋಹನ್ ಕುಮಾರ್**

ಭಾರತೀಯ ಆಹಾರದಲ್ಲಿನ ರೋಗನಿರೋಧಕ/ ಆರೋಗ್ಯವರ್ಧಕ ಪೋಷಕಾಂಶಗಳು ಇರುವುದೇ ನಿಜವಾದರೆ, ಮಧುಮೇಹ ಮುಂತಾದ ರೋಗಗಳು ನಮ್ಮಲ್ಲಿ ಇತ್ತೀಚೆಗೆ ಹೆಚ್ಚಾಗುವುದಕ್ಕೆ ಕಾರಣವೇನು ? ಈ ಪ್ರಶ್ನೆಗೆ ಸರಳ, ಸಮಂಜಸ ಹಾಗೂ ವೈಜ್ಞಾನಿಕ ಮಾಹಿತಿಗಳನ್ನೊಳಗೊಂಡ ಉತ್ತರ ಕೊಡುವುದು ಕಠಿಣ.




# ನಮ್ಮ ಆಹಾರ –ಒಂದು ವೈಜ್ಞಾನಿಕ ಚಿಂತನೆ




ಅರ್ಬುದ ನಿರೋಧಕ ಎಪಿಜನಿನ್ ಹೊಂದಿರುವ ತರಕಾರಿಗಳು

ನಮ್ಮ ಆಹಾರದಲ್ಲಿನ ಪ್ರಮುಖ ಅಂಶಗಳಾದ ಪಿಷ್ಟ, ಸಸಾರಜನಕ, ಮೇದಸ್ಸು, ಜೀವಸತ್ವಗಳು ಮತ್ತು ಖನಿಜ ಪದಾರ್ಥಗಳ ಪೂರೈಕೆಯಲ್ಲಿ ತೋಟಗಾರಿಕಾ ಬೆಳೆಗಳ ಪಾತ್ರದ ಬಗೆಗಿನ ವ್ಯಾಖ್ಯಾನ ಇದಲ್ಲ. ಸೂಕ್ಷ್ಮ ಪ್ರಮಾಣದಲ್ಲಿ ಸಸ್ಯಗಳಲ್ಲಿ ತಯಾರಾಗುವ ರಾಸಾಯನಿಕಗಳು ಜೀವಕೋಶದ ಕಾರ್ಯಾಚರಣೆಯ ಮೇಲೆ ಬೀರುವ ಪ್ರಭಾವದ ಫಲವಾಗಿ ನಮ್ಮ ಆರೋಗ್ಯದ ಮೇಲಾಗುವ ಪರಿಣಾಮದ ಪ್ರಸ್ತಾಪ ಇಲ್ಲಿನ ಮುಖ್ಯ ವಸ್ತು. ಇಂತಹ ಸೂಕ್ಷ್ಮ ಪ್ರಮಾಣದ ಸಸ್ಯಜನ್ಯ ರಾಸಾಯನಿಕಗಳನ್ನು 'ಆರೋಗ್ಯವರ್ಧಕಗಳು' ಅಥವಾ 'ರೋಗನಿರೋಧಕಗಳು' ಎಂದು ಗುರುತಿಸಲಾಗಿದೆ. ಇಂತಹ ಆರೋಗ್ಯವರ್ಧಕ ರೋಗನಿರೋಧಕ ಪೋಷಕಾಂಶಗಳು ಪ್ರಮುಖವಾಗಿ ತೋಟಗಾರಿಕಾ ಬೆಳೆಗಳಾದ ಹಣ್ಣು, ತರಕಾರಿ ಮತ್ತು ಸಾಂಬಾರಕಗಳಲ್ಲಿರುವುದು ಗಮನಾರ್ಹ. ತಲೆತಲಾಂತರಗಳಿಂದ ಬಳುವಳಿಯಾಗಿ ಬಂದ ಭಾರತೀಯ ಆಹಾರ ಪದ್ಧತಿಯಲ್ಲಿ ಆರೋಗ್ಯವರ್ಧಕ ರಾಸಾಯನಿಕಗಳ ಬಳಕೆ ವ್ಯಾಪಕವಾಗಿರುವುದು ಸಂಶೋಧನೆಗಳಿಂದ ದೃಢಪಟ್ಟಿದೆ.

ಈ ಆರೋಗ್ಯದಾಯಕ ಅಂಶಗಳಿಂದಾಗುವ ಲಾಭ, ಜೀವಸತ್ವ ಮತ್ತು ಖನಿಜಗಳಿಂದಾಗುವ ಲಾಭಕ್ಕಿಂತ ಮಹತ್ತರವಾದದ್ದು. ಅಂದಮಾತ್ರಕ್ಕೆ, ಜೀವಸತ್ವ ಮತ್ತು ಖನಿಜಗಳಿಂದಾಗುವ ಲಾಭವನ್ನು ನಾನು ಕಡೆಗಣಿಸುತ್ತಿಲ್ಲ.

ದಿನನಿತ್ಯದ ಆಹಾರ ತಯಾರಿಕೆಯಲ್ಲಿ ಆರೋಗ್ಯವರ್ಧಕ ರಾಸಾಯನಿಕಗಳನ್ನೊಳಗೊಂಡ ಸಸ್ಯಮೂಲದ ವಸ್ತುಗಳನ್ನು ವಿಶಿಷ್ಟ ರೀತಿಯಲ್ಲಿ ಭಾರತೀಯ ಆಹಾರ ಪದ್ಧತಿಯಲ್ಲಿ ಅಳವಡಿಸಿಕೊಂಡಿರುವುದು ಸೋಜಿಗದ ಸಂಗತಿ. ಅಲ್ಲದೆ, ಇಷ್ಟೊಂದು ವೈಶಿಷ್ಟ್ಯಪೂರ್ಣ ಹಾಗೂ ವ್ಯಾಪಕವಾದ ಆರೋಗ್ಯವರ್ಧಕಗಳ ಬಳಕೆ ಅನ್ಯ ಸಂಸ್ಕೃತಿಗಳಲ್ಲಿ ವಿರಳ ಎಂದು ನನ್ನ ಅನಿಸಿಕೆ. ಅಂದಮಾತ್ರಕ್ಕೆ, ನಾನೇನೂ ಅನ್ಯ ಸಂಸ್ಕೃತಿಗಳ ಆಹಾರ ಪದ್ಧತಿಗಳನ್ನು ಅಭ್ಯಾಸ ಮಾಡಿದವನಲ್ಲ. ಓದುಗರ ಚಿಂತನೆಯನ್ನು ಪ್ರಚೋದಿಸಿ, ತಲೆತಲಾಂತರಗಳಿಂದ ಹರಿದುಬಂದ ಈ **ಆಹಾರ ವಿಜ್ಞಾನ**ದಲ್ಲಿ ಅಡಕಗೊಂಡಿರುವ ರೋಗನಿರೋಧಕ ಪೋಷಕಾಂಶಗಳ ಮಾಹಿತಿಗಳನ್ನು ಬಿತ್ತರಿಸುವುದೇ ಈ ಲೇಖನದ ಮೂಲ ಉದ್ದೇಶ. ಇದರಿಂದ ನಮ್ಮ




ಹಣ್ಣು, ತರಕಾರಿ ಮತ್ತು ಸಾಂಬಾರಕಗಳು ಅಥವಾ ಅವುಗಳಲ್ಲಿನ ರಾಸಾಯನಿಕಗಳ ಗುಳಿಗೆಗಳ ಮಾರಾಟ ಕ್ರಮೇಣ ಹೆಚ್ಚಾಗುತ್ತಿದೆ.




ಆಹಾರ ಪದ್ಧತಿಯನ್ನು ಕಾರಣಾಂತರಗಳಿಂದ ಮಾರ್ಪಡಿಸಿಕೊಂಡಾಗ ಆಗುವ ನಷ್ಟದ ಅರಿವು ಓದುಗರಲ್ಲಿ ಮೂಡಬಹುದೆಂಬುದು ನನ್ನ ಆಶಯ.

ಮೆಣಸಿನಕಾಯಿ, ಕೊತ್ತಂಬರಿ, ಜೀರಿಗೆ, ಚಕ್ಕೆ, ಅರಿಶಿನ, ಕರಿಮೆಣಸು, ಲವಂಗ ಮುಂತಾದವುಗಳಿಂದ ತಯಾರಿಸಿದ ಮಿಶ್ರಣವನ್ನು ನಾವು ದಿನಂಪ್ರತಿ ಉಪಯೋಗಿಸುತ್ತೇವೆ. ಈ ಮಿಶ್ರಣದಲ್ಲಿ ಉಪಯೋಗಿಸಿರುವ ಪ್ರತಿಯೊಂದರಲ್ಲೂ ಆರೋಗ್ಯ ವರ್ಧಕ/ರೋಗನಿರೋಧಕ ರಾಸಾಯನಿಕಗಳ ಇರುವಿಕೆ ಸಂಶೋಧನೆಗಳಿಂದ ದೃಢಪಟ್ಟಿದೆ. ಇಂತಹ ಸಂಶೋಧನಾ ಮಾಹಿತಿಗಳನ್ನು ಒಳಗೊಂಡ ವೈಜ್ಞಾನಿಕ ಪ್ರಬಂಧಗಳು ಅನೇಕ ಅಂತರರಾಷ್ಟ್ರೀಯ ವೈಜ್ಞಾನಿಕ ನಿಯತಕಾಲಿಕಗಳಲ್ಲಿ ಪ್ರಕಟಗೊಂಡಿವೆ. ಅಂದಮಾತ್ರಕ್ಕೆ, ಇಂತಹ ಆರೋಗ್ಯವರ್ಧಕ/ರೋಗನಿರೋಧಕ ರಾಸಾಯನಿಕಗಳ ಇರುವಿಕೆ ಕೇವಲ ಸಾಂಬಾರಕಗಳಿಗೆ ಸೀಮಿತವಾಗಿಲ್ಲ! ನಾವು ಉಪಯೋಗಿಸುವ ಹಲವಾರು ಹಣ್ಣು ಮತ್ತು ತರಕಾರಿಗಳಲ್ಲೂ ಇಂತಹ ಉಪಯುಕ್ತ ರಾಸಾಯನಿಕಗಳು ಇರುವುದೆಂದು ತಿಳಿದುಬಂದಿದೆ. ಈ ಲೇಖನದಲ್ಲಿ ಸಾಂಬಾರಕಗಳು, ಹಣ್ಣು ಮತ್ತು ತರಕಾರಿಗಳಲ್ಲಿನ ಆರೋಗ್ಯವರ್ಧಕ/ರೋಗನಿರೋಧಕ ಪೋಷಕಾಂಶಗಳ ಪ್ರಸ್ತಾವವಿದೆ.

**ಸಾಂಬಾರಕಗಳಲ್ಲಿನ ಆರೋಗ್ಯವರ್ಧಕ/ರೋಗನಿರೋಧಕ ಪೋಷಕಾಂಶಗಳು**

ಜೀವಕೋಶಗಳ ವಂಶವಾಹಿನಿಯಲ್ಲಿ ಅಡಕವಾಗಿರುವ ಹಲವಾರು ಜೀನ್‌ಗಳನ್ನು ಪ್ರಚೋದಿಸಿ ಜೀವಕೋಶಗಳ ಕಾರ್ಯನಿರ್ವಹಣೆಯನ್ನು ವಿಕೃತಗೊಳಿಸುವಲ್ಲಿ ಹಲವಾರು ಮಾನವನಿರ್ಮಿತ ರಾಸಾಯನಿಕಗಳು (ಕಲ್ಮಶಗಳು) ಪಾತ್ರವಹಿಸುತ್ತವೆ. ನಾವು ಸೇವಿಸುವ ಆಹಾರದಲ್ಲಿ ಇರಬಹುದಾದ ಕೀಟ/ಶಿಲೀಂಧ್ರನಾಶಕಗಳು, ಪ್ಲಾಸ್ಟಿಕ್ ಸಂಪರ್ಕದಿಂದ ಆಹಾರದೊಂದಿಗೆ ಸೇರಬಹುದಾದ ಕಲ್ಮಶಗಳು (ಉದಾಹರಣೆಗೆ, ಡೈ-ಈಥೈಲ್-ಹೆಕ್ಸಥ್ಯಾಲೇಟ್, ಬಿಸ್ಫಿನಾಲ್-ಎ), ಮಲಿನ ವಾಯುವಿನಲ್ಲಿನ ರಾಸಾಯನಿಕಗಳು- ಸಮರ್ಪಕ ಕಾರ್ಯಾಚರಣೆಯನ್ನು ಹೊಂದಿರುವ ಜೀವಕೋಶಗಳನ್ನು ರೋಗಕಾರಕಗಳಾಗಿ ಮಾರ್ಪಡಿಸಬಲ್ಲವು. ಅಸಮರ್ಪಕ ಕಾರ್ಯಾಚರಣೆ ಹೊಂದಿದ ಜೀವಕೋಶಗಳು ಅರ್ಬುದ ರೋಗಕಾರಕಗಳಾಗಬಹುದಾದ ಸಾಧ್ಯತೆ ಇರುತ್ತದೆ. ಜೀವಿಯ ಆರೋಗ್ಯಪೂರ್ಣ ಅಸ್ತಿತ್ವಕ್ಕೆ ಸಮರ್ಪಕ ಕಾರ್ಯಾಚರಣೆಯಿಂದ ವಿಮುಖವಾದ ಜೀವಕೋಶಗಳನ್ನು ನಿರ್ಮೂಲನ ಮಾಡುವ ಕಾರ್ಯಪೂರಕ. ಆದುದರಿಂದಲೇ, ಅಸಮರ್ಪಕ ಕಾರ್ಯಾಚರಣೆಯ ಜೀವಕೋಶಗಳ ನಿರ್ಮೂಲನ ಕಾರ್ಯ ಜೀವಿಯ ಬದುಕಿನಲ್ಲಿ ಅವ್ಯಾಹತವಾಗಿ ಸಾಗುತ್ತಿರುತ್ತದೆ. ವಂಶವಾಹಿನಿ ಸಂದೇಶವನ್ನು ಅಡ್ಡಗೆಡೆದು, ಜೀವಕೋಶಗಳ ಕಾರ್ಯಾಚರಣೆಯನ್ನು ಅಸಮರ್ಪಕಗೊಳಿಸಬಲ್ಲ ಕಲುಷಿತಗಳ ದುಷ್ಕೃತ್ಯವನ್ನು ನಿಗ್ರಹಿಸುವ ಸಾಮರ್ಥ್ಯ ಸಾಂಬಾರಕಗಳಲ್ಲಿನ ರಾಸಾಯನಿಕಗಳಿಗಿದೆ! ಅಂದರೆ, ಜೀವಿಯಲ್ಲಿ ಸ್ವಾಭಾವಿಕವಾಗಿ ಹುದುಗಿರುವ **ಅಸಮರ್ಪಕ ಕಾರ್ಯಾಚರಣೆಯ ಜೀವಕೋಶಗಳ ನಿರ್ಮೂಲನ ವ್ಯವಸ್ಥೆಯನ್ನು** ಸಾಂಬಾರಕಗಳಲ್ಲಿನ ರಾಸಾಯನಿಕಗಳು ಬಲಪಡಿಸುತ್ತವೆ. ಇಷ್ಟೇ ಅಲ್ಲದೆ, ಸಾಂಬಾರಕಗಳಲ್ಲಿನ ರಾಸಾಯನಿಕಗಳು ಜೀವಕೋಶಗಳ ಆರೋಗ್ಯಪೂರ್ಣ ಕಾರ್ಯಾಚರಣೆಯನ್ನು ಹಲವಾರು ರೀತಿಯಲ್ಲಿ ಸುಗಮಗೊಳಿಸುವ ಸಾಮರ್ಥ್ಯ ಪಡೆದಿವೆ.

ಸಾಂಬಾರಕಗಳಲ್ಲೆಲ್ಲ ಬಹುಶಃ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸುವ ಮೆಣಸಿನಕಾಯಿಯಲ್ಲಿನ ಖಾರಕ್ಕೆ ಕಾರಣ, 'ಕ್ಯಾಪ್ಸೆಸಿನ್' ಎಂಬ ರಾಸಾಯನಿಕ. ಸಮರ್ಪಕ ಕಾರ್ಯಾಚರಣೆಯಿಂದ ವಿಮುಖವಾದ ಜೀವಕೋಶಗಳನ್ನು ನಿರ್ಮೂಲನ ಮಾಡುವ ಕಾರ್ಯಕ್ಕೆ ಒತ್ತುಕೊಡುವುದರಲ್ಲಿ ಕ್ಯಾಪ್ಸೆಸಿನ್ ಪಾತ್ರವಹಿಸುತ್ತದೆ. ಉದಾಹರಣೆಗೆ, ಕ್ಯಾನ್ಸರ್ ಪೀಡಿತ ಪ್ರಾಸ್ಟ್ರೇಟ್ ಗ್ರಂಥಿಯ ಜೀವಕೋಶಗಳನ್ನು ನಾಶಗೊಳಿಸುವ ಸಾಮರ್ಥ್ಯವನ್ನು ಕ್ಯಾಪ್ಸೆಸಿನ್ ಪಡೆದಿದೆ. ರೋಗಗ್ರಸ್ತ ಇಲಿಗಳ ಪ್ರಾಸ್ಟ್ರೇಟ್ ಗ್ರಂಥಿಯ ಜೀವಕೋಶಗಳ ಮೇಲೆ ನಡೆಸಿದ ಸಂಶೋಧನೆಗಳಿಂದ ಈ ಸಂಗತಿ ವ್ಯಕ್ತವಾಗಿದೆ. ಕ್ಯಾಪ್ಸೆಸಿನ್ ರಕ್ತ ಪರಿಚಲನೆಯನ್ನು ಸುಗಮಗೊಳಿಸುತ್ತದೆ. ಅಲ್ಲದೆ, 'ಕೊಲೆಸ್ಟರಾಲ್' ಎಂಬ ಹಾನಿಕಾರಕ ಕೊಬ್ಬಿನಂಶವನ್ನು ಹತೋಟಿಯಲ್ಲಿಡುವಲ್ಲೂ ಸಹಕಾರಿಯಾಗಿದೆ. ಉರಿಯೂತಕ್ಕೆ ಎಡೆಮಾಡುವ ಜೀವಕೋಶದ ವ್ಯವಸ್ಥೆಯನ್ನು ನಿಗ್ರಹಿಸುವ ಮೂಲಕ ಕ್ಯಾಪ್ಸೆಸಿನ್ ಉರಿಯೂತದ ತೀವ್ರತೆಯನ್ನು ಕಡಿಮೆಗೊಳಿಸುವ ಸಾಮರ್ಥ್ಯ ಪಡೆದಿದೆ. ಅನಿಯಂತ್ರಿತ ಉರಿಯೂತ ಕ್ರಮೇಣ ವಿವಿಧ ತೆರನಾದ ಅರ್ಬುದ ರೋಗಕ್ಕೆ ಎಡೆಮಾಡಬಹುದು. ಕ್ಯಾಪ್ಸೆಸಿನ್ನಿನ ನೋವು ನಿವಾರಣ ಸಾಮರ್ಥ್ಯವನ್ನು ಮನಗೊಂಡು, ಕ್ಯಾಪ್ಸೆಸಿನ್ ಹೊಂದಿದ ನೋವು ಉಪಶಮನಕಾರಿ ಮುಲಾಮುಗಳನ್ನು ತಯಾರಿಸಲಾಗುತ್ತಿದೆ. ಉದಾಹರಣೆಗೆ, ಸಂಧಿವಾತ ಮಧುಮೇಹ ರೋಗಿಗಳಲ್ಲಿ ನರಗಳ ದೌರ್ಬಲ್ಯದಿಂದ ಕಾಣಿಸಿಕೊಳ್ಳುವ ನೋವು, ಇವುಗಳ ಚಿಕಿತ್ಸೆಯಲ್ಲಿ ಕ್ಯಾಪ್ಸೆಸಿನ್‌ಯುಕ್ತ ಮುಲಾಮುಗಳ ಉಪಯೋಗ ಕಂಡುಬರುತ್ತಿದೆ. ಕ್ಯಾಪ್ಸೆಸಿನ್ ಕುರಿತಾದ ಸುಮಾರು ಹದಿನಾಲ್ಕು ಸಾವಿರಕ್ಕೂ ಹೆಚ್ಚು ವೈಜ್ಞಾನಿಕ ಪ್ರಬಂಧಗಳು ಈವರೆಗೆ ಪ್ರಕಟಗೊಂಡಿವೆ. ಇದು ಮೆಣಸಿನಕಾಯಿಯಲ್ಲಿರುವ ರಾಸಾಯನಿಕದ ಉಪಯುಕ್ತತೆಗೆ ಸಾಕ್ಷಿ. ಅಂದಮೇಲೆ, ನಮ್ಮ ಆಹಾರದಲ್ಲಿ ಮೆಣಸಿನಕಾಯಿಯ ಪ್ರಾಮುಖ್ಯತೆಯ ಬಗೆಗೆ ಹೆಚ್ಚು ಹೇಳಬೇಕಾಗಿಲ್ಲ!

ಸುಮಾರು ೨೫೦೦ ವರ್ಷಗಳ ಹಿಂದಿನಿಂದಲೂ ಅರಿಶಿನದ ಉಪಯೋಗ ನಮ್ಮ ಸಂಸ್ಕೃತಿಯ ಅವಿಭಾಜ್ಯ ಅಂಗವಾಗಿ ವಿಕಸನಗೊಂಡಿದೆ. ಪಾಕವಿಧಾನದಲ್ಲಷ್ಟೇ ಅಲ್ಲದೆ, ಎಲ್ಲ ಶುಭ ಸಮಾರಂಭಗಳಲ್ಲೂ ಅರಿಶಿನದ ಪ್ರಾಮುಖ್ಯತೆ ಕಂಡುಬರುತ್ತದೆ. ಅರಿಶಿನವಿಲ್ಲದ ಯಾವುದೇ ಭಾರತೀಯ ಶುಭ ಸಮಾರಂಭವನ್ನು ಊಹಿಸಲೂ ಸಹ ಅಸಾಧ್ಯ. ಅರಿಶಿನದ ಹಳದಿಬಣ್ಣಕ್ಕೆ ಕಾರಣ ಕರ್ಕ್ಯುಮಿನ್ ಎಂಬ ರಾಸಾಯನಿಕ. ಅರಿಶಿನದಲ್ಲಿನ ಆರೋಗ್ಯವರ್ಧಕ/ರೋಗನಿರೋಧಕ ಅಂಶಗಳ ಗುಣಗಾನವನ್ನೊಳಗೊಂಡ ನಾಲ್ಕು ಸಾವಿರಕ್ಕೂ ಮಿಗಿಲಾದ ಸಂಶೋಧನ ಪ್ರಬಂಧಗಳು ಈವರೆಗೆ ಪ್ರಕಟಗೊಂಡಿವೆ. ಮೆಣಸಿನಕಾಯಿಯಂತೆ, ಅರಿಶಿನದಲ್ಲಿನ ಕರ್ಕ್ಯುಮಿನ್ ಸಹ ಅಸಮರ್ಪಕ ಕಾರ್ಯಾಚರಣೆಯ ಜೀವಕೋಶಗಳ ನಿರ್ಮೂಲನ ಕಾರ್ಯಕ್ಕೆ ಪ್ರಚೋದನಕಾರಿ. ಅರಿಶಿನದ ಆರೋಗ್ಯವರ್ಧಕ ಗುಣಗಳು ಇಷ್ಟಕ್ಕೇ ಸೀಮಿತಗೊಂಡಿಲ್ಲ, ಜೀವಕೋಶಗಳ ಸಮರ್ಪಕ ಕಾರ್ಯಾಚರಣೆಯಲ್ಲಿ ಭಾಗವಹಿಸುವ




ಅರ್ಬುದ ನಿರೋಧಕ ಲೈಕೋಪೀನ್ ಹೊಂದಿರುವ ಹಣ್ಣು ಮತ್ತು ತರಕಾರಿಗಳು

ಹಲವಾರು ಜೀವರಸಾಯನ ಕ್ರಿಯೆಗಳನ್ನು ಸುಗಮಗೊಳಿಸುವ ಸಾಮರ್ಥ್ಯ ಅರಿಶಿನಕ್ಕಿದೆ. ಆಮ್ಲಜನಕದಿಂದಾಗುವ ಅಡ್ಡಪರಿಣಾಮಗಳನ್ನು ತಡೆದು, ತನ್ಮೂಲಕ, ಹಲವಾರು ರೋಗಗಳನ್ನು ತಡೆಯುವಲ್ಲಿ, ಇಲ್ಲವೇ ಹತೋಟಿಯಲ್ಲಿಡುವಲ್ಲಿ ಅರಿಶಿನದಲ್ಲಿನ ಕರ್ಕ್ಯುಮಿನ್ ಪರಿಣಾಮಕಾರಿಯಾಗಿದೆ. ಅರಿಶಿನದ ಸೇವನೆಯಿಂದ ಆರೋಗ್ಯದ ಮೇಲಾಗುವ ಪರಿಣಾಮದ ವಿಚಾರವಾಗಿ ಹೇಳುವುದು ಸಾಕಷ್ಟಿದೆ. ಉರಿಯೂತ ನಿಯಂತ್ರಣ, ಬ್ಯಾಕ್ಟೀರಿಯಾ ಮತ್ತು ಪರಾವಲಂಬಿ ಜೀವಿಗಳ ನಿರ್ಮೂಲನ, ವಿವಿಧ ರೀತಿಯ ಕ್ಯಾನ್ಸರ್ ರೋಗಗಳನ್ನು ತಡೆಯುವುದು – ಇವು ಅರಿಶಿನದ ಸೇವನೆಯಿಂದಾಗುವ ಲಾಭಕ್ಕೆ ಕೆಲವು ಉದಾಹರಣೆಗಳು. ಹಾಗೆಯೇ, ಸೋಂಪು ಬೀಜಗಳಲ್ಲಿನ ಅನೆಥಾಲ್ ಕರಿಮೆಣಸಿನ ಪೈಪರಿನ್, ಚಕ್ಕೆ ಮತ್ತು ಲವಂಗಗಳಲ್ಲಿನ ಯೂಜೆನಾಲ್ ಸಹ ಅಸಮರ್ಪಕ ಕಾರ್ಯಾಚರಣೆಯತ್ತ ಸಾಗುತ್ತಿರುವ ಜೀವಕೋಶಗಳನ್ನು ಹತೋಟಿಯಲ್ಲಿಡುವಲ್ಲಿ ಸಹಕಾರಿಯಾಗಿವೆ. ಇಂತಹ ರೋಗಕಾರಕ ಜೀವಕೋಶಗಳನ್ನು ಅಂತ್ಯಗೊಳಿಸುವಲ್ಲಿ ಬೇಕಾಗುವ ಕಿಣ್ವಗಳ ಸಂಯೋಜನೆಗೆ ಪೂರ್ವಭಾವಿಯಾಗಿ ಬೇಕಾಗುವ ವಂಶವಾಹಿನಿ ಮಾಹಿತಿಯನ್ನು ಉದ್ದೀಪನಗೊಳಿಸುವಲ್ಲಿ ಸಾಂಬಾರಕಗಳಲ್ಲಿನ ರಾಸಾಯನಿಕಗಳು ಕಾರ್ಯಶೀಲವಾಗಿವೆ ಎಂಬುದು ಹಲವಾರು ಸಂಶೋಧನೆಗಳಿಂದ ವ್ಯಕ್ತವಾಗಿದೆ. ಇಷ್ಟೇ ಅಲ್ಲದೆ,




ಶುಂಠಿ, ಬೆಳ್ಳುಳ್ಳಿ ಮುಂತಾದವುಗಳಲ್ಲೂ ಇಂತಹ ಆರೋಗ್ಯವರ್ಧಕ/ರೋಗನಿರೋಧಕ ರಾಸಾಯನಿಕಗಳು ಇರುವುದು ಸಾಬೀತಾಗಿದೆ.

ಆರೋಗ್ಯವರ್ಧಕ/ರೋಗನಿರೋಧಕ ರಾಸಾಯನಿಕಗಳ ಇರುವಿಕೆ ಕೇವಲ ಸಾಂಬಾರಕಗಳಿಗೆ ಸೀಮಿತವಾಗಿಲ್ಲ. ಎಲೆಕೋಸಿಗೆ ಸಂಬಂಧಿಸಿದ ತರಕಾರಿಗಳಾದ ನವಿಲುಕೋಸು, ಬ್ರಾಕಲಿ, ಸಾಸಿವೆ ಮುಂತಾದವುಗಳಲ್ಲಿನ ಸಲ್ಫೊರಫೇನ್ ಹಾಗೂ ಇಂಡೋಲ್ - ಕಾರ್ಬಿನಾಲ್ ಎಂಬ ರಾಸಾಯನಿಕಗಳು ಅರ್ಬುದ ರೋಗವನ್ನು ತಡೆಗಟ್ಟುವಲ್ಲಿ ಸಹಕಾರಿಯಾಗಿವೆ.

ಟೊಮ್ಯಾಟೊದಲ್ಲಿನ ಲೈಕೊಪೀನ್ ಹಾನಿಕಾರಕ ಕೊಲೆಸ್ಟರಾಲ್ ಅಂಶವನ್ನು ಹತೋಟಿಯಲ್ಲಿಡಬಲ್ಲದು. ಅಲ್ಲದೆ, ದೃಷ್ಟಿಯ ಆರೋಗ್ಯವನ್ನು ಕಾಪಾಡುವಲ್ಲಿ ಲೈಕೊಪೀನ್ ಸಹಕಾರಿಯಾಗಿದೆ. ಲೈಕೊಪೀನ್ ಪಪ್ಪಾಯ, ಕಲ್ಲಂಗಡಿ, ಕೆಂಪು ಸೀಬೆ ಮುಂತಾದ ಹಣ್ಣುಗಳಲ್ಲೂ ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಲೈಕೊಪೀನ್ ಅರ್ಬುದ ರೋಗವನ್ನು ತಡೆಗಟ್ಟುವ ಸಾಮರ್ಥ್ಯವನ್ನೂ ಹೊಂದಿದೆ.

ಸೆಲೆರಿ, ಪಾರ್ಸ್ಲಿ, ಆರ್ಟಿಚೋಕ್ ಮುಂತಾದವುಗಳಲ್ಲಿರುವ ಎಪಿಜನಿನ್ ಅರ್ಬುದ ರೋಗವನ್ನು ತಡೆಗಟ್ಟುವ ಸಾಮರ್ಥ್ಯ ಹೊಂದಿದೆ. ಆಮ್ಲಜನಕದ ಅಡ್ಡ ಪರಿಣಾಮಗಳನ್ನು ನಿಯಂತ್ರಿಸಿ, ವೃದ್ಧಾಪ್ಯ ಪ್ರಾಪ್ತಿಯ ಗತಿಯನ್ನು ನಿಧಾನಗೊಳಿಸುವಲ್ಲಿ ದಾಳಿಂಬೆಯ ಎಲ್ಲಜಿಕ್ ಆಸಿಡ್, ದ್ರಾಕ್ಷಿ ಬೀಜಗಳಲ್ಲಿನ ಪಿಕ್ನೋಜನಾಲ್, ಕೆಂಪು ದ್ರಾಕ್ಷಿಯಲ್ಲಿನ ರೆಸ್ವೆಟ್ರೋಲ್ ಮುಂತಾದವು ಮುಖ್ಯವಾಗಿವೆ. ಹಣ್ಣು, ತರಕಾರಿ ಮತ್ತು ಸಾಂಬಾರಕಗಳಲ್ಲಿನ ಉಪಯುಕ್ತ ಅಂಶಗಳನ್ನು ಮನಗಂಡು ಅವುಗಳನ್ನು ಗುಳಿಗೆಗಳಾಗಿ ಪರಿವರ್ತಿಸುವ ಚಟುವಟಿಕೆ ಹೆಚ್ಚಾಗುತ್ತಿದೆ. ಇದು ಹಣ್ಣು, ತರಕಾರಿ ಮತ್ತು ಸಾಂಬಾರಕಗಳಲ್ಲಿನ ರಾಸಾಯನಿಕಗಳ ಉಪಯುಕ್ತತೆಗೆ ನಿದರ್ಶನ. ಆದರೆ, ಈ ರೂಪದಲ್ಲಿ ಇವುಗಳ ಸೇವನೆ ಮಾಡಹೊರಟಿರುವುದು ಸರಿಯಲ್ಲವೇನೊ ಎನ್ನಿಸುತ್ತದೆ. ಆಹಾರದಲ್ಲಿನ ರುಚಿ ಮತ್ತು ವಾಸನೆಗಳಿಗೆ ಸ್ಪಂದಿಸುವುದರಿಂದ ದೊರಕುವ ಮಾನಸಿಕ ತೃಪ್ತಿ ಮತ್ತು ಅದರಿಂದ ಪಚನಕ್ರಿಯೆಯ ಮೇಲಾಗುವ ಪರಿಣಾಮ – ಇವೆಲ್ಲ ಆಹಾರವನ್ನು ಗುಳಿಗೆಗಳಂತೆ ಸೇವಿಸಿದಾಗ ಬಹುಶಃ ದೊರೆಯಲಾರವು.

ತೋಟಗಾರಿಕೆ ಬೆಳೆಗಳಲ್ಲಿನ ರೋಗನಿರೋಧಕ/ ಆರೋಗ್ಯವರ್ಧಕ ಪೋಷಕಾಂಶಗಳು ಮತ್ತು ನಮ್ಮ ಆಹಾರದಲ್ಲಿ ಅವುಗಳ ಬಳಕೆ ವಿಚಾರವಾಗಿ ಹೇಳುವುದು ಬಹಳ ಇದೆ. ನಾನಿಲ್ಲಿ ಪ್ರಸ್ತುತಪಡಿಸಿರುವ ವಿಚಾರ ಕೇವಲ ಒಂದು ಅವಲೋಕನ ಮಾತ್ರ. ಭಾರತೀಯ ಆಹಾರದಲ್ಲಿನ ರೋಗನಿರೋಧಕ/ ಆರೋಗ್ಯವರ್ಧಕ ಪೋಷಕಾಂಶಗಳು ಇರುವುದೇ ನಿಜವಾದರೆ, ಮಧುಮೇಹ ಮುಂತಾದ ರೋಗಗಳು ನಮ್ಮಲ್ಲಿ ಇತ್ತೀಚೆಗೆ ಹೆಚ್ಚಾಗುವುದಕ್ಕೆ ಕಾರಣವೇನು ? ಈ ಪ್ರಶ್ನೆಗೆ ಸರಳ, ಸಮಂಜಸ ಹಾಗೂ ವೈಜ್ಞಾನಿಕ ಮಾಹಿತಿಗಳನ್ನೊಳಗೊಂಡ ಉತ್ತರ ಕೊಡುವುದು ಕಠಿಣ. 'ಆಹಾರದ ಜೊತೆಯಲ್ಲಿ ಅನಿವಾರ್ಯವಾಗಿ ಸೇವಿಸಬೇಕಾಗಿ ಬಂದಿರುವ ಕೀಟನಾಶಕ,

## ಹೇಳಲಾಗದ್ದು

ತನ್ನೊಳಗೆ ನಡೆದದ್ದನ್ನು
ಹೊರಗೆ ಹೇಳಲಾಗದ
ಬಾತ್‌ರೂಂನಂತೆ,
ಸಮಾಜದ ಹೊಲಸನ್ನು
ಹೇಳಲಾಗುತ್ತಿಲ್ಲವೇ ?
ಎಂಬುದೇ ನಮ್ಮ ಚಿಂತೆ

**ಶ್ರೀನಿವಾಸ ಕುಂಡಂತಾಯ**
ಜಿ-೦೧, 'ಶ್ರೀ ಗುರುಮ್ಯಾನ್ಷನ್'
ನಂ. ೧೫, ೨ನೇ ಕ್ರಾಸ್, ೧ನೇ ಮುಖ್ಯರಸ್ತೆ
ಪಿಎಂಡ್‌ಟಿ ಕಾಲೋನಿ, ಸಂಜಯನಗರ
ಬೆಂಗಳೂರು - ೫೬೦ ೦೯೪

ಶಿಲೀಂಧ್ರನಾಶಕ ಮುಂತಾದ ರಾಸಾಯನಿಕಗಳು ನಮ್ಮ ಆಹಾರದಲ್ಲಿನ ಉಪಯುಕ್ತ ಅಂಶಗಳನ್ನು ನಿರುಪಯುಕ್ತಗೊಳಿಸುತ್ತಿರಬಹುದೆ...?' ಎಂಬ ಶಂಕೆ ಉಂಟಾಗುತ್ತದೆ. ಅಲ್ಲದೆ, ಕಳೆದ ಹಲವು ದಶಕಗಳಿಂದ ನಮ್ಮಲ್ಲಿ ಪ್ಲಾಸ್ಟಿಕ್ ವಸ್ತುಗಳ ಬಳಕೆ ಹೆಚ್ಚಾಗಿದೆ. ಪ್ಲಾಸ್ಟಿಕ್ ತಯಾರಿಸಲು ಬಳಸುವ ರಾಸಾಯನಿಕಗಳು (ಉದಾಹರಣೆಗೆ, **ಡೈ-ಈಥೈಲ್- ಹೆಕ್ಸಥ್ಯಾಲೇಟ್, ಬಿಸ್ಫಿನಾಲ್-ಎ**) ನಮ್ಮ ದೇಹದಲ್ಲಿ ನಿರ್ನಾಳ ಗ್ರಂಥಿಗಳು ಸ್ರವಿಸುವ ಹಾರ್ಮೋನುಗಳ ಕಾರ್ಯಾಚರಣೆಗೆ ಅಡ್ಡಿಯನ್ನು ಉಂಟುಮಾಡುವುದರ ಮೂಲಕ ಸ್ಥೂಲಶರೀರ, ಮಧುಮೇಹ ಮುಂತಾದ ರೋಗಗಳಿಗೆ ಎಡೆಮಾಡಬಹುದೆಂದು ಇತ್ತೀಚಿನ ಸಂಶೋಧನೆಗಳಿಂದ ವ್ಯಕ್ತವಾಗುತ್ತಿದೆ. ಈ ವಿಚಾರಗಳನ್ನೊಳಗೊಂಡ ವೈಜ್ಞಾನಿಕ ಸಂಶೋಧನ ಲೇಖನಗಳು ಹಲವಾರು ಅಂತರರಾಷ್ಟ್ರೀಯ ನಿಯತಕಾಲಿಕಗಳಲ್ಲಿ ಪ್ರಕಟಗೊಂಡಿವೆ/ಪ್ರಕಟಗೊಳ್ಳುತ್ತಿವೆ.

**ಇಲ್ಲಿ ಪ್ರಸ್ತುತಪಡಿಸಿರುವ ವಿಚಾರಗಳ ಮೂಲ ಉದ್ದೇಶ ರೋಗಗಳಿಗೆ ನಿವಾರಣ ಮಾರ್ಗಗಳನ್ನು ಒದಗಿಸುವುದಲ್ಲ.**

ಈ ವಿಚಾರವನ್ನು ಓದುಗರು ಈ ದಿಕ್ಕಿನಲ್ಲಿ ಬಳಸಬಾರದು. ಹಣ್ಣು, ತರಕಾರಿ ಮತ್ತು ಸಾಂಬಾರಕಗಳಲ್ಲಿನ ಆರೋಗ್ಯವರ್ಧಕ/ರೋಗನಿರೋಧಕ ಪೋಷಕಾಂಶಗಳು ಹಾಗೂ ಭಾರತೀಯ ಆಹಾರದಲ್ಲಿ ಅವುಗಳ ವಿಶಿಷ್ಟ ಬಳಕೆಯ ವಿಚಾರವಾಗಿ ಓದುಗರಲ್ಲಿ ಆಸಕ್ತಿ ಮೂಡಿಸುವುದು ನನ್ನ ಉದ್ದೇಶ. ಈ ಆಸಕ್ತಿ ಬೆಳೆದು, ಭಾರತೀಯ ಆಹಾರದ ವೈಜ್ಞಾನಿಕ ಸ್ವರೂಪವನ್ನು ಯುವ ಪೀಳಿಗೆಗೆ ಬಿತ್ತರಿಸುವುದೆಂಬ ಆಶಾಭಾವನೆ ಹೊಂದಿದ್ದೇನೆ.

**ಡಾ|| ಜಿ. ಎನ್. ಮೋಹನ್ ಕುಮಾರ್**
ತೋಟಗಾರಿಕಾ ವಿಭಾಗ, ವಾಷಿಂಗ್ಟನ್ ಸ್ಟೇಟ್ ಯೂನಿವರ್ಸಿಟಿ
ಪುಲ್ಮನ್, ಅಮೆರಿಕ

## ಭೀಮಯಾನ

**(ಡಾ|| ಬಿ. ಆರ್. ಅಂಬೇಡ್ಕರ್ ಚಿಂತನೆಗಳು)**

ಡಾ|| ಎಚ್. ಎಸ್. ಅನುಪಮಾ ಬಸೂ

**ಪುಟ : ೧೦೮** **ಬೆಲೆ : ರೂ. ೬೦**

**ಲಡಾಯಿ ಪ್ರಕಾಶನ,** ನಂ. ೨೧, ಪ್ರಸಾದ ಹಾಸ್ಟೆಲ್, ಗದಗ - ೫೮೨ ೧೦೧

ಡಾ|| ಬಾಬಾ ಸಾಹೇಬ್ ಅಂಬೇಡ್ಕರ್‌ರವರ ಚಿಂತನೆಗಳ ಆಯ್ದ ಬರಹಗಳ ಅಮೂಲ್ಯ ಕೃತಿ ಈ ಭೀಮಯಾನ. ಸುಮಾರು ೨೨ ಲೇಖನಗಳಿರುವ ಈ ಕೃತಿ ಇಡೀ ಭಾರತೀಯ ಸಮಾಜವನ್ನು ಬೇರೆ ಬೇರೆ ನೆಲೆಗಳಿಂದ ವಿಮರ್ಶಿಸುತ್ತದೆ. ಸಮಾಜವನ್ನು ಕುರಿತು ತೀವ್ರವಾಗಿ ಚಿಂತಿಸುವ ವ್ಯಕ್ತಿಯ ಆತಂಕ, ತಲ್ಲಣ, ನೋವು, ನಿರಾಸೆ, ಅವಮಾನ, ಸಂಕಟ, ಇವೆಲ್ಲವುಗಳನ್ನು ಆತ ನಿರ್ದಾಕ್ಷಿಣ್ಯವಾಗಿ ನಿರ್ಭಿಡೆಯಿಂದ ಎದುರುಗೊಳ್ಳುವ ಪ್ರಾಮಾಣಿಕ ದಿಟ್ಟತನವನ್ನು ಕೃತಿಯ ಬರಹಗಳಲ್ಲಿ ಕಾಣಬಹುದು. ಅಂಬೇಡ್ಕರ್ ಶೋಷಿತರ, ದುರ್ಬಲರ ಪರವಾಗಿ ಇತರರೊಂದಿಗೆ ನಡೆಸುವ ವಾಗ್ವಾದಗಳು, ಅರ್ಥಪೂರ್ಣ ಚರ್ಚೆಯನ್ನು ಕೃತಿ ತೆರೆದಿಡುತ್ತದೆ.

ಸಮ ಸಮಾಜದ ತುಡಿತವಿರುವ ವ್ಯಕ್ತಿ ಅಸಮಾನ ಸಮಾಜವನ್ನು ತಿದ್ದಲು ಎದುರಿಸಲೇಬೇಕಾಗಿ ಬರುವ ಅಡ್ಡಿ - ಆತಂಕಗಳು, ಅವುಗಳನ್ನು ಮೆಟ್ಟಿನಿಂತು ಗುರಿ ತಲುಪಲು ನಡೆಸಲೇಬೇಕಾದ ಹೋರಾಟಗಳನ್ನು ಇಲ್ಲಿನ ಚಿಂತನಗಳು ಮುಕ್ತವಾಗಿ ಚರ್ಚಿಸುತ್ತವೆ.

ಪ್ರಸ್ತುತ ದಲಿತ ಸಂಘಟನೆಗಳು ತಲುಪಿರುವ ಅಧೋಗತಿ, ಅನೈತಿಕ ರಾಜಕಾರಣ, ಕೋಮುವಾದ, ದೇಶಭಕ್ತಿಯ ನೆಪದಲ್ಲಿ ನಡೆಯುತ್ತಿರುವ ಹಿಂಸಾಚಾರ, ಸಂಸದೀಯ ಪ್ರಜಾಪ್ರಭುತ್ವದ ಲೋಪಗಳು, ಆಳುವವರ ವರ್ಗಗಳ ಕಪಟ ಸುಧಾರಣಾ ನೀತಿಗಳು, ಅಪವಿತ್ರ ಚುನಾವಣಾ ಹೊಂದಾಣಿಕೆ, ಪ್ರಜಾಮತದ ದುರ್ಬಳಕೆ - ಎಲ್ಲವುಗಳನ್ನೂ ಸುಮಾರು ೮೦ರ ದಶಕದಲ್ಲೇ ಚಿಂತಿಸಿರುವ ಅಂಬೇಡ್ಕರ್ ಇವುಗಳ ನಿವಾರಣೆಗಾಗಿ ಪರ್ಯಾಯ ಹಾದಿಗಳನ್ನು ಇಲ್ಲಿ ಬರಹಗಳಲ್ಲಿ ಸೂಚಿಸಿರುತ್ತಾರೆ. ಹಾಗಾಗಿ ಕೃತಿ ಹೆಚ್ಚು ಪ್ರಸ್ತುತ. ಸಮ ಸಮಾಜದ ಕುರಿತು ಸ್ಪಷ್ಟತೆಯಿರುವ ವ್ಯಕ್ತಿಯ ನಡೆನುಡಿಯಲ್ಲಿನ ನಿಷ್ಠುರತೆಯನ್ನು ಈ ಕೃತಿಯ ಬರಹಗಳಲ್ಲಿ ಕಾಣಬಹುದು. ಅವರು ಗಾಂಧಿಯ ಜೊತೆ ನಡೆಸಿದ ನಿಷ್ಠುರ, ಪ್ರಾಮಾಣಿಕ ಚರ್ಚೆ ಬಿ.ಬಿ.ಸಿ.ಗೆ ನೀಡಿದ ಸಂದರ್ಶನ ಇದಕ್ಕೆ ಸಾಕ್ಷಿ. ಒಟ್ಟಾರೆ ಕೃತಿ ಹೆಚ್ಚು ಪ್ರಸ್ತುತ, ಪ್ರಾಮಾಣಿಕ ಹಾಗೂ ಪರಿಣಾಮಕಾರಿ.

**ವಿ. ಆರ್. ರಮೇಶ ಕೋಲಾರ**
ಪ್ರಥಮ ದರ್ಜೆ ಸಹಾಯಕರು, ಕರ್ನಾಟಕ ಲೋಕಾಯುಕ್ತ, ಕೋಲಾರ - ೫೬೩ ೧೦೧

## ಪ್ರವಾಸದಲ್ಲಿ ಕಂಡದ್ದು ಕಾಣದ್ದು

ಪರಂಜ್ಯೋತಿ

**ಪುಟ : ೮೮** **ಬೆಲೆ : ರೂ. ೮೦**

**ಇಂಚರ ಪ್ರಕಾಶನ,** ನಂ. ೧೦, ೧ನೇ ಮಹಡಿ, ಶ್ರೀ ರಾಮ ದೇವಾಲಯದ ರಸ್ತೆ, ಶ್ರೀ ರಾಮ ದೇವಾಲಯದ ಎದುರು, ಈಜಿಪುರ, ವಿವೇಕನಗರ ಅಂಚೆ, ಬೆಂಗಳೂರು - ೪೭

ಪ್ರವಾಸವೆಂದರೆ, ಯಾರಿಗೆ ಪ್ರಿಯವಲ್ಲ ಹೇಳಿ ! ಪ್ರವಾಸಗಳು ಮನುಷ್ಯನನ್ನು ಬದುಕಿನ ಜಂಜಡಗಳ ಏಕತಾನತೆಯಿಂದ ಬಿಡುಗಡೆಗೊಳಿಸುತ್ತವೆ. ಹೊಸ ಊರು, ನದಿ, ಬೆಟ್ಟ, ಜಲಪಾತಗಳು, ಕೋಟೆ-ಕೊತ್ತಲುಗಳು, ಪ್ರಾಚೀನ ಗುಡಿ ಗೋಪುರಗಳು, ನಿಸರ್ಗದ ಇನ್ನಿತರೆ ವಿಶಿಷ್ಟ ರಮ್ಯ ತಾಣಗಳು ಅವನನ್ನು ಬದುಕಿನ ಎಲ್ಲ ಆತಂಕ, ದುಗುಡಗಳಿಂದ ದೂರ ಮಾಡಿ ನವಚೈತನ್ಯ ಮೂಡಿಸುತ್ತವೆ. ಪ್ರವಾಸವೆಂದರೆ ನೋಡಿ ಸವಿಯುವುದಷ್ಟೇ ನಡೆಯುತ್ತಿರುವುದಲ್ಲ, ಭೂತ-ವರ್ತಮಾನ- ಭವಿಷ್ಯದ ಸಮೀಕರಣವೂ, ತುಲನಾತ್ಮಕವೂ ಏಕಕಾಲಕ್ಕೆ ನಡೆಯುತ್ತಿರುತ್ತದೆ. ಪ್ರವಾಸದಲ್ಲಿ ಕಾಣುವ ವಿಶಿಷ್ಟ ಸ್ಥಳ, ವಸ್ತು, ಸನ್ನಿವೇಶಗಳ ಜೊತೆಗೆ ಕಾಣದ ಸ್ಥಳ ಪುರಾಣ, ಇತಿಹಾಸಗಳ ಸಂಗ್ರಹವೂ ನಡೆಯುತ್ತಾ ಸಾಗಿ ಅದೆಲ್ಲವನ್ನು ಅಕ್ಷರ ರೂಪಕ್ಕಿಳಿಸಿ ದಾಖಲಿಸಿರುವ ಪ್ರವಾಸಗಳ ಸಾರ್ಥಕ ಕೃತಿ ಇದು. ಪ್ರವಾಸಗಳ ಪ್ರತಿಕ್ಷಣ, ಘಟನೆ, ಸನ್ನಿವೇಶವನ್ನು ಕುತೂಹಲದಿಂದ ನೋಡುವ, ಅನುಭವಿಸುವ, ಶೋಧಿಸುವ ಕ್ರಿಯೆಯನ್ನು ನಿರಂತರವಾಗಿ ಆಯ್ದುಕೊಂಡಿರುವುದು ಪ್ರತಿ ಪಯಣವನ್ನು ಸೂಕ್ಷ್ಮಗ್ರಾಹಿಯಂತೆ ದೃಷ್ಟಿಸುತ್ತಾ ದಾಖಲಿಸುತ್ತಾ ಸಾಗುವುದು ನಿಜಕ್ಕೂ ಆಶ್ಚರ್ಯವನ್ನುಂಟುಮಾಡುತ್ತದೆ. ಯಾವುದೇ ಸ್ಥಳ ಕಂಡರೂ ಅದರ ಗತವನ್ನು ಕೆದಕುತ್ತಾ ಶೋಧಿಸುತ್ತಾ, ಸಂಗ್ರಹಿಸುತ್ತಾ ಅವೆಲ್ಲವನ್ನು ವಿಮರ್ಶಿಸುತ್ತಾ ಸಾಗುವುದು ಕೃತಿಯ ಶ್ರೇಷ್ಠತೆಗೆ ಸಾಕ್ಷಿ. ಕೃತಿಯಲ್ಲಿ ಹೆಸರಿಸಿರುವ ಸ್ಥಳಗಳು ಪ್ರಸಿದ್ಧವಿರಲಿ, ಇಲ್ಲದಿರಲಿ ಲೇಖಕನ ಕುತೂಹಲ ಸೊಗಸಾಗಿ ಮೂಡಿಬಂದಿದೆ.



## ಶಬ್ದದ ಲಜ್ಜೆಯ ನೋಡಾ

ಜಯಪ್ರಕಾಶ್ ಶೆಟ್ಟಿ ಹೆಚ್.

**ಪುಟ : ೨೨೪** **ಬೆಲೆ : ರೂ. ೧೫೦**

**ಜ್ಯೋತಿ ಪ್ರಕಾಶನ,** ಎಂ. ೪೫, ಕರ್ನಾಟಕ ಬ್ಯಾಂಕ್ ರಸ್ತೆ, ವಿವೇಕಾನಂದ ಸರ್ಕಲ್ ಹತ್ತಿರ, ಮೈಸೂರು - ೫೭೦ ೦೨೩

ಇದು ನಮ್ಮ ಕನ್ನಡ ಸಾಹಿತ್ಯವನ್ನು ಹೊಸ ಬಗೆಯಲ್ಲಿ ಅವಲೋಕನ ಮಾಡಿರುವ ವಿಶಿಷ್ಟ ಕೃತಿ. ಇಲ್ಲಿ ಹನ್ನೆರಡು ವಿಮರ್ಶಾ ಲೇಖನಗಳಿದ್ದು, ಕೊನೆಯ ಎರಡು ಲೇಖನಗಳನ್ನು ಹೊರತುಪಡಿಸಿ ಉಳಿದೆಲ್ಲಾ ಲೇಖನಗಳು ಹಳೆಗನ್ನಡದ ಸಾಹಿತ್ಯವನ್ನು ಕುರಿತು ಚರ್ಚಿಸುವಂಥವು. ಬಿಡಿ ಲೇಖನಗಳಾಗಿದ್ದರೂ ಸಹ ಇಲ್ಲಿನ ಎಲ್ಲಾ ಲೇಖನಗಳಲ್ಲಿಯೂ ಕೆಲಸ ಮಾಡಿರುವ ದೃಷ್ಟಿಕೋನ ಆಲೋಚನಾ ಕ್ರಮ, ಪ್ರಗತಿಪರ ನಿಲುವು ಒಂದೇ ಆಗಿರುವುದರಿಂದ ಮಹಾಪ್ರಬಂಧದ ಹರಹು ಈ ಕೃತಿಗೆ ದಕ್ಕಿದೆ. ಮೊದಲಿನ ನಾಲ್ಕು ಲೇಖನಗಳಲ್ಲಿ ಪ್ರಾಚೀನ ಸಾಹಿತ್ಯದ, ಅದರಲ್ಲಿಯೂ ವಿಶೇಷವಾಗಿ ಪಂಪನ ಕಾವ್ಯಗಳನ್ನು ಕುರಿತ ವಿಶ್ಲೇಷಣೆಯಿದೆ. ಆ ಮೂಲಕ ಕನ್ನಡಕ್ಕೆ ಕನ್ನಡದ್ದೇ ಆದ ಕಾವ್ಯಮೀಮಾಂಸೆ ರೂಪಿಸುವ ಕೆ. ವಿ. ಸುಬ್ಬಣ್ಣರವರ 'ಪಂಪನ ಕವಿತೆ : ಅನುಸಂಧಾನಕ್ಕೆ ಹೊಸ ಮಾರ್ಗ' ಎಂಬ ಲೇಖನ ಹಾಗೂ ರಹಮತ್ ತರೀಕೆರೆಯವರ 'ಕನ್ನಡ ಸಾಹಿತ್ಯಮೀಮಾಂಸೆ ಭಾಗ-೧ ಮತ್ತು ಭಾಗ-೨' ಮುಂದುವರಿಕೆಯಂತೆ ನಮಗೆ ಲೇಖನಗಳು ಕಾಣುತ್ತವೆ. ಕೃತಿಯ ಕೊನೆಯ ಭಾಗದಲ್ಲಿ ಮಧ್ಯಕಾಲೀನ ಸಾಹಿತ್ಯಕ್ಕೆ ಪ್ರಾತಿನಿಧಿಕವೆಂಬಂತೆ ಹರಿಹರ ಮತ್ತು ಕನಕದಾಸರ ಕೃತಿಗಳನ್ನು, ಆಧುನಿಕ ಸಾಹಿತ್ಯವನ್ನು ಪ್ರತಿನಿಧಿಸುವಂತೆ ರಾಘವೇಂದ್ರ ಪಾಟೀಲ ಮತ್ತು ಲಕ್ಷ್ಮಣ ಕೊಡಸೆಯವರ ಕೃತಿಗಳನ್ನು ಚರ್ಚೆಗೆ ಎತ್ತಿಕೊಳ್ಳಲಾಗಿದೆ. ಒಟ್ಟಿನಲ್ಲಿ ಇಲ್ಲಿನ ಎಲ್ಲ ಲೇಖನಗಳನ್ನು ಸಾಹಿತ್ಯ ವಿಮರ್ಶೆ, ಸಂಸ್ಕೃತ ವಿಮರ್ಶೆ ಮತ್ತು ಸಮಾಜ ವಿಮರ್ಶೆಯ ಲೇಖನಗಳಂತೆ ಓದಿಸಿಕೊಳ್ಳುತ್ತವೆ. ಒಟ್ಟಿನಲ್ಲಿ ನಮ್ಮ ಕನ್ನಡ ಸಾಹಿತ್ಯವನ್ನು ಹೊಸ ರೀತಿಯಲ್ಲಿ ಓದುವುದು ಹೀಗೆ ಎಂಬುದಕ್ಕೆ ಹಲವು ಒಳನೋಟಗಳನ್ನು ನೀಡುವ ಮಹತ್ವದ ಕೃತಿಯಿದು.

## ಆಚಾರ್ಯ ಪ್ರಹಸನ ಮತ್ತು ಏನ್ ಹುಚ್ಚೂರೀ... (ಎರಡು ಪ್ರಹಸನಗಳು)

ಪ್ರಸನ್ನ

**ಪುಟ : x + ೧೪೬ = ೧೫೬** **ಬೆಲೆ : ರೂ. ೧೨೦**

**ಮನೋಹರ ಗ್ರಂಥಮಾಲಾ,** ಲಕ್ಷ್ಮೀ ಭವನ, ಸುಭಾಷ್ ರಸ್ತೆ, ಧಾರವಾಡ - ೫೮೦ ೦೦೧




ಈ ಎರಡೂ ಪ್ರಹಸನಗಳು ಪ್ರಖ್ಯಾತ ಫ್ರೆಂಚ್ ನಾಟಕಕಾರನಾದ ಮೊಲಿಯರ್‌ನ ನಾಟಕಗಳಿಂದ ಪ್ರೇರಣೆ ಪಡೆದಿರುವಂಥವು. ಆದರೆ ಬಹಳ ಸುಲಭವಾಗಿ ಇವುಗಳನ್ನು ಅನುವಾದ ಅಥವಾ ರೂಪಾಂತರಗಳೆಂದು ಕರೆಯಲಾಗುವುದಿಲ್ಲ. ಕನ್ನಡದ ಜಾಯಮಾನಕ್ಕೆ ಅನುಗುಣವಾಗಿ ರಚಿಸಲ್ಪಟ್ಟಿರುವ ಪ್ರಹಸನಗಳಿವು. ಪಾತ್ರಗಳ ಹೆಸರು, ಸ್ಥಳ ನಾಮಗಳು, ಸಂದರ್ಭ, ಸನ್ನಿವೇಶ, ನಂಬಿಕೆ, ಆಚರಣೆಗಳು ಹೀಗೆ ಯಾವುದರಲ್ಲಿಯೂ ಮೂಲದ ಛಾಯೆ ಇಲ್ಲ. ಪ್ರಸನ್ನ ಅವರ ಸೃಜನಶೀಲ ಪ್ರತಿಭೆಯಿಂದ ಇವು ಕನ್ನಡದ ಕೃತಿಗಳಂತೆಯೇ ಕಾಣುತ್ತಿವೆ. 'ತದ್ರೂಪಿ ದಂಗೆಯ ಮುಂಚಿನ ದಿನಗಳು', 'ಹದ್ದು ಮೀರಿದ ಹಾದಿ' ಈ ಮಾದರಿಯ ಗಂಭೀರ ಸ್ವರೂಪದ ನಾಟಕಗಳನ್ನು ರಚಿಸಿದ್ದ ಪ್ರಸನ್ನರವರು ಈ ಪ್ರಹಸನಗಳಲ್ಲಿ ಹಾಸ್ಯದ ಹೊನಲನ್ನು ಹರಿಸಿದ್ದಾರೆ. ಇದೇ ಈ ಪ್ರಹಸನಗಳ ವಿಶೇಷತೆ. ಹಾಸ್ಯ ನಾಟಕಗಳಾಗಿದ್ದರೂ ಸಹ ಇವುಗಳ ಉದ್ದೇಶ ಕೇವಲ ಮನರಂಜನೆಯಲ್ಲ, ಇಲ್ಲಿ ತಲೆಮಾರುಗಳ ನಡುವಿನ ಸಂಘರ್ಷವಿದೆ. ಬಡವರು, ಶ್ರೀಮಂತರುಗಳ ನಡುವಿನ ಅಸಮಾನತೆಯ ಚಿತ್ರಣವಿದೆ, ಮನುಷ್ಯ ಸಂಬಂಧಗಳ ಶೋಧನೆ ಇದೆ. ಹೊಸ ಕಾಲದ ಮನುಷ್ಯರಾದ ನಾವು ಆಧುನಿಕರಾದಂತೆಲ್ಲಾ ಸ್ವಾರ್ಥಿಗಳಾಗುತ್ತಿರುವುದರ ಬಗೆಗೆ, ವಿಲಾಸದ ಕಡೆ ಸಾಗುತ್ತಿರುವುದರ ಬಗೆಗೆ, ಅನೈತಿಕ ಹಾದಿ ಹಿಡಿದಿರುವುದರ ಬಗೆಗೆ, ವ್ಯಂಗ್ಯವಿದೆ, ವಿಷಾದವಿದೆ, ಒಬ್ಬನಲ್ಲಿ ಮನುಷ್ಯ ಮುಖವಾಡಗಳನ್ನು ಕಿತ್ತೊಗೆದು ನಮ್ಮ ಒಳಗನ್ನು ತೋರಿಸುವ ಪ್ರಹಸನಗಳಿವು. ಸಂಸ್ಕೃತ ಮತ್ತು ಗ್ರೀಕ್ ನಾಟಕಗಳ ಹಾಗೆ ಪ್ರಾರ್ಥನೆ, ಮೇಳ, ಹಾಡುಗಳ ಹಂದರವಿದ್ದರೂ ವಸ್ತು ಭಾಷೆ ಮತ್ತು ಮನೋಧರ್ಮ ಹೊಸತು, ಒಂದು ಪ್ರಹಸನವನ್ನು ಮತ್ತೊಂದರ ಮುಂದುವರಿಕೆ ಎಂಬಂತೆ ನಾವು ಓದಬಹುದು ಅಥವಾ ಭಾವಿಸಿ ನೋಡಬಹುದು.

## ಇಸ್ಲಾಂ – ಕೆಲವು ತಪ್ಪುಗ್ರಹಿಕೆಗಳು

*ಡಾ|| ಅಸ್ಗರ್ ಅಲಿ ಎಂಜಿನಿಯರ್; ಕನ್ನಡಕ್ಕೆ : ಹಸನ್ ನಯೀಂ ಸುರಕೋಡ*

**ಪುಟ : ೯೬** **ಬೆಲೆ : ರೂ. ೬೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಧರ್ಮ ಮತ್ತು ರಾಜಕಾರಣ ಸಮಾನಾಂತರವನ್ನು ಕಾಪಾಡಿಕೊಳ್ಳದೆ ಒಂದನ್ನೊಂದು ಸಂಧಿಸಿದರೆ ಆಗುವ ಅನಾಹುತವೇನೆಂದು ನಾವಿಂದು ಕಾಣುತ್ತಿದ್ದೇವೆ. ರಾಜಕೀಯವು ಧರ್ಮವನ್ನು ತನ್ನ ಅಧಿಕಾರದ ಆಯುಧವನ್ನಾಗಿಸಿ ಸ್ವಂತ ಹಿತಾಸಕ್ತಿಗೆ ಬಳಸಿಕೊಂಡಾಗ ನಡೆಯಬಹುದಾದದ್ದು ಏನೆಂದು ಡಾ|| ಅಸ್ಗರ್ ಅಲಿ ಎಂಜಿನಿಯರ್ ಬರೆದ ಲೇಖನಗಳಲ್ಲಿ ಕಾಣಬಹುದು. ಜಗತ್ತಿನಾದ್ಯಂತ ಭಯೋತ್ಪಾದನೆ ಅಪಾಯಕಾರಿ ಮಟ್ಟವನ್ನೂ ಮೀರಿ ವಿಜೃಂಭಿಸುತ್ತಿರುವಾಗ, ಧರ್ಮದ ಬಗ್ಗೆ ನಮ್ಮ ದೃಷ್ಟಿಕೋನವನ್ನು ವಿಮರ್ಶೆಗೊಳಪಡಿಸಬೇಕಾದ ಅಗತ್ಯವನ್ನು ಇವು ಒತ್ತಿ ಹೇಳುತ್ತವೆ. ಪ್ರವಾದಿಗಳ ಕಾಲದಲ್ಲಿ ಕುರ್‌ಆನ್‌ನಲ್ಲಿನ ಉಲ್ಲೇಖವು ಶಾಂತಿ-ಕರುಣೆ-ನ್ಯಾಯ ಮತ್ತು ಸತ್ಯಸಂಧತೆಯೇ ಆಗಿದ್ದು ಇವೆಲ್ಲ ಶ್ರೇಷ್ಠ ಮೌಲ್ಯಗಳೆಂದೇ ಪರಿಗಣಿಸಲ್ಪಟ್ಟಿದ್ದವು. ಎಂದಿನಿಂದ ರಾಜಕೀಯದ ಮಲಿನ ಹಸ್ತಕ್ಷೇಪ ಧರ್ಮದಲ್ಲಿ ಪ್ರಾರಂಭವಾಯಿತೋ ಅಂದಿನಿಂದ ವಿಶ್ವಾದ್ಯಂತ ಧರ್ಮಗಳ ಎಲ್ಲ ಉಲ್ಲೇಖಗಳೂ ತಪ್ಪಾಗಿ ಅರ್ಥೈಸಲ್ಪಟ್ಟು ಎಲ್ಲ ಧರ್ಮಗಳೂ ತಮ್ಮ ಮೌಲ್ಯ ಕಳೆದುಕೊಂಡು ಸ್ವಾರ್ಥ ಮೆರೆಯತೊಡಗಿದವು. ರಾಜರಿಗನುಕೂಲವಾಗಿ ಧರ್ಮ ಮಾತಾಡತೊಡಗಿತು. ಇದಕ್ಕೆ ಇಸ್ಲಾಂ ಕೂಡ ಹೊರತಲ್ಲ. ಆಕ್ರಮಣ ಎಂದೂ ಕುರ್‌ಆನ್‌ನ ಸಂದೇಶವಾಗಿರಲಿಲ್ಲ, ಅಲ್ಲಿ ಸಹಬಾಳ್ವೆಗೆ ಆದ್ಯತೆ ಇತ್ತು. ಆತ್ಮರಕ್ಷಣೆಗಾಗಿ ಮಾತ್ರ ಹೋರಾಟ-ಯುದ್ಧ ಮಾಡಬಹುದೆಂಬ ಅಲ್ಲಿನ ಹೇಳಿಕೆಯೊಂದನ್ನೇ ಸಮರ್ಥಿಸಿಕೊಂಡು ಕುರ್‌ಆನ್‌ನ ಸಂದೇಶವೆಂದು ಸಾರುತ್ತಾ ಚರಿತ್ರೆಯಲ್ಲಿ ಅನೇಕ ದಾಳಿಕೋರ ಪ್ರಭುಗಳು ನೆರೆರಾಷ್ಟ್ರಗಳಿಗೆ ನುಗ್ಗಿ ಸಂಪತ್ತನ್ನು ದೋಚುವಲ್ಲಿ ನಿರತರಾದರು. ಕ್ರಮೇಣ ಕುರ್‌ಆನ್‌ನ ಎಲ್ಲ ಮೌಲ್ಯಗಳನ್ನು ಗಾಳಿಗೆ ತೂರಿದ ಈ ಧರ್ಮವನ್ನು ಅನೇಕರು ತಪ್ಪಾಗಿ ಅರ್ಥೈಸಿಕೊಂಡದ್ದನ್ನು ಇಲ್ಲಿ ಚರ್ಚಿಸಲಾಗಿದೆ.




## ರಾಷ್ಟ್ರೀಯ ಆಂದೋಲನ – ಸಿದ್ಧಾಂತದ ಮತ್ತು ಇತಿಹಾಸದ ಅಧ್ಯಯನಗಳು

*ಇರ್ಫಾನ್ ಹಬೀಬ್;*
*ಕನ್ನಡಕ್ಕೆ : ಎಂ. ಅಬ್ದುಲ್ ರೆಹಮಾನ್ ಪಾಷ*

**ಪುಟ : ೧೪೪** **ಬೆಲೆ : ರೂ. ೯೦**

**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಎರಡು ಘಟನೆಗಳು ಚಾರಿತ್ರಿಕ ಮಹತ್ವವುಳ್ಳವು. ಒಂದು – ಸಿಪಾಯಿದಂಗೆ ಎಂಬ ಸ್ವಾತಂತ್ರ್ಯಕ್ಕಾಗಿ ನಡೆದ ಮೊದಲ ಸಂಘರ್ಷ. ಇನ್ನೊಂದು – ಮಹಾತ್ಮಾ ಗಾಂಧಿ ನೇತೃತ್ವದ ಕ್ವಿಟ್ ಇಂಡಿಯಾ ಚಳುವಳಿ. ಚರಿತ್ರಕಾರರು ಬಣ್ಣಿಸಿ ದಾಖಲಿಸಿದ ತಂತಮ್ಮ ದೃಷ್ಟಿಕೋನಗಳಲ್ಲಿ ಕಂಡಿರುವ ವ್ಯಕ್ತಿಗತ ವೈಭವೀಕರಣದ ನೋಟವೇ ಎಲ್ಲೆಲ್ಲೂ ಸಿಗುತ್ತದೆ. ಈ ಹೋರಾಟದಲ್ಲಿ ಎಡಪಕ್ಷಗಳ, ಮಹಿಳೆಯರ, ಶ್ರೀಸಾಮಾನ್ಯನ ಕೊಡುಗೆ ಏನೆಂದು ವಿಭಿನ್ನ ರೀತಿಯಲ್ಲಿ ಚಿಂತಿಸಿದಾಗ ಇರ್ಫಾನ್ ಹಬೀಬ್ ಅವರ ವಿಚಾರಪೂರ್ಣ ಕೃತಿ 'ರಾಷ್ಟ್ರೀಯ ಆಂದೋಲನ' ನಮ್ಮ ಗಮನ ಸೆಳೆಯುತ್ತದೆ. ಈ ಕೃತಿ ಕೇವಲ ಚರಿತ್ರೆ ಅಷ್ಟೇ ಆಗಿರದೆ ಸಿದ್ಧಾಂತದ ಮತ್ತು ಇತಿಹಾಸದ ಅಧ್ಯಯನವನ್ನೂ ಒಳಗೊಂಡಿದೆ. ಚರಿತ್ರೆಯಲ್ಲಿ ದಾಖಲಾದಂತೆ ಗಾಂಧಿ-ನೆಹರು ನೇತೃತ್ವದ ಕಾಂಗ್ರೆಸ್ ಒಂದೇ ಸ್ವಾತಂತ್ರ್ಯಗಳಿಕೆಗೆ ಕಾರಣವಲ್ಲವೆಂದೂ, ಬ್ರಿಟಿಷ್ ಆಳ್ವಿಕೆ ವಿರುದ್ಧದ ರಾಷ್ಟ್ರೀಯ ಆಂದೋಲನದಲ್ಲಿ ಅನಾಮಧೇಯರಾಗಿ ಎಷ್ಟೋ ದೇಶಪ್ರೇಮಿಗಳು ಭಾಗವಹಿಸಿದ್ದನ್ನು ಕೃತಿ ಮನವರಿಕೆ ಮಾಡಿಕೊಡುತ್ತದೆ. ವಸ್ತುನಿಷ್ಠ ಅಧ್ಯಯನದಿಂದ ಲಭಿಸಿದ ಚಿತ್ರಣವೊಂದು ಇಲ್ಲಿ ಪಡಿಮೂಡಿದೆ. ಈ ಕೃತಿಯ ಇಂಗ್ಲಿಷ್ ಆವೃತ್ತಿ ಓದಿದ ತಕ್ಷಣ ಇದನ್ನು ಕನ್ನಡ ಭಾಷೆಗೆ ಅನುವಾದಿಸಬೇಕೆಂಬ ಮಹತ್ವಾಕಾಂಕ್ಷೆ-ಹಂಬಲ ಮೂಡಿದ್ದು ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ ಅವರಿಗೆ. ಸ್ವಯಮಿಚ್ಛೆಯಿಂದ ಅನುವಾದಿಸಿಕೊಟ್ಟ ಅವರನ್ನು ಅಭಿನಂದಿಸುತ್ತ ಕೃತಿಯ ಓದನ್ನು ಆರಂಭಿಸೋಣ.


**– ಇಂದಿರಾಕುಮಾರಿ**

*೩೪/೧೧, ೨ನೇ ಕ್ರಾಸ್, ಬಾಂಬೆ ಡೈಯಿಂಗ್ ಸಮೀಪ, ಯಶವಂತಪುರ, ಬೆಂಗಳೂರು - ೨೨*




# ನೆರಳಿನ ಆಟ ಕಾಣದಿದ್ದಾಗ

**ಈ** ತಿಂಗಳ ಶುಭ್ರವಾದ ಆಕಾಶದಲ್ಲಿ ಮಿನುಗುವ ನಕ್ಷತ್ರಗಳೇ ಮುಖ್ಯವಾದ ಆಕರ್ಷಣೆ. ಪ್ರಕಾಶಮಾನ ವಾಗಿ ಕಾಣುವ ಗುರುಗ್ರಹ, ಪೂರ್ವದಂಚಿನಲ್ಲಿ ಪ್ರಕಾಶಮಾನ ನಕ್ಷತ್ರ ಲುಬ್ಧಕ (ಸಿರಿಯಸ್), ಪ್ರತಿಸ್ಪರ್ಧಿ ಗಳಂತೆ ಕಾಣುತ್ತವೆ. ಇವೆರಡರ ನಡುವೆ (ಒರೈಯನ್) ಮಹಾವ್ಯಾಧ ಪುಂಜ ಸ್ಪಷ್ಟವಾಗಿ ಕಾಣುತ್ತದೆ. ಮೂರು ಗೆರೆಗಳ ಸಾಲು ಅದರ ಸಮೀಪವೇ ವ್ಯಾಧನ ಖಡ್ಗ ಮತ್ತು ಒರೈಯನ್ ನೆಬ್ಯುಲಾ ಸಹ ಕಾಣುವುವು. ಗುರುಗ್ರಹದ ತುಸು ಉತ್ತರಕ್ಕೆ ಕಾಣುವ ಪ್ರಖರ ನಕ್ಷತ್ರ (ಕಪೆಲ್ಲಾ) ಬ್ರಹ್ಮ ಹೃದಯ. ಇದು ಪಂಚಕೋಣಾಕೃತಿಯ ವಿಜಯಸಾರಥಿ (ಆರಿಗಾ) ಪುಂಜದ ಪ್ರಕಾಶಮಾನ ನಕ್ಷತ್ರ. ಉತ್ತರದಲ್ಲಿ ಕುಂತಿ (ಕೆಸಿಯೋಪಿಯಾ) ಇಂಗ್ಲಿಷ್ ಅಕ್ಷರ W ಆಕಾರದಲ್ಲಿ ಕಾಣುತ್ತದೆ. ನೆತ್ತಿಯಿಂದ ತುಸು ಪಶ್ಚಿಮಕ್ಕೆ (ಪೆಗಸಸ್) ನಕುಲ ಪುಂಜದ ಚೌಕ ಕಾಣುತ್ತದೆ. ಕುಂತಿ ಮತ್ತು ನಕುಲ ನಡುವೆ (ಆಂಡ್ರೊಮಿಡಾ) ದ್ರೌಪದಿ ಪುಂಜ ಇದೆ. ಇಲ್ಲಿ ಗೆಲಾಕ್ಸಿಯನ್ನೂ ಬರಿಗಣ್ಣಿನಿಂದ ಹುಡುಕುವ ಪ್ರಯತ್ನ ಮಾಡಬಹುದು. ದಕ್ಷಿಣದಲ್ಲಿ ಕಾಣುವ ಪ್ರಕಾಶ ಮಾನವಾದ ನಕ್ಷತ್ರ (ಎರಿಡಾಸಿಸ್) ವೈತರಣೀ ಎಂಬ ಪುಂಜದ್ದು. ನಕ್ಷೆ ಸಂಜೆ ಏಳುಗಂಟೆಗೆ ಅನ್ವಯವಾಗುತ್ತದೆ. ರಾಶಿ ಚಕ್ರದ ಕುಂಭ, ಮೀನ, ಮೇಷ, ವೃಷಭ ಮತ್ತು ಮಿಥುನಗಳನ್ನು ಕಾಣಬಹುದು. ಗುರುಗ್ರಹದ ಪಕ್ಕ ಇರುವ ನಕ್ಷತ್ರ ರೋಹಿಣಿ.




ಗುರುಗ್ರಹವನ್ನು ಚಂದ್ರ ಮರೆಮಾಡುವ ಘಟನೆ ಈ ತಿಂಗಳಲ್ಲಿ ನಡೆಯುತ್ತದೆ. ಮುಂದಿನ ತಿಂಗಳೂ ನಡೆಯುತ್ತದೆ. ಆದರೆ ನಮಗೆ ನೋಡಲು ಅನುಕೂಲಕರವಾಗಿಲ್ಲ. ೨೧ ಮತ್ತು ೨೨ರ ಸಂಜೆ ಅದರ ಸ್ಥಾನವನ್ನು ಗುರುತುಮಾಡಿಕೊಂಡರೆ ಹಗಲಿನಲ್ಲಿ ಆಚ್ಛಾದನೆ ನಡೆದಿರಬಹುದು ಎಂಬ ಅಂಶ ಸ್ಪಷ್ಟವಾಗಿ ಗೋಚರಿಸುತ್ತದೆ. ಅಂದರೆ ನಮಗೆ ಕಾಣದಿದ್ದರೂ ತಿಳಿದುಕೊಳ್ಳುವ ಬಗೆ ಇದು.

ಪಶ್ಚಿಮದ ಅಂಚಿನಲ್ಲಿ ಮಂಗಳ ಗ್ರಹ ಸಂಜೆ ಸ್ವಲ್ಪ ಹೊತ್ತು ಮಾತ್ರ ಕಾಣುತ್ತದೆ. ೧೩ರಂದು ರೇಖಾ ಚಂದ್ರನ ಪಕ್ಕದಲ್ಲಿ ಕಾಣುತ್ತದೆ.

ಮಧ್ಯರಾತ್ರಿಯಲ್ಲಿ ಶನಿ ಗ್ರಹ ಉದಯಿಸುತ್ತದೆ. ಚಿತ್ರಾ ನಕ್ಷತ್ರದ ಸಮೀಪವೇ ಕಾಣುತ್ತದೆ. ೬ರಂದು ಚಂದ್ರ ಚಿತ್ರಾ ನಕ್ಷತ್ರವನ್ನೂ ಮರೆ ಮಾಡುವ ಘಟನೆ ಆಚ್ಛಾದನೆ ನಡೆಯುತ್ತದೆ. (ಈ ವರ್ಷ ಪ್ರತಿ ತಿಂಗಳೂ ಈ ಘಟನೆ ನಡೆಯುವುದು). ೭ರಂದು ಚಂದ್ರ ಶನಿಯ ಪಕ್ಕ ಕಾಣುತ್ತದೆ. ಮುಂಜಾವಿನಲ್ಲಿ ಶುಕ್ರಗ್ರಹ ಪೂರ್ವದಲ್ಲಿ ಉದಯಿಸುವುದನ್ನು ಕಾಣಬಹುದು. ೧೦ರ ಬೆಳಗಿನ ಜಾವ ರೇಖಾ ಚಂದ್ರ ಇದರ ಸಮೀಪವೇ ಇರುತ್ತದೆ. ಬುಧ ಗ್ರಹವನ್ನು ಈ ತಿಂಗಳು ನೋಡುವ ಅವಕಾಶ ಇಲ್ಲ. ಆದರೆ ಸೋಹೋ ಎಂಬ ಬಾಹ್ಯಾಕಾಶ ನೌಕೆ ತೆಗೆಯುವ ಸೂರ್ಯನ ಚಿತ್ರಗಳಲ್ಲಿ ಕಾಣುವುದು.


೨೧ರ ಸಂಜೆ ಗುರು ಮತ್ತು ಚಂದ್ರ


೨೨ರ ಸಂಜೆ ಗುರು ಮತ್ತು ಚಂದ್ರ

ಈ ತಿಂಗಳಲ್ಲಿ ಭೂಮಿ ತನ್ನ ದೀರ್ಘವೃತ್ತದ ಕಕ್ಷೆಯಲ್ಲಿ ಸೂರ್ಯನನ್ನು ಅತಿ ಸಮೀಪವಾಗಿ ಹಾದುಹೋಗುವುದು. ಆದ್ದರಿಂದ ಸೂರ್ಯ ಎಂದಿಗಿಂತ ದೊಡ್ಡದಾಗಿ ಕಾಣಬೇಕಾದುದು ನ್ಯಾಯವಾದರೂ ಅದನ್ನು ಬರಿಗಣ್ಣಿನಿಂದ ಗುರುತಿಸುವುದು ಸಾಧ್ಯವೇ ಇಲ್ಲ.

ತಿಂಗಳ ಮೊದಲ ವಾರದಲ್ಲಿ ಉಲ್ಕಾವೃಷ್ಟಿ ಇದೆ. ಇದರ ಹೆಸರು ಕ್ವಾಡ್ರಾಂಟಿಡ್ಸ್ ಎಂದು. ಆದರೆ ಈ ಹೆಸರಿನ ಯಾವುದೇ ನಕ್ಷತ್ರಪುಂಜ ಇಲ್ಲ (ಲಿಯೋನಿಡ್ಸ್, ಜೆಮಿನಿಡ್ಸ್ ಇವುಗಳನ್ನು ನೆನಪಿಸಿಕೊಳ್ಳಿ). ೧೯ನೆಯ ಶತಮಾನದಲ್ಲಿ ಮೊದಲ ಬಾರಿಗೆ ಇದನ್ನು ಗುರುತಿಸಿದಾಗ ಯಾವ ದಿಕ್ಕಿನಿಂದ ಹೊರಟಂತೆ ಕಾಣುತ್ತಿದ್ದವೋ ಆ ಬಿಂದು (ರೇಡಿಯಂಟ್) ಕ್ವಾಡ್ರಂಟ್ ಮುರಾಲಿಸ್ ಎಂಬ ಪುಂಜದಲ್ಲಿತ್ತು. ನಕ್ಷತ್ರಪುಂಜಗಳ ಎಲ್ಲೆಗಳನ್ನು ಪುನರ್ವಿಂಗಡಣೆ ಮಾಡಿದಾಗ ಈ ಹೆಸರು ಮಾಯವಾಯಿತು. ಆಕಾಶದ ಈ ಭಾಗ ಸಹದೇವ (ಬೂಟಿಸ್) ಎಂಬ ಪುಂಜಕ್ಕೆ ಸೇರಿತು. ಪ್ರತಿ ವರ್ಷ ಈ ವೃಷ್ಟಿಯನ್ನು ರೇಡಿಯೋ ತರಂಗಗಳಿಂದ ಅಧ್ಯಯನ ಮಾಡುತ್ತಾ ಬಂದಿರುವವರು ಹವ್ಯಾಸೀ ವೀಕ್ಷಕರು. ಸುಮಾರು ೫೦೦ ವರ್ಷಗಳಿಂದ ಇದು ನಡೆಯುತ್ತಿರಬಹುದು ಎಂದು ಲೆಕ್ಕ ಹಾಕಿದ್ದಾರೆ. ೨೦೦೩ರಲ್ಲಿ ಕಂಡುಹಿಡಿದ ಒಂದು ಚಿಕ್ಕ ಕ್ಷುದ್ರಗ್ರಹದ ಧೂಳು ಹೀಗೆ ವೃಷ್ಟಿಗೆ ಕಾರಣವಾಗಿರಬಹುದು. ೧೪೯೦ರಲ್ಲಿ ಕಂಡ ಧೂಮಕೇತುವಿಗೂ ನಂಟು ಇರಬಹುದು. ರೇಡಿಯಂಟ್ ಬಿಂದು ಕನ್ಯಾರಾಶಿಯ ಉತ್ತರಕ್ಕಿದೆ. ಹಿಂದಿನ ವರ್ಷಗಳಲ್ಲಿ ಗಂಟೆಗೆ ೮೦-೯೦ ಉಲ್ಕೆಗಳು ಕಂಡಿವೆಯಾದರೂ ನಗರ ಪ್ರದೇಶಗಳಿಂದ ೧೦-೨೦ ಮಾತ್ರ ಕಾಣಬಹುದು. ಏಕೆಂದರೆ ಇವು ಅಷ್ಟೇನೂ ಪ್ರಕಾಶಮಾನವಾಗಿರುವುದಿಲ್ಲ.

**ಖಗೋಳ ದಿನಚರಿ**

| | |
|---|---|
| ೨ | ಭೂಮಿ-ಸೂರ್ಯರ ನಡುವೆ ಕನಿಷ್ಠ ದೂರ |
| ೧-೫ | ಕ್ವಾಡ್ರಾಂಟಿಡ್ಸ್ ಉಲ್ಕಾವೃಷ್ಟಿ* |
| ೫ | ಚಾಂದ್ರಮಾಸದ ಕೊನೆಯ ಪಾದ (ಬಹುಳ ಅಷ್ಟಮಿ) |
| ೬ | ಮುಂಜಾವು ಚಿತ್ರಾ - ಚಂದ್ರ ಜೋಡಿ* (ಆಚ್ಛಾದನೆ ಕಾಣುವುದಿಲ್ಲ) |
| ೭ | ಮುಂಜಾವು ಶನಿ-ಚಂದ್ರ ಜೋಡಿ* |
| ೧೦ | ಚಂದ್ರ-ಭೂಮಿ ನಡುವೆ ಕನಿಷ್ಠ ದೂರ ಶುಕ್ರ-ಚಂದ್ರ ಜೋಡಿ* |
| ೧೧ | ಬುಧ-ಚಂದ್ರ ಜೋಡಿ |
| ೧೨ | ಅಮಾವಾಸ್ಯೆ ೦೦:೪೪ಕ್ಕೆ |
| ೧೩ | ಮಂಗಳ-ಚಂದ್ರ ಜೋಡಿ* |
| ೧೮ | ಬುಧ ಗ್ರಹದ ಯುತಿ |
| ೧೯ | ಚಾಂದ್ರಮಾಸದ ಮೊದಲ ಪಾದ (ಶುಕ್ಲ ಅಷ್ಟಮಿ) |
| ೨೨ | ಚಂದ್ರ-ಗುರು ಜೋಡಿ* (ಆಚ್ಛಾದನೆ ಕಾಣುವುದಿಲ್ಲ) ಚಂದ್ರ-ಭೂಮಿ ನಡುವೆ ಗರಿಷ್ಠ ದೂರ |
| ೨೭ | ಹುಣ್ಣಿಮೆ ೦೯:೩೦ಕ್ಕೆ |
| ೩೦ | ಗುರುಗ್ರಹದ ಹಿನ್ನಡೆ ಮುಕ್ತಾಯ |

(* ಛಾಯಾಗ್ರಹಣಕ್ಕೆ ಉತ್ತಮ ಅವಕಾಶ)

**ಡಾ|| ಬಿ. ಎಸ್. ಶೈಲಜಾ,** ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು - ೫೬೦ ೦೦೧

# ಖಂಡವಿದಿಕೋ... ಮಾಂಸವಿದಿಕೋ...

ನಡುಮನೆಯಲ್ಲಿ ಇರಿಸಿದ್ದ ಕೇನಿನ ಕುರ್ಚಿಯ ಮೇಲೆ ಕುಳಿತಿದ್ದ ಶಾಂತಕ್ಕನನ್ನು ನೋಡಿದ ಸಾವಂತ್ರಿಗೆ ಎದೆ ಧಕ್ಕೆಂದಿತು. ಬೀದಿ ನಾಟಕ ಮಾಡುವಾಗ, ಮಕ್ಕಳಿಗೆ ಪೋಲಿಯೋ ಲಸಿಕೆ ಹಾಕುವಾಗ, ಹೀಗೆ ಇತ್ಯಾದಿ ರೀತಿಯ ಸಾಮಾಜಿಕ ಕಳಕಳಿಯ ಕಾರ್ಯಗಳಿಗೆ ಮಾತ್ರ ಇತ್ತಕಡೆಗೆ ಬರುತ್ತಿದ್ದ ಶಾಂತಕ್ಕ, ಇನ್ಯಾವುದೇ ಸಮಯದಲ್ಲಿ ತನ್ನ ಈ ಹಟ್ಟಿಯ ಕಡೆಗೆ ಸುಳಿಯುತ್ತಿರಲಿಲ್ಲ. ಆದರೆ ಇಂದು ಅವರು ತನ್ನ ಮನೆಗೂ ಬಂದು, ಪಾಲೀಶು ಬಿಟ್ಟುಕೊಂಡು ಕಪ್ಪಿಟ್ಟಿದ್ದ, ತೇಪೆ ಹಾಕಿದ್ದ ಕುಷನ್ನಿನ, ಹಳೆಯ ಕೇನಿನ ಕುರ್ಚಿಯ ಮೇಲೆ ಯಾವುದೇ ಎಗ್ಗಿಲ್ಲದೆ ಆರಾಮವಾಗಿ ಕುಳಿತರೆಂದರೆ ಅದು ಸೋಜಿಗಕ್ಕೆ ಹತ್ತಿರವಾದ ಘಟನೆಯೆಂದು ಸಾವಂತ್ರಿ ಭಾವಿಸಿದಳು.

ಅವಳು ಶಾಲೆಯಿಂದ ಬರುವಾಗಲೇ ಮನೆಯ ಹೊರಗೆ ನಿಂತ ಶಾಂತಕ್ಕನ ಹೋಂಡಾ ಆ್ಯಕ್ಟಿವಾ ಸ್ಕೂಟರ್ ನೋಡಿದ್ದಳು. ಆದರೆ, ಈ ಮಹಾನಗರದಲ್ಲಿ ಇಂತಹ ಗಾಡಿಗಳಿಗೇನು ಬರವೇ? ಇದೇ ತರಹದ ಸ್ಕೂಟರ್‌ಗಳು ಬೇಕಾದಷ್ಟಿವೆ. ಬಹುಶಃ ಬೇರೆ ಯಾರೋ ಬಂದಿರಬಹುದು ಎಂದುಕೊಂಡು ಸುಮ್ಮನಾದಳು. ಆದರೆ ಒಳಗೆ ಬಂದಾಗಲೇ ಅದು ಶಾಂತಕ್ಕನ ಸ್ಕೂಟರ್ ಎಂದು ನಿಚ್ಚಳವಾಗಿತ್ತು. ಶಾಂತಕ್ಕನಿಗೆ ಗೌರವದಿಂದ ನಮಸ್ಕರಿಸಿ, ಸ್ಕೂಲಿನ ಬ್ಯಾಗನ್ನು ಟಿ.ವಿ. ಸ್ಟಾಂಡಿನಲ್ಲಿ ಖಾಲಿಯಿದ್ದ ಶೆಲ್ಫಿನ ಮೇಲಿಟ್ಟಳು. ಅಮ್ಮನ ಕಡೆಗೆ ಎಂದಿನ ಸಣ್ಣ ನಗುವೊಂದನ್ನು ಎಸೆದು, ತನ್ನ ಕಿವಿಯನ್ನು ನಡುಮನೆಯಲ್ಲಿಯೇ ಬಿಟ್ಟು, ಮುಖ ತೊಳೆಯಲು ಬಚ್ಚಲಿಗೆ ನಡೆದಳು.

**ವಿ. ಆರ್. ಕಾರ್ಪೆಂಟರ್**

ಶಾಂತಕ್ಕ ಸಾವಂತ್ರಿಯ ಅಮ್ಮನನ್ನು ಬಿನ್ನವಿಸಿಕೊಳ್ಳುವ ದನಿಯನ್ನು ಧರಿಸಿದ್ದರೆ, ಸಾವಂತ್ರಿಯ ಅಮ್ಮ ಇನ್ನೇನು ಅಳುವುದಕ್ಕೆ ತಯಾರಿದ್ದವಳಂತೆ, ಅಥವಾ ಇನ್ನೇನು ಅತ್ತೇಬಿಡುವ ಹಾಗೆ ಕಣ್ಣಿನ ತುಂಬ ನೀರನ್ನು ತುಂಬಿಕೊಂಡು, ಕೆಳಕ್ಕೂ ಚೆಲ್ಲಿಕೊಳ್ಳದೆ, ತನ್ನ ಮಗಳು ಸಣ್ಣ ನಗುವೊಂದನ್ನು ಎಸೆದು ಹೋದ ಬಚ್ಚಲಿನ ಕಡೆ ನೋಡಿಕೊಂಡು ''ಸಾಂತಕ್ಕ, ಅವ್ಳು ಇನ್ನಾ ಚಿಕ್ಕುಡ್ಗಿ, ಒಬ್ಳೆ ಮಗ್ಳು ಬೇರೆ. ಎಂಗ್ ಕಳ್ಸದು? ಅದೂ ಅಲ್ದೇ ನಂಗೆ ದಿಕ್ಕುದಸೆ ಅಂತಾ ಯಾರವ್ರೆ?'' ಎಂದು ಪ್ರಶ್ನಾರ್ಥಕವಾಗಿ ತನ್ನ ಮುಖದ ಸುಕ್ಕುಗಳನ್ನು ಬಿಗಿಗೊಳಿಸಿ ಕಣ್ಣೀರನ್ನು ತನ್ನ ಸೀರೆಯ ಸೆರಗಿಗೆ ಚೆಲ್ಲಿಕೊಂಡು, ದುಃಖಿತಳಾದಳು.

ಅಮ್ಮ ತನ್ನ ಬಗೆಗಿನ ಅಕ್ಕರೆಯಿಂದ ಕೂಡಿದ ಆಸರೆಯ ಅವಲಂಬನೆಯನ್ನು ಆರೋಪಿಸಿ, ಆ ವಾತಾವರಣವನ್ನು ಭಾವುಕವನ್ನಾಗಿಸಿದ್ದರಿಂದ, ಮುಖಕ್ಕೆ ಸೋಪು ಹಾಕಿಕೊಂಡಿದ್ದ ಸಾವಂತ್ರಿಯ ಕಿವಿಗಳು ಚುರುಕಾದವು. ನೀರನ್ನು ಮುಖಕ್ಕೆ ಎರಚಿಕೊಂಡರೆ ಮೂಡುವ ಸದ್ದಿನಿಂದ ಮುಂದೆ ತನ್ನ ಕಿವಿಗಳಿಗೆ ತಲುಪಬಹುದಾದ ಶಬ್ದಗಳು ಸಾಯುವ ಅಪಾಯವಿದ್ದುದರಿಂದ ತಟಸ್ಥಳಾದಳು. ಹೀಗೆ ನಡುಮನೆಯಲ್ಲಿ ನಡೆಯುತ್ತಿದ್ದ ಮಾತುಕತೆಗೆ ಪರಿಸ್ಥಿತಿಯ ಅರಿವಾದಂತೆ, ತನ್ನನ್ನು ಎತ್ತಲೋ ಸಾಗಹಾಕುವ ವಿಷಯವನ್ನು ಕೇಳಿ ಆಗತಾನೇ ಯೌವ್ವನ ಮೂಡುತ್ತಿದ್ದ ಸಾವಂತ್ರಿಯ ಎದೆಯಲ್ಲಿ ಎಂತಹುದೋ ಹುಳುವೊಂದು ಗೂಡು ಕಟ್ಟಲು ತಾವು ಹುಡುಕಿಕೊಳ್ಳುವಂತೆ ಅನಿಸುತ್ತಿದ್ದುದು ಸುಳ್ಳಲ್ಲ. ಆ ಗೂಡು ದೊಡ್ಡದಾಗುವ ಲಕ್ಷಣವಿದ್ದರೂ ಅಮ್ಮನೆಂಬ ಹಕ್ಕಿಯು ಆ ಹುಳುವನ್ನೇ ಕಬಳಿಸುವ ಸಾಮರ್ಥ್ಯದ ಮೇಲೆ ಧೈರ್ಯವೂ ಇತ್ತು.

ಮದುವೆಯಾಗಿ ಆರು ತಿಂಗಳಷ್ಟೇ ಕಳೆದಿತ್ತು. ಸಾವಂತ್ರಿ ಹೊಟ್ಟೆಯಲ್ಲಿದ್ದಾಗಲೇ ರೈಲ್ವೇ ಇಲಾಖೆಯಲ್ಲಿ ಹಮಾಲಿಯಾಗಿದ್ದ ಅವಳ ಅಪ್ಪ ತನ್ನ ತೆವಲಿನ ಕಾರಣದಿಂದ ಹೆಚ್ಚಿದ ಸಾಲದ ಹೊರೆಯ ಕಾರಣಕ್ಕೆ ಅವನದೇ ಇಲಾಖೆಯ ರೈಲಿಗೆ ತಲೆ ಕೊಟ್ಟು ತೀರಿಕೊಂಡಿದ್ದ. ಅನುಕಂಪದ ಆಧಾರದ ಮೇಲೆ ನೀಡುವ ಕೆಲಸಕ್ಕೆ ಸಂಬಂಧಿಸಿದ ಅಧಿಕಾರಿಗಳು ಲಂಚ ಕೇಳಿದ್ದರಿಂದ, ಏನೊಂದೂ ತೋಚದೆ ಕೈಚೆಲ್ಲಿ ಕುಳಿತುಕೊಳ್ಳುವಂತಾಗಿತ್ತು. ಸಾಲದು ಎಂಬಂತೆ ಸಾವಂತ್ರಿ ಹುಟ್ಟಿದ ಎರಡು ತಿಂಗಳಿಗೆ ಗರ್ಭಕೋಶದ ಕ್ಯಾನ್ಸರ್ ಕಾಣಿಸಿಕೊಂಡಿತು. ಬೇಕಾದಷ್ಟು ಆಸ್ಪತ್ರೆಗಳಿಗೆ ಅಲೆದಾಡಿ, ಕೊನೆಗೆ ಶಾಂತಕ್ಕನ ನೆರವಿನಿಂದ ಗರ್ಭಕೋಶ ತೆಗೆಸಿಕೊಂಡು ಖಾಲಿಯಾದ ಅನುಭವವಾದಳು.

ಮರು ಮದುವೆ ಆಗುವುದಕ್ಕೆ ಮೂರು ನಾಲ್ಕು ಜನ ಆದರ್ಶವಾದಿ ಯುವಕರು ಮುಂದೆ ಬಂದಿದ್ದರು. ಆದರೆ ಅವಳ ಎಂದೂ ತುಂಬದ ಹೊಟ್ಟೆಯ ದೆಸೆಯಿಂದ ಹಿಂಜರಿದಿದ್ದರು. ಆಗಿನಿಂದ ಸಾವಂತ್ರಿಗೂ, ಅವಳ ತಾಯಿಗೂ ಶಾಂತಕ್ಕನ ನೆರಕೆಯೇ ದಿಕ್ಕಾಯಿತು. ಆ ನೆರಕೆ ಮೂರನೇ ತರಗತಿಗೆ ಕಾಲಿಟ್ಟೊಡನೇ, ಮುಗಿದಿತ್ತು. ಸಾವಂತ್ರಿಯ ಅಮ್ಮ ಸಿದ್ಧ ಉಡುಪು ತಯಾರಿಕಾ ಕಾರ್ಖಾನೆಗೆ ಸಹಾಯಕಿಯಾಗಿ ಸೇರಿಕೊಂಡಳು. ದಿನಗಳೆದಂತೆ ಟೈಲರ್ ಆಗಿ ಬಡ್ತಿ ಪಡೆದು ಊಟಕ್ಕೆ, ಉಡುಗೆಗೆ ತೊಂದರೆ ಇಲ್ಲದಂತೆ ಜೀವನ ಸಾಗಿಸುತ್ತಿದ್ದರು. ಅದು ಶಾಂತಕ್ಕನಿಗೂ ಸಂತೋಷದ ವಿಚಾರವಾಗಿ ಎಲ್ಲರಲ್ಲೂ ಅವರ ಆ ಸಾಧನೆಯ ಪ್ರಗತಿಯನ್ನು ಕೊಂಡಾಡಿಕೊಂಡು ಸುಖ ಅನುಭವಿಸುತ್ತಿದ್ದಳು.



ಶಾಂತಕ್ಕ ಹುಟ್ಟಿನಿಂದ ಸಂಪ್ರದಾಯಸ್ಥ ಬ್ರಾಹ್ಮಣರಾದರೂ, ಪ್ರಗತಿಪರವಾಗಿ ಚಿಂತಿಸುವ ಹೆಣ್ಣಾಗಿದ್ದರು. ತಾನಾಯಿತು, ತನ್ನ ವಿದ್ಯಾರ್ಥಿಗಳಾಯಿತು, ಜೊತೆಗೆ ಸಾಹಿತ್ಯದ-ಸಾಹಿತಿಗಳ ಒಡನಾಟದಲ್ಲಿ ಮುಳುಗಿ, ಅರಿವಿಲ್ಲದಂತೆಯೇ ತಮ್ಮ ಮದುವೆಯ ವಯಸ್ಸನ್ನೂ ದಾಟಿ ತುಂಬ ದೂರ ಚಲಿಸಿದ್ದರು. ಅದರ ಬಗ್ಗೆ ಯಾವ ಕೊರಗನ್ನೂ ಅನುಭವಿಸುತ್ತಿರಲಿಲ್ಲ. ಸುಮ್ಮನೇ ಎಲ್ಲರೊಡನೆ ನಗುವನ್ನು ಹಂಚಿಕೊಂಡು ತನ್ನ ನೋವನ್ನು ಮರೆಯುತ್ತಿದ್ದರು. ಅಲ್ಲದೆ, ಕೈಲಾಗದ ಯಾರಿಗಾದರೂ ಸಹಾಯ ಮಾಡಬೇಕು ಎಂಬ ಮಾತು ಬಂದರೆ ಅಲ್ಲಿಶಾಂತಕ್ಕ ಮುಂದಿರುತ್ತಿದ್ದರು. ಯಾವುದಕ್ಕೂ ಹಿಂಜರಿದ ವ್ಯಕ್ತಿತ್ವ ಅವರದಲ್ಲ. ಅನ್ಯಾಯ ಕಂಡು ಬಂದಲ್ಲಿ ಪ್ರತಿಭಟಿಸುವ ಮನೋಭಾವವನ್ನೂ ರೂಢಿಸಿ ಕೊಂಡಿದ್ದರು.

ಅಂತೆಯೇ, ತಮ್ಮ ಮನೆಯಲ್ಲಿ ದೇವರ ಪಟವನ್ನೂ ಸಹ ಇಡದೇ, ಕುವೆಂಪು, ಬಸವಣ್ಣ, ವಿವೇಕಾನಂದ, ಅಲ್ಲಮ, ಅಕ್ಕ, ಗಾಂಧಿಯ ಧ್ಯೇಯವಾಕ್ಯಗಳು ರಾರಾಜಿಸುವಂತೆ ಮಾಡಿ ತನ್ನ ಕುಲಸ್ಥರನ್ನು ಶಾಶ್ವತವಾಗಿ ದೂರ ಮಾಡಿ ಕೊಂಡಿದ್ದರು. ಸಾವಂತ್ರಿಯಂತೆ ಅವರೂ ಕೂಡ ಸಣ್ಣವಯಸ್ಸಿನಲ್ಲಿಯೇ ಹಾವು ಕಡಿತಕ್ಕೆ ತುತ್ತಾದ ತನ್ನ ತಂದೆಯನ್ನು ಕಳೆದುಕೊಂಡು, ತಾಯಿಯ ಆಶ್ರಯದಲ್ಲೇ ಬೆಳೆದ ಜೀವ. ಚೆನ್ನಾಗಿ ಓದಿ, ಪಂಪನ ಮೇಲೆ ಪ್ರಬಂಧ ಬರೆದು ಪಿಎಚ್.ಡಿ.ಯನ್ನು ಪಡೆದು, ವಿಶ್ವವಿದ್ಯಾಲಯದಲ್ಲಿ ಮುಖ್ಯ ಪ್ರೊಫೆಸರ್ ಆಗಿದ್ದರು. ಅಗಾಧ ಸೃಜನಶೀಲ ಸಾಹಿತ್ಯದ ಹಿನ್ನೆಲೆಯಿಂದ ಬೆಳೆದ ಶಾಂತಕ್ಕ ತನ್ನ ವಿದ್ಯಾರ್ಥಿಗಳಿಗೆ ಅನಗತ್ಯ ನೀತಿಬೋಧೆಯನ್ನು ಮಾಡದೆ, ವಿವೇಕ ತುಂಬುವ ಸ್ನೇಹಿತೆಯಂತೆ ಕಾಣಿಸಿಕೊಂಡಿದ್ದ ಅವರು ಎಲ್ಲರಿಗೂ ಪ್ರಿಯವಾದವರು.

ಆದರೆ, ಮನೆಯಲ್ಲಿ ಇದ್ದ ಅವರ ತಾಯಿಯ ವಯಸ್ಸಿನ ಕ್ಯಾಲೆಂಡರಿನ ಪುಟಗಳು ತಿರುವಿ ಹಾಕುತ್ತಿದ್ದಾಗಲೇ ರಕ್ತದೊತ್ತಡ, ಸಕ್ಕರೆ ಖಾಯಿಲೆ ಅಂಟಿಕೊಂಡು ಹೈರಾಣು ಗೊಂಡಿದ್ದರು. ಬಹುಶಃ ಶಾಂತಕ್ಕನಿಗೆ ಇದ್ದ ಬಹುದೊಡ್ಡ ತೊಡಕೆಂದರೆ ಅದು ತನ್ನ ತಾಯಿಯ ಅವಸ್ಥೆ ಮಾತ್ರವೇ. ವಿಶ್ವವಿದ್ಯಾಲಯದ ಏಕತಾನತೆಯಿಂದ ಮನೆಗೆ ಬಂದರೂ ತಾಯಿಯನ್ನು ಸಲಹುವಷ್ಟರಲ್ಲಿ ಸಾಕುಸಾಕಾಗುತ್ತಿತ್ತು.

ಮೊನ್ನೆತಾನೆ ಮೆಟ್ಟಿಲು ಹತ್ತುವಾಗ ಜಾರಿಬಿದ್ದದ್ದೇ ನೆಪ, ಸೊಂಟ ಬಿದ್ದುಹೋಯಿತು. ಸಾಲದ್ದಕ್ಕೆ ಆಸ್ಪತ್ರೆಗೆಂದು ಲಕ್ಷಾಂತರ ರೂಪಾಯಿಗಳು ಖರ್ಚಾದವು. ನೋಡಿ ಕೊಳ್ಳುವುದಕ್ಕೆ ನೇಮಿಸಿಕೊಂಡಿದ್ದ ಮಹಿಳೆಯೊಬ್ಬಳು ಕೂಡ ಬಂದ ಎರಡೇ ದಿನಕ್ಕೆ ಕಾಲುಕಿತ್ತಳು. ಮತ್ತೊಬ್ಬ ಉತ್ತಮ ಸಹಾಯಕಿಗಾಗಿ ಎಲ್ಲೆಲ್ಲೋ ಹುಡುಕಾಡಿದ ಶಾಂತಕ್ಕನಿಗೆ ಕೊನೆಗೆ ಜ್ಞಾಪಕಕ್ಕೆ ಬಂದಿದ್ದು ಸಾವಂತ್ರಿ. ಹೇಗೂ ಎಂಟನೇ ತರಗತಿಯ ಹುಡುಗಿ. ಸಭ್ಯ ಸೌಂದರ್ಯವನ್ನು ಹೊಂದಿದ್ದಾಳೆ; ತಗ್ಗಿ ಬಗ್ಗಿ ನಡೆಯುವ ಗುಣಸ್ವಭಾವದವಳು. ಕಾರ್ಪೊರೇಷನ್ ಶಾಲೆಗೆ ಹೋಗುತ್ತಿದ್ದರೂ, ಕಾನ್ವೆಂಟ್ ಶಾಲೆಯ ವಿದ್ಯಾರ್ಥಿಗಳಿಗೆ ಓದಿನಲ್ಲಿ ಸವಾಲು ಎಸೆಯುವ ಹುಡುಗಿ; ಇಷ್ಟೆಲ್ಲಾ ಇದ್ದಮೇಲೆ ಅವಳೇ ತನ್ನ ಮನೆಗೆ ಸರಿಯಾದವಳು; ಅವಳನ್ನು ಇಲ್ಲಿಯೇ ಇಟ್ಟುಕೊಂಡು ಚೆನ್ನಾಗಿ ಓದಿಸಿದರೆ ಆಯಿತು ಎಂದುಕೊಂಡು ಹಿಂದುಮುಂದು ನೋಡದೆ ಸಾವಂತ್ರಿಯ ಮನೆಗೆ ಹೊರಟುಬಂದಿದ್ದಳು.

ಶಾಲೆಗೆ ಹೋಗುವಾಗ ಶಾಂತಕ್ಕ ರಸ್ತೆಯಲ್ಲಿ ಅಪರೂಪಕ್ಕೊಮ್ಮೆ ಸಿಗುತ್ತಿದ್ದರು. ಅಮ್ಮನ ಕುರಿತು ವಿಚಾರಿಸಿದ ಮರುಕ್ಷಣವೇ ತನ್ನ ಓದಿನ ಪ್ರಗತಿಯನ್ನು ಕೇಳದೇ ಇರುತ್ತಲಿರಲಿಲ್ಲ. ''ಈ ಸಲದ ಕಿರು ಪರೀಕ್ಷೆಯಲ್ಲಿ ಎಷ್ಟು ಅಂಕಗಳನ್ನು ಪಡೆದೆ, ಯಾಕಿಷ್ಟು ಕಡಿಮೆ ಅಂಕಗಳು ಬಂದವು? ಇನ್ನೂ ಹೆಚ್ಚಿನ ಶ್ರಮ ಹಾಕು. ಇಲ್ಲವಾದರೆ ಅಂತಿಮ ಪರೀಕ್ಷೆಯಲ್ಲಿ ಕಷ್ಟವಾಗುತ್ತದೆ'' ಎಂದೆಲ್ಲಾ ಸಲಹೆ ನೀಡುತ್ತಲೇ ಇರುತ್ತಿದ್ದರು. ಅಂಥವರು ಇದ್ದಕ್ಕಿದ್ದ ಹಾಗೆ ಬರಲು ಕಾರಣವೇನು? ನನ್ನ ಬಗ್ಗೆ ಏನಾದರೂ ದೂರಿರಬಹುದೇ? ಎಂದೆಲ್ಲಾ ಯೋಚಿಸಿದ ಸಾವಂತ್ರಿಯು, ಬಚ್ಚಲು ಕೋಣೆಗೆ ಹೋಗಿ ಮುಖ ಕೈಕಾಲು ತೊಳೆದು ಕೊಂಡು ಅಡ್ಡಗೋಡೆಗೆ ಒರಗಿ ಕೊಂಡು ನಿಲ್ಲುವ ವೇಳೆಗಾಗಲೇ ಅಮ್ಮನ ಬಾಯಿಂದ, ''ನೀವೇಳೋದೆಲ್ಲಾ ಸರಿ. ಆದ್ರೂ ಎಂಗೆ ಕಳ್ಸದು? ಬಿದ್ದೋಗೊ ಮರಕ್ಕೆ ಆಸ್ರೆಯಾದ್ರೂ ಯಾರು?'' ಮತ್ತದೇ ಅವಲಂಬನೆಯ ಮಾತುಗಳು ಕೇಳಬೇಕಾಯ್ತು.

ಶಾಂತಕ್ಕ ಸಾವಂತ್ರಿಯನ್ನು ಹತ್ತಿರಕ್ಕೆ ಕರೆದು ತಲೆ ನೇವರಿಸಿ ''ಬಾ ಕುಳಿತುಕೋ'' ಎಂದು ತಾನು ಕುಳಿತಿದ್ದ ಕುರ್ಚಿಯ ಪಕ್ಕದಲ್ಲಿದ್ದ ದಿವಾನದ ಕಡೆಗೆ ಕೈ ತೋರಿಸಿದರೂ, ಸಾವಂತ್ರಿ ಶಾಂತಕ್ಕನಿಗೆ ಗೌರವ ಸೂಚಿಸುವ ಸಲುವಾಗಿ ನೆಲದಲ್ಲೇ ಕೂರುವ ಮನಸ್ಸು ಮಾಡಿದಳು. ಅವಳ ವಿನಮ್ರತೆಗೆ ಮನಸೋತ ಶಾಂತಕ್ಕ ''ಮಗೂ, ನನ್ನ ಮನೆಗೆ ಬರ್ತೀಯಾ? ನಿನಗೆ ಒಳ್ಳೆಯ ಶಾಲೆಗೆ ಸೇರಿಸ್ತೇನೆ, ಎಷ್ಟು ಬೇಕಾದ್ರೂ ಓದು. ಆರಾಮವಾಗಿ ಇರಬಹುದು. ನಿಮ್ಮ ತಾಯಿಯ ಹತ್ತಿರ ಎಲ್ಲವೂ ಮಾತನಾಡಿದ್ದೇನೆ'' ಎಂದಾಗ ಏನು ಉತ್ತರಿಸುವುದು ಎಂದು ತೋಚದ ಸಾವಂತ್ರಿಯು ತನ್ನ ಅಮ್ಮನ ದುಃಖದ ಕಣ್ಣುಗಳನ್ನೇ ದಿಟ್ಟಿಸುತ್ತಾ ತನ್ನಷ್ಟಕ್ಕೆ ತಾನು ನೀರುಗಣ್ಣಾದಳು. ''ಅದೇಕೆ ಇಬ್ಬರೂ ಹೀಗೆ ಅಳುತ್ತೀರಿ? ನನ್ನ ಮನೆಯೇನು ಪರದೇಶದಲ್ಲಿ ಇದೆಯಾ? ಮಗಳನ್ನು ನೋಡಬೇಕೆಂದರೆ ತಾಯಿಗೆ ಎರಡು ಮೈಲಿಯಾದರೆ, ತಾಯಿಯನ್ನು ನೋಡಬೇಕು ಅಂದರೆ ಮಗಳಿಗೂ ಎರಡು ಮೈಲಿಯಷ್ಟೆ. ಅದೂ ಅಲ್ಲದೆ ನಿನ್ನ ಮಗಳನ್ನು ಮದುವೆ ಮಾಡಿ ಗಂಡನ ಮನೆಗೇನೂ ಕಳಿಸುತ್ತಿಲ್ಲವಲ್ಲ'' ಎಂಬ ಧೈರ್ಯದ ಮಾತುಗಳಿಗೂ ಅಮ್ಮ-ಮಗಳ ದುಃಖ ಅರಗಲಿಲ್ಲ. ಹೀಗೆ ಶಾಂತಕ್ಕನ ಇನ್ನೂ ಎಷ್ಟೋ ಮಾತುಗಳಿಗೆ ಅವರಿಬ್ಬರ ಕಿವಿಗಳು ಪ್ರೇಕ್ಷಕರಾಗಿದ್ದವು.

ಈ ಜೀವನ್ಮರಣದ ನಿರ್ಣಯಗಳ ಮಧ್ಯೆಯೇ ಸಾವಂತ್ರಿಯ ಮನಸ್ಸಿನ ಯಾವುದೋ ಒಂದು ಮೂಲೆಯಲ್ಲಿ ಚಿಂತೆಯು ಬಲೆ ಕಟ್ಟುತ್ತಿತ್ತು; ಗಾರ್ಮೆಂಟಿಗೆ ಹೋಗುತ್ತಿರುವ ಅಮ್ಮನನ್ನು ಓದಿಗಾಗಿ ಪೀಡಿಸುವುದು ಎಷ್ಟು ಸರಿ? ಅವಳು ತನಗಾಗಿ ಏನೇನು ಮಾಡಿಲ್ಲ? ಪ್ರಾಣವೊಂದನ್ನು ಇಟ್ಟುಕೊಂಡು ಎಲ್ಲವನ್ನೂ ಧಾರೆ ಎರೆದಿದ್ದಾಳೆ. ಟೈಲರ್ ವೃತ್ತಿ ರಕ್ತ ಹೀರುವಂತಹ ಕೆಲಸ. ಆ ಬಟ್ಟೆಗಳ ಧೂಳು ಶ್ವಾಸಕೋಶವನ್ನು ತೊಂದರೆಗೆ ಸಿಲುಕಿಸುತ್ತದೆ. ಮೊದಲು ನಾನು ಓದಿ ದೊಡ್ಡವಳಾಗಬೇಕು. ಆ ನಂತರ ಒಂದು ಒಳ್ಳೆಯ ಕೆಲಸ ಗಿಟ್ಟಿಸಿ, ಅಮ್ಮನ ಆ ಕೆಲಸವನ್ನು ಬಿಡಿಸಿ, ಅವಳನ್ನು ಸಾಯುವವರೆಗೂ ಚೆನ್ನಾಗಿ ನೋಡಿಕೊಳ್ಳಬೇಕು. ಅದೂ ಅಲ್ಲದೆ ಶಾಂತಕ್ಕ ತುಂಬ ಒಳ್ಳೆಯವರು. ಮನೆಯಲ್ಲಿ ಸ್ವಾಧೀನವಿಲ್ಲದ ತಾಯಿಯೊಡನೆ ಹೆಣಗುತ್ತಿದ್ದಾರೆ. ನಾನು ಹೋದರೆ ಅವರಿಗೂ ಸಹಾಯವಾಗುತ್ತದೆ. ಇನ್ನಾದರೂ ನನ್ನ ಈ ಬಡತನದ ಬದುಕಿಗೆ ಮುಕ್ತಿ ಸಿಗುತ್ತದೆ.

ಶಾಂತಕ್ಕ ಎದ್ದು ನಿಂತಿದ್ದೇ ಸಾವಂತ್ರಿಯ ಯೋಚನೆಯ ಬಲೆ ಕಿತ್ತುಕೊಂಡಿತು. ಅಮ್ಮ ಸಾವಂತ್ರಿಯ ಮುಖವನ್ನೇ ನೋಡುತ್ತಿದ್ದಳು. ನಿರ್ಧಾರಕ್ಕೆ ಬಂದವಳಂತೆ ಸಾವಂತ್ರಿ ''ಅಮ್ಮಾ ವೋಗ್ತೀನಿ'' ಅಂದಾಗ ಶಾಂತಕ್ಕನಿಗೆ ಸಮಾಧಾನವಾದರೂ ಅದನ್ನು ತೋರ್ಪಡಿಸದೇ ಅಳುತ್ತಿದ್ದ ಅವಳ ತಾಯಿಯನ್ನು, ''ಇನ್ಮುಂದೆ ಸಾವಂತ್ರಿ ನಿನ್ನ ಮಗಳಲ್ಲ, ನನ್ನ ಮಗಳು'' ಎಂದು ಹೇಳುತ್ತಾ ಎಲ್ಲ ಸಮಾಧಾನದ ಮಾತುಗಳಿಗೆ ತೆರೆ ಎಳೆದರು.

ಸಾವಂತ್ರಿಯ ಶೈಕ್ಷಣಿಕ ವರ್ಷ ಮುಗಿದ ತಕ್ಷಣ ಶಾಂತಕ್ಕ ಮಾಡಿದ ಮೊದಲ ಕೆಲಸವೇನೆಂದರೆ; ಸಾವಂತ್ರಿಯ ಹೆಸರನ್ನು ಸಾವಿತ್ರಿ ಎಂದು ಬದಲಾಯಿಸಿ ನೋಂದಣಿ

ಮಾಡಿಸಿದರು. ಅವಳು ಈ ಮೊದಲು ಓದುತ್ತಿದ್ದ ಸರ್ಕಾರಿ ಶಾಲೆಯನ್ನು ಬಿಡಿಸಿ, ಪ್ರತಿಷ್ಠಿತ ಕಾನ್ವೆಂಟ್ ಶಾಲೆಗೆ ಸೇರಿಸಿದರು. ಅವಳು ಅರ್ಧವಾರ್ಷಿಕ ಪರೀಕ್ಷೆಯನ್ನು ಮುಗಿಸಿದ ತಿಂಗಳಲ್ಲೇ ಶಾಂತಕ್ಕನ ತಾಯಿ ತೀರಿಕೊಂಡರು. ಅಂದಿನಿಂದ ಸಾವಿತ್ರಿಗೆ ಸುಖಕರ ದಿನಗಳು ಎದುರಾದವು. ದಿನ ಕಳೆದಂತೆ ಸಾವಿತ್ರಿ ಆಧುನಿಕ ವೇಷಭೂಷಣಕ್ಕೆ ಒಗ್ಗಿಕೊಂಡಳು. ಕಾನ್ವೆಂಟ್ ಶಾಲೆಯ ಟೈ ಮತ್ತು ಫ್ರಾಕ್ ಅವಳನ್ನು ಒಂದು ಗಂಭೀರ ಮನಸ್ಥಿತಿಗೆ ಏರಿಸಿತ್ತು. ಶಾಂತಕ್ಕನ ಹತ್ತಿರ ಏನು ವಿಷಯ ಮಾತನಾಡಿದರೂ ಅದು ಇಂಗ್ಲಿಷ್‌ನಲ್ಲೇ! ಮಾತು ಮಾತಿಗೂ ಎಕ್ಸ್‌ಕ್ಯೂಸ್ ಮೀ, ಸಾರಿ, ಪ್ಲೀಸ್ ಪದಗಳು ಸುಳಿಯುತ್ತಿದ್ದವು. ಯಾವಾಗ ಲಾದರೂ ಅವಳ ಅಮ್ಮ ಶಾಂತಕ್ಕನ ಮನೆಗೆ ಬಂದು ಸಾವಂತ್ರಿ ಎಂದು ಕರೆದರೂ ಹ್ಞೂಂಗುಟ್ಟುತ್ತಿರಲಿಲ್ಲ. ಆದ್ದರಿಂದ ಅವಳ ಅಮ್ಮನೂ ಸಾವಿತ್ರಿ ಎಂದು ಅಪರಿಚಿತವಾದ ಸ್ವರದಲ್ಲಿ ಕರೆಯುವುದಕ್ಕೆ ಶುರುವಿಟ್ಟಳು.

ಮೊದಮೊದಲು ಅಮ್ಮನನ್ನು ನೋಡಲು ಮನೆಗೆ ಓಡೋಡಿ ಬರುತ್ತಿದ್ದ ಸಾವಿತ್ರಿ ನಂತರದ ದಿನಗಳಲ್ಲಿ, ''ನನ್ನನ್ನು ನೋಡಬೇಕು ಅಂದರೆ ನೀನೇ ಬಾ, ನಂಗೆ ಓದೋಕೆ ಟೈಮ್ ಸಾಕಾಗೋಲ್ಲ, ಸ್ಕೂಲಿಂದ ಬಂದ ತಕ್ಷಣ ಟ್ಯೂಶನ್ನಿಗೆ ಹೋಗಬೇಕು'' ಎಂದು ಗದರುತ್ತಿದ್ದಳು. ಸಾವಿತ್ರಿಯ ಗ್ರಾಂಥಿಕ ಮಾತುಗಾರಿಕೆ ಅವಳ ಅಮ್ಮನನ್ನು ಮಂಕಾಗಿಸುತ್ತಿತ್ತು.

ರಸ್ತೆಯಲ್ಲಿ ತನ್ನ ಸ್ನೇಹಿತರ ಜೊತೆಗಿದ್ದಾಗ ಅವಳ ಅಮ್ಮನೇನಾದರೂ ಎದುರಿಗೆ ಬಂದರೆ ಅಪರಿಚಿತರಂತೆ ವರ್ತಿಸುತ್ತಿದ್ದಳು. ಒಂದು ಸಾರಿಯಂತೂ, ''ಶೀ ಇಸ್ ವರ್ಕಿಂಗ್ ಅಟ್ ಅನ್ ಅವರ್ ಹೌಸ್ ಬೈ ಎ ಸ್ವೀಪರ್'' ಎಂದು ಕೆಲವರಿಗೆ ಪರಿಚಯಿಸಿದಳು. ಅವಳ ಇಂಗ್ಲಿಷ್‌ಗೆ ಮನಸೋತ ಅವಳ ಅಮ್ಮ ಮುಖ ಸವರಿ ಪ್ರೀತಿಯಿಂದ ಮುತ್ತಿಟ್ಟಳು.

ಒಂದು ದಿನ ಅವಳ ಅಮ್ಮನ ಮತ್ತು ಶಾಂತಕ್ಕನ ಒತ್ತಾಯದಿಂದ ಯುಗಾದಿ ಹಬ್ಬಕ್ಕೆಂದು ಮನೆಗೆ ಬಂದಿದ್ದಳು. ಬಂದ ತಕ್ಷಣವೇ, ''ಇನ್ನೂ ಸೋಫಾ ಬದಲಾಯಿಸಿಲ್ವಾ ? ತಿಂಗಳು ತಿಂಗಳೂ ಹಣ ಕೊಡುತ್ತಿದ್ದೆನಲ್ಲಾ ಏನು ಮಾಡಿದೆ? ಹಬ್ಬಕ್ಕಾದ್ರೂ ಮನೆಗೆ ಪೈಂಟ್ ಮಾಡಿಸೋಕೆ ಏನಾಗಿತ್ತು? ಈ ನಡುವೆ ತುಂಬ ಲೇಸೀ ಆಗಿದೀಯಾ'' ಎಂದು ನಿಂತೇ ಇದ್ದಳು. ಅಪರೂಪಕ್ಕೆ ಮನೆಗೆ ಬಂದ ಮಗಳ ಜೊತೆ ವಾದಿಸಿ, ಅವಳ ಮನಸ್ಸನ್ನು ನೋಯಿಸುವುದು ಇಷ್ಟವಾಗದೆ, ಎಲ್ಲವನ್ನೂ ಸಹಿಸಿಕೊಂಡು, ನಗುತ್ತಲೇ ಅಡುಗೆ ತಯಾರಿಗೆ ಅನುವಾದಳು. ಅಂದು ಮನೆಯ ತುಂಬೆಲ್ಲಾ ತನ್ನ ಮೊಬೈಲ್‌ನಲ್ಲಿ ವಟಗುಟ್ಟುತ್ತಿದ್ದ ಸಾವಿತ್ರಿ ಅದ್ಯಾವುದೋ ಹೊತ್ತಿನಲ್ಲಿ ನಿದ್ದೆಹೋಗಿದ್ದಳು.

ಹಬ್ಬದ ಮಾರನೆಯ ದಿನದ ವರುಷತೊಡಕಿಗೆಂದು ಸಾವಿತ್ರಿ ಬೆಳಿಗ್ಗೆ ಕಣ್ಣು ಉಜ್ಜಿಕೊಂಡು ಏಳುವ ಹೊತ್ತಿಗಾಗಲೇ ತಂದಿದ್ದ ಮಾಂಸದ ವಾಸನೆ ಮೂಗಿಗೆ ಬಡಿದದ್ದೇ ವಾಂತಿ ಮಾಡಿಕೊಂಡು, ''ಸತ್ತ ಪ್ರಾಣಿ ತಿನ್ನುವುದಕ್ಕೆ ನನ್ನ ಹೊಟ್ಟೆಯೇನು ತಿಪ್ಪೆಗುಂಡಿಯಲ್ಲ'' ಎಂದು ಹಿಗ್ಗಾಮುಗ್ಗಾ ಬೈದಳು. ''ಇಲ್ಲಾ ಕಣವ್ವಾ, ಇದು ಸತ್ತೋಗಿರೋ ಪ್ರಾಣಿದಲ್ಲ, ಸಾಬ್ರ ಅಂಗ್ಡಿಯಿಂದ ತಂದಿದ್ದು, ಸಾಬ್ರೆಲ್ಲಾದ್ರೂ ಸತ್ತೋಗಿರೋ ಪ್ರಾಣೀನ ಕುಯ್ತಾರ ?'' ಎಂದು ತಲೆಯ ಮೇಲೆ ನೇವರಿಸುತ್ತಾ ಪ್ರೀತಿಯಿಂದ ಹೇಳಿದಳು. ''ಜೀವಂತವಾಗಿರೋ ಪ್ರಾಣೀನ ಕುಯ್ದರೂ ಮಾಂಸವೇ, ಸತ್ತ ಪ್ರಾಣೀನ ಕುಯ್ದರೂ ಮಾಂಸವೇ'' ಎಂದು ಎದುರುತ್ತರ ಕೊಟ್ಟಳು. ''ಅವತ್ತಿಂದಲೂ ತಿಂತಿದ್ದವಲ್ಲ, ಇವಾಗೇನವ್ವ ಇಂಗಂತೀ'' ಎಂದು ತನ್ನ ನೋವಿನ ಸಿಟ್ಟನ್ನು ಹೊರಹಾಕಿದಳು.

''ಆಗ ನಾನು ಈ ಹಳೇ ಮನೆಯ ದರಿದ್ರದ ಸಾವಂತ್ರಿಯಾಗಿದ್ದೆ. ಆದರೆ ನಾನು ಈಗ ಸಾವಿತ್ರಿ. ಛೇ ನಿನ್ನ ಮನೆಗೆ ಬಂದಿದ್ದೇ ದೊಡ್ಡ ತಪ್ಪು. ಇನ್ಯಾವತ್ತೂ ಈ ಕಡೆ ತಲೆ ಹಾಕುವುದಿಲ್ಲ'' ಎಂದು ಕಾಲು ತೆಗೆದಳು.

**ವಿ. ಆರ್. ಕಾರ್ಪೆಂಟರ್**
ನಂ. ೩೮೯, ೨ನೇ ಮುಖ್ಯರಸ್ತೆ, ಜನತಾ ಲೇಔಟ್, ವೆಂಕಟಾಲ
ಯಲಹಂಕ, ಬೆಂಗಳೂರು - ೫೬೦ ೦೬೪

## ಸಿತಾರ್ ದಂತಕಥೆ
## ಪಂಡಿತ್ ರವಿಶಂಕರ್

### ನಿಧನ : ೧೨.೧೨.೨೦೧೨



ಶ್ಯಾಮ್ ಶಂಕರ್ ರಾಯ್ ಮತ್ತು ಹೇಮಾಂಗಿನಿ ದೇವಿ ಅವರ ಏಳು ಮಕ್ಕಳಲ್ಲಿ ಒಬ್ಬರಾದ ರವೀಂದ್ರ ಶಂಕರ್ ಚೌಧರಿ ಮುಂದೆ ರವಿಶಂಕರ್ ಎಂಬ ಹೆಸರಿನಲ್ಲಿ ತಮ್ಮ ಎಳೆಯ ವಯಸ್ಸಿನಲ್ಲೇ ಸಿತಾರ್ ವಾದ್ಯಕ್ಕೆ ಮನಸೋತು ಅಪ್ರತಿಮ ಸಾಧನೆ ಗಳಿಸಿದರು. ಭಾರತೀಯ ಶಾಸ್ತ್ರೀಯ ಸಂಗೀತವನ್ನು ತನ್ನ ನೆಲದಲ್ಲೇ ಅಲ್ಲದೆ ಯೂರೋಪ್, ಅಮೆರಿಕಾಗಳಲ್ಲಿನ ಸಂಗೀತ ರಸಿಕರ ಹೃದಯವನ್ನು ಅವರು ಮೀಟಿದ ಬಗೆ ಅನನ್ಯ. ಗುರು ಅಲ್ಲಾವುದ್ದೀನ್ ಖಾನ್ ಮತ್ತು ಅವರ ಮಗ ಯುವ ಅಲಿ ಅಕ್ಬರ್ ಖಾನ್ ಅವರ ಮಾರ್ಗದರ್ಶನ ಮತ್ತು ಸಹಯೋಗದೊಡನೆ ೧೯೩೯ರಲ್ಲೇ ಸಾರ್ವಜನಿಕ ಸಭೆಯೊಂದರಲ್ಲಿ ತನ್ನ ಪ್ರತಿಭೆಯನ್ನು ಪ್ರದರ್ಶಿಸಿದ ರವಿಶಂಕರ್ ಮತ್ತೆ ಹಿಂದಿರುಗಿ ನೋಡಲಿಲ್ಲ. ೧೯೪೫ರಲ್ಲಿ ಪ್ರಗತಿಪರ ಸಂಘಟನೆ ಭಾರತೀಯ ಜನಕಲಾ ಸಮಿತಿ (ಇಪ್ಟಾ)ಯ ನಾಟಕ, ಸಂಗೀತೋತ್ಸವ ಮುಂತಾದ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ತೊಡಗಿಕೊಂಡ ರವಿಶಂಕರ್ ಸುಪ್ರಸಿದ್ಧ ನಿರ್ದೇಶಕರಾದ ಕೆ. ಎ. ಅಬ್ಬಾಸ್, ಚೇತನ್ ಆನಂದ್ ಅವರ 'ಧರ್ತಿ ಕೆ ಲಾಲ್' ಮತ್ತು 'ನೀಚಾ ನಗರ್' ಚಲನಚಿತ್ರಗಳಿಗೆ ಸಂಗೀತ ನಿರ್ದೇಶಕರಾಗಿ ತಮ್ಮ ಬದುಕಿನಲ್ಲಿ ಮಹತ್ವದ ಹೆಜ್ಜೆ ಇಟ್ಟರು.

'ಭಾರತ ರತ್ನ' ಪ್ರಶಸ್ತಿ ನೀಡಿ ಭಾರತ ಸರ್ಕಾರ ರವಿಶಂಕರ್ ಅವರನ್ನು ಗೌರವಿಸಿದೆ. ಈ ಮಹಾನ್ ಕಲಾವಿದ 'ಗ್ರ್ಯಾಮಿ' ಪ್ರಶಸ್ತಿಗೂ ಭಾಜನರು. ಸುಮಾರು ೮ ದಶಕಗಳ ಕಾಲ ಸಿತಾರ್ ಸ್ವರಗಳನ್ನೇ ತಮ್ಮ ನಾಡಿಮಿಡಿತವನ್ನಾಗಿ ದುಡಿಸಿಕೊಂಡು, ಭಾರತೀಯ ಶಾಸ್ತ್ರೀಯ ಸಂಗೀತದ ಪರಂಪರೆಯನ್ನು ನಾಡಿನಲ್ಲಿ, ವಿದೇಶಗಳಲ್ಲಿ ಜನಪ್ರಿಯಗೊಳಿಸಿದ, ಇನ್ನಷ್ಟು ಶ್ರೀಮಂತಗೊಳಿಸಿದ, ಪಂಡಿತ್ ರವಿಶಂಕರ್ ಇಂದು ನಮ್ಮೊಡನಿಲ್ಲ. ಆದರೆ ಈ ಅಪ್ರತಿಮ ಸಿತಾರ್ ಕಲಾವಿದನ ರಾಗವಿಹಾರಗಳು ಚಿರಕಾಲ ಧ್ವನಿಸುತ್ತಲೇ ಇರುತ್ತವೆ.

ದಿ|| ರವಿಶಂಕರ್ ಅವರಿಗೆ 'ಹೊಸತು'ವಿನ ನಮನಗಳು.

# ದಾಳಿಕಾರಂಗೆ ಧರ್ಮವುಂಟೆ?

ಪ್ರತಿ ಟಿವಿ ಚಾನೆಲ್ ಮತ್ತು ದಿನಪತ್ರಿಕೆಯೂ ಬಂಡವಾಳಶಾಹಿ ಕುಟುಂಬಗಳ ಒಡೆತನದಲ್ಲಿವೆ. ಅವರಿಗೆ ಲಾಭನಷ್ಟವಲ್ಲದೇ ಬೇರಾವುದೂ ಮುಖ್ಯವಲ್ಲ. ಪತ್ರಿಕೆಗಳೂ ಮಾರುವ ದಲ್ಲಾಳಿಗಳಾಗಿ ವರ್ತಿಸುತ್ತವೆ. ಟೆಲಿಶಾಪಿಂಗ್ ನೆಟ್‌ವರ್ಕ್ ಎಂಬ ಕೊಳ್ಳುವಿಕೆಯನ್ನು ಪ್ರೋತ್ಸಾಹಿಸಿ ಹಸಿ ಸುಳ್ಳುಗಳನ್ನು ನಿರ್ಲಜ್ಜವಾಗಿ ಪ್ರಸಾರ ಮಾಡುವ ಚಾನೆಲ್ ಇದೆ. ಇಲ್ಲೆಲ್ಲ ಮಾಧ್ಯಮ ವ್ಯಾಪಾರಿ ಹಿತಾಸಕ್ತಿಯ ಏಜೆಂಟ್ ಆಗಿ ಕೆಲಸ ಮಾಡುತ್ತದೆ. ಟಿವಿ, ಪೇಪರಿನಲ್ಲಿ ನಿತ್ಯವೂ ಬೆಲೆ ತೆತ್ತು ಜಾಹೀರಾತು ನೀಡುವವರಾದರೆ ಅವರ ಲಾಭ ಎಷ್ಟಿರಬಹುದು ? ವಸ್ತುವಿನ ಮೂಲ ಬೆಲೆ ಎಷ್ಟಿರಬಹುದು ? ಜಾಹೀರಾತಿಗೆ ಕೊಡುವ ಹಣವನ್ನು ಜನರಿಂದಲೇ ತಾನೇ ಅವರು ವಸೂಲಿ ಮಾಡುವುದು ? ಎಂದರೆ ಮಾಧ್ಯಮಗಳು ಜನರನ್ನು ವಂಚಿಸಿದ ಹಣದಿಂದ ಜನರ ವಂಚನೆಗಾಗಿಯೇ ನಡೆಯುತ್ತಿರುವ ಹಾಗಾಯಿತು. ಇದು ಯಾವ ಪುರುಷಾರ್ಥಕ್ಕಾಗಿ ?

**ಡಾ|| ಎಚ್. ಎಸ್. ಅನುಪಮಾ**

೧. ಬಿಳಿ ಮಚ್ಚೆ, ಸಂಪೂರ್ಣವಾಗಿ ಗುಣಪಡಿಸಬಹುದು. ಚಿಕಿತ್ಸೆಯಿಂದ ಗುಣವಾಗುವ ಸಂಪೂರ್ಣ ಖಾತರಿಯಿರುವುದು. ಹೊಸದಾಗಿ ಸಂಶೋಧನೆ ಮಾಡಿದ ಔಷಧಿಗಳು ಉಪಯೋಗಿಸಿದ ಐದಾರು ಗಂಟೆಗಳಲ್ಲಿ ತ್ವಚೆಯನ್ನು ಸಹಜ ಬಣ್ಣಕ್ಕೆ ಶಾಶ್ವತವಾಗಿ ಬದಲಾಯಿಸುತ್ತವೆ. ದೂರವಾಣಿ ಮೂಲಕ ಸಂಪರ್ಕಿಸಿ.

೨. ಜಗತ್ತಿನ ನಂ. ೧ ಲಿಂಗವರ್ಧಕ. ನಮ್ಮ ಚಿಕಿತ್ಸೆಯಿಂದ ಶಿಶ್ನವು ೩-೪ ಅಂಗುಲ ಉದ್ದ, ನೇರ ಮತ್ತು ಬಲಶಾಲಿಯಾಗುವುದು. ಲೈಂಗಿಕ ಕ್ರಿಯೆಯ ಸಮಯ ೩೦-೪೦ ನಿಮಿಷದಷ್ಟು ಹೆಚ್ಚಾಗುವುದು. ತಕ್ಷಣ ಸಂಪರ್ಕಿಸಿ. ೧೦೦% ಗಿಡಮೂಲಿಕೆ, ಅಡ್ಡ ಪರಿಣಾಮಗಳಿಲ್ಲ.

೩. ಆಕರ್ಷಕ ಸ್ತನಗಳು : ಯಾವುದೇ ಅಡ್ಡ ಪರಿಣಾಮವಿಲ್ಲದೆ ೨೮ ದಿನಗಳಲ್ಲಿ ನಿಮ್ಮ ಸ್ತನವನ್ನು ಸುಂದರ, ಆಕರ್ಷಕ ಮತ್ತು ಬಿಗಿಯಾಗಿರುವಂತೆ ಹಾಗೂ ಸೂಕ್ತವಾಗಿ ಹೊಂದಿಕೆಯಾಗುವಂತೆ ಮಾಡಿಕೊಳ್ಳಿ.

೪. ಎತ್ತರ ಹೆಚ್ಚಿಸುವಿಕೆ : ನಮ್ಮ ೧೦೦% ಗಿಡಮೂಲಿಕೆ ಔಷಧಿಯಿಂದ ೬ ವಾರಗಳ ಒಳಗೆ ನಿಮ್ಮ ಎತ್ತರ ೨-೩ ಅಂಗುಲ ಹೆಚ್ಚಾಗುವುದು.

೫. ಪೈಲ್ಸ್ ಯಾವುದೇ ಸ್ವರೂಪದ್ದಾಗಲೀ ಅದನ್ನು ಮೂಲದಿಂದಲೆ ಗುಣಪಡಿಸಲಾಗುವುದು. ರಕ್ತಸ್ರಾವ ನಿಲ್ಲುವುದು. ಒಣಗಿದ ತರುವಾಯ ಮೊಳೆಯಾಕಾರದ ಗಂಟು ಬಿದ್ದು ಹೋಗುವುದು.

೬. ಕೆಲಸದ ಒತ್ತಡ ಮತ್ತು ನಿಶ್ಶಕ್ತಿಯಿಂದ ಆಗಾಗ್ಗೆ ಆಗುವ ಸುಸ್ತನ್ನು ಕಡಿಮೆ ಮಾಡಿ ದಿನವಿಡೀ ಯಂಗ್, ಎನರ್ಜೆಟಿಕ್ ಮತ್ತು ಆಕ್ಟಿವ್ ಆಗಿರಲು ೨೨ ಅವಶ್ಯಕ ಸತ್ವಗಳನ್ನುಳ್ಳ ... ... ಅನ್ನು ಸೇವಿಸಿ...
ವಿ.ಸೂ : ಸರಿಯಾದ ಮತ್ತು ಸೂಕ್ತವಾದ ವಿಳಾಸ ನೀಡಿ ಕೆಳಕಂಡ ನಂಬರ್‌ಗಳನ್ನು ಸಂಪರ್ಕಿಸಿ.

ಇಂಥ ಜಾಹೀರಾತುಗಳನ್ನು ಪೇಪರ್ ಓದಲು ಶುರುವಾದಾಗಿನಿಂದ ನೀವು ನೋಡಿರಬಹುದು, ಇನ್ನೂ ನೋಡುತ್ತಲೇ ಇದ್ದೀರಿ. ಸ್ವಾತಂತ್ರ್ಯಪೂರ್ವ ಕಾಲದ ಕೆಲ ಪೇಪರ್ ತುಣುಕನ್ನು ಅಂಡಮಾನ್ ಜೈಲಿನಲ್ಲಿಟ್ಟಿದ್ದರು, ಅದರಲ್ಲೂ ಇದೇ ಇತ್ತು!! ದಿನಬೆಳಗಾದರೆ ಎಲ್ಲ, ಅಂದರೆ ಎಲ್ಲ ವೃತ್ತಪತ್ರಿಕೆಗಳ ಮುಖಪುಟದ ಮೇಲ್ತುದಿಯಿಂದ ಕೊನೆ ಪುಟದ ಮೂಲೆಯವರೆಗೆ ಎಲ್ಲಾದರೊಂದು ಜಾಗ ಗಿಟ್ಟಿಸಿಕೊಂಡು ನಾಲ್ಕಾರು ಫೋನ್ ನಂಬರ್ ಸಮೇತ ಪ್ರಕಟವಾಗುವ ಈ ಜಾಹೀರಾತುಗಳ ಕ್ಲೈಮ್‌ಗಳು ಅಪ್ಪಟ ಸುಳ್ಳು. ದಶಕಗಟ್ಟಲೆಯಿಂದ ಇಂಥ ಜಾಹೀರಾತು ನೀಡುತ್ತಿರುವವರು ಯಾರು ? ಫೋನಿನಲ್ಲಿ ಸಂಪರ್ಕಿಸಿ ಚಿಕಿತ್ಸೆ ನೀಡುವ ಅವರ ಕ್ವಾಲಿಫಿಕೇಷನ್ ಎಂಥದು ? ದಿನಪತ್ರಿಕೆಗಳು ಯಾರಿಗಾಗಿ ಇವನ್ನು ಪ್ರಕಟಿಸುತ್ತಿವೆ ?

ಹೀಗೊಂದು ಪ್ರಶ್ನೆ ಕೇಳಿಕೊಂಡು ವ್ಯಾಪಾರಿ ಮಾಧ್ಯಮದ ಬೇಜವಾಬ್ದಾರಿತನದ ಬಗೆಗೆ ಹೇಳುವುದಷ್ಟೇ ಈ ಬರಹದ ಉದ್ದೇಶವಲ್ಲ. ಅವು ಕೊನೆಗೂ ಉದ್ದೀಪಿಸುವುದು ಕೊಳ್ಳುಬಾಕ ಸಂಸ್ಕೃತಿಯನ್ನು ಹಾಗೂ ಆತ್ಮಕೇಂದ್ರಿತ ವ್ಯಕ್ತಿತ್ವವನ್ನು ಎನ್ನುವುದರ ಬಗೆಗೆ ಗಮನ ಸೆಳೆಯುವುದು ನನ್ನ ಉದ್ದೇಶ.

✶ ✶ ✶

ಮೊದಲೇ ಇದನ್ನು ಸ್ಪಷ್ಟಪಡಿಸುವುದು ಒಳ್ಳೆಯದು: ಮನುಷ್ಯನ ಅರ್ಧಕ್ಕರ್ಧ ಕಾಯಿಲೆಗಳು ಕಾಯಿಲೆಗಳಲ್ಲ, ಮತ್ತೆ ಅರ್ಧ ಕಾಯಿಲೆಗಳನ್ನು 'ನಿರ್ಮೂಲ'ಗೊಳಿಸಲು ಔಷಧಿ ಕಂಡುಹಿಡಿದಿಲ್ಲ. ಈಗ ವೈದ್ಯರು ಬರೆಯುವ ಔಷಧಿಗಳಲ್ಲಿ ಬಹಳಷ್ಟು ಅನಗತ್ಯ. ಎಷ್ಟೋ ಕಾಯಿಲೆಗಳನ್ನೂ, ಔಷಧಿಗಳನ್ನೂ ಕೊಂಚ ಕಾಮನ್‌ಸೆನ್ಸ್ ಹಾಗೂ ಆರೋಗ್ಯದರಿವು ಇದ್ದಲ್ಲಿ ದೂರವಿಡಬಹುದು. ವೈದ್ಯಕೀಯ ನೀತಿಸಂಹಿತೆ ಪ್ರಕಾರ ಆರೋಗ್ಯ ಸುಧಾರಣೆಯ ಭರವಸೆ ನೀಡುತ್ತಾ ಯಾವ ವೈದ್ಯನೂ ತನ್ನ ತಜ್ಞತೆಯ ಬಗ್ಗೆ, ಔಷಧದ ಬಗೆಗೆ ಸ್ಪರ್ಧಾತ್ಮಕ ಜಾಹೀರಾತು ನೀಡುವಂತಿಲ್ಲ.

ಹಾಗಿದ್ದರೂ ಯಾವುದೇ ರಾಜ್ಯದ, ಯಾವುದೇ ಭಾಷೆಯ ಪತ್ರಿಕೆ ತೆರೆಯಿರಿ, ಅಲ್ಲಿ ಇಂಥ ಜಾಹೀರಾತುಗಳು ಕಣ್ಣಿಗೆ ರಾಚುತ್ತವೆ. ವೈದ್ಯವೃತ್ತಿಯಲ್ಲಿರುವುದರಿಂದ ಮೇಲ್ಕಾಣಿಸಿದವು ಮೊದಲು ಗಮನ ಸೆಳೆಯುತ್ತವೆ. ಈ ಜಾಹೀರಾತುಗಳ ಸುಳ್ಳು ಘೋಷಣೆಗಳು ಕಲಿತ ಮೆಡಿಸಿನ್ ನಿಜವೋ, ಸುಳ್ಳೋ ಎಂದು ತಡಕುವಂತೆ ಮಾಡುತ್ತವೆ. '೨೦೧೨ರಲ್ಲಿ ಪ್ರಳಯ, ಅದನ್ನು ತಪ್ಪಿಸಬೇಕೇ? ಪೂಜೆ, ಹೋಮ ಮಾಡಿಸಿ.

ರಿಯಾಯಿತಿ ದರದಲ್ಲಿ ಮಾಡಿಕೊಡಲಾಗುತ್ತದೆ' ಎನ್ನುವುದಕ್ಕೂ ಈ ಜಾಹೀರಾತುಗಳಿಗೂ ಏನೂ ವ್ಯತ್ಯಾಸವಿಲ್ಲ. ಪ್ರಳಯದ ಭಯ ಹುಟ್ಟಿಸಿ ಪರಿಹಾರೋಪಾಯಗಳನ್ನು ಸೂಚಿಸಿದಂತೆಯೇ ಇವೂ. ಸಮಸ್ಯೆಯೇ ಅಲ್ಲದ ದೈಹಿಕ ಭಿನ್ನತೆಗಳನ್ನು ಸಮಸ್ಯೆಯಾಗಿಸಿ ಅಥವಾ ಗುಣ ಕಾಣದ ಕಾಯಿಲೆಗಳನ್ನು ಗುಣಪಡಿಸಿ ಕೊಡುವುದಾಗಿ ಹೇಳಲಾಗುವ ಈ ಜಾಹೀರಾತುಗಳು ಇತರೆ ಜಾಹೀರಾತುಗಳಿಗಿಂತ ಹೆಚ್ಚು ಸ್ಪೇಸ್‌ಅನ್ನು ಗಿಟ್ಟಿಸುತ್ತಿರುವುದು ಅಪಾಯಕಾರಿಯಾಗಿದೆ. ಸಾಮಾನ್ಯವಾಗಿ ವೈದ್ಯರನ್ನು ಸಂಪರ್ಕಿಸಲು ಹಿಂಜರಿಕೆಯಿರುವವರು ಹಾಗೂ ವೈದ್ಯಕೀಯ ಸೌಲಭ್ಯ ಕೈಗೆಟುಕದವರು ಇಂಥ ನಕಲಿ ವೈದ್ಯಕ್ಕೆ ಮಾರುಹೋಗುತ್ತಾರೆ.

ಇದು ಎಲ್ಲ ಕ್ಷೇತ್ರಗಳನ್ನೂ ನಕಲಿಯೇ ಆಳುತ್ತಿರುವ ಕಾಲ. ನಕಲಿ ವಸ್ತುಗಳ ಭರಾಟೆ ಎಷ್ಟೆಂದರೆ ಅದರ ಎದುರು ಒರಿಜಿನಲ್ ಪೇಲವವೆನಿಸಿಬಿಡಬೇಕು. ತಕ್ಷಣಕ್ಕೆ ಸೆಳೆಯ ಬಯಸುವ ನಕಲಿಯ ಬಂಡವಾಳವೇ ಲಜ್ಜೆಯಿಲ್ಲದ ಧಾಳುತನ ಮತ್ತು ಅದಕ್ಕೆ ಮಾರುಹೋಗುವವರ ಮೂರ್ಖತನ. ವೈದ್ಯಕೀಯ ಜಗತ್ತು ಸಹ ನಕಲಿಗಳಿಂದ ಮುಕ್ತವಾಗಿಲ್ಲ. ಮೊನ್ನೆ ಈಚೆಗೆ ಬೆಂಗಳೂರೆಂಬ ಕಾಸ್ಮೋಪಾಲಿಟನ್ ನಗರದಲ್ಲಿ ಬಂಧನಕ್ಕೊಳಗಾದ ನೂರಾರು ನಕಲಿ ವೈದ್ಯರೇ ಇದಕ್ಕೆ ಸಾಕ್ಷಿ. ಕೈಗೆಟುಕದಂತಹ ಆಕಾಶ ಬುಟ್ಟಿಯಲ್ಲಿ ಕುಳಿತ ತಜ್ಞವೈದ್ಯರ ನಡುವೆ ನಕಲಿಗಳೇ ಅಗ್ಗವಾಗಿಯೂ, ಆಕರ್ಷಕವಾಗಿಯೂ, ಆಪದ್ರಕ್ಷಕರಂತೆಯೂ ಕಾಣಿಸುತ್ತಾರೆ. ಅವರು ನಿಮ್ಮ ಗುಟ್ಟನ್ನು ಸುಲಭ ಮಾತು-ಚಹರೆಗಳಲ್ಲಿ ತಿಳಿದುಕೊಳ್ಳುತ್ತಾರೆ; ದುಬಾರಿ ತಪಾಸಣೆಯಿಲ್ಲದೆ ರೋಗಪತ್ತೆ ಮಾಡಿದೆನೆಂದು ಹೇಳಿಬಿಡುತ್ತಾರೆ; ಕಡಿಮೆ ಖರ್ಚಿನಲ್ಲಿ ಖಂಡಿತದ ಪರಿಹಾರ ಒದಗಿಸುತ್ತೇನೆಂದು ನಿಸ್ಸಂದಿಗ್ಧ ಮಾತುಗಳಲ್ಲಿ ಭರವಸೆ ನೀಡುತ್ತಾರೆ. ನಿಮ್ಮ ಪ್ರಶ್ನೆಗಳನ್ನೂ, ಭಯವನ್ನೂ ಮೊದಲೇ ಊಹಿಸಿ ಬೆನ್ನು ತಟ್ಟುತ್ತ ಧೈರ್ಯ ಹೇಳುತ್ತಾರೆ.

ಹಾಗಾದಲ್ಲಿ ತಕರಾರೇಕೆ ಎನಿಸಬಹುದು. ತಕರಾರು ಏಕೆಂದರೆ ಅವರು ಪರಿಹಾರ ಸೂಚಿಸುವುದು ಸಮಸ್ಯೆಗಳೇ ಅಲ್ಲದ ದೈಹಿಕ ಭಿನ್ನತೆಗಳಿಗೆ ಅಥವಾ ನಿಜವಾದ ಚಿಕಿತ್ಸೆ ಬಯಸುವ ಗಂಭೀರ ಕಾಯಿಲೆಗಳಿಗೆ. ಚಿಕಿತ್ಸೆ ಹಾಗೂ ಆರೋಗ್ಯ ಕುರಿತು ಮೌಢ್ಯ ಬಿತ್ತುವುದರಿಂದ ಅದರ ಕುರಿತು ಎಚ್ಚರ ಅಗತ್ಯವಾಗಿದೆ. ಮೇಲ್ಕಾಣಿಸಿದ ಕೆಲವು ಜಾಹೀರಾತುಗಳನ್ನು ನೀವು ವರ್ಷಗಟ್ಟಲೆಯಿಂದ ನೋಡಿರುತ್ತೀರಿ. ನೋಡಿ ನೋಡಿ ಅದರತ್ತ ಗಮನ ಹರಿಸುವುದನ್ನೇ ಬಿಟ್ಟಿರುತ್ತೀರಿ. ಆದರೆ ಅದರಲ್ಲಿ ಅಪಾಯಕಾರಿ ಸುಳ್ಳು ಅಡಗಿದೆ. ಸೌಂದರ್ಯ ಕುರಿತಾದ ತಪ್ಪು ಕಲ್ಪನೆ ಎಷ್ಟೋ ಆರೋಗ್ಯ ಸಮಸ್ಯೆಗಳಿಗೆ ಕಾರಣವಾಗಿದೆ, ಅಷ್ಟೇ ಅಲ್ಲ, ಕೊಳ್ಳುಬಾಕತನವನ್ನು ಪ್ರೋತ್ಸಾಹಿಸುತ್ತಿದೆ. ಅದರ ನಡುವೆ ಇಂತಹ ಜಾಹೀರಾತುಗಳು ಸೌಂದರ್ಯದ ಆಳ ಚರ್ಮದಷ್ಟೇ, ಅದು ಸ್ತನ ಗಾತ್ರ, ಅಂದದ ತ್ವಚೆ, ಉದ್ದನೆಯ ಕೂದಲು, ಬೊಜ್ಜಿಲ್ಲದ ದೃಢ ಮೈಕಟ್ಟಿನಲ್ಲಿ ಮಾತ್ರ ಎಂಬ ಸಂದೇಶ ಸಾರುತ್ತ ವ್ಯಕ್ತಿ ತನ್ನ ಆಂತರಿಕ ವಿಕಸನಕ್ಕಾಗಿ ಸಮಯ, ಶ್ರಮ ವ್ಯಯಿಸುವ ಬದಲು ಈ ಇಂಥವೇ ಬಾಹ್ಯ ಸೌಂದರ್ಯದ ಪೋಷಣೆಗೆ ವ್ಯಯಿಸುವಂತೆ ಮಾಡುತ್ತವೆ.

ಉದಾಹರಣೆ : ಬಿಳಿಮಚ್ಚೆಯ ಕುರಿತ ಜಾಹೀರಾತು. ತೊನ್ನು ಒಂದು ರೋಗವಲ್ಲ, ಅದು ಆನುವಂಶೀಯವಲ್ಲ, ಅದು ಒಬ್ಬರಿಂದ ಒಬ್ಬರಿಗೆ ಹರಡುವುದಿಲ್ಲ. ಅದರಿಂದ ದೇಹದ ಯಾವ ಅಂಗಾಂಗಕ್ಕೂ ತೊಂದರೆಯಿಲ್ಲ, ಪ್ರಾಣಾಪಾಯವಿಲ್ಲ. ಲಾಗಾಯ್ತಿನಿಂದ ತೊನ್ನು ಆದವರ ಕುರಿತು ಸಮಾಜದಲ್ಲಿ ಎಷ್ಟು ತಾತ್ಸಾರವಿದೆ ಎಂದರೆ ಮನುಷ್ಯನ ಸಕಲ ದುರ್ಗುಣಗಳನ್ನು ಸಹಿಸುವ ಸಮಾಜ ಅವನದಲ್ಲದ ತಪ್ಪಿಗೆ ವ್ಯಕ್ತಿಯೊಬ್ಬ ಪಡೆದುಕೊಂಡ ಚರ್ಮದ ಬಣ್ಣವನ್ನು ಸ್ವೀಕರಿಸುವುದಿಲ್ಲ. ಶವಸಂಸ್ಕಾರವನ್ನು ಹೂಳಿ ಮಾಡುವ ಕಡೆ ತೊನ್ನಿರುವವರನ್ನು ಸುಡಲಾಗುತ್ತದೆ. ಹೀಗೇ ನಮ್ಮ ನಾನಾ ನಡಾವಳಿಗಳಲ್ಲಿ ಅದೇನೋ ಭಯಾನಕ ಶಾಪವೆಂಬ ಗ್ರಹಿಕೆಯಿರುವುದು ಕಂಡುಬರುತ್ತದೆ. ಅದು ವ್ಯಕ್ತಿಯಲ್ಲಿ ಅಪಾರ ಕೀಳರಿಮೆಯನ್ನೂ, ಒಂದು ಸಂಕೀರ್ಣ ಸೂಕ್ಷ್ಮ ಮನಸ್ಸನ್ನೂ ಸೃಷ್ಟಿಸುತ್ತದೆ. ಚರ್ಮ ವೈದ್ಯರೆಲ್ಲ ತೊನ್ನಿನವರಿಂದ ತುಂಬಿಹೋಗಿರುತ್ತಾರೆ. ಈಗ ಅತ್ಯಾಧುನಿಕ ದುಬಾರಿ ಚಿಕಿತ್ಸೆ ಲಭ್ಯವಿದ್ದರೂ ಅದು ಬಿಳಿಕಲೆಗಳನ್ನೇನೂ ಕಪ್ಪು ಮಾಡುವುದಿಲ್ಲ. ವಸ್ತುಸ್ಥಿತಿ ಹೀಗಿರುವಾಗ, ಅಂಥ ವ್ಯಕ್ತಿ 'ಬಿಳಿ ಕಲೆಗಳಿವೆಯೆ ?...' ಎಂದು ಕೇಳುವ ಜಾಹೀರಾತಿನತ್ತ ಆಕರ್ಷಿತನಾಗುತ್ತಾನೆ. ಸಾವಿರಾರು ರೂಪಾಯಿ ತೆತ್ತು ೩-೬-೯ ತಿಂಗಳ ಔಷಧಿಯನ್ನು ಪೋಸ್ಟ್‌ನಲ್ಲಿ ತರಿಸಿಕೊಳ್ಳುತ್ತಾನೆ.

ಸ್ತನ ಗಾತ್ರ ಕುರಿತ ಜಾಹೀರಾತು. ಇದೊಂದು ಹಸಿಹಸಿ ಸುಳ್ಳು ಆಶ್ವಾಸನೆ. ಸ್ತನ ಗಾತ್ರ ಆನುವಂಶಿಕವಾದದ್ದು. ಹೊರಗಿನ ಮಸಾಜ್‌ನಿಂದಾಗಲೀ, ಔಷಧಿಗಳಿಂದಾಗಲೀ ಅದು ಬಿಗಿಯಾಗಲು ಅಥವಾ ಗಾತ್ರದಲ್ಲಿ ದೊಡ್ಡದಾಗಲು ಸಾಧ್ಯವಿಲ್ಲ. ಸ್ತನ ಗಾತ್ರ ನಿರ್ಧರಿಸುವುದು ಅದರಲ್ಲಿರುವ ಹಾಲು ಸ್ರವಿಸುವ ಗ್ರಂಥಿಗಳು ಮತ್ತು ಕೊಬ್ಬಿನಂಶ. ಮೊಲೆಯೂಡುವ ತಾಯಿಯ ಸ್ತನ ಗಾತ್ರ ಮೊದಲಿಗಿಂತ ಮೂರ್ನಾಲ್ಕು ಪಟ್ಟು ದೊಡ್ಡದಾಗುತ್ತದೆ. ಮಿಕ್ಕಂತೆ ಸ್ತನದಲ್ಲಿ ಕೊಬ್ಬಿನಂಶ ಹೆಚ್ಚಿದ್ದಲ್ಲಿ ಗಾತ್ರವೂ ದೊಡ್ಡದಾಗಿರುತ್ತದೆ. ಹೀಗಿರುವಾಗ ಪೂರ್ಣಕುಂಭದಂತಹ ಸ್ತನಗಳನ್ನು ಪಡೆಯಲು ಇಂತಹ ಜಾಹೀರಾತುಗಳು ಹೆಣ್ಣಿಗೆ ಆಮಿಷ ಒಡ್ಡುತ್ತವೆ. ಮೊದಲೇ ಮಾರುಕಟ್ಟೆಯು ಹೆಣ್ಣೆಂದರೆ ಸೌಂದರ್ಯದ ಪ್ರತಿರೂಪವಾಗಿರಬೇಕು, ಅದಕ್ಕೆ ತಕ್ಕ ಸರಕುಗಳನ್ನು ಬಳಸಬೇಕೆಂಬ ಭಾವನೆ ಹುಟ್ಟಿಸುತ್ತಿದೆ. ಅವಳ ಚರ್ಮ, ಹಿಮ್ಮಡಿಯ ಒಡಕು, ಮುಖದ ಕಲೆ, ಕೂದಲ ಹೊಳಪು, ಆಭರಣ, ಬಟ್ಟೆ, ಚಪ್ಪಲಿ, ಬ್ಯಾಗ್, ಅವಳು ಓಡಿಸುವ ವಾಹನ, ಪರಿಮಳದ್ರವ್ಯಗಳು ಎಲ್ಲಕ್ಕೂ ಬ್ರಾಂಡ್‌ಗಳನ್ನು ಸೃಷ್ಟಿ ಮಾಡಿಕೊಟ್ಟಿದೆ. ಹೊರಗೆ ಕಾಣಿಸುವುವಷ್ಟೇ ಅಲ್ಲ, ಒಳ ಉಡುಪುಗಳನ್ನೂ ಸಹ ತೋರಿಸುತ್ತ ನಿಂತ ರೂಪದರ್ಶಿ ಅದಕ್ಕೂ ಬ್ರಾಂಡ್‌ಗಳನ್ನೇ ಹೊಂದಲು ಉತ್ತೇಜಿಸುತ್ತಾಳೆ. ಅವೆಲ್ಲ ಆಮಿಷಗಳಿಗೆ ಹಣ ಹೊಂದಿಸಿಕೊಳ್ಳುವವರಲ್ಲಿ ಇದೊಂದು ಪೂರಕವಾದ ಆದರೆ ಗುಟ್ಟಾದ ಆಸೆಯನ್ನು ಪೋಷಿಸುವ ಆಮಿಷವಾಗಿ ಮನಸೆಳೆಯುತ್ತದೆ. ಕೊನೆಗೂ ಆಧುನಿಕ ಲೋಕ ಬಯಸುವುದು ಇದನ್ನೇ ? ಹೆಣ್ಣು ತನ್ನ ಅನನ್ಯತೆಯನ್ನು ಅರಿತರೂ ಭಿನ್ನತೆಯನ್ನು ಒಪ್ಪಿಕೊಂಡು ಅದರಂತೆ ಬಾಳಲಿ ಎಂಬುದು. ಸ್ತನ ಗಾತ್ರ, ಸಿಂಹಕಟಿಯ ಕುರಿತ ಜಾಹೀರಾತುಗಳು ಈ ಮನೋಭಾವವನ್ನು ನೀರೆರೆದು ಪೋಷಿಸುತ್ತವೆ.

**ಗಾದಿ**

ಯುಗ-ಯುಗಗಳಾಗಿ
ಬಂದರೇನು
ನವ ವರ್ಷವು
ಯುಗಾದಿಯಾಗಿ ?
ನಿಲ್ಲಿಸುವುದಿಲ್ವೆ
ನಮ್ಮ ನಾಯಕರು
ಪರದಾಡುವುದನು
ಅಧಿಕಾರದ 'ಗಾದಿ'ಗಾಗಿ

ಡಾ॥ ಎ. ಪುಗಳೇಂದಿ
ಬಳ್ಳಾರಿ

ಸೆಕ್ಸ್ ಕುರಿತು ಕಡಿಮೆ ತಿಳುವಳಿಕೆಯಿದೆ. ಹಲವಾರು ಪತ್ರಿಕೆಗಳಲ್ಲಿ ಪುಂಖಾನು ಪುಂಖವಾಗಿ ಬರುವ ಪ್ರಶ್ನೆಗಳಿಂದ, ಹಿಂಜರಿಯುತ್ತ ಪೇಷೆಂಟ್‌ಗಳು ಕೇಳುವ ಅರ್ಥಂಬರ್ಥ ಪ್ರಶ್ನೆಗಳಿಂದ ಇದು ತಿಳಿಯುತ್ತದೆ. ಲೈಂಗಿಕತೆ ಕುರಿತ ತಿಳುವಳಿಕೆ ನೀಡಲು ತಾಯ್ತಂದೆಯರು ಹಾಗೂ ಶಿಕ್ಷಕರು ಎಲ್ಲ ಬಾಗಿಲು ಬಂದ್ ಮಾಡಿ ಕೂರುವುದರಿಂದ ಆ ಕುರಿತ ಜ್ಞಾನವೆಲ್ಲ ಅವರಿವರು ಆಡುವ ಮಾತಿನ ತುಣುಕುಗಳಿಂದಲೋ ಅಥವಾ ಗುಟ್ಟಾಗಿ ಸ್ನೇಹಿತರು ಹಂಚಿಕೊಳ್ಳುವ ಮಾಹಿತಿಯಲ್ಲೋ, ಪತ್ರಿಕೆ ಸಿನಿಮಾಗಳ ತುಣುಕು ದೃಶ್ಯಗಳಲ್ಲೋ ಹರಿದು ಬರಬೇಕು. ಅಪಾರ ಕುತೂಹಲದ ಮನಸ್ಸುಗಳಿಗೆ ಆ ಮಾಹಿತಿ ಅಪೂರ್ಣವೆನಿಸಿ ಅದು ಹುಟ್ಟುಹಾಕುವ ಅಜ್ಞಾನದಲ್ಲಿ ಏನೇನೋ ಅಪಾಯಗಳು ಕೆಲವೊಮ್ಮೆ ಸಂಭವಿಸುತ್ತವೆ. ಅಂಥವರನ್ನು ಸೆಳೆಯುವುದು ಇಂಥ ಜಾಹೀರಾತುಗಳು. ದೈಹಿಕ ಅಂಗಾಂಗಗಳ ಸಹಜ ರೂಪ ಹಾಗೂ ಕಾರ್ಯದ ಬಗ್ಗೆ ತಿಳುವಳಿಕೆ ಇಲ್ಲದಿರುವಾಗ ಅಲ್ಪಸ್ವಲ್ಪ ಏರುಪೇರನ್ನೇ ಏನೋ ಸಮಸ್ಯೆಯೆಂದು ಭಾವಿಸುತ್ತಾರೆ.

ಪುರುಷರ ಲೈಂಗಿಕ ಅಂಗದ ಅಳತೆಗೂ ಅವರು ಹೊಂದುವ ತೃಪ್ತಿಗೂ ಯಾವುದೇ ಸಂಬಂಧವಿಲ್ಲ, ಅದು ಮಾನಸಿಕವಾಗಿ ಆತನಿಗೆ ಹೆಮ್ಮೆ ನೀಡಬಹುದಷ್ಟೆ. ಮೇಲ್ಕಾಣಿಸಿದ ಜಾಹೀರಾತು ಹೀಗೆ ಹೇಳುವ ಬದಲಾಗಿ ಯಾರ ಅಂಗ ಎಷ್ಟು ಉದ್ದಗಲವಿದೆಯೋ ಅದು ಸಂಬಂಧವೇ ಇಲ್ಲದೆ ತಾವು ಕೊಡುವ ಔಷಧಿ ಸೇವಿಸಿದಲ್ಲಿ ಗಾತ್ರದಲ್ಲಿ ಮೂರ್ನಾಲ್ಕು ಇಂಚು ಹೆಚ್ಚುವುದು ಎಂದರೆ !

ಇದರಲ್ಲಿ ವೈದ್ಯಲೋಕದ ಪಾಲೂ ಇದೆ. ಖಾಯಂ ದೈಹಿಕ ಏರುಪೇರಿನಿಂದಾಗುವ ಕಾಯಿಲೆಗಳಿಗೆ ಔಷಧಿಯನ್ನೂ ಖಾಯಂ ಆಗಿಯೇ ತೆಗೆದುಕೊಳ್ಳಬೇಕು. ಒಂದೇ ರೀತಿಯ ಔಷಧಿಯನ್ನು ವರ್ಷಾನುಗಟ್ಟಲೆ ತೆಗೆದುಕೊಂಡು ಬೇಸತ್ತ ರೋಗಿ ಪರ್ಯಾಯ ವಿಧಾನಗಳತ್ತ ದೃಷ್ಟಿ ಹರಿಸುವುದು, ಅವು ಆಕರ್ಷಕವಾಗಿ ಕಾಣಿಸುವುದು ಸಹಜ. ಹೀಗಾಗಿ ಕ್ಯಾನ್ಸರ್, ಅಸ್ತಮಾ, ಮೂಲವ್ಯಾಧಿ, ಚರ್ಮವ್ಯಾಧಿಗಳಂತಹ ಕಾಯಿಲೆಗಳನ್ನು ತಾವು ಖಂಡಿತವಾಗಿ ಗುಣಪಡಿಸಿಕೊಡುತ್ತೇವೆಂದು ಹೇಳುವ ಜಾಹೀರಾತುಗಳು ಎಲ್ಲೆಲ್ಲೂ ಕಾಣಸಿಗುತ್ತವೆ. ಅಂಥ 'ತಜ್ಞ'ರಾದರೋ ತಿಂಗಳಿಡೀ ಕರ್ನಾಟಕ ರಾಜ್ಯಾದ್ಯಂತ ಸಂಚರಿಸುತ್ತಾರೆ ! ತಿಂಗಳ ಯಾವ್ಯಾವ ತಾರೀಖು ಎಲ್ಲೆಲ್ಲಿ ಮೊಕ್ಕಾಂ ಎಂಬ ವೇಳಾಪಟ್ಟಿಯೇ ಪ್ರಕಟಗೊಳ್ಳುತ್ತದೆ !!

ಆದರೆ ಈ ಯಾವ ವಿಧಾನವು ಎಮರ್ಜೆನ್ಸಿ ಉಂಟಾದಾಗ ಚಿಕಿತ್ಸೆ ನೀಡಲು ವಿಫಲವಾಗುವುದೋ ಅದೊಂದನ್ನೇ ನೆಚ್ಚಿಕೊಳ್ಳಲು ಜನ ಹೆದರುತ್ತಾರೆ. ಹೀಗಾಗಿ ಕೆಲವರ ದೇಹ ಎಲ್ಲ ಪದ್ಧತಿಯ ಔಷಧಿಗಳ, ಮನೆ ಮದ್ದುಗಳ, ಉಚಿತ ಸಲಹೆಗಳ ಪ್ರಯೋಗಶಾಲೆಯಾಗಿರುತ್ತದೆ.

ಬಹಳಷ್ಟು ವೈದ್ಯರ - ಅಲೋಪತಿ ವೈದ್ಯರು ಹೆಚ್ಚಿರುವುದರಿಂದ ಅವರು ಕೂಡಲೇ ಕಾಣುತ್ತಾರೆ ಅಷ್ಟೇ - ದೊಡ್ಡ ಲೋಪವೆಂದರೆ ಅವಶ್ಯವಿರುವುದಕ್ಕಿಂತ ಕಡಿಮೆ ಮಾಹಿತಿ ನೀಡುವುದು ಮತ್ತು ಅವಶ್ಯವಿರುವುದಕ್ಕಿಂತ ಹೆಚ್ಚು ಔಷಧಿ ನೀಡುವುದು. ಸಮಯದ ಒತ್ತಡ, ಔಷಧಿ ಕಂಪನಿಗಳು ಸೃಷ್ಟಿಸುವ ಒತ್ತಡ, ರೋಗಿಗಳ ಮನೋಸ್ಥಿತಿ, ವೈದ್ಯರ ಬೇಜವಾಬ್ದಾರಿತನ - ಹೀಗೆ ಹಲವು ಕಾರಣಗಳು ಈ ಲೋಪದ ಹಿಂದಿವೆ. ಆದರೂ ವೈದ್ಯರೊಮ್ಮೆ ಎದೆ ಮುಟ್ಟಿ ನೋಡಿಕೊಂಡಲ್ಲಿ ಸರಿತಪ್ಪುಗಳು ದೀರ್ಘಾವಧಿ ಸತ್ಯಗಳು ಯಾವುವೆಂದು ತಂತಾನೇ ಹೊಳೆಯುತ್ತದೆ.





✶ ✶ ✶

ಹಾಗಾದರೆ ಅಂಗಾಂಗಗಳ ಗಾತ್ರಗಳು ವ್ಯಕ್ತಿಯ ಔನ್ನತ್ಯ ನಿರ್ಧರಿಸುವುವಲ್ಲವೆಂಬ ಸತ್ಯವನ್ನು ಜನರಿಗೆ ಮನದಟ್ಟು ಮಾಡಬೇಕಾದವರು ಯಾರು ? ನಿಮ್ಮ ಬಾಹ್ಯ ಸೌಂದರ್ಯ ಆರೋಗ್ಯವನ್ನು ಬಿಂಬಿಸುವುದಿಲ್ಲವೆಂದು ಹೇಳಬೇಕಾದವರು ಯಾರು ? ಹೆಣ್ಣುಮಕ್ಕಳ ವಸ್ತ್ರಸಂಹಿತೆ, ಓಡಾಟ, ನಡವಳಿಕೆ ಬಗ್ಗೆ ಮಾತನಾಡುವ ನೈತಿಕ ಪೊಲೀಸರಾಗಲೀ, ಬೆಳಗ್ಗೆ ಬೆಳಗ್ಗೆಯೇ ನೀತಿಬೋಧನೆಗೆ ಶುರುವಿಟ್ಟುಕೊಳ್ಳುವ ಗುರುಗಳಾಗಲೀ ಈ ವಿಷಯಗಳ ಬಗೆಗೆ ಏಕೆ ಸುಮ್ಮನಿದ್ದಾರೆ ?

ಅಮಾಯಕರು ಇಂಥ ಸುಳ್ಳುಜಾಲದಿಂದ ಮೋಸ ಹೋಗುವುದನ್ನು ತಡೆಯಲು ಒಂದೇ ಮದ್ದು: ಸರಿಯಾದ ತಿಳುವಳಿಕೆಯನ್ನು ಹೊಂದುವುದು ಮತ್ತು ಹರಡುವುದು. ಅದಕ್ಕೆ ಪೂರಕವಾಗಿ ಮಾಧ್ಯಮಗಳು ಬದ್ಧತೆಯನ್ನು ಪ್ರದರ್ಶಿಸಬೇಕು. ಈಗಂತೂ ಪ್ರತಿ ಟಿವಿ ಚಾನೆಲ್ ಮತ್ತು ದಿನಪತ್ರಿಕೆಯೂ ಬಂಡವಾಳಶಾಹಿ ಕುಟುಂಬಗಳ ಒಡೆತನದಲ್ಲಿವೆ. ಅವರಿಗೆ ಲಾಭನಷ್ಟವಲ್ಲದೇ ಬೇರಾವುದೂ ಮುಖ್ಯವಲ್ಲ. ಪತ್ರಿಕೆಗಳೂ ಮಾರುವ ದಲ್ಲಾಳಿಗಳಾಗಿ ವರ್ತಿಸುತ್ತವೆ. ಟೆಲಿಶಾಪಿಂಗ್ ನೆಟ್‌ವರ್ಕ್ ಎಂಬ ಕೊಳ್ಳುವಿಕೆಯನ್ನು ಪ್ರೋತ್ಸಾಹಿಸಿ ಹಸಿ ಸುಳ್ಳುಗಳನ್ನು ನಿರ್ಲಜ್ಜವಾಗಿ ಪ್ರಸಾರ ಮಾಡುವ ಚಾನೆಲ್ ಇದೆ. ಇಲ್ಲೆಲ್ಲ ಮಾಧ್ಯಮ ವ್ಯಾಪಾರಿ ಹಿತಾಸಕ್ತಿಯ ಏಜೆಂಟ್ ಆಗಿ ಕೆಲಸ ಮಾಡುತ್ತದೆ. ಟಿವಿ, ಪೇಪರಿನಲ್ಲಿ ನಿತ್ಯವೂ ಬೆಲೆ ತೆತ್ತು ಜಾಹೀರಾತು ನೀಡುವವರಾದರೆ ಅವರ ಲಾಭ ಎಷ್ಟಿರಬಹುದು ? ವಸ್ತುವಿನ ಮೂಲ ಬೆಲೆ ಎಷ್ಟಿರಬಹುದು ? ಜಾಹೀರಾತಿಗೆ ಕೊಡುವ ಹಣವನ್ನು ಜನರಿಂದಲೇ ತಾನೇ ಅವರು ವಸೂಲಿ ಮಾಡುವುದು ? ಎಂದರೆ ಮಾಧ್ಯಮಗಳು ಜನರನ್ನು ವಂಚಿಸಿದ ಹಣದಿಂದ ಜನರ ವಂಚನೆಗಾಗಿಯೇ ನಡೆಯುತ್ತಿರುವ ಹಾಗಾಯಿತು. ಇದು ಯಾವ ಪುರುಷಾರ್ಥಕ್ಕಾಗಿ ?

ಮಾರುಕಟ್ಟೆ ಒತ್ತಡಗಳೇನೇ ಇರಲಿ, ವ್ಯಾಪಾರದ ಹಿತಾಸಕ್ತಿ ಎಷ್ಟೇ ಮುಖ್ಯವಾಗಲಿ, ಓದುಗರ-ನೋಡುಗರ ಹಿತದೃಷ್ಟಿ ಗಮನದಲ್ಲಿಟ್ಟುಕೊಳ್ಳದಿದ್ದಲ್ಲಿ ಅವು ಜನವಿರೋಧಿಯೇ ಸರಿ. ವಾರಕ್ಕೊಮ್ಮೆ ಆರೋಗ್ಯ ಕುರಿತ ಮಾಹಿತಿಯಿರುವ ಹಾಗೂ ಓದುಗರ ಪ್ರಶ್ನೆಗಳಿಗೆ ತಜ್ಞ ವೈದ್ಯರು ಉತ್ತರಿಸುವಂತಹ ಸಪ್ಲಿಮೆಂಟುಗಳನ್ನು ತಂದು; ಪ್ರತಿನಿತ್ಯ ಹಣಕ್ಕಾಗಿ ಇಂಥ ಸುಳ್ಳು ಜಾಹೀರಾತು ಪ್ರಕಟಿಸುವುದೆಂದರೆ ಒಮ್ಮೆಲೇ ತೊಟ್ಟಿಲನ್ನೂ ತೂಗುತ್ತ, ಮಗುವನ್ನೂ ಚಿವುಟುತ್ತ ಇದ್ದಂತೆ. ಸುಳ್ಳು ಆಕರ್ಷಕ. ಅಂಥ ಹತ್ತಾರು ಸುಳ್ಳು ಹೇಳಿ ಹಾದಿ ತಪ್ಪಿಸುವವರು ನೂರು ಜನ. ಅಂಥವರ ನಡುವೆ ಸತ್ಯ ಬಹು ಕಟುವಾಗಿ, ಅನಾಕರ್ಷಕವಾಗಿ ಕಾಣಬಹುದು. ಆದರೂ ಜನರ ಹಿತದೃಷ್ಟಿಯಿಂದ ಪತ್ರಿಕೆಗಳು ಅಂಥ ಸುದ್ದಿ, ಜ್ಯೋತಿಷ್ಯ, ಚಿಕಿತ್ಸೆ ಜಾಹೀರಾತುಗಳನ್ನು ಕೈ ಬಿಟ್ಟು ಆರೋಗ್ಯವಂತ ಸಮಾಜ ನಿರ್ಮಾಣವನ್ನು ಗುರಿಯಾಗಿಸಿಕೊಳ್ಳಬೇಕಿದೆ.


**ಡಾ|| ಎಚ್. ಎಸ್. ಅನುಪಮಾ**
ಜಲಜಾ ಜನರಲ್ ಮತ್ತು ಹೆರಿಗೆ ಆಸ್ಪತ್ರೆ, ಕಾವಲಕ್ಕಿ ಅಂಚೆ, ಹೊನ್ನಾವರ ತಾಲ್ಲೂಕು
ಉತ್ತರ ಕನ್ನಡ ಜಿಲ್ಲೆ, ಪಿನ್ - ೫೮೧ ೩೪೧



# ಹೊನ್ನಹೊಳು

**ಸಾ**ವಿತ್ರಿ ಮನೆಗೆ ಬಂದಾಗ ರಾತ್ರಿ ೮.೩೦. ವಿಪರೀತ ಹಸಿವಾಗಿತ್ತು. ಬಂದವಳೆ ಅಡುಗೆಮನೆಗೆ ಹೋಗಿ ಹಿಂದಿನ ದಿನದ ಸಾರನ್ನು ತೆಗೆದು ಮೂಸಿದಳು. ಸ್ವಲ್ಪವೂ ಕೆಟ್ಟಿರಲಿಲ್ಲ. ಕೈ-ಕಾಲು ಮುಖ ತೊಳೆದುಕೊಂಡು ಮುದ್ದೆ ಮಾಡಿ ಉಣ್ಣಲು ಕೂತಳು.

ಫೋನು ರಿಂಗಾಯಿತು. ಕೆ.ಜಿ.ಎಫ್.ನಿಂದ ಲಕ್ಷ್ಮಿ ಮಾಡಿದ್ದಳು. ''ಎರಡು ನಿಮಿಷ ಬಿಟ್ಟು ಮಾಡ್ತಿಯಾ ಲಕ್ಷ್ಮಿ, ಸಕತ್ ಹಶ್ವಾಗಿದೆ ಉಣ್ತಾ ಇದೀನಿ'' ಎಂದಳು. ''ಅಕ್ಕ, ಇವತ್ತು ಮಧ್ಯಾಹ್ನ ಮೂರ ಜನ ಪಿಟ್ ಕ್ಲೀನ್ ಮಾಡೋಕೋದೋರು ಅದರೊಳಗೆ ಬಿದ್ದು ಸತ್ತೋಗವ್ರೆ. ಸರಿಯಾಗಿರೊ ಪರಿಹಾರ ಕೊಡೋವರ್ಗೂ ಎಣ ಎತ್ತೋಕೆ ಬಿಡಲ್ಲ ಅಂತ ಕೂತಿದ್ದಕ್ಕೆ ಲಾಟಿಚಾರ್ಜ್ ಮಾಡಿ ಪೋಸ್ಟ್‌ಮಾರ್ಟಂಗೆ ಎಣ ತಗೊಂಡೋದ್ರು. ಬೆಳಿಗ್ಗೆನೇ ಬಂದ್ಬಿಡಕ್ಕ ಕಾಯ್ತಿರ್ತೀವಿ'' ಎಂದವಳೇ ಫೋನ್ ಕಟ್ ಮಾಡಿದಳು. ತಟಕ್ಕನೆ ಹಸಿವೆಯೆ ಕಟ್ಟಾದಂತಾಯಿತು ಸಾವಿತ್ರಿಗೆ. ತಟ್ಟೆ ತೆಗೆದಿಟ್ಟು ಬಿದ್ದುಕೊಂಡಳು. ಕಕ್ಕಸ್ಸು ಗುಂಡಿ ಸ್ವಚ್ಛ ಮಾಡುವಾಗ ಮೃತಪಡುವ ಕಾರ್ಮಿಕರ ಪರಿಸ್ಥಿತಿಯನ್ನು ಅರಿಯಲು ರಚಿಸಿದ ಸಮಿತಿಯ ಸದಸ್ಯೆಯಾಗಿದ್ದ ಸಾವಿತ್ರಿ ಇಂಥ ಘಟನೆಗಳ ಕುರಿತು ವರದಿ ಮಾಡಬೇಕಿತ್ತು. ಮಲ ಬಾಚುವವರು ತೆರೆದಿಟ್ಟ ಮನುಕುಲದ ಹೇಸಿಗೆಯ ಲೋಕವನ್ನು ಅರಗಿಸಿಕೊಳ್ಳಲು ಅವಳು ಸಾಹಸ ಮಾಡುತ್ತಿದ್ದಳು.

ಬೆಳಿಗ್ಗೆ ಕೆ.ಜಿ.ಎಫ್.ಗೆ ಹೋಗಿ ಸ್ನೇಹಿತರೊಂದಿಗೆ ಪೊಲೀಸ್ ಸ್ಟೇಶನ್‌ಗೆ, ಸರ್ಕಾರಿ ಆಸ್ಪತ್ರೆಗೆ, ಕಕ್ಕಸ್ಸು ಗುಂಡಿಯಿದ್ದ ಮನೆಗೆ ಹೋಗಿ ಸೂಕ್ತ ಮಾಹಿತಿ/ದಾಖಲೆಗಳನ್ನೆಲ್ಲ ಸಂಗ್ರಹಿಸಿಕೊಂಡು ಕಾರ್ಮಿಕರು ವಾಸಮಾಡುತ್ತಿದ್ದ ಕಾಲೋನಿಯಲ್ಲಿ ಇರಿಸಿದ್ದ ಶವಗಳನ್ನು ನೋಡಲು ಹೋದಳು. ಸತ್ತವರ ಜೊತೆಯಲ್ಲಿ ಕೆಲಸಕ್ಕೆ ಹೋಗಿದ್ದ ಪ್ರಭುವಿನಿಂದಲೂ ವಿವರ ಪಡೆದುಕೊಂಡಳು. ಸತ್ತವರಲ್ಲಿ ಒಬ್ಬ ಪ್ರಭುವಿಗೆ ಚಿಕ್ಕಪ್ಪನಾಗಿದ್ದ. ಕಕ್ಕಸ್ಸು ಗುಂಡಿಯಲ್ಲಿ ಬಿದ್ದು ಸತ್ತವರನ್ನು ನೋಡುವುದೆಂದರೆ ವಿಪರೀತ ಸಂಕಟವಾಗುತ್ತಿತ್ತು ಸಾವಿತ್ರಿಗೆ. ಈಗಲೂ ಕಷ್ಟಪಟ್ಟು ಹೋಗಿ ಹೆಣ ನೋಡಿದಳು.

ಒಬ್ಬ ನಾಗೇಂದ್ರ ಬಾಬು, ವಯಸ್ಸು ೨೬. ಮಗು ಹುಟ್ಟಿ ಎರಡೇ ವಾರವಾಗಿದ್ದ ಅವನ ಹೆಂಡತಿ ಶೈಲಾ ಶವದ ಪೆಟ್ಟಿಗೆಯ ಮೇಲೆ ತಲೆ ಇರಿಸಿಕೊಂಡು ಮೌನವಾಗಿ ಅಳುತ್ತಿದ್ದಳು. ಅವಳ ತಂದೆ ದಿಕ್ಕೆಟ್ಟು ಹುಚ್ಚನಂತಾಗಿದ್ದ. ತನ್ನ ಐಡೆಂಟಿಟಿ ಕಾರ್ಡ್ ತೆಗೆದು ತೋರಿಸಿ ''ಟೊಂಟಿಫೈ ಇಯರ್ ಸರ್ವೀಸ್, ಒಬ್ಬಳೇ ಮಗಳು, ಆಪ್ರೇಶನ್ ಆಗಿ ಮಗು ತೆಗೆದ್ರು, ನನ್ನ ಮಗಳ ಬದುಕು ಫಿನಿಶ್, ಏನ್ ಮಾಡ್ತೀರಿ?'' ಉಗ್ಗುತ್ತ ನೆಟ್ಟ ನೋಟದಿಂದ ಸಾವಿತ್ರಿಯನ್ನು ನೋಡುತ್ತ ಕೇಳಿದ.

ಮತ್ತೊಬ್ಬ ರವಿ, ವಯಸ್ಸು ೨೭ ವರ್ಷ, ಮದುವೆಯಾಗಿ ಕೇವಲ ಮೂರು ತಿಂಗಳಾಗಿತ್ತು. ಅವನ ಹೆಂಡತಿ ರೂತ್ ದಿಕ್ಕೆಟ್ಟವಳಂತೆ ಕುಳಿತಿದ್ದಳು. ರವಿಯ ತಾಯಿ ಸುಶೀಲಮ್ಮ ಮದುವೆ ಅಲ್ಬಂ ತೋರಿಸಿಕೊಂಡು, ''ದೊಡ್‌ಮಗ ಅಂತ ಎಷ್ಟು ಚೆನ್ನಾಗಿ ಮದ್ವೆ ಮಾಡಿದ್ನಮ್ಮ, ಎಲ್ಲಾರ್ಗೂ ಒಟ್ಟೆ ತುಂಬ ಉಣ್ಣೋವಷ್ಟು ಬಿರ್ಯಾನಿ, ಪಾಯ್ಸ ಮಾಡ್ಸಿ ಆಕ್ಸಿದ್ನಮ್ಮ'' ಎಂದು ರೋದಿಸುತ್ತಿದ್ದಳು.

ಮೂರನೆಯವನು ಕುಟ್ಟಿ ಪ್ರಸಾದ್, ವಯಸ್ಸು ೩೫ ವರ್ಷ, ಅವನ ಹೆಂಡತಿ ಶಾಂತಿ. ಅವರಿಗೆ ಇಬ್ಬರು ಪುಟ್ಟ ಗಂಡು ಮಕ್ಕಳು. ''ಇವತ್ತು ಕಾಸು ಸಿಗುತ್ತೆ, ಬರೋವಾಗ ಪಟಾಕಿ ತರ್ತೀನಿ ಮಕ್ಳಿಗೆ'' ಅಂತ ಹೇಳಿ ಹೋಗಿದ್ದನಮ್ಮ ಎಂದು ಶಾಂತಿ ಅಳುತ್ತಿದ್ದಳು.

ಹೆಣಗಳ ಮೂಗು-ಬಾಯಿಗಳಿಂದ ರಕ್ತ ಜಿನುಗತೊಡಗಿತ್ತು. ಮುಖಗಳು ಶಾಂತವಾಗಿ ನೆಮ್ಮದಿಯಿಂದ ನಿದ್ರಿಸುವಂತಿತ್ತು. ಸಣ್ಣಗೆ ಮಳೆ ಹನಿಯತೊಡಗಿತು. ಹೆಚ್ಚು ಹೊತ್ತು ನಿಲ್ಲಲಾಗದೆ ಅಲ್ಲೇ ಇದ್ದ ಮಾರಿಯಮ್ಮ ದೇವಸ್ಥಾನದ ಬಳಿ ಇದ್ದ ಕಲ್ಲೊಂದರ ಮೇಲೆ ಕುಕ್ಕರಿಸಿದಳು.

*ಕೊಳೆತು ನಾರುತ್ತಿದ್ದ ಮೋರಿ,*
*ಕಸದ ಕುಪ್ಪೆಗಳು, ಕೊಚ್ಚೆ ಗುಂಡಿಗಳು*
*ಮಳೆ ಬಿದ್ದಿದ್ದರಿಂದ ಅಡರಿಕೊಂಡಿದ್ದ ಕಸ*
*ಕಕ್ಕಸ್ಸಿನ ದುರ್ನಾತ*
*ತಗಡು, ಶೀಟು, ಹೆಂಚಿನ*
*ಕಿತ್ತೋದ ಮನೆಗಳಿಗೆಲ್ಲ*
*ಹೊಡೆ ಹೊಡೆದು ಅನುರಣಿಸುತ್ತಿದ್ದ*
*ಹೆಣಗಳ ಮುಂದಿನ ರೋದನ*

''ಪೌರ ಕಾರ್ಮಿಕರ ಪ್ರಾಣಕ್ಕೆ ಮೂರು ಕಾಸಿನ ಬೆಲೆಯೂ ಇಲ್ಲ. ಸತ್ತೋಗಿರೋರನ್ನ ನಂಬಿಕೊಂಡಿರೋರು ಬೀದಿ ಪಾಲಾಗಬೇಕಾ? ನ್ಯಾಯ ಕೇಳೋಕೆ ಹೋದವರ ಮೇಲೆ ಲಾಠೀ ಛಾರ್ಜ್ ಮಾಡಿದಾರೆ. ಹೆಣ ಇಟ್ಕೊಂಡು ಪ್ರತಿಭಟನೆ ಮಾಡ್ಲೇಬೇಕು ... ...''

''... ... ಹತ್ತು ಲಕ್ಷ ಕೊಡ್ಬೇಕು. ಇರೋ ಮನೇನ ಅವರ ಹೆಂಡತಿ ಮಕ್ಕಳಿಗೆ ಮಾಡಿಕೊಡ್ಲೇ ಬೇಕು. ಅಲ್ಲಿವರೆಗೂ ಹೆಣ ಎತ್ತಲೇಬಾರದು ... ...''

''... ... ಕುಟುಂಬದಲ್ಲಿ ಒಬ್ಬರಿಗೆ ಕೆಲ್ಸ ಕೊಡಲೇ ಬೇಕು. ಹಾಗಂತ ಡಿ.ಸಿ. ಬಂದು ಆಶ್ವಾಸನೆ ಕೊಡೊವರೆಗೂ ಹೆಣ ಎತ್ತೋದು ಬೇಡ ... ...''

''... ... ಈ ನಾಡಿನ ಕಾನೂನಿನ ಪ್ರಕಾರ

• ದು. ಸರಸ್ವತಿ

ಕೊಡಬೇಕಾದ ಪರಿಹಾರ. ಕೊಟ್ಟೇ ಕೊಡ್ತೀವಿ ಅಂತ ಪಬ್ಲಿಕ್ಕಲ್ಲಿ ಭರವಸೆ ಕೊಡೋಗಂಟ ಹೆಣ ತಗ್ಯಂಗಿಲ್ಲ. ಏನ್ ಬರುತ್ತೋ ನೋಡೇ ಬುಡನಾ ? … …''

''… … ಡಿ.ಸಿ. ಬರೋವರೆಗೂ, ಸರ್ಕಲ್‌ನಲ್ಲಿ ಹೆಣ ಇಟ್ಕೊಂಡು ರಸ್ತೆ ಬ್ಲಾಕ್ ಮಾಡೋಣ. … …''

ಡಿ.ಸಿ. ಬರುವವರೆಗೂ ಜನರ ಕಾವು ಉಳಿಸಲು ವಿವಿಧ ಸಂಘಟನೆಗಳ ನಾಯಕರುಗಳು ಒಬ್ಬರಾದ ನಂತರ ಒಬ್ಬರು ಭಾಷಣ ಮಾಡುತ್ತಲೇ ಇದ್ದರು. ಭಾಷಣಗಳೊಂದಿಗೆ ಚರ್ಚೆಗಳೂ ನಡೆದಿದ್ದವು … …

''ಈಗಾಗಲೆ ತುಂಬ ತಡವಾಗಿದೆ, ಮೂಗು ಬಾಯಿಂದೆಲ್ಲ ಈಚೆ ಬರ್ತಿದೆ. ಮಣ್ಣು ಮಾಡೋದು ಒಳ್ಳೇದು. ಆ ಮೂಲಕ ಅವರ ಹೆಣಗಳಿಗಾದರೂ ಗೌರವ ತೋರೋಣ … …''

''ಹೆಣ ಎತ್ತಿಬಿಟ್ಟರೆ ಪ್ರತಿಭಟನೆ ತಣ್ಣಗಾಗಿ, ಕೊಟ್ಟಿರುವುದು ಸಾಕೆಂದು ಸುಮ್ಮನಾಗುತ್ತಾರೆ. ಹೆಚ್ಚಿನ ಪರಿಹಾರಕ್ಕಾಗಿ ಇದು ಅನಿವಾರ್ಯ. ಬೇರೆ ದಾರಿ ಇಲ್ಲ … …''

''ನಾವು ಹೊರಗಿನಿಂದ ಬಂದವರು ಕೂರೋಣ ಅವರ ಪರವಾಗಿ … … ಮನೆಯವರೆಲ್ಲ… … ಅದೂ ಆ ಬಾಣಂತಿಯೂ ಹಸಿದುಕೊಂಡಿದ್ದಾರೆ … …''

''… … ನಾವಿರುವುದು ಕೆಲವೇ ಜನ. ಸುಲಭವಾಗಿ ಹಿಡಿದು ಅರೆಸ್ಟ್ ಮಾಡುತ್ತಾರೆ … …''

''… … ಹೆಣಗಳನ್ನು ಇಟ್ಟುಕೊಂಡರೆ ಮಾತ್ರ ಜನರ ಗುಂಪನ್ನು ಉಳಿಸಿಕೊಂಡು ಒತ್ತಡ ಹಾಕೋಕೆ ಸಾಧ್ಯ … …''

ಕೊಟ್ಟಿರುವ ಎರಡು ಲಕ್ಷ ಹತ್ತು ಸಾವಿರಕ್ಕಿಂತ ಹೆಚ್ಚಿನ ಪರಿಹಾರ ಕೊಡಿಸಬೇಕೆಂದು ಮುಖಂಡರುಗಳು ಹೆಣಗಾಡುತ್ತಿದ್ದರು.

ಇಂತಿಪ್ಪ ಸನ್ನಿವೇಶದಲ್ಲಿ ಪರಿಸ್ಥಿತಿಯ ಪರಿವೆಯೇ ಇಲ್ಲದಂತೆ ಅಥವಾ ಪರಿಸ್ಥಿತಿಯನ್ನು ಮೀರಿಕೊಳ್ಳಲೋ ಎಂಬಂತೆ ಹುಡುಗರ ದಂಡೊಂದು ತಮಟೆ ಹೊಡೆದುಕೊಂಡು ಕುಣಿಯುತ್ತಿತ್ತು. ಅದಾವುದೋ ಒಂದು ಧನ್ಯತೆಯ ಆನಂದದಲ್ಲಿ ಅವರ ಮುಖಗಳು ತಲ್ಲೀನವಾಗಿದ್ದವು. ಹೀಗೆ ತಲ್ಲೀನರಾಗಿದ್ದ ಹುಡುಗರು ಹೆಣ ನೋಡಲು ಹಾರದೊಂದಿಗೆ ಯಾರಾದರೂ ಬರುವುದು ಕಂಡರೆ ಚಕ್ಕನೆ ಈ ಲೋಕಕ್ಕೆ ಬರುತ್ತಿದ್ದರು. ಬಂದವರೊಂದಿಗೆ ಹಾರವನ್ನು ಹಿಡಿದುಕೊಂಡು ಬೀದಿಯನ್ನು ಒಂದು ಸುತ್ತು ಸುತ್ತಿಸಿ ಕರೆತಂದು ನಂತರ ಶವಪೆಟ್ಟಿಗೆಯ ಮೇಲೆ ಇರಿಸುತ್ತಿದ್ದರು. ಪುನಃ ತಮ್ಮದೇ ಲೋಕಕ್ಕೆ ಜಾರಿ ಮೈ ಮರೆತು ತಮಟೆ ಹೊಡೆದುಕೊಂಡು ಕುಣಿಯುತ್ತಿದ್ದರು.

ಹೀಗಿರುವಾಗ, ಕಾರೊಂದು ಭರ್ರನೆ ಬಂದು ನಿಂತಿತು. ಡಿ.ಸಿ.ಯೇ ಇರಬೇಕೆಂದುಕೊಂಡ ಜನ ಹೋ ಎಂದು ಕೂಗಿದರು. ಬಂದವರು ಡಿ.ಸಿ. ಅಲ್ಲ, ಎ.ಸಿ. ಅವರು ತಮ್ಮೊಟ್ಟಿಗೆ ಕರೆತಂದಿದ್ದ ಲೋಕಲ್ ಪುಢಾರಿಯೇ ಮುಂದಾಗಿ, 'ಯಾವೋನೋ ಅವ್ನು, ಎಣ ಎತ್ತಲ್ಲ, ಐದ್ ಲಕ್ಷ ಕೊಡೋಗಂಟ ಅಂತಿರೋನು ? ಎ.ಸಿ. ಸಾಹೇಬ್ರು ತಂದಿರೋ ಒಂದ್ ಲಕ್ಷ ತಗಂಡು ಮರ್ಯಾದೆ ಆಗಿ ಎಣ ಎತ್ತಾ ಇರ್ಬೇಕಷ್ಟೆ. ಒಹೋ, ನಮ್ಗೇನು ಪ್ರಾಬ್ಲಮ್ ಗೊತ್ತಿಲ್ವ, ನಾವೆಲ್ಲ ಇಲ್ಲಿರೋರು, ಬೆಂಗ್ಳೂರ‍್ದಲ್ಲ ಇಲ್ಲಿ ನಡ್ಯಲ್ಲ'' ಎಂದು ನಾಯಕನೊಬ್ಬನ ಕುತ್ತಿಗೆ ಹಿಡಿದು ನೂಕುತ್ತಿದ್ದಂತೆ ಜನರೆಲ್ಲ ಚೆಲ್ಲಾಪಿಲ್ಲಿಯಾಗಿ ಚದುರಿಹೋದರು.

ಪ್ರಭು ಮಾತ್ರ ಶಿಲೆಯಂತೆ ಕುಳಿತಿದ್ದ. 'ತಾನು ನೀಡಿದ ಕೈಯನ್ನು ಹಿಡಿದುಕೊಳ್ಳಲು ಮೇಲೆತ್ತಿದ್ದ ಚಿಕ್ಕಪ್ಪನ ಕೈ ನೋಡ ನೋಡುತ್ತಲೆ ಕಕ್ಕಸ್ಸು ಗುಂಡಿಯಲ್ಲಿ ಮರೆಯಾದ ಚಿತ್ರವೇ.' ಅವನ ಕಣ್ಣಿನಲ್ಲಿ ನಿಂತು ಬಿಟ್ಟಿತ್ತು. ಹೆಣ ಬಿದ್ದರಷ್ಟೆ ಕಾಲೋನಿಯಲ್ಲಿ ಲಕ್ಷ ರೂಪಾಯಿಯ ಮಾತುಗಳು ಕೇಳುತ್ತಿದ್ದುದು. ಒಳಗೆ ಹೆಪ್ಪುಗಟ್ಟಿದ್ದನ್ನು ಪ್ರಭು ಕ್ಯಾಕರಿಸಿ ತುಪ್ಪಿದ. ಹಸಿವ ಹೊಟ್ಟೆಯನ್ನು ಸುಟ್ಟುಬಿಡಬೇಕೆನಿಸಿತು. ಮರೆಗೆ ಹೋಗಿ ಜೇಬಿನಲ್ಲಿದ್ದ ಬಾಟಲಿಯನ್ನು ತೆಗೆದು ಅದರೊಳಗಿದ್ದುದನ್ನು ಒಂದೇ ಸಲಕ್ಕೆ ಸುರಿದುಕೊಂಡ. ಸ್ವಲ್ಪ ಹೊತ್ತಿನಲ್ಲೆ ಪೂರ್ತಿ ಹಗುರಾಗಿ ತಮಟೆ ಹುಡುಗರೊಡನೆ ಕುಣಿಯತೊಡಗಿದ.

ಹೆಪ್ಪುಗಟ್ಟಿದ ದುಃಖದಂತಿದ್ದ ಪ್ರಭುವು ಒಂದೆರಡು ಗಳಿಗೆಯಲ್ಲೆ ಹಗುರಾಗಿ ಕುಣಿಯುವಂತೆ ಮಾಡಿದ ಸಾರಾಯಿಯ ಪವಾಡ ಕಂಡು ದಂಗಾಗಿಹೋದಳು ಸಾವಿತ್ರಿ. 'ಟೊಂಟಿಫೈ ಇಯರ್ ಸರ್ವೀಸ್' …

## ಪ್ರೊ|| ಎ. ಎಸ್. ಹಿಪ್ಪರಗಿ

ಪ್ರಗತಿಪರ ಚಿಂತಕರೂ, ನಿವೃತ್ತ ಪ್ರಾಧ್ಯಾಪಕರೂ ಆಗಿದ್ದ ಎ. ಎಸ್. ಹಿಪ್ಪರಗಿಯವರು ಕಳೆದ ತಿಂಗಳು ಹೃದಯಾಘಾತದಿಂದ ನಿಧನರಾಗಿದ್ದಾರೆ. ಪ್ರೌಢಶಾಲಾ ಶಿಕ್ಷಕರಾಗಿ ವೃತ್ತಿ ಆರಂಭಿಸಿದ ಅವರು ವಿಜಾಪೂರದ ಎಸ್. ಬಿ. ಕಲಾ ಮಹಾವಿದ್ಯಾಲಯದ ಕನ್ನಡ ಅಧ್ಯಾಪಕರಾಗಿ ಕೆಲಸ ಮಾಡಿದ್ದರು. ಕನ್ನಡ ವ್ಯಾಕರಣಶಾಸ್ತ್ರದಲ್ಲಿ ಅಪಾರ ಪಾಂಡಿತ್ಯ ಹೊಂದಿದ್ದ ಅವರು ಹಳೆಗನ್ನಡ, ಶಾಸನ, ಸಾಹಿತ್ಯದ ಮೇಲೆ ಪ್ರೌಢಿಮೆ ಪಡೆದ ಕೆಲವೇ ಕೆಲವರಲ್ಲಿ ಒಬ್ಬರಾಗಿದ್ದರು. ಸಾಮಾಜಿಕ ಕಾಳಜಿ, ಪ್ರಗತಿಪರ ಚಿಂತಕರಾಗಿದ್ದ ಪ್ರೊ|| ಎ. ಎಸ್. ಹಿಪ್ಪರಗಿಯವರು ೧೯೮೦ರಲ್ಲಿ ಬಂಡಾಯ ಸಾಹಿತ್ಯ ಸಂಘಟನೆಯ ೨ನೇ ಸಾಹಿತ್ಯ ಸಮ್ಮೇಳನವನ್ನು ವಿಜಾಪೂರ ನಗರದಲ್ಲಿ ನಡೆಸಿಕೊಟ್ಟರು. ತಮ್ಮ ವಿದ್ಯಾರ್ಥಿಗಳ ಬಗ್ಗೆ ಅಪಾರ ಪ್ರೀತಿ, ಕಾಳಜಿ ಹೊಂದಿದ್ದ ಅವರು ನೂರಾರು ಜನ ಪ್ರಗತಿಪರ, ಪ್ರತಿಭಾವಂತ ಶಿಷ್ಯರನ್ನು ಈ ನಾಡಿಗೆ ಕೊಟ್ಟಿದ್ದಾರೆ. ಒಬ್ಬ ಮಾದರಿ ಶಿಕ್ಷಕರಾಗಿ, ಮಾರ್ಗದರ್ಶಕರಾಗಿ ಬದುಕಿದ್ದ ಎ. ಎಸ್. ಹಿಪ್ಪರಗಿ ಅವರನ್ನು 'ಹೊಸತು' ಸ್ಮರಿಸುತ್ತದೆ.



... ಶೈಲಳ ಅಪ್ಪನ ಮಾತಿನ ಗುಂಗೆ ಹುಳುಗಳು ಕಿವಿ ಕೊರೆಯುತ್ತಿದ್ದವು. ಅಲ್ಬಂನ ಫೋಟೋದಲ್ಲಿ 'ಯೌವ್ವನದ ಗಮಲಿಗೆ ಪಿಟ್ಟಿನ ನಾತ ಅಂಟುವುದುಂಟೆ ?' ಎಂಬಂತೆ ವಧು-ವರರ ಪೋಷಾಕಿನಲ್ಲಿ ಕಿನ್ನರರಂತೆ ಕಂಗೊಳಿಸುತ್ತಿದ್ದ ರವಿ-ರೂತಳ ಫೋಟೋ ಕಣ್ಣೊಳಗೆ ಕಸದಂತೆ ಒತ್ತುತ್ತಿತ್ತು. ಕೀಟ, ಕಸವನ್ನು ಕಿತ್ತೆಸೆದು ಪ್ರಭುವಂತೆ ಹಗುರಾಗಬೇಕೆನಿಸಿತು ಸಾವಿತ್ರಿಗೆ.

ಕುಡಿಯದಿದ್ದರೆ ಒಳ್ಳೆ ಫೋಟೋ ತೆಗೆಯಲು ಸಾಧ್ಯವೇ ಇಲ್ಲವೆಂದು ಸದಾ ಕುಡಿದು ಚಿತ್ತಾಗಿರುತ್ತಿದ್ದ ಆನಂದನ ಬಳಿಗೆ ಸಾವಿತ್ರಿ ಹೋದಳು. ಅವಳನ್ನು ಕಂಡು ''ಅಕಾ, ಬೈಯ್ಬೇಡಕ್ಕ, ಇವತ್ತು ತಡ್ಕಳಕಾಯ್ತಾ ಇಲ್ಲ, ಸ್ವಲ್ಪ ಜಾಸ್ತೀ ಆಕಿದೀನಿ'' ಎಂದ. ''ಪರ್ವಾಗಿಲ್ಲ ಬಿಡು'' ಎಂದ ಸಾವಿತ್ರಿ, ಸದಾ ಅವನ ಬ್ಯಾಗಿನಲ್ಲಿರುತ್ತಿದ್ದ ಬಾಟ್ಲಿ ತೆಗೆದು ಬಾಯಿಗೆ ಸುರುಕೊಂಡಳು. ನಾಲಿಗೆ, ಗಂಟಲೊಳಗೆ ಬೆಂಕಿ ಹೊತ್ತಿಕೊಂಡಂತಾಯಿತು. ಕಾಲಕೋಟಿ ವಿಷದಂತೆನಿಸಿ ಉಗುಳಬೇಕೆನಿಸಿತು. ಕ್ಷಣಮಾತ್ರದಲ್ಲಿ ಹಗುರಾದ ಪ್ರಭುವನ್ನು ನೆನೆದು, ನುಂಗಿಕೊಂಡಳು. ಆಘಾತಗೊಂಡ ಆನಂದ, ''ಅಕೋ, ಬ್ಯಾಡಕ್ಕ, ನಿನ್ ಕಾಲಿಗ್ ಬೀಳ್ತೀನಿ, ಇವೆಲ್ಲ ನಿಂಗೆ ಸೆಟ್ಟಾಗಲ್ಲ, ನೀನು ಬುದ್ದನ ಕತೆ, ಅಂಬೇಡ್ಕರ್ ಕತೆ ಏಳ್ಕಂಡಿರು ಸಾಕು. ಅವುನ್ನ ಕೇಳೋವಾಗ ಸಾರಾಯಿ ಗೆಪ್ತಿನೆ ಬರಲ್ಲ, ಆದ್ರೆ ಆಕೋವಾಗ ಮಾತ್ರ ಬುಲ್ಡೆ ವಳ್ಗಿಂದ ಅದ್ರೆಸಿಲ್ದಂಗೆ ವಂಟೋತದೆ. ಯಾಕಂತ ಗೊತ್ತಾಗಕಿಲ್ಲ, ಕೊಡಕ್ಕ ಬಾಟ್ಲೀನ ನಿನ್ ಕೈ ಗಲೀಜ್ ಮಾಡ್ಕಬೇಡ್'' ಎಂದು. ಬಡಬಡಿಸುತ್ತಿದ್ದ. ಅಟ್ಟಿ ಹುಡುಗ ಆನಂದ ಬಲು ಜಾಣ. ಏಳನೇ ಕ್ಲಾಸು ಪಾಸಾಗಿರದಿದ್ದ ಅವನು ಕ್ಯಾಮೆರಾ, ಕಂಪ್ಯೂಟರಿನೊಂದಿಗೆ ಲೀಲಾಜಾಲವಾಗಿ ವ್ಯವಹರಿಸುತ್ತಿದ್ದ. ಸಾವಿತ್ರಿ ಮಾಡುವ ಕೆಲಸಗಳೊಂದಿಗೆ ಕೈ ಜೋಡಿಸುತ್ತಿದ್ದ ಅವನು ಎಷ್ಟೋ ವಿಷಯಗಳಲ್ಲಿ ಅವಳಿಗೆ ಗೈಡ್ ಆಗಿದ್ದ. ಒಂದು ತಾಯಿಯ ಹೊಟ್ಟೆಯಲ್ಲಿ ಹುಟ್ಟಿರದಿದ್ದರೂ ಅವಳಿಗವನು ಪ್ರೀತಿಯ ತಮ್ಮ; ಅವನಿಗೆ ಅವಳು ಬಲು ಗೌರವದ ಅಕ್ಕ.

ಆನಂದನನ್ನು ನೋಡಿ ಅಯ್ಯೋ ಎನಿಸಿತು ಸಾವಿತ್ರಿಗೆ. 'ತಡ್ಕಳಕ್ಕಾಗ್ದೆ ಕುಡ್ದೆ ಅಷ್ಟೆ, ಸುಮ್ನಿರೋ' ಎಂದಳು. 'ಆಯ್ತು ನೀನೀಗ ದೇವ್ರಂಗೆ, ದೇವಸ್ಥಾನ್ದ ಬಾಗ್ಲಾಗ್ಲೆ ಕುಂತ್ಕಂಡ್ ಬುಡು. ಮಣ್ಗೆ ವಂಟಾಗ ಮಸಾಣುಕ್ಕೆ ಬರ್ಬೇಡ. ಸುಮ್ನೆ ರೈಟೇಳು ಬೆಂಗ್ಲೂರ್ಗೆ' ಅಂದ. ಆಯಿತೆಂದು ಹೇಳಿ ದೇವಸ್ಥಾನದ ಬಾಗಿಲ ಮುಂದೆ ಕೂತಳು. ಅವಳ ದೇಹವೆಲ್ಲ ಹತ್ತಿಯಂತೆ ಹಗುರಾಗತೊಡಗಿತು ... ...

ತಂತಾನೆ ಬಾಗಿಲು ತೆರೆದುಕೊಂಡ ಮಾರಿಯಮ್ಮನ ದೇವಸ್ಥಾನದೊಳಗೆ ತೇಲಿಕೊಂಡು ಹೋದ ಸಾವಿತ್ರಿ ದೇವಿಯ ಮುಂದೆ ನಿಂತಳು. ಕೂತಿದ್ದ ದೇವಿಯು ಎದ್ದು ನಿಂತಳು.

ದೇವಿ : ನಿನ್ನ ಅಹವಾಲೇನು ? ಮಂಡಿಸು.

ಸಾವಿತ್ರಿ : ಈ ಸಾವು ನ್ಯಾಯವೇ ? ಸೂಕ್ತ ಪರಿಹಾರ ... ...

ದೇವಿ : ಮೊದಲು ವಿವರವಾಗಿ ವಿಷಯ ಮಂಡಿಸು.

ಸಾವಿತ್ರಿ : ಖಂಡಿತ. ಎಲ್ಲ ವಿವರ ಕಲೆ ಹಾಕಿದ್ದೇನೆ ಕೇಳು ದೇವಿ...

ನಿನ್ನೆ ಮಧ್ಯಾಹ್ನ ಅಶೋಕ ನಗರದ ಉರುಗಂ ರಸ್ತೆಯಲ್ಲಿರುವ ರಾಜಾನಂದರ ಮನೆಯಲ್ಲಿದ್ದ ಮಲದ ಗುಂಡಿಯನ್ನು ಸ್ವಚ್ಛ ಮಾಡಲು ಹೋದ ಕುಟ್ಟಿಪ್ರಸಾದ್, ನಾಗೇಂದ್ರ ಬಾಬು ಮತ್ತು ರವಿ ಎಂಬುವವರು ವಿಷಾನಿಲದ ದುರ್ನಾತಕ್ಕೆ ಪ್ರಜ್ಞೆ ತಪ್ಪಿ ಬಿದ್ದು ಮೃತಪಟ್ಟಿದ್ದಾರೆ. ಸಂಬಂಧಪಟ್ಟವರನ್ನೆಲ್ಲ ಮಾತನಾಡಿಸಿದ ಮೇಲೆ ನಾನು ಆ ಗುಂಡಿಯನ್ನು ನೋಡಲು ಹೋದೆ. ಅದು ಗುಂಡಿಯಲ್ಲ, ಐದಾರು ಮನೆಗಳ ಹೇಲು, ಉಚ್ಚೆಗಳು ಅದ್ಯಾವ ಕಾಲದಿಂದಲೋ ತುಂಬಿಕೊಂಡಿದ್ದ ಹತ್ತು-ಹನ್ನೆರಡು ಅಡಿಯ ಬಾವಿಯದು. ಆ ಮಲದ ಗುಂಡಿಯ ಬಳಿಯಲ್ಲೆ ಸತ್ತವರ ಚಪ್ಪಲಿಗಳು ಬಿದ್ದಿದ್ದವು. ಆ ಮೆಟ್ಟುಗಳ ಮೆಟ್ಟಿಕೊಂಡು ಆ ದುರ್ನಾತದ ಗುಂಡಿಯನ್ನೆ ದಿಟ್ಟಿಸುತ್ತ ನಿಂತಿರುವಾಗ ಅಲ್ಲಿ ಎಂಥದೋ ಬಂಗಾರ ಬಣ್ಣದ್ದು ಮಿನುಗತೊಡಗಿ ಆ ಕಪ್ಪನೆ ಹೇಲು ನೀರಿನೊಳಗೆ ಮಾರ್ಗವೊಂದು ಸೃಷ್ಟಿಯಾಯಿತು. ನಾನು ಮೆಟ್ಟಿದ್ದ ಮೆಟ್ಟುಗಳು ನನ್ನನ್ನು ಆ ಮಾರ್ಗದಲ್ಲಿ ಹೇಲು-ನೀರು ತಗುಲದಂತೆ ಒಯ್ದವು. ಒಯ್ಯುವಾಗ ಗೈಡುಗಳಂತೆ ಚರಿತ್ರೆಯನ್ನು ಸಚಿತ್ರವಾಗಿ ವಿವರಿಸಿದವು. ಆ ವಿವರವನ್ನು ಒಪ್ಪಿಸಿಕೊ ದೇವಿ...

ಈ ಕರುನಾಡೆಂಬ ನಾಡಲ್ಲಿ, ಮೂರರ ಮಗ್ಗುಲಿಗೊಂದು ಸೊನ್ನೆ ಸೇರಿಸಿದರಷ್ಟಾಗುವ ಜಿಲ್ಲೆಗಳಿವೆ. ಹೆಚ್ಚಿನ ಆದಾಯ ತರುವ ಜಿಲ್ಲೆಗಳೆಷ್ಟೆಂದು ಲೆಕ್ಕ ಹಾಕುವುದು ತೀರಾ ಸುಲಭ, ಮೂರರ ಮಗ್ಗುಲಿನ ಸೊನ್ನೆ ತೆಗೆದರೆ ಸಾಕು.

ಅವೆಂದರೆ, ಬೆಂಗಳೂರು, ಮಂಗಳೂರು, ನೀನಿರುವ ಈ ಕೆ.ಜಿ.ಎಫ್.

ಹಿಂದೆ ೧೭೮೦ರ ಕಾಲದಲ್ಲಿ ಮೈಸೂರು ಸಂಸ್ಥಾನವನ್ನು ಆಳುತ್ತಿದ್ದ ಸುಲ್ತಾನ ಟಿಪ್ಪು.

*ಶೌರ್ಯವೇ ಅವನನ್ನು ಮೆಚ್ಚಿ ಅಪ್ಪಿತ್ತು*
*ಅವನ ಕಣ್ಣ ದುರ್ಬೀನಿಗೆ ಬಿತ್ತು*
*ಮಾರಿಕುಪ್ಪದ ಪಳಗುಡುವ ಮಣ್ಣು*
*ಅದರ ಒಡಲೊಳಗೆ ಹುದುಗಿತ್ತು*
*ಗಟ್ಟಿ ಗಟ್ಟಿ ಬಂಗಾರ ಗಟ್ಟಿ*
*ಸಿರಿ ಸಿಂಗಾರಕೆ*
*ತಲೆ ಭಾರದ ಕಿರೀಟಕೆ*
*ಮೂಲಕ್ಕೇ ವ್ಯಾಧಿ ಹತ್ತಿಸುವ ಸಿಂಹಾಸನಕೆ*
*ಒಪ್ಪುವ ಬಂಗಾರ*
*ಬದುಕು ಬಂಗಾರವಾಗಿಸುವ*
*ಬಂಗಾರದ ಬದುಕ ಬಂಗದ ಬದುಕಾಗಿಸುವ ಬಂಗಾರ!*
*ಬಂಗಾರದ ಪಟ್ಟೆ ಹುಲಿಯನೆ ಕೊಂದಿದ್ದ*
*ಅರಸ ಟಿಪ್ಪು*
*ದೂರದ ಕನಸು ಕಂಡು*
*ನನಸಾಗಿಸುವ ನೀಲ ನಕ್ಷೆ ಬರೆದ*
*ಬಂಗಾರದ ಬಣ್ಣದಲಿ*
*ಇಂತಿಪ್ಪ ಟಿಪ್ಪು ಸುಲ್ತಾನನೆ*
*ಸಂಚಲಿ ಕೆಡವಿ ಹೊಡೆದರು*
*ಬಿಳಿಯ ದೊರೆಗಳು*
*ನೀಲನಕ್ಷೆಯ ಅರಸಿ*
*ಬಂಗಾರದ ಗಣಿಗಳಿಗೆ ಒಡೆಯರಾದರು*

ಜಾನ್ ಟೇಲರ್ ಎಂಬೊ ಬಿಳಿ ದೊರೆ, ಮೈಲುಗಟ್ಟಲೆ ಸುರಂಗ ಕೊರೆದು ಬಾಚಬಹುದಾದ ಬಂಗಾರವಿರುವುದನ್ನು ಕಂಡುಕೊಂಡ. ಶಿವನ ಸಮುದ್ರದಲ್ಲಿ ಧುಮ್ಮಿಕ್ಕುವ ನದಿಯ ನೀರಿನ ಶಕ್ತಿ ಬಳಸಿ ಹಗಲು, ರಾತ್ರಿಯ ವ್ಯತ್ಯಾಸ ಕಳೆದರು. ಕರುನಾಡಲ್ಲೆ ಮೊತ್ತ ಮೊದಲಿಗೆ ವಿದ್ಯುತ್ ಪಡೆದ ಊರೆಂಬ ಖ್ಯಾತಿ ಪಡೆಯಿತು ಕೆ.ಜಿ.ಎಫ್. ಎಂಡ್ರಿ ಶಾಫ್, ಹೆನ್ರಿ ಶಾಫ್, ಗಿಲ್‌ಬರ್ಡ್ ಶಾಫ್, ಗೋಲ್ಕೊಂಡ ಶಾಫ್, ಬಲೂನ್ ಶಾಫ್, ಟೈಲರ್ ಶಾಫ್, ರಿಚರ್ಡ್ ಶಾಫ್, ಪೆನೆನ್ಸ್ ಶಾಫ್ ... ... ಒಂದೊಂದು ಹತ್ತಿಪ್ಪತ್ತು ಕಿಲೋ

ಮೀಟರ್ ಉದ್ದದ ಗಣಿಗಳು, ಬಗೆದಷ್ಟು ಬಂಗಾರ. ಬಾಚಿದ ಬಂಗಾರ ಹೇರಿಕೊಂಡು ಹೋಗಲು ಹಳಿ ಹಾಕಿಸಿ, ರೈಲು ಬರಮಾಡಿಕೊಂಡರು. ಬೆನ್ನು ಬಗ್ಗಿಸದೆ, ಕೈಯ ಮಣ್ಣಾಗಿಸದೆ, ಬಿಳಿ ಮೈ ಬಿಸಿಲಲ್ಲಿ ಜಿನುಗಿಸದೆ, ಭೂಮಿಯ ಬಗೆದು, ಬಂಗಾರ ಬಾಚಲು ಸುಲಭದ ದಾರಿ ಹುಡುಕುತ್ತಿದ್ದರು.

ದಾರಿಯಲ್ಲಿ ಅಲೆದಾಡುತ್ತಿದ್ದ ಖಾಲಿ ಹೊಟ್ಟೆ, ದುಡಿವ ರಟ್ಟೆಯನು ಹೊತ್ತ ಕರಿಮೈಗಳ ಕಂಡು ಇಲ್ಲಿಗೆ ಕರೆತಂದರು.

ಆಂಧ್ರದ ನೆಲ್ಲೂರಿನ ತೆಲುಗು ಮಾದಿಗ ಕರಿ ಮೈಗಳು ಗಣಿಗಳಲ್ಲಿ, ಬಿಳಿ ದೊರೆಗಳ ಕುಟುಂಬಗಳು ವಾಸಿಸುವ ಟೌನ್‌ಶಿಪ್ಪುಗಳಲ್ಲಿ ಕಸ ಬಾಚಿದರು, ಪಿಟ್ಟಿನಲ್ಲಿ ತುಂಬಿಕೊಳ್ಳುವ ಮಲ ಬಾಚಿದರು.

ತಮಿಳುನಾಡಿನ ಧರ್ಮಪುರಿ, ಈರೋಡು, ಸೇಲಂ ಊರುಗಳಿಂದ ಕರೆದು ತಂದಿದ್ದ ಹೊಲೆಯ ಕರಿಮೈಗಳ ಮೈಉದ್ದ ಆಳದ ಗಣಿಗಳಲ್ಲಿ ಇಳಿಸಿ, ಚಿನ್ನದ ಅದಿರನ್ನು ಅಗೆಸಿದರು.

ಚಾಂಪಿಯನ್ ರೀಫ್, ಕೋರಮಂಡಲ್ ರೀಫ್, ಉರುಗಂ ಪೇಟ್, ಕೆನಡೀಸ್ ಸಿಕ್ಸ್ಥ್ ಲೇನ್, ಮೈಸೂರು ಮೈನ್ಸ್, ಮೈಸೂರು ಚಾಂಪಿಯನ್ಸ್, ಎನ್.ಟಿ. ಬ್ಲಾಕ್, ಆ್ಯಂಡ್ರಸನ್ ಪೇಟ್, ಕಾಲರ್ ಲೈನ್, ಬೀರ್ ಶಾಪ್ ಏರಿಯಾ, ಕೊಂಡಯ್ಯ ಗುಡಿಸಲು, ದೊಡ್ಡಿ... ...ಗಳಲ್ಲಿ ಮಾದಿಗರನ್ನು ನೆಲೆಯಾಗಿಸಿದರೆ ಟ್ಯಾಂಕ್ ಬ್ಲಾಕ್, ಎಂ.ಎಲ್. ಬ್ಲಾಕ್, ಎಸ್.ಟಿ. ಬ್ಲಾಕ್, ಫೋರ್ಥ್ ಬ್ಲಾಕು, ಕೆನಡೀಸ್ ಒಂದರಿಂದ ಐದನೇ ಲೇನ್‌ನಲ್ಲಿ ಹೊಲೆಯರನ್ನು ನೆಲೆಯಾಗಿಸಿದರು. ಇವರಿಗೊಂದು ಚರ್ಚು, ಅವರಿಗೊಂದು ಚರ್ಚು. ದೇವರ ಪೂಜೆಗಳಿಗಾಗಿ ದೇವರಾಯನ ಸಮುದ್ರದ ಬ್ರಾಹ್ಮಣರನ್ನು ಕರೆಸಿದರು.

ದನದ ಮಾಂಸ ಮಾರಾಟ ಮಾಡಲು ದನ ಕುಯ್ದು, ಚರ್ಮ ಸುಲಿಯುವವರು ಮಾದಿಗರು. ದನದ ಮಾಂಸ ಕೊಳ್ಳುವ ಅಂಗಡಿ ಹೊಲೆಯರದೇ ಬೇರೆ, ಮಾದಿಗರದೇ ಬೇರೆ. ಬಡ್ಡಿ ವ್ಯಾಪಾರಕ್ಕೆ ಭೇದ-ಭಾವದ ಅಡ್ಡಿ ಏನಿಲ್ಲ.

ಹೀಗೆ 'ಮನುಷ್ಯರನ್ನು ಒಡೆಯವ ಜಾತಿ' ಎಂಬೊ ಶಾಪದ ಗೋಡೆಗಳ ನಡುವೆ ಚೂರೂ ಗಾಳಿ ಆಡದಂತೆ, ಬಿರುಕು ಬಿಡದಂತೆ ಬಲು ನಾಜೂಕಾಗಿ ಉಳಿಸಿಕೊಂಡರು.

*ಬಗೆದು ಬಾಚಿ*
*ಅಂಗಾಲು ಅಂಗೈಗಳಲಿ ಬಿದ್ದ ಬಿರುಕುಗಳು*
*ಬಗೆದು ಬಾಚಿದ ಕೂಲಿಗಳೊಳಗೂ ಬಿರುಕು*
*ತುಂಬಿ ಬಿರಿದ ಹೊಟ್ಟೆ*
*ಹಸಿದು ಬಿರಿದ ಹೊಟ್ಟೆ*
*ಭಲೆ ಭಲೆ ಬಂಗಾರ*
*ಮಿರಿ ಮಿರುಗುವ ಬಂಗಾರ*
*ಮಲದ ಗುಂಡಿಯೂ ಕತ್ತಲು*
*ಹೊನ್ನ ಗಣಿಯೂ ಕತ್ತಲು*



**ಅಭಿನಂದನೆಗಳು**

ಕವಿ, ನಾಟಕಕಾರ ಶ್ರೀ ಎಚ್. ಎಸ್. ಶಿವಪ್ರಕಾಶ್ ಅವರಿಗೆ 'ಮಬ್ಬಿನ ಹಾಗೆ ಕಣಿವೆಯಲ್ಲಿ' ಕವನ ಸಂಕಲನಕ್ಕೆ ೨೦೧೨ನೇ ಸಾಲಿನ 'ಕೇಂದ್ರ ಸಾಹಿತ್ಯ ಅಕಾಡೆಮಿ' ಪ್ರಶಸ್ತಿ ಲಭಿಸಿದೆ. ಅವರನ್ನು 'ಹೊಸತು' ಹಾಗೂ 'ನವಕರ್ನಾಟಕ' ಬಳಗ ಹಾರ್ದಿಕವಾಗಿ ಅಭಿನಂದಿಸುತ್ತದೆ.

ದೋಚುವ ದೊರೆಗಳಿಗೆ ಕತ್ತಲೆಯೇ ಅನುಕೂಲ. ಗೋಡೆಗಳನ್ನು ಭದ್ರಪಡಿಸಿಕೊಂಡು, ಅಗೆದ ಬಂಗಾರವನ್ನು ಸಾಗಿಸಿದರು. ಬೆಳಿಗ್ಗೆ ಏಳರಿಂದ ಸಂಜೆ ಏಳರವರೆಗೆ ದುಡಿಸಿಕೊಂಡು ಅರೆಹೊಟ್ಟೆಗಳಿಗೆ ಎರಡೊತ್ತಿನ ಅನ್ನ ತುಂಬುವಷ್ಟು ಕೂಲಿ ನೀಡಿದರು. ಗಣಿಗೆ ಹತ್ತಿರವಾಗಿರಲೆಂದು ದೊಡ್ಡಿಗಳ ಕಟ್ಟಿ ಅದಕ್ಕೂ ಕಾಸು, ಅರೆ ಕಾಸು ಬಾಡಿಗೆ ಪಡೆದರು. ಧನ್ಯವಾದವು ಖಾಲಿ ಹೊಟ್ಟೆಗಳು. ಬೆವರು ಸುರಿಸಿ ಚಿನ್ನ ಅಗೆದರು. ಇಲ್ಲಿಯವರೆಗೆ ಗಣಿಯಲ್ಲಿ ಅಗೆದು ತೆಗೆದಿರುವ ಚಿನ್ನ ಎಂಟುನೂರು ಮೆಟ್ರಿಕ್ ಟನ್, ಬಲಿಯಾಗಿರುವ ಜೀವಗಳು ಸುಮಾರು ಆರು ಸಾವಿರ.

ಸ್ವಾತಂತ್ರ್ಯದ ನಂತರವೂ ಬಿಳಿದೊರೆಗಳ ಗಣಿ ಕಂಪೆನಿಯೇ ಜಾರಿಯಲ್ಲಿತ್ತು. ಬಾಂಬೆ ರೇಟಿಗಿಂತ ೧/೩ರಷ್ಟು ಕಡಿಮೆ ಇದ್ದ ಲಂಡನ್ ಮಾರುಕಟ್ಟೆ ರೇಟಿಗೆ ಚಿನ್ನವನ್ನು ಬಿಳಿಯರಿಗೆ ಮಾರಾಟ ಮಾಡಲಾಗುತ್ತಿತ್ತು. ೧೯೭೨ರಲ್ಲಿ ದೇಶಿ ದೊರೆಗಳೇ ಗಣಿಯ ಯಜಮಾನಿಕೆ ಪಡೆದುಕೊಂಡು ಬಾಚಲು ಇನ್ನೇನೂ ಉಳಿದಿಲ್ಲವೆಂದು ೨೦೦೧ರಲ್ಲಿ ಗಣಿಗಾರಿಕೆಯನ್ನು ನಿಲ್ಲಿಸಿದರು. ಕಸ ಬಾಚುವ, ಮಲ ಬಾಚುವ ಕೆಲಸ ಮಾತ್ರ ಇನ್ನೂ ನಿಂತಿಲ್ಲ. ೧೯೯೩ರಲ್ಲೆ ಮಲ ಬಾಚುವ ಪದ್ಧತಿಯನ್ನು ನಿಷೇಧಿಸುವ ಕಾಯ್ದೆ ಜಾರಿಯಾಯ್ತು. 'ಬೇಡವೆಂದರೂ ಇವರೇ ಬಾಚಲು ಹೋಗುತ್ತಾರೆ. ಕಂಠ ಮಟ್ಟ ಕುಡಿವ ಕಾರಣಕ್ಕೆ ಸಾಯುತ್ತಾರೆ. ಅವರ ಸಾವಿಗೆ ಅವರೇ ಹೊಣೆ ಎಂಬುದು ರಟ್ಟೆಯ ಕಸುವನ್ನು ಬಾಚಿಕೊಂಡು ಅವರಿಗೊಂದು ಹೊಟ್ಟೆ ಇದೆ' ಎಂಬುದನ್ನೆ ಮರೆತವರ ಅಂಬೋಣ.



ಸತ್ತು ಮಲಗಿರುವ ಇದೆ ಕುಟ್ಟಿ ಪ್ರಸಾದ್, ಲಕ್ಷ್ಮಿ ಎಂಬ ಸಾಮಾಜಿಕ ಕಾರ್ಯಕರ್ತೆಯ ಸಹಾಯ ಪಡೆದುಕೊಂಡು ಪುಟ್ಟದೊಂದು ಸಂಘ ಮಾಡಿದ್ದ. ಮಲ ಬಾಚುವ ಕೆಲಸ ಮಾಡುವುದಿಲ್ಲ, ಬೇರೆ ಕೆಲಸ ಕೊಡಿ ಎಂದು ಎಲ್ಲರೊಡನೆ ಹೋಗಿ ಡಿ.ಸಿ.ಯವರನ್ನು ಒತ್ತಾಯಿಸಿದ್ದ. ಅವರು ಹೇಳಿದ್ದಕ್ಕೆ ಪಾಲಿಕೆಯಲ್ಲಿ ಗುತ್ತಿಗೆ ಪೌರ ಕಾರ್ಮಿಕರಾಗಿ ಕೆಲಸ ನೀಡಿದ್ದರು. ಮೂರು ತಿಂಗಳಾದ ಮೇಲೆ ಗುತ್ತಿಗೆ ಮುಗಿದಿದೆ ಎಂದು ತೆಗೆದು ಹಾಕಿದ್ದರು. ಕೆಲಸ ಮಾಡಿದರಷ್ಟೆ ಹೊಟ್ಟೆಗೆ ಅನ್ನ ಕಾಣುವವರಾದ್ದರಿಂದ ಕೆಲಸವಿಲ್ಲದೆ ಕಂಗಾಲಾಗಿದ್ದರು.

ಹೊಟ್ಟೆಯ ಕೂಗು ಊಳಿಡುತ್ತಿದ್ದ ಹೊತ್ತಿನಲ್ಲೆ ರಾಜಾನಂದರು ಕಾಲೋನಿಯವರೆಗೂ ಹುಡುಕಿಕೊಂಡು ಬಂದಿದ್ದರು. ಪಿಟ್ ತುಂಬಿಬಿಟ್ಟಿದೆ, ಐದ್ನಾವ್ರ ಕೊಡ್ತೀನಿ, ಕ್ಲೀನ್ ಮಾಡಿ ಎಂದು ದುಂಬಾಲು ಬಿದ್ದರು. ಮಾರನೆಯ ದಿನ ಹೋಗಿ ನೋಡಿದರೆ, ಅದೊಂದು ಏಳೆಂಟು ಮನೆಗಳ ಕನೆಕ್ಷನ್ ಇದ್ದ ಹತ್ತು-ಹನ್ನೆರಡು ಅಡಿ ಆಳದ ಬಾವಿಯದು. ಬಹಳ ಕಾಲದಿಂದ ತುಂಬಿಕೊಂಡಿದ್ದರಿಂದ, ಮುಚ್ಚಿದ್ದ ಚಪ್ಪಡಿ ತೆಗೆದು ಸ್ವಲ್ಪ ಹೊತ್ತು ಹಾಗೇ ಬಿಟ್ಟರು. ಅದೇ ಹೊತ್ತಿನಲ್ಲಿ ಊಟ ಮಾಡಿ ಬರೋಣವೆಂದು ಅಡ್ವಾನ್ಸ್ ತೆಗೆದುಕೊಂಡು ಹೋದರು. ವಾಪಸ್ಸು ಬಂದಮೇಲೆ ಕುಟ್ಟಿ, ನಾಗೇಂದ್ರ, ರವಿ ಕೆಲಸ ಕೈಗೊಂಡರು. ಬಾವಿಗೆ ಮೆಟ್ಟಿಲಿನಂತೆ ಕಲ್ಲುಗಳಿವೆ. ಪಿಟ್ಟಿನ ಮೇಲ್ಭಾಗದ ಕರಿನೀರನ್ನು ತುಂಬಿ ಚೆಲ್ಲಿದ ನಂತರ, ಸನಿಕೆಯಲ್ಲಿ ಮಲವನ್ನು ಎತ್ತಿ ತುಂಬಿಸಿ ಮೇಲಕ್ಕೆ ಒಯ್ದು ಸುರಿಯಬೇಕು. ಮೊದಲು ಇಳಿದವನು ರವಿ. ಅವನು ನಿಂತಿದ್ದ ಜಾಗದಿಂದ ಸ್ವಲ್ಪ ಮೇಲಕ್ಕೆ ನಿಂತಿದ್ದವನು ನಾಗೇಂದ್ರ. ಎತ್ತಿ ಸುರಿಯಲು ಮೇಲೆ ನಿಂತಿದ್ದವನು ಕುಟ್ಟಿ. ಕೊಳಕು ನೀರನ್ನು ತುಂಬಲು ಬಗ್ಗಿದ ರವಿ, ತಲೆ ತಿರುಗಿದಂತಾಗಿ ಬಿದ್ದ. ಹಿಡಿದುಕೊಳ್ಳಲು ಹೋದ ನಾಗೇಂದ್ರನು ಬವಳಿ ಬಂದಂತಾಗಿ ಬಿದ್ದ. ಇದನ್ನು ಕಂಡು ದಡ ದಡ ಇಳಿದು ಹೋದ ಕುಟ್ಟಿಯೂ ಪ್ರಜ್ಞೆ ತಪ್ಪಿ ಜಾರುವುದರೊಳಗೆ ಪ್ರಭು ಓಡಿಹೋಗಿ ಚಿಕ್ಕಪ್ಪನ ಕೈ ಹಿಡಿದು ಬಲ ಬಿಟ್ಟು ಎಳೆದ. ಪ್ರಜ್ಞೆ ತಪ್ಪಿದ ಕುಟ್ಟಿ ಕೈ ಹಿಡಿದುಕೊಳ್ಳಲಾಗದೆ ಗುಂಡಿಯೊಳಗೆ ಜಾರಿದ.

ಮಲದ ಗುಂಡಿಯೊಳಗಿನ ಮಾರಣಾಂತಿಕ ವಿಷಾನಿಲ ಐದರಿಂದ ಏಳು ನಿಮಿಷದೊಳಗೆ ಜೀವ ತೆಗೆಯಬಲ್ಲದು. ಕಕ್ಕಸ್ಸು ಗುಂಡಿಯಲ್ಲಿ ಬಿದ್ದು ಸತ್ತವರನ್ನು ಜೆ.ಸಿ.ಬಿ. ಯಂತ್ರ ತರಿಸಿ ಎತ್ತಲಾಯಿತು. ಆ ನಂತರ, ದುರ್ನಾತ ಬೀರುವ ಶವಗಳ ಮೇಲೆ ನೀರು ಸುರಿಯಲು ಬಿಡದೆ (ಕಕ್ಕಸ್ಸು ಗುಂಡಿಯಲ್ಲಿ ಬಿದ್ದು ಸತ್ತಿರುವುದಕ್ಕೆ ಪುರಾವೆಯಾಗಿ) ಸಂಘಟನೆಯವರು ಬರುವವರೆಗೂ ಹೆಣಗಳನ್ನು ಪೋಸ್ಟ್‌ಮಾರ್ಟಂಗೆ ಒಯ್ಯಲು ಬಿಡದೆ ಕಾದಿದ್ದಕ್ಕೆ ಕೂಡಲೆ ಒಂದು ಲಕ್ಷ ಹತ್ತು

ಸಾವಿರ ರೂಪಾಯಿಗಳ ಪರಿಹಾರ ನೀಡಲಾಯಿತು. ಕೋರ್ಟು ನಿಗದಿ ಮಾಡಿರುವ ಪರಿಹಾರ ಸಿಗುವವರೆಗೂ ಹೆಣ ಎತ್ತದೆ, ಆಸ್ಪತ್ರೆ ಎದುರು ಧರಣಿ ಕೂರಬೇಕೆಂದು ತೀರ್ಮಾನಿಸಿದರು. ಸುಳಿವು ತಿಳಿದ ಅಧಿಕಾರಿಗಳು ಬೆಳ್ಳಂಬೆಳಗ್ಗೆ ಹಿಂದಿನ ಬಾಗಿಲಿನಿಂದ ಶವಗಳನ್ನು ಸಾಗಿಸಿ ಕಾಲೋನಿಯಲ್ಲಿರಿಸಿದರು. ಆ ನಂತರವೂ ಸೂಕ್ತವಾದ ಪರಿಹಾರ ಸಿಗುವವರೆಗೂ ಹೆಣಗಳನ್ನು ಮಣ್ಣು ಮಾಡಬಾರದೆಂದು ಪಟ್ಟು ಹಿಡಿದಾಗ, ಲೋಕಲ್ ಪುಢಾರಿಯನ್ನು ಕರೆಸಿ ಮತ್ತೊಂದು ಲಕ್ಷ ರೂಪಾಯಿಗಳ ಪರಿಹಾರ ನೀಡಿ ಹೆಣ ಎತ್ತಿಸುತ್ತಿದ್ದಾರೆ. ಇದು ನ್ಯಾಯವೇ ? ಮೊದಲೇ ಮಲದ ಗುಂಡಿಯಲ್ಲಿ ಬಿದ್ದು ಸತ್ತಿರುವವರ, ಮೂಗು-ಬಾಯಿಗಳಲ್ಲಿ ರಕ್ತ ಹರಿಯಲು ಶುರುವಾಗಿದೆ. ಅವರ ಸಾವಿಗೊಂದು ಘನತೆ ಇಲ್ಲವೇ ? ಇನ್ನು ಆ ಹೆಣಗಳನ್ನು ಅಪ್ಪಿ ಮಡಿಲಲ್ಲಿ ಮಲಗಿಸಿಕೊಳ್ಳುವವಳು ಭೂಮ್ತಾಯಿ ಒಬ್ಬಳೆ. ಅದೆಷ್ಟು ಬೇಗ ನಡೆದರೂ ಅದು ಅವರಿಗೆ ಸಲ್ಲುವ ಗೌರವ. ಆದರೆ, ಹೆಣ ಎತ್ತೆವೆಂದು ಬೆದರಿಸಿದರೆ ಮಾತ್ರವೇ ಸಿಗಬೇಕಾದ ಪರಿಹಾರ ಸಿಗುವುದು. ಇಲ್ಲಿ ಒಳಗೊಳಗೆ ಲೆಕ್ಕಗಳು ಚುಕ್ತಾ ಆಗುತ್ತವೆ. ಸೂಕ್ತ ದಾಖಲೆಗಳಿವೆ. ಇನ್ನು ಬದುಕಬೇಕಾಗಿರುವವರಿಗೆ ನ್ಯಾಯ ಸಿಗಬೇಕು. ಮಲದ ಗುಂಡಿಗಳಿಂದ ಸಂಪೂರ್ಣ ಬಿಡುಗಡೆ ಸಿಗಬೇಕು ಎಂದು ಹೇಳಿ ಕತೆ ನಿಲ್ಲಿಸಿದಳು.

ನಿನ್ನ ಅಹವಾಲನ್ನು ಕೇಳಿಸಿಕೊಂಡೆ. 'ನಿನ್ನ ಸಮುದಾಯದವರಂತೆ ಚೆನ್ನಾಗಿ ಕತೆ ಕಟ್ಟುತ್ತೀಯ. ಹಸಿವು ಹಿಂಗಿಸುವ ಸಾರಾಯಿ, ನೋವ ನೀಗಿಸಿ ಅವಮಾನ ನುಂಗಿಕೊಳ್ಳುವ ತಮಟೆ ಎರಡನ್ನು ವರವಾಗಿ ಎಂದೋ ನಿಮಗೆ ಕೊಟ್ಟಿದ್ದೇನೆ. ನೀನು ಮಂಡಿಸಿದ ವಿಷಯ ನನಗೆ ಸಂಬಂಧಿಸಿದ್ದಲ್ಲ. ಅದನ್ನು 'ಸರ್ಕಾರದ ಕೆಲಸ ದೇವರ ಕೆಲಸ' ಎಂದು ಬರೆದಿರುವ ಕಲ್ಲು ಮಂದಿರದಲ್ಲಿ, ಅದರ ಎದುರಲ್ಲಿರುವ ಕೆಂಪು ಬಣ್ಣದ ನ್ಯಾಯ ದೇಗುಲದಲ್ಲಿ ಸೂಕ್ತ ಸಾಕ್ಷಿ, ಪುರಾವೆಗಳೊಂದಿಗೆ ಮಂಡಿಸು. ಸಿಗಬೇಕಾದದ್ದು ಸಿಗುತ್ತದೆ, ಬೋರು ಹೊಡೆಯುತ್ತಿತ್ತು, ಟೈಂಪಾಸ್ ಮಾಡಿದ್ದಕ್ಕೆ ಥ್ಯಾಂಕ್ಸ್' ಎಂದು ಹೇಳಿದ ದೇವಿ ತನ್ನ ಆಸನದಲ್ಲಿ ಕೂತು ಕಲ್ಲಾದಳು.

ಸೂಕ್ತ ದಾಖಲೆಗಳನ್ನು ಸಮಿತಿಯ ಮುಂದಿಟ್ಟು, ವರದಿ ಫೈನಲೈಸ್ ಆಗಿ, ಕೋರ್ಟಿನ ಮುಂದಿಟ್ಟು, ಪರ-ವಿರೋಧ ವಾದಗಳು ನ … … … … ಡೆ … … … … ದು ತೀ … … … … ರ್ಪು ಬಂದು, ಸರ್ಕಾರಿ ಆದೇಶವಾಗಿ, ಆದೇಶ ಜಾರಿಗೊಂಡು ಪರಿಹಾರ ದೊರೆಯುವ ಹೊತ್ತಿಗೆ … … …



**ಅಭಿನಂದನೆಗಳು**

ಜನಪ್ರಿಯ ಲೇಖಕಿ
**ನಾಡೋಜ ಸಾರಾ ಅಬೂಬಕ್ಕರ್**
ಅವರಿಗೆ ಬಿ.ಎಮ್.ಟಿ.ಸಿ.
ಪ್ರಾಯೋಜಿಸಿರುವ ಈ ವರ್ಷದ ಕನ್ನಡ
ಸಾಹಿತ್ಯ ಪರಿಷತ್ತಿನ 'ನೃಪತುಂಗ' ಪ್ರಶಸ್ತಿ
ಲಭಿಸಿದೆ. ಲೇಖಕಿಗೆ 'ನವಕರ್ನಾಟಕ'
ಹಾಗೂ 'ಹೊಸತು' ಬಳಗ
ಆತ್ಮೀಯವಾಗಿ ಅಭಿನಂದನೆ ಸಲ್ಲಿಸುತ್ತದೆ.

ಯಾವುದೋ ಕಾಲದಲ್ಲಿ ಹೊಟ್ಟೆ ಎಂಬೋ ಗವಿಯ ಗೋಡೆಗೆ ಮೆತ್ತಿಕೊಂಡಿದ್ದ ವಾಕರಿಕೆಯೊಂದು ನಿಧಾನವಾಗಿ ನುಲಿದುಕೊಂಡು ಮೇಲೇಳುತ್ತಿತ್ತು. ಒಂದೇಟಿಗೆ ಅದನ್ನು ಹೊರಹಾಕಬೇಕೆಂದು ಪಕ್ಕದಲ್ಲಿದ್ದ ಮೋರಿ ಹತ್ತಿರ ಗಂಟಲಿಗೆ ಬೆರಳಿಕ್ಕಿ ಕಕ್ಕಿದಳು. ಮೂಗು-ಬಾಯಿಯಿಂದ ಕಿತ್ತುಕೊಂಡು ಬಂತು. ಬ್ಯಾಗಿನಲ್ಲಿದ್ದ ನೀರಿನ ಬಾಟಲಿ ತೆಗೆದು, ಬಾಯಿ ತೊಳೆದುಕೊಂಡಳು.

ಹುಡುಗರು ಫುಲ್ ಚಿತ್ತಾಗಿ ತಮಟೆ ಬಾರಿಸಿಕೊಂಡು ಕುಣಿಯುತ್ತಿದ್ದರು.

ಜಗ್.. ಜಗ್ಗು ಜಗ್ಗು ನಕ್ಕೂನ್ ನಕ್ಕೂನ್ ನಕ್ಕು … … …

ವಾಕರಿಸಿ ಹಗುರಾದ ಸಾವಿತ್ರಿಯೂ ಅವರೊಂದಿಗೆ ಸೇರಿ ಕುಣಿಯತೊಡಗಿದಳು.

**ದು. ಸರಸ್ವತಿ**
ನಂ. ೦೦೬, ಆರ್.ಎನ್.ಎಸ್., ಶಾಂತಿ ನಿವಾಸ, ತುಮಕೂರು ರಸ್ತೆ, ಯಶವಂತಪುರ, ಬೆಂಗಳೂರು-೫೬೦ ೦೨೨

# ಬಿಎಂಟಿಸಿ

## ನಗರ ಸಾರಿಗೆ ಅನ್ವೇಷಣೆಗಳ ರೂವಾರಿ



ಶ್ರೀ ಜಗದೀಶ್ ಶೆಟ್ಟರ್
ಸನ್ಮಾನ್ಯ ಮುಖ್ಯಮಂತ್ರಿಗಳು
ಕರ್ನಾಟಕ ಸರ್ಕಾರ

ದೇಶದ ಮುಂಚೂಣಿ ಸಾರಿಗೆ ಸಂಸ್ಥೆ ಎನಿಸಿರುವ ಬಿಎಂಟಿಸಿಯು ಪ್ರಯಾಣಿಕರಿಗೆ ಸುಗಮ ಸಂಚಾರವನ್ನು ಕಲ್ಪಿಸುವ ಸಲುವಾಗಿ ಅಂದಿನಿಂದಲೂ ಬಳಕೆದಾರರ ಸ್ನೇಹಿ ಉಪಕ್ರಮಗಳನ್ನು ಪರಿಚಯಿಸುತ್ತಾ ಬಂದಿದೆ. ವಲಯವಾರು ಮಾಸಿಕ, ಸಾಪ್ತಾಹಿಕ ಮತ್ತು ದಿನದ ಪಾಸುಗಳು, ಬ್ರಾಂಡ್ ಸೇವೆಗಳು, ಕಾರ್ಯಾಗಾರಗಳು, ಶಾಲಾ-ಕಾಲೇಜುಗಳಿಗೆ ಒಪ್ಪಂದದ ಸೇವೆ, ಹೈ ಎಂಡ್ ವೋಲ್ವೊ ಬಸ್ ಸೇವೆಗಳು ಇವೇ ಮೊದಲಾದ ಉಪಕ್ರಮಗಳಿಗೆ ಸಾರ್ವಜನಿಕರೂ ಸೇರಿದಂತೆ ಕಾರ್ಯಾಗಾರಗಳು, ಸಂಘ-ಸಂಸ್ಥೆಯವರಿಂದ ಪ್ರಶಂಸೆ ದೊರೆತಿರುವುದು ಗಮನಾರ್ಹ.



ಶ್ರೀ ಆರ್. ಅಶೋಕ
ಸನ್ಮಾನ್ಯ ಉಪ ಮುಖ್ಯಮಂತ್ರಿಗಳು ಹಾಗೂ
ಗೃಹ ಹಾಗೂ ಸಾರಿಗೆ ಸಚಿವರು
ಕರ್ನಾಟಕ ಸರ್ಕಾರ



ಶಾಂತಿನಗರ ಟಿಟಿಎಂಸಿ



ಯಶವಂತಪುರ ಟಿಟಿಎಂಸಿ

### ಬಿಎಂಟಿಸಿಯ ಪ್ರಥಮಗಳು

- ಲೋ ಫ್ಲೋರ್ ಬಸ್‌ಗಳ ಪರಿಚಯ
- ನಗರಕ್ಕೆ ವಿಶ್ವದರ್ಜೆಯ ಹವಾನಿಯಂತ್ರಿತ ವೋಲ್ವೊ ಬಸ್‌ಗಳು
- ಅಂತರರಾಷ್ಟ್ರೀಯ ವಿಮಾನ ನಿಲ್ದಾಣಕ್ಕೆ ವೋಲ್ವೊ ಬಸ್ ಸೇವೆ
- ಪ್ರಯಾಣಿಕರು ತಮ್ಮ ಸ್ವಂತ ವಾಹನಗಳ ಬಳಕೆಯನ್ನು ನಿಲ್ಲಿಸಿ, ಸಾರ್ವಜನಿಕ ವಾಹನದಲ್ಲಿ ಸಂಚರಿಸುವಂತೆ ಉತ್ತೇಜಿಸಲು ಬಸ್ ದಿನವನ್ನು ಆಚರಣೆಗೆ ತರಲಾಗಿದೆ. ಇದರಿಂದ ಇಂಧನ ಉಳಿತಾಯ, ಮಾಲಿನ್ಯ ನಿಯಂತ್ರಣ ಮತ್ತು ಸಂಚಾರ ದಟ್ಟಣೆಗೆ ಕಡಿವಾಣ ಸಾಧ್ಯವಾಗಿದೆ
- ಸಾಗಣೆ ನಿರ್ವಹಣಾ ಕೇಂದ್ರಗಳ ನಿರ್ಮಾಣ ಮತ್ತು ಬಸ್‌ಗಳ ಖರೀದಿಗಾಗಿ ರಾಷ್ಟ್ರೀಯ ಪ್ರಾಯೋಗಿಕ ಯೋಜನೆಗೆ ಜೆಎನ್ ನರ್ಮ್ ಆರ್ಥಿಕ ನೆರವು ನೀಡಿದೆ
- ಮಾಹಿತಿ, ಸಂವಹನ ಮತ್ತು ಮನರಂಜನೆಯ ಪರಿಚಯ

### ಪ್ರಶಸ್ತಿಗಳು ಮತ್ತು ಪ್ರಶಂಸೆಗಳು

ಕಳೆದ 4 ವರ್ಷಗಳಲ್ಲಿ ಬಿಎಂಟಿಸಿ 20ಕ್ಕೂ ಹೆಚ್ಚು ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಪ್ರಶಸ್ತಿಗಳನ್ನು ತನ್ನ ಮುಡಿಗೇರಿಸಿಕೊಂಡಿದೆ. ಅದರಲ್ಲಿ ಪ್ರಮುಖವಾದವು :

- ಹುಡ್ಕೋ ನ್ಯಾಷನಲ್ ಪ್ರಶಸ್ತಿ - 2012
- ಇಂಡಿಯಾ ರೋಡ್ ಟ್ರಾನ್ಸ್‌ಪೋರ್ಟ್ ಪ್ರಶಸ್ತಿ - 2012
- ಬಸ್ ಸಾರಿಗೆಯಲ್ಲಿ ಶ್ರೇಷ್ಠ ಕಾರ್ಯಾಚರಣೆಯ ಸಲುವಾಗಿ ಮೊದಲ ದಕ್ಷಿಣ ವಲಯ ಪ್ರಶಸ್ತಿ - 2012




**ಪಿ. ರವಿಕುಮಾರ್,** ಭಾ.ಆ.ಸೇ.
ಪ್ರಧಾನ ಕಾರ್ಯದರ್ಶಿಗಳು,
ಸಾರಿಗೆ ಇಲಾಖೆ, ಕರ್ನಾಟಕ ಸರ್ಕಾರ

**ಅಂಜುಮ್ ಪರ್ವೇಜ್,** ಭಾ.ಆ.ಸೇ
ವ್ಯವಸ್ಥಾಪಕ ನಿರ್ದೇಶಕರು,
ಬಿಎಂಟಿಸಿ





**ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ**
ಕೇಂದ್ರ ಕಚೇರಿ, ಕೆ.ಹೆಚ್. ರಸ್ತೆ, ಶಾಂತಿನಗರ, ಬೆಂಗಳೂರು – 560 027
ದೂ : 080-2295 2522, 2295 2422, 2295 2534
ಕಾಲ್ ಸೆಂಟರ್ ಉಚಿತ ಕರೆ : 18004251663 ವೆಬ್‌ಸೈಟ್ : www.bmtcinfo.com

**ಬಿಎಂಟಿಸಿ - ನಮ್ಮ ಸಾರಿಗೆ ನಿಮ್ಮ ಮನೆ ಬಾಗಿಲಿಗೆ**

ಡಿ. ಆರ್. ಪ್ರಹ್ಲಾದ

# ಮಾನವ ಕಲ್ಯಾಣಕ್ಕಾಗಿ ಬಲಿಯಾಗುತ್ತಿರುವ ಪ್ರಯೋಗಾಲಯದ ಪಶುಗಳು



ನಮ್ಮ ಭಾರತ ದೇಶದಲ್ಲಿ ಜಾಗತೀಕರಣದ ಪ್ರಭಾವದಿಂದಾಗಿ ಪಾರಂಪರಿಕ ಕಸುಬುಗಳು, ಜೀವನ ಶೈಲಿ, ವೈದ್ಯಕೀಯ ಪದ್ಧತಿ ಹಾಗೂ ಒಟ್ಟಾರೆ ಸಾಮಾಜಿಕ ಪರಿಸರವೇ ಬದಲಾಗಿಹೋಗಿದೆ. ಗ್ರಾಮೀಣ ಪ್ರದೇಶಗಳಲ್ಲಿ ಮಳೆ ಹಾಗೂ ಕ್ಷಾಮಗಳಿಂದ ರೈತ ಕಂಗಾಲಾದರೆ ನಗರಗಳಲ್ಲಿ ನೌಕರಿಯ ಒತ್ತಡಗಳಿಂದ ನಗರವಾಸಿಗಳು ನಲುಗಿಹೋಗಿದ್ದಾರೆ. ಇದರ ನೇರ ಪರಿಣಾಮವೇ ಇಂದಿನ ಮಧುಮೇಹ, ಅಧಿಕ ರಕ್ತದೊತ್ತಡ, ಮಾನಸಿಕ ಒತ್ತಡ, ಹಲವು ರೀತಿಯ ಅರ್ಬುದ ರೋಗಗಳು ಹಾಗೂ ಉಬ್ಬಸದಂತಹ ಅನೇಕ ರೋಗಗಳು ಮಾನವನನ್ನು ಕಾಡುತ್ತಿವೆ. ಇವೆಲ್ಲಕ್ಕೂ ಆಧುನಿಕ ವೈದ್ಯಕೀಯ ಪದ್ಧತಿಗಳಾದ ಅಲೋಪತಿ, ಯುನಾನಿ ಹಾಗೂ ಹೋಮಿಯೋಪತಿಗಳಲ್ಲಿ ಹಲವಾರು ತಾತ್ಕಾಲಿಕ ಉಪಶಮನಗಳಿವೆ (ಆಯುರ್ವೇದ ಸೇರಿ). ಆದರೆ ಅವುಗಳು ಎಷ್ಟು ಸುರಕ್ಷಿತ ಹಾಗೂ ಸೂಕ್ತ ಎಂದು ತಿಳಿಯುವುದು ಹೇಗೆ? ನೇರ ಹಾಗೂ ಸರಳ ಉತ್ತರ ಪ್ರಾಣಿಗಳ ಮೇಲಿನ ಪ್ರಯೋಗ. ಸ್ವಾರ್ಥಿ ಮಾನವ ತನ್ನ ಸ್ವಯಂಕೃತ ಅಪರಾಧಗಳಿಂದ ಹುಟ್ಟುಹಾಕಿದ ಮೇಲೆ ತಿಳಿಸಿರುವ ಅನೇಕ ರೋಗಗಳ ಉಪಶಮನಕ್ಕೆ ಬೇಕಾಗಿರುವ ಮದ್ದಿನ ಮೊದಲ ಪ್ರಯೋಗ ಪ್ರಯೋಗಾಲಯದ ಅಮಾಯಕ ಪಶುಗಳ ಮೇಲೆ ನಡೆಸಿ, ಅವುಗಳು ಸುರಕ್ಷಿತವೆಂದು ಸಾಬೀತಾದ ಮೇಲೆ ತಾನು ಉಪಯೋಗಿಸುತ್ತಾನೆ.

ಪ್ರಯೋಗಾಲಯದ ಪಶುಗಳ ಬಳಕೆ ಏಕೆ ಹಾಗೂ ಹೇಗೆ? ವೈಜ್ಞಾನಿಕವಾಗಿ ಒಂದು ಔಷಧ ಸಿದ್ಧಪಡಿಸಿದ ನಂತರ ಅದರ ಉದ್ದೇಶ ಹಾಗೂ ಸೇವನೆಯ ಪ್ರಮಾಣ ನಿರ್ಧರಿಸಲು ಪ್ರಾಣಿಗಳ ಮೇಲೆ ಪ್ರಯೋಗ ಅನಿವಾರ್ಯ ಹಾಗೂ ಸರ್ವ ರೀತಿಯಲ್ಲಿಯೂ ಸ್ವೀಕಾರಾರ್ಹ ಆಧಾರ. ಈ ರೀತಿಯ ಪ್ರಯೋಗಗಳು ಸಫಲವಾದರೆ ಮಾನವನ ಉಪಯೋಗಕ್ಕೆ ಬಿಡುಗಡೆಗೊಳಿಸಲಾಗುತ್ತದೆ, ಇಲ್ಲದಿದ್ದಲ್ಲಿ ಪರಿಷ್ಕರಿಸಿದ ಮದ್ದಿನಿಂದ ಮತ್ತಷ್ಟು ಪ್ರಾಣಿಗಳ ಮೇಲೆ ಹೊಸ ಪ್ರಯೋಗ. ಎರಡೂ ಪ್ರಕ್ರಿಯೆಗಳ ನಂತರ ಪ್ರಯೋಗಕ್ಕೊಳಗಾದ ಪ್ರಾಣಿಗಳಿಗೆ ದಯಾಮರಣ ದಯಪಾಲಿಸಲಾಗುತ್ತದೆ. ಅಂದರೆ ಈ ರೀತಿಯ ಪ್ರಯೋಗಗಳು ನಿರಂತರವಾಗಿ ಪುನರಾವರ್ತಿತವಾಗುತ್ತವೆ.





ಹೀಗೆ ಮಾನವನ ಉಪಯೋಗಕ್ಕೆ ಬಿಡುಗಡೆಗೊಳಿಸುವ ಮುನ್ನ 'ಮಾನವ ಶಿಷ್ಟಾಚಾರ ಸಮಿತಿ'ಯ ಅನುಮೋದನೆ ಪಡೆದುಕೊಳ್ಳಲಾಗುತ್ತದೆ. ಒಟ್ಟಾರೆ, ಇದು ಮಾನವನ ಒಳಿತಿಗಾಗಿ ಪ್ರಾಣಿಗಳ ಮೇಲಿನ ಪ್ರಯೋಗ ಹಾಗೂ ಅವುಗಳ ಹತ್ಯೆ ಅನಿವಾರ್ಯವೆಂದು ಎಲ್ಲರೂ ಒಪ್ಪಿಕೊಂಡು ಬಿಟ್ಟಿರುವ ಸ್ವಾರ್ಥ ತುಂಬಿದ ನಿಷ್ಠುರ ಸತ್ಯ.

ಪ್ರಯೋಗಾಲಯದ ಪಶುಗಳ ಬಳಕೆ ಏಕೆ ಹಾಗೂ ಹೇಗೆ? ವೈಜ್ಞಾನಿಕವಾಗಿ ಒಂದು ಔಷಧ ಸಿದ್ಧಪಡಿಸಿದ ನಂತರ ಅದರ ಉದ್ದೇಶ ಹಾಗೂ ಸೇವನೆಯ ಪ್ರಮಾಣ ನಿರ್ಧರಿಸಲು ಪ್ರಾಣಿಗಳ ಮೇಲೆ ಪ್ರಯೋಗ ಅನಿವಾರ್ಯ ಹಾಗೂ ಸರ್ವ ರೀತಿಯಲ್ಲಿಯೂ ಸ್ವೀಕಾರಾರ್ಹ ಆಧಾರ. ಈ ರೀತಿಯ ಪ್ರಯೋಗಗಳು ಸಫಲವಾದರೆ ಮಾನವನ ಉಪಯೋಗಕ್ಕೆ ಬಿಡುಗಡೆಗೊಳಿಸಲಾಗುತ್ತದೆ, ಇಲ್ಲದಿದ್ದಲ್ಲಿ ಪರಿಷ್ಕರಿಸಿದ ಮದ್ದಿನಿಂದ ಮತ್ತಷ್ಟು ಪ್ರಾಣಿಗಳ ಮೇಲೆ ಹೊಸ ಪ್ರಯೋಗ. ಎರಡೂ ಪ್ರಕ್ರಿಯೆಗಳ ನಂತರ ಪ್ರಯೋಗಕ್ಕೊಳಗಾದ ಪ್ರಾಣಿಗಳಿಗೆ ದಯಾಮರಣ ದಯಪಾಲಿಸಲಾಗುತ್ತದೆ (ಹೆಚ್ಚಿನ ಮಟ್ಟಿಗೆ). ಅಂದರೆ ಈ ರೀತಿಯ ಪ್ರಯೋಗಗಳು ನಿರಂತರವಾಗಿ ಪುನರಾವರ್ತಿತವಾಗುತ್ತವೆ (ಪುನರಪಿ ಪ್ರಯೋಗಂ; ಪುನರಪಿ ಪ್ರಾಣಿ ಹತ್ಯಾ). ಈ ರೀತಿಯ ಮದ್ದಿನ ಸೇವನೆ ಮಾಡುವ ಶೇಕಡ ೯೦ರಷ್ಟು ಜನರಿಗೆ ಅದರ ಹಿಂದಿರುವ ಪ್ರಯೋಗಗಳಾಗಲಿ ಅಥವಾ ಹಿಂಸೆಯಾಗಲಿ ತಿಳಿದಿರುವುದಿಲ್ಲ. ಈ ಕ್ಷೇತ್ರದಲ್ಲಿ ಒಂದು ದಶಕಕ್ಕೂ ಮೀರಿ ಪಡೆದ ಸ್ವಾನುಭವದ ಸಂಗತಿಗಳನ್ನು ಸಾರ್ವಜನಿಕರಿಗೆ ಮಾಹಿತಿಯಾಗಿ ನೀಡಲಿಚ್ಛಿಸುವ ಪುಟ್ಟ ಪ್ರಯತ್ನವೇ ಈ ಲೇಖನ. ಪ್ರಾಣಿಗಳ ಮೇಲಿನ ಪ್ರಯೋಗಗಳು ಕೇವಲ ಔಷಧಗಳ ಸೂಕ್ತತೆಗಾಗಿ ಮಾತ್ರ ಮಾಡುವುದಿಲ್ಲ. ಜ್ಞಾನಾರ್ಜನೆಗಾಗಿ, ಅಂದರೆ ಅಂಗಾಂಗಗಳ ತಿಳುವಳಿಕೆಗಾಗಿ, ಮಾನಸಿಕ ವರ್ತನೆ ಹಾಗೂ ನರವಿಜ್ಞಾನಕ್ಕೆ ಸಂಬಂಧಿಸಿದ ಪ್ರಯೋಗಗಳಲ್ಲೂ ಸಹ ಪ್ರಾಣಿಗಳ ಉಪಯೋಗವಾಗುತ್ತದೆ.

ಇಂದಿನ ಸಮಾಜದ ಅವಿಭಾಜ್ಯ ಅಂಗವಾದ ವಿದ್ಯುನ್ಮಾನ ಮನರಂಜನಾ ಸಾಧನವಾದ 'ಮೂರ್ಖರ ಪೆಟ್ಟಿಗೆ'(ಟಿವಿ) ಹಾಗೂ ಸಿನೆಮಾಗಳಲ್ಲಿ ಎಲ್ಲವೂ ಥಳ ಥಳ ಹಾಗೂ ಎಲ್ಲರೂ ಸುಂದರ. ಸತ್ಯವೆಂದರೆ ಹೀಗೆ ಕಾಣುವ ಎಲ್ಲರೂ ಸಹಜ ಸುಂದರರಲ್ಲ, ಇಂತಹ ಬದಲಾವಣೆ ತೋರಿಸುವ ಇಂದ್ರಜಾಲ ಕಲೆಯೇ ಪ್ರಸಾಧನ. ಶ್ಯಾಮಲ ವರ್ಣ, ಸುಕ್ಕುಗಟ್ಟಿದ ಚರ್ಮ ಹಾಗೂ ಎಲ್ಲ ತರಹದ ಕಲೆಗಳನ್ನು ಮರೆಮಾಚಿ ಮೆರುಗು ತೋರುವ ಈ ಪ್ರಕ್ರಿಯೆಯಲ್ಲಿ ಅನೇಕ ರಾಸಾಯನಿಕಗಳನ್ನೊಳಗೊಂಡ ಸೌಂದರ್ಯ ವರ್ಧಕಗಳು ಕಾರಣವಾಗುತ್ತವೆ. ನಮ್ಮ ಇಂದಿನ, ಅದರಲ್ಲೂ ನಗರವಾಸಿ ಮಹಿಳೆಯರು ಹಾಗೂ ಅವರಿಗೆ ಏನೂ ಕಮ್ಮಿ ಇಲ್ಲದಂತೆ ಪುರುಷರೂ ಸಹ ಇಂತಹ ಪ್ರಸಾಧನಗಳ ಲೇಪನವಿಲ್ಲದೆ (ಕ್ರೀಮ್, ತುಟಿ ರಂಗು, ಕೂದಲು ರಂಗು, ಶ್ವೇತ ವರ್ಣವರ್ಧಕ ಕ್ರೀಮ್‌ಗಳು, ಪುರುಷರಿಗೇ ಬೇರೆ, ಮಹಿಳೆಯರಿಗೇ ಬೇರೆ ಹಾಗೂ ವಿವಿಧ ಬಗೆಯ ಹಚ್ಚೆಗಳು ಇತ್ಯಾದಿ) ಮನೆಯಿಂದ ಹೊರಗಡೆ ಕಾಲಿಡುವುದಿಲ್ಲ.

ಇವರೆಲ್ಲಾ ನಮ್ಮ ಪಾರಂಪರಿಕ ಸೌಂದರ್ಯ ವರ್ಧಕಗಳನ್ನು ಸಂಪೂರ್ಣ ಕಡೆಗಣಿಸಿ ಪರದೇಶಿ ಮೂಲಗಳಿಂದ ಬರುತ್ತಿರುವ ಅನೈಸರ್ಗಿಕ, ದುಬಾರಿ ಹಾಗೂ ಮಾರಕ ರಸಾಯನಯುಕ್ತವಾದ ಸಾಧನಗಳಿಗೆ (ಕಾಸ್ಮೆಟಿಕ್ಸ್) ಶರಣಾಗುತ್ತಿರುವುದು ದುರಂತವೇ ಸರಿ. ಇಂತಹ ಅನೇಕ ಸಾಧನಗಳನ್ನು ಮಾರುಕಟ್ಟೆಗೆ ಬಿಡುಗಡೆ ಮಾಡುವ ಮುಂಚೆ ಹಲವಾರು ಪ್ರಾಣಿಗಳ ಮೇಲೆ ಪ್ರಯೋಗಿಸಲಾಗುತ್ತದೆ. ಅದರ ಪರಿಣಾಮಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುತ್ತದೆಯೇ ವಿನಾ ಪ್ರಾಣಿಗಳಿಗಾಗುವ ವೇದನೆಯನ್ನಲ್ಲ. ಮೊಲದಂತಹ ದಪ್ಪ ತುಪ್ಪಳ ಹೊಂದಿರುವ ಪ್ರಾಣಿಗಳ ದೇಹದ ತುಪ್ಪಳ ಬೋಳಿಸಿ ಆ ಜಾಗಕ್ಕೆ ಈ ಕ್ರೀಮ್‌ಗಳನ್ನು ಲೇಪಿಸಿ ಅನೇಕ ವಾರಗಳವರೆಗೆ ವೀಕ್ಷಿಸಲಾಗುತ್ತದೆ. ಅತಿಯಾದ ಅಡ್ಡಪರಿಣಾಮ ಕಂಡುಬರದಿದ್ದಲ್ಲಿ 'ಮಾನವ ಶಿಷ್ಟಾಚಾರ ಸಮಿತಿ'ಯ ಅನುಮೋದನೆ ಪಡೆದು ಮಾರುಕಟ್ಟೆಗೆ ಬಿಡುಗಡೆಗೊಳಿಸಲಾಗುತ್ತದೆ. ಪ್ರಯೋಗ ವಿಫಲವಾಗಿ ಪ್ರಾಣಿಗಳಲ್ಲಿ ಚರ್ಮ ಕೆರಳುವಿಕೆಯಿಂದ ಮೈಯೆಲ್ಲಾ ಗಾಯವಾದರೆ ಆ ಮದ್ದನ್ನು ಮತ್ತಷ್ಟು ಪರಿಷ್ಕರಣೆಗೊಳಿಸಿ ಪುನಃ ಪ್ರಯೋಗ. ಹಿಂದಿನ ಬಲಿಪಶುಗಳ ಪ್ರಾಣಹರಣ (ದಯಾಮರಣ) ಯಾರ ಗಮನಕ್ಕೂ ಬರುವುದಿಲ್ಲ. ಸಾಮಾನ್ಯವಾಗಿ ಧಾರ್ಮಿಕ ಕಾರಣ ಗಳಿಗಾಗಿ ವಿವಿಧ ಕ್ಷೇತ್ರಗಳಿಗೆ





ಹೋಗಿ ತಲೆ ಬೋಳಿಸಿಕೊಂಡ ಕೂಡಲೇ ಗಂಧದ ಲೇಪನ ಮಾಡಿಕೊಳ್ಳುತ್ತಾರೆ. ಏಕೆಂದರೆ ತಲೆಯ ಮೇಲೆ ರಕ್ಷಣಾ ಕವಚವಾಗಿದ್ದ ಕೂದಲು ಹೋದಾಗ ಹೊರಗಿನ ವಾತಾವರಣಕ್ಕೆ ತೆರೆದುಕೊಳ್ಳುವ ಚರ್ಮದಲ್ಲಿ ಯಾವುದೇ ರೀತಿ ನಂಜು ಉಂಟಾಗದಿರಲೆಂದು ಈ ಉಪಾಯ. ಈ ರೀತಿಯ ಮೂಲಭೂತ ಜ್ಞಾನವಿರುವ ಮಾನವ ಪ್ರಯೋಗಪಶುಗಳ ವೇದನೆಗೆ ಸ್ಪಂದಿಸುವುದೇ ಇಲ್ಲ. ಕೇವಲ ಸೌಂದರ್ಯ ವರ್ಧನೆಗಾಗಿ (ತಾತ್ಕಾಲಿಕವಾದ) ಹಲವಾರು ಅಮಾಯಕ ಜೀವಗಳ ಜೊತೆ ಜೂಜಾಟ ಹಾಗೂ ಅವುಗಳ ಮಾರಣಹೋಮ ಮಾಡುವುದು ಸರಿಯೇ ? ನೀವೇ ಯೋಚಿಸಿ.

ಪ್ರಾಣಿ ಪ್ರಯೋಗಗಳು ಕೇವಲ ಮನುಷ್ಯನ ಕಲ್ಯಾಣಕ್ಕಾಗಿ ಮಾತ್ರವಲ್ಲದೆ ಇತರೆ ಪಶುಗಳ ರೋಗ ಮತ್ತು ಸಸ್ಯ ವರ್ಗಗಳಲ್ಲಿ ಉಂಟಾಗುವ ರೋಗಗಳ ನಿರ್ಮೂಲನಾ ಔಷಧಿಗಳ ತಯಾರಿಕೆಗಾಗಿ ಸಹ ನಡೆಸುತ್ತಾರೆ. ಉದಾಹರಣೆಗೆ, ಜಾನುವಾರುಗಳಲ್ಲಿ ಕಂಡುಬರುವ ಕಾಲು ಬಾಯಿ ಜ್ವರಕ್ಕೆ ವಿವಿಧ ನಂಜುಗಳನ್ನು ಪಶುಗಳಿಗೆ ಚುಚ್ಚಿ ರೋಗ ಸ್ಥಿತಿ ಉಂಟುಮಾಡಿ ಅದರಿಂದ ಪ್ರತಿಜೀವಿಗಳನ್ನು ಉತ್ಪಾದಿಸುತ್ತಾರೆ. ಹಾಗೆಯೆ, ಹಾವಿನ ಕಡಿತಕ್ಕೆ ಉಪಯೋಗಿಸುವ ಪ್ರತಿವಿಷವನ್ನು ತಯಾರಿಸುವುದು ಸಹ ಕುದುರೆಯನ್ನು ಉಪಯೋಗಿಸಿಕೊಂಡು ಅದರ ರಕ್ತದಿಂದ ಪ್ರತಿಕಾಯಗಳನ್ನು ಉತ್ಪಾದಿಸುವ ಮೂಲಕ ಎಂಬುದು ಬಹು ಜನರಿಗೆ ತಿಳಿಯದ ವಿಷಯ. ಭಾರತೀಯ ಕೃಷಿ ಹಾಗೂ ತೋಟಗಾರಿಕೆಗೆ ಸಂಬಂಧಿಸಿದ ವಿದ್ಯಾಲಯಗಳಲ್ಲಿ ವಿವಿಧ ಸಸ್ಯಗಳಿಗೆ ತಗಲುವ ಅನೇಕ ರೋಗಗಳ ಹತೋಟಿಗೆ ಬಳಸುವ ಔಷಧಗಳನ್ನು ಮೊದಲು ಪ್ರಾಣಿಗಳ ಮೇಲೆ ಪ್ರಯೋಗಿಸಿ ಆನಂತರ ಸಸ್ಯಗಳ ಮೇಲೆ ಉಪಯೋಗಿಸ ಲಾಗುತ್ತದೆ. ಆದರೆ ಇವೆಲ್ಲಾ ಪ್ರಯೋಗಾಲಯದ ಹೊರಗೆ ನಡೆದರೂ, ಪ್ರಯೋಗದ ವರ್ಗ ಹಾಗೂ ವ್ಯಾಪ್ತಿಗೆ ಸೇರುತ್ತವೆ. ಮಾನವನಲ್ಲಿ ನೈಸರ್ಗಿಕವಾಗಿ ಹಲವು ರೋಗಗಳನ್ನು ಎದುರಿಸುವ ಪ್ರತಿಕಾಯಗಳನ್ನು ಉತ್ಪಾದಿಸುವ ಸ್ವಯಂ ಚೈತನ್ಯ ಇಲ್ಲದಿರುವುದರಿಂದ, ಆ ಶಕ್ತಿ ಪಡೆದಿರುವ ಪ್ರಾಣಿಗಳನ್ನು ಅವಲಂಬಿಸ ಬೇಕಾಗಿರುವುದು ಅಕ್ಷರಶಃ ಸತ್ಯ. ಪ್ರಕೃತಿಯಿಂದ ಬುದ್ಧಿ ಎಂಬ ಅಸ್ತ್ರ ಪಡೆದಿರುವ ಮಾನವ ತನ್ನ ಒಳಿತಿಗಾಗಿ ಏನೇ ಮಾಡಿದರೂ, ನಿಸರ್ಗದ ಇತರೆ ಜೀವಿಗಳ ಬಗ್ಗೆ ಗೌರವ ಹಾಗೂ ಕಾಳಜಿ ತೋರಲೇಬೇಕು. ಅಸಹಾಯಕ ಮೂಕ ಜೀವಿಗಳ ವೇದನೆಯನ್ನು ಸಾಧ್ಯವಾದಷ್ಟೂ ಕಡಿಮೆಗೊಳಿಸುವ ನಿಟ್ಟಿನಲ್ಲಿ ಕೆಲಸ ಮಾಡಬೇಕು.

ಮಾನವನ ಒಳಿತಿಗಾಗಿ ಪ್ರತಿನಿತ್ಯ ಈ ರೀತಿಯ ಲಕ್ಷಾಂತರ ಪ್ರಾಣಿಗಳು ನೋವು ತಿಂದು ಬಲಿಯಾಗುತ್ತಿರುವುದನ್ನೇ ಅರಿಯದ ಜನರ ಗುಂಪು ಒಂದು ಕಡೆಯಾದರೆ, ಆ ಜೀವಿಗಳ ಸಂಕಟವನ್ನು ಕಡಿಮೆ ಗೊಳಿಸುವ ನಿಟ್ಟಿನಲ್ಲಿ ಹೋರಾಟ ನಡೆಸುತ್ತಿರುವ ಗುಂಪು ಮತ್ತೊಂದು ಕಡೆ. ಈ ದಿಶೆಯಲ್ಲಿ ಹಲವಾರು ಸರ್ಕಾರೇತರ ಸಂಸ್ಥೆಗಳು ನಿರಂತರವಾಗಿ ಶ್ರಮಿಸುತ್ತಿವೆ. ಈ ಹೋರಾಟದ ಸತ್ಯಾಸತ್ಯತೆಗಳನ್ನು ಮನಗಂಡ ಕೇಂದ್ರ ಸರ್ಕಾರ ಹಲವಾರು ಸುಧಾರಣಾ ಕ್ರಮಗಳನ್ನು ಜಾರಿಮಾಡಿರುವುದು ನಿಜಕ್ಕೂ ಪ್ರಶಂಸಾರ್ಹ. ಅಂದಿನ ಹಲವಾರು ಧೀಮಂತ ಸಮಾಜ ಸುಧಾರಕರ ಮಧ್ಯಸ್ಥಿಕೆಯಿಂದ ಸರ್ಕಾರವು ಹಲವಾರು ಕಾನೂನು, ಕಟ್ಟಳೆಗಳನ್ನು ಜಾರಿಗೆ ತಂದಿತು. ಇದರ ಫಲಶ್ರುತಿಯೇ ೧೯೬೦ರಲ್ಲಿ ಜಾರಿಗೆ ಬಂದ 'ಪ್ರಾಣಿಗಳ ಮೇಲೆ ಆಗುವ ದೌರ್ಜನ್ಯ ತಡೆ ಕಾಯ್ದೆ, ೧೯೬೦ (೧೯೬೦ರ ೫೯)'.

ಅಂತೆಯೇ, ೧೯೬೨ರಲ್ಲಿ ದಿವಂಗತ ಶ್ರೀಮತಿ ರುಕ್ಮಿಣಿ ದೇವಿ ಅರುಂಡೇಲ್ ಅವರ ನೇತೃತ್ವದಲ್ಲಿ 'ಭಾರತೀಯ ಪ್ರಾಣಿ ಕ್ಷೇಮಾಭಿವೃದ್ಧಿ ಮಂಡಳಿ' ಮದರಾಸಿನಲ್ಲಿ ಪ್ರಾರಂಭಗೊಂಡಿತು. ಸಾಮಾನ್ಯವಾಗಿ ನಿವೃತ್ತ ನ್ಯಾಯಾಧೀಶರು ಅಥವಾ ನಿವೃತ್ತ ಉನ್ನತ ಸೇನಾಧಿಕಾರಿ ಇದರ ಅಧ್ಯಕ್ಷರಾಗಿರುತ್ತಾರೆ. ಉಳಿದಂತೆ ಪ್ರಾಂತೀಯ ಕಛೇರಿಗಳು ಹಾಗೂ ಅಧಿಕಾರಿಗಳು ವಿವಿಧ ಪ್ರಾಂತ್ಯಗಳಲ್ಲಿ ಕಾರ್ಯ ನಿರ್ವಹಿಸುತ್ತಾರೆ. ಈ ಮಂಡಳಿಯ ಮೂಲ ಉದ್ದೇಶವೇ ಪ್ರಾಣಿಗಳ ವೇದನೆ ಕಡಿಮೆಗೊಳಿಸಿ ಅವು ನಿರಾಳ ಜೀವನ ನಡೆಸಲು ಅನುವು ಮಾಡಿಕೊಡುವುದು. ಪ್ರಾರಂಭದಲ್ಲಿ ಪ್ರಾಣಿ ದಯೆಗೆ ಸಂಬಂಧಿಸಿದ ಎಲ್ಲ ವಿಷಯಗಳನ್ನು ಈ ಮಂಡಳಿಯೇ ನೋಡಿಕೊಳ್ಳುತ್ತಿತ್ತು. ನಂತರದಲ್ಲಿ, ಪ್ರಯೋಗ ಶಾಲೆಗಳಲ್ಲಿ ಪ್ರಾಣಿಗಳ ಉಪಯೋಗ ಕುರಿತಂತೆ ಒಂದು ಕಾನೂನುಬದ್ಧ ಪ್ರತ್ಯೇಕ ಸಂಸ್ಥೆಯೇ 'ಪ್ರಾಣಿಗಳ ಮೇಲೆ ಆಗುವ ದೌರ್ಜನ್ಯ ತಡೆ ಕಾಯ್ದೆ, ೧೯೬೦ (೧೯೬೦ರ ೫೯)' ಅಡಿಯಲ್ಲಿ ಅಸ್ತಿತ್ವಕ್ಕೆ ಬಂದಿತು. ಅದನ್ನು ಸಿ.ಪಿ.ಸಿ.ಎಸ್.ಇ.ಎ. (ಪ್ರಾಣಿಗಳ ಮೇಲೆ ನಡೆಸುವ ಪ್ರಯೋಗಗಳನ್ನು ನಿಯಂತ್ರಿಸುವ ಮತ್ತು ಅವುಗಳ ಕಾರ್ಯಾಚರಣೆಗಳ ಮೇಲುಸ್ತುವಾರಿ ಇಟ್ಟುಕೊಳ್ಳುವ ಸಲುವಾಗಿ ರಚಿಸಲಾಗಿರುವ ಸಮಿತಿ) ಎನ್ನುತ್ತಾರೆ. ಈ ಸಂಸ್ಥೆಯು ನೇರವಾಗಿ ಕೇಂದ್ರ ಸರ್ಕಾರದ ಪರಿಸರ ಹಾಗೂ ಅರಣ್ಯ ಇಲಾಖೆಯಡಿ ಕಾರ್ಯ ನಿರ್ವಹಿಸುತ್ತದೆ. ನಮ್ಮ ದೇಶದಲ್ಲಿ ಪ್ರಾಣಿಗಳ ಮೇಲೆ ಪ್ರಯೋಗ ನಡೆಸಲು ಇಚ್ಛಿಸುವ ಪ್ರತಿಯೊಂದು ಸಂಸ್ಥೆಯೂ ಕಡ್ಡಾಯವಾಗಿ ಇದರಲ್ಲಿ ನೋಂದಾಯಿಸಿ ಪರವಾನಗಿ ಪಡೆಯಬೇಕು. ಅಲ್ಲದೆ, ಇಂತಹ ಪ್ರಯೋಗಗಳಿಗೆ ಪ್ರಾಣಿಗಳನ್ನು ಬೆಳೆಸಿ ಪೂರೈಸುವ ವ್ಯಾಪಾರಿ ಉದ್ದೇಶದ ಸಂಸ್ಥೆಗಳೂ ಸಹ ನೋಂದಾಯಿಸುವುದು ಹಾಗೂ ಪರವಾನಗಿ ಪಡೆದಿರುವುದು ಕಡ್ಡಾಯ. ಈಗಾಗಲೇ ದೇಶದಲ್ಲಿನ ಪ್ರಯೋಗ ನಿರತ ಹಾಗೂ ಪ್ರಾಣಿ ಪೂರೈಸುವ ಸಾವಿರಾರು ಸಂಸ್ಥೆಗಳು ಇಲ್ಲಿ ನೋಂದಾಯಿಸಿಕೊಂಡಿವೆ. ಇವುಗಳಲ್ಲಿ ನಮ್ಮ ಕರ್ನಾಟಕದ ನಿಮ್ಹಾನ್ಸ್ ಆಸ್ಪತ್ರೆ ಹಾಗೂ ವಿದ್ಯಾಲಯ, ಭಾರತೀಯ ವಿಜ್ಞಾನ ಸಂಸ್ಥೆ, ಜವಹರಲಾಲ್ ನೆಹರು ಉನ್ನತ ಅಧ್ಯಯನ ಸಂಸ್ಥೆ, ರಾಷ್ಟ್ರೀಯ ಯುನಾನಿ ವ್ಯಾಸಂಗ ಸಂಸ್ಥೆ, ವೈದ್ಯಕೀಯ ಮಹಾವಿದ್ಯಾಲಯಗಳು, ಔಷಧೀಯ ವಿದ್ಯಾಲಯಗಳು, ಶುಶ್ರೂಷಾ ವಿದ್ಯಾಲಯಗಳು ಹಾಗೂ ವಾಣಿಜ್ಯೋದ್ಯಮಗಳಾದ ಬಯೋಕಾನ್, ಬೆಂಗಳೂರು ಜೀನೀ, ಪ್ರಮುಖವಾದುವುಗಳು. ಸಿ.ಪಿ.ಸಿ.ಎಸ್.ಇ.ಎ. ಎಂಬುದು ಕೇಂದ್ರ ಕಛೇರಿಯಾಗಿರುವುದರಿಂದ ಇಡೀ ದೇಶದ ಉಸ್ತುವಾರಿ ವಹಿಸಲು ಸಾಧ್ಯವಾಗುವುದಿಲ್ಲ. ಹಾಗಾಗಿ ಮೇಲೆ ತಿಳಿಸಿದಂತೆ ನೋಂದಾಯಿಸಿಕೊಂಡ ಪ್ರತಿಯೊಂದು ಸಂಸ್ಥೆಗೆ ಅದರದೇ ಆದ ಸಾಂಸ್ಥಿಕ ಪ್ರಾಣಿ ಶಿಷ್ಟಾಚಾರ ನಿಯಮಗಳ ಸಮಿತಿ, ಐ. ಎ. ಇ. ಸಿ. ಎಂಬ ಸ್ಥಳೀಯ ಸಮಿತಿಯನ್ನು ನೇಮಿಸುತ್ತದೆ. ಇದರ ಕಾರ್ಯಾಧ್ಯಕ್ಷರಾಗಿ ಆ ಸಂಸ್ಥೆಯ ಸದಸ್ಯರೇ (ಹೆಚ್ಚಿನ ಪ್ರಸಂಗಗಳಲ್ಲಿ ಪ್ರಾಂಶುಪಾಲರು) ನೇಮಕಗೊಂಡಿರುತ್ತಾರೆ. ಉಳಿದಂತೆ ಅದೇ ಸಂಸ್ಥೆಯ ಮೂರ್‍ನಾಲ್ಕು ಸದಸ್ಯರಿರುತ್ತಾರೆ. ಇದಕ್ಕಿಂತ ಮುಖ್ಯವಾಗಿ ಅಲ್ಲಿನ ಪ್ರಾಣಿಗಳ ವಸತಿ ನಿಲಯಗಳ (ಅನಿಮಲ್ ಹೌಸ್) ಸ್ಥಿತಿಗತಿಗಳ ನಿರಂತರ ಮೇಲ್ವಿಚಾರಣೆ ಹಾಗೂ ನಡೆಯುವ ಪ್ರಯೋಗಾಲಯದ ಚಟುವಟಿಕೆಗಳನ್ನು ಗಮನಿಸಲು ಕೇಂದ್ರ ಕಛೇರಿಯಿಂದ ಇಬ್ಬರು ವಿಜ್ಞಾನಿಗಳು ಹಾಗೂ ಒಬ್ಬ ಸಾಮಾಜಿಕ ಕಳಕಳಿ ಮತ್ತು





ಅರಿವುಳ್ಳ ವ್ಯಕ್ತಿಯನ್ನು ನೇಮಿಸಲಾಗುತ್ತದೆ. ವಿಜ್ಞಾನಿಗಳು ವೈಜ್ಞಾನಿಕ ವಿಷಯಗಳಿಗೆ ಸಂಬಂಧಪಟ್ಟಂತೆ ನಿಗಾ ವಹಿಸಿದರೆ, ಸಾಮಾಜಿಕ ಅರಿವುಳ್ಳ ಸದಸ್ಯ ಉಳಿದ ಆಡಳಿತಾತ್ಮಕ ವಿಷಯಗಳ ಬಗ್ಗೆ ನಿಗಾ ವಹಿಸಬೇಕು. ಒಟ್ಟಾರೆ, ಮೂರೂ ಜನ ನಾಮ ನಿರ್ದೇಶಿತರು ಹಾಗೂ ಸ್ಥಳೀಯ ಸದಸ್ಯರು ಪ್ರಾಣಿಗಳ ಮೇಲಿನ ಪ್ರಯೋಗಗಳು ಮಾನವೀಯತೆಯಿಂದ ಕೂಡಿ ಕಾನೂನುಬದ್ಧವಾಗಿ ನಡೆಸಲು ಬದ್ಧರಾಗಿರುತ್ತಾರೆ.

ಸಿ.ಪಿ.ಸಿ.ಎಸ್.ಇ.ಎ.ಇಂದ ಪರವಾನಗಿ ಪಡೆದ ಪ್ರತಿಯೊಂದು ಸಂಸ್ಥೆಯೂ ಆರು ತಿಂಗಳಿಗೊಮ್ಮೆ ಒಂದು ಸರ್ವಸದಸ್ಯರ ಸಭೆಯನ್ನು ನಡೆಸಲೇಬೇಕು. ಇಂತಹ ಸಭೆಗಳಲ್ಲಿ, ಆಯಾ ಸಂಸ್ಥೆಗಳ ವಿಜ್ಞಾನಿಗಳು ನಡೆಸಲು ಉದ್ದೇಶಿಸಿರುವ (ಪ್ರಾಥಮಿಕ, ವಿದ್ಯಾರ್ಜನೆಗಾಗಿ ಹಾಗೂ ನಿಯಮಬದ್ಧ ಸಂಶೋಧನೆ) ಪ್ರಾಣಿಗಳ ಪ್ರಯೋಗಗಳು ಅನುಮೋದನೆಗೊಳ್ಳಬೇಕು. ಈ ಸಮಿತಿಯ ಅನುಮೋದನೆ ಇಲ್ಲದೆ ಯಾವುದೇ ರೀತಿಯ ಸಂಶೋಧನಾತ್ಮಕ ಬರೆಹಗಳು ಪ್ರಕಟಿಸಲಾಗಲಿ ಅಥವಾ ಉನ್ನತ ಪದವಿ (ಪಿಎಚ್.ಡಿ., ಎಮ್.ಫಿಲ್) ಪ್ರದಾನಕ್ಕಾಗಲಿ ಸ್ವೀಕರಿಸಲಾಗುವುದಿಲ್ಲ. ಹೀಗೆ ವಿಜ್ಞಾನಿಗಳು ಕೈಗೊಳ್ಳುವ ಪ್ರತಿಯೊಂದು ಪ್ರಾಣಿಪ್ರಯೋಗ ಸಹಿತ ವ್ಯಾಸಂಗಗಳು ಈ ಸಮಿತಿಗಳಲ್ಲಿ ಆಳವಾಗಿ ವಿಶ್ಲೇಷಿತಗೊಂಡು ಅನುಮೋದನೆಗೊಳಪಡುತ್ತವೆ. ಇದರಲ್ಲಿ ಪ್ರಯೋಗಶೀಲ ವಿಜ್ಞಾನಿ ಬಯಸಿರುವ ಪ್ರಾಣಿಯ ತಳಿ, ಪ್ರಾಣಿಗಳ ಸಂಖ್ಯೆ, ಪ್ರಯೋಗದ ಅವಧಿ ಹಾಗೂ ಪ್ರಾಣಿಗಳಿಗೆ ಉಂಟಾಗುವ ಕ್ಲೇಶ ಹಾಗೂ ಹಿಂಸೆಯ ಪರಿ ಮತ್ತು ಪ್ರಯೋಗಾನಂತರ ಪ್ರಾಣಿಗಳ ವಿಲೇವಾರಿ (ಹಲವು ಸಂದರ್ಭಗಳಲ್ಲಿ ನೋವುರಹಿತ ದಯಾಮರಣ)ಯಂತಹ ವಿಷಯಗಳ ಬಗ್ಗೆ ತೀವ್ರ ಕಾಳಜಿ ವಹಿಸಲಾಗುತ್ತದೆ. ಅಲ್ಲದೆ, ಕೆಲವೊಮ್ಮೆ ಸಾಂಕ್ರಾಮಿಕ ರೋಗಗಳನ್ನು ನಿಯಂತ್ರಿಸಲು ಬೇಕಾಗಿರುವ ಪ್ರತಿಜೀವಿಯನ್ನೊಳಗೊಂಡ ಔಷಧಗಳನ್ನು (ವ್ಯಾಕ್ಸಿನ್) ತಯಾರಿಸಲು ಘಾತಕ (ಮಾನವರಿಗೂ ಹಾಗೂ ಪ್ರಯೋಗ ಪಶುಗಳಿಗೂ ಸಹ) ರೋಗಾಣುಗಳನ್ನು ಉಪಯೋಗಿಸುತ್ತಾರೆ. ಇದಲ್ಲದೆ ವ್ಯಾಸಂಗದ ಅವಶ್ಯಕತೆಗಳನ್ನನುಸರಿಸಿ ಹಲವು ವಿಕಿರಣಶೀಲ ವಸ್ತುಗಳು, ರಾಸಾಯನಿಕಗಳು ಹಾಗೂ ಮರುಸಂಯೋಜಿತ ಜೀವಕೋಶಗಳನ್ನು ಪ್ರಯೋಗದ ಸಲುವಾಗಿ ಪ್ರಾಣಿಗಳ ಮೇಲೆ ಉಪಯೋಗಿಸ ಲಾಗುತ್ತದೆ. ಇಂತಹ ಸಂದರ್ಭಗಳಲ್ಲಿ ಆ ಪ್ರಯೋಗವು 'ಸಾಂಸ್ಥಿಕ ಜೈವಿಕ ಸುರಕ್ಷಾ ಸಮಿತಿ'ಯ ಅನುಮೋದನೆ ಕಡ್ಡಾಯವಾಗಿ ಪಡೆದಿರಬೇಕು. ಈ ರೀತಿಯ ವಿವರಗಳನ್ನು ವಿಜ್ಞಾನಿಗಳು ವಿವಿಧ ಖಾಲಿ ದಸ್ತಾವೇಜು (ಫಾರಂ)ಗಳಲ್ಲಿ ತುಂಬಿ ಮುಂಚಿತವಾಗಿಯೇ ನೀಡಬೇಕಾಗುತ್ತದೆ. ಇವೆಲ್ಲಾ ವಿವರಗಳನ್ನು ಪರಿಶೀಲಿಸಿದ ನಂತರ ಅಂತಿಮವಾಗಿ ಅನುಮೋದನೆಗೊಂಡ ವ್ಯಾಸಂಗದ ಸಂಶೋಧನೆಯ ವಿವರಗಳನ್ನು ಮುಖ್ಯ ನಾಮ ನಿರ್ದೇಶಿತರ ಸಹಿಯೊಂದಿಗೆ ಸಿ.ಪಿ.ಸಿ.ಎಸ್.ಇ.ಎ. ಕೇಂದ್ರ ಕಛೇರಿಗೆ ಆಯಾ ಸಂಸ್ಥೆಯ/ವಿದ್ಯಾಲಯದ ಮುಖಾಂತರ ರವಾನಿಸಲಾಗುವುದು.

ಮೇಲೆ ತಿಳಿಸಿರುವಂತಹ ಕಟ್ಟುನಿಟ್ಟಿನ ನಿಯಮಗಳ ಪಾಲನೆಯಿಂದ ಸಾಧ್ಯವಾದಷ್ಟೂ ಪ್ರಯೋಗಾಲಯದ ಪ್ರಾಣಿಗಳಿಗೆ ವಿನಾಕಾರಣ ಉಂಟಾಗುವ ನೋವು, ವೇದನೆ ಹಾಗೂ ಹಾನಿಗಳನ್ನು ತಡೆಗಟ್ಟಬಹುದು. ಪ್ರಯೋಗಶಾಲೆಗಳಲ್ಲಿ ಸಾಮಾನ್ಯವಾಗಿ ಇಲಿ (ರ್‍ಯಾಟ್), ಮನೆ ಇಲಿ (ಮೌಸ್), ಗಿನಿ ಇಲಿ (ಗಿನಿ ಪಿಗ್), ಬೆಕ್ಕು, ಬೀಗಲ್ ನಾಯಿ (ಒಂದು ಜಾತಿಯ ಬ್ರಿಟನ್ನಿನ ನಾಯಿ), ಕೋತಿ, ಮೊಲ ಹಾಗೂ ಹೆಗ್ಗಣದಂತಹ ದಂಶಕ (ಹ್ಯಾಮಸ್ಟರ್)ಗಳನ್ನು ಪ್ರಯೋಗಕ್ಕಾಗಿ ಉಪಯೋಗಿ ಸಲ್ಪಡುತ್ತವೆ. ಇವುಗಳ ಶಾರೀರಿಕ ರಚನೆ ಹಾಗೂ ಶಾರೀರಿಕ ಕ್ರಿಯೆಗಳು ಬಹುಪಾಲು ಮಾನವರನ್ನು ಹೋಲುವುದರಿಂದ ಇವುಗಳನ್ನು ಪ್ರಯೋಗಗಳಲ್ಲಿ ಹೆಚ್ಚು ಉಪಯೋಗಿ ಸುತ್ತಾರೆ. ಇವಲ್ಲದೆ ಹಸು, ಎಮ್ಮೆ, ಕುರಿ ಹಾಗೂ ಕೋಳಿಗಳಂತಹ ಪ್ರಾಣಿಗಳ ಮೇಲೆಯೂ ಪ್ರಯೋಗ ನಡೆಸಲಾಗುತ್ತದೆ. ಒಟ್ಟಾರೆ ಮಾನವನ ಕಲ್ಯಾಣಕ್ಕಾಗಿ ತಮ್ಮ ಜೀವವನ್ನೇ ನೀಡುವ ಈ ಪ್ರಾಣಿಸಮೂಹದ ಬಗ್ಗೆ ಪ್ರಯೋಗ ನಡೆಸುವಾಗ ಮಾನವೀಯ ನಡವಳಿಕೆ ಹಾಗೂ ಕರುಣೆ ಸದಾ ಇರಲೆಂದು ಹಾರೈಸೋಣ.

**ಡಿ. ಆರ್. ಪ್ರಹ್ಲಾದ**
ನಂ. ೮೨/೧, ಪಶ್ಚಿಮ ಉದ್ಯಾನವನ ರಸ್ತೆ, ೧೮ನೇ ಅಡ್ಡರಸ್ತೆ, ಮಲ್ಲೇಶ್ವರ, ಬೆಂಗಳೂರು - ೫೬೦ ೦೫೫

# ಕೊನೆಯಿಲ್ಲದ ಬಿಕ್ಕಟ್ಟಿನ ಸರಮಾಲೆ– ಜಾಗತಿಕ ಬಂಡವಾಳ ವ್ಯವಸ್ಥೆಗೆ ಏನಾಗಿದೆ ?

**ಕೆ. ಎಸ್. ಪಾರ್ಥಸಾರಥಿ**



೨೦೦೭-೦೮ರ ಜಾಗತಿಕ ಆರ್ಥಿಕ ಬಿಕ್ಕಟ್ಟು ಈ ವ್ಯವಸ್ಥೆಗೆ ಹೊಸದೇನೂ ಅಲ್ಲ. ಈ ಹಿಂದೆಯೂ ಹಲವು ಹತ್ತು ಬಾರಿ ಇಂಥದೇ ಮತ್ತು ಇದಕ್ಕೂ ತೀವ್ರವಾದ ಬಿಕ್ಕಟ್ಟುಗಳು ಉಂಟಾಗಿವೆ. ಇದು ನಮ್ಮ ಸಮಕಾಲೀನವಾದದ್ದು ಅಷ್ಟೆ. ಕಾರಣ ಈ ವ್ಯವಸ್ಥೆಯಲ್ಲಿ ಬಿಕ್ಕಟ್ಟುಗಳೂ ಒಂದು ಬಂಡವಾಳ. ಇಂಥ ಬಿಕ್ಕಟ್ಟುಗಳು ಉಂಟಾಗುವುದು ಸಹಜ; ಅದಕ್ಕೆ ವ್ಯವಸ್ಥೆಯದೆ ಕೆಲವು ತಪ್ಪು-ಒಪ್ಪುಗಳು ಕಾರಣ ಅಂತ ಇದರ ನಿರ್ದೇಶಕ ಅಧಿಕಾರ ಕೇಂದ್ರಕ್ಕೆ ಮುಂಚಿತವಾಗಿಯೇ ಅರಿವಿದೆ. ಅವು ಅನಿವಾರ್ಯವೆಂದು ಅದು ನಂಬುತ್ತದೆ. ಆದ್ದರಿಂದ ಅದಕ್ಕೆ ವಾಸ್ತವದಲ್ಲಿ ಗಾಬರಿಯೂ, ಆತಂಕವೂ ಇಲ್ಲ. ರಾಜಕೀಯ, ಸಾಮಾಜಿಕ ಕಾರಣಗಳಿಂದಾಗಿ ಆತಂಕ ಗೊಂಡಂತೆ, ಅದನ್ನು ಪರಿಹರಿಸಲು ತಾವು ಕಂಕಣಬದ್ಧ ಭಂಟರೆಂದು ಒಂದಿಷ್ಟು ನಾಟಕವಾಡುತ್ತದೆ. ತನ್ನ ವ್ಯವಸ್ಥೆ ಉಳಿಸಿಕೊಳ್ಳಲು, ಅಗತ್ಯಬಿದ್ದರೆ ಅದು ಸರ್ವಾಧಿಕಾರಿಯಾಗಬಲ್ಲದು. ಅದನ್ನೂ ಪ್ರಜಾಪ್ರಭುತ್ವದ ರಕ್ಷಣೆಗೇ ಎಂದು ಸಾರುತ್ತದೆ. ಇಟಲಿಯಲ್ಲಿ, ಗ್ರೀಸ್‌ನಲ್ಲಿ, ಸ್ಪೆಯಿನ್ ದೇಶದಲ್ಲಿ, ಪೋರ್ತುಗಲ್‌ನಲ್ಲಿ, ಈಗ ಇರುವುದು ಅಣಕು ಪ್ರಜಾಪ್ರಭುತ್ವ, ವಾಸ್ತವ ಸರ್ವಾಧಿಕಾರ. ಪೊಲೀಸರು ಬೀದಿಗಿಳಿದಿದ್ದಾರೆ. ಗೋಲಿಬಾರುಗಳು ನಡೆಯುತ್ತಿವೆ. ಈ ವ್ಯವಸ್ಥೆಯೊಳಗೇ ಸಮಾಜವಾದೀಯ ಪರಿಹಾರ ಕಂಡುಕೊಳ್ಳುವುದು ಅಸಾಧ್ಯ ಅನ್ನುವುದನ್ನು ಫ್ರಾನ್ಸ್ ದೇಶದ ಸಮಾಜವಾದೀ ಎಂದು ಹೇಳಿಕೊಳ್ಳುವ ಅಧ್ಯಕ್ಷ, ವ್ಯವಸ್ಥೆಯ ಆಣತಿಯಂತೆ ಆರ್ಥಿಕ ಸುಧಾರಣೆಗಳನ್ನು ಕೈಗೊಳ್ಳುತ್ತಿರುವುದು ಸ್ಪಷ್ಟಪಡಿಸುತ್ತದೆ. ವ್ಯವಸ್ಥೆಯನ್ನು ಬದಲಾಯಿಸುವುದಿಲ್ಲ ಎಂದು ಪ್ರಮಾಣ ಮಾಡದೆ ಅವನು ಅಧ್ಯಕ್ಷನಾಗಲಾರ.

೧೯೯೦ರಲ್ಲಿ ನಮ್ಮ ದೇಶ ಆರ್ಥಿಕ ಸುಧಾರಣೆಯ ಮುಸುಕಿನಲ್ಲಿ ಸಂಪೂರ್ಣ ಬಂಡವಾಳ ವ್ಯವಸ್ಥೆಯನ್ನು ಅಪ್ಪಿಕೊಂಡಾಗ, ಅದೇನೂ ಭಾರತಕ್ಕೇ ವಿಶಿಷ್ಟವಾದ ಹೆಜ್ಜೆಯಾಗಿರಲಿಲ್ಲ. ಜಗತ್ತಿನ ಬಲಿಷ್ಠ ರಾಷ್ಟ್ರಗಳು -ಅಂದಿನ ಜಿ-೫ ರಾಷ್ಟ್ರಗಳು ಕಲೆತು ಚಿಂತಿಸಿದವು. ತಮ್ಮದೇ ೮೦ರ ದಶಕದ ಆರ್ಥಿಕ ಬಿಕ್ಕಟ್ಟಿನಿಂದ ಹೊರಬರಲು ಮಾರ್ಗವೆಂದರೆ ಜಗತ್ತಿನ ಇತರ ರಾಷ್ಟ್ರಗಳನ್ನು ತಮ್ಮದೇ ವ್ಯವಸ್ಥೆಗೆ ಸೇರಿಸಿಕೊಳ್ಳುವುದು ಒಂದು ಪರಿಹಾರವಾಗಿ ತೋರಿತು, ಅವರಿಗೆ. ಆಗಷ್ಟೆ ಕಮ್ಯುನಿಸ್ಟ್ ರಷ್ಯಾದ ವ್ಯವಸ್ಥೆ ಕುಸಿದಿತ್ತು. ಚೀನ ಇನ್ನೂ ಪ್ರಬಲವಾಗಿರಲಿಲ್ಲ. ಕಿಸಿಂಗರ್-ನಿಕ್ಸನ್ ಗುಟ್ಟಾಗಿ ನಡೆಸಿದ ರಾಯಭಾರ, ಚೀನವನ್ನು ೧೯೭೮ರಿಂದಲೇ ಬಂಡವಳಿಗ ಮಾರ್ಗಕ್ಕೆ ಸೆಳೆದುಕೊಂಡಿತ್ತು. ಹೂಡಿಕೆಯ ಅಂತರರಾಷ್ಟ್ರೀಯ ಅವಕಾಶಗಳಿಗಾಗಿ ತವಕಿಸುತ್ತಿದ್ದ, ಸಂಚಿತ ಬಂಡವಾಳಕ್ಕೆ 'ಅಭಿವೃದ್ಧಿಶೀಲ' ವ್ಯವಸ್ಥೆಗಳಲ್ಲಿ ಮುಕ್ತ ಪ್ರವೇಶ ಬೇಕಿತ್ತು. ಈ ಯೋಜನೆಗೆ ಅವರನ್ನೆಲ್ಲಾ ಸೆಳೆದುಕೊಳ್ಳುವ ತಂತ್ರ ರಚಿಸಿದರು. ಆಗಲೇ 'ಜಾಗತೀಕರಣ'ವೆಂಬ ಶಬ್ದ ಉದಿಸಿದ್ದು. ಈ ಎಲ್ಲ ದೇಶಗಳ ಆರ್ಥಿಕ ತಜ್ಞರಲ್ಲಿ ಪ್ರಭಾವಿಗಳನ್ನು ಒಮ್ಮೆ ಪ್ಯಾರಿಸ್ಸಿನಲ್ಲಿ, ನಂತರ ವಾಷಿಂಗ್‌ಟನ್‌ನಲ್ಲಿ ಸೇರಿಸಿ, ಚರ್ಚಿಸಲಾಯ್ತು. ವಾಷಿಂಗ್‌ಟನ್ ಕಾನ್ಸನ್ಸಸ್ (ಅಂದರೆ ಒಮ್ಮತ ಅಭಿಪ್ರಾಯ) ಅನ್ನುವ ಮಂತ್ರವೂ ಆಗಲೇ ರಚನೆಯಾದದ್ದು. ಅದನ್ನು ಮೊದಲಿಗೆ ದಕ್ಷಿಣ ಅಮೆರಿಕದ ಸರ್ವಾಧಿಕಾರೀ ಹಾಗೂ ಪಶ್ಚಿಮದ ಅಧೀನ ರಾಷ್ಟ್ರಗಳಲ್ಲಿ ಒತ್ತಾಯಿಸಿ ಪ್ರಯೋಗಿಸಲಾಯ್ತು. ಚೀನದಲ್ಲಿ ಅಂತರರಾಷ್ಟ್ರೀಯ ಬಂಡವಾಳ ಅಗಾಧ ಪ್ರಮಾಣದಲ್ಲಿ ಮುಕ್ತಪ್ರವೇಶ ಪಡೆಯಿತು.

ಮನಮೋಹನ ಸಿಂಗರ ನಾಯಕತ್ವದ ನಮ್ಮದೇ ಪ್ರಭಾವಿ ಅರ್ಥಶಾಸ್ತ್ರಿಗಳು, ಉದ್ಯಮಿಗಳ ಬೆಂಬಲದೊಂದಿಗೆ, ಅವೇ ಮಾರ್ಗವನ್ನು ಅನುಸರಿಸುವ ಪ್ರಚಂಡ ಒತ್ತಾಯವನ್ನು ನಮ್ಮ ಆಳುವ ವರ್ಗದ ಮೇಲೆ ತರಲು ಸಮರ್ಥವಾಯ್ತು. ದುರಂತವೆಂದರೆ ಆಗ್ಗಾಗಲೇ ದಕ್ಷಿಣ ಅಮೆರಿಕದಲ್ಲಿ ಈ ಕಾನ್ಸೆನ್ಸಸ್ ಅರ್ಥಶಾಸ್ತ್ರಿಗಳ ನೀತಿಗಳು ದಕ್ಷಿಣ ಅಮೆರಿಕದಲ್ಲಿ ಸಂಪೂರ್ಣ ವಿಫಲವಾಗಿದ್ದರೂ, ಅದನ್ನು ನಿರ್ಲಕ್ಷಿಸಿ ಅವೇ ನೀತಿಗಳನ್ನು ನಮ್ಮ ಮೇಲೆ ಹೇರಲಾಯ್ತು. ಇಂದಿಗೂ ನಮ್ಮ ಅಧಿಕಾರವನ್ನು ನಿಯಂತ್ರಿಸುತ್ತಿರುವ ಅಮೆರಿಕ, ಐಎಂಎಫ್, ವರ್ಲ್ಡ್ ಬ್ಯಾಂಕ್‌ಗಳಲ್ಲಿ ತರಪೇತಿ ಪಡೆದ ಅರ್ಥಶಾಸ್ತ್ರಗಳೇ ನಮ್ಮನ್ನು ಆಳುತ್ತಿರುವುದು.



ಭಾರತ ಬಂಡವಾಳಶಾಹೀ ವಿಕಾಸದ ಹಾದಿ ಹಿಡಿದಿದ್ದು ಜಾಗತಿಕ ಬೆಳವಣಿಗೆಯ ಅಂಗವಾಗಿ ಎನ್ನುವುದು ಮುಖ್ಯ ವಿಷಯ. ಅದನ್ನು ಸಮರ್ಥಿಸಿಕೊಳ್ಳಲು ಬೇಕಾದ ಹಿನ್ನೆಲೆ, ಆರ್ಥಿಕ ಯೋಜನೆಗಳನ್ನು ಉದ್ದೇಶಪೂರ್ವಕವಾಗಿ ಸರಿಯಾಗಿ ಪ್ರಯೋಗಿಸದೆ, ಕೆಡಿಸಿ, ಅದಕ್ಕೆ ಕಾರಣ ಆ ಮಾರ್ಗವೇ ಸರಿಯಲ್ಲ ಎಂದು ಹೇಳಬಲ್ಲ ಪರಿಸ್ಥಿತಿಯನ್ನು ಉಂಟುಮಾಡಲಾಗಿತ್ತು. ದೇಶದ ಮುಖ್ಯ ರಾಜಕೀಯ ಪಕ್ಷಗಳಲ್ಲಿ – ಅಂದರೆ ಬೂರ್ಷ್ವಾ ಪಕ್ಷಗಳಲ್ಲಿ ಬಂಡವಾಳ ನೀತಿಯ ಈ ಮಾರ್ಗದ ಬಗ್ಗೆ ಒಮ್ಮತವಿದ್ದುದ್ದರಿಂದ ಇದು ಸಾಧ್ಯವಾಯ್ತು. ಇದು ಜನತೆಗೆ ಒಪ್ಪಿಗೆಯಾಗಲಿಲ್ಲವೆಂಬುದು ನಮ್ಮ ಪ್ರಜಾಪ್ರಭುತ್ವದಲ್ಲಿ ಯಾವ ಪಕ್ಷಕ್ಕೂ ಬಹುಮತವಿಲ್ಲದ ಅಸ್ಥಿರತೆಯಾಗಿ ಪರಿಣಮಿಸಿದೆ. ಈ ಅಸ್ಥಿರತೆ ಸಾಮಾಜಿಕ ಬೆಳವಣಿಗೆ, ಶಿಕ್ಷಣ, ಆರೋಗ್ಯಕ್ಷೇತ್ರಗಳನ್ನು ಸೊರಗಿಸಿದೆ; ಆದರೆ ಅದರಿಂದ ಬಂಡವಾಳ ನೀತಿಯ ಅನುಷ್ಠಾನಕ್ಕೆ ಯಾವುದೇ ಅಡಚಣೆಯಾಗಿಲ್ಲ. ಲೋಕಸಭೆ ನಡೆಯದಿದ್ದರೆ ಏನು, ಎರಡು ಸಮಾವೇಶಗಳ ನಡುವೆ, ಆರ್ಥಿಕ ಸುಧಾರಣೆಯ ನೀತಿಗಳನ್ನು; ಅವು ದೇಶಕ್ಕೆ ಹಿತಕರವಲ್ಲ ಎಂದು ತಿಳಿದವರೆಲ್ಲ ಹೇಳಿದರೂ, ಜಾರಿಗೊಳಿಸುವುದು ನಡೆದಿದೆ. ಆದ್ದರಿಂದ ಈ ಮಾರ್ಗದ ವಿಮರ್ಶೆಯನ್ನು ಮಾಡಿ, ಇದು ನಮ್ಮನ್ನು ಎಲ್ಲಿಗೆ ಒಯ್ಯಲಿದೆ ಎಂದು ತಿಳಿಯುವುದು ಅಗತ್ಯವಾಗಿದೆ. ಏನಾಗಿದೆ ಬಂಡವಾಳ ವ್ಯವಸ್ಥೆಗೆ? ಈ ಬಿಕ್ಕಟ್ಟುಗಳು ಎಂದಾದರೂ ಕೊನೆಗೊಳ್ಳುವುದು ಸಾಧ್ಯವೆ? ಪುನಃ ಪುನಃ ಮರುಕಳಿಸುವ ಈ ಬಿಕ್ಕಟ್ಟುಗಳ ನಡುವೆಯೂ ಸಾಧಾರಣ ಜನತೆಯ ಕ್ಷೇಮಾಭಿವೃದ್ಧಿ ಒಂದಿಷ್ಟು ಸಾಧ್ಯವೆ? ಇದಕ್ಕೆಲ್ಲ ಪರಿಹಾರ ಬಂಡವಾಳ ವ್ಯವಸ್ಥೆಯನ್ನು ಕಿತ್ತೊಗೆಯುವುದು, ಸಮಾಜವಾದ ಜಾರಿಗೆ ತರುವುದು ಎನ್ನುವ ಚರ್ಚೆಯೇ ಬೇರೆ. ಸದ್ಯದ ಚರ್ಚೆ ಎಂದರೆ ಈ ನೀತಿಗಳೇ ಸರಿ ಎನ್ನುವವರ ವಾದದಲ್ಲಿ ತಥ್ಯಾಂಶ ಎಷ್ಟು ಎಂದು ಪರಿಶೀಲಿಸುವುದು. ಈ ಕುರಿತ ಭ್ರಮೆ ಜನಸಾಮಾನ್ಯರಲ್ಲಿ ನೀಗದೆ ಬದಲಾವಣೆಯ ಕ್ರಮಕ್ಕೆ ಅವರ ಒಪ್ಪಿಗೆ ದೊರಕುವುದಿಲ್ಲ.

ಬಂಡವಾಳ ವ್ಯವಸ್ಥೆ ಆರಂಭವಾದಂದಿನಿಂದ ಅದು ಎಂದೂ ಬಿಕ್ಕಟ್ಟಿನಿಂದ ಮುಕ್ತವಾಗಿಲ್ಲ. ಅದರ ಆರಂಭವಾಗಿ ೪೦೦ ವರ್ಷಗಳಾಯ್ತು ಎನ್ನುವವರಿದ್ದಾರೆ. ಕೈಗಾರಿಕಾ ಕ್ರಾಂತಿಯ ಸಮಯದಿಂದ ಪರಿಗಣಿಸಿದರೂ, ಸುಮಾರು ೨೫೦ ವರ್ಷಗಳಲ್ಲಿ, ಅದು ಸುಮಾರು ಮೂವತ್ತು ಬಾರಿಯಾದರೂ ಇಂದು ಅನುಭವಿಸುತ್ತಿರುವ ಮಟ್ಟದ ಬಿಕ್ಕಟ್ಟನ್ನು ಅನುಭವಿಸಿದೆ. ಈ ವ್ಯವಸ್ಥೆಯನ್ನು ಸಮರ್ಥಿಸುವ ಅರ್ಥಶಾಸ್ತ್ರಗಳು ಕೆಲವು ದಶಕಗಳ ಹಿಂದಿನವರೆಗೂ, ಈ ಏರುಪೇರುಗಳನ್ನು 'ವಾಣಿಜ್ಯ ವರ್ತುಲ'ವೆಂಬ ಹೆಸರಿನಲ್ಲಿ ಸಮರ್ಥಿಸಿಕೊಳ್ಳುತ್ತಿದ್ದವು. ಅಂದರೆ ಆರ್ಥಿಕತೆಯ ವಿಕಾಸದ ನಿರಂತರ ಏರಿಕೆಯನ್ನು ನಿರೀಕ್ಷಿಸಲಾಗದು. ಆಗಾಗ್ಗೆ ಇಳಿಮುಖ ಬಂದು ಅದು ವ್ಯವಸ್ಥೆಯ ಮೂಲದ ತಗ್ಗು-ಮುಗ್ಗುಗಳನ್ನು ಸರಿಪಡಿಸಲು ಅಗತ್ಯ ಎನ್ನುತ್ತಿದ್ದರು. ಇತ್ತೀಚೆಗೆ ಈ

ವಾದದ ಸೊಲ್ಲಡಗಿ, ನಿರಂತರ ಜಿಡಿಪಿಯ ಏರಿಕೆಯ ಮಾತು ಕೇಳಿಬರುತ್ತಿದೆ. ಇತ್ತೀಚಿನ ಇತಿಹಾಸದ ವಿಷಯವೆಂದರೆ ೧೮೭೩ರಲ್ಲಿ ಜಾಗತಿಕವಾಗಿ ಉಂಟಾದ ಆರ್ಥಿಕ ಕುಸಿತ, ಷೇರುಪೇಟೆಯ ತಲ್ಲಣ; ತದನಂತರ ೧೯೩೦ರ ದಶಕದ ಗ್ರೇಟ್ ಡಿಪ್ರೆಷನ್ - ತೀವ್ರ ಕುಸಿತ. ತದನಂತರ ಈಗಷ್ಟೆ ಉಂಟಾಗಿರುವ ೨೦೦೭-೦೮ರ ತೀವ್ರ ಕುಸಿತ. ಈ ಮೂರೂ ಸಂದರ್ಭಗಳನ್ನು ಅವುಗಳ ಮಧ್ಯಕಾಲೀನ ಸಣ್ಣಪುಟ್ಟ ಏರುಪೇರುಗಳನ್ನು ಗಮನಿಸಿ, ಅಭ್ಯಸಿಸಿದರೆ ಬಂಡವಾಳ ವ್ಯವಸ್ಥೆಯ ಆಂತರ್ಯ ಹೇಗೆ ಕೆಲಸ ಮಾಡುತ್ತದೆ ಎಂದು ತಿಳಿಯಬಹುದು.

ಅಮೆರಿಕದ ಪ್ರಸಿದ್ಧ ಅರ್ಥಶಾಸ್ತ್ರಿ ಪಾಲ್ ಕ್ರೂಮನ್ ಹೀಗೆ ಹೇಳುತ್ತಾರೆ: ೧೮೭೩ರಿಂದ ಇಲ್ಲಿಯವರೆಗಿನ ಬೆಳವಣಿಗೆಯಲ್ಲಿ ಕಂಡುಬರುವುದು ಕೇವಲ ಋಣಾತ್ಮಕ ಆರ್ಥಿಕ ಅಭಿವೃದ್ಧಿಯಲ್ಲ; ಒಮ್ಮೆ ಬಿಕ್ಕಟ್ಟು ಉಂಟಾಗಿ, ಪುನಃ ಚೇತರಿಕೆ ಆರಂಭವಾದಾಗ, ಆ ಅಭಿವೃದ್ಧಿಯ ಹೊಸ ದರ ಹಿಂದಿಗಿಂತ ತೀವ್ರ ಕಡಿಮೆಯ ದರವಾಗಿರುವುದು ಮುಖ್ಯ ವಿಷಯ. ಅಂದರೆ ಬಿಕ್ಕಟ್ಟಿನಿಂದ ಉಂಟಾದ ಆಘಾತವನ್ನು ಸರಿಪಡಿಸಲು ಅಗತ್ಯವಾದಷ್ಟು ಹೆಚ್ಚಿನ ವೇಗದಲ್ಲಿ ದರದ ಅಭಿವೃದ್ಧಿಯಾಗದೇ ಹೋಗಿ, ಅದು ಆರ್ಥಿಕತೆಗೆ ಶಾಶ್ವತ ಪೆಟ್ಟಾಗಿ ಪರಿವರ್ತನೆಯಾಗುತ್ತದೆ. ಆದ ಆಘಾತ ಹಲವು ದಶಕಗಳ ಮೂಲಕ ಹಾಯ್ದು, ಮತ್ತೊಂದು ಬಿಕ್ಕಟ್ಟು, ಮಾರಣಾತ್ಮಕ ಆಘಾತ, ಪುನಃ ಚೇತರಿಕೆಗೆ ಹವಣು ಹೀಗೆ ಮುಂದುವರಿಯುತ್ತ ಬಂದಿದೆ. ಈ ಚರ್ಚೆಯಲ್ಲಿ ಗಮನಿಸಬೇಕಾದುದು ಎಂದರೆ ಆರ್ಥಿಕ ಪ್ರಗತಿಯ ದರ, ಒಟ್ಟಾರೆ ವಿಕಾಸದ ವಿಷಯವಲ್ಲ, ಈ ಶತಮಾನದಲ್ಲಿ ಜಾಗತಿಕವಾಗಿ ಹಲವಾರು ಅದ್ಭುತ ಆರ್ಥಿಕ ಬೆಳವಣಿಗೆಗಳು ಆಗಿವೆ, ಆರ್ಥಿಕತೆಯ ಪ್ರಮಾಣ ಅಪಾರವಾಗಿ ಹಿಗ್ಗಿದೆ. ಆದರೆ ಪ್ರಗತಿಯ ದರ ಸರಾಸರಿಯಲ್ಲಿ ಕುಸಿಯುತ್ತಾ ಬಂದಿದೆ. ಈ ಕಾರಣ ಪದೇ ಪದೇ ಬಿಕ್ಕಟ್ಟು ಉಂಟುಮಾಡುತ್ತಲೇ ಇರುತ್ತವೆ. ಕುಸಿತಗಳು ಸರ್ವೇಸಾಮಾನ್ಯವೆಂಬಂತೆ ಮರುಕಳಿಸುತ್ತಿರುತ್ತವೆ.

ಅಮೆರಿಕದ ಅರ್ಥಶಾಸ್ತ್ರ ಸಂಘದ ಅಧ್ಯಕ್ಷ ರಾಬರ್ಟ್ ಇ. ಹಾಲ್ ಹೇಳುತ್ತಾರೆ: ಇದು ಬಹುಕಾಲೀನ ಕುಸಿತ-ಲಾಂಗ್ ಸ್ಲಂಪ್ – ಬಿಕ್ಕಟ್ಟು ಉಂಟಾದಾಗ ಅಪಾರ ನಿರುದ್ಯೋಗ ಉಂಟಾಗುತ್ತದೆ. ನಂತರ ಕ್ರಮ ಕ್ರಮೇಣ, ಲಘು ದರದಲ್ಲಿ ಕಡಿಮೆ ವೇತನದ ಉದ್ಯೋಗ ಸೃಷ್ಟಿಯಾಗುತ್ತಾ ಹೋಗುತ್ತದೆ. ಮೂವತ್ತರ ದಶಕದ ಕುಸಿತವಾದನಂತರ, ಈ ನಿರುದ್ಯೋಗದ ದುರಸ್ತಿ ಸಂಪೂರ್ಣ ಸಮರ್ಪಕವಾಗಲು ಎಂದಿನ ಆರ್ಥಿಕ ವಿಕಾಸದಿಂದ ಸಾಧ್ಯವಾಗಲೇ ಇಲ್ಲ ಅದು ಸ್ವಲ್ಪ ಸಾಧ್ಯವಾದದ್ದು ಎರಡನೆಯ ಮಹಾಯುದ್ಧ ಬಂದಿದ್ದರಿಂದ ಎನ್ನುತ್ತಾರೆ. ೧೮೭೩ರ ಕುಸಿತದ ನಂತರ ಮೊದಲನೆಯ ಮಹಾಯುದ್ಧ ಆರ್ಥಿಕತೆಯ ನೆರವಿಗೆ ಬಂತಾದರೂ, ಅದು ಸಾಧಿಸಿದ ಪ್ರಗತಿ ತಾತ್ಕಾಲಿಕವೆಂಬಂತೆ, ೧೯೩೦ರಲ್ಲಿ ಮತ್ತೊಂದು ಬಿಕ್ಕಟ್ಟು ಮರುಕಳಿಸಿತು. ಮತ್ತೆ ಅದೇ ರಾಗ. ಅದು ರಿಪೇರಿ ಆಗಲು ಎರಡನೆಯ ಮಹಾಯುದ್ಧ ಬಂತು. ಬಹುಶಃ ತದನಂತರ ಈ ವ್ಯವಸ್ಥೆಯ ರಿಪೇರಿಗೆ ಸಾಕಾಗುವಷ್ಟು ಪ್ರಮಾಣದ ಮಹಾಯುದ್ಧ ಬರದೆ, ಜಾಗತಿಕವಾಗಿ ಬಂಡವಾಳ ವ್ಯವಸ್ಥೆ ನಿರಂತರ ಸಣ್ಣ ಸಣ್ಣ ಬಿಕ್ಕಟ್ಟುಗಳನ್ನು ಸೃಷ್ಟಿಸುತ್ತಿದೆ, ಎಂಬತ್ತರ ದಶಕದಲ್ಲಿ ಪಕ್ವವಾಗಿ, ಈಗ ಮತ್ತೊಮ್ಮೆ ತೀವ್ರ ಬಿಕ್ಕಟ್ಟಾಗಿದೆ.

ನಮ್ಮ ರಿಸರ್ವ್ ಬ್ಯಾಂಕ್ ಗವರ್ನರ್‌ಗೆ ಸಮಾನವೆನ್ನಬಹುದಾದ ಅಮೆರಿಕದ ಫೆಡ್ ರಿಸರ್ವ್‌ನ ಬರ್ನಾಕೆ ಹೇಳುತ್ತಾರೆ: ''ಪುನಃ ಚೇತನ ನಿಧಾನವೇ ಆದರೂ ಇದು ದೀರ್ಘಕಾಲೀನವಾಗಬೇಕಾಗಿಲ್ಲ ಅಂದರೆ ಸರ್ಕಾರ ಅದಕ್ಕೆ ಕೆಲವು ನೀತಿಗಳನ್ನು ನಿರೂಪಿಸಿ, ತಕ್ಕ ಹೆಜ್ಜೆ ಹಾಕಿದರೆ...'' ಆದರೆ ಆ ಹೆಜ್ಜೆಗಳ್ಯಾವುವು ಅಂತ ಅವರು ಹೇಳಲಿಲ್ಲ - ಕಾರಣ ಬಹುಶಃ ಅವರಿಗೂ ತಿಳಿಯದು. ಆದರೆ ಐಎಂಫ್ – ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ಮುಖ್ಯಸ್ಥೆ ಅರ್ಥಶಾಸ್ತ್ರಜ್ಞೆ ಕ್ರಿಶ್ಚಿನೆ ಲಗಾರ್ಡೆ ಹೇಳುತ್ತಾರೆ: ಜಾಗತಿಕ ಅರ್ಥವ್ಯವಸ್ಥೆ ಈಗ ಬಹು ಅಪಾಯಕಾರಿ ಸ್ಥಿತಿ ತಲಪಿದೆ. ಆರ್ಥಿಕ ವಿಕಾಸದ ಗತಿ ನಿಧಾನವಾಗಿದೆ. ಅದು ರಕ್ತಹೀನತೆ ಮತ್ತು ಏಳುಬೀಳುಗಳ ಗತಿ. ಮೂರು ಮುಖ್ಯ ವ್ಯವಸ್ಥೆಗಳು - ಅಮೆರಿಕ, ಯೂರೋ ಒಕ್ಕೂಟ ಮತ್ತು ಜಪಾನು - ಅವುಗಳ ದುಸ್ಥಿತಿ ಬಂಡವಾಳ ವ್ಯವಸ್ಥೆಯ ಕೇಂದ್ರವನ್ನೇ ಹಾಳುಗೆಡವಿದೆ. ಒಂದು ಮುಖ್ಯ ವ್ಯತ್ಯಾಸವೆಂದರೆ ಈ ಹಿಂದೆ ಕೇವಲ ಆರ್ಥಿಕ ವ್ಯವಸ್ಥೆಯ ಕುಸಿತವಿತ್ತು. ಈಗ ಅದರೊಂದಿಗೆ ಹಣಕಾಸು ವ್ಯವಸ್ಥೆಯ ಪತನವೂ ಬೆಸೆದುಕೊಂಡಿದೆ. ಹೀಗಾಗಿ ಈ ಕುಸಿತ ಮತ್ತೊಂದು ಕುಸಿತದ ದಶಕವಾಗುತ್ತದೆ. ಚೀನ, ಭಾರತ, ಬ್ರೆಜಿಲ್ ಮುಂತಾದ ಅಭಿವೃದ್ಧಿಶೀಲರ ಕೊಡುಗೆ ಜಾಗತಿಕ ಬಂಡವಳಿಗ ಅರ್ಥವ್ಯವಸ್ಥೆಯ ರಿಪೇರಿಗೆ ಸಾಲದಾಗಿದೆ. ಹಾಗೂ ಅವುಗಳ ಬೆಳವಣಿಗೆಯೂ ಬಹಳ ಕಾಲ ಹೀಗೆಯೆ ಮುಂದುವರಿಯುವುದು ಸಂದೇಹ ಎಂದಿದ್ದಾರೆ.

೧೯೬೦ರಿಂದ ಇಂದಿನವರೆಗಿನ ವಾಸ್ತವ ಆರ್ಥಿಕ ಬೆಳವಣಿಗೆಯ ದರವನ್ನು ಮೂರು ಮುಖ್ಯ ಅರ್ಥವ್ಯವಸ್ಥೆಗಳು ಅಮೆರಿಕ, ಯೂರೋ ಒಕ್ಕೂಟ ಮತ್ತು ಜಪಾನ್ - ಅಂಕಿ-ಅಂಶಗಳನ್ನು ಈ ಕೆಳಗಿನ ನಕ್ಷೆಯಲ್ಲಿ ನೀಡಲಾಗಿದೆ. ಇಲ್ಲಿಯ ಅಂಕಿ-ಅಂಶಗಳಿಗೆ ಆಧಾರ ಅಮೆರಿಕ ಸರ್ಕಾರಿ ದಾಖಲೆಗಳು, ಯೂರೋ ಒಕ್ಕೂಟ, ಜಪಾನ್ ಸರ್ಕಾರಗಳು ಮತ್ತು ವಿಶ್ವಬ್ಯಾಂಕಿನ ಮೂಲದ್ದು.

ಈ ನಕ್ಷೆ ತೋರಿಸುವುದು ಏನೆಂದರೆ, ೧೯೬೦ರಿಂದ ದಶಕದಿಂದ ದಶಕಕ್ಕೆ ಇವುಗಳ ಬೆಳವಣಿಗೆಯ ದರ ಅಪಾರವಾಗಿ ಕುಸಿಯುತ್ತಾ ಮುಂದುವರಿದಿರುವುದು. ಈ ಬೆಳವಣಿಗೆಯ ಕಾಲದಲ್ಲಿಯೇ ನೈಜ ಆರ್ಥಿಕತೆಯನ್ನು ಬಿಟ್ಟು, ಷೇರುಪೇಟೆಯ ಹಣಕಾಸು ಆರ್ಥಿಕತೆ, ಹಣವೇ ಸರಕೆಂಬಂತೆ, ಅರ್ಥಶಾಸ್ತ್ರವನ್ನು ಹೊಕ್ಕು ಪ್ರಭಾವ ಬೀರಲು ಪ್ರಾರಂಭಿಸಿ, ಅದರಿಂದ ಉಂಟಾದ ಆರ್ಥಿಕತೆಯ ತೀವ್ರ ಅಧಃಪತನ ೨೦೦೭-೦೮ರ ಷೇರುಪೇಟೆಯ ಕುಸಿತ; ಅದರ ಪರಿಣಾಮವಾದ ಆರ್ಥಿಕ ಕುಸಿತ ಉಂಟಾಗಿರುವುದು ಸ್ಪಷ್ಟ. ಷೇರುಪೇಟೆಯ ಊಹಾಪೋಹದ ಸಂಖ್ಯೆಗಳೂ ಜಿಡಿಪಿ ಲೆಕ್ಕಕ್ಕೆ ಪ್ರವೇಶಿಸಿ, ಪ್ರಗತಿಯಾಗುತ್ತಿರುವ ಸುಳ್ಳು ತೃಪ್ತಿ ನೀಡಿದ್ದೂ ಇದೇ ಕಾಲದಲ್ಲಿಯೇ ಸಂಪತ್ತಿನ ಅಪಾರ ಕೇಂದ್ರೀಕರಣವಾಗಿ, ಶೇ.೧ ವಿರುದ್ಧ ಶೇ. ೯೯ ಎನ್ನುವ ಚರ್ಚೆಗೂ ಅವಕಾಶ ನೀಡಿದ್ದು. ಇದೇ ಎರಡು ದಶಕಗಳಲ್ಲಿ ಮತ್ತೆ ಮತ್ತೆ ಹಣಕಾಸು ತಜ್ಞರಿಗೆ – ಅಂದರೆ ಷೇರುಪೇಟೆ ಹೇಗೆ ನಡೆಯುವುದು ಎನ್ನುವ ತಿಳಿವಿನ ಪಂಡಿತರಿಗೇ ಅರ್ಥಶಾಸ್ತ್ರದ ನೊಬೆಲ್ ಬಹುಮಾನಗಳೂ ಸಂದುದು. ಇದೇ ಕಾಲದಲ್ಲಿಯೇ ಉದ್ಯಮಗಳಿಗೆ ಬೆಲೆಕಟ್ಟುವ ರೇಟಿಂಗ್ ಏಜೆನ್ಸಿ ಎಂಬ ಹುಸಿ ಸಂಸ್ಥೆಗಳು ಹುಟ್ಟಿಕೊಂಡು, ಸರ್ಕಾರಗಳಲ್ಲಿ ಅವು ಸಲಹಾಕಾರರಾದದ್ದು ಮತ್ತು ಸರ್ಕಾರಗಳಿಗೂ ವಿಶ್ವಾಸಾರ್ಹರೆಂದು ಅವು ಅಂಕ ನೀಡಲಾರಂಭಿಸಿದ್ದು!




ಯಾವುದಾದರೂ ಒಂದು ಪರಿಸ್ಥಿತಿ ಅಥವಾ ಅಸ್ತಿತ್ವದಲ್ಲಿರುವ ವ್ಯವಸ್ಥೆಯ ಸ್ವರೂಪವನ್ನು ಅಭ್ಯಸಿಸಿ, ಅದನ್ನು ಅರ್ಥೈಸಬೇಕಾದರೆ, ಅಥವಾ ಅಲ್ಲಿಯ ಸಮಸ್ಯೆಗಳಿಗೆ ಪರಿಹಾರ ಸೂಚಿಸಬೇಕಾದರೆ ಅದರ ಐತಿಹಾಸಿಕ ಮೂಲಗಳನ್ನೂ ಪರಿಶೋಧಿಸಬೇಕು. ಹಾಗಲ್ಲದೆ ಇರುವ ಸ್ಥಿತಿಯನ್ನೇ ಸರಿ ಎಂದು ಸಮರ್ಥಿಸಲು ಅದಕ್ಕೆಂದೇ ಒಂದು ಪರ್ಯಾಪ್ತ ಮಾದರಿಯನ್ನು ಪ್ರಯೋಗಶಾಲೆಯಲ್ಲಿ, ಅಥವಾ

ಡ್ರಾಯಿಂಗ್ ಬೋರ್ಡಿನ ಮೇಲೆ ನಿರ್ಮಿಸಿ, ಜಾಣ್ಮೆಯನ್ನು ಮೆರೆಯಬಹುದು. ಎರಡನೆಯ ಮಾರ್ಗ ಕೆಲವು ಹಿತಾಸಕ್ತಿಗಳಿಗೆ ತಾತ್ಕಾಲಿಕವಾಗಿ ಲಾಭ ತಂದರೂ, ಪರಿಣಾಮದಲ್ಲಿ ವ್ಯವಸ್ಥೆಗೇ ಮೂಲ ಧಕ್ಕೆ ಉಂಟುಮಾಡುತ್ತದೆ. ಇಂದಿನ ಅರ್ಥಶಾಸ್ತ್ರಗಳೆಂಬ ಕೆಲ ಷೇರುಪೇಟೆಯ ಹಣಕಾಸು ಕ್ಷೇತ್ರದ ತಂತ್ರಗಾರಿಕೆಯವರು ಸಾಂಪ್ರದಾಯಿಕ ಅರ್ಥಶಾಸ್ತ್ರದ ''ಬಂಡವಾಳ ವ್ಯವಸ್ಥೆ'' ಎಂಬ ಪದವನ್ನೇ ಕೈಬಿಟ್ಟು, ಅದರ ಸ್ಥಾನದಲ್ಲಿ 'ಮಾರುಕಟ್ಟೆಯ ಅರ್ಥಶಾಸ್ತ್ರ' ಎಂಬ ಪದವನ್ನು ಬಳಸಲಾರಂಭಿಸಿದ್ದಾರೆ! ಈ ದೃಷ್ಟಿಕೋನವೇ ಇಂದಿನ ಬಿಕ್ಕಟ್ಟಿನ ಮೂಲ. ಹೀಗೆಂದು ಹೇಳಿದವರು ಅರ್ಥಶಾಸ್ತ್ರಜ್ಞ ಕೆನೆತ್ ಗ್ಯಾಲ್‌ಬ್ರೈತ್; ಅವರು ಹೇಳುತ್ತಾರೆ: ''ಇದೊಂದು ಅರ್ಥರಹಿತ ಪದ. ಅದೇ ಅವರಿಗೆ ಬೇಕಾಗಿದ್ದದ್ದು. ಈ ಕಲ್ಪನೆಯಲ್ಲಿ ಯಾವದೇ ಮಾನವೀಯ ವ್ಯಕ್ತಿಗಳು ಮತ್ತು ಅವರು ನಡೆಸುವ ಉದ್ಯಮಗಳಿಗೆ ಸ್ಥಾನವಿಲ್ಲ. ಜೀವಂತ ವ್ಯಕ್ತಿತ್ವವೇ ಇಲ್ಲದ ಕೇವಲ ಮಾರುಕಟ್ಟೆ – ಅಂದರೆ ಅಂಥ ಗುಟ್ಟೇನೂ ಇಲ್ಲದ ಮುಚ್ಚುಮರೆಯಿಲ್ಲದ ದಗಾಕೋರ ಪ್ರವೃತ್ತಿ.''

ಈ ಮಾರ್ಗ ಮಾರ್ಕ್ಸ್ ಮತ್ತು ಏಂಗಲ್ಸ್ ಅವರ ಮೂಲವಾದವನ್ನು ಕೈಬಿಟ್ಟಂತೆಯೇ, ''ಏಕಸ್ವಾಮ್ಯ ಬಂಡವಾಳ'' ಎನ್ನುವ ಪದವನ್ನೂ ಕೈಬಿಡುವ ಜಾಣತನ ತೋರಿದೆ ಎನ್ನುತ್ತಾರೆ ಅವರು. ಒಟ್ಟಾರೆ, ಅವರು, ಇಂದಿನ ಪರಿಸ್ಥಿತಿಗೆ ಕಾರಣ, ಈ ನವ ಶಾಸ್ತ್ರಗಳು ಸೃಷ್ಟಿಸಿದ ಮಾಡೆಲ್‌ಗಳು-ಮಾದರಿಗಳು, ಬಿಕ್ಕಟ್ಟಿಲ್ಲದ ಪರಿಸ್ಥಿತಿಗೆ ಒಗ್ಗುವಂಥವು, ಬರಲಿರುವ ಬಿಕ್ಕಟ್ಟನ್ನು ಹೊರಗೆಡಹುವುವಂಥವಲ್ಲ, ಅವನ್ನು ಮುಚ್ಚಿಡಲು ಎಂದು ಒಪ್ಪಿಕೊಂಡಿದ್ದಾರೆ. ಅಸಂಭವನೀಯ ಅಥವಾ ಮುಂದಾಗಿಯೇ ನೋಡಲಾರದ, ನಿರೀಕ್ಷಿಸಲಾರದ ಅಪರೂಪದ ಸಂದರ್ಭಗಳನ್ನೂ ಸಾಧ್ಯತೆಯನ್ನು ಅಭ್ಯಾಸ ಮಾಡದೆ, ಹವಾಮಾನ ತಜ್ಞ ಹೇಗೆ ತಾನೆ ನಮಗೆ ಉಪಯುಕ್ತವಾದ ವರದಿ ನೀಡಬಲ್ಲ?

ಮತ್ತೊಮ್ಮೆ ಜಾಗತಿಕ ಬಂಡವಾಳದ ಬೆಳವಣಿಗೆಯ ಇತ್ತೀಚಿನ ಕೆಲವು ಅಂಕಿ-ಅಂಶಗಳನ್ನು ಗಮನಿಸಿ. ಈ ಅಂಶಗಳಿಗೆ ಆಧಾರ ಈ ವರ್ಷದ ಐ.ಎಂ.ಎಫ್. ಮತ್ತು ವರ್ಲ್ಡ್ ಬ್ಯಾಂಕ್. ಈಗಾಗಲೇ ಅಭಿವೃದ್ಧಿಗೊಂಡವು ಎನ್ನಲಾಗುವ ರಾಷ್ಟ್ರಗಳು – ಅಮೆರಿಕ, ಜಪಾನ್, ಯೂರೋ, ಯುಕೆ ಮುಂತಾದುವು – ಇವುಗಳ ಉತ್ಪಾದನಾ ವಿಕಾಸದ ದರ ಕಳೆದ ವರ್ಷ ೧.೬%. ಆದರೆ ಈ ವರ್ಷ ಅದು ೧.೩% ಮತ್ತು ಮುಂದಿನ ವರ್ಷ ೧.೫%. ಇದರಲ್ಲೂ ಯೂರೋ ವಲಯ ಮಾತ್ರ ಕಳೆದ ವರ್ಷ ೧.೪% ಆದರೆ ಮುಂದಿನವರ್ಷ ಅದು ೦.೨%. ಜರ್ಮನಿಯಲ್ಲೇ - ಸದೃಢವಾದ ಅರ್ಥವ್ಯವಸ್ಥೆಯಲ್ಲೇ ಮುಂದಿನ ಎರಡೂ ವರ್ಷ ಅದು ಕೇವಲ ೦.೯% ಈ ಇಳಿಮುಖವನ್ನು ಹೊಸದಾಗಿ ಬಂಡವಾಳ ಜಗತ್ತಿಗೆ ಸೇರಿಕೊಂಡ ರಾಷ್ಟ್ರಗಳ ಬೆಳವಣಿಗೆ – ಭಾರತ, ಚೀನಾ, ಬ್ರೆಜಿಲ್, ರಷ್ಯಾ ಮುಂತಾದುವು ಸರಿಪಡಿಸುತ್ತದೆ ಎಂದು ಆಶಾವಾದ ಪ್ರಕಟಿಸುತ್ತಾರೆ. ಆದರೆ ಚೀನಾ ಈ ವರ್ಷ ೯.೨%. ಆದರೆ, ಬರುವ ವರ್ಷ ಅದು ೭.೮% ಆಗುವ ನಿರೀಕ್ಷೆ ಇದೆ. ಹಾಗೂ ಬ್ರೆಜಿಲ್ ಕಳೆದ ಎರಡು ವರ್ಷಗಳಲ್ಲಿ ೭.೫%, ೨.೭% ಮತ್ತು ಬರುವ ವರ್ಷ ೧.೫% ಎಂದು ನಿರೀಕ್ಷಿಸಲಾಗಿದೆ. ಅಂದರೆ ಬಂಡವಾಳದ ಆರ್ಥಿಕತೆಯಲ್ಲಿ ಒಂದು ಖಚಿತವಾದ ಸ್ಥಗಿತತೆ ಮತ್ತು ಇಳಿಕೆ ಸ್ಪಷ್ಟವಾಗುತ್ತದೆ – ಅಂದರೆ ಅಭಿವೃದ್ಧಿದರದಲ್ಲಿ ಇಳಿಕೆ, ಹೆಚ್ಚುತ್ತಿರುವ ನಿರುದ್ಯೋಗ, ಅಥವಾ ಕೊರತೆಯ – ಸಂಪೂರ್ಣಾವಧಿಯಲ್ಲದ ಉದ್ಯೋಗ, ಉತ್ಪಾದಕ ಘಟಕಗಳಲ್ಲಿ ಸಾಮರ್ಥ್ಯ ಸಂಪೂರ್ಣ ಬಳಕೆಯಾಗದಿರುವುದು, ಅದೇ ಸಮಯ ಬೇಡಿಕೆ ಸಾಕಷ್ಟಿಲ್ಲದೆ, ಹೆಚ್ಚು ಪೂರೈಕೆ (ಉತ್ಪಾದನೆ) ಆಗಿದ್ದು, ಬೆಲೆ ಏರಿಕೆ ಇವೆಲ್ಲ ಇದರ ರೋಗಲಕ್ಷಣಗಳು. ಸರ್ಕಾರಗಳಿಗೆ ನಿರ್ವಹಿಸಲಾಗದ ಬಜೆಟ್ ಕೊರತೆ, ಹಣದುಬ್ಬರ ಮತ್ತು ಭಾರತದ ಅಭಿವೃದ್ಧಿ ದರವಂತೂ ಕುಸಿಯುತ್ತಿರುವುದು ಈಗಾಗಲೇ ಸ್ಪಷ್ಟವಾಗುತ್ತಿದೆ. ಇದಕ್ಕೆ ನೀಡುವ ಹಲವು ಕಾರಣಗಳು – ಬಡ್ಡಿದರ ಹೆಚ್ಚು, ಹೂಡಿಕೆಗೆ ಹಣ ಲಭ್ಯವಿಲ್ಲ ಎನ್ನುವವು ಆಧಾರರಹಿತ. ಕುಸಿತದ ಹಾದಿಯಲ್ಲಿರುವ ಮುಂದುವರಿದ ಆರ್ಥಿಕತೆಯೊಡನೆ ಅವಲಂಬನೆಯನ್ನು ಮಾಡಿಕೊಂಡ ಅಭಿವೃದ್ಧಿ ನೀತಿ ಅನುಭವಿಸುತ್ತಿರುವ ಸಮಸ್ಯೆ ಇದು. ರಫ್ತು ವಿಪರೀತ ಇಳಿಕೆ; ಮಾಡಿಕೊಂಡ ಆಮದು ಹೆಚ್ಚು ಮತ್ತು ಉತ್ಪಾದನೆಯಲ್ಲಿ ಹೆಚ್ಚಿಸುವುದರಲ್ಲಿ ವೈಫಲ್ಯ – ಚಿನ್ನ ತರಬಹುದು, ಆಭರಣ ಮಾಡಬಹುದು ಆದರೆ ಅದು ರಫ್ತಾಗದಿದ್ದರೆ? ಅದನ್ನು ಕೊಳ್ಳುವವರೇ ಇಲ್ಲವಾದರೆ ಮುಂದುವರಿದ ರಾಷ್ಟ್ರಗಳಲ್ಲಿ? ಹಲವಾರು ಆಮದುಗಳು ಬೇಕಿಲ್ಲದಿದ್ದರೂ ಒತ್ತಾಯದಿಂದ ಮಾಡಿಕೊಂಡವು – ಮಿಲಿಟರಿ ವಿಮಾನದಂಥವು ಜತೆಗೆ ಸರ್ಕಾರ

ವಿಪರೀತ ಖೋತ ಬಜೆಟ್ ನಡೆಸಿದರೆ – ಖೋತಾಗೆ ಕಾರಣ ಕೇವಲ ರಫ್ತು-ಆಮದು ನಡುವಿನ ಹಿಗ್ಗುತ್ತಿರುವ ಕಂದಕ ಮಾತ್ರವಲ್ಲ, ಸಾಕಷ್ಟು ಸುಂಕ ತೆರಿಗೆ ವಸೂಲು ಮಾಡದಿರುವುದೂ ಕಾರಣ – ಅದು ಉದ್ಯೋಗ ಖಾತರಿ ಮುಂತಾದ ಸಾಮಾಜಿಕ ವೆಚ್ಚದಿಂದ ಮಾತ್ರವಲ್ಲ, ಸದ್ಯಕ್ಕೆ ಈ ಸಾಮಾಜಿಕ ವೆಚ್ಚ ಮಾತ್ರ ಪ್ರಜೆಯ ಬೇಡಿಕೆಯ ಸಾಮರ್ಥ್ಯವನ್ನು ಹೆಚ್ಚಿಸುತ್ತಿರುವುದು. ಉದ್ಯೋಗಸೃಷ್ಟಿಯಿಲ್ಲದ ಉದ್ಯಮವಲ್ಲ, ಅದನ್ನೂ ನಿಲ್ಲಿಸಿದರೆ ಮಾರುಕಟ್ಟೆ ಕುಸಿಯುತ್ತದೆ. ಈ ಎಲ್ಲ ಚರ್ಚೆಗಳ ಸಾರವೆಂದರೆ ಜಾಗತಿಕವಾಗಿ ಮತ್ತೊಂದು ಆರ್ಥಿಕ ಕುಸಿತ – ೨೦೦೮ರದಕ್ಕಿಂತ ತೀವ್ರವಾದುದು – ಬರಬಹುದೇ ಎನ್ನುವ ಶಂಕೆ.

ಇತಿಹಾಸದುದ್ದಕ್ಕೂ ಇಂಥ ಪರಿಸ್ಥಿತಿ ಬಂದಾಗ ರಾಜ ಪಕ್ಕದ ದೇಶದ ಮೇಲೆ ದಂಡೆತ್ತಿ ಹೋಗುತ್ತಿದ್ದರೆ, ಇಂದಿನ ರಾಷ್ಟ್ರಗಳೂ ಯುದ್ಧವನ್ನು ತಮ್ಮದೆ ಆರ್ಥಿಕ ವಿಕಾಸಕ್ಕೆ ಮಾರ್ಗವಾಗಿ ಆಗಾಗ್ಗೆ ಪರಿಗಣಿಸಿವೆ. ಪಶ್ಚಿಮ ಏಷ್ಯದಲ್ಲಿ ಮತ್ತೊಮ್ಮೆ ರಣಕಹಳೆ ಮೊಳಗುತ್ತಿದೆಯೇ? ಆದರೆ ಆಂತರಿಕವಾಗಿ ಅಷ್ಟೊಂದು ದುರ್ಬಲವಾಗಿರುವ ಇವಕ್ಕೆ ಒಂದು ಯುದ್ಧವನ್ನು ನಿರ್ಣಾಯಕವಾಗಿ ಮುಗಿಸಲೂ ಆಗುತ್ತಿಲ್ಲ ಅಂತ ಇರಾಕ್, ಅಫ್ಘಾನಿಸ್ತಾನ ತೋರಿಸಿವೆ. ಅಂದರೆ ಬರಲಿರುವ ದಿನಗಳಲ್ಲಿ ಅಂತರರಾಷ್ಟ್ರೀಯವಾಗಿ ಬಂಡವಾಳ ವ್ಯವಸ್ಥೆ, ಇಳಿಕೆಯ, ಕುಸಿತದ ಹಾದಿಯಲ್ಲಿ ಹೆಚ್ಚು ಹೆಚ್ಚು ಮುಂದುವರಿಯುವುದು ಎಂದು ನಿರೀಕ್ಷಿಸಬಹುದು. ಈ ಪರಿಸ್ಥಿತಿಗೆ ಪರಿಹಾರ, ಮೊದಲಿಗ ಬಂಡವಳಿಗ ಮಾರ್ಗವನ್ನು ಕೈಬಿಡುವುದು ಅನಿವಾರ್ಯವಾದರೆ ಅದಕ್ಕೆ ಅಲ್ಲಿಯ ಜನ ಸಿದ್ಧವಿರಬಹುದು; ಆದರೆ; ಆಳುವವರ್ಗ ಸಿದ್ಧವಿರದಿರಬಹುದು. ಈ ಹಿಂದೆಯೂ ಇದೇ ಮಾತನ್ನು ಎಲ್ಲೆಲ್ಲೋ ಓದಿದ ಜ್ಞಾಪಕ ಬರುತ್ತಿದೆಯೇ? ಈ ಪರಿಸ್ಥಿತಿಯಲ್ಲಿ ಇವು ಯುದ್ಧಕ್ಕೆ ಮುಂದಾದರೆ, ಮೊದಲನೆಯ ಮಹಾಯುದ್ಧಾನಂತರ ಬಂದ ಗ್ರೇಟ್ ಡಿಪ್ರೆಶನ್ ಥರದ್ದು ಜಗತ್ತನ್ನು ಮತ್ತೊಮ್ಮೆ ಕಾಡಬಹುದು.

ಮೇಲೆ ವಿವರಿಸಿದಂತೆ ಜಪಾನ್, ಯೂರೋ ಒಕ್ಕೂಟ ಮತ್ತು ಅಮೆರಿಕ – ಈ ಮೂವರ ಅರ್ಥವ್ಯವಸ್ಥೆಯಲ್ಲಿ ಪರಿಹಾರ ಕಾಣದ ಏಕಸ್ವಾಮ್ಯದ ಬಂಡವಾಳದ ಶೇಖರಣೆ, ಹೊಸ ಹೂಡಿಕೆಯ ಅಪಾರ ಕೊರತೆ ಅರ್ಥವ್ಯವಸ್ಥೆಯಲ್ಲಿ ಬೆಳವಣಿಗೆಯಿಲ್ಲದ ಸ್ಥಗಿತತೆ, ಉತ್ಪಾದಕ ಸಾಮರ್ಥ್ಯದ ಬಳಕೆಯಲ್ಲಿ ಕೊರತೆ, ಅರ್ಥವ್ಯವಸ್ಥೆಯ ಹಣಕಾಸೀಕರಣ (ಫೈನಾನ್ಷಿಯಲೈಸೇಷನ್), ಮತ್ತು ಇವುಗಳಿಗೆ ಪರಿಹಾರ ಹುಡುಕುವ ಮಾರ್ಗವೋ ಎಂದೆನಿಸುವ ಜಾಗತೀಕರಣ – ಈ ಬೆಳವಣಿಗೆಗಳು ಒಂದು ಐತಿಹಾಸಿಕ ಘಟ್ಟ. ಇದನ್ನು ಅಸಾಂಪ್ರದಾಯಿಕ ಅರ್ಥಶಾಸ್ತ್ರಿಗಳು – ''ಏಕಸ್ವಾಮ್ಯ-ಹಣಕಾಸು ಬಂಡವಾಳ'' (Monopoly - Finance Capital) ಎಂದು ಹೇಳುತ್ತಾರೆ. ಇದೊಂದು ಇರಕಲಿನಲ್ಲಿ ಸಿಕ್ಕಿಕೊಂಡ ಪರಿಸ್ಥಿತಿ. ನಿವ್ವಳ ಉಳಿತಾಯ ಮೌಲ್ಯವನ್ನು ಶೇಖರಿಸಿ, ಬಂಡವಾಳವನ್ನು ಹೆಚ್ಚು ಮಾಡಿಕೊಳ್ಳುವ ಪರಿಸ್ಥಿತಿ ಬಂಡವಾಳ ವ್ಯವಸ್ಥೆಗೆ ಅನಿವಾರ್ಯ ಅಭ್ಯಾಸ. ಅದಕ್ಕಾಗಿ ತನ್ನ ಮಾತ್ರುಪ್ರದೇಶದಲ್ಲಿ ಅವಕಾಶ ಮುದುಡಿಕೊಂಡಿರುವಾಗ, ಅದೆ ಬಂಡವಾಳ ಶ್ರಮದ ಬೆಲೆಯಲ್ಲಿ ಮುಂದುವರಿದ ಮತ್ತು ಹಿಂದುಳಿದ ಅರ್ಥವ್ಯವಸ್ಥೆಗಳ ನಡುವೆ ಇರುವ ಅಪಾರ ವ್ಯತ್ಯಾಸವನ್ನು ಗಮನಿಸಿ, ಅದರ ಪ್ರಯೋಜನ ಪಡೆಯಲು ನಮ್ಮಂಥ ಅರ್ಥವ್ಯವಸ್ಥೆಯಲ್ಲಿ ಬಂಡವಾಳ ಹೂಡಲು ಅವಕಾಶಕ್ಕೆ ಒತ್ತಾಯಿಸಿ, ಪ್ರವೇಶ ಪಡೆದು, ಲಾಭ ಗಳಿಸಲು ಮುಂದಾಗಿದೆ. ಅದರ ಪರಿಣಾಮ ಬ್ರೆಜಿಲ್, ಭಾರತ, ಚೀನಾಗಳ ವ್ಯವಸ್ಥೆಯಲ್ಲಿ ಒಂದಿಷ್ಟು ಬೆಳವಣಿಗೆ ಕಂಡುಬರುತ್ತಿದೆ. ಆದರೂ ಮುಂದುವರಿದ ಮೂರು ಬಂಡವಾಳ ವ್ಯವಸ್ಥೆಗಳಲ್ಲಿ ಎಷ್ಟೊಂದು ಹಣಕಾಸು ಬಂಡವಾಳ ಶೇಖರಣೆಯಾಗಿದೆ, ಅಂದರೆ, ಅದಕ್ಕೆ ಬಳಕೆಗೆ ಅವಕಾಶ ಆಸ್ಪದವಿಲ್ಲದೆ ಅಲ್ಲಿಯ ಅರ್ಥವ್ಯವಸ್ಥೆ ಮಿಸುಕಾಡುತ್ತಿದೆ. ಅಮೆರಿಕದ ಅರ್ಥವ್ಯವಸ್ಥೆಯಲ್ಲಿ ಕೈಗಾರಿಕೆಯ ಕ್ಷೇತ್ರದ ಬೆಳವಣಿಗೆ ೧೯೬೦ರಿಂದ ೨೦೧೦ರ ಮಧ್ಯೆ ಸುಮಾರು ಶೇ. ೪.೩ರಿಂದ, ೧೯೫೦-೫೫ರಲ್ಲಿ ಶೇ. ೯.೩ಕ್ಕೆ ಏರಿ, ೨೦೧೦ರಲ್ಲಿ ಶೇ. ೨.೫ಕ್ಕೆ ಇಳಿದಿದೆ. ಪಶ್ಚಿಮ ಜರ್ಮನಿ, ಇಟಲಿ, ಜಪಾನ್ ಬ್ರಿಟನ್ ದೇಶಗಳದ್ದು ಇದಕ್ಕೂ ಕಡಿಮೆಯಾದದ್ದು. ಜಪಾನಿನದು ೧೯೬೦-೭೦ರಲ್ಲಿ ಶೇ. ೧೬.೭ ಇದ್ದದ್ದು, ೧೯೯೦-೨೦೧೧ರಲ್ಲಿ೦.೦೪ ಮಾತ್ರ. ಕೈಗಾರಿಕಾ ಉತ್ಪನ್ನದಲ್ಲಿ ಆದ ಈ ಅವನತಿಯನ್ನು ಸರಿಪಡಿಸಿಕೊಳ್ಳಲು, ಬಂಡವಾಳ ವ್ಯವಸ್ಥೆ ವಾಸ್ತವ ಆರ್ಥಿಕ ಕ್ಷೇತ್ರದ ನೆಲೆಯಿಂದ ಕೇವಲ ಹಣಕಾಸು ವ್ಯವಹಾರದ ನೆಲೆಗೆ ಮಾರುಹೋಯಿತು. ಅಂದರೆ ಷೇರುಪೇಟೆಯ ಊಹಾಪೋಹದ ಬೆಳವಣಿಗೆಯನ್ನೇ ಬೆಳವಣಿಗೆಯೆಂದು ಪರಿಗಣಿಸುವ ಹಣಕಾಸೀಕರಣದ ಮಾರ್ಗ ಹಿಡಿಯಿತು. ಹಣಕಾಸು, ವಿಮೆ, ರಿಯಲ್ ಎಸ್ಟೇಟ್ (Finance, Insurance, Real Estate – FIRE) ಎನ್ನುತ್ತಾರೆ ಇದಕ್ಕೆ! ರಾಷ್ಟ್ರದ

ಮಿನಿಕಥೆ

## ವ್ಯತ್ಯಾಸ/ಬೆಳವಣಿಗೆ

ದೊಡ್ಡ ಬಡಾವಣೆಯ ಬೃಹತ್ ನೂತನ ಉದ್ಯಾನದ ಉದ್ಘಾಟನೆಗೆ ಜನ ಕಿಕ್ಕಿರಿದಿದ್ದರು. ಬೆಳಕಿನಲ್ಲಿ ಮಿಂದ ಕಾರಂಜಿಗಳು ನಯನಾನಂದಕರವಾಗಿದ್ದವು. ''ಅಬ್ಬಾ! ಏನು ಸೊಗಸು! ವಾಕ್ ಮಾಡುವುದಕ್ಕೆ ಹೇಳಿ ಮಾಡಿಸಿದ ಸ್ಥಳ!'' ಇತ್ಯಾದಿ ಮಾತುಗಳು ಮೊಳಗಿದವು. ಇವುಗಳ ನಡುವೆ, ಅನತಿ ದೂರದಲ್ಲಿದ್ದ ಬೀದಿ ಬದಿಯ ನಲ್ಲಿಯ ಮುಂದಿನ ಬೈಗಳು ನಿಟ್ಟುಸಿರು ಕಳೆದುಹೋದವು.


**ಮ. ಶ್ರೀ. ಮುರಳಿಕೃಷ್ಣ**
ನಂ. ೩೮, ೩ನೇ ಕ್ರಾಸ್, ರಾಜ ಗಾರ್ಡನಿಯಾ ಲೇಔಟ್
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಉತ್ತರಹಳ್ಳಿ, ಬೆಂಗಳೂರು - ೬೧


ಒಟ್ಟಾರೆ ಆದಾಯದಲ್ಲಿ ಈ ಕ್ಷೇತ್ರದ ಪಾಲು, ಸರಕು ಕ್ಷೇತ್ರದ ಉತ್ಪಾದನೆಯಲ್ಲಿ ೧೯೮೦ರಂತೆ, ಶೇ. ೩೫ರಷ್ಟಿದ್ದದ್ದು ಇತ್ತೀಚೆಗೆ ಶೇ. ೬೫ಕ್ಕೂ ಮಿಕ್ಕಿರುವುದು ಗಮನಾರ್ಹ. ಅಂದರೆ ಹಣಕಾಸುಕ್ಷೇತ್ರದ ಜೂಜಾಡುವ ಪ್ರವೃತ್ತಿ ಅತಿ ಹೆಚ್ಚಾಗಿರುವ ಸೂಚನೆ. ೧೯೮೦ ಮತ್ತು ೧೯೯೦ರ ದಶಕಗಳಲ್ಲಿ ಆರ್ಥಿಕ ಪ್ರಗತಿ ತುಂಬ ಹೆಚ್ಚಿದ್ದು ಎನ್ನುವುದರಲ್ಲಿ, ನಿಜವಾದ ಆರ್ಥಿಕತೆಯ ಪಾಲಿಗಿಂತ, ಹಣಕಾಸು ಕ್ಷೇತ್ರದ್ದೇ ಷೇರುಪೇಟೆಯದ್ದೇ ಹೆಚ್ಚಿತ್ತು. ಅಂದರೆ ಈ ಬೆಳವಣಿಗೆ ಉದ್ಯೋಗವನ್ನು ವೃದ್ಧಿಸಲಿಲ್ಲ, ಸಾಮಾಜಿಕ ಕ್ಷೇತ್ರವನ್ನೂ ಹೆಚ್ಚಿಸಲಿಲ್ಲ. ಕೇವಲ ಸಂಪತ್ತಿನ ಶೇಖರಣೆ, ಕೇಂದ್ರೀಕರಣವಾಯ್ತು. ಅದೇ ಆರ್ಥಿಕ ಕುಸಿತ, ಬಿಕ್ಕಟ್ಟಾಯ್ತು ಅನ್ನುವುದು ಸ್ಪಷ್ಟವಾಗುತ್ತದೆ. ಈ FIRE ಕ್ಷೇತ್ರದಲ್ಲಿ ಉದ್ಯೋಗದ ಸಂಖ್ಯೆ ಶೇ. ೨೨ರಷ್ಟು ಶಾಶ್ವತವಾಗಿದೆ; ಅದರಲ್ಲಿ ಯಾವುದೇ ವಿಸ್ತಾರ ಆಗಿಲ್ಲ. ಇರುವ ಜನಕ್ಕೇ ಹೆಚ್ಚು ಹೆಚ್ಚು ವೇತನ ಸಿಕ್ಕಿದೆ. ಹೊಸಪೀಳಿಗೆಯ ಬಿಲಿಯನ್ ಶ್ರೀಮಂತರು ಇಲ್ಲಿಂದಲೆ ಉಗಮ ವಾಗುವುದು. ಬ್ಯಾಂಕುಗಳಿಗೆ ಸಾಲಕ್ಕೆ ಒತ್ತೆ ಇಟ್ಟ ಆಸ್ತಿಗಳು ಮೌಲ್ಯ ಕಳೆದುಕೊಂಡಿದ್ದು, ಆದರೂ ಸಾಲ ಪಡೆದವರು ಹೆಚ್ಚು ಶ್ರೀಮಂತರಾದದ್ದು ಇವೆಲ್ಲ ಈ ಪರಿಸ್ಥಿತಿಯ ವೈಪರೀತ್ಯಗಳು. ಕೈಗಾರಿಕೆಗಳಲ್ಲಿ ಹೂಡಿಕೆಯ ಬೆಳವಣಿಗೆಯ ಸ್ಥಿತಿಯನ್ನು ಸೂಚಿಸಲು ಈ ಕ್ಷೇತ್ರದಲ್ಲಿ ೨೦ ವರ್ಷಗಳ ಸರಾಸರಿ ವಾರ್ಷಿಕ ಸಂಖ್ಯೆ (annual percentage, 20-year moving average) ಎನ್ನುವುದನ್ನು ಬಳಸಲಾಗುತ್ತದೆ. ಇದು ಅಮೆರಿಕದಲ್ಲಿ ೧೯೫೦-೫೫ರಲ್ಲಿ ಶೇ. ೨೮ ಇದ್ದದ್ದು, ಒಂದೇ ಸಮನೆ ಕಡಿಮೆಯಾಗುತ್ತಾ ಈಗ ಋಣಾತ್ಮಕವಾಗಿಬಿಟ್ಟಿದೆ! ಅಂದರೆ ಈ ಕ್ಷೇತ್ರ ಚೇತರಿಕೆಯೇ ಇಲ್ಲದೆ ಕ್ಷೀಣವಾಗಿದೆ. ಆದರೆ ಇದೇ ಸಮಯದಲ್ಲಿ ತಾಂತ್ರಿಕತೆಯಲ್ಲಿ ಹೆಚ್ಚು ಹೆಚ್ಚು ಪ್ರಗತಿಯಾಗುತ್ತಾ, ಕಡಿಮೆ ಹೂಡಿಕೆ ಇದ್ದರೂ, ನಿರುದ್ಯೋಗ ಸೃಷ್ಟಿಸಿದರೂ ಒಟ್ಟಾರೆ ಉತ್ಪಾದಕತೆ ಹೆಚ್ಚುತ್ತಾ ಬಂದಿದೆ. ಅದೆಷ್ಟೆಂದರೆ ಈಗಾಗಲೆ ಇರುವ ಘಟಕಗಳ ಸಂಪೂರ್ಣ ಸಾಮರ್ಥ್ಯ ಬಳಸದೆಯೇ, ಹೆಚ್ಚು ಉತ್ಪಾದನೆ ಮಾಡಿಕೊಳ್ಳಬಹುದು. ಅಂದರೆ ಬಳಕೆಯಾಗದ ಉತ್ಪಾದಕಾ ಸಾಧನ ಸಾಮರ್ಥ್ಯ - idle capacity – ಎಲ್ಲೆಡೆ ಉಂಟಾಗಿದ್ದು, ಹೆಚ್ಚು ಲಾಭ ಗಳಿಸಲು ಹೊಸ ಹೂಡಿಕೆಯೂ ಬೇಡ, ವಿಸ್ತರಣೆಯೂ ಬೇಡ ಅಂದಾಗ, ಹೊಸ ಉದ್ಯೋಗ ನಿರ್ಮಾಣವಾಗುವುದಾದರೂ ಹೇಗೆ? ಅಂದರೆ ನಾವು ಬಂಡವಾಳ ವ್ಯವಸ್ಥೆ ಕುಸಿಯುತ್ತಿದೆ ಎಂದಾಗ ಅದರ ಅರ್ಥ ಒಟ್ಟಾರೆ ಉತ್ಪಾದನೆಯ ಕುಸಿತವೆಂದಲ್ಲ; ಈ ವ್ಯವಸ್ಥೆ ಸಮಾಜಕ್ಕೆ ಅಗತ್ಯವಾದ ಉದ್ಯೋಗ ನಿರ್ಮಾಣ ಮಾಡಲು, ಸಂಪತ್ತನ್ನು ನ್ಯಾಯಯುತವಾಗಿ ಹಂಚಲು, ಸಾಮಾಜಿಕ ಶಾಂತಿಯನ್ನು ನಿರ್ಮಿಸಲು ಹೆಚ್ಚು ಹೆಚ್ಚು ಅಸಮರ್ಥವಾಗುತ್ತಿದೆ. ಅದು ಅದರ ಸ್ವಭಾವವೇ ಆಗಿದೆ. ಆ ಮಾರ್ಗದಲ್ಲಿ ಬೇರೇನನ್ನೂ ನಿರೀಕ್ಷಿಸಲಾಗದು. ಈ ವ್ಯವಸ್ಥೆ ಬಂಡವಾಳ ವ್ಯವಸ್ಥೆ ತನ್ನ ಎಲ್ಲ ಸಾಧ್ಯತೆಗಳನ್ನೂ ಮೀರಿ, ತನ್ನ ಮಿತಿಯನ್ನು ತಲಪಿದೆ. ಈಗ ಏನಿದ್ದರೂ ನಾವು, ಮಾನವ ಸಮುದಾಯ, ಇದಕ್ಕೆ ಪರ್ಯಾಯ ಮಾರ್ಗದ ಚಿಂತನೆ ಮಾಡಬೇಕೇ ವಿನಾ, ಇದರ ದುರಸ್ತಿಯನ್ನಲ್ಲ; ಅದು ಸಾಧ್ಯವಿಲ್ಲ.

ಒಂದು ಸರಕಿನ ಬೆಲೆಯನ್ನು ನಿಗದಿ ಮಾಡುವಾಗ ದುಡಿಮೆಗೆ ನೀಡಿದ ಬೆಲೆಯ ವೃದ್ಧಿಯ ಹೆಚ್ಚಳ ಎಷ್ಟು ಎನ್ನುವುದು - ಮಾರ್ಕ್ ಅಪ್ ಪ್ರೈಸ್ - ಒಂದು ಮುಖ್ಯ

ಸೂಚ್ಯಂಕ. ಅದು ಕೂಲಿಕಾರನ ಪಾಲು ಹೇಗಿದೆ ಮತ್ತು ಶೋಷಣೆಯ ತೀವ್ರತೆಯ ಗತಿಯನ್ನು ಸೂಚಿಸುತ್ತದೆ. ಇದೊಂದು ಅನುಪಾತ ಸಂಖ್ಯೆ - ಇದು ಕಳೆದ ಐವತ್ತು ವರ್ಷಗಳಲ್ಲಿ ೧.೫೦ - ೧.೫೭ರಷ್ಟಿದ್ದದ್ದು, ಕಳೆದ ಕೇವಲ ನಾಲ್ಕು ವರ್ಷಗಳಲ್ಲಿ ೧.೭೫ಕ್ಕೆ ನಡೆದಿದೆ. ಅಂದರೆ ಕಾರ್ಮಿಕನ ಶೋಷಣೆ ಅತಿ ತೀವ್ರವಾಗಿರುವ ಸಂಕೇತ ಇದು. ಅದೇ ಸಮಯ ಏಕಸ್ವಾಮ್ಯವೂ ತೀವ್ರವಾಗುತ್ತಿದೆ. ಜಾಗತಿಕವಾಗಿ ಬಂಡವಾಳದ ಕೇಂದ್ರೀಕರಣ, ಏಕಸ್ವಾಮ್ಯದ ಪ್ರಭುತ್ವ ಶಕ್ತಿ ಮತ್ತು ಲಾಭದ ಹಿಗ್ಗುವಿಕೆ, ಬಹುರಾಷ್ಟ್ರೀಯಗಳು ಜಾಗತಿಕವಾಗಿ ಪೂರೈಕೆಯ ವ್ಯವಸ್ಥೆಯನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳುತ್ತಿರುವುದು, ಏಕಸ್ವಾಮ್ಯದ ಹಣಕಾಸು ಕ್ಷೇತ್ರ - ಬೃಹತ್ತಾದ ಬ್ಯಾಂಕುಗಳು, ಹಣಕಾಸು ಸಂಸ್ಥೆಗಳು, ಕೆಲವೇ ಸಂಖ್ಯೆಯವು ಮಿಕ್ಕೆಲ್ಲವನ್ನು ನುಂಗಿ, ಬೆಳೆಯುತ್ತಿರುವುದು ಇವೆಲ್ಲ ಇಂದಿನ ಸಾಧಾರಣ ಪ್ರವೃತ್ತಿ ಜಾಗತಿಕ-೫೦೦ ಎನ್ನುವ ಐದುನೂರು ದೊಡ್ಡ ವಾಣಿಜ್ಯ ಘಟಕಗಳು-ಕಾರ್ಪೊರೇಟ್‌ಗಳು- ೨೦೦೪-೦೮ರಲ್ಲಿ ಜಾಗತಿಕ ಆದಾಯದ ಶೇ. ೪೦ರಷ್ಟನ್ನ ಹೊಂದಿದ್ದವು – ಈ ಬೆಳವಣಿಗೆ ಕಳೆದ ಕೇವಲ ಎರಡು ದಶಕಗಳಲ್ಲಿ ಆದದ್ದು. ಮೇಲ್ನೋಟಕ್ಕೆ ತೋರಿಬರುವ ಸಣ್ಣ ಸಣ್ಣ ಘಟಕಗಳ ನಡುವೆ, ಕಾರ್ಮಿಕರು ಮತ್ತು ಪ್ರಭುತ್ವಗಳ ನಡುವಿನ ಪೈಪೋಟಿಯ ಸ್ಥಿತಿ ಈ ಏಕಸ್ವಾಮ್ಯದ ವಾಸ್ತವದ ಮೇಲೆ ಮುಸುಕೆಳೆಯುತ್ತದೆ. ಅಂದರೆ ವಾಸ್ತವವಾಗಿ ಪೈಪೋಟಿ ತೀರ ಕಡಿಮೆಯಾಗಿದ್ದರೂ, ಅದು ಇದೆ ಎಂಬ ಆಭಾಸವಿದೆ. ಏಕಸ್ವಾಮ್ಯ ಪೈಪೋಟಿಯ ಶತ್ರು. ಅದು ಬೆಲೆಯನ್ನು ನಿಯಂತ್ರಿಸುತ್ತದೆ. ಏಕಸ್ವಾಮ್ಯದಲ್ಲಿ ಒಟ್ಟಾರೆ ಉದ್ಯೋಗ, ಒಟ್ಟಾರೆ ಉತ್ಪಾದನೆ, ಮುಕ್ತ ವ್ಯವಸ್ಥೆಗಿಂತ ಕಡಿಮೆ. ಏಕಸ್ವಾಮ್ಯ ಮುಕ್ತ ವ್ಯವಸ್ಥೆಯ ಶತ್ರು. ಪೈಪೋಟಿಯನ್ನು ಹತ್ತಿಕ್ಕಿ, ಲಾಭವನ್ನು ಅಪಾರವಾಗಿ ಹೆಚ್ಚಿಸಿಕೊಳ್ಳಲೆಂದೇ ಏಕಸ್ವಾಮ್ಯ ಬರುತ್ತದೆ. ಅದು ಪ್ರಭುತ್ವವನ್ನು ನಿಯಂತ್ರಿಸುತ್ತದೆ. ಜೇನ್ ರಾಬಿನ್‌ಸನ್, ಸ್ವೀಜಿ ಮುಂತಾದ ಅರ್ಥಶಾಸ್ತ್ರಗಳು, ''ಅಸಮರ್ಪಕ ಪೈಪೋಟಿಯ ಸಿದ್ಧಾಂತ''ವನ್ನೇ ಬೆಳೆಸಿದವರು. ಏಕಸ್ವಾಮ್ಯ ಪದ ಸಾಲದೆ ''ಹಲವೇ ಏಕಸ್ವಾಮ್ಯ'' ''ಒಲಿಗೋ ಪಲಿ' ಶಬ್ದಗಳು ಬಳಕೆಗೆ ಬಂದಿವೆ. ಈ ಒಲಿಗೋ ಪಲಿಗಳು ಪರಸ್ಪರ ಪೈಪೋಟಿಗೆ ಇಳಿಯದೆ, ಸಹಕರಿಸಿಕೊಳ್ಳುತ್ತವೆ ಕೂಡ. ಅವು ಜಾಗತಿಕವಾದ್ದರಿಂದ, ರಾಷ್ಟ್ರೀಯ ಪ್ರಭುತ್ವಗಳು ಅವನ್ನು ನಿಯಂತ್ರಿಸಲು ಅಸಮರ್ಥವಾಗುತ್ತವೆ. ಉತ್ಪಾದನೆಯ ಕಡಿತವನ್ನು, ಬೆಲೆ ಏರಿಸುವ ಸಾಧನವಾಗಿ ಬಳಸುವ ಈ ಘಟಕಗಳು, ಉತ್ಪಾದನಾ ಸಾಮರ್ಥ್ಯವನ್ನು ನಿರರ್ಥಕವಾಗಿಸುತ್ತವೆ - ವೇಸ್ಟ್ ಮಾಡುತ್ತವೆ, ಕಸವಾಗಿಸುತ್ತದೆ ಅಂದರೆ ಸಾಮಾಜಿಕ ನಷ್ಟವಾಗಿಸುತ್ತವೆ. ಈಗ ''ಅಸಮರ್ಪಕ ಪೈಪೋಟಿ ಸಿದ್ಧಾಂತ''ವೂ ಹಿಂದೆ ಸರಿದು ''ಏಕಸ್ವಾಮ್ಯದ ಪೈಪೋಟಿ'' (ಮೊನೊಪೊಲಿಸ್ಟಿಕ್ ಕಾಂಪಿಟಿಷನ್) ಎನ್ನುವ ವಿರೋಧಾಭಾಸದ ಬಳಕೆ ಬಂದಿದೆ. 'ಮುಕ್ತ ಪೈಪೋಟಿ' ಎನ್ನುವ ಸಾಂಪ್ರದಾಯಿಕ ಅರ್ಥಶಾಸ್ತ್ರ ಈಗ 'ಕಾರ್ಯಸಾಧ್ಯ ಪೈಪೋಟಿ' ಎನ್ನುವ ಪದಕ್ಕೆ ದಾರಿಬಿಟ್ಟುಕೊಟ್ಟಿರುವುದು ಇಂದಿನ ವೈಚಿತ್ರ್ಯ. ನಿರರ್ಥಕವಾಯ್ತಲ್ಲ, ವೇಸ್ಟ್ ಆಯ್ತಲ್ಲ ಎಂದು ಉದ್ಗಾರ ತೆಗೆದರೆ, ಬಂಡವಾಳದ ಸಮರ್ಥಕನೊಬ್ಬ ಅದನ್ನು ''ಸೃಜನಶೀಲ ವಿನಾಶ'' ಎಂದ ! ಒಟ್ಟಿನಲ್ಲಿ ಬಂಡವಾಳದ ಮನೆಯಲ್ಲಿ ಗೊಂದಲವೋ ಗೊಂದಲ !

ಜಾಗತಿಕ ಏಕಸ್ವಾಮ್ಯದ ಪ್ರಾಬಲ್ಯವನ್ನು ಸೂಚಿಸುವ ಒಂದು ಸಂಖ್ಯೆ ಹೀಗಿದೆ. ಅಮೆರಿಕದ ಕಾರ್ಪೊರೇಟ್‌ಗಳ ಒಟ್ಟಾರೆ ಲಾಭದಲ್ಲಿ ಶೇ. ೬ರಷ್ಟು, ಹೊರನಾಡಿನ ಸಂಪಾದನೆಯಿಂದ ಬರುತ್ತಿತ್ತು ಅರವತ್ತರ ದಶಕದಲ್ಲಿ. ಇದು ೧೯೯೦ರ ದಶಕದಲ್ಲಿ ಶೇ. ೧೫ಕ್ಕೆ ಏರಿತ್ತು. ಈಗ ಇದು ಶೇ. ೨೧ರಷ್ಟು ಆಗಿದೆ. ಅಂದರೆ ಅಮೆರಿಕದ ವಾಣಿಜ್ಯ ಕ್ಷೇತ್ರ ತಾನು ಮಾತ್ರ ಅಪಾರ ಲಾಭ ಗಳಿಸಿ, ಆದರೆ ಅಮೆರಿಕದ ಜಿಡಿಪಿ ಹೆಚ್ಚಾದಂತೆ ಕಾಣಿಸಿತು. ಅದು ಆಂತರಿಕವಾಗಿ ಅಪಾರ ನಿರುದ್ಯೋಗ, ಆರ್ಥಿಕ ಕುಸಿತ, ಸರ್ಕಾರದ ಬಜೆಟ್ ಬಿಕ್ಕಟ್ಟು ಉಂಟಾಗಿರುವ ವಿಪರ್ಯಾಸವಾಗಿದೆ. ಈ ಲಾಭದ ಮೂಲ ಚೀನ, ಭಾರತದಲ್ಲಿರುವ ಅಪಾರ ನಿರುದ್ಯೋಗಿಗಳು ಮತ್ತು ಕಡಿಮೆ ವೇತನದ ಮೂಲಕ ಶೋಷಿಸುವ ಉತ್ಪಾದನಾ ಕ್ರಮ ಎಸ್‌ಇಜಡ್ ಮುಂತಾದುವು. ಈ ಅರ್ಥವ್ಯವಸ್ಥೆಗಳು ಮುಂದುವರಿದ ರಾಷ್ಟ್ರಗಳ ಏಕಸ್ವಾಮ್ಯಗಳ ಕೃಪೆ ಇಲ್ಲದೆ ಬದುಕಲಾರದ ಅವಲಂಬನೆಯತ್ತ ಸಿಲುಕಿಕೊಂಡಿವೆ. ರಫ್ತು ವ್ಯವಸ್ಥೆಯಾಗುತ್ತಿವೆ ಹಾಗೂ ಇಲ್ಲಿ ಸಾಮಾಜಿಕ ಅಭದ್ರತೆ ಉಂಟಾಗಿದೆ. ನಮ್ಮ ಕಾಲ ''ಮಹಾನ್ ಅಸಮಾನತೆ''ಯ ಕಾಲ ಇದರ ಪರಿಹಾರಕ್ಕೆ ಹೊಸ ಚಿಂತನೆ ಬೇಕು; ಹಳೆಯದರ ತೇಪೆ ದಾರಿ ಅಲ್ಲ.


**ಕೆ. ಎಸ್. ಪಾರ್ಥಸಾರಥಿ**

೨೪೭, 'ವನಸಿರಿ', ಟೆಲಿಕಾಂ ಬಡಾವಣೆ, ವಿದ್ಯಾನಗರ, ಬೆಟ್ಟಹಲಸೂರು ಅಂಚೆ, ಬೆಂಗಳೂರು - ೫೬೨ ೧೫೭

# ಸಂಗೀತವೆಂಬ ಬೇಟೆ



**ಕಾ**ರೆ ಮುಳ್ಳ ಹಾದಿಯಲ್ಲಿ
ಕಣಿವೆನಡಿಗೆ ಸಾಗುವಲ್ಲಿ
ಕಣ್ಣಬಾಣ ನಾಟುವಲ್ಲಿ ಅದೋ ಶಬರ, ಅಗೋ ಜಿಂಕೆ
ಇಲ್ಲೇ ಈಗ ಶಬರ ಶಂಕರ ವಿಲಾಸವೈ.

ಮೊದಲ ಮಳೆ ಇಳಿದು ಇಳೆಗೆ
ಬತ್ತಳಿಕೆಯು ಬೆನ್ನ ಮೇಲೆ
ಅಲ್ಲೇ ಇದೆ ಕೊಳಲು, ಅಲ್ಲೇ ಇದೆ ಬಾಣ
'ಮಾಣ್ ನಿಷಾದ' ಎಂಬ ಸೊಲ್ಲು ಎಲ್ಲೋ ಜಾರಿದೆ.

ಕುಣಿವ ನವಿಲು, ನಗುವ ಗರಿಕೆ
ತೂಗೋ ಬಳ್ಳಿ, ಹಾರೋ ಚಿಟ್ಟೆ
ತಡೆತಡೆ ಕೊಂಚತಡೆ, ಎಲೆ ಜಿಂಕೆ ತಡೆ ತಡೆ
ಕೊಳಲಿಣಿಕಿದೆ ಬತ್ತಳಿಕೆಯಲಿ.

ಕೊಳವೆ ಕೊಳಲ ತುಟಿಯಂಚಿನ ಶಬರ
ಗೊಲ್ಲನಾದ ನಾದದಿಂದ ಒಂದೇ ಕ್ಷಣ
ನಾದಿನಾದಿ ಎಳೆದ ನಾದ ಮೈಯಲೆಲ್ಲಾ ಹರಿದಿದೆ
ಸೋನೆ ಸಂಜೆ ಮುಗಿಯದಿದೆ ನಾದದಮಲು ಹರಡಿದೆ.

ಹಸಿವೆಂಬುದು ಹಸಿವಲ್ಲ
ನಾದದಮಲಿನ ನಾಗಬಂಧನ, ಅನಂಗನಂದನ
ಚಂದ್ರ ತಾರೆ ಕೊಲುವ ಹಾಡು ಸರ್ಪ ಚುಂಬನ
ಎಲ್ಲಿಂದೆಲ್ಲಿಯದಿದು ವ್ಯರ್ಥ ಹೋಲಿಕೆ
ಕಣ್ಣ ತುಂಬ ಕೊಳಲು, ಕಿವಿಯ ತುಂಬ ಕೊಳಲು
ಎದೆಯ ತುಂಬ ಕೊಳುಲು
ಹರಿಣಿ ಉಸಿರಾಡುವುದನೇ ಮರೆತಿದೆ.

ಅಯ್ಯೋ ಉಳಿದವರುಂಟೆ ಉಸಿರುಳಿದು
ಅಯ್ಯೋ ಒಡಲುಂಟೆ ಉಸಿರಳಿದು
ಗೊಲ್ಲಗೋಪಿ ಪಿಳ್ಳಂಗೋವಿಗೆ ರಾಗರತಿ ಏರಿದೆ
ಹಿಡಿದೇ ಹಿಡಿವೆನೆಂಬ ಮಿಥುನದಲಿ
ಕೂಡಿಯೇ ಕೂಡುವೆನೆಂಬ ಕೂಟದಲಿ
ಮೊರೆವ ಕೊಳಲಿನಲ್ಲೂ ಗಂಡಸಿನ ಅಹಂಕಾರ
ಸೋಲಿಸಿಯೇ ತೀರುವೆನೆಂಬ ಸೆಣಸಾಟವಿದೆ.

ಬಯಕೆಯೆಂಬ ಬೇಟದಲ್ಲಿ
ಕೊಲುವ ಕೊಲ್ಲಿಸಿಕೊಳ್ಳುವ ಕಾದಾಟದಲ್ಲಿ
ಹಿಮಗಟ್ಟಿದೆ ದೇಹ ಉಸಿರ ಮರೆತು
ಅಯ್ಯೋ ಹರಿಣಿ ಕೊಳಲ ಗಾನ ಗರಗಸವಾಗುತಿದೆ
ಜೀವ ಹೊರ ಬರುವ ದಾರಿ ಹುಡುಕುತಿದೆ.

ಮೈಯನೆಲ್ಲಾ ಒಮ್ಮೆ ಅದುರಿ, ಬೆದರಿ
ಆಹಾ ಜಿಂಕೆ ! ಓಹೋ ಜಿಂಕೆ !
ಪೊದರಿನಿಂದ ಜಿಗಿದಿದೆ
ಬೇಡನೆಲ್ಲೋ, ಗೊಲ್ಲನೆಲ್ಲೋ
ನಾದ ಒಂದೇ ಉಳಿದಿದೆ.

ಅಯ್ಯೋ ಮತ್ತೆ ಕೊಳಲಗಾನ
ಮತ್ತೆ ನಾದ, ಮತ್ತೆ ಮತ್ತೆ
ಉಸಿರ ಅದುಮಿ ಮೆರೆವ ಆಟ
ಮತ್ತೆ ಮತ್ತೆ ಸಿಲುಕಿ ನಾದವೆಂಬ ಬಲೆಯಲಿ
ಇದು ಬೇಟವೆಂಬ ಬೇಟೆ
ಉಸಿರ ಹಿಡಿದು ಕೊಲುವ ಆಟ.

ಕನಸುತಿದೆ ಚಂದ್ರನನು ಉಸಿರ ತುದಿಯಲಿ
ಒಡಲ ತುಂಬ ಕಡಲ ಮೊರೆತ
ದಡಕೆ ಬಡಿವುದನೇ ಮರೆತಿದೆ
ಶಾಂತ, ಶಾಂತವಿದು ಕಡಲು
ಒಳಗೆ ಜೀವವ ಕುಣಿಕೆ ಹಿಡಿದಿದೆ
ಮುಚ್ಚಿದೆವೆಗಳ ನಡುವೆ ಯಾವ ಕನಸೋ
ಸೋನೆ ಸೋನೆಯಾಗಿ ಸುರಿದಿದೆ.

ಕೊಲುವ ಕೊಳಲು ಅವನ ಕೈಯಲ್ಲಿ ನುಡಿದಿದೆ
ಹರಿಯುತಿದೆ ಒಂದೇ ಸಮನೆ ಕೊರಳ ಹರಿವ
ಕತ್ತಿಯಂತೆ, ಕಡಲ ಮೊರೆತ ನಿಂತಿದೆ
ಜಿಂಕೆಯೆನ್ನಲೇ, ಚಂದ್ರಚಕೋರಿಯೆನ್ನಲೇ
ಶಬರ ಶಂಕರವಿಲಾಸವೆನ್ನಲೇ
ಇದು ಜೀವ-ಭಾವಗಳ ಆಟವೆನ್ನಲೇ
ಅಂತೂ ಇಂತೂ ಕೊಲುವ ಆಟ ಮುಗಿದಿದೆ.

* ನರೇಂದ್ರ ತಮ್ಮ ಅಂಕಣದಲ್ಲಿ ಪ್ರಸ್ತಾಪಿಸಿದ ಸಂಗೀತ ಬೇಟೆ ಎಂಬ ಕಲ್ಪನೆಯನ್ನು ಆಧರಿಸಿ ಬರೆದ ಕವಿತೆ. ಬೇಟೆಗಾರನ ಕೊಳಲಗಾನದ ಮೋಡಿಗೆ ಸಿಲುಕಿದ ಜಿಂಕೆ ಆಹಾರ ತಿನ್ನುವುದನ್ನು ಮರೆತು, ಉಸಿರಾಡುವುದನ್ನು ಮರೆತು ಸಾಯುತ್ತದೆ.

**ಡಾ|| ಎಚ್. ಎಲ್. ಪುಷ್ಪ**
ನಂ. ೧೬೧, 'ಶ್ರೀಮಾತಾ', ೬ನೇ ಕ್ರಾಸ್, ಶಾಸ್ತ್ರಿನಗರ, ಕೆ. ಆರ್. ರಸ್ತೆ
ಬೆಂಗಳೂರು - ೫೬೦ ೦೨೮

# ಮಳೆ, ಕೆರೆ ಮತ್ತು ಕ್ಯಾಬು

ಚೀಮನಹಳ್ಳಿ ರಮೇಶಬಾಬು

**ಅ**ದೊಂದು ಜಲಪ್ರಳಯ. ಸಂಜೆ ನಾಲ್ಕು ಗಂಟೆಗೆಲ್ಲಾ ಅಕ್ಷರಶಃ ಕತ್ತಲಾಗಿಬಿಟ್ಟಿತ್ತು. ಸುತ್ತಲೂ ಒತ್ತರಿಸಿ ನಿಂತಿದ್ದ ಕಪ್ಪು ಮೋಡಗಳು ಒಂದು ಗುಹೆಯನ್ನೇ ಸೃಷ್ಟಿಸಿಬಿಟ್ಟಿದ್ದವು. ಭೋರೆಂದು ಸುರಿಯ ಹತ್ತಿದ ಮಳೆಯ ಹನಿಗಳು ಒಂದೇ ಸಮ ರಾತ್ರಿಯೆಲ್ಲಾ ಮುಂದುವರಿಯತೊಡಗಿದವು. ಮಳೆಯ ರಭಸಕ್ಕೆ ವಿದ್ಯುತ್ ಕಡಿತವಾಗಿ ಮಳೆಯ ರೌದ್ರ ನರ್ತನದ ಭೀಕರತೆಯು ಮತ್ತಷ್ಟು ಹೆಚ್ಚಾಗಿ ಇಡೀ ಹಳ್ಳಿ ರಾತ್ರಿ ಏಳು ಗಂಟೆಗೆಲ್ಲಾ ಇದ್ದದ್ದನ್ನು ಉಂಡು ಮುಸುಕೆಳೆದು ಮಲಗಿಬಿಟ್ಟಿತ್ತು. ಅಪ್ಪ ''ಈ ಪಾಟಿ ಉಯ್ಯಾಕತ್ತಿದೆ... ಬೆಳಿಗ್ಗೆ ರೋಡಿಗಾಕಿದ ತೆನೇನ ಶಿವನೇ ಕಾಪಾಡ್ಬೇಕು'' ಎನ್ನುತ್ತಾ ಮಗ್ಗುಲು ಬದಲಿಸಿದ. ಸ್ವಲ್ಪಹೊತ್ತಿನ ನಂತರ ದೀರ್ಘವಾದ ನಿಟ್ಟುಸಿರೊಂದನ್ನು ಹೊರಚೆಲ್ಲಿ ನಿಧಾನವಾಗಿ ನಿದ್ದೆಗೆ ಜಾರಿದ. ನನಗೆ ನಿದ್ದೆ ಹತ್ತಲಿಲ್ಲ. ನನ್ನೂರ ಕೆರೆ ತುಂಬಿ ಎಷ್ಟು ವರ್ಷಗಳಾದವು! ಬಹುಶಃ ಹದಿನೆಂಟು ವರ್ಷಗಳ ಹಿಂದೆ ಅಂತ ಕಾಣುತ್ತೆ. ಆಗ ನಾನು ಪ್ರಥಮ ಪಿಯುಸಿಗೆ ಆಗತಾನೇ ಕಾಲಿಟ್ಟಿದ್ದೆ. ಕನ್ನಡ ಮಾಧ್ಯಮದಲ್ಲಿ ಹೈಸ್ಕೂಲ್ ಮುಗಿಸಿದ್ದ ನನಗೆ ಪಿಯುಸಿಯಲ್ಲಿ ಪಿ.ಸಿ.ಎಂ.ಬಿ. ತೆಗೆದುಕೊಂಡದ್ದರಿಂದ ಇಂಗ್ಲಿಷ್‌ನಲ್ಲೇ ಓದಿ ಅರಗಿಸಿಕೊಳ್ಳಬೇಕಾದ ಅನಿವಾರ್ಯ ಎದುರಾಗಿತ್ತು. ಆ ವರ್ಷ ಸಾಮಾನ್ಯ ದರ್ಜೆಯಲ್ಲಿ ಪಾಸಾಗಿದ್ದ ನನಗೆ ನನ್ನೂರ ಕೆರೆ ತುಂಬಿ ಕೋಡಿ ಬಿದ್ದದ್ದರಿಂದ ಕೆರೆಯ ನೀರಿನ ಜತೆ ನಾನು ನೀರಾಗಿ ಅಲೆ ಅಲೆಯಾಗಿ ತೇಲಿ ಕೋಡಿಯಿಂದ ಕೆಳಗೆ ಜಿಗಿದು ವಿವರಿಸಲು ಸಾಧ್ಯವಾಗದಷ್ಟು ಖುಷಿಪಟ್ಟಿದ್ದೆ. ನನ್ನ ಹಾಗೂ ಕೆರೆಯ ನಡುವಿನ ಸಂಬಂಧವೇ ಅಂತಹದ್ದು. ಕೆರೆ, ಕೋಡಿ, ಪಾತ್ರ, ಮುಸ್ಸಂಜೆ ಹೊಳೆಯುವ ಅಲೆ ಎಲ್ಲವೂ ನನ್ನೊಳಗಿನ ಪಾತ್ರಗಳೇ ಆಗಿ ಅಥವಾ ಅವೇ ನಾನಾಗಿ ಕೆರೆಯಲ್ಲಿ ಲೀನವಾಗಿ ಹೋಗಿದ್ದೆ. ಈ ರಾತ್ರಿಯಲ್ಲಿ ಎದ್ದು ಹೋಗಿ ಕೆರೆಯನ್ನು ನೋಡಿಕೊಂಡು ಬರಲೇ ಎಂದೆನಿಸಿತು. ಅಥವಾ ಕೆರೆಯೇ ನನ್ನೆದೆಗೆ ಗಾಳ ಹಾಕಿ ಎಳೆಯತೊಡಗಿತು. ನಿಧಾನಕ್ಕೆ ಮೇಲೆ ಎದ್ದೆ. ಅಪ್ಪ ಗೊರಕೆ ಹೊಡೆಯುತ್ತಿದ್ದ. ಅಮ್ಮ ತಂಪು ನಿದ್ದೆಯಲ್ಲಿರುವಂತೆ ಕಂಡಿತು. ಎದ್ದವನೇ ಚಿಲಕ ತೆಗೆದು ಬಾಗಿಲನ್ನು ಹಿಂದಕ್ಕೆಳೆದೆ. ರಪ್ಪೆಂದು ಮಳೆಯ ತುಂತುರು ಮೈ ಪೂರ ನೆಕ್ಕಿಬಿಟ್ಟಿತು. ನಮ್ಮ ಮನೆಯ ಮುಂದೆ ಚೌಕಾಕಾರದ ಒಂದಷ್ಟು ತೆರೆದ ಜಾಗವಿರುವುದರಿಂದ ಮಳೆಯ ರಭಸ ಗಾಳಿಯೊಡನೆ ಸೇರಿ ಗಿರಕಿ ಹೊಡೆದು ಹನಿಗಳು ಒಡೆದು ಚೂರಾಗಿ ತುಂತುರು ರೂಪ ಪಡೆದು ನಾನು ಬಾಗಿಲು ತೆಗೆದ ತಕ್ಷಣ ನನಗೆ ಅಪ್ಪಳಿಸಿದವು. ನೀರಲ್ಲದ್ದಿದ ಕಪ್ಪು ಸುಂದರಿಯ ಕೈ ಬೆರಳುಗಳಿಂದ ನನ್ನ ಮುಖಕ್ಕೆ ಚುಮುಕಿಸಿದಷ್ಟು ಹಿತವಾಗಿತ್ತು ಆ ಕ್ರಿಯೆ. ಮಳೆಯ ರಭಸ ನನ್ನೆದೆಯನ್ನೊಮ್ಮೆ ನಡುಗಿಸಿತು. ಇಷ್ಟು ಹೊತ್ತು ತಣ್ಣಗೆ ಒಂದೇ ಸಮ ಸುರಿಯುತ್ತಿದ್ದ ಮೋಡಗಳು ಏಕಾ-ಏಕಿ ಗುಡುಗತೊಡಗಿದವು. ಮಿಂಚಿನ ತೀಕ್ಷ್ಣ ಬೆಳಕು ಕಣ್ಣಿಗೆ ಅಪ್ಪಳಿಸಿ ನನ್ನ ಮೈ ಮತ್ತಷ್ಟು ಕಂಪಿಸತೊಡಗಿತು. ಮನಸ್ಸು ಹೋಗುವುದು ಬೇಡ ಎನ್ನುತ್ತಿರುವಂತೆಯೇ ಕಾಲುಗಳು ಮೊದಲ ಬಾರಿಗೆ ಮನಸ್ಸಿನ ಮಾತನ್ನು ಕೇಳಿಸಿಕೊಳ್ಳದೆ ಸ್ವಯಂ ನಿರ್ಧಾರವನ್ನು ತೆಗೆದುಕೊಂಡುಬಿಟ್ಟವು. ಎರಡೂ ಕಾಲ್ಗಳು ನಿಧಾನಕ್ಕೆ ಆಚೆ ಬಂದು ನನ್ನನ್ನು ಮಳೆಯ ರಭಸಕ್ಕೆ ಒಡ್ಡಿದವು. ಹಿತ ಅನಿಸಿತು. ಮೈಯೆಲ್ಲಾ ತಂಪಗಾಗಿ ಮನಸಿಗೂ ಒಂದು ರೀತಿಯ ಉಲ್ಲಾಸ ಬಂದಂತಾಗಿ ಕಾಲುಗಳಿಗೆ ಕೆರೆಯ ಕಡೆಗೆ ನಡಿ ಎಂದು ಆದೇಶಿಸಿತು. ಇನ್ನೇನು ಒಂದು ಹೆಜ್ಜೆ ಮುಂದೆ ಇಡಬೇಕು ಎನ್ನುವಷ್ಟರಲ್ಲಿ ನನ್ನ ದೇಹ ನಿಧಾನಕ್ಕೆ ಹಿಮದಂತೆ ಕರಗತೊಡಗಿತು. ಕೇವಲ ಒಂದೇ ನಿಮಿಷದಲ್ಲಿ ನನ್ನ ಇಡೀ ದೇಹ ಕರಗಿ ನೀರಾಗಿ ಕೆಳಗೆ ಹರಿಯುತ್ತಿದ್ದ ಮಳೆಯ ನೀರಿನ ಜತೆ ಬೆರೆತುಹೋಯಿತು. ನೀರಿನ ಜತೆ ನೀರಾಗಿ ಹರಿಯತೊಡಗಿದೆ. ನಮ್ಮ ಮನೆಯ ಮುಂದಿನ ಚರಂಡಿಗೆ ಸೇರಿದೆ. ಸಂಜೆಯಿಂದಲೂ ಮಳೆ ಬಿಡದೆ ಹೊಡೆದದ್ದರಿಂದ ಚರಂಡಿ ಸ್ವಚ್ಛವಾಗಿತ್ತು. ಚರಂಡಿಯಿಂದ ನೇರ ಹಳ್ಳಿಯ ಪಕ್ಕದಲ್ಲೇ ಚೌಡಿ ಗುಡಿಗೆ ಹೊಂದಿಕೊಂಡಂತೆ ಇರುವ ಕುಂಟೆ ಅಥವಾ ಪಾಳುಬಿದ್ದ ಕಲ್ಯಾಣಿಗೆ ಸೇರಿದೆ. ಅದೇ ಸಮಯಕ್ಕೆ ಆಕಾಶ ಮಿಂಚಿದ್ದರಿಂದ ಚೌಡಿಯ ದರ್ಶನವಾಯಿತು. ಅವಳು ಎಂದಿನಂತೆ ನಾಲಿಗೆಯನ್ನು ಹೊರಚಾಚಿ ಸಿಂಹದ ಮೇಲೆ ಕುಳಿತಿದ್ದಳು. ಇಷ್ಟು ದಿವಸ ಧೂಳು ಮೆತ್ತಿ ಮಂಕಾಗಿದ್ದ ಅವಳ ಮನೆ ಮಳೆಯ ಕೃಪೆಯಿಂದ ಸ್ವಲ್ಪ ಹೊಳಪು ಪಡೆದುಕೊಂಡಿತ್ತು. ಪಾಳು ಬಿದ್ದ ಕಲ್ಯಾಣಿ ತುಂಬಿ ಹರಿಯುತ್ತಿತ್ತು. ನಾನು ಹಾಗೇ ಹರಿದು ದೊಡ್ಡ ಹಳ್ಳ ಸೇರಿ ಹುಣಸೆ ತೋಪನ್ನು ದಾಟಿ ಇನ್ನೇನು ಕೆರೆಯ ಮಡಿಲಿಗೆ ಬೀಳಬೇಕು ಎನ್ನುವಷ್ಟರಲ್ಲಿ



ದೊಡ್ಡದೊಂದು ಬಂಡೆ ಎದುರಾಯಿತು. ಬಂಡೆಗೆ ಡಿಕ್ಕಿ ಹೊಡೆದ ನಾನು ಅಲ್ಲೆ ಸ್ವಲ್ಪ ಹೊತ್ತು ಗಿರಕಿ ಹೊಡೆದು ನಂತರ ಪ್ರಜ್ಞೆ ಕಳೆದುಕೊಂಡು ಅಲ್ಲೆ ಅಂಗಾತ ಬಿದ್ದುಬಿಟ್ಟೆ.

*　　*　　*

ನಾನು ಕುಳಿತು ಚಲಿಸುತ್ತಿದ್ದ ನಮ್ಮ ಕಂಪನಿಯ ಸ್ವರಾಜ್ ಮಜ್ದಾ ಕ್ಯಾಬ್‍ನ ಚಾಲಕ ರವಿ ಇದ್ದಕ್ಕಿದ್ದಂತೆ ಬ್ರೇಕ್ ಹಾಕಿದ್ದರಿಂದ ನನ್ನ ತಲೆ ಡ್ರೈವರ್ ಸೀಟಿನ ಹಿಂಬದಿಗೆ ಬಡಿದು ಎಚ್ಚರಗೊಂಡೆ. ಮುಂದಕ್ಕೆ ಅಷ್ಟುದ್ದಕ್ಕೂ ಒತ್ತರಿಸಿಕೊಂಡು ನಿಂತಿದ್ದ ವಾಹನ ದಟ್ಟಣೆ ಕಣ್ಣಿಗೆ ಕಂಡಿತು. ನನ್ನ ಹಿಂದೆ ಕುಳಿತಿದ್ದ ಕಲೀಗ್ ಮಂಜು 'ಏನ್ ಆಕಾಶ್ ಒಳ್ಳೆ ನಿದ್ದೆ... ಏನು ಬಾಸ್ ರಾತ್ರಿ ನಿದ್ದೆ ಖೋತಾನ' ಎನ್ನುತ್ತಾ ಮೀಸೆಯ ಕೆಳಗೆ ತುಂಟ ನಗೆ ಚೆಲ್ಲಿದ. ಅವನ ತುಂಟತನದ ಅರಿವಿದ್ದ ನನಗೆ ಅವನಿಗೆ ಪ್ರತ್ಯುತ್ತರವಾಗಿ ತುಸುವೇ ತುಟಿಯನ್ನು ಅರಳಿಸಿ ಸುಮ್ಮನಾದೆ. ನಮ್ಮ ಕಂಪನಿಯಲ್ಲಿ ಎಚ್. ಆರ್. ಆಗಿರುವ ರಾಣಿ 'ಅಲ್‍ಮೋಸ್ಟ್ ಎರಡು ಕಿಲೋಮೀಟರ್‍ವರೆಗೂ ಜಾಮ್ ಆಗಿದೆಯಂತೆ... ಇಟ್ ವಿಲ್ ಟೇಕ್ ಮೋರ್ ದೆನ್ ಒನ್ ಹವರ್ ಟು ರೀಚ್ ಯುವರ್ ಸ್ಟಾಪ್... ಇನ್ನೂ ಸ್ವಲ್ಪ ಹೊತ್ತು ಆರಾಮಾಗಿ ನಿದ್ದೆ ಮಾಡಿ' ಎಂದಳು. ವಾಹನಗಳ ದಟ್ಟಣೆ ನೋಡಿ ನನಗೂ ಹಾಗೇ ಅನಿಸಿತು. ನಮ್ಮ ಕ್ಯಾಬ್‍ನ ಪಕ್ಕದಲ್ಲೆ ಆಂಬುಲೆನ್ಸ್‍ನ ಸದ್ದು ಮುಗಿಲು ಮುಟ್ಟಿತು. 'ಈ ಟ್ರಾಫಿಕ್‍ನಲ್ಲಿ ಎಲ್ಲಿ ಹೋಗ್ತಾನಿವನು ಸುಮ್ನೆ ನಮಗೆಲ್ಲಾ ಹಿಂಸೆ ಕೊಡೋ ಬದಲು ಆಫ್ ಮಾಡಿ ತೆಪ್ಪಗೆ ಕೂತ್ಕೋಬಾರ್ದೆ' ಮಂಜು ಕುಳಿತಲ್ಲೆ ವಟಗುಟ್ಟಿದ.

'ಯಾರಿಗೆ ಏನ್ ಹೆಚ್ಚುಕಮ್ಮಿಯಾಗಿದೆಯೋ ಏನ್ ಅರ್ಜೆಂಟ್ ಇದೆಯೋ ನಿನಗೇನು ಗೊತ್ತು ಸುಮ್ನೆ ಕುತ್ಕೊಳೋ... ಇವನೊಳ್ಳೆ ಒಂದೋ... ಇನ್ನೊಬ್ಬರಿಗೆ ಕಿರಿಕಿರಿ ಮಾಡ್ತಾನೆ ಇಲ್ಲಾ ತಾನ್ ಕಿರಿಕಿರಿ ಅನುಭವಿಸ್ತಾನೆ... ನಿನ್ನ ಜೀವನ ಪೂರ್ತಿ ಇದೇ ಆಗೋಯ್ತಲ್ಲೋ' ಎಂದ ರಾಣಿ ಮಂಜನ ಮೇಲೆ ಹರಿಹಾಯ್ದಳು.

ಮಂಜನು ತುಸು ಕೆರಳಿ 'ನಿನಗೇನ್ ಗೊತ್ತೆ ಮಾರಾಯ್ತಿ. ಈ ನನ್ಮಕ್ಕಳು ಸುಮ್ಸುಮ್ನೆ ಸೈರನ್ ಹಾಕ್ಕೊಂಡು ಓಡಾಡ್ತಾರೆ. ಒಂಚೂರು ಕಾಮನ್‍ಸೆನ್ಸ್ ಇಲ್ಲ... ಇಷ್ಟು ಟ್ರಾಫಿಕ್ ಇದೆಯಲ್ಲ ಎಲ್ಲಾನ ಹೋಗಕ್ಕಾಗುತ್ತ?... ಸ್ವಲ್ಪ ಪ್ರಾಕ್ಟಿಕಲ್ ಆಗಿ ಯೋಚನೆ ಮಾಡ್ಬೇಕು. ನೀನು ಅವರ್ತರಾನೆ... ಪ್ರಾಕ್ಟಿಕಲ್ ಆಗಿ ಯೋಚನೆ ಮಾಡಲ್ಲ, ಜೊತೆಗೆ ಕಾಮನ್‍ಸೆನ್ಸ್ ಇಲ್ಲ' ಎಂದು ಛೇಡಿಸಿದ.

ತುಸು ಗಲಿಬಿಲಿಗೊಂಡ ರಾಣಿ 'ಓಹೋ ಕಮಾನ್ ಮಂಜು' ಎನ್ನುತ್ತಾ ಪಕ್ಕದಲ್ಲೇ ಕುಳಿತಿದ್ದ ಸಂತೋಷನ ಕಡೆ ದೃಷ್ಟಿ ನೆಟ್ಟು 'ಮಂಜು ಈಸ್ ಟೀಚಿಂಗ್ ಕಾಮನ್‍ಸೆನ್ಸ್ ಅಂಡ್ ಪ್ರಾಕ್ಟಿಕಾಲಿಟಿ ಟು ಎಚ್. ಆರ್. ಎಂದು ನುಡಿದು ಹ್ಹ... ಹ್ಹ... ಹ್ಹ ಎಂದು ತುಸು ವ್ಯಂಗ್ಯವಾಗಿ ನಗತೊಡಗಿದಳು.

ಸಂತೋಷ 'ವಾಟ್... ಎಚ್. ಆರ್. ಶುಡ್ ನೊ ಆಲ್‍ದೀಸ್ ?' ಎಂದು ಅಷ್ಟೇ ವ್ಯಂಗ್ಯವಾಗಿ ನುಡಿದ. ರಾಣಿಯ ಮುಖ ಸಪ್ಪಗಾಯಿತು. ತಲೆ ತಗ್ಗಿಸಿ ಕಣ್ಣುಮುಚ್ಚಿ ನಿದ್ದೆ ಮಾಡುವ ಭಂಗಿಯನ್ನು ಆವಾಹಿಸಿಕೊಂಡು ಸುಮ್ಮನಾದಳು. ಇದರಿಂದ ಮಂಜನ ಅಹಂ ನೆಟ್ಟಗೆ ನಿಗುರಿ ನಿಂತು 'ರೂಟ್ ನಂಬರ್ ನಾಲ್ಕರಲ್ಲಿರೋರ್ನೇ ನಿನ್ನ ಕೈಲ್ಲಿ ಮ್ಯಾನೇಜ್ ಮಾಡಕ್ಕೆ ಆಗ್ತಿಲ್ಲ ಇನ್ನು... ಇಡೀ ಕಂಪನಿಯ ಎಂಪ್ಲಾಯ್ಸ್‍ನ ಏನ್ ಮ್ಯಾನೇಜ್ ಮಾಡ್ತೀಯ' ಮತ್ತೆ ಚುಡಾಯಿಸಿದ. ರಾಣಿ ಕಣ್ಣು ಮುಚ್ಚಿಕೊಂಡೆ 'ನೋ ಕಮೆಂಟ್ಸ್' ಎಂದು ನುಡಿದು ಸುಮ್ಮನಾದಳು. ಇವರು ಯಾವಾಗಲೂ ಹೀಗೆ. ಸಂಜೆ ಮನೆಗೆ ಹೋಗುವಾಗ ಒಬ್ಬರಿಗೊಬ್ಬರು ಛೇಡಿಸಿಕೊಂಡು ಅಥವಾ ಬೈದುಕೊಂಡೋ ಕಾಲ ತಳ್ಳಿದರೆ ಬೆಳಗ್ಗೆ ವಾಪಸ್ಸು ಬರುವಾಗ ಒಬ್ಬರಿಗೊಬ್ಬರು ಮೆತ್ತಿಕೊಂಡು ಆತ್ಮೀಯವಾಗಿ ಮಾತನಾಡುತ್ತ ಯಾರೋ ಒಬ್ಬರು ತಂದ ತಿಂಡಿಯನ್ನು ಎಲ್ಲರೂ ಹಂಚಿಕೊಂಡು ತಿನ್ನುವ ಬಗೆ ಇದೆಯಲ್ಲ... ಅದು ನಿಜವಾಗಲೂ ಸೋಜಿಗವೆ. ಶೃಂಗಾರವೆಂದರೆ ಅಶ್ಲೀಲವೆಂದೇ ಭಾವಿಸಿರುವ ಮಂಜು ಕ್ಯಾಬ್‍ನಲ್ಲಿರುವ ಬಹುತೇಕರ ಮನಸ್ಸಿನೊಳಗೆ ಬೆಚ್ಚಗೆ ಅಡಗಿ ಕುಳಿತಿರುವ ಶೃಂಗಾರ ಧರಿಸಿರುವ ಬಟ್ಟೆಗಳನ್ನು ಕಳಚಿ ಅಶ್ಲೀಲವೆನಿಸುವಂತೆ ಮಾಡಿಬಿಟ್ಟಿದ್ದ. ಅವನ ಹಸಿ ಬಿಸಿ ಜೋಕುಗಳನ್ನು ಹುಡುಗರು ಗಹಗಹಿಸಿ ನಕ್ಕು ಎಂಜಾಯ್ ಮಾಡಿದರೆ, ಹೆಣ್ಣು ಮಕ್ಕಳು ತುಸು ನಾಚುತ್ತಲೇ ಅಥವಾ ಡರ್ಟಿ ಮಂಜ ಎಂದು ಕುಡಿನೋಟ ಬೀರಿ ಬಯ್ಯುತ್ತಲೋ ಎಂಜಾಯ್ ಮಾಡುವುದುಂಟು.

ಕಿಟಕಿಯ ಗಾಜನ್ನು ತೆಗೆದು ಆಚೆ ಇಣುಕಿದೆ. ಇಳಿ ಸಂಜೆಯಲ್ಲಿ ಮೋಡಗಳ ದಟ್ಟಣೆ ವಾಹನಗಳ ದಟ್ಟಣೆಯಂತೆ ಜೋರಾಗಿತ್ತು. ಪಕ್ಕದಲ್ಲೇ ಜೆ.ಸಿ.ಬಿ.ಯೊಂದು

ಅಂಡರ್‌ಪಾಸ್‌ನ ಕೆಲಸದಲ್ಲಿ ತಲ್ಲೀನವಾಗಿತ್ತು. ರಿಂಗ್ ರೋಡ್‌ನ ಎಲ್ಲ ಸಿಗ್ನಲ್‌ಗಳಲ್ಲೂ ಒಂದೋ ಅಂಡರ್‌ಪಾಸ್ ಅಥವಾ ಫ್ಲೈ ಓವರ್‌ಗಳ ಕೆಲಸ ನಡೆಯುತ್ತಿರುವುದರಿಂದ ಇತ್ತೀಚಿನ ದಿನಗಳಲ್ಲಿ ಮನೆ ತಲುಪುವುದು ತಡವಾಗುವ ವಿಷಯ ಸಾಮಾನ್ಯವಾಗಿಬಿಟ್ಟಿದೆ. ಐದೂವರೆಗೆ ಕಂಪನಿ ಬಿಟ್ಟರೆ ಮನೆ ತಲುಪುವುದು ಏಳು ದಾಟಿದ ಮೇಲೆಯೆ. ಅಂದರೆ ಹದಿಮೂರು ಕಿ.ಮೀ. ಕ್ರಮಿಸಲು ಬರೋಬ್ಬರಿ ಒಂದೂವರೆ ಗಂಟೆ. ಕೆಲವು ಸಲ ಎರಡು ಗಂಟೆ ದಾಟುವುದೂ ಉಂಟು. ಕ್ಯಾಬ್‌ನೊಳಗಿನ ಸದ್ದು ತಣ್ಣಗಾಗಿ ಎಫ್. ಎಂ.ನ ಸದ್ದು ಪ್ರತಿಧ್ವನಿಸತೊಡಗಿತು. ರೇಡಿಯೋ ಜಾಕಿ ಶ್ರೀರಾಮ್ 'ಮೆಜೆಸ್ಟಿಕ್‌ನ ದಟ್ಟಣೆಯಲ್ಲಿ ಐ ಕ್ಯಾನ್ ರಿಮೂವ್ ಮೈ ಟೀ ಶರ್ಟ್. ಅದೂ ನನ್ನದೇ ಸ್ಟೈಲಲ್ಲಿ... ಸೋ ಹುಡುಗೀರೆ ಕ್ಯಾನ್ ಯು ಪೀಪಲ್ ಡೂ ಇಟ್... ಐ ಮೀನ್ ಕ್ಯಾನ್ ಯು ಡೂ ಇಟ್ ಬೆಟರ್ ದೆನ್ ಮಿ... ನೀನು ನನಗಿಂತ ಬೆಟರ್ ಅಂತ ಹೇಗೇ ಪ್ರೂವ್ ಮಾಡ್ತೀರಿ...? ಕಾಲ್ ಮಾಡಿ ಆನ್ಸರಿಸಿ ಅಂಡ್ ಗೆಲ್ಲಿ ಆಕರ್ಷಕ ಬಹುಮಾನ' ಎಂದು ಮಾಡರ್ನ್ ಹುಡುಗಿಯರಿಗೆಲ್ಲಾ ತನ್ನದೇ ಸ್ಟೈಲಿನಲ್ಲಿ ಕಂಗ್ಲೀಷನ್ನು ಉಚ್ಚರಿಸುತ್ತಾ ಸವಾಲು ಹಾಕುತ್ತಿದ್ದ. ವಾಹನಗಳು ಸ್ವಲ್ಪ ಸ್ವಲ್ಪವೆ ಮುಂದಕ್ಕೆ ಚಲಿಸತೊಡಗಿದವು. ನಮ್ಮ ಕ್ಯಾಬ್‌ನ ಡ್ರೈವರ್ ಇದ್ದಕ್ಕಿದ್ದಂತೆ ಬ್ರೇಕ್ ಹಾಕಿ ಬಲಗೈಯನ್ನು ಮುಂದಕ್ಕೆ ತೋರಿಸಿ ಯಾರನ್ನೊ ಗುದ್ದುವಂತೆ ಕೈಯಾಡಿಸುತ್ತಾ 'ಥೂ... ಲೋಫರ್ ಸೂಳೆ ಮಗ್ನೆ... ಏನ್ ತಿಂತೀಯ ಹೊಟ್ಟೇಗೆ' ಎನ್ನುತ್ತಾ ಬುಸುಗುಡತೊಡಗಿದ. ನಾನು ತುಸು ಬಾಗಿ ಮುಂದಕ್ಕೆ ನೋಡಿ 'ಯಾಕೆ ರವಿ ... ಏನಾಯ್ತು' ಎಂದು ಕೇಳಿದೆ.



## ಸ್ವಾತಂತ್ರ್ಯ

ಸ್ವಾತಂತ್ರ್ಯೋತ್ಸವದ ದಿನ ಹಾರಿಬಿಡಲೆಂದು<br>
ಬಿಳಿ ಪಾರಿವಾಳಗಳ ಬಂಧನದಲ್ಲಿಡಬೇಡಿ<br>
ನೀಲಾಕಾಶದಲ್ಲಿ ಸ್ವಚ್ಛಂದ ಹಾರುವ ಹಕ್ಕನ್ನು<br>
ಕಸಿಯಬೇಡಿ, ಸ್ವಾತಂತ್ರ್ಯ ಸಿಗಲು ಬಿಡಿ

ಶ್ರೀನಿವಾಸ ಕುಂಡಂತಾಯ<br>
ಜಿ ೦೧, ಶ್ರೀಗುರುಮ್ಯಾನ್ಷನ್, ನಂ. ೧೫, ೨ನೇ ಕ್ರಾಸ್<br>
೧ನೇ ಮೈನ್, ಪಿಎಂಡಿಟಿ ಕಾಲೋನಿ, ಸಂಜಯನಗರ<br>
ಬೆಂಗಳೂರು - ೫೬೦ ೦೯೪

ಅವನ ಸಿಡಿಮಿಡಿ ಇನ್ನೂ ಹಾಗೆ ಇತ್ತು. ನನ್ನ ಕಡೆ ತಿರುಗಿ 'ಈ ಟು ವ್ಹೀಲರ್‌ನವರಿಗೆ ಕೊಬ್ಬು ಜಾಸ್ತಿ ಸಾರ್... ನೋಡಿ ಹೇಗ್ ನುಗ್ತಾರೆ. ಏನಾರ ಹೆಚ್ಚು ಕಮ್ಮಿ ಆದ್ರೆ ಮತ್ತೆ ಸಿಕ್ಕಾಕಿಕೊಳ್ಳೋದು ನಾವೇನೆ... ನೋಡಿ ಸರ್ ಹೆಂಗೆ ಅಡ್ಡಡ್ಡ ನಿಲ್ಸಿದ್ದಾನೆ' ಎಂದ. ಇಷ್ಟು ಹೊತ್ತು ಸುಮ್ಮನಿದ್ದ ಮಂಜ 'ಹೋಗ್ಲಿ ಬಿಡು ರವಿ... ಬಿಟಿಎಸ್‌ನವನು ನಿಮ್ಮನ್ನ, ನೀವು ಟುವ್ಹೀಲರ್‌ನವರ್ನ, ಅವರು ಸೈಕಲ್‌ನವರನ್ನ ಮತ್ತವರು ನಡಕೊಂಡು ಹೋಗೋರ್ನ ಬೈಕೊಳ್ಳೋದು ಕಾಮನ್ನು' ಎಂದ. ಅವನ ದನಿಯಲ್ಲಿ ಎಂದಿನ ವ್ಯಂಗ್ಯ ಅಡಗಿತ್ತು.

ರಾಣಿ 'ವ್ಹಾಟ್ ಮಂಜು... ಯು ಆಲ್ವೇಸ್ ಟಾಕ್ ನೆಗೆಟೀವ್' ಎಂದು ಚುಡಾಯಿಸಿದಳು. ಮಂಜ 'ಇದು ನೆಗೆಟೀವ್ ಅಲ್ವೆ ನನ್‌ರಾಣಿ... ಫ್ಯಾಕ್ಟ್. ನಾನು ಯಾವಾಗ್ಲೂ ಫ್ಯಾಕ್ಟ್ಸ್ ಬಗ್ಗೇನೆ ಮಾತಾಡೋದು...' ಎನ್ನುತ್ತಿದ್ದಂತೆ ರೇಡಿಯೋ ಜಾಕಿ ಶ್ರೀರಾಮ್‌ನ ಸವಾಲಿಗೆ ಉತ್ತರ ನೀಡಲು ಒಂದು ಹುಡುಗಿ ತಯಾರಾಗಿದ್ದಳು. ಮಂಜ ಎಲ್ಲರಿಗೂ ಸುಮ್ಮನಿರುವಂತೆ ಸನ್ನೆ ಮಾಡಿದ. ಅವಳು 'ಮಿಸ್ಟರ್ ಶ್ರೀರಾಮ್... ಐ ಕ್ಯಾನ್ ರಿಮೂವ್ ಮೈ ಟೀ ಶರ್ಟ್ ಇನ್ ದ ಮೆಜೆಸ್ಟಿಕ್ ಕ್ರೌಡ್. ಇಫ್ ಯು ರಿಮೂವ್... ನಿಮ್ಮ ಕಡೆ ನಾಲ್ಕೈದು ಜನ ನೋಡಬಹುದಷ್ಟೆ. ಇಫ್ ಐ ಡೂ ಇಟ್... ನನ್ನ ಕಡೆ ಸಾವಿರಾರು ಜನ ನೋಡ್ತಾರೆ. ಸೋ... ಐ ಕ್ಯಾನ್ ಅಟ್ರಾಕ್ಟ್ ಕ್ರೌಡ್ಸ್ ಅಟೆನ್ಷನ್ ಬೆಟರ್ ದೆನ್ ಯು... ಸೋ ನಾನೆ ನಿಮಗಿಂತ ಬೆಟರ್' ಎಂದು ನುಡಿಯುತ್ತಿದ್ದಂತೆ ಮಂಜ 'ಐ ಲೈಕ್ ಇಟ್... ಐ ಲೈಕ್ ಇಟ್... ಹುಡುಗೀರು ಅಂದ್ರೆ ಹೀಗಿರ್ಬೇಕು... ನಮ್ಮ ಕ್ಯಾಬ್‌ನಲ್ಲೂ ಇದ್ದಾರೆ ಗೌರಮ್ಮಗೋಳು' ಎಂದು ನುಡಿಯುತ್ತಿದ್ದಂತೆ ರಾಣಿ ಅವನ ತಲೆಯ ಹಿಂಬದಿಗೆ ಒಂದು ಏಟು ಕೊಟ್ಟು 'ಕಾಯ್ತಾ ಇರ್ತಾನೆ... ಪುಣ್ಯಾತ್ಮ' ಎಂದು ನುಡಿದಳು.

ಸಂತೋಷ 'ಲೇ ಮಂಜ ಆ ತರಾ ಆಸೆ ಏನೂ ಇಟ್ಕೋಬೇಡ್ವೋ... ನಿನ್ನ ಆಸೆ ಈಡೇರಿಲ್ಲಾ ಅಂದ್ರೆ ಸತ್ಮೇಲೆ ಅಂತರಾತ್ಮ ಅಗ್ತಿಡ್ತೀಯ' ಎಂದು ದನಿ ಕೂಡಿಸಿದ. ಆ ಕ್ಯಾಬ್‌ನಲ್ಲಿ ಎಂದಿನ ಗಲಾಟೆ ಮತ್ತೆ ಶುರುವಾಯಿತು. ಮಳೆ ಮೋಡಗಳು ಇದ್ದದ್ದರಿಂದ ಗಾಳಿಯ ರಭಸ ಜಾಸ್ತಿಯಾಗಿ ಪಕ್ಕದಲ್ಲೆ ಅಂಡರ್‌ಪಾಸ್‌ನ ಕೆಲಸ ನಡೆಯುತ್ತಿರುವುದರಿಂದ ಮಣ್ಣಿನ ಕಣಗಳು ಗಾಳಿಯಲ್ಲಿ ಬೆರೆತು ಕ್ಯಾಬ್‌ನೊಳಗೆ ನುಗ್ಗತೊಡಗಿದವು. ತೆರೆದಿದ್ದ ಕಿಟಕಿಯ ಗಾಜನ್ನು ಎಳೆದು ಮುಚ್ಚಿದೆ. ಸ್ವಲ್ಪ ಹೊತ್ತಿಗೆ ತುಸುವೆ ತೂಕಡಿಕೆ ಬಂದ ಹಾಗಾಯಿತು. ನಿಧಾನಕ್ಕೆ ಕಣ್ಣು ಮುಚ್ಚಿದೆ.

* * *

ನಿದ್ದೆಯಿಂದ ಎದ್ದು ಹೊರಬಂದೆ. ಬೆಳಕಾಗಿತ್ತು. ಇನ್ನೂ ಬಲಿಯದ ಬಿಸಿಲು ರಾತ್ರಿಯ ಮಳೆಯಲ್ಲಿ ತೊಯ್ದಿದ್ದ ಮನೆಯ ಗೋಡೆಗಳನ್ನು ಬೆಚ್ಚಗಿರಿಸಲು ಯತ್ನಿಸುತ್ತಿತ್ತು. ಹಳ್ಳಿಯ ಪೂರ ಮಳೆನೀರು ಚರಂಡಿಗಳಲ್ಲಿ ಇನ್ನೂ ಭೋರ್ಗರೆದು ಹರಿಯುತ್ತಿತ್ತು. ನಮ್ಮ ಮನೆಯ ಮೇಲೆ ಸಾಕಷ್ಟು ನೀರು ನಿಂತಿದ್ದರಿಂದ ಒಳಗೆ ಎರಡು ಮೂರು ಕಡೆ ತೊಟ್ಟಿಕ್ಕುತ್ತಿತ್ತು. ಅಪ್ಪ ಆಗಲೆ ಮನೆಯ ಮೇಲೆ ಇದ್ದ. ಮನೆಯ ಮೇಲೆ ಬಿದ್ದ ನೀರು ಹರಿಯಲು ಇದ್ದ ಒಂದೂವರೆ ಅಡಿಯಷ್ಟು ಉದ್ದದ ಕೊಳವೆಗೆ ಏನೋ ಸಿಕ್ಕಿಹಾಕಿಕೊಂಡಿರಬಹುದು. ಅದನ್ನು ತೆಗೆಯಲು ಪ್ರಯತ್ನಿಸುತ್ತಿದ್ದ. ಮುಂದಿನ ಮನೆ ವೆಂಕಣ್ಣ 'ಅಯ್ಯೋ... ನೆನ್ನೆ ಅರ್ಜೆಂಟಲ್ಲಿ ಅರ್ಧಂಬರ್ಧ ಆದ ರಾಗೀನ ಗುಡ್ಡೆ ಹಾಕಿ ಕವರ್ ಎಳೆದು ಬಂದಿದ್ರೂ ಎಲ್ಲಾ ಕೊಚ್ಕೊಂಡು ಹೋಗಿದೆ' ಎನ್ನುತ್ತಾ ಅವರ ಮನೆಯ ಒಳಗೆ ನಡೆದ. ರಾಗಿಯ ತೆನೆಗಳು ಊರ ನಡುವಿನ ದಾರಿಗಳಲ್ಲಿ ಅಲ್ಲಲ್ಲಿ ಹರಡಿಕೊಂಡು ಬಿದ್ದಿದ್ದವು. ಅದರೊಳಗೆ ನಮ್ಮವೂ ಇರಬಹುದಲ್ಲವೆ ಎಂದು ಯೋಚಿಸುತ್ತಿರುವಂತೆಯೇ ಮನೆಯ ಮೇಲಿಂದ ಕೊಳವೆಯ ಮುಖೇನ ನೀರು ಬರ್ರನೆ ಸುರಿಯತೊಡಗಿತು. ಮಳೆಯ ಬಿರುಸಿಗೆ ಒಂದೆರಡು ಮನೆಯ ಗೋಡೆಗಳು ಉರುಳಿ ಬಿದ್ದಿದ್ದವು. ಹಾಗೇ ಊರಿಂದ ಆಚೆ ನಡೆದೆ. ಡಾಂಬರು ರಸ್ತೆ ಮುಕ್ಕಾಲು



## ಯು. ಎಸ್. ವೆಂಕಟರಾಮನ್

ಬಹುಮುಖ ಪ್ರತಿಭೆಯ ವ್ಯಕ್ತಿತ್ವ ಹೊಂದಿದ್ದ ಹಿರಿಯ ಹೋರಾಟಗಾರ, ಕಾರ್ಮಿಕ ನಾಯಕ, ಚಿತ್ರ ಕಲಾವಿದ, ಚಿಂತಕ, ಸಾಮಾಜಿಕ ಕಾರ್ಯಕರ್ತ ಯು. ಎಸ್. ವೆಂಕಟರಾಮನ್ ಕಳೆದ ತಿಂಗಳು ದಿನಾಂಕ ೭ರಂದು ನಿಧನರಾಗಿದ್ದಾರೆ. ಮಾರ್ಕ್ಸ್‌ವಾದ, ಸಮಾಜವಾದದ ಆಳವಾದ ಅಧ್ಯಯನ ಮಾಡಿದ್ದ ಅವರು ರಾಜ್ಯಶಾಸ್ತ್ರದ ಸ್ನಾತಕೋತ್ತರ ಪದವಿ ಮಾಡಿದ್ದರೂ ಕಾರ್ಮಿಕ ಚಳುವಳಿಗಾಗಿ ತಮ್ಮ ಬದುಕನ್ನೇ ಮುಡುಪಿಟ್ಟಿದ್ದರು. ಜಿ.ಕೆ.ಡಬ್ಲ್ಯೂ., ಪ್ಲೈವುಡ್, ಕಿರ್ಲೋಸ್ಕರ್ ಮುಂತಾದ ಕಾರ್ಖಾನೆಗಳ ಕಾರ್ಮಿಕರನ್ನು ಸಂಘಟಿಸಿ ಚಳುವಳಿ ರೂಪಿಸಿದ್ದರು. ಹವ್ಯಾಸದಿಂದಲೇ ಚಿತ್ರಕಲೆಯನ್ನು ಕರಗತ ಮಾಡಿಕೊಂಡಿದ್ದ ವೆಂಕಟರಾಮನ್ ಅವರು ತಮ್ಮ ಚಳುವಳಿಯ ಬದುಕಿನ ಮಧ್ಯೆಯೇ ಚಿತ್ರಕಲಾ ಪರಿಷತ್ತಿನ ಪದಾಧಿಕಾರಿಯಾಗಿ ಕೆಲಸಮಾಡಿದರು. ಚಿತ್ರಕಲೆಯಲ್ಲಿ ಸಾಮಾಜಿಕ ಕಾಳಜಿ, ವ್ಯವಸ್ಥೆಯ ಅವ್ಯವಸ್ಥೆಯ ಚಿತ್ರಣಕ್ಕೆ ಪ್ರಾಧಾನ್ಯತೆ ನೀಡಿದ್ದ ಅವರು ಎಂ.ಟಿ.ವಿ. ಆಚಾರ್ಯ ಪಾರಿತೋಷಕಕ್ಕೆ ಭಾಜನರಾಗಿದ್ದರು. ಅಂತರ್ಜಾಲದಲ್ಲಿ ೨೫೦೦೦ ಪದಗಳ ಇಂಗ್ಲಿಷ್-ಕನ್ನಡ ನಿಘಂಟು ರೂಪಿಸಿದ ಖ್ಯಾತಿ ಇವರದು. ಹೀಗೆ ವಿವಿಧ ಕ್ಷೇತ್ರಗಳಲ್ಲಿ ಪಾಂಡಿತ್ಯ ಹೊಂದಿದ್ದ ಯು. ಎಸ್. ವೆಂಕಟರಾಮನ್ ತಮ್ಮ ಸಾವಿನ ನಂತರ ತಮ್ಮ ದೇಹವನ್ನು ಎಂ. ಎಸ್. ರಾಮಯ್ಯ ಆಸ್ಪತ್ರೆಗೆ ಕೊಟ್ಟು ಆದರ್ಶಪ್ರಾಯರಾಗಿ ಹೋಗಿದ್ದಾರೆ. ಯು. ಎಸ್. ವೆಂಕಟರಾಮನ್ ಕುಟುಂಬದ ಹಾಗೂ ಸಂಗಾತಿಗಳ ದುಃಖದಲ್ಲಿ 'ಹೊಸತು' ಬಳಗ ಭಾಗಿಯಾಗುತ್ತದೆ.

ಪಾಲು ಕೊಚ್ಚಿಕೊಂಡು ಹೋಗಿತ್ತು. ಕಟಾವು ಮಾಡದ ಹೊಲಗಳು ಮಕಾಡೆ ಮಲಗಿಕೊಂಡು ನಿಂತ ನೀರಿನಲ್ಲಿ ಮುಳುಗಿಹೋಗಿದ್ದವು. ಅಲ್ಲಲ್ಲಿ ಒಂದೆರಡು ಇಲಿಗಳೂ ಈಜುತ್ತಾ ಸಾಗಿ ರಸ್ತೆ ಅಥವಾ ದಿಣ್ಣೆ ಸಿಕ್ಕಿದ ತಕ್ಷಣ ಮೈ ವದರಿಕೊಂಡು ಓಡುತ್ತಲಿದ್ದವು. ಕೆಲವು ಕಡೆ ರಸ್ತೆಯೇ ಕಾಣದಾಗಿ ನೀರಿನಲ್ಲಿ ಮುಳುಗಿಹೋಗಿತ್ತು. ಇಷ್ಟು ಮಳೆ ಹೊಡೆದಿದೆ ಎಂದ ಮೇಲೆ ಇನ್ನು ಕೆರೆ ಅದೆಷ್ಟು ಕೋಡಿಬಿದ್ದಿದೆಯೋ ಎಂದು ಯೋಚಿಸುತ್ತಾ ಕೆರೆಯ ಕಡೆಗೆ ನಡೆಯತೊಡಗಿದೆ. ಕೆಲವು ಕಡೆ ರಸ್ತೆಯ ಮೇಲೆ ಮೊಣಕಾಲಿನವರೆಗೂ ನೀರು ನಿಂತಿದ್ದರಿಂದ ನನ್ನ ನಡಿಗೆಯ ವೇಗ ನಾನು ಅಂದುಕೊಂಡ ಹಾಗೆ ಆಗುತ್ತಿರಲಿಲ್ಲ. ಬರೋಬ್ಬರಿ ಹದಿನೆಂಟು ವರ್ಷಗಳ ನಂತರ ಕೆರೆ ಕೋಡಿ ಬಿದ್ದಿರೋದು. ಈ ಸಾರಿ ಊರವರು ಭರ್ಜರಿ ಹಬ್ಬವನ್ನೆ ಮಾಡಿಯಾರು ಎಂದು ಯೋಚಿಸುತ್ತಾ ನಡೆಯುವಷ್ಟರಲ್ಲಿ ಕೆರೆ ಬಂದುಬಿಟ್ಟಿತ್ತು.

ಅರೆ ! ಕೆರೆಯನ್ನೊಮ್ಮೆ ನೋಡಿ ದಂಗಾಗಿ ಹೋದೆ. ಕೆರೆಯ ಪಾತ್ರದಲ್ಲಿ ಒಂದು ಚೂರೂ ನೀರಿರಲಿಲ್ಲ. ಅಕ್ಷರಶಃ ಬಣಗುಡುತ್ತಿತ್ತು. ಸರ್ಕಾರದವರು ಕೆರೆಯ ಪಾತ್ರದಲ್ಲಿ ಹಾಕಿಸಿದ್ದ ಜಾಲಿಮರಗಳು ಬಲಿಯುತ್ತಿರುವ ಬಿಸಿಲಿನಲ್ಲಿ ಹೊಳೆಯುತ್ತಿದ್ದವು. ಒಂದು ಮೂಲೆಯಲ್ಲಿ ಎಂಟತ್ತು ಜನ ಜಾಲಿಮರಗಳನ್ನು ಕತ್ತರಿಸಿ ನೆಲಕ್ಕೆ ಉರುಳಿಸುತ್ತಿದ್ದುದು ಕಂಡಿತು. ಹತ್ತಿರ ಹೋಗಿ ವಿಚಾರಿಸಿದೆ. ಸರ್ಕಾರದವರು ಇತ್ತೀಚೆಗೆ ತೀರ್ಮಾನ ತೆಗೆದುಕೊಂಡ ಕೆರೆಗಳ ಹೂಳೆತ್ತುವ ಕಾರ್ಯಕ್ರಮದ ಮೊದಲನೆಯ ಕೆಲಸವಾಗಿ ಜಾಲಿಮರಗಳನ್ನು ಹೊಡೆಯುತ್ತಿರುವುದಾಗಿ ತಿಳಿಸಿದರು. ನೀರು ಭೋರ್ಗರೆಯುವ ಸದ್ದು ಇನ್ನೂ ನನ್ನ ಕಿವಿಗೆ ಅಪ್ಪಳಿಸುತ್ತಲೇ ಇದೆ. ಆದರೆ ಕೆರೆ ಬಣಗುಡುತ್ತಿದೆ. ಒಂದು ಕಾಲದಲ್ಲಿ ನನ್ನನ್ನೇ ಕೆರೆಗೆ ಹೋಲಿಸಿಕೊಂಡು ಖುಷಿಪಟ್ಟಿದ್ದೆನಲ್ಲ, ಬೀಗಿದ್ದೆನಲ್ಲ! ಏನೂ ಮಾತು ಹೊರಡದೆ ಹಿಂದಡಿ ಇಟ್ಟೆ. ಜಾಲಿ ಮುಳ್ಳು ಅಂಗಾಲಿಗೆ ಚುಚ್ಚಿಕೊಂಡಿತು. ಕೆರೆಯ ತನಕ ಮಳೆನೀರಿನಲ್ಲಿ ತೇವಗೊಂಡು ನೆನೆದಿದ್ದ ಅಂಗಾಲಿನೊಳಗೆ ಜಾಲಿ ಮುಳ್ಳು ಸಲೀಸಾಗಿ ತೂರಿಕೊಂಡಿತು. ನೋವಿನಿಂದ ಚೀರಿದೆ...

✶ ✶ ✶

ಕ್ಯಾಬ್‌ನ ಬ್ರೇಕ್ ಹಾಕಿದ ಹಾಗಾಯ್ತು. 'ಡ್ರೈವರ್ ಸರ್ ಸ್ಟಾಪ್ ಬಂತು... ಇಳೀರಿ' ಎಂದ. ಆಚೆ ಮಳೆ ಬಿರುಸಾಗಿ ಬೀಳತೊಡಗಿತು. ಸಂತೋಷ 'ಇನ್ನೂ ಸ್ವಲ್ಪ ಮುಂದೆ ಹೋಗಿ ನಿಲ್ಸು ರವಿ... ಅಲ್ಲಿ ಶೆಲ್ಟರ್ ಇದೆ ಅಲ್ಲೆ ಇಳ್ಕೊತೀವಿ' ಎಂದ.

ರಾಣಿ 'ಏ ಮಂಜು ಆಕಾಶನಿಗೆ ವಿಷಯ ತಿಳಿಸ್ರೋ...' ಎಂದಳು.

'ಹೇ... ಅವನ್ಯಾಕ್ ಕರೆಯೋದು ಸುಮ್ನೆ... ವೇಸ್ಟು. ಒಂದು ಪೆಗ್ ಹಾಕಲ್ಲ ಎಂಜಾಯ್ ಮಾಡೋಕೆ ಬರೋಲ್ಲ...' ಎಂದು ಮಂಜ ನುಡಿಯುತ್ತಿದ್ದಂತೆ ಹಿಂಬದಿಯ ಸೀಟಿನಲ್ಲಿ ಕುಳಿತಿದ್ದ ನಿರ್ಮಲ 'ಮಂಜು... ನಿಮ್ಮ ದೃಷ್ಟೀಲಿ ಎಂಜಾಯ್ ಮಾಡೋದು ಅಂದ್ರೆ ಏನು ... ಕ್ಯಾನ್ ಯು ಎಕ್ಸ್‌ಪ್ಲೆಯಿನ್ ಇಟ್' ತುಸು ತಲೆಮೇಲೆ ಎತ್ತಿ ಮಂಜನ ಕಡೆಗೆ ದೃಷ್ಟಿನೆಟ್ಟು ನುಡಿದಳು. ಮಂಜ 'ಇಷ್ಟೊತ್ತೂ ಸುಮ್ಮನಿದ್ದೋಳು ಈವಾಗ...' ಎಂದು ಏನೋ ಹೇಳಲು ಯತ್ನಿಸುತ್ತಿದ್ದಂತೆ ಮಂಜನ ಮಾತನ್ನು ತುಂಡರಿಸಿ 'ಆಕಾಶ್ ದಿಸ್ ವೀಕೆಂಡ್ ವಿ ಆರ್ ಗೋಯಿಂಗ್ ಟು ಕ್ಲಬ್ ಕಮಾನ್... ಪರ್ ಹೆಡ್ ಥೌಸಂಡ್ ಫೈವ್ ಹಂಡ್ರೆಡ್ ರುಪೀಸ್ ... ಓಕೆ' ಎನ್ನುತ್ತಾ 'ಇಳ್ಕೊಳ್ಳಿ... ಇಳ್ಕೊಳ್ಳಿ ಸ್ಟಾಪ್ ಬಂತು. ಮಳೆ ಬೀಳ್ತಿದೆ ಮನೇಗೆ ಹೇಗ್ ಹೋಗ್ತೀರಿ... ಆಟೋ ಹಿಡ್ಕೊಂಡು ಶೇರ್ ಮಾಡ್ಕೊಳಿ' ಎಂದು ಪಟಪಟನೆ ನುಡಿಯತೊಡಗಿದಳು. ಕ್ಯಾಬ್ ಶೆಲ್ಟರ್‌ನ ಹತ್ತಿರ ನಿಂತಿತು. ಸಂತೋಷ 'ಎಸ್... ವಿ. ಆಲ್ವೇಸ್ ಡು ದಟ್' ಎಂದು ಇಳಿಯತೊಡಗಿದ. ಇಬ್ಬರೂ ಇಳಿದು ಶೆಲ್ಟರ್‌ನ ಒಳಹೊಕ್ಕು ಆಟೋಗಾಗಿ ಕಾಯತೊಡಗಿದೆವು. ಬೀದಿ ದೀಪದ ಬೆಳಕಿನಲ್ಲಿ ಮಳೆಹನಿಗಳು ಹೊಳೆಯುತ್ತಾ ನರ್ತಿಸುತ್ತಾ ಬಿದ್ದರೆ ಇಲ್ಲೇ ಬೀಳಬೇಕು ಎಂಬಂತೆ ಡಾಂಬರು ರಸ್ತೆಯ ಮೇಲೆ ಬಿದ್ದು ವಯ್ಯಾರದಲ್ಲಿ ಹರಿಯತೊಡಗಿದವು. ನನ್ನ ಕಿವಿಯಲ್ಲಿ ಮಾತ್ರ ಅಪ್ಪ ಯಾವಾಗಲೂ ನುಡಿಯುವ 'ಅದೇನ್ ಬೆಳೀತಾರೇಂತ ಅಲ್ಲಿ ಮಳೆ ಬೀಳುತ್ತೋ' ಎಂಬ ಮಾತು ರಿಂಗಣಿಸತೊಡಗಿತು.

**ಚೀಮನಹಳ್ಳಿ ರಮೇಶಬಾಬು**
ನಂ. ೨೧ ಮತ್ತು ೨೨, ಫೇಸ್ ೧, ಡಿಫೆನ್ಸ್ ಎನ್‌ಕ್ಲೇವ್, ಮರಿಯಣ್ಣಪಾಳ್ಯ, ಎಚ್. ಎ. ಫಾರ್ಮ್ ಪೋಸ್ಟ್
ಹೆಬ್ಬಾಳ, ಕೆಂಪಾಪುರ, ಬೆಂಗಳೂರು - ೫೬೦ ೦೨೪



# ಸಾಮಾಜಿಕ ನ್ಯಾಯ ಹೋರಾಟವೂ, ಜಾತಿ ವ್ಯವಸ್ಥೆಯ ಪುನರುತ್ಪಾದನೆಯೂ...

ಡಿ. ಎಸ್. ನಾಗಭೂಷಣ

ಜಾತಿ ವ್ಯವಸ್ಥೆ ಕುರಿತ ಈವರೆಗಿನ ಸಂಕಥನ ರೂಪುಗೊಂಡಿರುವುದು ಈ ಚಿಂತನಾ ಎರಕದಲ್ಲೇ. ಇದರ ಒಟ್ಟು ಕಾರ್ಯಶೀಲ ರೂಪ ಎಂದರೆ, ಜಾತಿ ವ್ಯವಸ್ಥೆ ಎಂಬುದು ಮೂಲತಃ ವಿಭಜನಶೀಲ, ಶೋಷಣಾತ್ಮಕ ವ್ಯವಸ್ಥೆಯಾಗಿದ್ದು, ಇದನ್ನು ನಾಶ ಮಾಡುವುದು ಪ್ರಗತಿಪರರ ಕೆಲಸವಾಗಿದೆ. ಮತ್ತು ಅದಕ್ಕಾಗಿ ಜಾತಿ ಶ್ರೇಣಿಯನ್ನು ಮೇಲ್ಜಾತಿಗಳು (ಶೋಷಕರು) ಮತ್ತು ಕೆಳಜಾತಿಗಳು (ಶೋಷಿತರು) ಎಂದು ವಿಂಗಡಿಸಿ ಕೆಳಜಾತಿಗಳಿಗೆ ಸಾರ್ವತ್ರಿಕ ಜೀವನದಲ್ಲಿ ವಿಶೇಷ ಪ್ರಾಶಸ್ತ್ಯದ ಆಧಾರದ ಮೇಲೆ ಅವಕಾಶ ಗಳನ್ನು ಮೀಸಲಿಡುವುದು, ಜಾತಿ ವ್ಯವಸ್ಥೆಯ ನಿಯಮಗಳೆಂದು ಹೇಳಲಾಗುವ ನಿಯಮ ಗಳನ್ನು ಉಲ್ಲಂಘಿಸುವುದು. ಉದಾಹರಣೆ: ಅಸ್ಪೃಶ್ಯತಾ ನಿವಾರಣೆಯ ಕಾರ್ಯಕ್ರಮಗಳು, ಸಹಭೋಜನ, ಅಂತರ್ಜಾತೀಯ ವಿವಾಹ ಇತ್ಯಾದಿ. ಇದನ್ನು ಇಂದು ಸಮಾನತೆಯ ರಾಜಕಾರಣ ಅಥವಾ ಸಾಮಾಜಿಕ ನ್ಯಾಯ ರಾಜಕಾರಣ ಎಂದು ಕರೆಯಲಾಗಿದೆ.

ಭಾರತದ ಜಾತಿ ವ್ಯವಸ್ಥೆ ಕುರಿತಂತೆ ನಿರಂತರವಾಗಿ ಅಧ್ಯಯನ-ಸಂಶೋಧನೆಗಳು ನಡೆದೇ ಇವೆ. ಜಾತಿ ವ್ಯವಸ್ಥೆಗೆ ರಾಮಾಯಣ-ಮಹಾಭಾರತಗಳಷ್ಟು ಪ್ರಾಚೀನ ಕಾಲದಿಂದಲೂ ಒಂದಿಲ್ಲ ಒಂದು ರೀತಿಯ ಪ್ರತಿರೋಧ ವ್ಯಕ್ತವಾಗುತ್ತಾ ಬಂದಿದೆ. ಇದು ಈ ವ್ಯವಸ್ಥೆ ಇತಿಹಾಸದುದ್ದಕ್ಕೂ ವಿವಾದಾಸ್ಪದವಾಗಿಯೇ ಉಳಿದುಬಂದಿದೆ ಎಂಬುದನ್ನು ವೇದ್ಯವಾಗಿಸುತ್ತದೆ. ಆದರೆ ಉಳಿದುಬಂದಿದೆ ಎಂಬುದು ಇಲ್ಲಿ ಮುಖ್ಯ ಸಂಗತಿ. ಉಳಿದುಬಂದಿದೆ ಎಂದರೆ, ಗಟ್ಟಿಯಾಗೇ ಉಳಿದುಬಂದಿದೆ. ಎಷ್ಟು ಗಟ್ಟಿಯಾಗಿ ಎಂದರೆ, ಅದನ್ನು ನಾಶಮಾಡಲು, ನಿಷ್ಪ್ರಯೋಜಕಗೊಳಿಸಿ ಅಪ್ರಸ್ತುತ ಗೊಳಿಸಲು ಬಳಸಲಾಗುತ್ತಿರುವ ಆಧುನಿಕ ಶಸ್ತ್ರಾಸ್ತ್ರಗಳೆಲ್ಲವೂ ವಿಫಲವಾಗುತ್ತಿರುವಂತೆ ತೋರುವಷ್ಟರ ಮಟ್ಟಿಗೆ! ಇದು ಎತ್ತುವ ಎರಡು ಮುಖ್ಯ ಪ್ರಶ್ನೆಗಳೆಂದರೆ, ಅದು ಅಷ್ಟು ಗಟ್ಟಿಯಾಗಿ ಏಕೆ ಮತ್ತು ಹೇಗೆ ಉಳಿದುಬಂದಿದೆ ಮತ್ತು ಅದನ್ನು ನಾಶಮಾಡುವ ಪ್ರಯತ್ನಗಳಾದರೂ ಏಕೆ ಮತ್ತು ಹೇಗೆ ಎಂಬುದು.

ಜಾತಿ ಮೂಲತಃ ಒಂದು ಸಮಾಜಕ್ಕೆ ಅಗತ್ಯವಾದ ಸೇವಾ ಸೌಲಭ್ಯಗಳ ಹಿನ್ನೆಲೆಯಲ್ಲಿ ಒಬ್ಬ ಮನುಷ್ಯನ ಕೌಶಲ್ಯ-ಸಾಮರ್ಥ್ಯಗಳನ್ನು ಆಧರಿಸಿ ನಿರ್ಣಯವಾಗುತ್ತಿದ್ದ ಸಂಗತಿ; ಇದನ್ನು ವರ್ಣ ಧರ್ಮ ಎಂದು ಕರೆಯಲಾಗುತ್ತಿತ್ತು ಎಂದು ಹೇಳಲಾಗುತ್ತದೆ. ಆದರೆ ಅದು ನಮ್ಮ ಕಣ್ಣಿಗೆ ಕಾಣುವ ಇತಿಹಾಸದುದ್ದಕ್ಕೂ ಹುಟ್ಟಿನ ಆಧಾರದ ಮೇಲೇ - ಬಹುಶಃ ಸಮಾಜದ ಅಗತ್ಯಗಳು ಮತ್ತು ಮನುಷ್ಯನ ಹೊಸ ಕೌಶಲ್ಯ-ಸಾಮರ್ಥ್ಯಗಳ ನಡುವಣ ಪರಸ್ಪರ ಪ್ರಭಾವದಿಂದ ಉಂಟಾದ ಸಂಕೀರ್ಣ ಸಾಮಾಜಿಕ ಬದಲಾವಣೆಯ ಗತಿಗಳಿಗೆ ಹೊಂದಿಕೊಳ್ಳಲಾಗದೆ – ನಿರ್ಣೀತವಾಗುತ್ತಿರುವುದನ್ನೂ, ಅದರ ಸುತ್ತ ದಾಖಲಾಗಿರುವ ಎಲ್ಲ ವಿವಾದಗಳಿಗೂ ಇದೇ ಕಾರಣವಾಗಿರುವುದನ್ನೂ ನಾವು ಕಾಣುತ್ತಿದ್ದೇವೆ. ಆಕಸ್ಮಿಕವಾದ ತಮ್ಮ (ಹುಟ್ಟು)ಜಾತಿ ಕಾರಣ ದಿಂದಾಗಿಯೇ; ಅಂದರೆ, ವರ್ಣ ಧರ್ಮದ ಅನುಲ್ಲಂಘನೀಯ ನಿಯಮಗಳಿಂದಾಗಿಯೇ ಭಾರತದ ಇತಿಹಾಸದಲ್ಲಿ ಹಲವು ಸಮರ್ಥರು-ಪ್ರತಿಭಾಶಾಲಿಗಳು ಬದುಕಿನಲ್ಲಿ ಪಡೆಯಬೇಕಾದ ಸ್ಥಾನಮಾನಗಳನ್ನು ಪಡೆಯದೇ ಹೋಗಿದ್ದಾರೆ. ಅಷ್ಟೇ ಅಲ್ಲ, ಹಲವು ಜನಸಮುದಾಯಗಳು ಇತಿಹಾಸದುದ್ದಕ್ಕೂ ಹಲವು ರೀತಿಯ ಅವಕಾಶಗಳಿಂದ ವಂಚಿತರಾಗಿ ಈಗ ಹೊಸ ಕಾಲದ ಪ್ರಯೋಜನ ಮತ್ತು ಸೌಲಭ್ಯಗಳನ್ನು ಪಡೆಯುವ ಸಾಮರ್ಥ್ಯ ಗಳನ್ನು ರೂಢಿಸಿಕೊಳ್ಳಲಾಗದ ಮತ್ತು ಅದರಿಂದಾಗಿ ಸಮಕಾಲೀನ ಸ್ಪರ್ಧೆಯಲ್ಲಿ ಹಿಂದೆ ಬೀಳುವಂತಾಗುವ ಅಸಹಾಯಕ ಸ್ಥಿತಿ ತಲುಪಿದರು. ಇದರಿಂದ ಅವರನ್ನು ಪಾರುಮಾಡುವ ಸಾಹಸದ ಭಾಗವಾಗಿಯೇ, ಇದಕ್ಕೆ ಕಾರಣವಾಗಿರುವ ಜಾತಿವ್ಯವಸ್ಥೆಯನ್ನು ನಾಶಮಾಡುವ ಪ್ರಯತ್ನ. ಈ ಅರ್ಥದಲ್ಲಿ ಇದು ಇತಿಹಾಸದ ವಕ್ರತೆಗಳ, ಅನ್ಯಾಯ, ಅಮಾನವೀಯತೆಗಳ ವಿರುದ್ಧ ನಡೆದಿರುವ ಹೋರಾಟ.

ಆದರೆ ಈ ಹೋರಾಟವು ಆರಂಭದಲ್ಲಿ ಸೂಚಿಸಿದ ಹಾಗೆ ವಿಫಲವಾಗುತ್ತಿರುವ ಸೂಚನೆಗಳು ಕಾಣಬರುತ್ತಿವೆ. ಯಾವ

ವಂಚಿತ ಜನಸಮುದಾಯಗಳ ಒಳಿತಿಗಾಗಿ ಈ ಹೋರಾಟವನ್ನು ಆರಂಭಿಸಲಾಯಿತೋ ಆ ಜನಸಮುದಾಯಗಳು ಈ ಹೋರಾಟದಿಂದ ಪ್ರಯೋಜನ ಪಡೆದಿರುವ ಸಾಕಷ್ಟು ಸಾಕ್ಷ್ಯಗಳು ನಮ್ಮ ಮುಂದಿವೆಯಾದರೂ, ಈ ಜನಸಮುದಾಯಗಳಿಗೆ ಐತಿಹಾಸಿಕವಾಗಿ ಅನ್ಯಾಯಕ್ಕೆ ಕಾರಣವಾದ ಜಾತಿ ವ್ಯವಸ್ಥೆಯೆಂಬುದು ನಾಶವಾಗುವ ಸೂಚನೆಗಳು ಕಾಣ ಬರುತ್ತಿವೆಯೇ ಎಂಬ ಪ್ರಶ್ನೆಗೆ ಹೌದು ಎಂದು ಉತ್ತರ ಹೇಳುವುದು ಇಂದು ಕಷ್ಟವೆನಿಸುತ್ತಿದೆ. ಈ ಪ್ರಶ್ನೆಯನ್ನು ಕೇಳುವುದು ಏಕೆ ಅಗತ್ಯ ಮತ್ತು ಮುಖ್ಯವೆಂದರೆ, ಒಂದು ರೀತಿಯ ಅನ್ಯಾಯದ ಜಾತಿ ವ್ಯವಸ್ಥೆ ಇನ್ನೊಂದು ರೀತಿಯ ಅನ್ಯಾಯದ ಜಾತಿ ವ್ಯವಸ್ಥೆಯಾಗಿ ಮಾರ್ಪಾಡಾಗುತ್ತಿರುವ ಎಲ್ಲ ಅಪಾಯದ ಸೂಚನೆಗಳು ಇಂದು ಕಾಣತೊಡಗಿವೆ. ಇದು, ಜಾತಿ ವ್ಯವಸ್ಥೆ ಎಂಬುದು ಕೇವಲ ಆರ್ಥಿಕ ಮತ್ತು ಸಾಮಾಜಿಕ ಅನ್ಯಾಯ ಅಥವಾ ಉನ್ನತಿಯ ಪ್ರಶ್ನೆಗಳನ್ನು ಮೀರಿದ ವಿದ್ಯಮಾನವಾಗಿದೆ ಎಂಬ ಅರಿವನ್ನು ಮೂಡಿಸತೊಡಗಿದೆ. ಇದು ಮತ್ತೆ ಜಾತಿ ವಿರೋಧಿ ಹೋರಾಟಕ್ಕೆ ಆಧಾರವಾಗಿ, ಸ್ಫೂರ್ತಿಯಾಗಿ ಹೊಸ ಅಥವಾ ಆಧುನಿಕ ಎಂದು ಕರೆಯಲಾಗುವ ಕಾಲದ ಮನಸ್ಸು ಜಾತಿ ವ್ಯವಸ್ಥೆ ಕುರಿತು ಕಟ್ಟಿಕೊಂಡ ಸಂಕಥನದತ್ತ ಮರುನೋಟ ಹಾಯಿಸುವಂತೆ ನಮ್ಮನ್ನು ಪ್ರೇರೇಪಿಸುತ್ತಿದೆ.

- ೨ -

ಭಾರತದ ಆಧುನಿಕ ಕಾಲದ ಆರಂಭವೆಂದರೆ ವಸಾಹತುಶಾಹಿಯ ಕಾಲ. ಅಲ್ಲಿಯವರೆಗೆ ಭಾರತೀಯ ಸಮಾಜವನ್ನು ಆಳುತ್ತಿದ್ದ ಮಾನಸಿಕತೆ ಬದಲಾದ ಕಾಲವದು. ಭಾರತ ಜಗತ್ತಿಗೆ, ವಿಶೇಷವಾಗಿ ಪಶ್ಚಿಮದ 'ಜ್ಞಾನಯುಗ'ದ ಉದಾರವಾದಿ ಮೌಲ್ಯಗಳಿಗೆ ತೆರೆದುಕೊಂಡು ಜಾತಿ ವ್ಯವಸ್ಥೆಯನ್ನು ಪ್ರಶ್ನಿಸುವ ಛಾತಿ ಪಡೆದುಕೊಂಡ ಕಾಲವದು. ಆಗ ರೂಪುಗೊಳ್ಳುತ್ತಿದ್ದ 'ಸಾಮಾಜಿಕ ಅಧ್ಯಯನ' ಎಂಬ ಹೊಸ ಜ್ಞಾನ ಶಾಖೆಯಡಿಯಲ್ಲಿ ಜಾತಿ ವ್ಯವಸ್ಥೆಯನ್ನು ಅದರ ಉಗಮ, ವಿಕಾಸ ಮತ್ತು ಪರಿಣಾಮಗಳೊಂದಿಗೆ ವಿಶ್ಲೇಷಿಸುವ ಪ್ರಯತ್ನ ಆರಂಭವಾದ ಕಾಲವದು. ಇಂತಹ ಅಧ್ಯಯನಗಳು ವಸ್ತುನಿಷ್ಠವಾಗಿ ಆರಂಭವಾದುವಾದರೂ ಇವುಗಳಲ್ಲಿ ಹಲವು ಸಹಜವಾಗಿಯೇ ವಸಾಹತುಶಾಹಿ ರಾಜಕಾರಣದ ಭಾಗವಾಗಿಯೂ ನಡೆಯಲಾರಂಭಿಸಿ ಅಂತಹವು ಜಾತಿ ವ್ಯವಸ್ಥೆಗೂ ಹಿಂದೂ ಧರ್ಮಕ್ಕೂ ತಳಕು ಹಾಕಿ, ಅವನ್ನು ಕ್ರಿಶ್ಚಿಯನ್ ಮತ ಪ್ರಸಾರಕ್ಕೆ ಬಳಸಿಕೊಳ್ಳುವ ಪ್ರಯತ್ನಗಳೂ ನಡೆದವು. ಜಾತಿ ವ್ಯವಸ್ಥೆ ಒಂದು ಶ್ರೇಣೀಕೃತ ವ್ಯವಸ್ಥೆಯಷ್ಟೇ ಅಲ್ಲ, ಮೇಲಿಂದ ಕೆಳಗಿನವರೆಗೆ ಈ ಶ್ರೇಣಿ ರೂಪುಗೊಂಡಿರುವುದೇ ಮೇಲಿನ ಶ್ರೇಣಿ ಕೆಳಗಿನ ಶ್ರೇಣಿಯನ್ನು ಶೋಷಿಸುವ ಮೂಲಕ ಎಂದು ವಿಶ್ಲೇಷಿಸಲಾಯಿತು. ಇದಕ್ಕಾಗಿ ಮನುಧರ್ಮಶಾಸ್ತ್ರ ಸೇರಿದಂತೆ ಹಲವು ಸಂಹಿತೆಗಳನ್ನೂ ಹಲವು ಐತಿಹ್ಯ ಮತ್ತು ಆಖ್ಯಾಯಿಕೆಗಳನ್ನೂ ಉಲ್ಲೇಖಿಸಲಾಯಿತು.

ಜಾತಿ ವ್ಯವಸ್ಥೆ ಕುರಿತ ಈವರೆಗಿನ ಸಂಕಥನ ರೂಪುಗೊಂಡಿರುವುದು ಈ ಚಿಂತನಾ ಎರಕದಲ್ಲೇ. ಇದರ ಒಟ್ಟು ಕಾರ್ಯಶೀಲ ರೂಪ ಎಂದರೆ, ಜಾತಿ ವ್ಯವಸ್ಥೆ ಎಂಬುದು ಮೂಲತಃ ವಿಭಜನಶೀಲ, ಶೋಷಣಾತ್ಮಕ ವ್ಯವಸ್ಥೆ ಯಾಗಿದ್ದು, ಇದನ್ನು ನಾಶಮಾಡುವುದು ಪ್ರಗತಿಪರರ ಕೆಲಸವಾಗಿದೆ. ಮತ್ತು ಅದಕ್ಕಾಗಿ ಜಾತಿ ಶ್ರೇಣಿಯನ್ನು ಮೇಲ್ಜಾತಿಗಳು (ಶೋಷಕರು) ಮತ್ತು ಕೆಳಜಾತಿಗಳು (ಶೋಷಿತರು) ಎಂದು ವಿಂಗಡಿಸಿ ಕೆಳಜಾತಿಗಳಿಗೆ ಸಾರ್ವತ್ರಿಕ ಜೀವನದಲ್ಲಿ ವಿಶೇಷ ಪ್ರಾಶಸ್ತ್ಯದ ಆಧಾರದ ಮೇಲೆ ಅವಕಾಶಗಳನ್ನು ಮೀಸಲಿಡುವುದು, ಜಾತಿ ವ್ಯವಸ್ಥೆಯ ನಿಯಮಗಳೆಂದು ಹೇಳಲಾಗುವ ನಿಯಮಗಳನ್ನು ಉಲ್ಲಂಘಿಸುವುದು. ಉದಾಹರಣೆ : ಅಸ್ಪೃಶ್ಯತಾ ನಿವಾರಣೆಯ ಕಾರ್ಯಕ್ರಮಗಳು, ಸಹಭೋಜನ, ಅಂತರ್ಜಾತೀಯ ವಿವಾಹ ಇತ್ಯಾದಿ. ಇದನ್ನು ಇಂದು ಸಮಾನತೆಯ ರಾಜಕಾರಣ ಅಥವಾ ಸಾಮಾಜಿಕ ನ್ಯಾಯ ರಾಜಕಾರಣ ಎಂದು ಕರೆಯಲಾಗಿದೆ.

ಆದರೆ ಇತ್ತೀಚಿನ ವರ್ಷಗಳಲ್ಲಿ ಈ ಸಂಕಥನದ ಬಗ್ಗೆ ಸಂಶೋಧನೆ-ಅಧ್ಯಯನ ಕ್ಷೇತ್ರಗಳಿಂದಲೇ ಹಲವು ಭಿನ್ನ ಧ್ವನಿಗಳು ಕೇಳಿಬರಲಾರಂಭಿಸಿವೆ. ಇವುಗಳಿಗೆ ಕಾರಣ ಸಮಾನತೆಯ ರಾಜಕಾರಣ




ಅಥವಾ ಸಾಮಾಜಿಕ ನ್ಯಾಯ ಹೋರಾಟದ ಕೆಲವು ಪ್ರತಿಕೂಲ ಅಥವಾ ವಕ್ರವೆನ್ನಬಹುದಾದ ಸಾಮಾಜಿಕ ಪರಿಣಾಮಗಳು ಎಂದರೆ ತಪ್ಪಾಗಲಾರದು. ಎದ್ದು ಕಾಣತೊಡಗಿರುವ ಇಂತಹ ದೊಡ್ಡ ಪರಿಣಾಮವೆಂದರೆ, ಭಾರತೀಯ ಸಮಾಜ ಹೆಚ್ಚೆಚ್ಚು ಜಾತಿಬಂಧಿತವಾಗುತ್ತಿರುವ ಲಕ್ಷಣಗಳು ಗೋಚರವಾಗತೊಡಗಿದ್ದು, ಇದರ ಸಾಮಾಜಿಕ-ರಾಜಕೀಯ ಪರಿಣಾಮಗಳು ಒಟ್ಟು ಸಮಾಜದ ದೃಷ್ಟಿಯಿಂದ ವಿಘಟನಕಾರಿ ಮತ್ತು ವಿಚ್ಛಿದ್ರಕಾರಿಯಾಗುತ್ತಿರುವುದು.

ಹಿಂದಿನ ಜಾತಿ 'ವ್ಯವಸ್ಥೆ'ಯಲ್ಲಿ, ಆಧುನಿಕ ಪರಿಪ್ರೇಕ್ಷ್ಯದಲ್ಲಿ ಅದು ಎಷ್ಟೇ ಶ್ರೇಣೀಕೃತ ಮತ್ತು ಶೋಷಣಾತ್ಮಕವಾಗಿ ಕಾಣತೊಡಗಿದ್ದರೂ, ಅದರಲ್ಲಿ ಒಂದು ಸಾಮಾಜಿಕ ಸ್ಥಿರತೆಯ ಅಂತರ್ಗತ ಆಶಯ-ಆದೇಶವಿತ್ತು. ಆದರೆ ಇಂದು ರೂಪುಗೊಳ್ಳುತ್ತಿರುವ ಆಧುನಿಕವೆಂದು ಕರೆಯಬಹುದಾದ ಜಾತಿ 'ವ್ಯವಸ್ಥೆ' ಪರಸ್ಪರ ಅನುಮಾನ ಮತ್ತು ಸ್ಪರ್ಧೆಗಳ ಮೂಲಕ ಹೆಚ್ಚೆಚ್ಚು ಬಿಗುವುಗಳೊಂದಿಗೆ ಪ್ರತ್ಯೇಕಗೊಳ್ಳುತ್ತಿರುವ ಜನಸಮುದಾಯಗಳಿಂದ ಒಡಗೂಡಿ, ಸಾಮಾಜಿಕ ಅಸ್ಥಿರತೆ, ಅನೈಕ್ಯತೆ, ಆತಂಕ ಮತ್ತು ಅಶಾಂತಿ ಹುಟ್ಟಿಸುವಂತಹ ಸಮಾಜವನ್ನು ನಿರ್ಮಿಸತೊಡಗಿದೆ. ಜಾತಿ ಅಪ್ರಸ್ತುತಗೊಳ್ಳುವ ಬದಲು ಹೊಸ ಆರ್ಥಿಕ-ಸಾಮಾಜಿಕ-ರಾಜಕೀಯ ಸಬಲೀಕರಣದ ಆಯುಧಗಳೊಂದಿಗೆ ಸಜ್ಜಾಗಿ ಹೆಚ್ಚು ಪ್ರಸ್ತುತ, ಅನಿವಾರ್ಯ ಮತ್ತು 'ಪ್ರಯೋಜನಕಾರಿ' ಎನ್ನಿಸತೊಡಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಜಾತಿಯ ಈ 'ಪ್ರಯೋಜನಕಾರಿತ್ವ' ಜಾತಿ ವಿರೋಧಿ ಹೋರಾಟದ ಹಿಂದಿನ ರಾಜಕೀಯ ದರ್ಶನವನ್ನೇ ಅಸಂಗತ ಮಾಡಿಬಿಟ್ಟಿದೆ. ಹೊಸ ಜಾತಿ ಸಂಘಟನೆಗಳ, ಹೊಸ ಜಾತಿ ಗುರುತು ಮತ್ತು ಪೌರಾಣಿಕ ಶ್ರೇಷ್ಠತೆಗಳ ಮತ್ತು ಎಲ್ಲಕ್ಕಿಂತ ಹೆಚ್ಚಾಗಿ ಮತ್ತು ಅಪಾಯಕಾರಿಯಾಗಿ ಜಾತಿ ಆಧಾರಿತ ಹೊಸ ರಾಜಕೀಯ ಸಂಯೋಜನೆ ಮತ್ತು ಪಕ್ಷಗಳ ಉದಯವು ಸಮಾನತೆಯ ಮತ್ತು ಸಾಮಾಜಿಕ ನ್ಯಾಯ ರಾಜಕಾರಣದ ಉದ್ದೇಶಗಳನ್ನೇ ಭಂಗಗೊಳಿಸಿದೆ.

ಹೀಗಾಗಿ ಜಾತಿ ವ್ಯವಸ್ಥೆಯ ನಾಶದ ಉದ್ದೇಶವು ಇಂದು ಜಾತಿ ಸಮಾನತೆಯ ಉದ್ದೇಶವಾಗಿ ಮಾರ್ಪಾಡಾಗಿ, ಇದೇ ಸಮಾನತೆಯ ಹೋರಾಟ ಎನಿಸಿಕೊಳ್ಳುತ್ತಿದೆ. ಈ ಕಾರಣದಿಂದಾಗಿ 'ಸಮಾನತೆ' ಎಂಬ ಪರಿಕಲ್ಪನೆಯೇ ಸೀಮಿತಗೊಂಡು ವಿಕ್ಷಿಪ್ತಗೊಂಡಿದೆ. ಸಮಾನತೆಯ ಪರಿಕಲ್ಪನೆಯೊಳಗೆ ಐಕ್ಯತೆ, ಸಹಬಾಳ್ವೆ, ಸಂತೋಷ, ಸಮತೋಲನ, ಸಂಸ್ಕೃತಿಯ ಅಂಶಗಳೂ ಇವೆ. ಅದು ಕೇವಲ ಸಾಮೂಹಿಕ ನೆಲೆಯ ವಿದ್ಯಮಾನವಾಗಿರದೆ; ವೈಯಕ್ತಿಕ ನೆಲೆಯಲ್ಲೂ ಕ್ರಿಯಾಶೀಲವಾಗಿರುವ ವಿದ್ಯಮಾನವಾಗಿರುತ್ತದೆ. ಸಮಾಜವಾದಿ ಚಿಂತಕ ಡಾ|| ರಾಮಮನೋಹರ ಲೋಹಿಯಾ ಹೇಳಿದಂತೆ ಸಮಾನತೆಯ ಮೂಲ ಆಶಯ ಸಾಮೂಹಿಕ ಮತ್ತು ವೈಯಕ್ತಿಕ – ಈ ಎರಡೂ ನೆಲೆಗಳ ಸಮತೋಲನವಾಗಿದ್ದು, ಅದು ಬಾಹ್ಯ ಬಂಧುತ್ವ ಮತ್ತು ಆಂತರಿಕ ಪ್ರಶಾಂತಿಯಲ್ಲಿ ಪರಿಣಮಿಸುವಂತಹದ್ದು. ಹಾಗಾಗಿ ಕೆಲವು ಅಥವಾ ಹಾಗೆ ನೋಡಿದರೆ ಎಲ್ಲ ಜನಸಮುದಾಯಗಳ ಆರ್ಥಿಕ ಮತ್ತು ಸಾಮಾಜಿಕ ಸಬಲೀಕರಣವಷ್ಟೇ ಸಾಮಾಜಿಕ 'ನ್ಯಾಯ'ದ, ಸಮಾನತೆಯ ಅಥವಾ ಸಮಾಜವಾದದ ರಾಜಕಾರಣ ಅನ್ನಿಸಿಕೊಳ್ಳುವುದಿಲ್ಲ.

ಸಾಮಾಜಿಕ ನ್ಯಾಯ ರಾಜಕಾರಣ ಹೀಗೆ ತನ್ನ ತಾತ್ವಿಕ ಮತ್ತು ತಾರ್ಕಿಕ ಅಂತ್ಯವನ್ನು ಸಮಾಜವಾದಿ ರಾಜಕಾರಣದಲ್ಲಿ ಕಂಡುಕೊಳ್ಳಲಾಗದಿರಲು ಕಾರಣ, ನಾನು ಮೊದಲಿನಿಂದಲೂ ಹೇಳುತ್ತಾ ಬರುತ್ತಿರುವ ಹಾಗೆ ಸಾಮಾಜಿಕ ನ್ಯಾಯ ಎನ್ನುವುದು ಜಾತಿ ನ್ಯಾಯವಾಗಿ ಅವನತಿಗೊಂಡಿರುವುದು. ಸಮಾಜ ಎಂದರೆ ಕೇವಲ ಜಾತಿಗಳ ಗುಂಪು ಅಲ್ಲ. ಹಿಂದೆಯೂ ಹಾಗೇನೂ ಇರಲಿಲ್ಲ. ಜಾತಿಯನ್ನು ಒಳಗೊಂಡೂ, ಅದನ್ನು ಮೀರಿದ ಕಾಲಾನುಕಾಲದ ಸಾಮಾಜಿಕ ವಿವೇಕವೊಂದು ಅದನ್ನು ಕಟ್ಟಿದೆ. ಹಾಗಿಲ್ಲದಿದ್ದರೆ, ಅದು ಇತಿಹಾಸದ ಎಲ್ಲ ಹೊಡೆತಗಳನ್ನು ತಡೆದುಕೊಂಡು, ಅವುಗಳೊಂದಿಗೆ ಅನುಸಂಧಾನಿಸುತ್ತಾ ಹೀಗೆ ಉಳಿದು ಬರುತ್ತಿರಲಿಲ್ಲ. ಪಶ್ಚಿಮದ ಕೈಗಾರಿಕಾ ಕ್ರಾಂತಿಯ ಹೊಸ

ರಾಜಕೀಯ ಪರಿಪ್ರೇಕ್ಷ್ಯದಲ್ಲಿ ಮೂಡಿದ 'ಶೋಷಣೆ' ಎಂಬ ಪರಿಕಲ್ಪನೆಯನ್ನು ಸಾರಾಸಗಟಾಗಿ ಜಾತಿ ವ್ಯವಸ್ಥೆಗೆ ಅನ್ವಯಿಸಿಕೊಂಡು ಅದರ ಆಧಾರದ ಮೇಲೆ ಇಲ್ಲಿ ಕಟ್ಟಿಕೊಂಡ ಸಮಾನತೆಯ ರಾಜಕಾರಣವನ್ನು ಜಾರಿಗೆ ತರುವ ಆವೇಶದಲ್ಲಿ ಇದನ್ನು ಮರೆತೆವೆಂದು ಕಾಣುತ್ತದೆ. ಇದೇ ಈ ಜಾತಿ ವಿರೋಧಿ ರಾಜಕಾರಣ ಮತ್ತು ಹೋರಾಟ ಇಂದು ಜಾತಿ ವ್ಯವಸ್ಥೆಯನ್ನು ಹೊಸ ರೂಪ, ತರ್ಕ ಮತ್ತು ವೀರಾವೇಶಗಳಲ್ಲಿ ಕಾಣಿಸಿಕೊಳ್ಳುತ್ತಿರುವುದಕ್ಕೆ ಕಾರಣವೆಂದು ನಾನು ಭಾವಿಸಿದ್ದೇನೆ.

- ೩ -

ಈ ಮೊದಲೇ ನಾನು ಪ್ರಸ್ತಾಪಿಸಿದಂತೆ, ಜಾತಿ ವ್ಯವಸ್ಥೆ ಕುರಿತಂತೆ ಇಂದು ಹೊಸ ನೆಲೆಗಳ ಸಂಶೋಧನೆಗಳು, ಅಧ್ಯಯನಗಳು ಆರಂಭವಾಗಿವೆ. ಇವುಗಳಲ್ಲಿ ಕೆಲವು ನವಪುರೋಹಿತಶಾಹಿ ರಾಜಕಾರಣದ ಭಾಗವಾಗಿ ಆರಂಭವಾಗಿರುವಂತೆ ತೋರುವವಾದರೂ, ಇಂದು ಸಾಮಾಜಿಕ ನ್ಯಾಯ ರಾಜಕಾರಣ ಬಂದುಮುಟ್ಟಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಒಟ್ಟಾರೆಯಾಗಿ ಜಾತಿ ವ್ಯವಸ್ಥೆ ಕುರಿತ ನಮ್ಮ ಗ್ರಹಿಕೆ ಆಧುನಿಕತೆಯ ಅಂತರ್ಗತ ದೋಷಗಳೊಡನೆ ತಳುಕು ಹಾಕಿಕೊಂಡಿರುವಂತೆ ಕಾಣುತ್ತಿದೆ. ಮುಖ್ಯವಾಗಿ ಆಧುನಿಕತೆಯನ್ನು ನಾವು ಯಾವುದರ ಭಾಗವಾಗಿ ಮುಖಾಮುಖಿಯಾದೆವೋ ಆ ವಸಾಹತುಶಾಹಿ ರಾಜಕಾರಣ ಈ ಗ್ರಹಿಕೆಯ ತರ್ಕದ ಹಿಂದೆ ಇದ್ದಂತೆ ತೋರುತ್ತದೆ. ಜಾತಿ ವ್ಯವಸ್ಥೆ ಹಿಂದೂ ಧರ್ಮದ ಅಧಿಕೃತ ಸಾಮಾಜಿಕ ವ್ಯವಸ್ಥೆ ಎಂದು ಹೇಳುವುದು ಜಾತಿ ವ್ಯವಸ್ಥೆಯನ್ನು ಕುರಿತ ನಮ್ಮ ಗ್ರಹಿಕೆಯನ್ನು ಸೀಮಿತಗೊಳಿಸಿಬಿಟ್ಟಿದೆ. ಹೆಚ್ಚೆಂದರೆ ಇದು ಅರ್ಧ ಸತ್ಯ ಮಾತ್ರ. ಅಥವಾ ಹೊರ(ನೋಟದ) ಸತ್ಯ ಮಾತ್ರ. ಏಕೆಂದರೆ, 'ಹಿಂದೂ' ಎನ್ನುವುದು ಎಂದೂ 'ಏಕಶಿಲಾಖಂಡ' ರೂಪದ ಧರ್ಮವಾಗಿರಲಿಲ್ಲ, ಅದೊಂದು ವೈದಿಕ-ಅವೈದಿಕ ಸಂಪ್ರದಾಯಗಳ ವೈವಿಧ್ಯಮಯ ಆವೃತ್ತಿಗಳ ಕಲಸುಮೇಲೋಗರ. ಅದು ತನ್ನ ಈ ಸ್ವರೂಪದಲ್ಲಿ ಜಾತಿ ವ್ಯವಸ್ಥೆಯನ್ನು ಒಂದು ಸಂಹಿತೆಯಾಗಿ ಕಟ್ಟುನಿಟ್ಟಾಗಿ ಒಪ್ಪುವ, ಪರಿವರ್ತಿಸುವ, ಪ್ರಶ್ನಿಸುವ, ನಿರಾಕರಿಸುವ ಪ್ರವೃತ್ತಿಗಳನ್ನು ಕಾಲಾನುಕಾಲಕ್ಕೆ ತೋರುತ್ತಾ ಬಂದಿದೆ. ಜೊತೆಗೆ ಅದು ಭಾರತೀಯ ಸಮಾಜವೆಂಬ ಒಂದು ಅತಿ ಪ್ರಾಚೀನ, ಸ್ಥೂಲ, ವಿಶಾಲ ಮತ್ತು ಸಂಕೀರ್ಣ ಸಮಾಜದಲ್ಲಿ ಎಲ್ಲ ಕಾಲದಲ್ಲೂ ನಾವಿಂದು ಅರ್ಥೈಸಿಕೊಳ್ಳುತ್ತಿರುವ ಸಾರಾಸಪಾಟಾದ ರೀತಿಯ ಶ್ರೇಣಿ ಅಥವಾ ಶೋಷಣೆಯ ವ್ಯವಸ್ಥೆಯಾಗಿ, ಅಂದರೆ ಒಂದು ಯೋಜಿತ ಪಿತೂರಿಯಾಗಿ ಬಾಳುತ್ತಾ ಬಂತು ಎಂದು ಹೇಳಲಾಗದು. ಭಾರತ ಹಾದುಬಂದ, ಮುಖಾಮುಖಿಯಾದ ಷಡ್ದರ್ಶನಗಳು ರೂಪಿಸಿದ ವಿವಿಧ ಜೀವನಕ್ರಮ ಮತ್ತು ಸಾಮಾಜಿಕ ವ್ಯವಸ್ಥೆಗಳಲ್ಲಿ ಜಾತಿ ಸದ್ಯದ ರೂಪದಲ್ಲಿಯೇ ಅವಿಚಲಿತವಾಗಿ ಉಳಿದುಬಂದಿದೆ ಎಂದು ಹೇಳಲಾಗದು. ಏಕೆಂದರೆ, ಅನೇಕ ರೀತಿಯ ಅನುಸಂಧಾನಗಳ ಸುಳಿವು-ಸಾಕ್ಷ್ಯಗಳು ನಮಗಿಂದು ಸಿಗುತ್ತವೆ.

ಹಾಗಾಗಿ ವರ್ಣಾಶ್ರಮ ಧರ್ಮದ ಪರಿಭಾಷೆಯಲ್ಲಿ ನಮ್ಮ ಜಾತಿಗಳನ್ನು ಬ್ರಾಹ್ಮಣ, ಕ್ಷತ್ರಿಯ, ಶೂದ್ರ (ಮತ್ತು ಪಂಚಮ) ಎಂದು ವಿಂಗಡಿಸುವುದು, ಅದರ ಆಧಾರದ ಮೇಲೆ ನಮ್ಮ ಜಾತಿ ಸಂಕಥನವನ್ನು ಕಟ್ಟಿಕೊಳ್ಳುವುದು ಮತ್ತು ಅದರ ಭಾಗವಾಗಿ ಸಾಮಾಜಿಕ ನ್ಯಾಯ ಹೋರಾಟವನ್ನು ರೂಪಿಸುವುದು ಒಂದು ವಾರೆಯಾದ, ಒಂದು ಹೊಸ ಪಟ್ಟಭದ್ರ ಹಿತಾಸಕ್ತಿ ಮೂಲವಾದ (ವಸಾಹತುಶಾಹಿ ಮೂಲವೂ ಸೇರಿದಂತೆ) 'ಯೋಜನೆ' ಎಂದೂ ಹೇಳಬೇಕಾಗುತ್ತದೆ. (ಈ ವಿಂಗಡಣೆಯಲ್ಲಿ ಜಾತಿ ವ್ಯವಸ್ಥೆಗೆ ಹೊರತಾದವರೆಂದು ಹೇಳಲಾಗುವ 'ಪಂಚಮ'ರನ್ನೂ ಸೇರಿಸಲು ಕಾರಣ, ಪಂಚಮ ಕುಲಗಳನೇಕವು ಶೂದ್ರ ಜಾತಿಗಳ ಉಪ ಉತ್ಪನ್ನಗಳು ಮತ್ತು ಅವುಗಳಲ್ಲಿ ಕೆಲವಾದರೂ ಕೆಲವು ಕಾಲಘಟ್ಟಗಳಲ್ಲಿ ಕೆಲವು ಪ್ರದೇಶಗಳಲ್ಲಿ ಆಳುವ ವರ್ಗವಾಗಿದ್ದವು ಎಂಬ ಉಲ್ಲೇಖಗಳನ್ನು ಇಂದಿನ ಸಾಂಸ್ಕೃತಿಕ ಅಧ್ಯಯನಗಳಲ್ಲಿ ಕಾಣಬಹುದು ಎಂಬುದು.) ಇದರ ಇನ್ನೊಂದು ಸಮಸ್ಯೆಯೆಂದರೆ, ಈ ವಿಂಗಡಣೆಯಲ್ಲಿ 'ಶೂದ್ರ' ಎನ್ನುವುದನ್ನು ಬಹು ಸ್ಥೂಲಗೊಳಿಸಿ ಅದರಲ್ಲಿ ಸಾಂಪ್ರದಾಯಿಕ ಆಸ್ತಿವಂತ ಕಸುಬುದಾರ ಜಾತಿಗಳನ್ನು ಸೇರಿಸುವ ಮೂಲಕ ಜಾತಿ ವ್ಯವಸ್ಥೆಯ ಇತಿಹಾಸವನ್ನು ವಸಾಹತುಶಾಹಿ ರಾಜಕಾರಣದ ಕಾಲಘಟ್ಟದ ಪರಿಪ್ರೇಕ್ಷ್ಯದಲ್ಲಷ್ಟೇ ಸ್ಥಿತಗೊಳಿಸಿ ನೋಡಿ (ಅಂದರೆ ಹೊಸ ವ್ಯವಸ್ಥೆಯಲ್ಲಿ ಪಾಲು ಪಡೆಯಬಲ್ಲ ಅವಕಾಶಗಳನ್ನೇ ಉನ್ನತಿಯ ಹಾದಿ ಎಂದು ಪರಿಗಣಿಸಿ) ಅದನ್ನು ಕೇವಲ ಮೇಲ್ಜಾತಿ ವಿರೋಧಿ ನೋಟದ ಸಂಕಥನವಾಗಿ ಕಟ್ಟಲಾಗಿದೆ ಎಂಬುದು.

ಇದರಿಂದಾಗಿ ಇಡೀ ಜಾತಿ ವ್ಯವಸ್ಥೆಯಲ್ಲಿ ಅಂತರ್ಗತವಾಗಿದ್ದ ಶ್ರೇಣೀಕರಣ ಮತ್ತು ಶೋಷಣೆಯ ವಿನ್ಯಾಸ ಮತ್ತು ಇತಿಹಾಸದ ಹಲವು ಸೂಕ್ಷ್ಮಗಳು ಮರೆಯಾಗಿ ಬಾರದೇ ಹೋದದ್ದು. ಹಾಗೇ, ಪುರೋಹಿತಶಾಹಿ ಮತ್ತು ಊಳಿಗಮಾನ್ಯಶಾಹಿ ಎಂಬುವುಗಳು ಜಾತಿಗಳಿಗಿಂತ ಹೆಚ್ಚಾಗಿ; ಪ್ರವೃತ್ತಿಗಳಾಗಿ ಜೊತೆ ಜೊತೆಯಾಗಿ ನಮ್ಮ ಜಾತಿ ವ್ಯವಸ್ಥೆಯ ಶೋಷಣಾತ್ಮಕತೆಯನ್ನು ರೂಪಿಸಿದವು ಎಂಬುದನ್ನು ನಾವು ಗಮನಿಸದೇ ಹೋದದ್ದು. ಈ ವ್ಯವಸ್ಥೆಯಲ್ಲಿನ ಮಹಿಳೆಯರ ಅಸಮಾನತೆಯ ಇತಿಹಾಸದ ಮರ್ಮವು ಇಲ್ಲಿ ಅಡಗಿದೆ ಎಂದೆನಿಸುತ್ತದೆ.

ಇದನ್ನೇ ನೇರವಾಗಿ, ಸ್ಪಷ್ಟವಾಗಿ ಹೇಳುವುದಾದರೆ, ಜಾತಿ ವ್ಯವಸ್ಥೆಯ ಮೂಲಕ ನಮ್ಮವರೆಗೆ ಹರಿದುಬಂದ ಅನ್ಯಾಯಗಳಿಗೆ ಮೇಲ್ಜಾತಿಗಳೆಂದು ಹೇಳಲಾಗುವ ಜಾತಿಗಳು ಎಷ್ಟು ಕಾರಣವೋ ಅಷ್ಟೇ ಇಂದು ಇತರ ಹಿಂದುಳಿದ ಜಾತಿಗಳೆಂದು ಕರೆಯಲಾಗುವ ಜಾತಿಗಳಲ್ಲಿ ಕನಿಷ್ಠ ಅರ್ಧದಷ್ಟು ಜಾತಿಗಳೂ ಕಾರಣವಾಗಿವೆ. ನಮ್ಮ ಜಾತಿ ವ್ಯವಸ್ಥೆಯ ಅಂತರ್ಗತ ಗುಣವೆಂದರೆ, ಒಂದು ಜಾತಿಗೆ ಒಂದಿಷ್ಟು ಭೂ ಅಥವಾ ಆಸ್ತಿ ಒಡೆತನ ಅಥವಾ ರಾಜಕೀಯ ಅಧಿಕಾರ ದೊರೆತೊಡನೆ ಅವು ಊಳಿಗಮಾನ್ಯಶಾಹಿ ಪ್ರವೃತ್ತಿ ತೋರತೊಡಗುತ್ತವೆ ಅವು ತಮ್ಮ ಮೇಲಿನ ಜಾತಿಗಳನ್ನು ಆಕ್ರಮಣಶೀಲವಾಗಿಯೂ ತಮ್ಮ ಕೆಳಗಿನ ಜಾತಿಗಳನ್ನು ದಮನಶೀಲವಾಗಿಯೂ ನೋಡತೊಡಗುತ್ತವೆ. ಇದರರ್ಥ ಮತ್ತೇನಲ್ಲ; ಈ ಎಲ್ಲ ಜಾತಿಗಳೂ ಒಂದಲ್ಲ ಒಂದು ಕಾಲಘಟ್ಟದಲ್ಲಿ ಒಂದಲ್ಲ ಒಂದು ಆಳುವ ವ್ಯವಸ್ಥೆಯ ಭಾಗವಾಗಿದ್ದು, ಅದರ ವಾಸನೆಗಳು ಅವುಗಳಲ್ಲಿ ಹಾಗೇ ಉಳಿದುಬಂದಿವೆ. ಅಂದರೆ ಯಾವ ರೂಪದ ಜಾತಿ ವ್ಯವಸ್ಥೆಯನ್ನು ನಾವು ಈ ಆಧುನಿಕ ಕಾಲದಲ್ಲಿ ಶ್ರೇಣೀಕೃತ-ಶೋಷಣಾತ್ಮಕ ವ್ಯವಸ್ಥೆ ಎಂದು ಗುರುತಿಸಿ ಅದನ್ನು ಶೋಷಕ ಮತ್ತು ಶೋಷಿತ ಶ್ರೇಣಿಗಳೆಂದು ವಿಂಗಡಿಸಿದೆವೋ ಅದರ ತಲೆಯಿಂದ ಬುಡದವರೆಗೆ ಊಳಿಗಮಾನ್ಯಶಾಹಿ ಗುಣ ಅಂತರ್ಗತವಾಗಿದ್ದು, ಪ್ರತಿ ಜಾತಿಯೂ ಅವಕಾಶ ಸಿಕ್ಕೊಡನೆ ತನ್ನ ಸುಸ್ಥಿರತೆಗಾಗಿ ತನ್ನದೇ ಪುರೋಹಿತ ಶಾಹಿಯ ಅನ್ವೇಷಣೆಯಲ್ಲಿ ತೊಡಗುತ್ತದೆ. ಇದಕ್ಕೆ ಉದಾಹರಣೆ ಅಥವಾ ವಿವರಣೆ ಅಗತ್ಯವಿಲ್ಲದಷ್ಟು ಪ್ರಮಾಣದಲ್ಲಿ ಈ ವಿದ್ಯಮಾನ ನಮ್ಮೆದುರಿಗೇ ನಡೆಯುತ್ತಿದೆ.

– ೪ –

ಈ ವಾಸ್ತವ ಸತ್ಯಕ್ಕೆ ಕಣ್ಣು ಮುಚ್ಚಿಕೊಂಡಿರುವುದೇ ಇಂದಿನ ಸಾಮಾಜಿಕ ನ್ಯಾಯ ಅಥವಾ ಸಮಾನತೆಯ ರಾಜಕಾರಣದ ದುರಂತವಾಗಿದೆ. ಸಾಮಾಜಿಕ ನ್ಯಾಯ ರಾಜಕಾರಣದಡಿಯಲ್ಲಿ ಯಾವ ಸಮುದಾಯಗಳು ಇತಿಹಾಸದ ಬಂಧನಗಳಿಂದ ಬಿಡುಗಡೆಗೊಂಡವೋ ಆ ಸಮುದಾಯಗಳು ಇಂದು ಹೇಗೆ ಆ ಸಾಮಾಜಿಕ ನ್ಯಾಯ ರಾಜಕಾರಣವನ್ನು ತಂತಮ್ಮ ಜಾತಿಗಳ ಅನಿರ್ಬಂಧಿತ ಮತ್ತು ಅನೈತಿಕ ಸಬಲೀಕರಣಕ್ಕಾಗಿ ಬಳಸಿಕೊಳ್ಳಲು ಆರಂಭಿಸುವ ಮೂಲಕ ಅದರ ಮುಂದಿನ ಘಟ್ಟವಾದ ಸಮಾನತೆಯ ಹೊಸ ಸಮಾಜವನ್ನು ರೂಪಿಸುವ ಸಮಾಜವಾದಿ ರಾಜಕಾರಣವನ್ನೇ ಇಲ್ಲವಾಗಿಸಿವೆ ಎಂಬುದನ್ನು ನಾವಿಂದು ನೋಡಿದ್ದೇವೆ/ ನೋಡುತ್ತಿದ್ದೇವೆ. ನಮ್ಮ ಜಾತಿ ವ್ಯವಸ್ಥೆಯಲ್ಲೇ ಅಂತರ್ಗತವಾಗಿದ್ದ ಜಾತಿಗಳ ಊಳಿಗಮಾನ್ಯ ಗುಣಗಳು ಅವುಗಳಲ್ಲಿ ಹಾಗೇ ಉಳಿದುಹೋದ ಕಾರಣದಿಂದಾಗಿ ಸಾಮಾಜಿಕ ನ್ಯಾಯ ರಾಜಕಾರಣವೆಂಬುದು ಹೆಚ್ಚು ಬಲಶಾಲಿ ಮತ್ತು ಕಡಿಮೆ ಬಲಶಾಲಿ ಊಳಿಗಮಾನ್ಯ ಜಾತಿಗಳ ನಡುವಣ ಸ್ಪರ್ಧೆಯ ರಾಜಕಾರಣವಾಗಿ ಮಾರ್ಪಟ್ಟಿದೆ. ಇದರ ಪರಿಣಾಮವಾಗಿ ಒಟ್ಟು ಸಮಾಜದಲ್ಲಿ ದುರಾಶೆ, ಈರ್ಷ್ಯೆ, ಕ್ರೌರ್ಯಗಳು ಹೆಚ್ಚುತ್ತಾ, ಸಹಾನುಭೂತಿ, ಅನುಕಂಪ, ಸೋದರತೆ ಮುಂತಾದ ಐಕ್ಯತೆ ಮತ್ತು ಸಹಬಾಳ್ವೆಯ ಮೌಲ್ಯಗಳು ಹಿನ್ನೆಲೆಗೆ ಸರಿಯುತ್ತಿವೆ. ಸರ್ವಾಧಿಕಾರಿ ಮತ್ತು ಕುಟುಂಬ ರಾಜಕಾರಣ ಪ್ರಶ್ನಾತೀತವಾಗತೊಡಗಿದೆ. ಈ ಮುಕ್ತ ಮಾರುಕಟ್ಟೆ ಕಾಲದಲ್ಲಂತೂ ಜಾತಿ ಜಾತಿಗಳ ನಡುವಣ ಸ್ಪರ್ಧೆ, ಸ್ಪರ್ಧೆಯ ಎಲ್ಲ ಶೀಲದಿಂದ ಮುಕ್ತವಾಗಿ ನಡೆದಿರುವಾಗ ಸಮಾಜ ಹೆಚ್ಚು ಭ್ರಷ್ಟ ಮತ್ತು ದುಷ್ಟವಾಗುತ್ತಿದೆ. ಇದರಿಂದಾಗಿ ಸಾರ್ವಜನಿಕ ಜೀವನದಲ್ಲಿ ಇಂದು ಹಿಂಸೆ, ಅಶಾಂತಿ ಹೆಚ್ಚುತ್ತಾ ತೀವ್ರತರವಾದ ಸಾಮಾಜಿಕ ಅಸ್ಥಿರತೆಯ ಆತಂಕ ತಲೆದೋರಿದೆ.

ಸಮಾನತೆಯ ಬಂಧನಗಳಿಂದ ತಾವು ವಿಮೋಚನೆಗೊಳ್ಳುವ ಮೂಲಕ ಇಡೀ ಸಮಾಜವನ್ನು ವಿಮೋಚನೆಗೊಳಿಸಬೇಕಿದ್ದ ಸಮುದಾಯಗಳು ಇಂದು ಯಾವ, ಎಂತಹ ರಾಜಕಾರಣದೊಂದಿಗೆ ಗುರುತಿಸಿಕೊಂಡಿವೆ ಎಂಬುದನ್ನು ಒಮ್ಮೆ ಗಮನಿಸಿದರೆ ಚಿತ್ರ ಗಾಬರಿಯಾಗುವಂತಿದೆ. ಸಾಮಾಜಿಕ ನ್ಯಾಯದ ಆಶಯವನ್ನು ಹೋರಾಟವನ್ನಾಗಿ ಮಾಡಿಕೊಂಡು ಬೆಳೆದ ರಾಜಕೀಯ ಪಕ್ಷಗಳು (ಉದಾಹರಣೆ : ಡಿಎಂಕೆ, ಎಂಡಿಎಂಕೆ, ಪಿಎಂಕೆ, ಸಮಾಜವಾದಿ ಪಕ್ಷ, ಬಿಎಸ್ಪಿ ಮುಂತಾದವು ಮತ್ತು ಶೋಷಿತ ಜಾತಿ ಶ್ರೇಣಿಗೆ ಸೇರಿದವರೆಂದು ಹೇಳಲಾದ ನರೇಂದ್ರ ಮೋದಿಯ ರಾಜಕಾರಣ) ಯಾವ ಶಕ್ತಿಗಳ ವಿರುದ್ಧ ತಮ್ಮ ಹೋರಾಟವನ್ನು ಆರಂಭಿಸಿದವೋ ಅವೇ ಯಥಾಸ್ಥಿತಿವಾದಿ ಮತ್ತು ಪಟ್ಟಭದ್ರ ಶಕ್ತಿಗಳನ್ನು ಪ್ರತಿನಿಧಿಸುವ ಪಕ್ಷಗಳ ಬಾಲಂಗೋಚಿಗಳಾಗಿ ಇಂದು ಅತ್ಯಂತ ನಿರ್ಲಜ್ಜ ಮತ್ತು ಸಮಯಸಾಧಕ ರಾಜಕಾರಣ (ಉದಾಹರಣೆ : ಹಿಂದಿನ ಪರಮಾಣು ಶಕ್ತಿ ಒಪ್ಪಂದ ಮತ್ತು ಇತ್ತೀಚಿನ ವಿದೇಶಿ ನೇರ ಬಂಡವಾಳದ ವಿಷಯಗಳಲ್ಲಿ) ಮಾಡಿಕೊಂಡು ಬದುಕುತ್ತಿರುವುದನ್ನು ನಾವು ವಿಷಾದ ಜಿಗುಪ್ಸೆಗಳಿಂದ ಗಮನಿಸುವಂತಾಗಿದೆ. ಏಕೆ ?

ಏಕೆಂದರೆ ನಮ್ಮ ಜಾತಿ ವಿರೋಧಿ ಅಥವಾ ಸಾಮಾಜಿಕ ನ್ಯಾಯ ರಾಜಕಾರಣ ತನ್ನ ತಾತ್ವಿಕ ಏಕಾಗ್ರತೆಯನ್ನು ಕಳೆದುಕೊಂಡು ತಾನು ಎದುರಿಸಬೇಕಾದದ್ದು ಜಾತಿ 'ವ್ಯವಸ್ಥೆ'ಯನ್ನೇ ಹೊರತು 'ಜಾತಿ'ಗಳನ್ನಲ್ಲ ಎಂಬುದನ್ನು ಮರೆತು ಒಳತೋಟಿಯಿಲ್ಲದ ಕೇವಲ ಹೊರ ಹೋರಾಟವಾಗಿ ಬೆಳೆಯಿತು. ಅದು ಹೀಗೆ ತನ್ನ ಆಧ್ಯಾತ್ಮಿಕತೆಯನ್ನು ಕಳೆದುಕೊಂಡು ಅಲ್ಪಕಾಲಿಕ ಲಾಭ ಮತ್ತು ಆಕರ್ಷಣೆಗಳಿಗೆ ಈಡಾಯಿತು. ಇದರ ಒಟ್ಟು ಪರಿಣಾಮವೆಂದರೆ ಸಮಾಜ ಭಾವನಾತ್ಮಕವಾಗಿ ಛಿದ್ರವಾಗಿದೆ; ತನ್ನ ಸಂವೇದನಾಶೀಲತೆಯನ್ನು ಕಳೆದುಕೊಂಡು ಹಣ ಮತ್ತು ಸಂಪತ್ತಿನ ದುಷ್ಟ ಆಟವಾಗಿರುವ ಈ ರಾಜಕಾರಣವೆಂಬ ಅಶ್ಲೀಲ ಸ್ಪರ್ಧೆಯಲ್ಲಿ ಭಾಗವಹಿಸಲಾಗದ ಜನಸಮುದಾಯಗಳನ್ನು ನಿರ್ದಾಕ್ಷಿಣ್ಯವಾಗಿ ಅಂಚಿಗೆ ತಳ್ಳುತ್ತಿದೆ. ಆ ಮೂಲಕ ಜಾತಿ ವ್ಯವಸ್ಥೆಯ ವಿರುದ್ಧದ ಜಾಗೃತಿ ಮತ್ತು ಹೋರಾಟ ಯಾವುದರ ಅಮಾನವೀಯತೆಯಿಂದ ಕೆರಳಿ ಆರಂಭವಾಯಿತೋ ಆ ಅಸ್ಪೃಶ್ಯತೆಯ ಹೊಸ ಸಂಯೋಜನೆಯೊಂದಕ್ಕೆ ದಾರಿ ಮಾಡಿಕೊಡುತ್ತಿದೆ. ಅಲ್ಲಿಗೆ ಜಾತಿ ಪದ್ಧತಿಯ ಹೊಸ ವಿನ್ಯಾಸದ ಎರಕ ಸಿದ್ಧಗೊಂಡಿದೆ ಎಂದೇ ಅರ್ಥ.

– ೫ –

ಹೀಗೆ ಸಾಮಾಜಿಕ ನ್ಯಾಯ ರಾಜಕಾರಣ ತನ್ನ ವಿಪರ್ಯಾಸದ ಕೊನೆಯ ಹಂತವನ್ನು ಮುಟ್ಟುತ್ತಿರುವಂತಿದೆ : ಊಳಿಗಮಾನ್ಯಶಾಹಿಯ ಹೊಸ ಅವತಾರಗಳೊಂದಿಗೆ ಜಾತಿ ವ್ಯವಸ್ಥೆ ಇಂದು ಹೆಚ್ಚು 'ಬಲ'ಶಾಲಿಯೂ, ಅಶ್ಲೀಲವೂ ಆಗಿ ಸಾರ್ವಜನಿಕ ಜೀವನವನ್ನು ಹಿಂದಿಗಿಂತ ಹೆಚ್ಚು ಅಧಿಕಾರದೊಂದಿಗೆ ಆಳತೊಡಗಿದೆ. ಹಾಗಾಗಿ ಅದರ ಹಿಂಸೆ ಹೆಚ್ಚು ಆತ್ಮವಿಶ್ವಾಸದೊಡನೆ – ಅಂದರೆ ಯಾವುದೇ ನೈತಿಕತೆಯ ಭಯವಿಲ್ಲದೆ ನಿಸ್ಸಂಕೋಚವಾಗಿ - ಪ್ರಕಟವಾಗತೊಡಗಿದೆ. ಕೆಲವೇ ಸೂಚನೆಗಳನ್ನು ನೀಡುವುದಾದರೆ, ಹತ್ಯೆ ಈಗ 'ಮರ್ಯಾದೆ'ಯನ್ನು ಪಡೆಯಲಾರಂಭಿಸಿದೆ. ಮಹಿಳೆಯರು ಮತ್ತು ಅತಿ-ಕೆಳಜಾತಿಯ ಜನರು ಹಿಂಸೆಗೆ ಹೆಚ್ಚು ಅಗ್ಗವಾಗತೊಡಗಿದ್ದಾರೆ. ಜಾತಿ ವಿರೋಧಿ ಆಂದೋಲನದ ಆರಂಭದಲ್ಲಿ ಬಳಲಿಹೋಗಿದ್ದ ನಮ್ಮ ಪುರೋಹಿತಶಾಹಿ ಈಗ ಹೊಸದಾಗಿ ಅಭಿವ್ಯಕ್ತಗೊಂಡ ಊಳಿಗಮಾನ್ಯಶಾಹಿಯ ಬೆಂಬಲದೊಂದಿಗೆ ಹೊಸ ಮತ್ತು ಶ್ರೀಮಂತ ಮಾನ್ಯತೆಯೊಂದಿಗೆ ಈ ಹೊಸ ಜಾತಿ ವ್ಯವಸ್ಥೆಯನ್ನು ತನ್ನ ಹತ್ತೂ ಬೆರಳುಗಳಲ್ಲಿನ ಚಿನ್ನದ ಉಂಗುರಗಳೊಂದಿಗೆ ಆಶೀರ್ವದಿಸುತ್ತಿದೆ.

ಮತ್ತೆ ಲೋಹಿಯಾರ ಮಾತುಗಳು ನೆನಪಿಗೆ ಬರುತ್ತಿವೆ : 'ಜಾತಿ ವ್ಯವಸ್ಥೆಯಿಂದಾಗಿ ಬ್ರಾಹ್ಮಣ, ಶೂದ್ರರಿಬ್ಬರೂ ಅರೆ ಜೀವವಾಗಿ ಬಿದ್ದಿದ್ದಾರೆ. ನಿಜವಾದ ಸಮಾನತೆಗಾಗಿ ಒಬ್ಬರು ಇನ್ನೊಬ್ಬರನ್ನು ಕೈಹಿಡಿದೆತ್ತಿ ಸಮಾಜವಾದಿ ರಾಜಕಾರಣದಲ್ಲಿ ಪಾಲ್ಗೊಳ್ಳ ಬೇಕಿದೆ.' ಜಾತಿ-ಜಾತಿ ವಿರೋಧಿ ಅಥವಾ ಜಾತಿ ವಿನಾಶದ ಹೋರಾಟ ಈ ಮಾತನ್ನು ಅದರ ಸಮಗ್ರತೆ ಮತ್ತು ಸೂಕ್ಷ್ಮತೆಗಳೊಂದಿಗೆ - ಬ್ರಾಹ್ಮಣ ಮತ್ತು ಶೂದ್ರರಿಬ್ಬರೂ ಎಂಬುದನ್ನು ಇಡೀ ಸಮಾಜ ಎಂಬರ್ಥದಲ್ಲಿ - ಅರ್ಥಮಾಡಿಕೊಳ್ಳದೇ ಹೋದರೆ ಅದು ನಮ್ಮ ಜಾತಿ ವ್ಯವಸ್ಥೆಯನ್ನು ಪುನರುತ್ಥಾನಿಸುತ್ತಾ ಹೋಗುತ್ತದಷ್ಟೆ.



**ಡಿ. ಎಸ್. ನಾಗಭೂಷಣ**
ಹೆಚ್.ಐ.ಜಿ.-೫, 'ನುಡಿ', ಕಲ್ಲಳ್ಳಿ ಬಡಾವಣೆ,
ವಿನೋಬನಗರ, ಶಿವಮೊಗ್ಗ - ೫೭೭ ೦೦೪

# ಸಮಗ್ರ ವಿಕಾಸದ ಕನಸುಗಾರ: ವೈ. ಬಿ. ರಾಮಕೃಷ್ಣ

ಟಿ. ಎಸ್. ಗೋಪಾಲ್



ಎಚ್. ಎಸ್. ದೊರೆಸ್ವಾಮಿಯವರೊಡನೆ ವೈ. ಬಿ.

''ಭಾರತ ದೇಶ ೭೦-೮೦ ಮಿಲಿಯನ್ ಟನ್‌ಗಳಷ್ಟು ಕಚ್ಚಾ ತೈಲವನ್ನು ಆಮದು ಮಾಡಿಕೊಳ್ಳುತ್ತಿದೆ. ಈ ಬೇಡಿಕೆ ೧೩೦ ಮಿಲಿಯನ್ ಟನ್‌ಗಳವರೆಗೂ ಇದೆ. ಇಷ್ಟೊಂದು ದೊಡ್ಡ ಪ್ರಮಾಣದ ಬೇಡಿಕೆಯನ್ನು ಪೂರೈಸುವಷ್ಟು ಜೈವಿಕ ಇಂಧನವನ್ನು ಉತ್ಪಾದಿಸಬಲ್ಲ ಕೃಷಿ ತ್ಯಾಜ್ಯಗಳಾಗಲಿ, ಬೀಜ ಉತ್ಪಾದಕ ಸಸ್ಯಕೃಷಿ ಸಂಪನ್ಮೂಲಗಳಾಗಲೀ, ಕೃಷಿ ಭೂಮಿಯಾಗಲಿ ನಮ್ಮಲ್ಲಿ ಲಭ್ಯವಿರುವುದೇ ? ಇದರಿಂದ ಬಹು ದೊಡ್ಡ ಪ್ರಮಾಣದಲ್ಲಿ ಜೈವಿಕ ಇಂಧನವನ್ನು ಉತ್ಪಾದಿಸಲು ಸಾಧ್ಯವೇ ? ಎಂಬಿವೇ ಮೊದಲಾದ ಪ್ರಶ್ನೆಗಳು ಸಹಜವಾಗಿಯೇ ಏಳುತ್ತವೆ. ಇರುವಷ್ಟು ಕೃಷಿಭೂಮಿಯಲ್ಲಿ ಜೈವಿಕ ಇಂಧನ ಕೃಷಿಯಂಥಾ ಇತರ ಉದ್ದೇಶಗಳಿಗಾಗಿ ಚಟುವಟಿಕೆಗಳನ್ನು ನಡೆಸುವುದಾದರೆ ಆದರಿಂದ ದೇಶದ ಆಹಾರ ಉತ್ಪಾದನೆ, ಪರಿಸರ ಮೊದಲಾದವುಗಳ ಮೇಲೆ ಆಗಬಹುದಾದ ಪರಿಣಾಮಗಳೇನು ಎಂಬುದೂ ಚರ್ಚಾರ್ಹವೇ.

ಇಡೀ ಜಗತ್ತಿನಲ್ಲಿ (ಶೇ. ೫೪ರಷ್ಟು ಕೃಷಿಭೂಮಿ ಇರುವ) ಬಾಂಗ್ಲಾದೇಶವನ್ನು ಬಿಟ್ಟಂತೆ, ಅತಿ ಹೆಚ್ಚು ಶೇಕಡಾವಾರು ಪ್ರಮಾಣದ ಭೂಮಿ ಕೃಷಿ ಚಟುವಟಿಕೆಗಳಿಗಾಗಿ ಬಳಕೆಯಾಗುತ್ತಿರುವುದು ಭಾರತದಲ್ಲಿಯೇ (ಶೇಕಡಾ ೫೨). ನಮ್ಮ ದೇಶದಲ್ಲಿರುವ ಒಟ್ಟು ಭೂಭಾಗ ೩೮೦ ಮಿಲಿಯ ಹೆಕ್ಟೇರ್. ಇದರಲ್ಲಿ ಸುಮಾರು ೧೮೦-೧೯೦ ಮಿ. ಹೆಕ್ಟೇರ್‌ಗಳಷ್ಟು ಕೃಷಿಭೂಮಿ ಇದೆ. ಈ ಕೃಷಿಭೂಮಿಯ ಶೇ. ೨೫ರಷ್ಟು ಮಾತ್ರವೇ ನೀರಾವರಿಗೊಳಪಟ್ಟ ಪ್ರದೇಶವಾಗಿದ್ದು ಅಣೆಕಟ್ಟೆ, ಕಾಲುವೆಗಳಿಂದ ಹಿಡಿದು ಖಾಸಗಿಯಾಗಿ ಮಾಡಿಕೊಂಡ ಬೋರ್‌ವೆಲ್ ಮತ್ತಿತರ ವ್ಯವಸ್ಥೆಯವರೆಗೆ ಎಲ್ಲ ಸೇರಿ ೩೦-೪೦ ಮಿ.ಹೆ.ಗಳಷ್ಟು ಮಾತ್ರ ನೀರಾವರಿಗೆ ಒಳಪಟ್ಟಿದೆ. ಇನ್ನುಳಿದ ೧೪೦ ಮಿ. ಹೆಕ್ಟೇರ್‌ಗಳಿಗೂ ಹೆಚ್ಚಿನ ಪ್ರದೇಶ ಮಳೆಯಾಧಾರಿತ ಕೃಷಿಗೊಳಪಟ್ಟಿದ್ದು ವರ್ಷಕ್ಕೆ ಒಂದೇ ಬೆಳೆ ತೆಗೆಯುವಷ್ಟಕ್ಕೆ ತೃಪ್ತಿಪಡಬೇಕಾಗಿದೆ. ಅಂದರೆ, ಇವಿಷ್ಟೂ ಕೃಷಿ ಭೂಮಿಗೆ ಸರಿಯಾದ ನೀರಾವರಿಯ ವ್ಯವಸ್ಥೆಯಾಗಲಿ ಪರ್ಯಾಯ ಬೆಳೆಯ ವ್ಯವಸ್ಥೆಯಾಗಲಿ ಇದ್ದಿದ್ದರೆ ಈ ಭೂಮಿಯಲ್ಲೂ ವರ್ಷಪೂರ್ತಿ ಕೃಷಿ ಚಟುವಟಿಕೆಗಳಿಗೆ ಅವಕಾಶವಿರುತ್ತಿತ್ತು. ಅಂದರೆ, ಭಾರತದಲ್ಲಿ ಕೃಷಿ ಚಟುವಟಿಕೆಗೆ ಬಳಕೆಯಾಗುತ್ತಿರುವ ಭೂಪ್ರದೇಶ, ನಮ್ಮ ಅಗತ್ಯನಿರೀಕ್ಷೆಗಳಿಗಿಂತ ಕಡಿಮೆ ಪ್ರಮಾಣದಲ್ಲಿ ಬಳಕೆಯಾಗುತ್ತಿರುವ ಭೂಮಿಯಾಗಿದೆ.

ಇನ್ನು ನಗರ ಪ್ರದೇಶ, ಗುಡ್ಡಬೆಟ್ಟ, ನದಿ, ಕೈಗಾರಿಕೆ ಇತ್ಯಾದಿಗಳನ್ನು ಹೊರತುಪಡಿಸಿದಂತೆ ಕೃಷಿಗೆ ಯೋಗ್ಯವಲ್ಲದ ಭೂಮಿಯೇ ೧೨೦ ಮಿ.ಹೆ.ಗಳಷ್ಟಿದೆ. ಇದನ್ನು ವೇಸ್ಟ್‌ಲ್ಯಾಂಡ್ ಎಂದು ವಿಂಗಡಿಸಿಬಿಟ್ಟಿದ್ದೇವೆ. ಕೃಷಿ ಮಾಡದ, ಕೃಷಿಕರ ಸ್ವಾಮ್ಯವಿಲ್ಲದ ಈ ಸರ್ಕಾರಿ ಭೂಮಿಯನ್ನು ಬಂಜರುಭೂಮಿ ಎಂದೋ ಅನುಪಯುಕ್ತ ಎಂದೋ ಕರೆದಿರಬಹುದು. ಇದರಲ್ಲೂ ಒತ್ತುವರಿಯಾಗಿರುವ, ಇತರ ಉದ್ದೇಶಗಳಿಗಾಗಿ ಬಳಸಲಾಗುತ್ತಿರುವ ಭೂಮಿಯೂ ಒಂದಷ್ಟು ಇರಬಹುದು. ಇಂತಹ ಭೂಪ್ರದೇಶ ಶೇ. ೨೫ರಷ್ಟಿದೆ ಎಂದಿಟ್ಟುಕೊಂಡರೂ ಉಳಿದ ೮೦-೯೦ ಮಿ.ಹೆ.ನಷ್ಟು ಪ್ರದೇಶ ವೇಸ್ಟ್‌ಲ್ಯಾಂಡ್ ರೂಪದಲ್ಲಿದೆ. ಇದು ವೇಸ್ಟ್ ಅಲ್ಲ ವೇಸ್ಟೆಡ್‌ಲ್ಯಾಂಡ್, ಅನುಪಯುಕ್ತವಲ್ಲ, ಉಪಯೋಗಿಸದೆ ಬಿಟ್ಟದ್ದು. ಈ ಭೂಮಿಯಲ್ಲಿ ಸರ್ಕಾರಿ ಸ್ವಾಮ್ಯದ ಭೂಪ್ರದೇಶವೇ ಹೆಚ್ಚು, ರೈತರ ಭೂಮಿಯೂ ಇದೆ.

ಈ ಅಂಶಗಳ ಪ್ರಕಾರ ನಮ್ಮ ದೇಶದ ೨೦೦ ಮಿ.ಹೆ.ಗೂ ಹೆಚ್ಚಿನ ಪ್ರದೇಶ, ಅದು ರೈತರ ಒಡೆತನದಲ್ಲಿರಲಿ, ಸರ್ಕಾರಿ ಸ್ವಾಮ್ಯದಲ್ಲಿರಲಿ, ಕಡಿಮೆ ಬಳಕೆಯಾಗುತ್ತಿರುವ ಭೂಮಿಯೋ ಅನುಪಯುಕ್ತವಾಗಿರುವ ಭೂಮಿಯೋ ಆಗಿದೆ. ಈ ಭೂಪ್ರದೇಶದ ಅರ್ಧದಷ್ಟೇ ಭಾಗದಲ್ಲಿ ಜೈವಿಕ ಇಂಧನ ಸಸ್ಯಗಳನ್ನು ಬೆಳೆದರೂ ಒಂದು ಹೆಕ್ಟೇರಿಗೆ ಒಂದು ಟನ್ ಎಣ್ಣೆ (ವಾಸ್ತವವಾಗಿ ಉತ್ತಮ ವ್ಯವಸ್ಥೆಯಲ್ಲಿ ಎರಡು – ಮೂರು ಟನ್ ಎಣ್ಣೆಯನ್ನೇ ತೆಗೆಯಬಹುದು) ಎಂದಿಟ್ಟುಕೊಂಡರೂ ನೂರು ಮಿಲಿಯನ್ ಟನ್ ಎಣ್ಣೆಯ ಉತ್ಪಾದನೆ ಸಾಧ್ಯ. ಇನ್ನು ಹೀಗೆ ಜೈವಿಕ ಇಂಧನ ಸಸ್ಯ ಕೃಷಿ ಮಾಡಲು ಸಮುದಾಯವನ್ನು ಹೇಗೆ ತೊಡಗಿಸಲಾಗುತ್ತಿದೆ. ರೈತರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರ ಸಾಮರ್ಥ್ಯವನ್ನು ಹೇಗೆ ಉಪಯೋಗಿಸಿಕೊಳ್ಳಲಾಗುತ್ತದೆ ಇವೆಲ್ಲವೂ ಸಮುದಾಯ ಸಂಘಟನೆ, ಆಸಕ್ತಿ ಕೌಶಲಗಳಿಗೆ ಸಂಬಂಧಪಟ್ಟಿರುವಂಥದು.'' ವೈ. ಬಿ. ರಾಮಕೃಷ್ಣ

೧೯೮೦ರಿಂದೀಚೆಗೆ ಕರ್ನಾಟಕದ ಯಾವುದೇ ಮೂಲೆಯಲ್ಲಿ ನಡೆದಿರಬಹುದಾದ ಪರಿಸರ ಸಂಬಂಧಿತ ಆಂದೋಲನಗಳೆಲ್ಲದರಲ್ಲಿ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ನೆರಳು ಹೊರಳಿಸಿರುವ ವ್ಯಕ್ತಿಯೊಬ್ಬರು ನಮ್ಮ ನಿಮ್ಮ ನಡುವೆಯೇ ಇದ್ದಾರೆ. ಈಚಿನ ವರ್ಷಗಳಲ್ಲಿ ಇವರು ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಯ ನೇತೃತ್ವ ವಹಿಸಿ ಬಿಡುವಿಲ್ಲದ ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದರೂ, ಪ್ರಕೃತಿ-ಪರಿಸರವೆಂದರೆ ಸಾಕು, ಯಾವ ಹೊತ್ತಿಗಾದರೂ ಜೊತೆಗೆ ಬಂದು ಕುಳಿತುಕೊಳ್ಳುತ್ತಾರೆ. ಸಾಮಾಜಿಕ, ರಾಜಕೀಯ, ಆರ್ಥಿಕ ಒತ್ತಡಗಳ ಪರಿಣಾಮವಾಗಿ ನಿಸರ್ಗಸಂಪತ್ತು ದಿನೇದಿನೇ ಕುಗ್ಗುತ್ತಿರುವ ಬಗೆಗಿನ ಬೇಸರವನ್ನು ಅಡಗಿಸಿ, ಮೂವತ್ತು ವರ್ಷಗಳ ಹಿಂದಿನ ಅದೇ ಉತ್ಸಾಹ ಆಸಕ್ತಿಗಳಿಂದ ಭವಿಷ್ಯದ ಭರವಸೆಯ ಮಾತುಗಳೊಡನೆ ನಮ್ಮಲ್ಲಿ ಜೀವನಶ್ರದ್ಧೆಯ ಹೊಳಹು ಮೂಡಿಸುತ್ತಾರೆ.

ಹೌದು, ನಾನು ಅದೇ ವೈ. ಬಿ. ರಾಮಕೃಷ್ಣರ ಬಗೆಗೆ ಮಾತನಾಡುತ್ತಿದ್ದೇನೆ : ಯಗಟಿ ಬದರಿನಾರಾಯಣ ರಾಮಕೃಷ್ಣ. ಹುಟ್ಟಿದ್ದು (೧೯೫೭) ಬೆಂಗಳೂರು, ಓದಿ ಬೆಳೆದದ್ದೆಲ್ಲ ಶಿವಮೊಗ್ಗ, ಮೈಸೂರುಗಳಂಥ ನಗರಪ್ರದೇಶಗಳಲ್ಲೇ ಆದರೂ ನಿಸರ್ಗಪ್ರೇಮ, ಕುತೂಹಲ ಚಿಕ್ಕಂದಿನಿಂದಲೇ ಅಂಟಿಕೊಂಡಿದ್ದುವು. ಮೈಸೂರಿನಲ್ಲಿ ಎಲೆಕ್ಟ್ರಾನಿಕ್ಸ್ ಇಂಜಿನಿಯರಿಂಗ್ ಪದವಿ ಪಡೆದು ಬೆಂಗಳೂರಿನಲ್ಲಿ ಜೀವನೋಪಾಯದ ಉದ್ಯೋಗಕ್ಕೆ ಸೇರಿ ನೆಲೆನಿಂತ ಮೇಲೆ, ನಾಗರಿಕ ಪ್ರಪಂಚದ ಒತ್ತಡಗಳ ನಡುವೆ ಕ್ಷೀಣಿಸುತ್ತಿರುವ ಪ್ರಕೃತಿಯ ಉಳಿವಿಗಾಗಿ ಏನನ್ನಾದರೂ ಮಾಡಲೇಬೇಕೆನ್ನುವ ಹಂಬಲ ತೀವ್ರವಾಗ ತೊಡಗಿತು. ಸಮಾನವಯಸ್ಕರೂ, ಮನಸ್ಕರೂ ಆದ ಬೆಂಗಳೂರಿನ ಮಿತ್ರಬಳಗ ರಾಮಕೃಷ್ಣರ ಈ ಹುಚ್ಚಿನಲ್ಲಿ ಪಾಲ್ಗೊಂಡರು. ಹತ್ತು-ಹದಿನೈದು ಜನ ಸ್ನೇಹಿತರು ಸೇರಿ ಹುಟ್ಟುಹಾಕಿದ ಬಳಗವೇ ಮುಂದೆ 'ಸಮಗ್ರ ವಿಕಾಸ' ಎಂಬ ಪ್ರಸಿದ್ಧಿ ಪಡೆದ ಸೇವಾಸಂಸ್ಥೆ. ಎಂ. ಪಿ. ಕುಮಾರ್, ಎಂ. ಹೆಚ್. ಶ್ರೀಧರ್, ಮಹಾಬಲೇಶ್ ಭಟ್, ಟಿ. ಎನ್. ಶಿವಪ್ರಸಾದ್, ವಿಶ್ವನಾಥ್, ಡಾ|| ಶ್ಯಾಮಸುಂದರ್, ಡಾ|| ಶೇಖರ್ ಬೋರ್ಗಾಂವ್ಕರ್, ಹಾಗೂ ವೈ. ಬಿ. ರಾಮಕೃಷ್ಣ - ಸಮಗ್ರ ವಿಕಾಸದ ಸ್ಥಾಪಕ ಸದಸ್ಯರು.



ಸಮಗ್ರ ವಿಕಾಸದಲ್ಲಿ ಜೊತೆಗೂಡಿದ ಗೆಳೆಯರಲ್ಲಿ ವಿಜ್ಞಾನಿಗಳು, ವಕೀಲರು, ಇಂಜಿನಿಯರ್‌ಗಳೇ ಮೊದಲಾಗಿ ಎಲ್ಲ ಕ್ಷೇತ್ರಕ್ಕೆ ಸಂಬಂಧಿಸಿದವರಿದ್ದರು. ಇವರೆಲ್ಲ ಆಗಿಂದಾಗ್ಗೆ ನಡೆಸಿದ 'ಬ್ರೇನ್ ಸ್ಟಾರ್ಮಿಂಗ್' ಸಭೆಗಳಲ್ಲಿ ಸಾಮಾಜಿಕ ಸೇವಾ ಚಟುವಟಿಕೆಗಳಲ್ಲಿ ತೊಡಗಿಕೊಳ್ಳುವ ಮುನ್ನ ಅಗತ್ಯವಾದ ಅಧ್ಯಯನ, ಪೂರ್ವಸಿದ್ಧತೆ, ಪರಿಶೀಲನೆಗಳ ಬಗೆಗೆ ಸಾಕಷ್ಟು ಚರ್ಚೆ ನಡೆಯಿತು. ನಾಡಿನೆಲ್ಲೆಡೆ ಎಂಬತ್ತರ ದಶಕದ ವೇಳೆಗೆ ನಡೆಯುತ್ತಿದ್ದ ಪರಿಸರ ಸಂಬಂಧಿ ಹೋರಾಟಗಳೆಲ್ಲ ಪ್ರಕೃತಿ ಪ್ರೇಮದ ಭಾವನಾತ್ಮಕ ಅಭಿವ್ಯಕ್ತಿಗಳಂತೆ ತೋರುತ್ತಿದ್ದವು. ಈ ದಿಸೆಯಲ್ಲಿ ನಾಡಿನಾದ್ಯಂತ ತೊಡಗಿಕೊಂಡಿದ್ದ ನೂರಾರು ಸಂಘಸಂಸ್ಥೆಗಳ ಚಟುವಟಿಕೆಗಳೆಲ್ಲ ಸೂಕ್ತಮಾಹಿತಿ, ತಳಸ್ಪರ್ಶಿ ಅಧ್ಯಯನಗಳ ಕೊರತೆಯಿಂದಾಗಿ ಕೇವಲ ಮೇಲುನೋಟದ ಸಡಗರ, ಕ್ಷಿಪ್ರವೈಫಲ್ಯಗಳ ಹಿನ್ನಡೆಯಲ್ಲಿ ಅಂತ್ಯ ಕಾಣುವಂತಾಗಿತ್ತು. ಯಾವುದೇ ಆಂದೋಲನವು ವೈಜ್ಞಾನಿಕ ತಳಹದಿಯ ಮೇಲೆ ರೂಪುಗೊಳ್ಳುವುದು ಅವಶ್ಯಕವೆಂಬುದು ಸಮಗ್ರ ವಿಕಾಸದ ಪ್ರತಿಪಾದನೆಯಾಗಿತ್ತು. ಸ್ಥಳೀಯ ವಿಷಯಗಳ ಬಗೆಗೆ ಯೋಚಿಸುವ ಸಂದರ್ಭದಲ್ಲಿ ವಿಶಾಲ ದೃಷ್ಟಿಕೋನವಿದ್ದಲ್ಲಿ ಮಾತ್ರ ಪರಿಹಾರ ಸಾಧ್ಯ. 'ಥಿಂಕ್ ಗ್ಲೋಬಲಿ, ಆ್ಯಕ್ಟ್ ಲೋಕಲಿ' ಎಂಬ ಧ್ಯೇಯವಾಕ್ಯ ಸಮಗ್ರ ವಿಕಾಸದ ಚಟುವಟಿಕೆಗಳಿಗೆ ಹಾದಿತೋರಿತು. ಜಾಗತಿಕ ದೃಷ್ಟಿಕೋನದಲ್ಲಿ ಸ್ಥಳೀಯ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ವಿವಿಧ ಸಂಘಟನೆಗಳಿಗೆ ಸೂಕ್ತ ಮಾರ್ಗದರ್ಶನ, ಮಾಹಿತಿ, ಕಾನೂನು ನೆರವು ನೀಡಲು ಸಮಗ್ರ ವಿಕಾಸದ ಗೆಳೆಯರು ಮುಂದಾದರು.

ಹೀಗೆ, ಪರಿಸರ ಸಂರಕ್ಷಣೆಯಿಂದ ಗ್ರಾಮೀಣ ಅಭಿವೃದ್ಧಿಯವರೆಗೆ ವಿವಿಧ ಚಟುವಟಿಕೆಗಳಲ್ಲಿ ತೊಡಗಿಕೊಂಡಿದ್ದ ೩೦೦ಕ್ಕೂ ಹೆಚ್ಚು ಸಂಘಟನೆಗಳೊಡನೆ ರಾಮಕೃಷ್ಣ ಮತ್ತವರ ಗೆಳೆಯರು ಸಂಪರ್ಕಜಾಲವನ್ನು ಹಮ್ಮಿಕೊಂಡರು. ಮಾಹಿತಿ-ತರಬೇತಿ-ಸಾಮರ್ಥ್ಯವೃದ್ಧಿಯ ಮೂಲಕ ಎಲ್ಲ ಸಂಘಟನೆಗಳು ತಮ್ಮ ಚಟುವಟಿಕೆಗಳನ್ನು ಪರಿಣಾಮಕಾರಿಯಾಗಿ ವಿಸ್ತರಿಸಿಕೊಳ್ಳಲು ಅನುವಾಗುವಂತೆ ಅನೇಕ ವಿಚಾರ ಸಂಕಿರಣ, ತರಬೇತಿ ಕಾರ್ಯಕ್ರಮಗಳನ್ನು ಏರ್ಪಡಿಸಿದರು.

ಇದೇ ವೇಳೆಗೆ (೧೯೮೭) ಪ್ರಾರಂಭವಾಗಿದ್ದ 'ಪಶ್ಚಿಮ ಘಟ್ಟ ಉಳಿಸಿ' ಪಾದಯಾತ್ರೆಯಲ್ಲಿ ರಾಮಕೃಷ್ಣ ಸಕ್ರಿಯವಾಗಿ ಪಾಲ್ಗೊಂಡರು. ಒಂದು ನೂರು ದಿನಗಳ ತನಕ ನಡೆದ ಪಾದಯಾತ್ರೆ ಕನ್ಯಾಕುಮಾರಿಯಿಂದ ಆರಂಭವಾಗಿ ಕೇರಳ-ಕರ್ನಾಟಕ-ಮಹಾರಾಷ್ಟ್ರ-ಗೋವಾ ರಾಜ್ಯಗಳನ್ನು ಒಳಗೊಂಡ ಬೃಹತ್ ಕಾರ್ಯಕ್ರಮವಾಗಿತ್ತು. ಕರ್ನಾಟಕ ಭಾಗದಲ್ಲಿ ಶಿವರಾಮ ಕಾರಂತರ ಹಿರಿತನದಲ್ಲಿ ನಡೆದ ಪಾದಯಾತ್ರೆಯಲ್ಲಿ ಪಾಲ್ಗೊಂಡ ರಾಮಕೃಷ್ಣರಿಗೆ ಪಶ್ಚಿಮ ಘಟ್ಟಗಳ ಜೀವಿವೈವಿಧ್ಯದೊಡನೆ ಆ ಪ್ರದೇಶದಲ್ಲಿದ್ದ ಹಳ್ಳಿಗಳ ಸಮೀಪ ಪರಿಚಯ ಒದಗಿತು. ಸ್ಥಳೀಯ ಸಮಸ್ಯೆಗಳು, ಆ ಪ್ರದೇಶದಲ್ಲಿ ಅಭಿವೃದ್ಧಿಯ ಹೆಸರಿನಲ್ಲಿ ಆಗುತ್ತಿದ್ದ ಅನೇಕ ಚಟುವಟಿಕೆಗಳು ಹಾಗೂ ಅವುಗಳಿಂದ ಪರಿಸರದ ಮೇಲಾಗುತ್ತಿದ್ದ ದುಷ್ಪರಿಣಾಮಗಳನ್ನು ಸಮೀಪದಿಂದ ಅಧ್ಯಯನ ಮಾಡುವ ಅವಕಾಶವೂ ದೊರಕಿದಂತಾಯಿತು. ಅನೇಕ ಸ್ಥಳೀಯ ಸಂಘಟನೆಗಳ ಪರಿಚಯವೂ ಒದಗಿ, ಪರಿಸರ ಸಂಬಂಧಿತ ಆಂದೋಲನಗಳು ರೂಪುಗೊಳ್ಳಬೇಕಾದ ಸ್ವರೂಪದ ಬಗೆಗೆ ಸ್ಪಷ್ಟ ಚಿತ್ರಣವೂ ಲಭಿಸಿತು. ಮುಂದೆ, ಕೈಗಾ ಅಣುವಿದ್ಯುತ್ ಸ್ಥಾವರ ಹಾಗೂ ಶರಾವತಿ ಟೇಲ್ ರೇಸ್ ಯೋಜನೆಗಳ ವಿರುದ್ಧ ನಡೆಸಿದ ಚಳುವಳಿಗಳಿಗೆ ಸ್ಪಷ್ಟ ಮಾದರಿ ಕಂಡುಕೊಳ್ಳಲೂ ಅವಕಾಶವಾಯಿತು. ಹತ್ತು ವರ್ಷ ಕಳೆದ ಮೇಲೆ, ಇದೇ ಕರ್ನಾಟಕ ಭಾಗದ ಪಶ್ಚಿಮಘಟ್ಟದ ಶ್ರೇಣಿಯುದ್ದಕ್ಕೂ ರಾಮಕೃಷ್ಣ ತಮ್ಮ ಪತ್ನಿ ತೃಪ್ತಿ ಹಾಗೂ ಇತರ ಸ್ನೇಹಿತರೊಂದಿಗೆ ಅಧ್ಯಯನ ಪ್ರವಾಸ ಕೈಗೊಂಡರು.

ನಾಡಿನ ವಿವಿಧೆಡೆಗಳಲ್ಲಿ ಸ್ಥಳೀಯವಾಗಿ ಹೋರಾಟ ನಡೆಸುವವರಿಗೆ ರಾಜಧಾನಿಯ ಸಂಪರ್ಕ ಅತ್ಯವಶ್ಯಕ. ಅದು ಕಾನೂನಿನ ನೆರವಿಗೆ ಸಂಬಂಧಿಸಿದ್ದಾಗಿರಬಹುದು, ಇಲ್ಲವೇ ಸರ್ಕಾರದ ಜೊತೆಗೆ ಸಂಪರ್ಕ ಸಾಧಿಸುವುದಿರಬಹುದು. ರಾಮಕೃಷ್ಣರ ಬಳಗ ಇದಕ್ಕಾಗಿ ಬೆಂಗಳೂರನ್ನು ಕೇಂದ್ರವಾಗಿರಿಸಿಕೊಂಡು, ನಾಡಿನ ವಿವಿಧ ಸಂಘಟನೆಗಳಿಗೆ ಈ ಮಾದರಿಯ ಅವಶ್ಯಕ ನೆರವು ಒದಗಿಸಲು ಸಹಾಯಹಸ್ತ ನೀಡಿ ಸಹಕರಿಸಿತು.

ಸಮಗ್ರ ವಿಕಾಸ ಕಂಡುಕೊಂಡ ಇನ್ನೊಂದು ಮುಖ್ಯ ಅಂಶವೇನೆಂದರೆ, ಸಾಮಾನ್ಯವಾಗಿ ಸ್ಥಳೀಯವಾಗಿ ನಡೆಯುವ ಇಂತಹ ಹೋರಾಟಗಳ ಮುಖಂಡರಿಗೂ, ಯೋಜನೆಯ ಅನುಷ್ಠಾನ ಮಾಡಹೊರಟ ಕಂಪೆನಿಗಳವರಿಗೂ ವಿಜ್ಞಾನಿಗಳಿಗೂ ಸರ್ಕಾರಿ ಅಧಿಕಾರಿಗಳಿಗೂ ಸಂಪರ್ಕ-ಸಂವಾದಗಳೇ ಇರುವುದಿಲ್ಲ. ಅವರವರು ತಮ್ಮ ತಮ್ಮ ಮೂಗಿನ ನೇರಕ್ಕೆ ಹೇಳಿಕೊಳ್ಳುವುದು, ಒಬ್ಬರನ್ನು ಮತ್ತೊಬ್ಬರು ವಿರೋಧಿಸುತ್ತ



ಕೈಗಾ ವಿರುದ್ಧ ಪ್ರತಿಭಟನೆ

ಕಾಲ ತಳ್ಳುವುದು - ಇಷ್ಟರಲ್ಲೇ ಆಂದೋಲನಗಳೆಲ್ಲ ನಿಂತ ನೀರಾಗುತ್ತಿದ್ದವು. ಈ ನಿಟ್ಟಿನಲ್ಲಿ ಸಮಗ್ರ ವಿಕಾಸ ಸಂಘಟನೆ ಇವರೆಲ್ಲರನ್ನೂ ಒಂದು ವೇದಿಕೆಗೆ ಆಹ್ವಾನಿಸಿ ಸಂಪರ್ಕ ಸಭೆಗಳನ್ನು ಏರ್ಪಡಿಸುವಲ್ಲಿ ಮಹತ್ವದ ಪಾತ್ರ ವಹಿಸಿತು. ಪರಿಸರಕ್ಕೆ ಹಾನಿಯುಂಟಾಗದ ರೀತಿಯಲ್ಲಿ ಯೋಜನೆಗಳನ್ನು ಅನುಷ್ಠಾನಗೊಳಿಸುವುದು ಸಾಧ್ಯವೇ ಎಂಬ ಬಗೆಗೆ ಚರ್ಚೆಗಳನ್ನು ಏರ್ಪಡಿಸಿತು. ರಾಮಕೃಷ್ಣರ ತಂಡ ಸಂಘಟಿಸಿದ ಕಾರ್ಯಕ್ರಮಗಳಲ್ಲಿ ಮೂಡಿಬಂದ ಇಂಥ ಸಂವಾದಗಳಿಂದಲೂ, ಕಾನೂನು ಅರಿವು ಮೂಡಿಸುವ ಕಾರ್ಯಾಗಾರಗಳಿಂದಲೂ ವಿವಿಧ ಸಂಘಟನೆಗಳ ಸ್ಥಳೀಯ ಹೋರಾಟಗಳಿಗೆ ಸರಿಯಾದ ದಿಕ್ಕು, ತಿಳಿವಳಿಕೆ, ಸಾಮರ್ಥ್ಯಗಳು ಒದಗಿಬರುವುದಕ್ಕೆ ಸಹಾಯವಾಯಿತು.

೧೯೮೦ರ ನರ್ಮದಾ ಬಚಾವೋ ಆಂದೋಲನದಲ್ಲಿ ರಾಮಕೃಷ್ಣ ಮತ್ತವರ ಪತ್ನಿ ತೃಪ್ತಿ ಸಕ್ರಿಯವಾಗಿ ಭಾಗವಹಿಸಿದ್ದರು. ಅಲ್ಲದೆ, ಕರ್ನಾಟಕದಲ್ಲಿ ನರ್ಮದಾ ಆಂದೋಲನಕ್ಕೆ ಸಂಬಂಧಿಸಿದ ಸಂಪರ್ಕಕಾರ್ಯವನ್ನೂ ನಿರ್ವಹಿಸಿದರು. ನರ್ಮದಾ ಬಚಾವೋ ಮತ್ತು ಕೇರಳದ ಸೈಲೆಂಟ್ ವ್ಯಾಲಿ ಚಳುವಳಿಗಳೊಡನೆ ರಾಷ್ಟ್ರದ ಗಮನ ಸೆಳೆದ ಪ್ರಮುಖ ಚಳುವಳಿಗಳೆಂದರೆ ಕರ್ನಾಟಕದ ಕೈಗಾ ಅಣುಸ್ಥಾವರ ವಿರೋಧಿ ಚಳುವಳಿ ಮತ್ತು ಶರಾವತಿ ಟೇಲ್ ರೇಸ್ ಯೋಜನೆ ವಿರುದ್ಧದ ಆಂದೋಲನ. ರಾಮಕೃಷ್ಣ ಇವೆರಡೂ ಆಂದೋಲನಗಳಲ್ಲಿ ಸಕ್ರಿಯವಾಗಿ ಭಾಗವಹಿಸಿದ್ದರು. ಬೆಂಗಳೂರಿನ ಅವಿನಾಶ (ಅಣುಶಕ್ತಿ ವಿರೋಧಿ ನಾಗರಿಕ ಶಕ್ತಿ) ಸಂಘಟನೆ, ಧಾರವಾಡದ ಸಮಾಜ ಪರಿವರ್ತನಾ ಸಮುದಾಯ ಹಾಗೂ ಉತ್ತರಕನ್ನಡ ಪರಿಸರ ಸಂರಕ್ಷಣಾ ವೇದಿಕೆಯ ಅಧ್ಯಕ್ಷರಾಗಿದ್ದ ಡಾ॥ ಕುಸುಮಾ ಸೊರಬ ಮೊದಲಾದವರ ನೇತೃತ್ವದಲ್ಲಿ ನಡೆದ ಈ ಆಂದೋಲನಗಳಲ್ಲಿ ಸಮಗ್ರ ವಿಕಾಸವೂ ಪ್ರಮುಖಪಾತ್ರ ವಹಿಸಿತು. ೧೯೮೯ರಲ್ಲಿ ಕೈಗಾ ಅಣುಸ್ಥಾವರದ ವಿರುದ್ಧ ನಡೆದ ಆಂದೋಲನದ ಅಂಗವಾಗಿ ಅನೇಕ ಶೈಕ್ಷಣಿಕ ಕಾರ್ಯಕ್ರಮಗಳು, ರಸ್ತೆ ತಡೆ, ಉಪವಾಸ ಸತ್ಯಾಗ್ರಹಗಳು ವ್ಯಾಪಕವಾಗಿ ನಡೆದವು. ಬೆಂಗಳೂರಿನ ಭಾರತೀಯ ವಿಜ್ಞಾನ ಮಂದಿರದಲ್ಲಿ ರಾಷ್ಟ್ರೀಯಮಟ್ಟದ ವಿಚಾರ ಸಂಕಿರಣವೊಂದನ್ನೂ ಸಮಗ್ರ ವಿಕಾಸದ ವತಿಯಿಂದ ಏರ್ಪಡಿಸಲಾಗಿದ್ದು, ಶಿವರಾಮ ಕಾರಂತ, ನಾಗೇಶ ಹೆಗಡೆ ಮೊದಲಾದ ಪ್ರಮುಖರೂ ವಿಷಯತಜ್ಞರೂ ಪಾಲ್ಗೊಂಡಿದ್ದರು.

ಶಿವರಾಮ ಕಾರಂತರ ಹಿರಿತನದಲ್ಲೇ ಕೈಗಾ ಸ್ಥಾವರದ ವಿರುದ್ಧ ಸುಪ್ರೀಂ ಕೋರ್ಟ್‌ನಲ್ಲಿ ಮೊಕದ್ದಮೆ ದಾಖಲಿಸಲಾಯಿತು. ಸುಪ್ರೀಂ ಕೋರ್ಟ್‌ನಲ್ಲಿ ವಿಚಾರಣೆಗೆ ನಿಗದಿಯಾದ ದಿನ ಇವರ ಪರವಾಗಿ ವಾದ ಮಂಡಿಸಬೇಕಾಗಿದ್ದ ನಿವೃತ್ತ ನ್ಯಾಯಮೂರ್ತಿ ವಿ. ಎಂ. ತಾರ್ಕುಂಡೆ ಅನಾರೋಗ್ಯದ ನಿಮಿತ್ತ ಭಾಗವಹಿಸಲಾಗುವುದಿಲ್ಲವೆಂದು ತಿಳಿದಾಗ ಹೋರಾಟಗಾರರಿಗೆ ತಮ್ಮ ಇಡೀ ಪ್ರಯತ್ನವೇ ವಿಫಲವಾಗುವಂತಹ ಆಘಾತ ಎದುರಾಯಿತು. ಎದೆಗೆಡದ ರಾಮಕೃಷ್ಣ ಮತ್ತವರ ಮಿತ್ರರು ಆಗ ಬೇರೆ ವಕೀಲರ ಮೂಲಕ ಸುಪ್ರೀಂ ಕೋರ್ಟ್ ಮೊರೆಹೊಕ್ಕರು.

ಇಡೀ ಕೈಗಾ ಪ್ರದೇಶದ ಸುತ್ತಮುತ್ತ ೧೦ ಕಿ.ಮೀ. ಪ್ರದೇಶದ ಜನವಸತಿಗಳಲ್ಲಿ ಬೇಸ್ ಲೈನ್ ಹೆಲ್ತ್ ಸರ್ವೇ ಆರೋಗ್ಯ ಸಮೀಕ್ಷೆಯನ್ನು ಸಮಗ್ರ ವಿಕಾಸ ಕೈಗೊಂಡಿತು. ಇಪ್ಪತ್ತು ಸಾವಿರಕ್ಕೂ ಹೆಚ್ಚು ಜನರ ಆರೋಗ್ಯಮಾಹಿತಿಯನ್ನು ಈ ಸಂದರ್ಭದಲ್ಲಿ ದಾಖಲಿಸಲಾಯಿತು. ಅಣುಸ್ಥಾವರದ ಸ್ಥಾಪನೆಯ ಹಿನ್ನೆಲೆಯಲ್ಲಿ ಅದರ ಆಸುಪಾಸಿನಲ್ಲಿ ನಡೆಸಲಾದ ಈ ಸಮೀಕ್ಷೆ ವಿಶ್ವದಲ್ಲೇ ಪ್ರಥಮವೆಂಬ ಹಿರಿಮೆಗೆ ಪಾತ್ರವಾಯಿತು. ಅದರ ಬೆನ್ನಲ್ಲೇ ಸರಕಾರವೂ ಮಣಿಪಾಲ್ ಆಸ್ಪತ್ರೆಯ ಸಹಯೋಗದಲ್ಲಿ ಇಂಥದೊಂದು ಸಮೀಕ್ಷೆ ನಡೆಸಿತು. ಇದೀಗ ಇಂತಹ ಸಮೀಕ್ಷೆಗಳನ್ನು ನಡೆಸುವುದು ಕಡ್ಡಾಯವೂ ಆಗಿದೆ.

ಒಂದೆಡೆ, ಕೇರಳದ ಸೈಲೆಂಟ್ ವ್ಯಾಲಿಯನ್ನು ಕಾಪಾಡಿಕೊಳ್ಳುವ ಆಂದೋಲನ ಇಡೀ ದೇಶದ ಗಮನ ಸೆಳೆದರೆ, ಅದಕ್ಕಿಂತ ಎಷ್ಟೋ ವಿಸ್ತಾರವಾದ ಶರಾವತಿ ಕಣಿವೆಯನ್ನು ಜಲವಿದ್ಯುತ್ ಯೋಜನೆಯ ಮೂಲಕ ಮುಳುಗಿಸುವ ಹುನ್ನಾರ ಎಲ್ಲರನ್ನು ಬಡಿದೆಬ್ಬಿಸದೆ ಹೋದುದು ಅಚ್ಚರಿಯ ಸಂಗತಿ. ನಾಲ್ಕು ಸಾವಿರ ವರ್ಷಗಳಿಗೂ ಹಳೆಯದಾದ ಜೀವವೈವಿಧ್ಯ ಸಂಪನ್ನವಾದ ಶರಾವತಿ ಕಣಿವೆ ಹದಿನೆಂಟು ಸ್ತರಗಳ ಅರಣ್ಯಸಮೃದ್ಧಿಯ ಬೀಡು. ಸಮುದ್ರದ ಜಲಚರಗಳು ಇಲ್ಲೇ ಹಿನ್ನೀರಿಗೆ ಬಂದು ಸಿಹಿನೀರಿನಲ್ಲಿ ಮೊಟ್ಟೆಯಿಟ್ಟು ಮರಿಮಾಡಿ ತೆರಳುವ ಜಾಗ. ಬೆಲೆ ಕಟ್ಟಲಾಗದ ಈ ಸಂಪತ್ತಿನ ಉಳಿವಿಗೆ ಕಿಮ್ಮತ್ತು ಕೊಡದ ಸರ್ಕಾರಕ್ಕೆ, ಹೊನ್ನಾವರದ ಹತ್ತಿರ ಶರಾವತಿಗೆ ಅಣೆಕಟ್ಟು ಕಟ್ಟಿ ಇನ್ನೂರು ಮೆಗಾವ್ಯಾಟ್ ಸಾಮರ್ಥ್ಯದ ಜಲ ವಿದ್ಯುತ್ ಸ್ಥಾವರ ಮಾಡಲು ಈ ಸಮೃದ್ಧವಾದ ಕಾಡನ್ನು ಬಲಿಕೊಡುವ ತವಕ. ಸರ್ಕಾರ ಈ ಯೋಜನೆಯನ್ನು ಕೈಗೊಳ್ಳುವ ಉತ್ಸಾಹ ತೋರಿ ಅಲ್ಲಿನ ಸ್ಥಿತಿಗತಿಗಳನ್ನು ಅಧ್ಯಯನ ಮಾಡಲು ಸಮಿತಿ ರಚಿಸಿತು. ಇನ್ನೊಂದೆಡೆ, ಶರಾವತಿ ಯೋಜನೆಯ ಬಗೆಗೆ ಸ್ವತಂತ್ರ ಅಧ್ಯಯನ ಕೈಗೊಂಡ ತಂಡದಲ್ಲಿ ಸಂಜಯ ಹಾವನೂರ್, ನಾಗೇಶ್ ಹೆಗಡೆ, ಶ್ಯಾಮಸುಂದರ್ ಹಾಗೂ ವೈ. ಬಿ. ರಾಮಕೃಷ್ಣ ಅವರೂ ಇದ್ದರು. ಶರಾವತಿ ಕಣಿವೆ ಪ್ರದೇಶಕ್ಕೆ ಹೋಗಿ ಅಧ್ಯಯನ ನಡೆಸಿದ ಈ ತಂಡದವರು ಇಡೀ ಕಣಿವೆಯ ಪ್ರಾಕೃತಿಕ ಮಹತ್ವವನ್ನು ವಿವರಿಸಿ, ಈ ಯೋಜನೆ ಸೂಕ್ತವಲ್ಲವೆಂದು ಸರ್ಕಾರಕ್ಕೆ ಮನದಟ್ಟು ಮಾಡಿಸಲು ಯತ್ನಿಸಿದರು. ಇದಕ್ಕೆ ಪರ್ಯಾಯವನ್ನು ಸೂಚಿಸಿ, ವಿದ್ಯುತ್ ಪಡೆಯುವ ಬದಲಿ ಮಾರ್ಗವನ್ನೂ ಸಲಹೆ ಮಾಡಿದರು. ಸರ್ಕಾರ ಈ ಸಲಹೆ-ಸೂಚನೆಗಳಿಗೆ ಸ್ಪಂದಿಸದೆ, ಯೋಜನೆಯನ್ನು ಕೈಗೆತ್ತಿಕೊಳ್ಳಲು ಮುಂದಾದಾಗ ಕಾನೂನು ಹೋರಾಟ ಅನಿವಾರ್ಯವಾಯಿತು. ಪರಿಸರ ಸಂಬಂಧಿ ಯೋಜನೆಯೊಂದಕ್ಕೆ ಏಷ್ಯಾ ಖಂಡದಲ್ಲೇ ಮೊದಲ ಬಾರಿಗೆ ನ್ಯಾಯಾಲಯದಿಂದ ತಡೆಯಾಜ್ಞೆ ದೊರಕಿಸಿಕೊಳ್ಳುವಲ್ಲಿ ಹೋರಾಟಗಾರರು ಯಶಸ್ವಿಯಾದರು.

ಕೇಂದ್ರ ಅರಣ್ಯ ಮತ್ತು ಪರಿಸರ ಖಾತೆಯಿಂದ ಶರಾವತಿ ಟೇಲ್ ರೇಸ್ ಯೋಜನೆಗೆ ಅನುಮತಿ ಪಡೆಯುವ ಸಂದರ್ಭದಲ್ಲಿ ರಾಜ್ಯ ಸರ್ಕಾರ ವಾಸ್ತವವನ್ನು ಮರೆಮಾಚಿ ರಾತ್ರೋರಾತ್ರಿ ತಯಾರಿಸಿದ ದಿಢೀರ್ ವರದಿಯನ್ನು ಕೊಟ್ಟು ಅನುಮತಿ ಪಡೆದಿತ್ತು. ರಾಮಕೃಷ್ಣರ ತಂಡ ನೀಡಿದ ವಿವರವಾಗಲಿ, ಸರ್ಕಾರ ನೇಮಿಸಿದ ತಂಡ ತಯಾರಿಸಿದ ವರದಿಯ ಯಾವ ಅಂಶವಾಗಲಿ ಅದರಲ್ಲಿರಲಿಲ್ಲ. ಅರಣ್ಯ ಇಲಾಖೆಯ ಅಧಿಕಾರಿಗಳು ನೀಡಿದ್ದ ವರದಿಯಲ್ಲಿ ನಾಲ್ಕು ಸಾವಿರ ವರ್ಷಗಳಷ್ಟು ಹಳೆಯದಾದ ಅರಣ್ಯ ಸಂಪತ್ತಿನ


'ಪಶ್ಚಿಮ ಘಟ್ಟ ಉಳಿಸಿ' ಪಾದಯಾತ್ರೆಗೆ ಶಿವರಾಮ ಕಾರಂತರಿಂದ ತಲಕಾವೇರಿಯಲ್ಲಿ ಚಾಲನೆ



*'ಪಶ್ಚಿಮ ಘಟ್ಟ ಉಳಿಸಿ' ಆಂದೋಲನದ ೧೦೦ ದಿನಗಳ ಪಾದಯಾತ್ರೆಯಲ್ಲಿ ನಿರಂತರವಾಗಿ ಪಾಲ್ಗೊಂಡ ಬಾಲಕ ಗೌತಮನೊಂದಿಗೆ ಶಿವರಾಮ ಕಾರಂತ, ಎಚ್. ಎಸ್. ದೊರೆಸ್ವಾಮಿ ಹಾಗೂ ಎಸ್. ಆರ್. ಹಿರೇಮಠ*

ಮಾಹಿತಿ, ಅಳಿವಿನಂಚಿನಲ್ಲಿರುವ ಪ್ರಾಣಿಪಕ್ಷಿಗಳ ವಿವರಗಳೆಲ್ಲವೂ ಇದ್ದವು. ಇಂತಹದೊಂದು ವರದಿಯ ಪ್ರಸ್ತಾಪ ನ್ಯಾಯಾಲಯದ ಮುಂದೆ ಬಂದಾಗ, ಅಂತಹ ಯಾವುದೇ ವರದಿ ಇಲ್ಲವೆಂದು ಸರ್ಕಾರದ ಪರವಾಗಿ ತಿಳಿಸಲಾಯಿತು. ಸಮಗ್ರ ವಿಕಾಸ ತಾನು ಈ ಮುನ್ನ ಸಂಪಾದಿಸಿದ್ದ ವರದಿಯ ಪ್ರತಿಯೊಂದನ್ನು ಹಾಜರುಪಡಿಸಿದಾಗ, ಅದರ ಆಧಾರದ ಮೇಲೆ, ನ್ಯಾಯಾಲಯವು ಯೋಜನೆಗೆ ತಡೆಯಾಜ್ಞೆ ನೀಡಿತು. ಕೇಂದ್ರ ಸರ್ಕಾರವೂ ಈ ಯೋಜನೆಗೆ ತಾನು ನೀಡಿದ್ದ ಅನುಮತಿಯನ್ನು ಹಿಂತೆಗೆದುಕೊಂಡಿತು.

ರಾಮಕೃಷ್ಣರ ತಂಡದ ಈ ಯಶಸ್ಸಿನ ಸಂತಸ ಬಹುಕಾಲ ಉಳಿಯಲಿಲ್ಲ. ಇದೇ ಯೋಜನೆಗೆ ಬೇರೆ ಹೆಸರು ಕೊಟ್ಟು ಆಕ್ಷೇಪಣೆಗಳಿಗೆಲ್ಲ ಪರಿಹಾರವನ್ನು ತೋರಿಸಿ ಯಾರಿಗೂ ಸುಳಿವು ಸಿಗದಂತೆ ಯೋಜನೆಗೆ ಅನುಮತಿ ದೊರಕಿಸಿಕೊಳ್ಳಲಾಗಿತ್ತು. ಪರಿಸರವಾದಿಗಳಿಗೆ ಇದರ ಸೂಚನೆ ಸಿಕ್ಕಿ ಸ್ಥಳಕ್ಕೆ ಧಾವಿಸುವ ಹೊತ್ತಿಗೆ ನಾನ್ನೂರು ಹೆಕ್ಟೇರ್ ಕಾಡು ಕಡಿದು ಮುಗಿದಿತ್ತು. ಗುತ್ತಿಗೆ ಕೆಲಸಗಾರರು ರಾಮಕೃಷ್ಣ, ಕುಸುಮಾ ಸೊರಬ ಮತ್ತವರ ತಂಡವನ್ನು ಸುತ್ತುವರಿದು ಇಡೀ ದಿನ ಬಂಧಿಗಳನ್ನಾಗಿ ಹಿಡಿದಿಟ್ಟುಕೊಂಡರು. ಅವರ ವಾಹನದ ಚಕ್ರಗಳನ್ನು ಹಾಳುಗೆಡವಿ, ಕ್ಯಾಮರಾಗಳನ್ನು ನಾಶಪಡಿಸಿದರು. ಯೋಜನೆ ನಿರಾತಂಕವಾಗಿ ಮುಂದೆ ಸಾಗಿತು.

ರಾಮಕೃಷ್ಣ ಮತ್ತವರ ಗೆಳೆಯರು ಸಮಗ್ರ ವಿಕಾಸದ ಚಟುವಟಿಕೆಗಳನ್ನು ಮೊದಲಿಗೆ ಗುರುತಿಸಿಕೊಳ್ಳುವಾಗ ಮೂರು ಮುಖ್ಯ ಅಂಶಗಳನ್ನು ನಮೂದಿಸಿಕೊಂಡಿದ್ದರು : ಪರಿಸರ ಸಂರಕ್ಷಣೆ, ಗ್ರಾಮೀಣ ಅಭಿವೃದ್ಧಿ ಹಾಗೂ ಬದಲಿ ಇಂಧನಗಳು. ೧೯೯೪ರಲ್ಲಿ ಬದಲಿ ಇಂಧನಗಳ ಬಗೆಗೆ ಅಧ್ಯಯನ ಮಾಡುವಾಗ ಮೊದಲಿಗೆ ಇವರ ಗಮನ ಸೆಳೆದದ್ದು ಸೋಲಾರ್ ವಾಟರ್ ಹೀಟರ್ ಬಳಕೆ. ಸರ್ಕಾರದಿಂದ ಸಹಾಯಧನ ಸಿಗುತ್ತಿದ್ದ ಸಂದರ್ಭದಲ್ಲಿ ಸುಲಭ ಬೆಲೆಗೆ ಸಿಗುತ್ತಿದ್ದ ಸೌರಶಕ್ತಿ ಹೀಟರ್‌ಗಳನ್ನು ಸಬ್ಸಿಡಿ ಇಲ್ಲದಾಗ ಯಾರೂ ಕೊಳ್ಳುವಂತೆಯೇ ಇರಲಿಲ್ಲ. ಇನ್ನೂ ಉತ್ತಮವಾದ ಹೀಟರ್‌ಗಳನ್ನು ಹಲವು ಕಂಪೆನಿಗಳು ತಯಾರಿಸಿದರೂ ಅವಕ್ಕೆ ಸಹಾಯಧನ ದೊರಕದೆ ಹಿನ್ನಡೆಯಾಗಿತ್ತು. ಈ ವಿಷಯ ಕುರಿತು ಅಧ್ಯಯನ ನಡೆಸಿದ ಸಮಗ್ರ ವಿಕಾಸ ಸಬ್ಸಿಡಿಯ ಅವ್ಯವಸ್ಥೆಯಿಂದಾಗಿ ಬದಲಿ ಶಕ್ತಿಮೂಲದ ಉಪಯೋಗವೇ ಗೊಂದಲದ ಗೂಡಾಗಿರುವುದನ್ನು ಸರ್ಕಾರದ ಗಮನಕ್ಕೆ ತಂದಿತು. ಬಳಕೆದಾರರು ಸಬ್ಸಿಡಿ ಘೋಷಣೆಗಾಗಿ ನಿರೀಕ್ಷಿಸುತ್ತಾ ಕಾಯುವ ಬದಲಿಗೆ ಶೇ.೧೨ರ ಅತಿ ಸುಲಭ ಬಡ್ಡಿ ದರದಲ್ಲಿ ಸಾಲ-ಸೌಲಭ್ಯ ನೀಡಿ ಹೀಟರ್‌ಗಳನ್ನು ಕೊಳ್ಳಲು ಅವಕಾಶ ಕಲ್ಪಿಸಬೇಕೆಂಬ ಸಮಗ್ರ ವಿಕಾಸದ ಸಲಹೆಯನ್ನು ಸರ್ಕಾರ ಒಪ್ಪಿತು. ಅಲ್ಲದೆ, ಮಾಸಿಕ ವಿದ್ಯುತ್ ಬಿಲ್‌ನಲ್ಲಿ ರಿಯಾಯಿತಿ ಸೌಲಭ್ಯವನ್ನು ಘೋಷಿಸುವ ಸಲಹೆಯೂ ಅಂಗೀಕೃತವಾಯಿತು. ಈ ಸೌಲಭ್ಯಗಳು ಕರ್ನಾಟಕದ ಜನತೆಯ ಮೇಲೆ ಅಗಾಧ ಪರಿಣಾಮವನ್ನೇ ಬೀರಿದವು. ಇಡೀ ದೇಶದಲ್ಲಿ ಬಳಕೆಯಾಗುತ್ತಿದ್ದ ಸೋಲಾರ್ ಹೀಟರ್‌ಗಳಲ್ಲಿ ಶೇ. ೬೦ರಷ್ಟು ಕರ್ನಾಟಕದಲ್ಲೇ ಕಾಣುವಂತಾಗಿದೆ. ಅದರ ಎಂಬತ್ತು ಭಾಗ ಬೆಂಗಳೂರು ನಗರವೊಂದರಲ್ಲೇ ಬಳಕೆಯಾಗುತ್ತಿದ್ದುದು ಕಂಡುಬಂದಿದೆ. ಮುಖ್ಯವಾಗಿ ಸೋಲಾರ್ ವಾಟರ್ ಹೀಟರ್‌ಗಳ ಬಳಕೆಯಿಂದಲೇ ರಾಜ್ಯ ಸುಮಾರು ೧೫೦೦ ಮೆಗಾವ್ಯಾಟ್‌ಗಳಷ್ಟು ವಿದ್ಯುತ್ ಉಳಿತಾಯವನ್ನು ಸಾಧಿಸಲು ಅವಕಾಶವಾಗಿದೆ.

೧೯೯೬-೭೭ರಲ್ಲಿ ವಿಶ್ವ ವಾಣಿಜ್ಯ ಸಂಸ್ಥೆ, ಜಾಗತೀಕರಣ ವಿರೋಧಿ ಆಂದೋಲನದಲ್ಲೂ ಸಮಗ್ರ ವಿಕಾಸ ಸಕ್ರಿಯವಾಗಿ ಭಾಗವಹಿಸಿತ್ತು. ಇದರ ಬಗೆಗೆ ಬೆಂಗಳೂರಿನಲ್ಲಿ ಸಮಗ್ರ ವಿಕಾಸದ ವತಿಯಿಂದ ಏರ್ಪಡಿಸಲಾದ ವಿಚಾರ ಸಂಕಿರಣದಲ್ಲಿ ರೈತರೂ ಉದ್ಯಮಿಗಳೂ ವಿಷಯತಜ್ಞರೂ ಪಾಲ್ಗೊಂಡಿದ್ದರು. ರೈತ ಸಂಘದ ನೇತಾರ ಡಾ|| ನಂಜುಂಡಸ್ವಾಮಿಯವರು ಸಮಗ್ರ ವಿಕಾಸದೊಡನೆ ಕೈಜೋಡಿಸಿ ಈ ಆಂದೋಲನದಲ್ಲಿ ಪಾಲ್ಗೊಂಡಿದ್ದೊಂದು ವಿಶೇಷ.

ಪರಿಸರ ಸಂರಕ್ಷಣೆ, ಬದಲಿ ಇಂಧನ ಮೂಲಗಳು ಹಾಗೂ ಸಾರ್ವಜನಿಕ ಸ್ವತ್ತುಗಳ ನಿರ್ವಹಣೆ – ಇವುಗಳನ್ನು ಧ್ಯೇಯವಾಗುಳ್ಳ ರಾಷ್ಟ್ರದ ಎಲ್ಲ ಸಂಘಟನೆಗಳು ೧೯೭೦ರ ದಶಕದ ಮಧ್ಯಭಾಗದಲ್ಲಿ ಜನವಿಕಾಸ ಎಂಬ ಆಂದೋಲನವನ್ನು ಪ್ರಾರಂಭಿಸಿದ್ದವು. ಈ ಕಾರ್ಯಕ್ರಮದಲ್ಲಿ ತೃಪ್ತಿ-ರಾಮಕೃಷ್ಣ ದಂಪತಿ ಸಕ್ರಿಯವಾಗಿ ಪಾಲ್ಗೊಂಡಿದ್ದರು. ಜನವಿಕಾಸದ ಚಟುವಟಿಕೆಗಳನ್ನು ಕರ್ನಾಟಕದಲ್ಲಿ ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರು.

ಸಾಮಾನ್ಯವಾಗಿ ಪರಿಸರ ಸಂರಕ್ಷಣಾವಾದಿಗಳೆಲ್ಲರೂ ಅಭಿವೃದ್ಧಿ ಯೋಜನೆಗಳನ್ನು ಒಂದಿಲ್ಲೊಂದು ಕಾರಣಕ್ಕೆ ವಿರೋಧಿಸುತ್ತಲೇ ಇರುತ್ತಾರೆ. ಹೀಗಾಗಿ, ಸಂರಕ್ಷಣಾವಾದಿಗಳೆಂದರೆ ಅಭಿವೃದ್ಧಿ ವಿರೋಧಿಗಳೆಂಬ ಹಣೆಪಟ್ಟಿ ಅಂಟಿಸಿಬಿಡುವುದು ಸಾಮಾನ್ಯ. ಇದನ್ನು ಮನಗಂಡ ರಾಮಕೃಷ್ಣ ಯೋಚಿಸಿದ್ದು ಹೀಗೆ : ''ಪರಿಸರ ಹಾನಿಯನ್ನು ಮುಂದೊಡ್ಡಿ ಯೋಜನೆಗಳನ್ನು ಬೇಡ ಅಂತ ಹೇಳ್ತೀವಿ. ಇನ್ಯಾವುದೋ ಪರ್ಯಾಯವನ್ನೂ ಹೇಳ್ತೀವಿ. ನಮ್ಮಿಂದಾಗುವುದನ್ನು ನಾವೇ ಮಾಡಿ ತೋರಿಸಿದರೆ ಹೇಗೆ ? ಆ ಹೊತ್ತಿಗೆ ಬದಲೀ ಇಂಧನಗಳ ಆಲೋಚನೆ ಅನ್ವೇಷಣೆಗಳು ಸಾಗಿದ್ದವು. ಭಾರತೀಯ ವಿಜ್ಞಾನ ಮಂದಿರದಲ್ಲಿ ಒಂದಿಷ್ಟು ಪ್ರಯತ್ನಗಳು ನಡೆದಿದ್ದವು. ಹೊಂಗೆಬೀಜದಿಂದ ಎಣ್ಣೆ ತೆಗೆದು ವಿದ್ಯುತ್ ತಯಾರಿಸಿ ಅನೇಕ ಹಳ್ಳಿಗಳಿಗೆ ಸರಬರಾಜು ಮಾಡುವ ಪ್ರಯೋಗಗಳು ಆರಂಭವಾಗಿದ್ದವು. ಪೆಟ್ರೋಲಿಯಂಗೆ ಪರ್ಯಾಯವಾಗಿ ಬದಲಿ ಇಂಧನವನ್ನು ತಯಾರಿಸುವ ಬಗೆಗೆ ಆಲೋಚನೆ ಸಾಗಿತ್ತು. ಇದನ್ನು ರಾಜ್ಯಮಟ್ಟಕ್ಕೂ , ಸಾಧ್ಯವಾದಲ್ಲಿ ರಾಷ್ಟ್ರಮಟ್ಟಕ್ಕೂ ಒಯ್ಯುವ ಪ್ರಯತ್ನ ಮಾಡಬಾರದೇಕೆ ?'' ಎಂಬ ಆಲೋಚನೆ ಬಂದಿತು.

ಭಾರತೀಯ ವಿಜ್ಞಾನ ಮಂದಿರದಲ್ಲಿ ಈ ಮಾದರಿಯ ಪ್ರಯೋಗಗಳಲ್ಲಿ ತೊಡಗಿಕೊಂಡಿದ್ದ ಡಾ|| ಉಡುಪಿ ಶ್ರೀನಿವಾಸರೊಡನೆ ರಾಮಕೃಷ್ಣರ ಬಳಗ ಸಂಪರ್ಕ ಸಾಧಿಸಿತು. ಕೆಲವು ಹಳ್ಳಿಗಳಲ್ಲಿ ಶ್ರೀನಿವಾಸ ಮತ್ತವರ ಸಂಸ್ಥೆ ಕೈಗೊಂಡಿದ್ದ ಪ್ರಯೋಗಗಳನ್ನು ಇಡೀ ರಾಜ್ಯಕ್ಕೆ ವಿಸ್ತರಿಸಿ ಜೈವಿಕ ಇಂಧನ ಆಂದೋಲನವನ್ನು ಕಾರ್ಯಗತಗೊಳಿಸಬೇಕೆಂಬ ಆಲೋಚನೆ ಕಾರ್ಯರೂಪಕ್ಕೆ ಬರಲು ರಾಜ್ಯದಾದ್ಯಂತ ಇರುವ ಎಲ್ಲ ಸ್ವಯಂಸೇವಾ ಸಂಸ್ಥೆಗಳನ್ನು ತೊಡಗಿಸಿಕೊಳ್ಳಲು ನಿರ್ಧರಿಸಲಾಯಿತು. ಇವರೆಲ್ಲರನ್ನೂ ಆಮಂತ್ರಿಸಿ ಸಮಗ್ರ ವಿಕಾಸವು ತಿಪಟೂರಿನ ಬಿಐಎಫ್ ಸಹಯೋಗದಲ್ಲಿ ಎರಡು ದಿನಗಳ ಕಾರ್ಯಾಗಾರ ನಡೆಸಿತು. ಆ ಸಂದರ್ಭದಲ್ಲಿ ಕೇಂದ್ರ ಸರ್ಕಾರದ ಮಂತ್ರಿಗಳಾಗಿದ್ದ ಅಣ್ಣಾ ಸಾಹೇಬ ಪಾಟೀಲರು ಬ್ರೆಜಿಲ್ ಮುಂತಾದ ದೇಶಗಳಲ್ಲಿ ನಡೆದಿದ್ದ ಜೈವಿಕ ಇಂಧನ ಕಾರ್ಯಕ್ರಮಗಳನ್ನು ಅಧ್ಯಯನ ಮಾಡಿದ್ದವರು. ಅವರನ್ನು ಈ ಸಭೆಗೆ ಆಮಂತ್ರಿಸಲಾಗಿತ್ತು. ಅಣ್ಣಾ ಸಾಹೇಬರ ಸಲಹೆಯ ಮೇರೆಗೆ ಸಮಗ್ರ ವಿಕಾಸ ನಲವತ್ತು ಜನ ತಜ್ಞರ ಸಮಿತಿಯೊಂದನ್ನು ರಚಿಸಿ, ಜೈವಿಕ ಇಂಧನ ಕಾರ್ಯಕ್ರಮಕ್ಕೆ ಮಾರ್ಗದರ್ಶಿ ಸೂತ್ರಗಳನ್ನು ನೀಡುವಂತೆ ಕೇಳಿಕೊಂಡಿತು. ೨೦೦೨ರಲ್ಲಿ ಸಿದ್ಧವಾದ ಈ ಕರಡು ದಾಖಲೆಯನ್ನು ದೇಶಾದ್ಯಂತ ಸುಮಾರು ೬೦೦ ತಜ್ಞರಿಗೂ ಸಂಸ್ಥೆಗಳಿಗೂ ಕಳುಹಿಸಿ ಅವರಿಂದ ಅಭಿಪ್ರಾಯಗಳನ್ನು ಸಂಗ್ರಹಿಸಲಾಯಿತು. ೨೦೦೩ರಲ್ಲಿ ಸಮಗ್ರವಿಕಾಸ - ಸೂತ್ರ ಸಂಘಟನೆಗಳು ಬೆಂಗಳೂರಿನಲ್ಲಿ ರಾಷ್ಟ್ರಮಟ್ಟದ ವಿಚಾರ ಸಂಕಿರಣವೊಂದನ್ನು ಏರ್ಪಡಿಸಿದವು.

ಗುಬ್ಬಿ ತಾಲೂಕಿನ ಚೇಳೂರು, ರಾಯಚೂರಿನ ಸಿಂಧನೂರು ಮೊದಲಾದ ಕಡೆಗಳಲ್ಲಿ ಜೈವಿಕ ಇಂಧನ ತಯಾರಿಕೆ ಪ್ರಾತ್ಯಕ್ಷಿಕೆಗಳನ್ನು ಸ್ಥಳೀಯ ಸಂಘಟನೆಗಳ ನೆರವಿನಿಂದ ರಾಮಕೃಷ್ಣರ ಬಳಗ ಆಯೋಜಿಸಿತು. ಭದ್ರಾವತಿಯ ತಡಸ, ಅಗರದ ಹಳ್ಳಿ ಮತ್ತಿತರ ಗ್ರಾಮಗಳಲ್ಲಿ ಸ್ಥಳೀಯವಾಗಿ ವಿದ್ಯುತ್ ಉತ್ಪಾದನೆ ಮತ್ತು ಬಳಕೆಗಳನ್ನು ಉತ್ತೇಜಿಸುವ ಶಕ್ತಿಗ್ರಾಮ ಪರಿಕಲ್ಪನೆಯನ್ನು ಕಾರ್ಯಗತಗೊಳಿಸಿತು. ಅಲ್ಲಿನ ಹಳ್ಳಿಗರು ಮತ್ತು ಮಹಿಳಾ ಸ್ವಸಹಾಯ ಗುಂಪುಗಳ ನೆರವಿನಿಂದ ಹೊಂಗೆ,

ಬೇವು ಮತ್ತಿತರ ಜೈವಿಕ ಇಂಧನ ಸಸ್ಯಗಳ ಸಸಿಗಳನ್ನು ತಯಾರಿಸುವ, ನೆಡುವ ಮತ್ತು ವಿತರಿಸುವ ಚಟುವಟಿಕೆಗಳನ್ನೂ ಸಮಗ್ರ ವಿಕಾಸ ಹಮ್ಮಿಕೊಂಡಿತು. ಅಲ್ಲಲ್ಲಿ ಎಣ್ಣೆ ತೆಗೆಯುವ ಘಟಕಗಳನ್ನು ಸ್ಥಾಪಿಸಲಾಯಿತು. ಇಂದು ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ಸಂಸ್ಥೆ ಜೈವಿಕ ಇಂಧನ ಬಳಸುವ ಸಂಸ್ಥೆಗಳಲ್ಲಿ ಒಂದಾಗಿದೆ. ಈ ಸಂಸ್ಥೆಯು ಬಯೋ ಎಥೆನಾಲ್ ಬಳಸುವ ಆಲೋಚನೆಯಲ್ಲಿದ್ದಾಗ ಭಾರತೀಯ ವಿಜ್ಞಾನ ಸಂಸ್ಥೆ ಹಾಗೂ ಸಮಗ್ರ ವಿಕಾಸಗಳಿಂದಲೇ ಅಗತ್ಯ ತಿಳುವಳಿಕೆ ಪಡೆದುಕೊಂಡಿತು.

೨೦೦೨ರಿಂದೀಚೆಗೆ ಕರ್ನಾಟಕದಲ್ಲಿ ಜೈವಿಕ ಇಂಧನ ನೀತಿಯನ್ನು ರೂಪಿಸಿ ಅನುಷ್ಠಾನಗೊಳಿಸಲು ಆಯಾ ಅವಧಿಯಲ್ಲಿ ಅಧಿಕಾರದಲ್ಲಿದ್ದ ಸರ್ಕಾರಗಳನ್ನು ಒತ್ತಾಯಿಸಿ ಪ್ರೇರೇಪಿಸುವ ಕಾರ್ಯದಲ್ಲಿ ರಾಮಕೃಷ್ಣ ತೊಡಗಿದ್ದರು. ಹಾಸನದಲ್ಲಿ ಜೈವಿಕ ಇಂಧನ ಉದ್ಯಾನದ ಸ್ಥಾಪನೆಯಂತಹ ಒಂದೆರಡು ಚಟುವಟಿಕೆಗಳನ್ನು ಬಿಟ್ಟರೆ ಮಹತ್ವದ ಕೆಲಸವಾಗಲಿ, ಬಜೆಟ್‌ನಲ್ಲಿ ಅದಕ್ಕಾಗಿ ಧನ ವಿನಿಯೋಗವಾಗಲಿ ಆಗಿರಲಿಲ್ಲ. ಜೈವಿಕ ಇಂಧನದ ಕಾರ್ಯಕ್ರಮದ ಮಹತ್ವವನ್ನು ಮನಗಂಡ ಸರ್ಕಾರ ೨೦೦೮ರಲ್ಲಿ ಜೈವಿಕ ಇಂಧನ ಕಾರ್ಯಪಡೆಯನ್ನು ಸ್ಥಾಪಿಸಿದಾಗ ಅದರ ಕಾರ್ಯಕಾರಿ ಅಧ್ಯಕ್ಷರಾಗಿ ಮಾರ್ಗದರ್ಶನ ನೀಡುವಂತೆ ವೈ. ಬಿ. ರಾಮಕೃಷ್ಣರನ್ನೇ ಕೇಳಿಕೊಂಡಿದ್ದು ಅವರ ಕಾರ್ಯತತ್ಪರತೆಗೆ ನೀಡಲಾದ ಮನ್ನಣೆ ಎನ್ನಬಹುದು. ಅವರ ನೇತೃತ್ವದಲ್ಲಿ ಜೈವಿಕ ಇಂಧನ ಕಾರ್ಯಕ್ರಮದ ಅನುಷ್ಠಾನಕ್ಕೆ ಮಾರ್ಗಸೂಚಿಯೂ ಸಿದ್ಧವಾಯಿತು. ಮುಂದೆ, ೨೦೧೦ರಲ್ಲಿ ಕರ್ನಾಟಕ ರಾಜ್ಯ ಜೈವಿಕ ಇಂಧನ ಅಭಿವೃದ್ಧಿ ಮಂಡಳಿಯ ಸ್ಥಾಪನೆಯಾದಾಗಲೂ ರಾಮಕೃಷ್ಣರೇ ಅಧ್ಯಕ್ಷರಾಗಿ ಮಹತ್ವದ ಕಾರ್ಯಯೋಜನೆಗಳ ನೇತೃತ್ವ ವಹಿಸಿ ಮುನ್ನಡೆಸುತ್ತಿದ್ದಾರೆ.

ಏನನ್ನೂ ಸಾಧಿಸದೆ ಇರುವವರೆಲ್ಲ ಮತ್ಯಾರೋ ಮಾಡಿದ ಕೆಲಸಗಳಲ್ಲಿ ತಮ್ಮ ಹೆಸರು ಹೇಳಿಕೊಂಡು ಮೆರೆಯುತ್ತಾರೆ. ಆದರೆ, ರಾಮಕೃಷ್ಣ ಈ ಪ್ರವೃತ್ತಿಗೆ ತೀರಾ ವಿರುದ್ಧದ ಗುಣವುಳ್ಳವರು. ವೈಯಕ್ತಿಕವಾಗಿ ತಮ್ಮಿಂದ ಎಷ್ಟೇ ಮಹತ್ವದ ಕೆಲಸಗಳಾಗಿದ್ದರೂ ಆ ಕೆಲಸದ ಯಶಸ್ಸನ್ನು ಸಂಘಟನೆಗೋ ಸಮಾಜಕ್ಕೋ ಗ್ರಾಮಕ್ಕೋ ವಹಿಸಿ ನಿಶ್ಚಿಂತರಾಗುವರು. ಮರುಗಳಿಗೆಯಲ್ಲಿ ಮುಂದಿನ ಕೆಲಸವೇನೆಂದು ಚಿಂತಿಸುವರು. ಅವರ ಮೈಮನಸ್ಸುಗಳು ಸದಾ ಸಮಾಜಮುಖಿಯಾಗಿರುವುದರಿಂದಲೇ ಈ ಸ್ಥಿತಪ್ರಜ್ಞತೆ ಅವರಿಗೆ ಮೈಗೂಡಿರಬೇಕು.

ಇನ್ನೊಂದು ವಿಷಯವನ್ನು ಹೇಳಲು ಮರೆತಿದ್ದೆ. ರಾಮಕೃಷ್ಣರ ಪೂರ್ವಿಕರು ಯಗಟಿ ಗ್ರಾಮದಲ್ಲಿ ಬಂದು ನೆಲೆಸಿದ್ದವರು. ಅವರ ಮೂಲಸ್ಥಳ ಕೋಳಿವಾಡ. ಯಾವ ಕೋಳಿವಾಡ ಗೊತ್ತಾಯಿತೇ? ನಾಡಿನ ಹೆಮ್ಮೆಯ ಕವಿ ಕುಮಾರವ್ಯಾಸನ ಊರು ಕೋಳಿವಾಡ. ಅಷ್ಟೇ ಅಲ್ಲ, ರಾಮಕೃಷ್ಣ ಹಾಗೂ ಅವರ ಪೂರ್ವಿಕರು ಕುಮಾರವ್ಯಾಸನ ವಂಶಸ್ಥರೇ. ವಿಜಯನಗರದ ಕಾಲದಲ್ಲಿ ಈ ಪೂರ್ವಿಕರು ಇನ್ನು ಎಂಟು ಹತ್ತು ಬ್ರಾಹ್ಮಣ ಕುಟುಂಬಗಳೂ ದಕ್ಷಿಣಕ್ಕೆ ಬಂದು ಚಿಕ್ಕಮಗಳೂರಿನ ಕಡೂರಿನ ಸುತ್ತಲ ಹಳ್ಳಿಗಳಲ್ಲಿ ಶ್ಯಾನುಭೋಗಿಕೆ ವಹಿಸಿಕೊಂಡು ಜೀವಿಸತೊಡಗಿದರಂತೆ.

ಶ್ಯಾನುಭೋಗಿಕೆಯ ಹುಟ್ಟುಗುಣ ರಾಮಕೃಷ್ಣರನ್ನೂ ಬಿಟ್ಟಿಲ್ಲ. ಬರಡು ಬಂಗಾರ ಯೋಜನೆಯಲ್ಲಿ ಎಷ್ಟು ಲಕ್ಷ ಸಸಿಗಳನ್ನು ನೆಡಲಾಗಿದೆ, ಹಸಿರುಹೊನ್ನು ಕಾರ್ಯಕ್ರಮ ಎಷ್ಟು ಹಳ್ಳಿಗಳನ್ನು ತಲುಪಿದೆ, ಸುವರ್ಣಭೂಮಿ ಯೋಜನೆಯ ಫಲಾನುಭವಿ ರೈತರಿಗೆ ಕೊಡಬೇಕಾದ ೧೪ ಕೋಟಿ ರೂಪಾಯಿಗಳನ್ನು ಸರ್ಕಾರದಿಂದ ಬಿಡುಗಡೆ ಮಾಡಿಸುವುದು ಯಾವಾಗ, ಇವೇ ಮೊದಲಾದ ಲೆಕ್ಕಾಚಾರಗಳಲ್ಲಿ ಅವರು ನಿರಂತರವಾಗಿ ತೊಡಗಿಕೊಂಡೇ ಇದ್ದಾರೆ. ಈ ಲೆಕ್ಕಾಚಾರಗಳ ನಡುವೆಯೇ ಯಾವುದೋ ಕೆಲಸಕ್ಕೆ ಬಾರದ ಯೋಜನೆಗಳಿಗಾಗಿ ಕಡಿದುರುಳಿಸಿದ ಕಾಡುಗಳು, ವಿನಾಶ ಹೊಂದಿದ ಪ್ರಾಣಿ, ಸಸ್ಯಸಂಕುಲಗಳ ಲೆಕ್ಕವೂ ಕಣ್ಣಮುಂದೆ ಸುಳಿದು ಅವರ ಮನಸ್ಸು ಭಾರವಾಗುತ್ತದೆ, ವಿಷಾದದ ನಗೆ ಸುಳಿಯುತ್ತದೆ. ಆದರೆ, ಅಳಿದುಳಿದ ಪ್ರಕೃತಿ ಪರಿಸರವನ್ನು ಕಾಪಾಡಿಕೊಳ್ಳುವ ತುಡಿತದಿಂದ ಮನಸ್ಸು ಮರಳಿ ಸಮಾಜಮುಖಿಯಾಗುತ್ತದೆ. ಬಿಡುವಿಲ್ಲದ ಕಾರ್ಯಕ್ರಮಗಳ ಕಡೆಗೆ ಹೊರಳುತ್ತದೆ. ನಮ್ಮ ಹಿರಿಯರು ತೋರಿಸಿಕೊಟ್ಟ ಜೀವನಶ್ರದ್ಧೆಯ ಪರಿ ಇದೇ ಅಲ್ಲವೇ?

**ಟಿ. ಎಸ್. ಗೋಪಾಲ್**
ನಂ. ೫೧೯, ೧೪ನೇ ಮುಖ್ಯರಸ್ತೆ, 'ಇ' ಬ್ಲಾಕ್, ಜೆ. ಪಿ. ನಗರ, ಮೈಸೂರು - ೫೭೦ ೦೦೮

# ಜಾಗತೀಕರಣದ ಹಾಗೂ ನವ ಉದಾರೀಕರಣದ ಸಂದರ್ಭದಲ್ಲಿ ಮಾನವ ಅಭಿವೃದ್ಧಿ

## – ವಿಶ್ವ ಕಾರ್ಮಿಕ ಸಂಘಟನೆಗಳ ಒಕ್ಕೂಟದ ದೃಷ್ಟಿಕೋನ

ಎಚ್. ಮಹಾದೇವನ್



**ಜಾಗತೀಕರಣ-ಕುಸಿಯುತ್ತಿರುವ ಶ್ರಮದ ಫಲ ಹಾಗೂ ಕಣ್ಮರೆಯಾಗುತ್ತಿರುವ ರಾಷ್ಟ್ರೀಯ ಆರ್ಥಿಕತೆ – ಅನೇಕ ರಾಷ್ಟ್ರಗಳ ಅನುಭವದ ಪಾಠ**

ಜಾಗತೀಕರಣವು ಜನತೆಯ ಆರೋಗ್ಯ, ಉದ್ಯೋಗ, ನೈಸರ್ಗಿಕ ಸಂಪನ್ಮೂಲಗಳ ಮೇಲೆ ಸಾರ್ವಜನಿಕ ಹಿತಾಸಕ್ತಿಯಿಂದಾಗಿ ವಿಧಿಸಲಾಗಿರುವ ನಿರ್ಬಂಧಗಳು, ತಡೆಗೋಡೆಗಳ ಮೇಲೆ ತೆರಿಗೆ ನಿರ್ಬಂಧಗಳಾಗಲಿ, ಆಡಳಿತಾತ್ಮಕ ನಿಷೇಧವಾಗಲಿ, ಅಥವಾ ಕಾನೂನಾತ್ಮಕ ತಡೆಗಳನ್ನು ತೆಗೆದುಹಾಕಿ ಯಾವುದೇ ರೀತಿಯ ನಿರ್ಬಂಧವಿಲ್ಲದ – ಎಲ್ಲ ಆರ್ಥಿಕ ಕ್ಷೇತ್ರಕ್ಕೂ ಇರುವ ಪ್ರವೇಶಾಧಿಕಾರದ ಸಂಕೇತವಾಗಿದೆ. ವಿಶಾಲಾರ್ಥದಲ್ಲಿ ಈ ಆಕ್ರಮಣಕಾರಿ ಸಾರ್ವತ್ರಿಕತೆಯು ವಿಶ್ವಬ್ಯಾಂಕ್- ಐ.ಎಂ.ಎಫ್. ಪೋಷಿತ ಸಿದ್ಧಾಂತದ ಅಡಿಯಲ್ಲಿ ಗ್ಯಾಟ್ ಒಪ್ಪಂದಗಳಿಗೂ, ವಿಶ್ವ ವಾಣಿಜ್ಯ ಸಂಸ್ಥೆಯ ನಿರ್ದೇಶನಗಳಿಗೂ, ವ್ಯಾಪಾರ ಹಾಗೂ ಸೇವೆಗಳಿಗೂ ಹೂಡಿಕೆ ಅನ್ವಯಿಸುತ್ತದೆ. ಸಾರ್ವಭೌಮ ಸಂವಿಧಾನಗಳ ಕಾನೂನು ಆಶಯಗಳು ವಿಶ್ವ ವಾಣಿಜ್ಯ ಸಂಘಟನೆಯ ಇಚ್ಛೆಗೆ ಹಾಗೂ ಅದರ ಅಗ್ರಮಾನ್ಯ ಆಣತಿಗೆ, ನ್ಯಾಯಾಂಗದ ಹೊರತಾಗಿಯೂ ಸರ್ವೋಚ್ಚವೆಂದು ತಲೆಬಾಗಿ ಮಂಡಿಯೂರಲೇಬೇಕು. ಕಾರ್ಮಿಕ ಕಾನೂನುಗಳು ಬಹುರಾಷ್ಟ್ರೀಯ ಕಾರ್ಪೊರೇಟ್ ಆಣತಿಗಳಿಗೆ ಅಧೀನವಾಗಿದ್ದು, ಸಾಮಾಜಿಕ ಕಲಂಗಳ ಮೂಲಕ ಕೂಲಿಯೂ ಸಹ ವಿಶ್ವ ವಾಣಿಜ್ಯ ಸಂಘಟನೆಯ ಆದೇಶಗಳಿಗೆ ಒಳಪಡಬೇಕಾದ ಪರಿಸ್ಥಿತಿ ಜಾಗತೀಕರಣದ ಸಂದರ್ಭದಲ್ಲಿ ಉಂಟಾಗಿದೆ. ಶ್ರಮಶಕ್ತಿಯನ್ನು ಇಲ್ಲವಾಗಿಸಿ, ನಿರುದ್ಯೋಗವನ್ನು ಹೆಚ್ಚಿಸುವ ತಂತ್ರಜ್ಞಾನವನ್ನು ತಡೆಗಟ್ಟುವುದು ಸಾಧ್ಯವೇ ಇಲ್ಲದಂತಾಗಿದೆ. ಎಲ್ಲ ಸ್ವರೂಪದ ಕೃಷಿಸಂಬಂಧಿ ವ್ಯವಹಾರಗಳೂ ಕೃಷಿಕಾರ್ಮಿಕರೂ ಹಾಗೂ ಗ್ರಾಮೀಣ ಉದ್ಯೋಗಗಳು ತೀವ್ರ ಆಘಾತಕ್ಕೆ ಒಳಗಾಗಿದ್ದರೂ, ಏನೂ ಮಾಡಲಾಗದ ಪರಿಸ್ಥಿತಿ ಕಟು ವಾಸ್ತವವಾಗಿದೆ. ಸಣ್ಣ ಕೈಗಾರಿಕೆಗಳು, ಸಹಕಾರ ಸಂಸ್ಥೆಗಳು ಹಾಗೂ ಚಿಕ್ಕ ಉದ್ಯಮಗಳು ಜಾಗತಿಕ ಬೃಹತ್ ದೈತ್ಯ ಕಾರ್ಪೊರೇಟ್ ವಲಯದ ಪೈಪೋಟಿಯ ದಾಳಿಯಿಂದಾಗಿ ಬಿಕ್ಕಟ್ಟಿಗೆ ಸಿಲುಕಿ ತೀವ್ರ ನಿರುದ್ಯೋಗವು ಸ್ಥಳೀಯರಿಗೆ ಶಾಪವಾಗಲಿದೆ. ಹೊಸ ಅನರ್ಥಕಾರಿ ಅರ್ಥಶಾಸ್ತ್ರದ ಪ್ರಕಾರ ಜಗತ್ತು ಈಗ ಒಂದೇ ಆಗಿರುವುದರಿಂದ ವ್ಯವಹಾರಗಳು, ಸೇವೆಗಳು ಹಾಗೂ ಹೂಡಿಕೆಗಳ ಮೂಲಕ ಅದರ ಲಾಭಗಳು 'ಹಿಂದುಳಿಯುವವನು ಹಾಳಾಗಲಿ' ಎಂಬ ನೀತಿ, ಮಾರ್ಜಾಲ ಮಂತ್ರಕ್ಕೆ ಅಧೀನವಾಗಿ ದೊಡ್ಡ ವ್ಯಾಪಾರಿಗಳು ಏಕಸ್ವಾಮ್ಯ ಗುತ್ತೆದಾರಿಗಳಾಗಿ ಬೆಳೆಯಲು ಅವಕಾಶ ನೀಡುವ ಇಂದಿನ ವಿದ್ಯಮಾನವಾಗಿದೆ. ಬದುಕಿನ ಹಕ್ಕು, ಆರೋಗ್ಯದ ಹಕ್ಕು, ಆಸರೆಯ ಹಕ್ಕು, ಆಹಾರದ ಹಕ್ಕು, ಶಿಕ್ಷಣ ಹಾಗೂ ಸಾಂಸ್ಕೃತಿಕ ಅಸ್ಮಿತೆಯ ಹಕ್ಕು ಮುಂತಾದುವುಗಳು ಸಂವಿಧಾನದ ಉನ್ನತ ಆದರ್ಶ ಹೊಂದಿರುವ ಮೌಲ್ಯಗಳಿರಬಹುದು. ಆದರೆ ವಿಶ್ವ ವಾಣಿಜ್ಯ ಸಂಘಟನೆಯು ಹುಟ್ಟುಹಾಕುವ ವಿಶ್ವದಲ್ಲಿ ಹಿರಿಕಿರಿದುಗಳೆರಡೂ ಬಲಾಢ್ಯನೇ ಬದುಕುವ ಹೋರಾಟದಲ್ಲಿ ಒಟ್ಟಿಗೆ ತೇಲಬೇಕು ಇಲ್ಲವೇ ಮುಳುಗಬೇಕು. ಅನುಕಂಪ ಮತ್ತು ಮಾನವೀಯತೆ, ಮೂಲಭೂತ ಕರ್ತವ್ಯಗಳು ಇತ್ಯಾದಿಗಳು ನವ ಆರ್ಥಿಕತೆಯ ಮಾರುಕಟ್ಟೆಯಲ್ಲಿ ರಕ್ಷಣಾತ್ಮಕ ಕವಚಗಳಲ್ಲ.

ಟ್ರಿಪ್ಸ್, ಟ್ರಿಮ್ಸ್, ಟ್ರಿಸ್, ಎಂ.ಎ.ಐ, ಗ್ಯಾಟ್, ಡಬ್ಲ್ಯು.ಟಿ.ಓ. ಇತ್ಯಾದಿ ಪಾರಿಭಾಷಿಕೆಗಳು, ಸರ್ವೋಚ್ಚ ಸಾರ್ವಭೌಮಗಳಂತಹ ಶಬ್ದಗಳಿಗೆ ಸಂವಾದಿಯಾದ ಬೀಜಾಕ್ಷರಗಳಾಗಿವೆ. ಒಂದೇ ಜಾಗತಿಕ ಮಾರುಕಟ್ಟೆ, ಒಂದೇ ಕಾರ್ಪೊರೇಟ್ ವಿಶ್ವ, ಗರಿಷ್ಠ ಲಾಭವೇ ಗುರಿ, ಡಾಲರ್ ಒಂದೇ ಅಂತಿಮ ಎಂಬಿತ್ಯಾದಿ ಮೌಲ್ಯಗಳುಳ್ಳ ಹೊಸ ಮತ ಧರ್ಮವನ್ನು ಮಾನ್ಯವಾಗಿಸಿ ರಾಷ್ಟ್ರೀಯ ಆರ್ಥಿಕತೆಗಳನ್ನು ಈ ಹೊಸ ಧರ್ಮಕ್ಕೆ ಮತಾಂತರಿಸುವ ಗೌಪ್ಯ ಕಾರ್ಯಸೂಚಿ ಈ ಸಂಸ್ಥೆಗಳದ್ದಾಗಿದೆ. ದೈತ್ಯ ಜಾಗತಿಕ ಕಾರ್ಪೊರೇಟ್ ಶಕ್ತಿಗೆ ಅವಮಾನಿಸಲು ಆತ್ಮವಿಲ್ಲ, ಅದನ್ನು ಸುಟ್ಟುಬಿಡೋಣವೆಂದರೆ ದೇಹವೇ ಇಲ್ಲವಲ್ಲ!

ಈ ಜಗತ್ತಿಗೆ, ಏಕಕಾಲದಲ್ಲಿ ಮಿತ್ರನೂ ಶತ್ರುವೂ ಆಗಿರಬಲ್ಲ ಗೋಸುಂಬೆಯಂತಹ ಸಾಮರ್ಥ್ಯವಿದೆ ಎಂಬ ಜಾರ್ಜ್ ಆರ್ವೆಲ್ಲನ ಮಾತಿನಂತೆ ಜಾಗತೀಕರಣವೆಂಬುದು ಹಣಕಾಸು ಜಗತ್ತಿನ ಧ್ಯೇಯ ವಾಕ್ಯ. ಕಾರ್ಪೊರೇಟ್ ನರಭಕ್ಷಕನ ಇತ್ತೀಚಿನ ಆಟವೆಂದರೆ, ದೇಶದ್ರೋಹಿ ಸಂಸ್ಥೆಗಳ ಕುಮ್ಮಕ್ಕು ಸಹಕಾರಗಳಿಂದ ತೃತೀಯ ಜಗತ್ತಿನ ಆರ್ಥಿಕ ಚಟುವಟಿಕೆಗಳನ್ನು ಅತಿಕ್ರಮಿಸುವುದೇ ಆಗಿದೆ. ಶ್ರೀಮಂತ ದೇಶಗಳ ಮಾರುಕಟ್ಟೆದಾಹಿ ಬಹುರಾಷ್ಟ್ರೀಯ ಕಂಪನಿಗಳಿಂದ ಒಂದಾಗಿರುವ ಜಗತ್ತಿನಲ್ಲಿ ತನ್ನ ಲಾಭವನ್ನು ಹೆಚ್ಚಿಸಿಕೊಳ್ಳುವ ಏಕಮಾತ್ರ ಉದ್ದೇಶದಿಂದ ರಾಷ್ಟ್ರೀಯ, ಸಣ್ಣ, ಖಾಸಗಿ ಹಾಗೂ ಸಾರ್ವಜನಿಕ ರಂಗದ ಉದ್ದಿಮೆಗಳನ್ನು ನಿರ್ನಾಮ ಮಾಡಿ ತನ್ನ ಏಕಸ್ವಾಮ್ಯವನ್ನು ಸ್ಥಾಪಿಸುವ ಮಹತ್ವಾಕಾಂಕ್ಷೆಯನ್ನು ಅದು ಹೊಂದಿದೆ. ವಿಶ್ವ ಮಾರುಕಟ್ಟೆಯನ್ನು ಆಕ್ರಮಿಸುವ ಅದರ ಹೆಗ್ಗುರಿಯ ಮುಂದೆ ಕಾರ್ಮಿಕರ ಮತ್ತು ಅವರ ಹಕ್ಕುಗಳ ಬಗ್ಗೆಯಾಗಲಿ, ಬಡ ಕಾರ್ಮಿಕರಿಗೆ ಮತ್ತು ಮಹಿಳೆಯರಿಗೆ ಸಾಮಾಜಿಕ ನ್ಯಾಯ ನೀಡುವ ಬಗ್ಗೆಯಾಗಲಿ ಯಾವುದೇ ಕಾಳಜಿ ಇಲ್ಲ. ಕಾನೂನಿನ ಆಳ್ವಿಕೆಯು ಈ ಸರ್ವೋಚ್ಚ ಸಾರ್ವಭೌಮ ನೂತನ ವ್ಯವಸ್ಥೆಗೆ ಡೊಗ್ಗು ಸಲಾಮು

ಹಾಕುವುದಲ್ಲದೆ, ಇದರ ಮುಂದೆ ಗತಕಾಲದ ಸಾಮ್ರಾಜ್ಯವಾದ ಹಾಗೂ ಸಮಾಜವಾದಿ ಕ್ರಾಂತಿಗಳು ಅಪ್ರಸ್ತುತವೆನಿಸಿ ಶ್ವಾಸಸ್ತಂಭನಕ್ಕೊಳಗಾಗಿವೆ. ಇದೇ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ಎಂಬ ಬ್ರಹ್ಮಾಂಡ ಸೂತ್ರದ ಹೊಸ ಜಾಗತಿಕ ವ್ಯವಸ್ಥೆ.

ಈ ಅವಿರತ ಪ್ರಕ್ರಿಯೆಗೆ ಜನತಾಂತ್ರಿಕ ಪ್ರತಿರೋಧ ಹಾಗೂ ಸಾಂವಿಧಾನಿಕ ಪ್ರತಿದಾಳಿಯ ಮೂಲಕ ತಡೆಯೊಡ್ಡದಿದ್ದರೆ ಪುನರ್-ವಸಾಹತೀಕರಣ ಹಾಗೂ ಉಳ್ಳವರು-ಇಲ್ಲದವರ ವಿರುದ್ಧದ ಅಪಾಯವು ಒಂದು ಹೊಸ ಆಂದೋಲನಕ್ಕೆ ನಾಂದಿಯಾಗಬಹುದು. ತೃತೀಯ ಜಗತ್ತಿನ ಸರ್ಕಾರಗಳು ಈ ಜಾಗತಿಕ ಕಾರ್ಪೊರೇಟ್ ದೈತ್ಯರ ಕಾಲಾಳುಗಳಂತೆ ಹಾಗೂ ದೇಶದ್ರೋಹಿಗಳಂತೆ ಪಾತ್ರವಹಿಸುತ್ತಿವೆ. ಈ ನಿರಾಶಾದಾಯಕ ಹಿನ್ನೆಲೆಯಲ್ಲಿ ವ್ಯಾಪಾರಿ ಬಲೆ, ಸಾಲದ ಬಲೆ, ಇವೇ ಅಲ್ಲದೆ ತೃತೀಯ ಜಗತ್ತಿನ ದೇಶಗಳು ಗ್ಯಾಟ್‌ನ ಕ್ಷಯಜನ್ಯ ಬಲೆ ಹಾಗೂ ಡಬ್ಲ್ಯು.ಟಿ.ಓ.ನ ದರ್ಪದ ಬಲೆಗಳಲ್ಲಿ ಬೀಳುವ ದುರ್ದೆಶೆಯ ಬೆಳವಣಿಗೆಗಳ ಮೌಲ್ಯಮಾಪನದಲ್ಲಿ ತೊಡಗಬೇಕಾಗಿದೆ.

**ಇಲ್ಲಿಯವರೆಗಿನ ಅನುಭವ**

ದೊಡ್ಡ ದೊಡ್ಡ ಗುತ್ತೇದಾರಿ ಬಂಡವಳಿಗರು ಹಾಗೂ ಬಹುರಾಷ್ಟ್ರೀಯ ಕಂಪನಿಗಳ ಹಿತಾಸಕ್ತಿಗಳನ್ನು ಪ್ರತಿನಿಧಿಸುವ, ರಾಜಕೀಯ ಶಕ್ತಿಗಳು ಪ್ರತಿನಿಧಿಸುತ್ತಿರುವ ಜಾಗತೀಕರಣ ಪ್ರಕ್ರಿಯೆಯ ಹಲವು ವರ್ಷಗಳ ಅನುಭವವು ಲಕ್ಷಾಂತರ ಉದ್ಯೋಗಾವಕಾಶಗಳು ಅವಲಂಬಿಸಬಹುದಾದ, ನ್ಯಾಯಸಮ್ಮತ ಅಂತರರಾಷ್ಟ್ರೀಯ ಆರ್ಥಿಕ ಸಂಬಂಧಗಳು, ಸಮತೋಲನದ ವ್ಯಾಪಾರ ಹಾಗೂ ಆರ್ಥಿಕ ಅಭಿವೃದ್ಧಿಯನ್ನು ಅದು ಪ್ರೋತ್ಸಾಹಿಸಲೇ ಇಲ್ಲ. ಈಗಾಗಲೇ ವಿಶ್ವ ವ್ಯಾಪಾರದ ಬಹುತೇಕ ಭಾಗವು ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ನಿಯಂತ್ರಣದ ಚೌಕಟ್ಟಿಗೆ ಹೊರತಾಗಿ ಬಹುರಾಷ್ಟ್ರೀಯ ಕಂಪನಿಗಳ ಆಂತರಿಕ ವಹಿವಾಟಿನ ರೂಪದಲ್ಲಿ ನಡೆಯುತ್ತಿದೆ. ವಿಶ್ವ ವ್ಯಾಪಾರ ಸಂಘಟನೆಯು ಇದನ್ನು ಗಂಭೀರವಾಗಿ ಗಮನಿಸಬೇಕಾಗಿದೆ. ವಿಶ್ವಸಂಸ್ಥೆಯ ವರದಿಯ ಪ್ರಕಾರ ಜಗತ್ತಿನ ಜನಸಂಖ್ಯೆಯ ಅರ್ಧದಷ್ಟು ಜನರು ದಿನವಹಿ ಎರಡು ಡಾಲರ್‌ಗಿಂತಲೂ ಕಡಿಮೆ ವರಮಾನದಲ್ಲಿ ಬದುಕು ಸಾಗಿಸುತ್ತಿದ್ದಾರೆ. ಸಣ್ಣ ಉದ್ದಿಮೆದಾರರು, ಬಹುರಾಷ್ಟ್ರೀಯ ಕಂಪನಿಗಳು ದುಡಿವವರ ದುಡಿಮೆಗೆ ಕಡಿಮೆ ಬೆಲೆ ನೀಡುತ್ತಿರುವ ಕಾರಣ, ಒಟ್ಟಾರೆಯಾಗಿ, ಅಭಿವೃದ್ಧಿಶೀಲ ರಾಷ್ಟ್ರಗಳ ಕೊಳ್ಳುವ ಶಕ್ತಿಯು ಕುಸಿದಿದೆ. ಅನೇಕ ಮುಂದುವರಿದ ರಾಷ್ಟ್ರಗಳು ತಮ್ಮ ವಾಗ್ದಾನದಂತೆ ತಮ್ಮ ದೇಶಗಳ ಒಟ್ಟು ಆಂತರಿಕ ಉತ್ಪನ್ನದ ಶೇ. ೦.೭ರಷ್ಟನ್ನು ಅಧಿಕೃತ ಅಭಿವೃದ್ಧಿ ನೆರವನ್ನು ನೀಡುವ ಆಶ್ವಾಸನೆಯನ್ನು ಇನ್ನೂ ನೆರವೇರಿಸಿಲ್ಲ. ಅಲ್ಲದೆ, ಅಭಿವೃದ್ಧಿ ಹೊಂದಿದ ಮತ್ತು ಅಭಿವೃದ್ಧಿಶೀಲ ರಾಷ್ಟ್ರಗಳಲ್ಲಿ ದುಡಿಯುವ ಜನರ ಒಟ್ಟಾರೆ ಕೊಳ್ಳುವ ಶಕ್ತಿಯು ನೈಜ ಕೂಲಿಯ ಕುಸಿತದಿಂದಾಗಿ ಇಳಿಮುಖ ಕಂಡಿದೆ. ಇದಕ್ಕೆ ಕಾರಣ ಅನೇಕ ಕೈಗಾರಿಕಾ ವಲಯಗಳಲ್ಲಿ ಉಂಟಾಗಿರುವ ಆರ್ಥಿಕ ಹಿಂಜರಿಕೆ. ಇದು ವ್ಯಾಪಾರ ವೃದ್ಧಿಗೊಳ್ಳುವುದರ ಮೇಲೂ ದುಷ್ಪರಿಣಾಮ ಬೀರಿದೆ. ಆದ್ದರಿಂದ ಇಂದು ವಿಶ್ವ ಬ್ಯಾಂಕ್ ಮತ್ತು ಬಹುರಾಷ್ಟ್ರೀಯ ಕಂಪನಿಗಳ ಆಶ್ರಿತ ಜಾಗತೀಕರಣದ ವ್ಯತಿರಿಕ್ತ ಪರಿಣಾಮಗಳ ಸಮಗ್ರ ಪುನರ್ವಿಮರ್ಶೆ ಅವಶ್ಯಕವಾಗಿದೆ. ಅದರಲ್ಲೂ ವಿಶೇಷವಾಗಿ ಉದ್ಯೋಗ ಹಾಗೂ ಅನೇಕ ಕ್ಷೇತ್ರಗಳಲ್ಲಿರುವ ಜನತೆಯ ಜೀವನ ಮಟ್ಟದ ಮೇಲೆ ವ್ಯಾಪಾರ ಉದಾರೀಕರಣದ ವ್ಯತಿರಿಕ್ತ ಪರಿಣಾಮಗಳು ಹಾಗೂ ಅದರಿಂದ ಜಗತ್ತಿನ ಸಾಮಾಜಿಕ ಪರಿಸ್ಥಿತಿಯಲ್ಲಿ ಉಂಟಾಗಿರುವ ನಿರಂತರ ಅಧಃಪತನವೂ ವಿಮರ್ಶಾಯೋಗ್ಯವಾಗಿದೆ.

**ಜಾಗತಿಕ ವ್ಯವಸ್ಥೆಯ ಏಕಸ್ವಾಮ್ಯ**

ಮುಕ್ತ ಮಾರುಕಟ್ಟೆಯ ಹೆಸರಿನಲ್ಲಿ ಅಭಿವೃದ್ಧಿಹೊಂದಿದ ದೇಶಗಳು ಇಡೀ ಆರ್ಥಿಕ ವ್ಯವಸ್ಥೆಯನ್ನು ತಮ್ಮ ನಿಯಂತ್ರಣಕ್ಕೆ ತಂದುಕೊಳ್ಳಲು ಉದ್ದೇಶಿಸಿವೆ ಎಂಬುದಂತೂ ಬಹಳ ಸ್ಪಷ್ಟ. ೫ ಪ್ರಮುಖ ಕ್ಷೇತ್ರಗಳನ್ನು ಆ ದೇಶಗಳು ತಮ್ಮ ಏಕಸ್ವಾಮ್ಯದಲ್ಲಿರಿಸಿಕೊಂಡಿವೆ. ಅವೆಂದರೆ, (೧) ತಂತ್ರಜ್ಞಾನದ ಏಕಸ್ವಾಮ್ಯ, (೨) ಜಗತ್ತಿನಾದ್ಯಂತ ಹಣಕಾಸು ಮಾರುಕಟ್ಟೆಯ ಮೇಲಿನ ಹಿಡಿತ, (೩) ಭೂಮಿಯ ನೈಸರ್ಗಿಕ ಸಂಪನ್ಮೂಲಗಳಿಗೆ ಸಂಬಂಧಿಸಿದಂತೆ ಏಕಸ್ವಾಮ್ಯ ಪ್ರವೇಶಾಧಿಕಾರ, (೪) ಮಾಧ್ಯಮ ಹಾಗೂ ಸಂವಹನ ಕ್ಷೇತ್ರದ ಏಕಸ್ವಾಮ್ಯ ಹಾಗೂ (೫) ಸಮೂಹ ವಿನಾಶದ ಶಸ್ತ್ರಗಳ ಮೇಲಿನ ಏಕಸ್ವಾಮ್ಯ. ಒಟ್ಟಾರೆಯಾಗಿ ನೋಡಿದಾಗ ಈ ಪ್ರಕ್ರಿಯೆಯು ಹಿಂದೆಂದಿಗಿಂತಲೂ ಹೆಚ್ಚಿನ ಅಸಮಾನತೆಯ-ಜಾಗತಿಕ ಮಟ್ಟದಲ್ಲಿ ಉಪಗುತ್ತಿಗೆದಾರಿಕೆಯ ವಿಧೇಯತೆಗೆ ಒಳಪಡಿಸುವ ಸ್ಥಿತಿಗೆ ಕಾರಣವಾಗಿದೆ. ಧ್ರುವೀಕರಣ ಪ್ರಕ್ರಿಯೆಗೆ ಇದೊಂದು ಹೊಸ ಬುನಾದಿಯಾಗಿದೆ.

'ವಾಷಿಂಗ್‌ಟನ್ ಸಹಮತ'ದ ಚರಿತ್ರೆಯನ್ನು ಗಮನಿಸಿದರೆ ಕಳೆದ ಮೂವತ್ತು ವರ್ಷಗಳಲ್ಲಿ ೧೯೭೦-೨೦೦೭ರ ಅವಧಿಯಲ್ಲಿ, ೧೨೪ ಬ್ಯಾಂಕಿಂಗ್ ಬಿಕ್ಕಟ್ಟೂ ಸೇರಿದಂತೆ,

೧೫ ಬೃಹತ್ ಬಿಕ್ಕಟ್ಟುಗಳನ್ನು ಎದುರಿಸಿದೆ. ಅಂದರೆ ಸರಾಸರಿ ಪ್ರತಿವರ್ಷಕ್ಕೆ ೩-೪. ೧೯೮೦ರಲ್ಲಿ ಲ್ಯಾಟಿನ್ ಅಮೇರಿಕ, ಅಮೇರಿಕಾ ಮತ್ತು ಶ್ರೀಲಂಕಾ: ೧೯೯೦ರಲ್ಲಿ ಸ್ಕ್ಯಾಂಡಿನೇವಿಯಾ, ಜಪಾನ್ ಮತ್ತು ಏಷ್ಯಾ : ೨೦೦೭ರಲ್ಲಿ ಅಮೇರಿಕಾ ೧೯೩೦ಕ್ಕಿಂತಲೂ ಭೀಕರವಾದ ಈಗಿನ ಬಿಕ್ಕಟ್ಟನ್ನು ಎದುರಿಸಿವೆ. ೧೯೭೦ರ ಆರ್ಥಿಕ ಏರುಪೇರುಗಳು ನಿರ್ವಾಹಕ ಬಂಡವಾಳಶಾಹಿ ವ್ಯವಸ್ಥೆಯನ್ನು ಕಂಗೆಡಿಸಿದವು. ಸ್ಥಿರ ವಿನಿಮಯ ದರದ ವ್ಯವಸ್ಥೆ, ಎರಡು ಬಾರಿ ಜರುಗಿದ ತೈಲ ಬೆಲೆ ಆಘಾತಗಳು, ಮನಬಂದಂತೆ ವರ್ತಿಸುವ ಸರ್ಕಾರಿ ಕೊರತೆಗಳು, ಬಡ್ಡಿದರ ಏರಿಕೆಗಳು, ನಿಷ್ಕ್ರಿಯ-ಹಣದುಬ್ಬರ, ಜಾಗತಿಕ ಆರ್ಥಿಕ ಹಿನ್ನಡೆ, ಸಾಲದ ಬಿಕ್ಕಟ್ಟು, ಇತ್ಯಾದಿಗಳು ಇಲ್ಲಿ ನೆನಪಿಗೆ ಬರುತ್ತವೆ.

**ಅಭಿವೃದ್ಧಿ ಎಂದರೇನು ?**

ಅಭಿವೃದ್ಧಿಯನ್ನು ಹೆದ್ದಾರಿಗಳ ಉದ್ದ, ಸೇತುವೆ, ಮೇಲ್ಸೇತುವೆಗಳು, ಖಾಸಗಿ ಆರೋಗ್ಯ ಕೇಂದ್ರಗಳು, ಖಾಸಗಿ ಶಾಲೆ-ಕಾಲೇಜುಗಳು, ಉಷ್ಣ ವಿದ್ಯುತ್ ಸ್ಥಾವರಗಳು, ಗಾಲ್ಫ್ ಮೈದಾನಗಳು, ಜಿಮ್‌ಗಳು, ಚಿಲ್ಲರೆ ವ್ಯಾಪಾರದ ಬೃಹತ್ ಮಾಲ್‌ಗಳು, ರಫ್ತು ಉತ್ತೇಜನಾ ವಲಯಗಳು, ವಿಶೇಷ ಆರ್ಥಿಕ ವಲಯಗಳು ಇತ್ಯಾದಿಗಳಿಂದ ಅಳೆಯುವುದು ಸರಿಯೇ ? ಅವು ನಿಸ್ಸಂದೇಹವಾಗಿ ಪ್ರಮುಖ ಭೌತಿಕ ನಿಮ್ನ ರಚನೆಗಳ ಅಭಿವೃದ್ಧಿಯನ್ನು ಪ್ರತಿನಿಧಿಸುವುದು ಮಾತ್ರವಲ್ಲದೆ ಕಡಿಮೆ ವರಮಾನದ ಸಾಂಪ್ರದಾಯಿಕ ನಿಷ್ಕ್ರಿಯ ಆರ್ಥಿಕ ವ್ಯವಸ್ಥೆಯನ್ನು, ಸದೃಢ ಆಧುನಿಕ ಅರ್ಥವ್ಯವಸ್ಥೆಯನ್ನಾಗಿ ಪ್ರತಿನಿಧಿಸಲು ಅತ್ಯವಶ್ಯಕವಾಗಿವೆ. ಮೂಲಭೂತ ಅವಶ್ಯಕತೆಗಳಾದ ಆರೋಗ್ಯ, ಶಿಕ್ಷಣ, ಆಹಾರ, ನೀರು, ವಿದ್ಯುತ್, ಸಾರಿಗೆ ಹಾಗೂ ಸಂಪರ್ಕಗಳನ್ನು ಪೂರೈಸುವುದೂ ಅತ್ಯವಶ್ಯಕ.

ಆದರೆ ನಿಜವಾದ ಅಭಿವೃದ್ಧಿ ಎಂದರೆ ಇವುಗಳ ಆಚೆಗಿನವು. ಇನ್ನೂ ಮೂಲಭೂತವಾದವು. ಸ್ವಾತಂತ್ರ್ಯ ಹಾಗೂ ಅಂತಃಪ್ರೇರಣೆಯ ಪರಿಸರದಲ್ಲಿ ಉಂಟಾಗುವ ಮಾನವ ಚೈತನ್ಯದ ಸಂಪೂರ್ಣ ಅಭಿವೃದ್ಧಿಯೇ ನಿಜವಾದ ಅಭಿವೃದ್ಧಿ. ಅನವಶ್ಯಕ ಮೌನ ಸಮ್ಮತಿ, ವಿಧೇಯತೆ, ಮೂಢನಂಬಿಕೆ ಹಾಗೂ ಗುಲಾಮಿ ರೀತಿಯ ಶರಣಾಗತಿಯ ಸಂಸ್ಕೃತಿಯನ್ನು ತೊಡೆದುಹಾಕಿ, ವಸ್ತುನಿಷ್ಠ, ನಿರ್ಭಾವುಕ ವಿಮರ್ಶೆಯ ಮೂಲಕ ಅತಾರ್ಕಿಕ, ಅಪ್ರಸ್ತುತ, ಅನವಶ್ಯಕ, ಅಸಂಗತ ಆಚಾರ-ವಿಚಾರಗಳ ಸ್ಥಾನದಲ್ಲಿ ತಾರ್ಕಿಕ, ಸುಸಂಗತ, ನಿಷ್ಠಾಪೂರ್ಣ ಹಾಗೂ ವೈಚಾರಿಕ ಮತ್ತು ವೈಜ್ಞಾನಿಕ ಸಂಸ್ಕೃತಿಯನ್ನು ಸ್ಥಾಪಿಸುವುದೇ ನಿಜವಾದ ಅಭಿವೃದ್ಧಿ. ಪರಾವಲಂಬನೆಯ ಮತ್ತು ಮೂಕ ಸಂಸ್ಕೃತಿಯನ್ನು ತೊಡೆದುಹಾಕಿ ಸ್ವಾವಲಂಬನೆಯ ಸಂಸ್ಕೃತಿಯನ್ನು ಪ್ರತಿಷ್ಠಾಪಿಸುವುದೇ ನೈಜ ಅಭಿವೃದ್ಧಿ. ನಿಜವಾದ ಅಭಿವೃದ್ಧಿ ಎಂದರೆ ಅಸಹನೆಯ, ವಿವೇಚನಾರಹಿತ ದ್ವೇಷ, ಕ್ರೌರ್ಯ, ಹಿಂಸೆಗಳ ಸಂಸ್ಕೃತಿಯನ್ನು ನಿವಾರಿಸಿ ನಿಸ್ವಾರ್ಥ ಪ್ರೀತಿ, ದಯೆ, ಕರುಣೆ, ಅನುಕಂಪಗಳ ಸಂಸ್ಕೃತಿಯನ್ನು ಸ್ಥಾಪಿಸಿ ಬೆಳೆಸುವುದೇ ಆಗಿದೆ. ವಿಚಾರಹೀನ, ತತ್ವಹೀನ, ಪ್ರತ್ಯೇಕತೆ, ತಾರತಮ್ಯ ಹಾಗೂ ಶ್ರೇಣೀಕರಣದ ನೀತಿಗಳನ್ನು ತೊಡೆದು ಕಾನೂನು ಹಾಗೂ ರಕ್ಷಣೆಯ ದೃಷ್ಟಿಯಲ್ಲಿ, ಸ್ತ್ರೀ ಪುರುಷರ ನಡುವೆ ಸಮಾನ ಕೆಲಸಕ್ಕೆ ಸಮಾನ ವೇತನ, ಪ್ರಜೆಗಳ ನಡುವೆ, ಜಾತಿ, ವರ್ಗ, ಶ್ರದ್ಧೆ, ವರ್ಣ, ನಂಬಿಕೆ, ಸಾಮಾಜಿಕ ಮೂಲ, ರಾಷ್ಟ್ರೀಯ ಮೂಲ, ಲಿಂಗ, ರಾಜಕೀಯ ಸಿದ್ಧಾಂತ ಇತ್ಯಾದಿಗಳ ತಾರತಮ್ಯ ಮಾಡದೆ ಶಿಕ್ಷಣ, ಆರೋಗ್ಯ, ಉದ್ಯೋಗಗಳಲ್ಲಿ ಸಮಾನ ಅವಕಾಶಗಳನ್ನು ನೀಡುವುದೇ ನೈಜ ಅಭಿವೃದ್ಧಿ. ನಿಜವಾದ ಅಭಿವೃದ್ಧಿ ಎಂದರೆ ದಾಸ್ಯದ ಸಂಕೋಲೆಗಳಿಂದ ಬಿಡುಗಡೆ ಪಡೆದು ನೈಜ ಸ್ವಾತಂತ್ರ್ಯದೆಡೆಗೆ ಸಾಗುವುದೇ ಆಗಿದೆ.

**'ಅಭಿವೃದ್ಧಿ ನೆರವು' ಮತ್ತದರ ಪರಿಣಾಮ**

ಸುಮಾರು ಒಂದು ದಶಕದ ಹಿಂದೆ ತೃತೀಯ ಜಗತ್ತು ಪಡೆದ 'ಅಭಿವೃದ್ಧಿ ನೆರವಿ'ನ ಮೊತ್ತ ಅಧಿಕೃತವಾಗಿ ೫೪ ಶತಕೋಟಿ ಡಾಲರ್‌ಗಳು. ಅದೇ ಕಾಲಕ್ಕೆ ಸಾಲ ಸಂಬಂಧಿ ಸೇವೆಗಳಿಗೆ ಬಡರಾಷ್ಟ್ರಗಳು ಶ್ರೀಮಂತ ರಾಷ್ಟ್ರಗಳಿಗೆ ಪಾವತಿಸಿದ ಮೊತ್ತ ೪೩.೬ ಲಕ್ಷ ಕೋಟಿ ಡಾಲರ್‌ಗಳು. ಅದರಲ್ಲೂ ಅತಿ ಹೆಚ್ಚಿನ ಪಾಲು ಪಡೆದದ್ದು ಅಮೇರಿಕ. ಅಷ್ಟೇ ಅಲ್ಲ ಅದು ತನ್ನ ಆಂತರಿಕ ಉತ್ಪನ್ನದ ಶೇ. ೦.೧ರಷ್ಟು ಮಾತ್ರವೇ ಈ ತಥಾಕಥಿತ ನೆರವಿಗೆ ನಿಗದಿಪಡಿಸಿದೆ. ಇದರಿಂದಾಗಿ ಬೃಹತ್ ಮೊತ್ತದ ನೆರವಿನ ಹಣವನ್ನು ಅಸಮಾನ ವ್ಯಾಪಾರ ಷರತ್ತುಗಳ ಕಾರಣದಿಂದ ಕಡಿತಗೊಳಿಸಲಾಯಿತು. ಇದಲ್ಲದೆ ಮುಂದುವರಿದ ದೇಶಗಳು ೩೦೦ ಶತಕೋಟಿ ಡಾಲರ್ ಹಣವನ್ನು ಸಬ್ಸಿಡಿಯಾಗಿ ಉಪಯೋಗಿಸುವುದರಿಂದ ಬಡ ದೇಶಗಳು ಶ್ರೀಮಂತ ದೇಶಗಳ ಮಾರುಕಟ್ಟೆಗೆ ಪ್ರವೇಶಾವಕಾಶದಿಂದ ವಂಚಿತವಾಗಿವೆ.

- ✶ ಜಗತ್ತಿನ ಶೇ. ೮೫ರಷ್ಟು ಜನಸಂಖ್ಯೆಯು ಬಡದೇಶಗಳಲ್ಲಿ ವಾಸಿಸುತ್ತಿದ್ದು ಅಂತರರಾಷ್ಟ್ರೀಯ ವ್ಯಾಪಾರದಲ್ಲಿ ಅವುಗಳ ಪಾಲು ನಗಣ್ಯ.
- ✶ ಈ ದೇಶಗಳ ಬಾಹ್ಯ ಸಾಲ ೧೯೬೪ರಲ್ಲಿ ೫೦ ಶತಕೋಟಿ ಡಾಲರ್ ಇದ್ದದ್ದು ಈಗ ಅದು ೨.೬ ಲಕ್ಷ ಕೋಟಿ ಡಾಲರ್‌ಗಳಾಗಿವೆ.
- ✶ ಕಳೆದ ೨೧ ವರ್ಷಗಳಲ್ಲಿ ಬಡರಾಷ್ಟ್ರಗಳು ಸಾಲ ಸಂಬಂಧಿ ಸೇವೆಗಳಿಗೆ ೫.೪ ಲಕ್ಷ ಕೋಟಿ ಡಾಲರ್‌ಗಳಷ್ಟು ಮೊತ್ತವನ್ನು ಪಾವತಿಸಿವೆ. ಅರ್ಥಾತ್ ಅವು ಪಡೆದ, ಪ್ರಸ್ತುತ ಇರುವ ಒಟ್ಟು ಸಾಲಕ್ಕಿಂತ ಎರಡರಷ್ಟು ಮೊತ್ತವನ್ನು ಈಗಾಗಲೇ ಶ್ರೀಮಂತ ರಾಷ್ಟ್ರಗಳಿಗೆ ಪಾವತಿಸಿದೆ.

**ಅವುಗಳ ಅನಿವಾರ್ಯ ಪರಿಣಾಮಗಳೆಂದರೆ –**

- ✶ ೨೫ ವರ್ಷಗಳ ಹಿಂದೆ ೫೦ ಕೋಟಿ ಜನರು ಹಸಿದ ಹೊಟ್ಟೆಯಲ್ಲಿ ಮಲಗುತ್ತಿದ್ದರು. ಈಗ ೮೦ ಕೋಟಿ ಜನರು ಹಸಿದ ಹೊಟ್ಟೆಯಲ್ಲಿ ಮಲಗುತ್ತಿದ್ದು, ಪರಿಸ್ಥಿತಿ ಅದಕ್ಕಿಂತಲೂ ಚಿಂತಾಜನಕವಾಗಿದೆ.
- ✶ ಬಡ ರಾಷ್ಟ್ರಗಳಲ್ಲಿ ೧೫ ಕೋಟಿ ಮಕ್ಕಳು ಕಡಿಮೆ ತೂಕ ಹೊಂದಿ ಜನಿಸುತ್ತಿದ್ದಾರೆ. ಇದರಿಂದ ಅವುಗಳ ಮರಣ ಸಾಧ್ಯತೆ, ದೈಹಿಕ ಮಾನಸಿಕ ಬೆಳವಣಿಗೆಯ ಕುಂಠಿತ ಹೆಚ್ಚಿದೆ.
- ✶ ಶಿಶು ಮರಣ ದರ ಶ್ರೀಮಂತ ದೇಶಗಳಿಗಿಂತ ಬಡರಾಷ್ಟ್ರಗಳಲ್ಲಿ ೧೨ ಪಟ್ಟು ಹೆಚ್ಚಿದೆ.
- ✶ ಪ್ರತಿದಿನ ತೃತೀಯ ಜಗತ್ತಿನ ೩೩ ಸಾವಿರ ಮಕ್ಕಳು ವಾಸಿಮಾಡಬಹುದಾದ ಖಾಯಿಲೆಗಳಿಂದಲೇ ಸಾಯುತ್ತಿದ್ದಾರೆ.
- ✶ ಎರಡು ದಶಲಕ್ಷ ಬಾಲಕಿಯರು ವೇಶ್ಯಾ ವೃತ್ತಿಗೆ ದೂಡಲ್ಪಡುತ್ತಿದ್ದಾರೆ.
- ✶ ಜಗತ್ತಿನ ಶೇ. ೮೫ರಷ್ಟಿರುವ ಬಡದೇಶಗಳ ಜನಸಂಖ್ಯೆಯು ಕೇವಲ ಶೇ. ೩೦ರಷ್ಟು ವಿದ್ಯುತ್‌ಅನ್ನು, ಶೇ. ೨೫ರಷ್ಟು ಲೋಹಗಳನ್ನು ಹಾಗೂ ಶೇ. ೧೫ರಷ್ಟು ಮರವನ್ನು ಉಪಯೋಗಿಸುತ್ತಾರೆ.

ಮೇಲಿನ ಸ್ಥೂಲ ಚಿತ್ರಣವು ಕೆಲ ವರ್ಷಗಳ ಹಿಂದೆ ಪ್ರಕಟವಾಗಿದ್ದು, ಇವುಗಳಲ್ಲಿ ಬೆಳವಣಿಗೆ ಇಲ್ಲವೆಂದಾಗಲಿ ಅಥವಾ ಅಭಿವೃದ್ಧಿಯಾಗಿಲ್ಲವೆಂದಾಗಲಿ ಹೇಳಲಾಗದು.

**ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಕಳವಳ**

'ಜಾಗತಿಕ ಉದ್ಯೋಗ ಬಿಕ್ಕಟ್ಟನ್ನು ಎದುರಿಸುವುದು' – ಎನ್ನುವ ಶೀರ್ಷಿಕೆಯುಳ್ಳ ತಮ್ಮ ವರದಿಯಲ್ಲಿ ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಮಹಾನಿರ್ದೇಶಕರು ತಮ್ಮ ಪ್ರಸ್ತಾವನೆಯಲ್ಲಿ ಕೆಳಕಂಡ ಅಂಶಗಳ ಬಗ್ಗೆ ತಮ್ಮ ಕಳವಳ ವ್ಯಕ್ತಪಡಿಸಿದ್ದಾರೆ.

- ✶ ಲಕ್ಷಾಂತರ ಮಹಿಳೆಯರು ಮತ್ತು ಪುರುಷರು ಉದ್ಯೋಗ ಕಳೆದು ಕೊಂಡಿದ್ದಾರೆ. ವ್ಯಾಪಾರ, ಅದರಲ್ಲೂ ಸಣ್ಣ ಉದ್ಯಮಗಳು ಮುಚ್ಚಿಹೋಗುತ್ತಿವೆ.
- ✶ ಬಡತನ ಹಾಗೂ ಅನೌಪಚಾರಿಕ ಉದ್ಯೋಗಗಳು ಹೆಚ್ಚಲಿವೆ. ಹಾಗೂ ಇತ್ತೀಚಿನ ವರ್ಷಗಳ ಬೆಳವಣಿಗೆಯನ್ನು ಕುಂಠಿತಗೊಳಿಸಿ ಮಧ್ಯಮ ವರ್ಗದವರನ್ನು ಮತ್ತಷ್ಟು ದುರ್ಬಲರನ್ನಾಗಿಸಿದೆ.
- ✶ ಉದ್ಯೋಗಗಳು ಸಿಕ್ಕದಿದ್ದಾಗ ಸಾಮಾಜಿಕ ಭದ್ರತೆಗೆ ಹೆಚ್ಚಿನ ಬೇಡಿಕೆ ಉಂಟಾಗಲಿದೆ.
- ✶ ದೀರ್ಘಕಾಲೀನ ಬಿಕ್ಕಟ್ಟು ಸಾಮಾಜಿಕ ಹಾಗೂ ರಾಜಕೀಯ ಸ್ಥಿರತೆಗೆ ದೊಡ್ಡ ಅಪಾಯವುಂಟುಮಾಡಲಿದೆ.

**ಯೂರೋಪಿಯನ್ ಒಕ್ಕೂಟದ ದೇಶಗಳ ಇತ್ತೀಚಿನ ಬೆಳವಣಿಗೆಗಳ ಒಂದು ಸೂಕ್ಷ್ಮ ಅವಲೋಕನ (ಗ್ರೀಸ್ ಮತ್ತು ಅದರಾಚೆಗೆ)**

- ✶ ಯೂರೋಪಿನ ವೆಚ್ಚ ಕಡಿವಾಣ ಕ್ರಮಗಳು ಅನೇಕ ವಸ್ತುಗಳ ಬೇಡಿಕೆಯ ಕುಸಿತಕ್ಕೆ ಕಾರಣವಾಗಿ ಜಾಗತಿಕ ಆರ್ಥಿಕ ಪುನಶ್ಚೇತನಕ್ಕೆ ತಡೆ ಉಂಟುಮಾಡಲಿದೆ.
- ✶ ಯೂರೋಪಿನಾದ್ಯಂತ ಸರ್ಕಾರಗಳು ಯೂರೋನ ಅಸ್ತಿತ್ವಕ್ಕೆ ಧಕ್ಕೆ ಉಂಟುಮಾಡಿರುವ ಗ್ರೀಸ್‌ನ ಸಾಲ ಬಿಕ್ಕಟ್ಟಿನ ಹಾಗೂ ಅದರ ಪರಿಣಾಮಗಳಿಂದ ತತ್ತರಿಸಿಹೋಗಿ ಯೂರೋಪಿಯನ್ ಐಕ್ಯತೆಯ ಹೆಸರಿನಲ್ಲಿ ಸಾರ್ವಜನಿಕ ಸೇವೆಗಳಲ್ಲಿ ಸಾಮೂಹಿಕವಾಗಿ ತಾತ್ಕಾಲಿಕ ಕಡಿತ ಘೋಷಿಸುವ ಅದೇ ಬಗೆಯ ಕ್ರಮಗಳನ್ನು ಅನುಸರಿಸುತ್ತಿದೆ.
- ✶ ಬ್ರಿಟನ್ನಿನ ಪ್ರಧಾನಿ ಡೇವಿಡ್ ಕ್ಯಾಮರೂನ್ ಅವರು ಬ್ರಿಟನ್ನಿನ ಸಾರ್ವಜನಿಕ ಹಣಕಾಸು ವ್ಯವಸ್ಥೆ ತಾನು ನಿರೀಕ್ಷಿಸಿದ್ದಕ್ಕಿಂತ ಹೀನಾಯ ಸ್ಥಿತಿಯಲ್ಲಿದ್ದು ತನ್ನ ದೇಶವನ್ನು ಅದಕ್ಕೆ ಸಿದ್ಧಪಡಿಸಿದ್ದೇನೆಂದೂ, ಈಗ ತೆಗೆದುಕೊಳ್ಳಲಾಗುವ ತೀರ್ಮಾನಗಳು ದೇಶದ ಪ್ರತಿಯೊಬ್ಬ ವ್ಯಕ್ತಿಯನ್ನೂ ಬಾಧಿಸಲಿವೆ, ಆ ತೀರ್ಮಾನಗಳ ಪರಿಣಾಮಗಳು ಕೆಲವು ದಶಕಗಳೇ ಇರಬಹುದು ಎಂದು ಹೇಳಿದ್ದಾರೆ.
- ✶ ಇಟಲಿಯ ಸಾಮಾನ್ಯ ಸಾರ್ವಜನಿಕ ವಲಯದ ಕಾರ್ಮಿಕರ ವೇತನವನ್ನು ಸ್ಥಗಿತಗೊಳಿಸಿ ಹೆಚ್ಚು ವೇತನದ ವರಮಾನಗಳನ್ನು ಶೇ. ೧೦ರಷ್ಟು ಕಡಿತಗೊಳಿಸುವ ತೀರ್ಮಾನಗಳನ್ನು ಅನುಮೋದಿಸಿದೆ.
- ✶ ಸ್ಪೇನ್ ದೇಶವು ತನ್ನ ವೆಚ್ಚಗಳಲ್ಲಿ ಭಾರಿ ಕಡಿತವನ್ನು ಘೋಷಿಸಿದೆ. ದೊಡ್ಡ ದೊಡ್ಡ ಕಾರ್ಮಿಕ ಸಂಘಟನೆಗಳು ಸಾರ್ವತ್ರಿಕ ಮುಷ್ಕರದ ಬೆದರಿಕೆ ಹಾಕಿವೆ. ವೇತನ/ಸಾಮಾಜಿಕ ಸೌಲಭ್ಯ ಕಡಿತವನ್ನು ವಿರೋಧಿಸಿ, ಗ್ರೀಸ್, ಸ್ಪೇನ್, ಫ್ರಾನ್ಸ್ ಮತ್ತಿತರ ದೇಶಗಳಲ್ಲಿ ಬೃಹತ್ ಪ್ರತಿಭಟನೆಗಳು ನಡೆದಿವೆ. ಇತ್ತೀಚೆಗೆ ಫ್ರಾನ್ಸ್ ದೇಶದ

ಯುವಕರು 'ಪೆನ್ಷನ್‌ಅನ್ನು ಉಳಿಸಿ' ಎಂದು ಪೆನ್ಷನ್ ಸುಧಾರಣೆಯ ವಿರುದ್ಧ ದೇಶಾದ್ಯಂತ ಬೀದಿಗಿಳಿದು ಪ್ರತಿಭಟಿಸಿದ್ದಾರೆ.

* ಹಂಗೆರಿ, ಪೋರ್ಚುಗಲ್, ಐರ್ಲೆಂಡ್ ಮತ್ತು ಗ್ರೀಸ್‌ನಲ್ಲಿ ಬಿಕ್ಕಟ್ಟು ತಾರಕಕ್ಕೇರಿದ್ದು ಐ.ಎಂ.ಎಫ್. ಮತ್ತು ಬ್ರಸೆಲ್ಸ್‌ನ ಸಹಾಯದಿಂದ ಸದ್ಯಕ್ಕೆ ಹೊರಬಂದಿದೆ.
* ಒಟ್ಟಾರೆಯಾಗಿ, ಯೂರೋಪಿಯನ್ ಸರ್ಕಾರಗಳು ಸಾರ್ವಜನಿಕ ವೆಚ್ಚದಲ್ಲಿ ೨೦೦ ಬಿಲಿಯನ್ ಯೂರೋಗಳ (೧೧.೪ ಲಕ್ಷ ಕೋಟಿ ರೂಪಾಯಿಗಳು) ಕಡಿತವನ್ನು ಯೂರೋನ ಸುರಕ್ಷಾ ಕವಚಕ್ಕಾಗಿ ೫೦೦ ಬಿಲಿಯನ್ (೨೮.೫ ಲಕ್ಷ ಕೋಟಿ ರೂಪಾಯಿಗಳು) ಯೋಜನೆಯೊಂದನ್ನು ಘೋಷಿಸಿವೆ.
* ಯೂರೋಪಿಯನ್ ಪಾರ್ಲಿಮೆಂಟಿನಲ್ಲಿ ಉದಾರ ಗುಂಪಿನ ನಾಯಕರಾದ ಬೆಲ್ಜಿಯಂನ ಮಾಜಿ ಪ್ರಧಾನಿ ಗೈ ವೆರ್ಹೋಫ್‌ಸ್ಟಾಟ್ಡ್ ಅವರು, ''ನಾವು ದೀರ್ಘಾವಧಿ ಆರ್ಥಿಕ ಜಡಸ್ಥಿತಿಯನ್ನು ಪ್ರವೇಶಿಸುತ್ತಿದ್ದೇವೆ. ಮುಂದಿನ ವರ್ಷಗಳಲ್ಲಿ ಅದೇ ಪ್ರಮುಖ ಸಮಸ್ಯೆ, ಯೂರೋಪು 'ಹೊಸ ಜಪಾನ್' ಆಗಿದೆ'' ಎಂದಿದ್ದಾರೆ.

ಅತಿವೇಗದ ತೀವ್ರ ವಿರಕ್ತಿ ಕ್ರಮಗಳು ಜಗತ್ತಿನ ದುರ್ಬಲ ಆರ್ಥಿಕ ಚೇತರಿಕೆಯನ್ನು ಭಗ್ನಗೊಳಿಸುವುದೆಂಬುದೇ ತೀವ್ರ ಆತಂಕ ಹುಟ್ಟಿಸುವ ಸಂಗತಿ. ಅಮೇರಿಕದ ಅರ್ಥ ಖಾತೆಯ ಕಾರ್ಯದರ್ಶಿ ತಿಮೋತಿ ಹೀತ್ನರ್ ಯೂರೋಪಿನ ದೊಡ್ಡ ರಾಷ್ಟ್ರಗಳಾದ ಜರ್ಮನಿಯಂತಹ ದೇಶಗಳು ತಮ್ಮ ಖರ್ಚನ್ನು ತೀವ್ರವಾಗಿ ಇಳಿಸುವುದನ್ನು ವಿರೋಧಿಸಿದ್ದಾರೆ. ಅರ್ಥಶಾಸ್ತ್ರಜ್ಞರು ಯೂರೋಪಿನ ಹಠಾತ್ ಕಠಿಣ ವಿರಕ್ತಿ ಕ್ರಮಗಳು ಜಾಗತಿಕ ಆರ್ಥಿಕ ಚೇತರಿಕೆಯನ್ನು ಹಾಗೂ ಯೂರೋಪಿನ ಅರ್ಥವ್ಯವಸ್ಥೆಯ ಆರೋಗ್ಯವನ್ನು ಉತ್ತಮಪಡಿಸುವ ಪ್ರಯತ್ನಗಳನ್ನು ಹಾಳುಗೆಡವಲಿವೆ ಎಂದು ಎಚ್ಚರಿಸಿದ್ದಾರೆ.

**ಭಾರತದ ಅನುಭವಗಳು**

ಭಾರತ ದೇಶವು ಜಗತ್ತಿನ ಅತಿದೊಡ್ಡ ಪ್ರಜಾಪ್ರಭುತ್ವ ದೇಶ. ಜಗತ್ತಿನಲ್ಲಿ ಹಾಲು, ಚಹ, ಸಿನಿಮಾ, ಆಟೋರಿಕ್ಷಾಗಳ ತಯಾರಿಕೆಯಲ್ಲಿ (ಸದ್ಯದಲ್ಲಿಯೇ ಕಾರು ತಯಾರಿಕೆಯಲ್ಲಿಯೂ ಸಹ) ಮೊದಲ ಸ್ಥಾನದಲ್ಲಿರುವ ದೇಶ. ಎರಡು ಅಥವಾ ಮೂರು ವರ್ಷಗಳಿಗೊಮ್ಮೆ ಸಕ್ಕರೆ ಉತ್ಪಾದನೆಯಲ್ಲಿಯೂ ಮೊದಲನೆಯ ಗೋಧಿ ಮತ್ತು ಭತ್ತ ಬೆಳೆಯುವುದರಲ್ಲಿ ಜಗತ್ತಿನಲ್ಲಿಯೆ ಎರಡನೆ ಸ್ಥಾನದಲ್ಲಿರುವ ದೇಶ. ಒಟ್ಟಾರೆಯಾಗಿ, ಆಂತರಿಕ ಉತ್ಪನ್ನದ ಪಟ್ಟಿಯಲ್ಲಿ ೧೨ನೇ ಸ್ಥಾನದಲ್ಲಿರುವ ದೇಶ. ಅನೇಕ ಅರ್ಥಶಾಸ್ತ್ರಜ್ಞರು ಭಾರತವನ್ನು ಅಭಿವೃದ್ಧಿಶೀಲ ರಾಷ್ಟ್ರಗಳಿಗೆ ಮಾದರಿ ದೇಶ ಎಂದು ಪರಿಗಣಿಸಿದ್ದಾರೆ. ಮೈಕ್ರೋಸಾಫ್ಟ್, ಜನರಲ್ ಎಲೆಕ್ಟ್ರಿಕ್ ಕಂಪನಿ, ಅಮೇರಿಕನ್ ಎಕ್ಸ್‌ಪ್ರೆಸ್ ಮೊದಲಾದ ಅತಿದೊಡ್ಡ ಅಮೇರಿಕದ ಬಹುರಾಷ್ಟ್ರೀಯ ಕಂಪನಿಗಳಿಗೆ ಆಕರ್ಷಕ ಕಾರ್ಯಕ್ಷೇತ್ರ ಭಾರತ. ಮಾಹಿತಿ ತಂತ್ರಜ್ಞಾನ, ವಿದ್ಯುನ್ಮಾನ, ಮಾಹಿತಿ ಜಾಲಕಾರ್ಯ, ಮತ್ತಿತರ ಕ್ಷೇತ್ರಗಳಲ್ಲಿ ವಿಪ್ರೋ, ಇನ್ಫೋಸಿಸ್ ಹಾಗೂ ಟಾಟಾದಂತಹ ಬೃಹತ್ ಕಂಪನಿಗಳು ಯೂರೋಪ್, ಅಮೇರಿಕಗಳಲ್ಲಿ ವ್ಯವಹಾರ ನಡೆಸುತ್ತಿರುವ ಕಂಪನಿಗಳಿಗೆ ತವರೂರು ಭಾರತ. ಇಷ್ಟೆಲ್ಲಾ ಹೆಗ್ಗಳಿಕೆಗಳ ನಡುವೆ ಭಾರತ ದೇಶದ ಕರಾಳ ಮುಖವನ್ನು ಗಮನಿಸಬೇಕು. ಜಗತ್ತಿನ ಶೇ. ೫೦ರಷ್ಟು (೩೮ ಕೋಟಿ) ಹಸಿದ ಹೊಟ್ಟೆಗಳು ಭಾರತದಲ್ಲಿಯೇ ಇವೆ. ಶೇ. ೪೨ರಷ್ಟು ೫ ವರ್ಷದೊಳಗಿನ ಮಕ್ಕಳು ಅಪೌಷ್ಟಿಕತೆಗೆ ಗುರಿಯಾಗಿದ್ದಾರೆ. ಶೇ. ೫೦ರಷ್ಟು ಮಕ್ಕಳು ಕುಂಠಿತ ಬೆಳವಣಿಗೆಯವರಾಗಿದ್ದಾರೆ. ೫ ವರ್ಷದೊಳಗಿನ ೧೨೦ ಲಕ್ಷ ಮಕ್ಕಳು ಪ್ರತಿ ವರ್ಷ ಅಪೌಷ್ಟಿಕತೆಗೆ ಬಲಿಯಾಗುತ್ತಿದ್ದಾರೆ. ಪ್ರಧಾನ ಮಂತ್ರಿಯವರು ''ದೊಡ್ಡ ಮನಸ್ಸು ಮಾಡಿ'' ಇದನ್ನು ರಾಷ್ಟ್ರೀಯ ಅವಮಾನ ಎನ್ನುವುದನ್ನು ಒಪ್ಪಿದ್ದಾರೆ. ಬಾಲ ಕಾರ್ಮಿಕರನ್ನು ನೇಮಿಸಿಕೊಳ್ಳುವುದು ಕಾನೂನುಬಾಹಿರವಾದರೂ ವಾಸ್ತವದಲ್ಲಿ ಅದು ವ್ಯಾಪಕವಾಗಿದೆ. ಒಂದು ಅಂದಾಜಿನ ಪ್ರಕಾರ ೬೦ರಿಂದ ೧೧೫ ದಶಲಕ್ಷ ಬಾಲಕಾರ್ಮಿಕರಿದ್ದಾರೆ. ಹೆಣ್ಣು ಭ್ರೂಣಹತ್ಯೆ ಸಾವಿರಾರು ಸಂಖ್ಯೆಯಲ್ಲಿ ಅವ್ಯಾಹತವಾಗಿ ನಡೆಯುತ್ತಿದೆ. ಬಿಹಾರ, ಜಾರ್ಖಂಡ್, ಒಡಿಶಾ ಹಾಗೂ ಮಧ್ಯಪ್ರದೇಶವೂ ಸೇರಿದಂತೆ ದೇಶದ ಅನೇಕ ಭಾಗಗಳಲ್ಲಿ ದಿನವಹಿ ಕೂಲಿಯ ಪ್ರಮಾಣ ರೂ. ೯/-ರಿಂದ ರೂ. ೧೯/-ರವರೆಗೆ ಇದೆ. ಇತ್ತೀಚೆಗೆ ಭಾರತ ಸರ್ಕಾರವೇ ನೇಮಿಸಿದ ಪ್ರೊ|| ಅರ್ಜುನ್ ಸೇನ್ ಗುಪ್ತಾರವರ ನೇತೃತ್ವದ ಸಮಿತಿಯು ಆಘಾತಕಾರಿ ಅಂಕಿ-ಅಂಶವುಳ್ಳ ವರದಿಯನ್ನು ನೀಡಿದ್ದು, ಇದರ ಪ್ರಕಾರ ನಮ್ಮ ಜನಸಂಖ್ಯೆಯ ಶೇ. ೭೭ರಷ್ಟು ಜನರಿಗೆ ದಿನಕ್ಕೆ ರೂ. ೨೦/-ಕ್ಕಿಂತಲೂ ಕಡಿಮೆ ಮೊತ್ತವನ್ನು ವೆಚ್ಚ ಮಾಡುವ ಸಾಮರ್ಥ್ಯವನ್ನು ಮಾತ್ರ ಹೊಂದಿದ್ದಾರೆ ಎಂದು ತಿಳಿಸಿದೆ.

**ಒಟ್ಟು ಆಸ್ತಿ**

ಭಾರತ ದೇಶದ ಒಟ್ಟು ಆಸ್ತಿಯ ಪೈಕಿ ೧೭೭ ಶತಕೋಟಿ ಡಾಲರ್ (೮೫೦,೦೦೦ ಕೋಟಿ ರೂಪಾಯಿಗಳು) ಮೌಲ್ಯದ ಆಸ್ತಿಯನ್ನು ೪೦ ಜನ ಶ್ರೀಮಂತ ವ್ಯಕ್ತಿಗಳು ಹೊಂದಿದ್ದಾರೆ.

ಈ ೪೦ ಮಂದಿ ವ್ಯಕ್ತಿಗಳ ಪ್ರತಿ ವರ್ಷದ ಗಳಿಕೆ ೧೦೬ ಶತಕೋಟಿ ಡಾಲರ್ (೫೩೦,೦೦೦ ಕೋಟಿ ರೂಪಾಯಿಗಳು). ಇದರ ಅರ್ಥ ಒಂದು ವರ್ಷದಲ್ಲಿ ಅವರ ಆಸ್ತಿಯಲ್ಲಿ ೬೪ ಕೋಟಿ ಡಾಲರ್ (೩,೨೦,೦೦೦ ಕೋಟಿ ರೂಪಾಯಿಗಳು), ಅಂದರೆ ವಾರ್ಷಿಕ ಶೇ. ೬೦ರಷ್ಟು ಹೆಚ್ಚಳವಾಗುತ್ತಿದೆ. ಜಾಗತೀಕರಣದ ನಂತರ ಸಂಪತ್ತಿನ ಕೇಂದ್ರೀಕರಣ ವಾಗುತ್ತಿದೆ ಎಂಬುದು ಇದರಿಂದ ನಿಚ್ಚಳವಾಗುತ್ತದೆ. ಬಡ ಭಾರತದ ೫೩೩ ಶತಕೋಟ್ಯಾಧಿ ಪತಿಗಳ ಒಟ್ಟು ಆಸ್ತಿ ೧೧೨ ಶತಕೋಟಿ ಡಾಲರ್ (೫೬೦,೦೦೦ ಕೋಟಿ ರೂಪಾಯಿಗಳು).

**ವಿಶ್ವ ಕಾರ್ಮಿಕ ಸಂಘಟನೆಗಳ ಒಕ್ಕೂಟ (ಡಬ್ಲ್ಯೂ.ಎಫ್.ಟಿ.ಯು.)ದ ಪ್ರಸ್ತಾವನೆಗಳು**

ನವ ಉದಾರವಾದಿ ಜಾಗತೀಕರಣಕ್ಕೆ ಸಹಜ ಪರಿಹಾರವೆಂದರೆ, ಸಾಮಾಜಿಕ ಒಡೆತನ, ನಿಯಂತ್ರಣ ಹಾಗೂ ಯೋಜನಾವ್ಯವಸ್ಥೆ ಸಹಿತ ಸ್ಥಿರ ಸರ್ಕಾರದ ವ್ಯವಸ್ಥೆಯನ್ನು ಜಾರಿಗೆ ತರುವುದೇ ಆಗಿದೆ. ಈ ಬಗ್ಗೆ ಅನೇಕ ಪ್ರಸ್ತಾವನೆಗಳಲ್ಲಿ ಪ್ರಮುಖವಾದುವುಗಳ ಪೈಕಿ ಕೆಳಕಂಡವು ಸಹ ಸೇರಿವೆ :

೧. ಜಾಗತಿಕ ಆರ್ಥಿಕ ಬಿಕ್ಕಟ್ಟು ಬಂಡವಾಳಶಾಹಿ ವ್ಯವಸ್ಥೆಯಲ್ಲಿನ ಮೂಲಭೂತ ದೋಷಗಳನ್ನು ಬಹಿರಂಗಗೊಳಿಸಿದೆ. ಆದ್ದರಿಂದ ತಕ್ಷಣದ ಆದ್ಯತೆಯೆಂದರೆ - ಆರ್ಥಿಕ ನ್ಯಾಯ, ನ್ಯಾಯೋಚಿತ ಅಭಿವೃದ್ಧಿ, ಆರ್ಥಿಕ ನೀತಿ ನಿರೂಪಣೆಯಲ್ಲಿ ಜನತೆಯ ಪಾಲ್ಗೊಳ್ಳುವಿಕೆ, ಆಹಾರ ಹಾಗೂ ಶಕ್ತಿ ಕ್ಷೇತ್ರದ ಸಾರ್ವಭೌಮತೆ, ಅಗತ್ಯ ಸೇವೆ ಹಾಗೂ ಸಾರ್ವಜನಿಕ ಉಪಯುಕ್ತ ಸೇವೆಗಳಿಗೆ ಎಲ್ಲರಿಗೂ ಪ್ರವೇಶಾಧಿಕಾರ, ಮಾನವ ಹಕ್ಕುಗಳ ರಕ್ಷಣೆ ಹಾಗೂ ಉತ್ತೇಜನ, ಅದರಲ್ಲೂ ವಿಶೇಷವಾಗಿ ಆಹಾರ, ಗಾಳಿ, ನೀರು, ಕಾರ್ಮಿಕರ, ನಗರ ಹಾಗೂ ಗ್ರಾಮೀಣ ಪ್ರದೇಶದ ಸ್ಥಳೀಯ ಜನರ, ಮಹಿಳೆ ಮತ್ತು ಮಕ್ಕಳ ಹಕ್ಕುಗಳ ಮಾನ್ಯತೆ ಮತ್ತು ಒತ್ತಾಸೆ ಇತ್ಯಾದಿ ತತ್ವಾದರ್ಶಗಳನ್ನೊಳಗೊಂಡ ಹೊಸ ಆರ್ಥಿಕ ವ್ಯವಸ್ಥೆಯ ರಚನೆಗಾಗಿ ತೀವ್ರ ಪರಿವರ್ತನಾ ಕಾರ್ಯವೇ ಆಗಿದೆ.

೨. ಉತ್ಪಾದನಾ ಕ್ಷೇತ್ರವನ್ನು ಬಲಪಡಿಸಿ, ಶಕ್ತಿಯುತ ಆರ್ಥಿಕತೆಯನ್ನು ಸ್ಥಾಪಿಸುವ ಮೂಲಕ ಜನರಿಗೆ ಸುಖ ಜೀವನಯೋಗ್ಯ ಕೂಲಿಯನ್ನು ಖಾತರಿಪಡಿಸುವ ಮೂಲಕ ಕೊಳ್ಳುವ ಶಕ್ತಿಯನ್ನು ನೀಡುವ ಹೊಸ ಕೈಗಾರಿಕಾ ನೀತಿಯನ್ನು ಅಂಗೀಕರಿಸುವುದು.

೩. ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಮೂಲಕ ಕಾರ್ಮಿಕ ಮಾನಕಗಳಿಗೆ ಅನುಗುಣವಾಗಿ ಸಭ್ಯ ಕೆಲಸವನ್ನು ವ್ಯಾಖ್ಯಾನಿಸಿರುವಂತೆ (ಕೆಲಸದ ಸ್ವರೂಪ, ಭದ್ರತೆ ಹಾಗೂ ಪ್ರಾತಿನಿಧ್ಯ) ಕಾರ್ಮಿಕರ ಹಾಗೂ ವಲಸೆ ಕಾರ್ಮಿಕರ ಉದ್ಯೋಗವನ್ನು ಸಂರಕ್ಷಿಸುವುದು, ಕೆಲಸ ಪ್ರಕ್ರಿಯೆಯ ಉನ್ನತಿ, ಗುರಿ ಅಭಿವೃದ್ಧಿಗಳ ಸಂದರ್ಭದಲ್ಲಿ ಪರ್ಯಾಯ ಉದ್ಯೋಗಾವಕಾಶಗಳನ್ನು ಸೃಷ್ಟಿಸಿ ಅವಕಾಶ ಕಲ್ಪಿಸುವುದು; ಸಣ್ಣ, ಮಧ್ಯಮ ಮತ್ತು ಬೃಹತ್ ಉದ್ದಿಮೆಗಳಿಗೆ ಸರ್ಕಾರವು ನೆರವು ನೀಡುವ ಸಂದರ್ಭಗಳಲ್ಲಿ ಸೂಕ್ತ ಸಂಖ್ಯೆಯ ಕಾರ್ಮಿಕರಿಗೆ ಉದ್ಯೋಗ ಖಾತರಿ ನೀಡುವ ಷರತ್ತನ್ನು ಒಳಗೊಂಡ ಆದ್ಯತೆಗಳನ್ನು ಪ್ರಕಟಿಸುವುದು.

೪. ಬಿಕ್ಕಟ್ಟಿನ ಪರಿಣಾಮಗಳಿಗೆ ಪರಿಹಾರ ನೀಡುವ ದಿಶೆಯಲ್ಲಿ ಆಯವ್ಯಯದ ಆದ್ಯತೆಯನ್ನು ಮರುನಿಷ್ಕರ್ಷೆ ಮಾಡುವ ಕ್ರಮಗಳನ್ನು ತೆಗೆದುಕೊಂಡು, ಸಾಮಾಜಿಕ ಮೂಲ ರಚನೆಗೆ ಸಾರ್ವಜನಿಕ ಹೂಡಿಕೆಯನ್ನು ಹೆಚ್ಚಿಸುವುದು. ಈ ಬಿಕ್ಕಟ್ಟಿಗೆ ಕಾರಣವಾಗಿರುವ ಖಾಸಗೀಕರಣ, ನಿಯಂತ್ರಣಶೂನ್ಯ ಹಾಗೂ ಉದಾರೀಕರಣದಂತಹ ನೀತಿಗಳನ್ನು ಕೈಬಿಟ್ಟು ಪ್ರತಿಮುಖ ಚಲನೆಯ ನೀತಿಗಳನ್ನು ರೂಪಿಸುವುದು.

೫. ಸರ್ಕಾರವು ಮುಕ್ತ ವ್ಯಾಪಾರ ಒಪ್ಪಂದಗಳನ್ನು ಮರುಪರಿಶೀಲಿಸಿ ವಿದೇಶಿ ಹೂಡಿಕೆ, ಹಣಕಾಸಿನ ವ್ಯವಹಾರಗಳ ಬಂಡವಾಳ ಒಳಹರಿವಿನ ಮೇಲೆ ವಿವೇಕಯುಕ್ತ ಷರತ್ತುಗಳನ್ನು ವಿಧಿಸುವುದು.

೬. ಮಿಲಿಟರಿ ವೆಚ್ಚವನ್ನು ಗಣನೀಯವಾಗಿ ಕಡಿತಗೊಳಿಸಿ ಸಾಮಾಜಿಕ ಕ್ಷೇತ್ರದ ಹೂಡಿಕೆಯನ್ನು ಹೆಚ್ಚಿಸುವುದು; ಸಾರ್ವಜನಿಕ ನಿಧಿಯನ್ನು ಸಾಮಾನ್ಯ ಅವಶ್ಯಕ ಹಾಗೂ ಸಾರ್ವಜನಿಕ ಉಪಯುಕ್ತ ಸೇವೆಗೆ, ಖಾಸಗೀಕರಣ ನೀತಿಯನ್ನು ಜನಪರ ವಾಗಿರುವಂತೆ ಪ್ರತಿಮುಖ ದಿಕ್ಕಿಗೆ ಬದಲಾಯಿಸಲು ವಿನಿಯೋಗಿಸುವುದು.

೭. ಬಡವರ ಮೂಲ ಆದಾಯ ತೆರಿಗೆ ಮಿತಿಯನ್ನು ಏರಿಸಿ, ಅನುಭೋಗ ಆಹಾರ ವಸ್ತುಗಳ ಮೇಲೆ ತೆರಿಗೆ ಇಲ್ಲದ, ಶ್ರೀಮಂತರ ವಿಲಾಸಿ ವಸ್ತುಗಳ ಮೇಲೆ ಹೆಚ್ಚು ತೆರಿಗೆ ವಿಧಿಸುವ ಹೊಸ ರೀತಿಯ ಕಠಿಣ ಪ್ರಗತಿಗಾಮಿ ತೆರಿಗೆ ಪದ್ಧತಿಯನ್ನು ಜಾರಿಗೊಳಿಸುವುದು. ಊಹಾಪೋಹದ ಬಂಡವಾಳದ ಚಲನೆಯ ಮೇಲೆ ಟೋಬಿನ್ ಮಾದರಿಯ ತೆರಿಗೆ ವಿಧಿಸುವುದು, ತೆರಿಗೆ ನಿಲುಗಡೆ ಸ್ಥಾನಗಳನ್ನು ಕೆಡವಿಹಾಕುವ ನಿಯಂತ್ರಣ ಕ್ರಮಗಳನ್ನು ಕೈಗೊಳ್ಳುವುದು.

೮. ಉತ್ಪಾದನೆ ಹಾಗೂ ಸಾಮಾಜಿಕ ಉತ್ಪಾದನೆಗಳನ್ನು ಒಳಗೊಂಡ ನೈಜ ಆರ್ಥಿಕತೆಯನ್ನು ಹಿಂದೂಡಿ ಹಣಕಾಸು ಬಂಡವಾಳ ಹಾಗೂ ಹಣಕಾಸು ವ್ಯವಸ್ಥೆ ಮೇಲುಗೈ ಸಾಧಿಸದಂತೆ ಕ್ರಮವಹಿಸಿ ನ್ಯಾಯಸಮ್ಮತ ಅರ್ಥವ್ಯವಸ್ಥೆಯನ್ನು ಹಾಗೂ ಜನತೆಯ ಹಾಗೂ ರಾಷ್ಟ್ರದ ಸಾರ್ವಭೌಮತೆಯನ್ನು ಮತ್ತು ಸ್ವಯಂ ನಿರ್ಧಾರದ ಅಧಿಕಾರವನ್ನು ಖಾತರಿಪಡಿಸತಕ್ಕದ್ದು.

೯. ಅಭಿವೃದ್ಧಿಶೀಲ ರಾಷ್ಟ್ರಗಳ ಹೊರಲಾಗದ ಅಕ್ರಮ ಸಾಲಗಳನ್ನು ಬೇಷರತ್ತಾಗಿ ರದ್ದುಪಡಿಸಿ 'ನೆರವಿನ ಆಳ್ವಿಕೆ'ಯನ್ನು ಕೊನೆಗೊಳಿಸುವ ರಣತಂತ್ರವನ್ನು ರೂಪಿಸತಕ್ಕದ್ದು. ಅನುಚಿತ ಗಳಿಕೆಯ ಸಂಪತ್ತನ್ನು ಪುನರ್ ಸ್ವಾಧೀನಗೊಳಿಸುವುದು ಅಂತರರಾಷ್ಟ್ರೀಯ ಕಾನೂನಿನ ತತ್ವವಾಗತಕ್ಕದ್ದು.

೧೦. ವಿಶ್ವ ಬ್ಯಾಂಕ್, ಐ.ಎಂ.ಎಫ್. ಹಾಗೂ ವಿಶ್ವ ವ್ಯಾಪಾರ ಸಂಘಟನೆಗಳನ್ನು ಕ್ರಮೇಣ ತೊಡೆದುಹಾಕಿ ಹೊಸದೊಂದು ಅಂತರರಾಷ್ಟ್ರೀಯ ಹಣಕಾಸು ಸಂರಚನೆಯನ್ನು ನಿರ್ಮಿಸತಕ್ಕದ್ದು; ಅಂತರರಾಷ್ಟ್ರೀಯ ಹೂಡಿಕೆ ವ್ಯಾಜ್ಯಗಳ ಇತ್ಯರ್ಥ ಕೇಂದ್ರದಿಂದ ನಿರ್ಗಮಿಸತಕ್ಕದ್ದು. ಜಿ-೭ ಅಥವಾ ಜಿ-೨೦ ಅಲ್ಲದ ಸುಧಾರಿತ, ಪ್ರಜಾತಂತ್ರಾತ್ಮಕ ವಿಶ್ವಸಂಸ್ಥೆ ಅಂತರರಾಷ್ಟ್ರೀಯ ಹಣಕಾಸು ವ್ಯವಸ್ಥೆಯ ಸುಧಾರಣೆಯ ಕೇಂದ್ರಬಿಂದುವಾಗಿರತಕ್ಕದ್ದು. ನಿರ್ಧಾರ ಕೈಗೊಳ್ಳುವಿಕೆಯು ೧೯೨ ರಾಷ್ಟ್ರಗಳ ಸಮಾನತೆ ಆಧಾರಿತ ಮತದಾನದ ಮೂಲಕ ನಡೆಯತಕ್ಕದ್ದು.

೧೧. ಮರುಪಾವತಿಯಾಗದ ಸಾಲಗಳ ರಾಷ್ಟ್ರೀಕರಣವಷ್ಟೆ ಅಲ್ಲ, ಬ್ಯಾಂಕುಗಳ ಪೂರ್ಣ ಪ್ರಮಾಣದ ಸಾಮಾಜೀಕರಣವನ್ನು ಜಾರಿಗೊಳಿಸಿ, ಬ್ಯಾಂಕ್/ಕಂಪನಿಗಳ ಆಸ್ತಿ ಅಥವಾ ಮುಖ್ಯಾಧಿಕಾರಿಗಳ ಆಸ್ತಿಯಿಂದ ರಕ್ಷಣಾ ನೆರವಿನ ವೆಚ್ಚದ ಮೊತ್ತವನ್ನು ವಾಪಸ್ ಪಡೆಯ ತಕ್ಕದ್ದು. ಬೃಹತ್ ಬ್ಯಾಂಕ್‌ಗಳನ್ನು ನ್ಯಾಸ-ವಿರೋಧಿ, ಏಕಸ್ವಾಮ್ಯ ವಿರೋಧಿ ಕಾನೂನು ಗಳಿಗೆ ಒಳಪಡಿಸತಕ್ಕದ್ದು. ಹೊರದೇಶಗಳ ಬ್ಯಾಂಕ್ ವ್ಯವಸ್ಥೆಯನ್ನು ಮುಚ್ಚತಕ್ಕದ್ದು.

೧೨. ವ್ಯಾಪಾರದ ಗುರಿಯು ಸಾಮಾಜಿಕ ಉಪಯುಕ್ತತೆಯೇ ವಿನಾ ಆರ್ಥಿಕ ಲಾಭಗಳಿಕೆ ಅಲ್ಲ ಎಂಬ ನೀತಿ ಜಾರಿಗೆ ಬರತಕ್ಕದ್ದು. ನಗರ ಹಾಗೂ ಗ್ರಾಮೀಣ ಪ್ರದೇಶದಲ್ಲಿ ಬೃಹತ್ ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ಸಾಮರ್ಥ್ಯವುಳ್ಳ ಸಾಂಪ್ರದಾಯಿಕ, ಗೃಹ ಆಧಾರಿತ, ಸಣ್ಣ ಮತ್ತು ಮಧ್ಯಮ ಕೈಗಾರಿಕೆಗಳನ್ನು ನಾಶಪಡಿಸದಂತೆ ವ್ಯಾಪಾರ ನೀತಿಯನ್ನು ರೂಪಿಸತಕ್ಕದ್ದು.

೧೩. ೧) ಬಂಡವಾಳ ಸಾಂದ್ರ ಕೈಗಾರಿಕಾ ರಚನೆ; ೨) ತೆಳು ಮಾದರಿ ಉತ್ಪಾದನೆ; ೩) ಸುಲಭವಾಗಿ ಹೊರನಡೆವ ನೀತಿ ಇತ್ಯಾದಿಗಳನ್ನೊಳಗೊಂಡ ಬಂಡವಾಳಶಾಹಿ ಪರಿಪಾಠ ಗಳನ್ನು ಕೈಬಿಟ್ಟು ಅಂತರರಾಷ್ಟ್ರೀಯ ಕಾರ್ಮಿಕ ಸಂಘಟನೆಯ ಸೂಕ್ತ ಉದ್ಯೋಗ ನೀಡುವು ದನ್ನು ಜಾರಿಗೊಳಿಸುವ; ಉದ್ಯೋಗಗಳನ್ನು ಸೃಷ್ಟಿಸುವ, ಸುರಕ್ಷತೆ, ಆರೋಗ್ಯ ಮತ್ತು ಜೀವನ ಮಟ್ಟವನ್ನು ಉತ್ತಮಪಡಿಸುವ ಆದ್ಯತೆಯುಳ್ಳ, ಕೈಗಾರಿಕಾ ನೀತಿಯನ್ನು ರೂಪಿಸುವುದು.

೧೪. ಆಹಾರ ಸ್ವಯಂ ಪರಿಪೂರ್ಣತೆ; ಬೃಹತ್ ಭೂ-ಹಿಡುವಳಿ ಪದ್ಧತಿಯನ್ನು, ಕೃಷಿ ಕ್ಷೇತ್ರದ ಕಾರ್ಪೊರೇಟೀಕರಣವನ್ನು ರದ್ದುಪಡಿಸುವುದು; ಸಣ್ಣ ರೈತರ ಹಿತರಕ್ಷಣೆ ಮಾಡುವುದು; ಇವು ಕೃಷಿ ನೀತಿಯ ಗುರಿಯಾಗಿರತಕ್ಕದ್ದು. ವಿಶ್ವ ವ್ಯಾಪಾರ ಸಂಘಟನೆಯನ್ನು ಕೃಷಿ ಕ್ಷೇತ್ರದಿಂದ ಹೊರಗಿಡತಕ್ಕದ್ದು.

**ನಾವು ಬಯಸುವ ಜಾಗತೀಕರಣ**

ಸದ್ಯದ ಅವಶ್ಯಕತೆ ವಿಶ್ವ ವ್ಯಾಪಾರ ಸಂಘಟನೆ ಬಯಸುವ ಜಾಗತೀಕರಣವಲ್ಲ, ಬದಲು ಅದರ ದುಷ್ಪರಿಣಾಮಗಳ ವಿರುದ್ಧ ಹೋರಾಟಗಳ ಜಾಗತೀಕರಣವಾಗಿದೆ. ಸಮಾಜದ ಎಲ್ಲ ವರ್ಗಗಳನ್ನೊಳಗೊಂಡ ವಿಶಾಲ ತಳಹದಿಯ ಪ್ರಜಾತಾಂತ್ರಿಕ ಹೋರಾಟವು ಪ್ರಸ್ತುತ ಚಾಲ್ತಿಯಲ್ಲಿರುವ ವಿಶ್ವ ವ್ಯಾಪಾರ ಸಂಘಟನೆಯನ್ನು ಧಿಕ್ಕರಿಸಿ ರಾಷ್ಟ್ರೀಯ ಸಾರ್ವಭೌಮತೆಯನ್ನು, ಬಡತನ ನಿವಾರಣೆ, ನಿರಂತರ ವಿಶ್ವ ಶಾಂತಿಯನ್ನು ದೃಢವಾಗಿ ಪ್ರತಿಪಾದಿಸಬೇಕು. ಸಾಮಾಜಿಕ ಪ್ರತ್ಯೇಕತೆ ಇಲ್ಲದ, ಪಾರಂಪರಿಕ ಹಾಗೂ ರಾಷ್ಟ್ರೀಯ ಸಂಪನ್ಮೂಲಗಳನ್ನು ಗೌರವಿಸುವ, ನಮ್ಮ ಜನತೆಯ ಅಸ್ಮಿತೆ, ಚರಿತ್ರೆ ಹಾಗೂ ಸಂಸ್ಕೃತಿಯನ್ನು ಗೌರವಿಸುವ ಜಾಗತೀಕರಣ ನಮಗೆ ಬೇಕು.

ಸದ್ಯದ ಪರಿಸ್ಥಿತಿಯಲ್ಲಿರುವಂತೆ ದುಡಿಯುವ ಜನತೆಯ ದುಡಿಮೆಯಿಂದುಂಟಾದ ಸಂಪತ್ತನ್ನು ತಮ್ಮದಾಗಿಸಿಕೊಳ್ಳುವ ಗುಂಪಿನ ಪರವಾಗಿರುವ ಜಾಗತೀಕರಣದ ಬದಲಿಗೆ ಭೂಮಿ ಹಾಗೂ ದುಡಿಯುವ ಜನತೆ ಸೃಷ್ಟಿಸುವ ಸಂಪತ್ತಿನ ಫಲಗಳನ್ನು ಇಡೀ ಜಗತ್ತಿನ ಎಲ್ಲ ಜನರಿಗೆ ಸಮಾನವಾಗಿ ಹಾಗೂ ನ್ಯಾಯಸಮ್ಮತವಾಗಿ ಹಂಚಿಕೆ ಮಾಡಬಲ್ಲ ಜಾಗತೀಕರಣ ಇಂದು ನಮಗೆ ಬೇಕಾಗಿದೆ.

ಮೂಲ : **ಎಚ್. ಮಹಾದೇವನ್**, ಕಾರ್ಯಾಧ್ಯಕ್ಷರು, ಎ.ಐ.ಟಿ.ಯು.ಸಿ., ನವದೆಹಲಿ
ಕನ್ನಡಕ್ಕೆ : **ವಿಜಯ ಭಾಸ್ಕರ್**
ನಂ. ೧೦೪೦, ೧ನೇ ಫೇಸ್, ೧೩ನೇ ಅಡ್ಡರಸ್ತೆ, ಜೆ. ಪಿ. ನಗರ, ಬೆಂಗಳೂರು-೭೮

# ಹೋರಾಟಕ್ಕೆ ಆತ್ಮವಿಶ್ವಾಸ ಮುಖ್ಯ

## ಕಾರ್ಮಿಕ ನಾಯಕ ಎಂ. ಸಿ. ನರಸಿಂಹನ್ ಅವರೊಂದಿಗೆ ಸಂದರ್ಶನ



*ಸಂದರ್ಶಕರಾದ ಸಿ. ಆರ್. ಕೃಷ್ಣರಾವ್, ಡಿ. ಎ. ವಿಜಯ ಭಾಸ್ಕರ್, ಎಸ್. ಸುರೇಂದ್ರ ಹಾಗೂ ಕಾರ್ಮಿಕ ನಾಯಕ ಎಂ. ಸಿ. ನರಸಿಂಹನ್*

ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್‌ನ ಕರ್ನಾಟಕ ರಾಜ್ಯ ಸಮಿತಿಯ ಅಧ್ಯಕ್ಷ, ಹಿರಿಯ ಸಂಗಾತಿ ಎಂ. ಸಿ. ನರಸಿಂಹನ್ ಅವರು ನಮ್ಮ ರಾಜ್ಯದ ಕಾರ್ಮಿಕ ಹೋರಾಟಗಳಲ್ಲಿ ಸುಮಾರು ೬ ದಶಕಗಳಿಂದಲೂ ತೊಡಗಿಕೊಂಡು ಇಂದಿಗೂ ಕ್ರಿಯಾಶೀಲರಾಗಿರುವ ಧೀಮಂತರು. ೧೯೪೦ರ ದಶಕದಿಂದಲೂ ಕಮ್ಯುನಿಸ್ಟ್ ಚಳುವಳಿಯ ಮುಂಚೂಣಿಯಲ್ಲಿದ್ದು, ಭಾರತ ಕಮ್ಯುನಿಸ್ಟ್ ಪಕ್ಷದ ಬೆಳವಣಿಗೆಗೆ ಅವರು ನೀಡಿರುವ ಕೊಡುಗೆ ಅವಿಸ್ಮರಣೀಯ. ಕೆ.ಜಿ.ಎಫ್. ಕ್ಷೇತ್ರದಿಂದ ಎರಡು ಬಾರಿ ವಿಧಾನಸಭೆಗೆ ಆಯ್ಕೆಯಾಗಿ, ಒಂದು ಬಾರಿ ವಿಧಾನ ಪರಿಷತ್ತಿನ ಸದಸ್ಯರಾಗಿ ಕರ್ನಾಟಕ ಜನತೆಯ ಶ್ರಮಿಕ ವರ್ಗದವರ ಏಳ್ಗೆಗಾಗಿ ಅವಿರತವಾಗಿ ದುಡಿಯುತ್ತಲೇ ಬಂದಿರುವ ಸಂಗಾತಿ ಎಂ.ಸಿ.ಎನ್. ಅವರು ತಮ್ಮ ೯೪ರ ಹರೆಯದಲ್ಲೂ ವಕೀಲ ವೃತ್ತಿಯಲ್ಲಿ ತೊಡಗಿಕೊಂಡು ಕಾರ್ಮಿಕರ ಸಮಸ್ಯೆಗಳಿಗೆ ಸ್ಪಂದಿಸುತ್ತಿರುವ ಅಪೂರ್ವ ಹೋರಾಟಗಾರರು. ರಾಷ್ಟ್ರೀಯ, ಅಂತರರಾಷ್ಟ್ರೀಯ ಮಟ್ಟದಲ್ಲಿ ಜರುಗುತ್ತಿರುವ ರಾಜಕೀಯ, ಸಾಮಾಜಿಕ ಮತ್ತು ಆರ್ಥಿಕ ಆಗುಹೋಗುಗಳ ಕುರಿತು ಅವರಿಗಿರುವ ತಿಳುವಳಿಕೆ ಅಪಾರ.

ಶ್ರೀಯುತರಾದ ಸಿ. ಆರ್. ಕೃಷ್ಣರಾವ್, ಡಿ. ಎ. ವಿಜಯಭಾಸ್ಕರ್ ಮತ್ತು ಎಸ್. ಸುರೇಂದ್ರ ಅವರು 'ಹೊಸತು' ಪರವಾಗಿ ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ ಯುಗದಲ್ಲಿ ನಮ್ಮ ರಾಷ್ಟ್ರದಲ್ಲಿ ಜರುಗುತ್ತಿರುವ ವಿವಿಧ ಆಗುಹೋಗುಗಳ ಕುರಿತು ಸಂಗಾತಿ ಎಂ.ಸಿ.ಎನ್. ಅವರೊಡನೆ ನಡೆಸಿದ ಸಂದರ್ಶನದ ಸಾರಾಂಶ ಇಲ್ಲಿದೆ.

**ಹೊಸತು :** ಕಾರ್ಮಿಕ ಚಳುವಳಿ ಹಿಂದೆ ಇದ್ದಂತೆ ತನ್ನ ಪ್ರಖರತೆ ಪ್ರಭಾವವನ್ನು ಈಗ ಕಳೆದುಕೊಂಡಿದೆ. ಇದಕ್ಕೆ ಕಾರಣ ಕಾರ್ಮಿಕ ಚಳುವಳಿಯಲ್ಲಿ ಒಡಕುಂಟಾಗಿರುವುದು ಎನ್ನುವುದು ಸಾಮಾನ್ಯ ನಂಬಿಕೆ. ಇದಕ್ಕೆ ನಿಮ್ಮ ಅಭಿಪ್ರಾಯವೇನು ?

**ಎಂ.ಸಿ.ಎನ್. :** ಚಾರಿತ್ರಿಕ ಬೆಳವಣಿಗೆ ಎನ್ನಿ ಅಥವಾ ಪ್ರಮುಖ ಬೆಳವಣಿಗೆ ಎನ್ನಿ, ಈಗ ಕಾರ್ಮಿಕ ಸಂಘಟನೆಗಳ ಏಕತೆ ಉಂಟಾಗಿದೆ. ೨೦೦೭-೦೮ಕ್ಕೆ ಮುಂಚೆ ಎಡ ಚಿಂತನೆಯ ಕಾರ್ಮಿಕ ಸಂಘಟನೆಗಳನ್ನು ಬಿಟ್ಟು ಏಕತೆ ಬರುತ್ತಿರಲಿಲ್ಲ. ಈಗ ಸಮಾನ ಸದಾಶಯಕ್ಕೆ ಎಲ್ಲ ಸಂಘಟನೆಗಳು ಒಂದಾಗುತ್ತಿವೆ.

**ಹೊಸತು :** ಕಾರ್ಮಿಕ ಸಂಘಟನೆಗಳು ತಮ್ಮ ಸಂಕುಚಿತ ಆರ್ಥಿಕ ಬೇಡಿಕೆಗಳನ್ನು ಬಿಟ್ಟು ಮುಂದೆ ಬೆಳೆದಿಲ್ಲ ಎನ್ನುವ ಟೀಕೆ ಇದೆ. ಅದಕ್ಕೆ ತಾವು ಏನು ಹೇಳುವಿರಿ ?

**ಎಂ.ಸಿ.ಎನ್. :** ಇನ್ನೊಂದು ಮಹತ್ವದ ಬೆಳವಣಿಗೆ ಎಂದರೆ ಸರ್ಕಾರದ ಆರ್ಥಿಕ ನೀತಿಗಳು ದುಡಿಯುವ ಜನರ ಪರವಾಗಿಲ್ಲ ಎಂಬ ತೀರ್ಮಾನಕ್ಕೆ ಕಾರ್ಮಿಕ ಸಂಘಟನೆಗಳು ಬಂದಿವೆ. ಸೆಪ್ಟೆಂಬರ್ ೪, ೨೦೧೨ನಲ್ಲಿ ಎಐಟಿಯುಸಿ, ಐಎನ್‌ಟಿಯುಸಿ, ಎಚ್‌ಎಮ್‌ಎಸ್, ಬಿಎಮ್‌ಎಸ್, ಸಿಐಟಿಯು, ಎಐಸಿಸಿಟಿಯು ಸಂಘಟನೆಗಳು ಒಟ್ಟಾಗಿ ೨೦೧೩ರ ಫೆಬ್ರವರಿ ೨೦ ಮತ್ತು ೨೧ರಂದು ಸರ್ಕಾರದ ನೀತಿಗಳ ವಿರುದ್ಧ ಸಾರ್ವತ್ರಿಕ ಮುಷ್ಕರಕ್ಕೆ ಕರೆ ನೀಡಿವೆ. ಅವುಗಳ ಬೇಡಿಕೆ, ಬೆಲೆ ಏರಿಕೆ, ಗುತ್ತಿಗೆ ಕೆಲಸ ಪದ್ಧತಿಯ ರದ್ದತಿ, ಸಾರ್ವಜನಿಕ ಕ್ಷೇತ್ರ/ಬ್ಯಾಂಕ್ ಮತ್ತು ಇನ್ಸೂರೆನ್ಸ್ ಕ್ಷೇತ್ರಗಳನ್ನು

---

ಸಂದರ್ಶನ ಲೇಖನವನ್ನು ಸಿದ್ಧಪಡಿಸಿದವರು ಡಿ. ಎ. ವಿಜಯಭಾಸ್ಕರ್

ದುರ್ಬಲಗೊಳಿಸುವ ನೀತಿಗಳ ವಿರುದ್ಧ, ಕಾರ್ಮಿಕ ಕಾನೂನುಗಳನ್ನು ಜಾರಿಗೊಳಿಸುವಲ್ಲಿ ಸರ್ಕಾರದ ವೈಫಲ್ಯ, ಕಾರ್ಮಿಕ ಸಂಘಟನೆಗಳ ನೋಂದಣಿ ಬಗ್ಗೆ, ಕನಿಷ್ಠ ಕೂಲಿ ರೂ. ೧೦,೦೦೦/- ಇರುವಂತೆ ನಿಗದಿಪಡಿಸುವುದು, ಇತ್ಯಾದಿ ಬೇಡಿಕೆಗಳು ಆರ್ಥಿಕ ಬೇಡಿಕೆಗಳೇ ಆಗಿದ್ದರೂ ರಾಜಕೀಯ ಸ್ವರೂಪದ ಬೇಡಿಕೆಗಳು.



**ಹೊಸತು :** ಕಾಂಟ್ರಾಕ್ಟ್ ಪದ್ಧತಿ ಈ ಪ್ರಮಾಣದಲ್ಲಿ ಬೆಳೆಯಲು ಕಾರ್ಮಿಕ ಸಂಘಟನೆಗಳೇ ಕಾರಣವಲ್ಲವೇ ?

**ಎಂ.ಸಿ.ಎನ್. :** ಕಾಂಟ್ರಾಕ್ಟ್ ಕಾಯಿದೆಯಲ್ಲಿ; ನಿರಂತರ ಸ್ವರೂಪದ ಕೆಲಸದಲ್ಲಿ ಗುತ್ತಿಗೆ ಪದ್ಧತಿ ಇರಬಾರದು ಎಂಬ ನಿಯಮವಿದ್ದರೂ ಮಾಲೀಕರು ಅದನ್ನು ಜಾರಿಗೊಳಿಸುತ್ತಿಲ್ಲ. ಖಾಯಂ ಕಾರ್ಮಿಕರು ಪಡೆಯುವಷ್ಟೇ ವೇತನವನ್ನು ಗುತ್ತಿಗೆ ಕಾರ್ಮಿಕರಿಗೂ ಕೊಡಬೇಕೆಂಬ ನಿಯಮವಿದ್ದರೂ ಅದು ಜಾರಿಯಾಗುತ್ತಿಲ್ಲ. ಈಗೀಗ ಕಾಂಟ್ರಾಕ್ಟ್ ಕಾರ್ಮಿಕರ ಪರವಾಗಿ ಕಾರ್ಮಿಕ ಸಂಘಟನೆಗಳು ಹೋರಾಡುತ್ತಿವೆ. ಇತ್ತೀಚೆಗೆ ಮಾರುತಿ ಸುಜುಕಿ ಘಟಕ (ಮಾಣೆಸರ್)ದಲ್ಲಿ ಕಾರ್ಮಿಕರು ಮುಷ್ಕರ ಹೂಡಿದರು. ಅಲ್ಲಿನ ಪ್ರಮುಖ ಪ್ರಶ್ನೆ ಬೃಹತ್ ಸಂಖ್ಯೆಯಲ್ಲಿರುವ ಗುತ್ತಿಗೆ ಕಾರ್ಮಿಕರು, ಆ ವಿಷಯದಲ್ಲಿಯೂ ಎಲ್ಲ ಕೇಂದ್ರ ಕಾರ್ಮಿಕ ಸಂಘಟನೆಗಳು ಒಂದಾಗಿ ಹೋರಾಡುತ್ತಿವೆ.

**ಹೊಸತು :** ಕಾರ್ಮಿಕ ಸಂಘಟನೆಗಳಲ್ಲಿ ಮೂಡುತ್ತಿರುವ ಏಕತೆ ಎಷ್ಟು ಕಾಲ ಇರಬಹುದು ?

**ಎಂ.ಸಿ.ಎನ್. :** ಕಾರ್ಮಿಕ ಸಂಘಟನೆಗಳಲ್ಲಿ ಮೂಡುತ್ತಿರುವ ಒಗ್ಗಟ್ಟು ನಿಜಕ್ಕೂ ಸ್ಫೂರ್ತಿದಾಯಕ ಹಾಗೂ ಆಶಾದಾಯಕ. ಸಂದರ್ಭ ಈ ಏಕತೆಯನ್ನು ಮುಂದುವರಿಸುತ್ತದೆ.

**ಹೊಸತು :** ಕಾರ್ಮಿಕ ಕಾನೂನುಗಳ ಅನುಷ್ಠಾನ ಎಷ್ಟು ಪರಿಣಾಮಕಾರಿಯಾಗಿವೆ ?

**ಎಂ.ಸಿ.ಎನ್. :** ಹಿಂದೆಲ್ಲಾ ಯೂನಿಯನ್‌ಗಳು ಈ ಬಗ್ಗೆ ಹೆಚ್ಚಿನ ಮುತುವರ್ಜಿ ವಹಿಸುತ್ತಿದ್ದವು. ಈಗ ಅದು ಕಡಿಮೆಯಾಗಿದೆ. ಅನೇಕ ಕಡೆ ಕಾಂಟ್ರಾಕ್ಟ್ ಲೇಬರ್ ಜಾರಿಯಾದಾಗಿನಿಂದ ಖಾಯಂ ಕಾರ್ಮಿಕರಿಗೆ ಹೆಚ್ಚಿನ ವೇತನವಿರುವ ಕಾರಣ ಕಾಂಟ್ರಾಕ್ಟ್ ಕಾರ್ಮಿಕರ ಬಗ್ಗೆ ಕಾಳಜಿ ಅಷ್ಟಾಗಿ ವಹಿಸುತ್ತಿರಲಿಲ್ಲ. ಹಾಗಾಗಿ ಕಾಂಟ್ರಾಕ್ಟ್ ಪದ್ಧತಿ ಬೆಳೆಯಿತು. ಈಗ ಪರಿಸ್ಥಿತಿ ಬದಲಾಗಿದೆ.

ಕಾರ್ಮಿಕರ ಬಗ್ಗೆ ಬಂಡವಾಳಶಾಹಿ ಪಕ್ಷಗಳು ಅನುಸರಿಸುತ್ತಿರುವ ನೀತಿಗಳ ಕಾರಣ ಆ ಸಮಸ್ಯೆಗಳು ಸದ್ಯಕ್ಕೆ ಬಗೆಹರಿಯುವುದಿಲ್ಲ. ಹಿಂದೆಲ್ಲಾ ನ್ಯಾಯಾಲಯಗಳು ಕಾರ್ಮಿಕರ ಪರವಾಗಿ ಸಹಾನುಭೂತಿ ಹೊಂದಿದ್ದವು. ಈಗ ಜಾಗತೀಕರಣದ ಸಂದರ್ಭದಲ್ಲಿ ಅವುಗಳ ದೃಷ್ಟಿಕೋನ ಬದಲಾಗಿದೆ.

ಕಾರ್ಮಿಕ ಸಂಘಟನೆಗಳ ನೋಂದಣಿ ೧೯೨೬ರಲ್ಲಿ ಪ್ರಾರಂಭವಾಯಿತು – ಆದರೆ ಕಾರ್ಮಿಕ ಸಂಘಟನೆಗಳ ಮಾನ್ಯತೆ ವಿಷಯ ತೀರ್ಮಾನಿಸಲು ಮಹಾರಾಷ್ಟ್ರ ರಾಜ್ಯ ಬಿಟ್ಟರೆ ಬೇರೆಲ್ಲೂ ಕಾನೂನಿಲ್ಲ. ೧೯೫೪ರಲ್ಲಿ ಒಂದು ಕಾನೂನು ಮಾಡಲಾಯಿತು. ಅದು ಜಂಟಿ ಪಟ್ಟಿಯಲ್ಲಿರುವುದರಿಂದ ಅದನ್ನು ರಾಷ್ಟ್ರಾಧ್ಯಕ್ಷರ ಅಂಕಿತ ಪಡೆಯಲು ಕಳುಹಿಸಲಾಯಿತು. ಅದು ಇನ್ನೂ ನನೆಗುದಿಗೆ ಬಿದ್ದಿದೆ. ಒಂದು ಕೈಗಾರಿಕಾ ದೇಶವಾಗಿ ಸಾಮೂಹಿಕ ಚೌಕಾಶಿಯ ಹಕ್ಕುಗಳನ್ನು ಮಾನ್ಯಮಾಡುವ ಕಾನೂನು ಇಲ್ಲ.

ಸದ್ಯದ ಆರ್ಥಿಕ ನೀತಿಗಳು ಬದಲಾಗಬೇಕಾಗಿವೆ. ಸರ್ಕಾರ ನ್ಯಾಯಸಮ್ಮತ ಜೀವನಮಟ್ಟದ ಖಾತರಿಕೊಡಬೇಕು. ಆದರೆ ಸರ್ಕಾರ ಬಂಡವಾಳಶಾಹಿಗಳ ಪರವಾಗಿರುವುದರಿಂದ ಈ ಆಶಯವನ್ನು ಸಾದರಪಡಿಸಲು ಸರ್ಕಾರದ ಆರ್ಥಿಕ ನೀತಿಗಳು ಬದಲಾಗಬೇಕಾಗಿದೆ. ಈ ಬಗ್ಗೆ ಕಾರ್ಮಿಕ ಸಂಘಟನೆಗಳ ಕೇಂದ್ರ ನಾಯಕತ್ವ ಸರಿಯಾಗಿ ತೀರ್ಮಾನಿಸಿ ವಿಶಾಲ ವ್ಯಾಪ್ತಿಯ ಹೋರಾಟ/ಚಳುವಳಿಯನ್ನು ರೂಪಿಸುತ್ತಿದೆ.

ಈ ಹೋರಾಟ, ನೀತಿಗಳನ್ನು ಬದಲಾಯಿಸಲು ಸಫಲವಾಗದಿದ್ದರೆ ಕನಿಷ್ಠ ಪಕ್ಷ ಆಳುವ ವರ್ಗದ ರಾಜಕೀಯ ರಚನೆಯನ್ನು ಬದಲಾಯಿಸಿ ಸಮಾಜವಾದಿ ದಿಶೆಯಲ್ಲಿ ಬದಲಾವಣೆ ತರಬೇಕಿದೆ.

**ಹೊಸತು :** ಪೆನ್ಷನ್/ಬ್ಯಾಂಕಿಂಗ್ ಸೆಕ್ಟರ್‌ನಲ್ಲಿ ಎಫ್‌ಡಿಐ ಅವಕಾಶ ಕೊಡುತ್ತಿರುವುದು ಸರಿಯೇ ?

**ಎಂ.ಸಿ.ಎನ್. :** ರಿಟೈಲ್‌ನಲ್ಲಿ ಅಮೇರಿಕದ ಪ್ರವೇಶ ಖಂಡನೀಯ. ವಾಲ್ ಮಾರ್ಟ್‌ನಂಥ ಸಂಸ್ಥೆಗಳು ಬರುವುದರಿಂದ ಏನೂ ಪ್ರಯೋಜನ ಆಗದು. ಬೆಲೆ ಏರಿಕೆ ವಿಚಾರದಲ್ಲಿ ಸರ್ಕಾರದ ದಿವಾಳಿತನದ ಫಲವಾಗಿ ಎಫ್‌ಡಿಐ ತರಲಾಗುತ್ತಿದೆ. ಆದರೆ ರೈತರಿಗೆ ಅನುಕೂಲ ಮಾಡಿಕೊಡುತ್ತೇವೆಂದು ಹೇಳಿದ್ದಾರೆ. ಅದು ದೀರ್ಘಕಾಲದಲ್ಲಿ ದೇಶದ ಆರ್ಥಿಕತೆಗೆ ಘಾಸಿಯುಂಟು ಮಾಡಲಿದೆ. ವ್ಯಾಪಾರಿ ವಲಯದ, ಸಾಂಪ್ರದಾಯಿಕವಾಗಿ ಕಮ್ಯುನಿಸ್ಟ್ ಬೆಂಬಲಿಗರಲ್ಲದವರೂ ಸಹ ಇತ್ತೀಚೆಗೆ ದೆಹಲಿಯಲ್ಲಿ ನಡೆದ ಪ್ರತಿಭಟನೆಯಲ್ಲಿ ಭಾಗವಹಿಸಿದ್ದಾರೆ. ಎಲ್ಲಾ ರಾಜಕೀಯ ಪಕ್ಷಗಳು ಈ ಬಗ್ಗೆ ಜನರಿಗೆ ತಿಳುವಳಿಕೆಕೊಡಬೇಕು. ಈ ಎಲ್ಲಾ ಬೆಳವಣಿಗೆಗಳ ಬಗ್ಗೆ ಬಲ ಪಂಥೀಯ ಪತ್ರಿಕೆಗಳೂ ಸಹ ಟೀಕಿಸಲು ಪ್ರಾರಂಭಿಸಿವೆ. ಎಡಪಂಥೀಯರಿಂದ ಕಟುವಾಗಿ ಟೀಕಿಸಲ್ಪಟ್ಟಿವೆ.

ನಮ್ಮ ದೇಶದ ಬಂಡವಾಳಗಾರರಾದ ಟಾಟಾ, ಬಿರ್ಲಾ, ಅಂಬಾನಿಗಳು ಹೊರದೇಶದಲ್ಲಿ ಬಂಡವಾಳ ಹೂಡುತ್ತಿದ್ದಾರೆ.

**ಹೊಸತು :** ಸದ್ಯದ ಬಂಡವಾಳ ಹಾಗೂ ಕಾರ್ಮಿಕ ವರ್ಗದ ಗುಣಲಕ್ಷಣಗಳನ್ನು ಹೇಗೆ ವಿಶ್ಲೇಷಿಸುತ್ತೀರಿ ?

**ಎಂ.ಸಿ.ಎನ್. :** ಬಂಡವಾಳದ ಸ್ವರೂಪ ಮಾರ್ಕ್ಸ್ ಕಾಲದ ರೀತಿಯಲ್ಲಿಲ್ಲ, ಅದು ಬದಲಾಗಿದೆ. ಬಿಡಿ ಭಾಗಗಳ ಉತ್ಪಾದನೆಗಳು ಅನೇಕ ದೇಶಗಳಲ್ಲಿ ನಡೆದು ಅದರ ಜೋಡಣೆ ಕೊನೆಯಲ್ಲಿ ಇನ್ನೊಂದು ದೇಶದಲ್ಲಿ ನಡೆಯುತ್ತಿದೆ. ಆದ್ದರಿಂದ ಈ ರೀತಿಯ ಬೆಳವಣಿಗೆಗಳನ್ನು ಕಾಣುತ್ತೇವೆ.

ಐ. ಟಿ. ಸೆಕ್ಟರ್‌ನಲ್ಲಿ ನಮ್ಮ ಪ್ರವೇಶ ಇನ್ನೂ ಆಗಿಲ್ಲ. ಐ.ಟಿ.ಯಲ್ಲಿ ವೇತನ ವ್ಯತ್ಯಾಸ ಇನ್ನೂ ಬಹಳ ಇದೆ. ಜೀವನ ಮಟ್ಟ ಬಹಳ ಉನ್ನತವಾಗಿದೆ. ಆದರೆ ಕೆಲಸದ ವೇಳೆ ಮಾತ್ರ ಬಹಳ ಹೆಚ್ಚು – ೧೦-೧೨ ಗಂಟೆ ಕೆಲಸ. ಅದು ಉನ್ನತ ಕೌಶಲ್ಯದ ಕೆಲಸ. ಅಲ್ಲಿ ನಿಧಾನವಾಗಿ ಅವರ ಮಧ್ಯೆ ದುಡಿಯುವ ವರ್ಗದ ಪ್ರಜ್ಞೆ ಬೆಳೆಸಬೇಕು. ಅವರಲ್ಲಿ ತಾವು ಹೊಸ ತಂತ್ರಜ್ಞಾನದ ದುಡಿಯುವ ಜನ ಅನ್ನುವ ತಿಳುವಳಿಕೆ ಮೂಡಿಸಬೇಕು.

**ಹೊಸತು :** ಕಾರ್ಮಿಕ ಚಳುವಳಿಯಲ್ಲಿ ಜಾತಿಯ ಪಾತ್ರ ಏನು ?

**ಎಂ.ಸಿ.ಎನ್. :** ನಾವು ಜಾತಿಯನ್ನು ತೆಗೆದು ಹಾಕದಿದ್ದರೆ ಕಾರ್ಮಿಕ ಚಳುವಳಿಗೆ ಭವಿಷ್ಯವಿಲ್ಲ. ಹಿಂದೆ ಆ ರೀತಿ ಇರಲಿಲ್ಲ. ಈಗ ಅದರ ಪ್ರಭಾವ ಹೆಚ್ಚಾಗಿದೆ. ಈ ಬಗ್ಗೆ ತಿಳುವಳಿಕೆ ಮೂಡಿಸುವ ಕೆಲಸ ಅತ್ಯವಶ್ಯ.

**ಹೊಸತು :** ಈಗಿನ ಪರಿಸ್ಥಿತಿಯಲ್ಲಿ ಹೋರಾಟಗಳು ಯಶಸ್ವಿಯಾಗುತ್ತವೆ ಎಂಬ ನಂಬಿಕೆ ನಿಮಗೆ ಇದೆಯೇ ?

**ಎಂ.ಸಿ.ಎನ್. :** ಹೋರಾಟಗಳ ಬಗ್ಗೆ ನಂಬಿಕೆ ಇಡದೆ ಬೇರೆ ದಾರಿ ಇಲ್ಲ. ಗ್ರೀಸ್ ಉದಾಹರಣೆಯಿಂದ ನಾವು ಕೆಲವು ಪಾಠಗಳನ್ನು ಕಲಿಯಬೇಕು.

ಇತ್ತೀಚೆಗೆ ಅಲ್ಲಿ ಚುನಾವಣೆ ನಡೆದಾಗ ಎಡಪಕ್ಷಗಳು ತಮಗೆ ಜನಾಭಿಪ್ರಾಯ ಅನುಕೂಲವಾಗಿದೆ ಎಂದು ಭಾವಿಸಿದ್ದರು. ಅಲ್ಲಿಯೂ ಕಮ್ಯುನಿಸ್ಟ್ ಪಾರ್ಟಿಗಳಲ್ಲಿ ಒಡಕಿದೆ ನಿಜ. ಆದರೂ ಜನತೆಗೆ ಯೂರೋಪಿಯನ್ ಯೂನಿಯನ್ ಬಗ್ಗೆ, ಜರ್ಮನಿಯ ಯಜಮಾನಿಕೆ ಬಗ್ಗೆ ಭ್ರಮನಿರಸನವಾಗಿದೆ ಎಂದು ಅಲ್ಲಿನ ಎಡ ಪಕ್ಷಗಳು ತಿಳಿದಿದ್ದವು. ಅಲ್ಲಿ ೪೫% ನಿರುದ್ಯೋಗ, ಬೆಲೆ ಏರಿಕೆ ೩೦-೩೫% ಇದ್ದರೂ ಸಹ ಎಡಪಕ್ಷಗಳ ನಿರೀಕ್ಷೆ ತಪ್ಪಾಗಿತ್ತು. ಬಿಕ್ಕಟ್ಟಿನ ಆಳಕ್ಕಿಂತ ಹೋರಾಟದಲ್ಲಿ ನಂಬಿಕೆ ಮತ್ತು ಹೋರಾಟದ ಮೂಲಕ ತಮ್ಮ ಬದುಕು ಉತ್ತಮಗೊಳ್ಳುತ್ತದೆ ಎನ್ನುವ ಆತ್ಮವಿಶ್ವಾಸ ಜನರಿಗೆ ಬಹುಮುಖ್ಯ. ಅದಿಲ್ಲದೆ ಕೇವಲ ಬಿಕ್ಕಟ್ಟು ತೀವ್ರವಾದ ಮಾತ್ರಕ್ಕೆ ಜನರು ಬದಲಾವಣೆಯನ್ನು ತರುತ್ತಾರೆ ಎನ್ನುವುದು ವಾಸ್ತವಲ್ಲ.

ನಮ್ಮದೇ ರಾಜ್ಯದಲ್ಲಿ ಕೆ.ಎಸ್.ಆರ್.ಟಿ.ಸಿ. ಕಾರ್ಮಿಕ ಸಂಘಟನೆಯಲ್ಲಿ ಕಳೆದ ಒಂದು ವರ್ಷದ ಹಿಂದೆ ಹೋರಾಟ ಮಾಡುವ ಪರಿಸ್ಥಿತಿ ಇರಲಿಲ್ಲ. ೧೫-೧೬ ವರ್ಷ ಗಳಿಂದ ತೀವ್ರ ಸಮಸ್ಯೆಗಳಿದ್ದವು. ಸುಪ್ರೀಂ ಕೋರ್ಟ್ ನಮ್ಮ ಸಂಘಟನೆಗೆ ಮಾನ್ಯತೆ ಇದೆ ಎಂದು ೧೯೮೮-೮೯ರಲ್ಲಿಯೇ ಹೇಳಿದ್ದರೂ ಆಡಳಿತ ವರ್ಗ ಮಾನ್ಯತೆ ನೀಡಿರಲಿಲ್ಲ.

ಆದರೆ ಕಳೆದ ಸೆಪ್ಟೆಂಬರ್‌ನಲ್ಲಿ ಮುಷ್ಕರ ನಡೆದಾಗ ಸಂಘಟನೆಯ ಕರೆಯಂತೆ ಅಧಿಕೃತವಾಗಿ ಮುಷ್ಕರ ಪ್ರಾರಂಭವಾಗುವ ಒಂದು ದಿನ ಮೊದಲೇ ಕಾರ್ಮಿಕರು ಕೆಲಸಕ್ಕೆ ಬರದೆ ಮುಷ್ಕರವನ್ನು ಯಶಸ್ವಿಗೊಳಿಸಿದರು. ಹದಿನಾರು ವರ್ಷದಿಂದ ಮಾತುಕತೆಗೆ ಬಾರದಿದ್ದ ಆಡಳಿತ ವರ್ಗ ಮಾತುಕತೆಗೆ ಬರುವಂತಾಯಿತು. ಇದಕ್ಕೆ ಕಾರಣ ಸಾರಿಗೆ ಕಾರ್ಮಿಕರಲ್ಲಿ ಒಂದು ವರ್ಷದ ಹಿಂದೆ ಇಲ್ಲದಿದ್ದ ಆತ್ಮವಿಶ್ವಾಸ, ಒಗ್ಗಟ್ಟು ಈಗ ಬಂದದ್ದು. ಈ ದಿಶೆಯಲ್ಲಿ ಕೆ.ಎಸ್.ಆರ್.ಟಿ.ಸಿ. ಕಾರ್ಮಿಕರಿಗೆ ಅಭಿನಂದನೆ ಸಲ್ಲಿಸಬೇಕು.

ಸಂದರ್ಶಕರು : **ಡಿ. ಎ. ವಿಜಯ ಭಾಸ್ಕರ್**
ನಂ. ೧೧೪೦, ೧ನೇ ಫೇಸ್, ೧೩ನೇ ಅಡ್ಡರಸ್ತೆ, ಜೆ. ಪಿ. ನಗರ, ಬೆಂಗಳೂರು - ೫೬೦ ೦೭೮



ಚಿ. ಎಸ್. ಗೊರವರ

# ದುಃಖದ ಬಿಕ್ಕುಗಳು

''ನಿಮ್ಮ ಮಗ ಈಗ ಏನ್ಮಾಡತಿದಾನ. ಅದ್ಯಾಕ ನಿಮ್ಮ ಮಾತ ಕೇಳ್ತಿಲ್ಲ. ಕುಂದ್ರಿಸಿಕೊಂಡು ಒಂಚೂರು ಬುದ್ಧಿ ಹೇಳಬೇಕಿತ್ತು...'' ಎಂದು ಹುಸೇನಪ್ಪ ತನ್ನ ಮಗನ ಬಗ್ಗೆ ಇದ್ದ ಹಕೀಕತ್ತು ಹೇಳಲು ಪ್ರಚೋದಿಸುವಂತೆ ಮಾತಾಡಿದೆ. ಹುಸೇನಪ್ಪ ಮತ್ತೆ ಕಣ್ಣೀರಾದ. ಸಂಭಾಳಿಸಿಕೊಳ್ರೀ ಎಂದು ಸಾಂತ್ವನದ ಮಾತಾಡಿದೆ.

ಬಸ್ಸಿನ ಸೀಟುಗಳೆಲ್ಲಾ ಬೆಳಗಿನ ಒಂಬತ್ತರ ಹೊತ್ತಿಗೇ ಭರ್ತಿಯಾಗಿ ಬಸ್ಸಿನೊಳಗೊಂದು ಸಂತೆಯ ಗೌಜು, ಗದ್ದಲ ಸುರುವಾಗಿತ್ತು. ಗದಗದಿಂದ ಗಜೇಂದ್ರಗಡಕ್ಕೆ ಬಸ್ ಬಿಡಲು ಇನ್ನೂ ತಡವಿತ್ತು. 'ಪೆಪ್ಪರಮೆಂಟ್... ಪೆಪ್ಪರಮೆಂಟ್...' ಎಂದು ಪೆಪ್ಪರಮೆಂಟು ಮಾರುವ ಹುಡುಗ ಗಾಡಿಯೊಳಗೆ ಬಂದ. ಪುಟ್ಟ ಪುಟ್ಟ ಪಾಕೀಟ್‍ನೊಳಗಿನ ಲಿಂಬಿಹುಳಿ ಪೆಪ್ಪರಮೆಂಟ್ ಬಾಯೊಳಗೆ ನೀರೂರಿಸಿದವು. ಇದಕ್ಕೂ ಮೊದಲು ಫುಟ್‍ಪಾತಿನಲ್ಲಿ ಒಂದೆರಡು ಚುರುಮುರಿ ಒಗ್ಗರಣೆ, ಮಿರ್ಚಿ ಬಜ್ಜಿ ತಿಂದು ನಾಲಿಗೆಯ ಚಪಲ ತೀರಿಸಿದ್ದೆ. ಈ ಪೆಪ್ಪರಮೆಂಟ್ ಹುಡುಗ ಮತ್ತೆ ಬಾಯೊಳಗೆ ನೀರು ತರಿಸುತ್ತಿದ್ದಾನೆ. ಇನ್ನೇನು ಪೆಪ್ಪರಮೆಂಟ್ ತೆಗೆದುಕೊಳ್ಳಬೇಕೆಂದು ರೊಕ್ಕಕ್ಕಾಗಿ ಜೀನ್ಸ್‍ಪ್ಯಾಂಟಿನ ಕಿರಿದಾದ ಕಿಸೆಯಲ್ಲಿ ತಡಕಾಡತೊಡಗಿದ್ದೆ.

ಈ ಜೀನ್ಸ್‍ಪ್ಯಾಂಟಿನ ಕಿರಿದಾದ ಕಿಸೆ ಕಿರಿಕಿರಿ ಅನಿಸಿತು. ಸೇರು ಶೇಂಗಾ ಹಿಡಿಯುತ್ತಿದ್ದ, ಬಾಲ್ಯಕಾಲದಲ್ಲಿ ಧರಿಸುತ್ತಿದ್ದ ಚೊಣ್ಣದ ಕಿಸೆಯ ಮುಂದೆ ಜೀನ್ಸ್‍ಪ್ಯಾಂಟಿನ ಕಿಸೆಯನ್ನು ನಿವಾಳಿಸಿ ಒಗೆಯಬೇಕು ಅಂದುಕೊಂಡೆ. ಅಂತೂ ಇಂತೂ ನಿಧಿ ಪತ್ತೆಯಾದಂತೆ ಕಿಸೆಯೊಳಗಿನ ಕೈಗೆ ಚಿಲ್ಲರೆ ತಾಗಿ ಪೆಪ್ಪರಮೆಂಟ್ ಹುಡುಗನನ್ನು ಕರೆಯುವವನಿದ್ದೆ. ಬಾಜು ಸೀಟಿನ ಹೆಣ್ಮಗಳೊಬ್ಬಳು ತನ್ನ ಮಗನಿಗೆ ಮನಸೋ ಇಚ್ಛೆ ಬೈಯ್ಯತೊಡಗಿದ್ದ ಬೈಗುಳ ಅಡ್ಡ ಬಂದು ಅವಳ ಕಡೆ ಕಣ್ಣು ತಿರುಗಿಸಿದೆ. ಆ ಹುಡುಗ ಆರೇಳು ವರ್ಷದವನಿರಬೇಕು. ಪೆಪ್ಪರಮೆಂಟ್ ಕೊಡಿಸೆಂದು ಹಟ ಹಿಡಿದಿದ್ದ. ಆ ತಾಯಿ 'ಪೆಪ್ಪರಮೆಂಟು ತಿನ್ನಾಕ ಸಣ್ಣ ಹುಡುಗಾಗಿಯನು ರಾಡ್ಯಾ. ಇನ ಈಗರ ಮನ್ಯಾಗ ಎದಿಗಡ್ರ ಉಂಡು ಬಂದೀ. ಪೆಪ್ಪರಮೆಂಟ್ ತಿಂದ್ರ ಹೊಟ್ಟೆಗೆರ ಹತ್ತಾಕಿಲ್ಲ ನೆತ್ತಿಗರ ಹತ್ತಾಕಿಲ್ಲ. ಇವ್ಗ ಪೆಪ್ಪರಮಂಟಂತ ಪೆಪ್ಪರಮೆಂಟು' ಎಂದು ಸಾಪಳಿಸುವುದನ್ನು ಕೇಳಿ ಪೆಪ್ಪರಮೆಂಟ್ ತೊಗೊಳ್ಳಬೇಕೆನ್ನುವ ನನ್ನ ಆಸೆಯನ್ನು ಚವಳಿಕಾಯಿ ಚಿವುಟಿ ಹಾಕಿದಂತೆ ಚಟಕ್ಕಂತ ಚಿವುಟಿ ಹಾಕಿದಳು.

ಮೈ ತುಂಬ ಹರೆಯ ಆವರಿಸಿರುವ, ಚಿಗುರು ಮೀಸೆಯ ನಾನು ಅವಳೆದುರಿಗೆ ಪೆಪ್ಪರಮೆಂಟ್ ತೊಗೊಳ್ಳಲು ಮುಜುಗರವೆನಿಸಿ ಅವಳನ್ನು ಮನಸ್ಸೊಳಗೆ

‘ಇವ್ನೌನ್’ ಎಂದು ಶಪಿಸಿ ಪೆಪ್ಪರಮೆಂಟ್ ತೂಗೊಳ್ಳುವ ಆಸೆಗೆ ಕೈಯಾರೆ ತಣ್ಣೀರೆರಚಿದೆ. ಪೆಪ್ಪರಮೆಂಟ್ ತಿನ್ನದೇ ಅದೆಷ್ಟೋ ವರ್ಷವಾಗಿತ್ತು. ನೋಡಿದ ತಕ್ಷಣ ತಿನ್ನುವ ಹಂಬಲ ಉಮೇದುಗೊಂಡಿತ್ತು. ಬಾಲ್ಯದ ದಿನಗಳು ನೆಪ್ಪಿಗೆ ಬಂದವು. ಅಪ್ಪ ಜಳಕ ಮಾಡಲೆಂದು ಬಚ್ಚಲಿಗೆ ಹೋಗುವಾಗ ಬವಡಿ ಬಿಚ್ಚಿ ಗೂಟಕ್ಕೆ ಹಾಕಿ ಹೋಗುತ್ತಿದ್ದ. ಅದನ್ನೇ ಹೊಂಚು ಹಾಕಿ ಕಾಯ್ದು ಬವಡಿ ಕಿಸೆಯೊಳಗಿನ ಚಿಲ್ಲರೆ ಕದ್ದುಕೊಂಡು ಬಸಪ್ಪನ ಅಂಗಡಿಯಲ್ಲಿ ಕಲ್ಲುಪೇಡೆ, ಪೆಪ್ಪರಮೆಂಟ್, ಲಿಂಬಿಹುಳಿ ತಿನ್ನುತ್ತಿದ್ದೆ. ಕಣ್ಣಮುಂದೆ ಒಂದೊಂದಾಗಿ ತಾ ಮುಂದು ನಾ ಮುಂದು ಎಂದು ಮೆರವಣಿಗೆ ಹೊರಡಲು ಅಣಿಯಾಗತೊಡಗಿದ್ದ ಈ ನೆನಪಿನ ಚಿತ್ರಗಳಿಗೆ ಕಂಡಕ್ಟರ್ ಹಾಕಿದ ಸೀಟಿಯ ಸದ್ದು ತೊಡರುಗಾಲು ಬಡಿಯಿತು. ಪೆಪ್ಪರಮೆಂಟ್ ಮಾರುವ ಹುಡುಗ ಸರಸರನೇ ಬಸ್ ಇಳಿದುಹೋದ. ಕಂಡಕ್ಟರ್‌ನ ಸೀಟಿ ಮಾತಿಗೆ ತಲೆ ಯಾಡಿಸಿದ ಬಸ್ ಗಜೇಂದ್ರಗಡದ ಕಡೆ ಮುಖ ಮಾಡಿತು.

ಬಸ್ಸಿನ ತುಂಬ ಒಮ್ಮೆ ಸುಮ್ಮನೆ ಕಣ್ಣಾಡಿಸಿದೆ. ಹೆಚ್ಚೂ ಕಡಿಮೆ ಎಲ್ಲ ಸೀಟುಗಳು ಫುಲ್ ಆಗಿದ್ದವು. ನನ್ನ ಬಾಜು ಒಂದು ಸೀಟು ಖಾಲಿ ಹೊಡೆಯತೊಡಗಿತ್ತು. ಅದ್ಯಾವನದೋ ಒಬ್ಬನ ಮೊಬೈಲು ‘ಕೊಲೆವರಿ ಡಿ...’ ಅಂತ ಉಯಿಲಿಡತೊಡಗಿತ್ತು. ಇನ್ನೊಬ್ಬನದು ಪ್ರೇಯಸಿ ಮತ್ತೊಬ್ಬನೊಂದಿಗೆ ಲಗ್ನವಾಗಿ ಹೊರಟಿರುವ ಪ್ರೇಯಸಿಗೆ ಜವಾಬು ಕೇಳುತ್ತಿರುವ ‘ಬಿಟ್ಟು ಹೊಂಟೆಲ್ಲ ನನ್ನ ಹಳ್ಳಿ...’ ಎಂಬ ಜಾನಪದವನ್ನು ಆರ್ತವಾಗಿ ಉಸುರತೊಡಗಿತ್ತು. ನಾನು ತುಸು ಗೊಂದಲಗೊಂಡೆ. ಕೊಲೆವರಿ ಡಿ... ಕೇಳಬೇಕೋ. ಇಲ್ಲಾ ಈ ಜನಪದ ಕೇಳಬೇಕೋ ಎಂದು. ಎರಡೂ ಒಂದರೊಳಗೊಂದು ಕಲಸಿಕೊಂಡು ಆಯಾ ಹಾಡಿನ ರಸ ಸವಿಯಲಾಗದೇ ಕಿವಿಯೊಳಗೆ ಅಳ್ಳಿ ತುರುಕಿಕೊಳ್ಳ ಬೇಕು ಅನಿಸಿತು. ತನಗೂ ಇದಕ್ಕೂ ಯಾವುದೇ ಸಂಬಂಧವಿಲ್ಲದಂತೆ ಚಲಿಸುತ್ತಿದ್ದ ಬಸ್ ಗದುಗಿನ ಗಾಂಧಿ ಸರ್ಕಲ್‌ಗೆ ತರುಬಿತು. ಒಂದಿಬ್ಬರು ಹತ್ತಿದ ನಂತರ ಬಸ್ ಹೊರಟಿತು.

ನನ್ನ ಬಾಜು ಖಾಲಿ ಇದ್ದ ಸೀಟಿನಲ್ಲಿ ಈ ಕಡೆ ವೃದ್ಧನೂ ಅಲ್ಲದ, ಹರೆಯದವನೂ ಅಲ್ಲದ ವ್ಯಕ್ತಿಯೊಬ್ಬ ಬಂದು ಕುಳಿತ. ದಿಟ್ಟಿಸಿ ನೋಡಿದೆ. ಮುಗ್ಧನಂತೆ, ಸಂಸಾರದ ನೂರೆಂಟು ಉಪಟಳಕ್ಕೆ ಜರ್ಜರಿತಗೊಂಡ ದುಃಖಿತನಂತೆ ತೋರಿದ. ಅವನು ಧರಿಸಿದ ಧೋತರ, ನೆಹರು ಶರ್ಟ್ ತುಸು ಕಮಟು ವಾಸನೆ ಚೆಲ್ಲತೊಡಗಿದ್ದವು. ಆ ವ್ಯಕ್ತಿ ಅದ್ಯಾಕೋ ಅಲ್ಲಿ ಟಿಕೇಟ್ ಹರಿಯುತ್ತಿದ್ದ ಕಂಡಕ್ಟರ್‌ನನ್ನು ಇನ್ನಿಲ್ಲದಂತೆ ಕಣ್ಣಲ್ಲೇ ಅಳೆಯತೊಡಗಿದ್ದ. ಹಾಗೆ ಅಳೆಯುವಾಗ ಅವನ ಮುಖದಲ್ಲಿ ಅತೃಪ್ತಿಯ ಗೆರೆಗಳಿದ್ದವು. ನನಗೂ ಸೋಜಿಗವಾಯಿತು. ಈ ಆಸಾಮಿಗೆ ಟಿಕೇಟ್ ತೆಗೆಸಲು ರೊಕ್ಕವಿದ್ದಂತಿಲ್ಲ ಎಂದು ತರ್ಕಿಸಿದೆ. ಆದರೆ, ತುಸು ಹೊತ್ತಿನಲ್ಲೇ ನನ್ನ ತರ್ಕ ತಲೆಕೆಳಗಾಯಿತು. ಅವನು ಟಿಕೇಟ್ ತೆಗೆಸಿದ. ಟಿಕೇಟ್ ಕೊಟ್ಟು ಕಂಡಕ್ಟರ್ ಒಂದೆರಡು ನಿಮಿಷವಾಗಿತ್ತು. ಇವನು ಬಿಕ್ಕಳಿಸಿ ಬಿಕ್ಕಳಿಸಿ ಅಳತೊಡಗಿದ. ನಾನು ಅಚ್ಚರಿಯ ಮಡುವಿನಲ್ಲಿ ಬಿದ್ದೆ. ಜನ ಅದೇನೋ ಸಂಭವಿಸಿದಂತೆ ಅವನ ಬಾಜು ಕುಳಿತ ನನ್ನನ್ನು ಅಪರಾಧಿಯಂತೆ ದಿಟ್ಟಿಸತೊಡಗಿದರು. ಅವನು ಅಳುತ್ತಾ ಕಂಡಕ್ಟರ್ ಕಡೆ ನೋಡಿದ. ಈಗ ದೃಷ್ಟಿ ಕಂಡಕ್ಟರ್‌ನ ಕಡೆ ಬದಲಾದವು. ಕಂಡಕ್ಟರನೂ ಅದೇನೂ ತಿಳಿಯದೆ ಟಿಕೇಟ್ ಕೊಟ್ಟಿದ್ದಾಗಿ ಹೇಳಿದ. ವಾತಾವರಣ ಪೂರ್ತಿ ಗೊಂದಲಮಯವಾಯಿತು. ಒತ್ತರಿಸಿ ಬರುವ ಅವನ ಅಳುವಿಗೆ, ದುಃಖಕ್ಕೆ ಅಷ್ಟು ಸಲೀಸಾಗಿ ಕಾರಣ ಹೊಳೆಯಲಿಲ್ಲ. ಇವನು ನೋಡಿದರೆ ಅಳುವೇ ತನ್ನ ಭಾಷೆಯೆಂಬಂತೆ ದುಃಖಿಸಿ ಅಳುತ್ತಿದ್ದಾನೆ. ಅದೇನೂ ತೋಚದೆ ಎಲ್ಲರೂ ಮೂಕಪ್ರೇಕ್ಷಕರಾದೆವು.

ಆಚೆ ಬದಿಯ ಸೀಟಿನಲ್ಲಿ ಕುಳಿತಿದ್ದ ಲೇಡಿ ಪೊಲೀಸೊಬ್ಬಳು ಅದೇ ತಾನೆ ಜಾಗೃತಗೊಂಡು ‘‘ಏ ಯಾಕಳ್ತರಿ. ಅದೇನಾಗೈತಿ ಹೇಳ್ರಿ. ಯಾರಾದ್ರೂ ನಿಮ್ಮ ರೊಕ್ಕ ಕಳ್ತನ ಮಾಡಿದ್ರ. ಧೈರ್ಯದಿಂದ ಹೇಳ್ರಿ. ನಿಮ್ಗೇನೂ ಆಗಲ್ಲ. ವಸೂಲಿ ಮಾಡಿಕೊಡೋದು ನನ್ನ ಜವಾಬ್ದಾರಿ...’’ ಎಂದು ತನ್ನ ಕರ್ತವ್ಯಪರತೆ ಮೆರೆದಳು.

ಆಗ ಈ ವ್ಯಕ್ತಿ ಬಾಯ್ಬಿಟ್ಟ ‘‘ರೊಕ್ಕ-ಗಿಕ್ಕ ಏನೂ ಕಳ್ತನ ಆಗಿಲ್ರೀ ಬಾಯಾರ. ನನ್ ಮಗನೂ ಈ ಕಂಡಕ್ಟರನಂತೇ ಇದ್ದ. ಅವನೂ ಕಂಡಕ್ಟರ್ ಆಗಿ ನಮ್ಮ ಮನೆತನ ನೋಡಿಕೊಂಡು ಹೋಗ್ಬೇಕು ಅನ್ನೋದು ನನ್ನ ಕನಸು ಆಗಿತ್ತು. ಆದ್ರ ಆ ಸೂಳೇಮಗ ನಮ್ಮ ಮಾತು ಕೇಳಲಿಲ್ಲ. ಉಣಿಸಿ ತಿನಿಸಿ ಉಪವಾಸ ವನವಾಸ ಮಾಡಿ ಇಟು ಇದ್ದವನ್ನ ಇಷ್ಟು ದೊಡ್ಡಾವನ್ನ ಮಾಡಿದೆ. ನಾಕು ಅಕ್ಷರ ಕಲಿತು ನೌಕರಿ ಮಾಡ್ಲಿ ಅಂತ ಸಾಲಿ ಕಲಿಸಿದೆ. ಆದ್ರ ಅಂವ ಉಡಾಳತನಕ್ಕ ಬಿದ್ದು ಹಾಳಾಗ್ಯಾನ...’’ ಅಂತ ಒದ್ದೆ ಮಾತುಗಳಲ್ಲಿ ಹೇಳಿದ.

ಅವನ ಅಳುವಿಗೆ ಏನೇನೋ ತರಹೇವಾರಿ ಅರ್ಥ ಕಲ್ಪಿಸಿದ್ದ ಎಲ್ಲರಿಗೂ ಕೆಟ್ಟೆನಿಸಿತು. ‘ಕಷ್ಟಗಳ ಸುರಿಮಳೆಗೆ ಕಲ್ಲಾಗು...’ ಅಂತ ತತ್ವಜ್ಞಾನದ ಮಾತು ಹೇಳಬೇಕೆಂದುಕೊಂಡಿದ್ದವನಿಗೆ ಅದು ಅಧಿಕಪ್ರಸಂಗತನ ಅನಿಸಿ ಸುಮ್ಮನಾದೆ. ಅವನ ಮಾತು ಕೇಳಿ ಎಲ್ಲರ ನಾಲಿಗೆಗಳು ಲೊಚಗುಟ್ಟಿದವು. ಮನಸ್ಸುಗಳು ಮಮ್ಮಲ ಮರುಗಿದವು. ಡ್ರೈವರನೂ ಬಸ್ಸಿನ ವೇಗ ಕಡಿಮೆ ಮಾಡಿ ಇವನ ಕಡೆಯೊಮ್ಮೆ ತಿರುಗಿ ನೋಡಿದ. ವೇಗ ಕಡಿಮೆ ಮಾಡಿಕೊಂಡ ಬಸ್ಸೂ ಕೂಡ ಇವನ ದುಃಖದಲ್ಲಿ ಭಾಗಿಯಾದಂತೆ ತೋರಿತು. ಕೆಲವರು ತಮಗೆ ತೋಚಿದಂತೆ ಯಾಡು ಮಾತಾಡಿ ಸಂತೈಸಿದರು. ರಮಿಸುವ ಮಾತಾಡಿದರು. ಅಂವ ಧೋತರದ ಚುಂಗಿನಿಂದ ಕಣ್ಣೀರು ಒರೆಸಿಕೊಂಡ. ನನ್ನ ಕಣ್ಣ ರೆಪ್ಪೆಗಳು ನನ್ನನ್ನೂ ಕೇಳದೇ ಒದ್ದೆಯಾದವು.

ತುಸು ಹೊತ್ತು ಕಳೆದ ನಂತರ ಅವನೂ ಶಾಂತನಾಗಿ ಒಂದು ತಹಬಂದಿಗೆ ಬಂದಿದ್ದ. ಅವನನ್ನು ಮಾತಾಡಿಸಬೇಕೆಂದುಕೊಂಡರೂ ಅದ್ಯಾಕೋ ಮಾತುಗಳು ನಾಲಗೆ ದಾಟಿ ಬರದೆ ಅಲ್ಲೇ ಗಂಟಲಲ್ಲೇ ಸತ್ತುಹೋದಂತೆನಿಸಿ ಮನಸ್ಸು ಕಲ್ಲವಿಲಗೊಂಡಿತು. ಬಸ್ಸಿನ ಕಿಟಕಿಯಾಚೆ ಕಣ್ಣು ಹಾಯಿಸಿದೆ. ಬಿಸಿಲಗುದುರೆಗಳು ಒಂದಕ್ಕೊಂದು ಹ್ಯಾವಕ್ಕೆ ಬಿದ್ದಂತೆ ಸಮರೋಪಾದಿಯಲ್ಲಿ ಓಡತೊಡಗಿದ್ದವು. ಹೊರಗಿನ ಅರಜಳ ಮತ್ತು ಒಳಗುದಿ ಎಲ್ಲ ಸೇರಿ ಪರಮ ಸಂಕಟವೆನಿಸಿತು. ಬಾಯೊಳಗೆ ಅದ್ಯಾಕೋ ಉಪ್ಪುಪ್ಪು ನೀರು ಬಂತು. ವಾಂತಿಗೀಂತಿಯಾದೀತೆನ್ನುವ ಭಯ ಕಾಡಿತು. ಹಾಗೇನಾದರೂ ವಾಂತಿಯಾದರೆ ಚಿಗುರು ಮೀಸೆಯ ನನಗೆ ಅವಮಾನವೇ ಸರಿ. ಬ್ಯಾಗಿನೊಳಗಿಂದ ಬಿಸಲೇರಿ ನೀರು ತೆಗೆದು ತುಸು ಕುಡಿದು ಮುಕ್ಕಳಿಸಿದೆ. ಹಾಗೇ ಒಂದಿಷ್ಟು ಗುಟುಕರಿಸಿದೆ. ಎದೆಯೊಳಗೆ ತಂಪು ಸುರಿದಂತೆನಿಸಿ ನೆಮ್ಮದಿಯೆನಿಸಿತು.

ಇನ್ನೇನು ಬಿಸಲೇರಿ ಬಾಟಲಿ ಬ್ಯಾಗೊಳಗೆ ಇಡಲು ಅಣಿಯಾಗಿದ್ದೆ. ಬಾಜು ಕುಳಿತ ದುಃಖಿತ ಆಸಾಮಿ ‘‘ನಂಗೊಂದು ಮುಕ್ಕು ನೀರು ಕೊಡ್ರೀ...’’ ಅಂತ ಸಂಕೋಚದಿಂದ ಕೇಳಿದ. ಅವನೆಡೆಗೊಂದು ಮುಗುಳ್ನಗು ಬೀಸಾಕಿ ನೀರು ಕೊಟ್ಟೆ. ಅವನು ಮನೆಯೊಳಗೆ ಚರಿಗೆ ನೀರು ಕುಡಿದಂತೆ ಹೆಚ್ಚೂ ಕಡಿಮೆ ಬಿಸಲೇರಿ ನೀರು ಖಲಾಸ್ ಮಾಡಿ ಕೊಟ್ಟು ‘‘ಪುಣ್ಯಾ ಬರ್ಲಿ ನಿಮ್ಮ ಹೇಂತಿ ಮಕ್ಕಳಿಗೆ...’’ ಅಂದ.

ಇವನ ಜೊತೆ ಒಂದಿಷ್ಟು ನಕಲಿ ಮಾಡಬೇಕು ಅನಿಸಿ ‘‘ಅಲ್ರೀ ನೀರು ಕೊಟ್ಟವನು ನಾನು. ನೀವು ಹೇಂತಿ, ಮಕ್ಕಳಿಗೆ ಪುಣ್ಯ ಬರ್ಲಿ ಅಂತ ಹೇಳ್ತೀರಲ್ಲ. ಬಾರೀ ಬೀಡ ನೀವೂ ಮತ್ತ...’’ ಅಂತ ಅವನೆಡೆಗೊಂದು ತಮಾಷೆಯ ಮಾತಿನ ಬಾಣ ಬಿಟ್ಟು ಕುಲು ಕುಲು ನಕ್ಕೆ.

ಬಸ್ಸಿನೊಳಗಿನ ಜನ ನಮ್ಮ ಕಡೆ ದಿಟ್ಟಿಸಿ ಅವರೂ ಮುಗುಳ್ನಗುವಾದರು. ಇವನೂ ದುಃಖವೆಲ್ಲ ಮರೆತವನಂತೆ ನಗುತ್ತಾ ‘‘ಏ ಹಂಗೇನಿಲ್ರೀ. ನಿಮ್ಮ ಮಕ್ಕಳು, ಹೇಂತಿ ಆರಾಮಿದ್ರ ನೀವೂ ಆರಾಮಿದ್ದಾಂಗ. ನಮ್ಮ ಕಡೆ ಯಾರರ ಸಹಾಯ ಮಾಡಿದ್ರ ನಾವು ಅನ್ನೋದು ಹೀಂಗ...’’ ಎಂದು ಮತ್ತೆ ನಗೆಯಾಡಿದ.

ಅವನ ಜೊತೆ ಮಾತಾಡುತ್ತ ಮುಖ ದಿಟ್ಟಿಸಿದೆ. ಅಲ್ಲಿ ಮೂಡಿದ್ದ ನೋವಿನ ಗೆರೆಗಳು ಅಳಿಸಿ ಹೋದಂತೆ ಕಂಡವು. ನನ್ನ ನಗೆ ಚಾಟಿಕೆಗೆ ತುಸು ಗೆಲುವಾಗಿದ್ದಂತಿತ್ತು. ಇಷ್ಟೊಂದು ದುಃಖಕ್ಕೆ ಕಾರಣವಾಗಿರುವ ಅವನ ಮಗನ ಬಗ್ಗೆ, ಅವನ ಬಗ್ಗೆ ತಿಳಿದುಕೊಳ್ಳುವ ಹುಚ್ಚು ಕುತೂಹಲ ನನ್ನೊಳಗೆ. ಸುಮ್ಮ ಸುಮ್ಮನೇ ತಳಬುಡವಿಲ್ಲದಂತೆ ಅವನ ಜೊತೆ ಮಾತಿಗಿಳಿದೆ. ನನಗೂ ಅಚ್ಚರಿ ಅನಿಸಿತು. ಹಾಗೆ ನೋಡಿದರೆ ಮತ್ತೊಬ್ಬರ ತಂಟೆಗೆ ಹೋಗುವುದು, ಅವರ ಖಾಸಗಿತನದ ಸಂಗತಿಗಳನ್ನು ಕೋಳಿ ಕೆದಕಿದಂತೆ ಕೆದಕುವುದು ನನಗೆ ಅಷ್ಟಾಗಿ ಹಿಡಿಸುವುದಿಲ್ಲ. ರೆಪ್ಪೆ ಒದ್ದೆ ಮಾಡಿದ ಇವನ ಖಾಸಗಿ ಬದುಕಿನ ಸಂಗತಿಗಳನ್ನು ತಿಳಿದುಕೊಳ್ಳುವ ಉಮೇದಿ ನನ್ನೊಳಗೆ ಒದ್ದುಕೊಂಡು ಬಂತು. ಮಜಾ ಅಂದ್ರೆ ಇದುವರೆಗೂ ಅವನ ಹೆಸರೇನು ಎಂಬುದೇ ನನಗೆ ಗೊತ್ತಿರಲಿಲ್ಲ. ಮನುಷ್ಯರಿಗೂ ಪ್ರಾಣಿಗಳಂತೆ ಹೆಸರೇ ಇಲ್ಲದಿದ್ದರೆ ಹ್ಯಾಗಿರುತ್ತಿತ್ತು? ಅಂದುಕೊಂಡೆ. ಸುಂದರವಲ್ಲದ, ಕೇಳಲು ಇಂಪಾಗಿರದ, ಹುಡುಗಿಯರೊಳಗೆ ರೋಮಾಂಚನ ಮೂಡಿಸದ ನನ್ನ ಹೆಸರು ಎದುರಿಗೆ ಬಂದು ಲಗಾಟಿ ಹೊಡೆದು ಅಣಕಿಸಿದಂತೆನಿಸಿ ಯಾರಿಗೂ ಹೆಸರೇ ಇರಬಾರದಿತ್ತು ಅನಿಸಿತು. ಆದರೂ ಇವನ ಹೆಸರು ತಿಳಿದುಕೊಳ್ಳಲು ಮನಸ್ಸು ಒಂದೇ ಸಮನೆ ಚಟಬುರಸತೊಡಗಿತ್ತು.

‘‘ನಿಮ್ಮ ಹೆಸರೇನ್ರೀ...’’ ಎಂದು ಸಂಕೋಚ ಬಿಟ್ಟು ಕೇಳಿದೆ.

‘‘ನನ್ನ ಹೆಸರು ಹುಸೇನಪ್ಪ...’’ ಎಂದು ಸಲುಗೆಯಿಂದ ಹೇಳಿದ.

ನಾನು ಅಚ್ಚರಿಯ ಹಳ್ಳಕ್ಕೆ ಬಿದ್ದೆ. ಹುಸೇನಪ್ಪ ಎಂಬ ಹೆಸರು ಕೇಳುತ್ತಿರುವುದು ನಾನು ಇದೇ ಮೊದಲು. ಇದೊಂದು ವಿಚಿತ್ರದ ಹೆಸರು ಅನಿಸಿತು. ನಮ್ಮೂರಲ್ಲಿ ಮೂಸೂಡ್ರು ಮಂದಿಯಲ್ಲಿ ಕೆಲವರು ಹುಸೇನಸಾಬ ಅಂತ ಹೆಸರಿನವರು ಇದ್ದಾರೆ. ಆದ್ರೆ ಹುಸೇನಪ್ಪ ಅನ್ನೋದಿಲ್ಲ. ಈ ತರಹದ ಹೆಸರು ಹಿಂದೂಗಳಲ್ಲಿ ಇರಲಿಕ್ಕಿಲ್ಲ ಅಂತ ತರ್ಕಿಸಿದೆ. ಹುಸೇನಪ್ಪನನ್ನು ನೋಡಿದ್ರೆ ಮುಸೂಡ್ರವನಂತೆ ಕುರುಚಲು ಗಡ್ಡ ಬಿಟ್ಟಿಲ್ಲ. ಮುಸೂಡ್ರವನಂತೆ ತೋರುವ ಅದ್ಯಾವ ಚಹರೆಗಳೂ ಇಲ್ಲ. ಅಂವ ನಮ್ಮೂರ ರೈತನಂತೆ ಧೋತರ, ನೆಹರು ಶರ್ಟ್ ತೊಟ್ಟಿದ್ದ. ಹೀಗೆ ಜಾತಿ ಆಧರಿಸಿದ ಚಾಳೀಸಿನಿಂದ

ನೋಡುವುದು ನನ್ನ ಜಾಯಮಾನವಲ್ಲ. ಆದರೆ, ಹುಸೇನಪ್ಪ ಎಂಬ ಹೆಸರು ನನ್ನೊಳಗೆ ಇನ್ನಿಲ್ಲದ ಕುತೂಹಲ ಕೆರಳಿಸಿತು. ನಿಮ್ಮ ಜಾತಿ ಯಾವುದೆಂದು ಹುಸೇನಪ್ಪನನ್ನು ನೇರವಾಗಿ ಕೇಳುವುದು ಮಾನವೀಯತೆಯಲ್ಲ.

''ನಿನ್ನ ಹೆಂಡತಿ ಹೆಸರೇನು...'' ಅಂತ ಅಸಂಬದ್ಧವಾಗಿ ಕೇಳಿದೆ.

''ಫಾತೀಮಾ...'' ಎಂದು ಅವನು ಒಂದಿಷ್ಟೂ ಬೇಸರಿಸಿಕೊಳ್ಳದೆ ತುಸು ನಾಚಿಕೆ ಬೆರೆತ ಮಾತಿನಲ್ಲಿ ಹೇಳಿದ.

ಅವನಾರೆಂದು ತಿಳಿದರೂ ನಾನು ಮತ್ತೆ ಗೊಂದಲಕ್ಕಿಟ್ಟುಕೊಂಡೆ. ಮುಸೂತ್ರಲ್ಲಿ ಹುಸೇನಪ್ಪ ಅಂತ ಹೆಸರಿಡಲು ಸಾಧ್ಯವೇ ಇಲ್ಲ ಅಂತ ಮನಸ್ಸು ಖಡಾಖಂಡಿತವಾಗಿ ನುಡಿಯಿತು. ''ನಿನ್ನ ಹೆಸರು ಹುಸೇನಸಾಬ ಅಂತ ಇರಬೇಕಿತ್ತಲ. ಅದ್ಯಾಕೆ ಹುಸೇನಪ್ಪ ಅಂತ ಹೆಸರಿಟ್ಟಿದ್ದಾರೆ...''

''ನಮ್ಮನ್ಯಾಗ ಹುಸೇನಸಾಬ ಅಂತಾನ ಹೆಸರಿಟ್ಟಾರ್ರೀ. ಊರಾಗೆಲ್ಲ ಕರೆಯೋದು ಹುಸೇನಪ್ಪ ಅಂತ...'' ಎಂದು ಯಾವುದೇ ಇರಸು ಮುರುಸಿಲ್ಲದೆ ನಿಸೂರಾಗಿ ಹೇಳಿದ. ಖುಷಿ ಅನಿಸಿತು. ಈ ಸಂಭ್ರಮದ ಹಿಂದೆಯೇ ಪ್ರಶ್ನೆಯೊಂದು ತೇಲಿ ಬಂತು. ಹಿಂದೂಗಳೊಳಗೆ 'ರಾಮಸಾಬ...', 'ಹನುಮಸಾಬ' ಅಂತ ಹೆಸರಿಟ್ಟಿದ್ದರೆ ಹ್ಯಾಗಿರ್ತಿತ್ತು? ಇದು ಆಗು ಹೋಗೋ ಮಾತಲ್ಲ ಅನಿಸಿ ಬೇಕಂತಲೇ ಆ ತರ್ಕಕ್ಕೆ ಇತಿಶ್ರೀ ಹಾಡಿ ಮತ್ತೆ ಹುಸೇನಪ್ಪನೊಂದಿಗೆ ಮಾತಿಗಿಳಿದೆ.

''ನಿಮ್ಮ ಮಗ ಈಗ ಏನ್ಮಾಡತಿದಾನ. ಅದ್ಯಾಕ ನಿಮ್ಮ ಮಾತ ಕೇಳ್ತಿಲ್ಲ, ಕುಂದ್ರಿಸಿಕೊಂಡು ಒಂಚೂರು ಬುದ್ಧಿ ಹೇಳಬೇಕಿತ್ತು...'' ಎಂದು ಹುಸೇನಪ್ಪ ತನ್ನ ಮಗನ ಬಗ್ಗೆ ಇದ್ದ ಹಕೀಕತ್ತು ಹೇಳಲು ಪ್ರಚೋದಿಸುವಂತೆ ಮಾತಾಡಿದೆ.

ಹುಸೇನಪ್ಪ ಮತ್ತೆ ಕಣ್ಣೀರಾದ. ಸಂಭಾಳಿಸಿಕೊಳ್ರೀ ಎಂದು ಸಾಂತ್ವನದ ಮಾತಾಡಿದೆ.

''ಎಲ್ಲಾ ಸಾಕಾಗೇತ್ರೀ. ಅದೇನು ಸಂಭಾಳಿಸ್ಕೋತಿರಿ. ಇರು ಒಬ್ಬ ಮಗ ನೌಕರಿ ತಗೊಂಡು ನಾಕು ಮಂದಿ ಹೌದೆನ್ನುವಂಗ ಬಾಳೆ ಮಾಡ್ತಾನಂತ ಉಪವಾಸ ವನವಾಸ ಬಿದ್ದು ಸಾಲಿ ಕಲಿಸಿದೆ. ಹನ್ನೆರಡನೆತ್ತದ ತನಕ ಓದಿದ. ಮುಂದ ಓಣಿ ಹುಡುಗುರ ಜೊತಿ ಉಡಾಳತನಕ ಬಿದ್ದ. ಇಸ್ಪಿಟ್ ಆಡಾಕತ್ಯಾನ. ಹೀಂಗ ಜೂಜಾಡ್ತನಂತ ಅಂವಗ ನಯಾಪೈಸೆ ರೊಕ್ಕ ಕೊಡಲಿಲ್ಲ. ಹೀಂಗರ ಆಗಿ ಅಂವ ಇಸ್ಪಿಟ್ ಆಡೋದು ಬಿಡ್ಲಿ ಅಂತ ನಾ ಮಾಡಿದ್ದೆ. ಆದ್ರ ಆ ಸೂಳೆಮಗ ಊರಾಗ ಕಳ್ಳತನ ಮಾಡಾಕತ್ತಾನಂತ. ನನ್ನಂತವನ ಹೊಟ್ಯಾಗ ಎಂತಾ ಮಗ ಹುಟ್ಯಾನ ನೋಡ್ರಿ. ನನ್ನ ಅಂವನ ಮುಖ ನೋಡಾಕ ಹೇಸ್ಗಿ ಆಗೇತಿ. ಇಬ್ರು ಹೆಣ್ಮಕ್ಕಳು ಅದಾರ. ಅವ್ರ ಲಗ್ನ ಮಾಡ್ಬೇಕು ಅನ್ನೋ ಖಬುರಿಲ್ಲ ಅಂವಗ. ತಾ ಮಾಡಿದ್ದು ಚೆಂದ ಕಂಡೈತಿ. ಏನ್ಮಾಡೋದ್ರಿ ನನ್ನ ಹೊಟ್ಯಾಗ ಇಂತಾ ಮಗ ಹುಟ್ಯಾನ. ಸೊಸಿ ಕೈಯಾನ ಬಿಸಿ ರೊಟ್ಟಿ ತಿನ್ನೋ ವಯಸ್ಸು ನಮ್ದು. ನಿರ್ವಾ ಇಲ್ದ ನಾನು ನನ್ನ ಹೇಂತಿ ಬಸ್ಟ್ಯಾಂಡ್ ಹತ್ರ ಎಗ್‌ರೈಸ್ ಅಂಗಡಿ ಇಟ್ಟಿವಿ. ಏನೋ ನಾಕು ರೂಪಾಯಿ ಉಳಿಸಿ ಹ್ಯಾಂಗರ ಮಾಡಿ ಆ ಇಬ್ರೂ ಹೆಣ್ಮಕ್ಕಳ ಮದುವಿ ಮಾಡ್ಬೇಕು. ಅಲ್ಲಿ ತನ್ಕ ನನ್ಗ ಸಮಾಧಾನ ಇಲ್ಲ. ಆ ಸೂಳೆಮಗ ಸತ್ರೂ ನಾಂವು ಹೊಳ್ಳಿ ನೋಡಲ್ಲ. ಅಂವ ನಮ್ಗ ಹುಟ್ಟಿಲ್ಲ ಅಂತ ತಿಳ್ಕೊಂಡಿನಿ...'' ಎಂದು ಹುಸೇನಪ್ಪ ಅಳು ಮತ್ತು ಆಕ್ರೋಶಭರಿತ ಧ್ವನಿಯಲ್ಲಿ ಒಂದೇ ಉಸುರಿಗೆ ಹೇಳಿ ಮತ್ತೆ ಕಣ್ಣೀರಾದ.

ಹುಸೇನಪ್ಪನ ಮಗನ ಬಗ್ಗೆ ನನ್ನೊಳಗೂ ಆಕ್ರೋಶ ಕುದಿಯಿತು. ಸೊಸಿ ಕೈಯೊಳಗಿನ ಬಿಸಿ ರೊಟ್ಟಿ ತಿನ್ನಬೇಕಾದ ವಯಸ್ಸಿನ ಹುಸೇನಪ್ಪ ಇಬ್ಬರು ಹೆಣ್ಮಕ್ಕಳ ಲಗ್ನ ಮಾಡಲು ಪಡುತ್ತಿರುವ ಪಡಿಪಾಟಲು ನಿಜಕ್ಕೂ ಕಷ್ಟಕರ. ಅವನೆದೆಯೊಳಗಿನ ಸಂಕಟ ಕೇಳಿ ಮನಸ್ಸು ಮಮ್ಮಲ ಮರುಗಿ, ಅವನಿಗೆ ಸಾಂತ್ವನ ಹೇಳಲು ಮಾತು ಬಾರದೆ ಮೂಕವಾಯಿತು. ಇದೆಲ್ಲವನ್ನೂ ಮರೆತವನಂತೆ ಹುಸೇನಪ್ಪ ಎಲೆ ಅಡಿಕೆ ಚೀಲ ತೆಗೆದು ಎರಡು ಹೋಳು ಅಡಿಕೆ ಬಾಯೊಳಗೆ ಹಾಕಿಕೊಂಡು, ಅಂಬಾಡಿ ಎಲೆಗೆ ಸುಣ್ಣ ಸವರಿ ಅದನ್ನೂ ಬಾಯೊಳಗೆ ತೂರಿಸಿಕೊಂಡ. ನನ್ನೂ ಎಲೆ ಅಡಿಕೆ ಹಾಕಿಕೊಳ್ಳಬೇಕೆನಿಸಿ ''ನಂಗೊಂದಿಷ್ಟು ಎಲೆ ಅಡಿಕೆ ಇದ್ರ ಕೊಡ್ರಿ'' ಅಂದೆ.

ಖುಷಿಯಿಂದ ಕೊಟ್ಟ. ನಾನು ''ನಿಮ್ಮ ಹೇಂತಿ ಮಕ್ಕಳಿಗೆ ಪುಣ್ಯ ಬರ್ಲಿ...'' ಅಂದೆ. ಮೊದಲಿನ ತಮಾಷೆ ಮಾತು ನೆನಪಾಗಿ ಇಬ್ಬರೂ ನಕ್ಕೆವು.


ಟಿ. ಎಸ್. ಗೊರವರ

ರಾಜೂರ ಅಂಚೆ, ರೋಣ ತಾಲ್ಲೂಕು, ಗದಗ ಜಿಲ್ಲೆ

# ಸಾಂಸ್ಕೃತಿಕ ಸ್ಥಿತ್ಯಂತರಗಳು





ಡಾ|| ವಿಜಯಾ

ಸಂಸ್ಕೃತಿ' ಎಂದರೆ ಯಾವುದು ಎಂಬುದೇ ಡಿ.ವಿ.ಜಿ. ಮೊದಲಾಗಿ ಹಲವರು ಚರ್ಚಿಸಿದ್ದಾರೆ. ಜನರ ಆಚರಣೆ, ಜೀವನ ವಿಧಾನ ಇತ್ಯಾದಿಯಾಗಿ ಅರ್ಥ ಗಳಿದ್ದರೂ ಬಹುತೇಕ ಸಾಂಸ್ಕೃತಿಕ ಕಾರ್ಯಕ್ರಮಗಳ ಮೂಲಕ ಗುರುತಿಸುತ್ತಿದ್ದೇವೆ. ಬದುಕಿನ ಒಳಗೆ, ಸಮಾಜದಲ್ಲಿ, ಜೀವನ ವಿಧಾನದಲ್ಲಿ ಪ್ರತಿಕ್ಷಣವೂ ಸಂಸ್ಕೃತಿಯನ್ನು ಒಳಗೊಂಡೇ ಇರುತ್ತದೆ. ಅದು ಆಯಾ ವ್ಯಕ್ತಿ, ಸಮಾಜದ ಗುರುತು ಕೂಡ. ಅಲ್ಲಿಯ ಪಲ್ಲಟಗಳ ಪರಿಣಾಮವೂ ಅಗಾಧ.

ಸಿಕ್ಕಿದ್ರಾ ?

ಇಲ್ಲ, ಏನ್ಮಾಡೋದು.

ಸುಜಾತಾ ಅಂತ ಒಬ್ರಿದಾರೆ. ಇದೇ ಪ್ರೊಫೆಷನ್ನು, ಅಡ್ರೆಸ್ಸೂ... ಹೌದು, ಗೊತ್ತು. ಆದ್ರೆ ನಂಗೆ ರಜಾ ಸಿಗ್ತಿಲ್ಲ, ಓಡಾಡೊಕೆ ಹೌದಾ ? ನಮ್ಮ ಉಷಾ ಆಫೀಸರ್ರು ಇದಕ್ಕೆಂದಾಗ ಖುಷಿಯಾಗಿ ರಜಾ ಕೊಟ್ರಂತೆ...

ಹೌದಾ ? ಪರವಾಗಿಲ್ವೆ ?

ನೀನು ಜಸ್ಟ್‌ಡಯಲ್‌ಗೆ ಫೋನ್ ಮಾಡು. ಎಲ್ಲ ಹೇಳ್ತಾರೆ.

ಹೌದಲ್ವಾ ? ಮೆಹಂದಿ, ಪಾರ್ಲರ್, ಫ್ಲಾರಿಸ್ಟ್, ಚಪ್ಪರ, ಡೆಕೋರೇಷನ್ ಎಲ್ಲದರ ಕಾಂಟ್ರಾಕ್ಟ್ ಕೊಟ್ಟುಬಿಡಬಹುದು...

ಒಂದು ಮೆಹಂದಿ ಕಾರ್ಯಕ್ರಮಕ್ಕೆ ಬೇಕಾದ ಪರಿಣತರ ಹುಡುಕಾಟದ ಹಿನ್ನೆಲೆಯಲ್ಲಿ ನಡೆದ ಮೇಲಿನ ಸಂಭಾಷಣೆ ಇವತ್ತಿನ ಅದೆಷ್ಟು ಸಂಗತಿಗಳನ್ನು ಹೇಳುತ್ತಿದೆಯೆಂದರೆ ಹಳೆಯ ತಲೆಮಾರು ನಿಬ್ಬೆರಗಾಗುವಷ್ಟು! ಸಂಸ್ಕೃತಿಯ ವಿವರಗಳು, ಅಂದಿನಿಂದ ಇಂದಿಗೆ ಬದಲಾದ ಬಗೆಯನ್ನು ಗುರುತಿಸಲು ಒಂದು ಅತಿ ಸಾಮಾನ್ಯ, ಚಿಕ್ಕ ಉದಾಹರಣೆಯಷ್ಟೆ.

ಮದುವೆ ಮಾಡಬೇಕೆ ? ಅದಕ್ಕೊಂದು ದೂರವಾಣಿ ಕರೆ ಮಾಡಿದರೆ ಆದಿಯಿಂದ ಅಂತ್ಯದವರೆಗೆ ಎಲ್ಲವನ್ನು ಗುತ್ತಿಗೆ ಆಧಾರದಲ್ಲಿ ೩-೪ ದಿನದಿಂದ ಅರ್ಧ ದಿನ, ಅರ್ಧ ಗಂಟೆಯ ಕಾಂಟ್ರ್ಯಾಕ್ಟೂ ಉಂಟು. ಆದರೆ ಈಗ ಮದುವೆಯೂ ಒಂದು ಪ್ರದರ್ಶನವೇ ಆಗಿರುವುದರಿಂದ ಎರಡು ಜೀವಗಳ ಬದುಕಿನ ಬೆಸುಗೆ ಎಂಬ ಅಂಶ ನಗಣ್ಯವಾಗಿ ಛತ್ರ, ಅದರ ಅಲಂಕಾರ, ಕಡೆಗೆ ಪುರೋಹಿತರೂ ಕೂಡಾ ಸಮಯಕ್ಕೆ ಎಷ್ಟು ಬೇಕೋ ಅಷ್ಟನ್ನು ಮಾಡಿ ಮುಗಿಸುವ ಕಂಟ್ರ್ಯಾಕ್ಟರೇ ಆಗಿದ್ದಾರೆ. ಇವತ್ತು ಎಲ್ಲ ಸಂಸ್ಕೃತಿಯೂ ಈವೆಂಟ್ ಮ್ಯಾನೇಜ್‌ಮೆಂಟ್‌ನ ಕೈಯಲ್ಲಿದೆ. ಅದೂ ಒಂದು ಗೌರವಾನ್ವಿತ ಹುದ್ದೆಯೇ ಆಗಿದೆ. ನೀವು ಕೂತ ಕಡೆ ದೂರವಾಣಿ ಕರೆ ಮಾಡಿದರೆ ಸಾಕು, ನಿರ್ವಹಿಸುತ್ತಾರೆ. ಸೀದಾ ಛತ್ರಕ್ಕೆ ಬಂದರೆ ಸಾಕು. ಇನ್ನು ಫೈವ್ ಸ್ಟಾರ್ ಹೊಟೇಲ್‌ನ ಮದುವೆಗಳ ಬಗ್ಗೆ ಹೇಳುವುದೇ ಬೇಡ. ಅನೇಕ ಸಂದರ್ಭಗಳಲ್ಲಿ ಇದೊಂದು ಶ್ರೀಮಂತಿಕೆಯ ಪ್ರದರ್ಶನ ಮಾತ್ರ! ಅದೂ ಪೈಪೋಟಿಯ ಮೇಲೆ ನಡೆವಂಥವು.

ನಮ್ಮಲ್ಲಿ ಆಂಧ್ರದ ಪ್ರಭಾವ ಇದ್ದ ಕೆಲವು ಕುಟುಂಬಗಳಲ್ಲಿ 'ಮದರಂಗಿ' ಹಾಕುವ ಪರಿಪಾಠ ಇತ್ತು. ಆದರೆ ಈಗಿನ ಮೆಹಂದಿಯ ಸ್ವರೂಪ ಅಂಥದ್ದಲ್ಲ, ಮದರಂಗಿ ಹಾಕಿಸಿಕೊಳ್ಳುತ್ತಿದ್ದಾಗಿನ ವಿನ್ಯಾಸ, ಚಿತ್ರಗಳ ರೀತಿಗೂ ಈಗಿನ ಮೆಹಂದಿಗೂ ತುಂಬ ವ್ಯತ್ಯಾಸವಿದೆ. ಗೊತ್ತಾದ ದಿನ ಸಂಜೆ ಹೆಂಗಳೆಯರ ದೊಡ್ಡ ದಂಡು ಸೇರುತ್ತದೆ. ಮೆಹಂದಿ ಹಾಕುವ ಪರಿಣತರಿರುತ್ತಾರೆ. ಎಲ್ಲಕ್ಕಿಂತ ಮಿಗಿಲಾಗಿ ರಾತ್ರೆಯಿಡೀ ನೃತ್ಯ – ಇತ್ಯಾದಿ ಸಂಭ್ರಮ. ಇವೆಲ್ಲ ನಮ್ಮ ದಕ್ಷಿಣದ ಸಂಸ್ಕೃತಿಗಿಂತ ಭಿನ್ನ. ಪ್ರೇರಣೆ ಪ್ರಾಯಃ ಕಿರುತೆರೆಯ ಚಿತ್ರಿಕೆಗಳು. ಈಗ ಕನ್ನಡದ ಕಿರುತೆರೆ-ಹಿರಿತೆರೆಗಳಲ್ಲಿ ಹುಡುಕಿದರೂ ನಮ್ಮ ಸಂಸ್ಕೃತಿ ಸಿಗುವುದು ಕ್ವಚಿತ್ ! ಬಹುತೇಕ ಹಿಂದಿ, ಬೆಂಗಾಲಿಯಿಂದ ಯಥಾವತ್ ಆಮದು ಮಾಡಿಕೊಂಡ ಸರಕುಗಳವು. ಅವರ ಮೆಹಂದಿ ಸಂಭ್ರಮ ನಮ್ಮದಾಗಿಬಿಟ್ಟಿದೆ !

ಇವತ್ತು ಬ್ಯೂಟಿ ಪಾರ್ಲರ್‌ಗಳು ಬೀದಿಗೆರಡು. ಹಿಂದೆ 'ಯುವತಿ'ಯಂತೆ ಕಾಣಲು ಹಪಹಪಿಸುತ್ತಿದ್ದ ದಿನಗಳಲ್ಲಿ ಇದ್ದ ಬಳಕೆಗಿಂತ ಈಗ ಅದೇ ಒಂದು ಬದುಕಿನ ಅಗತ್ಯ ಎಂಬ ಹಾಗೆ ಬಂದಿದೆ. ಹರ್ಬಲ್‌ನ ಲೇಪವೂ ಸೇರಿದೆ, ಆರೋಗ್ಯ ಸಂವರ್ಧನೆಗೆ! ಒಂದು ಹೊಸ ಬಡಾವಣೆ ಬಂದರೆ ಅದರ ಆದ್ಯತೆಗಳಲ್ಲಿ ನೀರು-ದೀಪಕ್ಕಿಂತ ಮಿಗಿಲಾಗಿ ಬ್ಯೂಟಿ ಪಾರ್ಲರ್ ಇರಬೇಕು. ಈಗ ಆಬಾಲ ವೃದ್ಧರಾದಿಯಾಗಿ ಎಲ್ಲರೂ ಯಾವ ಸಂಕೋಚವೂ ಇಲ್ಲದೆ ಅದೊಂದು ಪ್ರಾತರ್ವಿಧಿ ಎಂಬಂತೆ ಭಾವಿಸುತ್ತಿರುವುದನ್ನು ಕಾಣಬಹುದು.

ನಮ್ಮ ಉಡುಗೆ-ತೊಡುಗೆಯಲ್ಲಿ ಆಗಿರುವ ವ್ಯತ್ಯಾಸವನ್ನಂತೂ ವಿವರಿಸಬೇಕಿಲ್ಲ. ಲಂಗ-ದಾವಣಿಯಿಲ್ಲ, ಕಿರಿಗೆಯಿಲ್ಲ, ಲಂಗ-ಜಂಪರ್ ಇಲ್ಲ, ಉಡುಗೆ ಅವರಿವರ ಅನುಕೂಲಕ್ಕೆ - ಇಷ್ಟಕ್ಕೆ ಅಗತ್ಯ ಮಾರ್ಪಾಟು ಆಗುತ್ತಲೇ ಇರುತ್ತದೆ. ಇನ್ನು ಯುವಕರು ಆಯಾ ಸಮಯ(ಕಾಲ)ದ ಪ್ರಸಿದ್ಧರನ್ನು ಸಲೀಸಾಗಿ ಅನುಕರಿಸುತ್ತಾರೆ. ಒಂದು ಕಾಲಕ್ಕೆ ರಾಜಕುಮಾರ್ ಅಭಿನಯದ ಸಿನಿಮಾಗಳು ಪ್ರದರ್ಶಿತವಾದ ಮರುದಿನವೇ ರಾಜಕುಮಾರ್ ಅವರು ತೊಟ್ಟ ಶರ್ಟ್, ಟೀ ಶರ್ಟ್‌ಗಳ ವರ್ಣ ವಿನ್ಯಾಸಗಳ ಉಡುಪು ತೊಟ್ಟು ಚಿತ್ರಮಂದಿರದ ಮುಂದೆ ಸಾಲಿನಲ್ಲಿ ನಿಂತ ಹುಡುಗರನ್ನು ಕಾಣುತ್ತಿದ್ದೆವು. ಇವನ್ನೆಲ್ಲ ವರದಿ ಮಾಡಿದ್ದೂ ಉಂಟು. ಅಮಿತಾಭ್ ಕಟಿಂಗ್, ಕ್ರಿಕೆಟ್ ಪಟುಗಳ ಅನುಕರಣೆ... ಕಡೆಗೆ ಆಳುವ ವರ್ಗದ ಅನುಕರಣೆಯೂ ಗಾಂಧಿ ಟೋಪಿಯಿಂದ ಇವತ್ತಿನ ಕುಂಕುಮ ತಿಲಕ, ಕೊರಳಿಗೆ ಬಾವುಟ, ವರ್ಣದ ಶಲ್ಯಗಳು ಹೀಗೆ ಹಲವನ್ನು ಪಟ್ಟಿ ಮಾಡಬಹುದು.

ಶ್ರಮ ಒಂದು ಕಾಲದ ಮಹತ್ವದ, ಅತ್ಯಂತ ಬೆಲೆಯುಳ್ಳ, ಗೌರವದ ಸಂಗತಿಯಾಗಿತ್ತು. ಈ ಹೊತ್ತು ಶ್ರಮ ಸಂಸ್ಕೃತಿ ನಿಧಾನವಾಗಿ ಹಿಂದೆ ಸರಿಯುತ್ತಿದೆಯೆ ? ಶ್ರಮ ಮತ್ತೇನನ್ನೋ ಹೊರಗಿನದನ್ನು ಆಶ್ರಯಿಸುತ್ತಿದೆ. ಎತ್ತು, ನೇಗಿಲು, ಏತಗಳಿದ್ದ ಕಾಲದಲ್ಲಿ ಶ್ರಮ ಸ್ವತಂತ್ರವಾಗಿತ್ತು. ಅನುಕೂಲಕ್ಕೆಂದೇ ಬಂದ ಟ್ರ್ಯಾಕ್ಟರ್, ವಿದ್ಯುತ್,

ಗೊಬ್ಬರ ಎಲ್ಲವೂ ಅಂದು ನೀಡಿದ್ದ ಸಂತಸ, ಸಡಗರ ಇಂದು ಉಳಿಸಿಕೊಂಡಿಲ್ಲ, ವಿದ್ಯುತ್ ಇಲ್ಲ, ಡೀಸೆಲ್ ಇಲ್ಲ, ಎಲ್ಲಕ್ಕೂ ಗೋಗರೆಯುವ ಸ್ಥಿತಿ. ಇವಕ್ಕೆಲ್ಲ ಹಣ ಹೆಚ್ಚು ಬೇಕು, ಬೆಳೆ ಆ ಪ್ರಮಾಣದಲ್ಲಿ ಸಿಗುತ್ತಿಲ್ಲ, ಆರ್ಥಿಕ ಏರುಪೇರು. ಅದನ್ನೇ ಆಧರಿಸುವಂತಾದ ಶ್ರಮಿಕನನ್ನು ಆತ್ಮಹತ್ಯೆಯ ಕಡೆಗೆ ಅಥವಾ ರಿಯಲ್ ಎಸ್ಟೇಟ್ ದಂಧೆಗೂ ಇಳಿಸಿದೆ! ಹಳ್ಳಿಗನು ಈಗ ದಳ್ಳಾಳಿಯಂತಾಗುತ್ತಿದ್ದಾನೆ.

ಒಂದೊಮ್ಮೆ ಅತಿಥಿ, ಆದರ, ಉಪಚಾರದಂಥ ಕೊಳು-ಕೊಡೆಗಳು ಸುಖ ಕೊಡುತ್ತಿದ್ದವು. ಈಗ ಗೌರವ ಹಾಗಿರಲಿ ಮಾತನಾಡಿಸಿದರೆ ನನಗೇನು ಲಾಭ ಎಂಬ ಲೆಕ್ಕಾಚಾರ. ಯಾವುದೂ ಪ್ರೀತಿ-ವಿಶ್ವಾಸದ್ದಲ್ಲ. ಹಾಗೆ ತೋರಿಸಿಕೊಳ್ಳುವ ಕ್ರಿಯೆಯ ಹಿಂದೆ ಒಂದು ಲೆಕ್ಕಾಚಾರವಿದೆ.

ಒಂದು ಸಮಾಜದ ಸ್ವಾಸ್ಥ್ಯವನ್ನು ಗಮನದಲ್ಲಿಟ್ಟೇ ಆಗುತ್ತಿದ್ದ ಕೆಲಸಗಳು ಇಂದು ತಾನು, ಕೆಲವೊಮ್ಮೆ ತನ್ನವರನ್ನು ಸೇರಿಸಿಕೊಂಡು ಮಾತ್ರ ಆಗುತ್ತಿವೆ. ಇವತ್ತು ಮನುಷ್ಯ ಸಂಬಂಧವೂ ಒಂದು ಸರಕು. ತನ್ನ ಪ್ರತಿನಿಧಿಯನ್ನು ಆರಿಸಲು ಕೂಡ ಹಣ, ಹೆಂಡ, ಸೀರೆ, ಬಟ್ಟೆಗಳಿಗೆ ಮಾರಿಕೊಳ್ಳುತ್ತಿರುವ ಪ್ರಜೆಗೆ ಹಾಗೆ ಅಧಿಕಾರ ಪಡೆದವರಿಂದ ಏನು ಒಳ್ಳೆಯದು ಸಿಗಲು ಸಾಧ್ಯ? ಓಟನ್ನು ಕೊಂಡವನಿಗೆ ಜನಹಿತದ ಜವಾಬ್ದಾರಿ ಬರುವುದಾದರೂ ಹೇಗೆ? ಮಾರಿಕೊಂಡವನಿಗೆ ಕೇಳುವ ಹಕ್ಕಾದರೂ ಎಲ್ಲಿದೆ? ಸ್ವಾಭಿಮಾನ, ಸ್ವಾತಂತ್ರ್ಯ, ನೈತಿಕತೆ ಮೊದಲಾಗಿ ಎಲ್ಲವನ್ನೂ ಬಿಕರಿಗಿಟ್ಟ ಲೋಕದಲ್ಲಿ ಸಂಸ್ಕೃತಿಗೆ ಎಲ್ಲಿದೆ ಸ್ಥಾನ?

ನಿನ್ನೆಯದೆಲ್ಲ ಚೆನ್ನ ಎಂಬ ಹುಚ್ಚು ಹಟವಲ್ಲ, ಬದಲಾಗಿ ಬಂದದ್ದೆಲ್ಲ ಆರೋಗ್ಯಕರವಲ್ಲ ಎಂಬ ವಿಷಾದ. ಅರ್ಥವ್ಯವಸ್ಥೆಯ ಪಲ್ಲಟಗಳು ಸಾರ್ವಕಾಲಿಕ ಮೌಲ್ಯಗಳನ್ನೂ ಉಳಿಯಗೊಡುತ್ತಿಲ್ಲ ಎಂಬ ಆತಂಕ. ಇವತ್ತೂ ವಿಶಿಷ್ಟ ಸಾಧನೆ-ಸಾಧಕರೂ ಇದ್ದಾರೆ. ಆದರೆ ಸಾಧನೆಯ ಸ್ವರೂಪ ವಿಭಿನ್ನವಾಗುತ್ತಿದೆ. ಇದೊಂದು ಅನುಕರಣೀಯ ಮಾದರಿ ಅಂದುಕೊಳ್ಳಲಾಗದಂತೆ ಅವು ಮತ್ತಾವುದೋ ಬಿಕ್ಕಟ್ಟಿನಲ್ಲಿ, ಯಾರದೋ ಮರ್ಜಿಗೆ ಶ್ರಮ-ಪ್ರತಿಭೆಯನ್ನು ಕೊಟ್ಟುಕೊಳ್ಳುತ್ತಿವೆಯೆ?

ಒಂದು ಕಾಲಕ್ಕೆ ಸಂಪಾದನೆಗೆ ತುಂಬ ಗೌರವವಿತ್ತು. ಇಂದು ಅದರ ಅರ್ಥವೂ ಪಲ್ಲಟವಾಗಿದೆ. ಸುಲಭವೂ, ಶೀಘ್ರವೂ ಅನ್ನಿಸುವ ಹಾಗೆ ಅದರ ವ್ಯಾಪ್ತಿ ಬೆಳೆದಿದೆ. ಈ ಸುಲಭ, ಶೀಘ್ರ ಎಲ್ಲ ವರ್ಗಕ್ಕೂ ಅಲ್ಲ ಎಂಬ ಅರಿವಿನ ಜೊತೆಗೇ ಪ್ರಾಯಃ ಹಿಂದೆಂದೂ ಕಲ್ಪಿಸಿಯೂ ಇರದ ಒಂದು ಹೊಸ ವರ್ಗ ಬಂದಿದೆ ಎಂಬುದೂ ಗಮನಾರ್ಹ.

ಮಕ್ಕಳ ಆಸಕ್ತಿಯನ್ನು ಗಮನಿಸದೆ ಒತ್ತಾಯದಿಂದ ವೈದ್ಯಕೀಯ, ಇಂಜಿನಿಯರಿಂಗ್ ಎಂಬ ಕಲಿಕೆಗೆ ಅತಿಯಾದ ಮುಂದಾಲೋಚನೆಯಿಂದ ದಬ್ಬಿದ ಹೆತ್ತವರನೇಕರಿಗೆ ಇಂದು ನಿರಾಶೆಯಾಗುತ್ತಿದೆ. ಕೆಲವು ಹುದ್ದೆಗಳು ಆಕರ್ಷಣೆ ಕಳೆದುಕೊಂಡಿವೆ. ಸೂಕ್ತ ಹುದ್ದೆ, ಗೌರವ ಸಿಗದ ವೈದ್ಯೆ ಕಳ್ಳತನದಲ್ಲಿ ಬಸಿರಿಳಿಸುತ್ತಾಳೆ. ಕೊಂಚ ಅನುಕೂಲಸ್ಥೆಯಾದರೆ ಲಿಂಗ ಪತ್ತೆಮಾಡಿ ಹಣ ಗಳಿಸುವ ದಾರಿ ಕಂಡುಕೊಳ್ಳುತ್ತಾಳೆ. ಮೂರು ಸಾವಿರ ಸಂಬಳವೂ ಸಿಗದ ಇಂಜಿನಿಯರ್ ಭ್ರಷ್ಟನಾಗಿದ್ದಾನೆ. ಇಷ್ಟಕ್ಕೂ ಔಟ್ ಸೋರ್ಸಿಂಗ್, ಗುತ್ತಿಗೆಗಳ ಅಬ್ಬರದಲ್ಲಿ ಸ್ಥಿರವಾದ ಕೆಲಸತಾನೆ ಎಲ್ಲಿದೆ? ಪ್ರತಿಕ್ಷಣವೂ ಅಸ್ಥಿರತೆ, ಮುಳ್ಳಿನ ಮೇಲೆ ನಿಂತವನು ಕನಸು ಕಾಣಲೂ ಆಗದ ಸ್ಥಿತಿ! ಅಂತೇ ಈ ಹೊತ್ತಿನ ಆಕರ್ಷಣೆಯಾದ ಕಂಪ್ಯೂಟರ್ ಕಲಿಕೆಯ ಹಲವು ವಿಧಗಳಿಗೆ ಮಕ್ಕಳನ್ನು ತಳ್ಳಲಾಗುತ್ತಿದೆ. ಆಟವಾಡುವ ಮಗು ಈಗ ಲ್ಯಾಪ್‌ಟಾಪ್‌ನಲ್ಲೇ ಆಡುತ್ತಿದೆ. ಲಗೋರಿ, ಕಬಡ್ಡಿ, ಕುಂಟಾಬಿಲ್ಲೆ ಇತ್ಯಾದಿಗಳು ಹೇಳ ಹೆಸರಿಲ್ಲದಾಗಿವೆ.

ಕಲಿತು ಕೆಲಸ ಗಿಟ್ಟಿಸಿ ತಿಂಗಳಿಗೆ ಲಕ್ಷಕ್ಕೂ ಮೇಲೆ ಗಳಿಸುವವನಿಗೂ ಅದು ಯಾವ ಕ್ಷಣದಲ್ಲೂ ಕೈ ತಪ್ಪಬಹುದೆಂಬ ಆತಂಕ ತಪ್ಪಿದ್ದಲ್ಲ, ತನ್ನಪ್ಪ ಗಳಿಸಿದ ನೂರು, ಸಾವಿರಗಳ ಲೆಕ್ಕ ಅವನಿಗೆ ಅಪ್ರಯೋಜಕತನವಾಗಿ ಕಾಣುತ್ತದೆ. ಅಂಥ ಅಪ್ಪನ ಬಗ್ಗೆ ಗೌರವವೂ ಇಲ್ಲ! ತಿಂಗಳೆರಡು ತಿಂಗಳಿಗೆ ಒಂದೆಡೆ ನಿಲ್ಲದೆ ಆಫೀಸುಗಳಿಗೆ ಜಿಗಿಯುವುದು, ವಿದೇಶಕ್ಕೆ ಹಾರುವುದು. ಕೈಕಾಲು ಗಟ್ಟಿಯಿದ್ದರೆ ಬಾಣಂತನ, ಬೇಬಿ ಸಿಟ್ಟಿಂಗ್‌ಗೆ ಆದೀತೆಂದು ಆಗ-ಈಗ ಅಪ್ಪ-ಅಮ್ಮರನ್ನು ಕರೆಸಿಕೊಂಡಾರು. ಹೆತ್ತವರ ಕೈಕಾಲು ಬಿದ್ದರೆ ಅಪ್ಪ ಮಾಡಿದ ಇದ್ದಬದ್ದ ಆಸ್ತಿ ಮಾರಿ ಗಂಟು ಕೈಲಿಟ್ಟುಕೊಂಡು, ಹೆತ್ತವರನ್ನು ವೃದ್ಧಾಶ್ರಮದಲ್ಲಿ ಬಿಟ್ಟು ಓಡುವವರ ಸಂಖ್ಯೆ ಹೆಚ್ಚಾಗಿದೆಯಲ್ಲ! ಇದೂ ಸಂಸ್ಕೃತಿ !!

ಸಾಹಿತ್ಯದ ಇತ್ತೀಚಿನ ಒಲವು ಹೆಚ್ಚಾಗಿ ಕವಿತೆ-ಕತೆಯ ಸುತ್ತ ಹರಿದಿದೆ. ವಿಮರ್ಶೆ ಇದೆ; ಹೆಚ್ಚಿನವರಿಂದ ವಿಮರ್ಶೆಯ ನಿರಾಕರಣೆಯೂ ಆಗುತ್ತಿದೆ. ಯಾರು ಬೇಕಾದರೂ ಬರೆದು, ಪ್ರಕಾಶನ ಮಾಡಿಕೊಳ್ಳುವ ಪರಿಪಾಠ. ಮುಖ್ಯವಾಗಿ ಲೈಬ್ರರಿಗೆ ಸಬ್ಮಿಟ್ ಮಾಡುವ ಹೊತ್ತಿಗೆ ಹತ್ತು ಪುಸ್ತಕಗಳು, ಆಯ್ಕೆಯಾಗಿ ಆರ್ಡರ್ ಬಂದರೆ ಮಾತ್ರ ಒಂದೈನೂರು ಪ್ರತಿ ಅಚ್ಚು ಹಾಕಿಸುವ ವಿಚಿತ್ರ ದಂಧೆಯೂ ಪ್ರಾರಂಭವಾಗಿದೆ. ಈ ಪ್ರಕಾಶನ ಕ್ಷೇತ್ರಕ್ಕೆ ಕೈ ಹಾಕಿದರೆ ಎಂದೆಂದೂ ಮುಗಿಯದಷ್ಟು ಕಥೆ ಹೇಳಬೇಕು. ಸಾಹಿತ್ಯ ಹಿತವನ್ನು ಉಂಟುಮಾಡುವುದು ಕಡಿಮೆ ಯಾಗುತ್ತಿದೆ. ವ್ಯಾಪಾರವೇ ಪ್ರಧಾನ.



ಕೆಲವು ಪ್ರತಿಭಾವಂತರು ನಿರ್ಮಿಸುವ ಸಾಹಿತ್ಯದಲ್ಲಿ ಈಚೆಗೆ ಮಾಸ್ತಿ ಮತ್ತಿತರ ಹಿರಿಯರ ಕಾಲದಲ್ಲಿದ್ದ ನಾನು ಕಂಡದ್ದು, ನನ್ನ ಅನುಭವ ಎಂಬ ನಿರೂಪಣೆ ಈಗ ಹಿಂದೆ ಸರಿಯುತ್ತಿದೆ. ನೋಡಿದ ಜಗತ್ತಿಗಿಂತ ಹೆಚ್ಚಿನ ರೋಚಕತೆಯನ್ನು ಸೃಷ್ಟಿಸುವ ರೀತಿ ಕಾಣುತ್ತಿದ್ದೇವೆ. ತ.ರಾ.ಸು. ಮೊದಲಾದವರ ಕಾಲದ ಭಾವನೆಗಳಿಗೆ ಒತ್ತುಕೊಡುವ ಬಗೆಗಿಂತ ಭಿನ್ನ. ಸುದ್ದಿಯಾಗಲೀ, ಘಟನೆಯ ವಿವರಗಳಾಗಲೀ ಪತ್ರಿಕೆಗಳಲ್ಲಿ ಬರುವಾಗ ಅಪರಾಧ ನಡೆಯುತ್ತಿದ್ದಾಗ ಬರಹಗಾರ ಎದುರಿಗೇ ನಿಂತು ನೋಡಿದನೇ ಎಂಬ ಹಾಗೆ ವಿವರಗಳ ವೈಭವ, ಶಬ್ದಗಳ ಚೆಲ್ಲಾಟ! ಈಚೆಗೆ ಇವರೇ ಅಪರಾಧ ಮಾಡಿಸಿ ಅದನ್ನು ಚಿತ್ರೀಕರಿಸುವ ವಿನೂತನ ವಿಧಾನವನ್ನು ರೂಢಿಸಿಕೊಳ್ಳುತ್ತಿದ್ದಾರೆ ವಾಹಿನಿಯ ಟಿಆರ್‌ಪಿಗಾಗಿ!

ಈ ದಿನಗಳಲ್ಲಿ ವಾಕ್ಯರಚನೆಯಲ್ಲೇ ವಿಪರೀತ ಬದಲಾವಣೆ ಕಾಣುತ್ತಿದೆ. ತುಂಡು ವಾಕ್ಯಗಳು. ಹಿಂದೆಯೂ ತುಂಡು ವಾಕ್ಯಗಳನ್ನು ಕೊಟ್ಟ ಹಿರಿಯರಿದ್ದಾರೆ. ಆದರೆ ಅವು ಅವಕ್ಕವೇ ಪೂರ್ಣವೂ ಆಗಿರುತ್ತಿದ್ದವು. ಈಗ ವಾಹಿನಿಗಳಲ್ಲಿ ಬರುವ ಕೆಳ ಸಾಲುಗಳು ವಾಕ್ಯವನ್ನು ಪೂರ್ಣ ಮಾಡುವುದಿಲ್ಲ. ಒಂದು ಅರ್ಧವಾಕ್ಯ ೪-೫ ಭಾಗಗಳಲ್ಲಿ ಸ್ಕ್ರೋಲ್ ಆಗುತ್ತಿರುತ್ತದೆ. ಮತ್ತು ಅವು ನೋಡುವ-ಓದುವ ಮನಸ್ಸನ್ನು ಉತ್ಕಂಠೆಗೆ ಕೊಂಡೊಯ್ಯುತ್ತಿರುತ್ತವೆ. ಈ ಎಲ್ಲ ಬದಲಾವಣೆಗಳು ಕ್ರಮೇಣ ಆದವು ಎನ್ನುವುದಕ್ಕಿಂತ ಒಮ್ಮೆಲೇ ಮಗುಚಿಹಾಕಿದಂತೆ ಭಾಸವಾಗುತ್ತಿವೆ.

ಕಳೆದ ದಶಕದಲ್ಲಿ ನಾವು 'ಬೆಂಗಳೂರು ದರ್ಶನ' ಸಂಪುಟಗಳನ್ನು ಉದಯಭಾನು ಕಲಾಸಂಘಕ್ಕಾಗಿ ಸಂಪಾದಿಸಿದ್ದೆವು. ಈಗ ಆ ಬೆಂಗಳೂರೇ ಇಲ್ಲ. ಇಷ್ಟು ಬೇಗ ಇಡೀ ನಗರವೇ ತಿರುವಿಹಾಕಿದಂತೆ ಬದಲಾಗಿದೆ. ಅದರ ರಸ್ತೆ, ಸಾರಿಗೆ, ಉದ್ಯಾನ, ಉದ್ಯೋಗ, ಕಾರ್ಖಾನೆ, ಜನಸಂಖ್ಯೆ, ವಿದ್ಯಾಸಂಸ್ಥೆಗಳು, ಮಾರುಕಟ್ಟೆ, ಸಾಮಾಜಿಕ ಸಂಸ್ಥೆಗಳು, ಬದುಕುವ ವಿಧಾನ, ಪತ್ರಿಕೋದ್ಯಮ, ಸಾಂಸ್ಕೃತಿಕ ಸಂಗತಿಗಳು, ಆಡಳಿತ ವಿಧಾನ ಎಲ್ಲವೂ ತನ್ನ ಸ್ವರೂಪದಲ್ಲಿ ಮೂಲದ ಸೋಂಕನ್ನು ಉಳಿಸಿಕೊಂಡಿಲ್ಲವೋ ಎಂಬಷ್ಟು ಬದಲಾಗಿವೆ!

ಪತ್ರಿಕೆಗಳು ಸುದ್ದಿ ಬರಹಗಳನ್ನು ಪ್ಯಾಕೇಜ್ ಡೀಲ್ ಮಾಡಿಕೊಂಡಿವೆ. ಅದನ್ನು ರಾಜಾರೋಷವಾಗಿ ಸಮರ್ಥಿಸಿಕೊಳ್ಳುವ ಮ್ಯಾನೇಜ್‌ಮೆಂಟ್‌ಗಳು! ಸುಖ, ಐಷಾರಾಮಿ ಜೀವನ, ಹಣಗಳಿಕೆ ಮುಖ್ಯವಾಗುತ್ತ ಹೋದಂತೆ ಗಳಿಸಿದ್ದನ್ನು ವೆಚ್ಚ ಮಾಡುವ ದಾರಿಯೂ ಸಿಗದ ಕೆಲವು ಪೀಳಿಗೆಗಳಿಗೆಂದೇ ಸಿದ್ಧವಾಗಿರುವ ವಿದೇಶೀ ಹೊಸ ಮಾರುಕಟ್ಟೆ ದಿನ ದಿನವೂ ಹೊಸ ಪೋಷಾಕಿನಲ್ಲಿ ಆಕರ್ಷಿಸುತ್ತ ಈ ದೇಶದ ಸಂಪತ್ತನ್ನು ಲೂಟಿ ಮಾಡುತ್ತಿದೆ.

ಆರ್ಥಿಕ ಕುಸಿತ, ಹೆಚ್ಚಿದ ಭ್ರಷ್ಟಾಚಾರಗಳು ದೇಶ, ಸಮಾಜ, ಜನ ಎಂಬ ಅಭಿಮಾನ, ಭಯ, ಗೌರವಗಳಿಂದ ಆಳುವವರನ್ನು ದೂರ ಕೊಂಡೊಯ್ದಿವೆ. ಅವರೀಗ ಹೊರಲಾರ ದಷ್ಟು ವಿದೇಶಿ ಸಾಲ ತಂದು, ಸಾಲದ ಹಂಗಿಗೆ ಬಿದ್ದು ಬಂಡವಾಳಶಾಹಿ ರಾಷ್ಟ್ರಗಳಿಗೆ ಗುಲಾಮರಾಗುತ್ತಿರುವುದು, ಜನತೆಯ ಹಿತ ಮರೆತು ಬೆಲೆಯೇರಿಕೆಯಿಂದಾರಂಭಿಸಿ ಅನೇಕ ತಪ್ಪುಗಳ ಸರಮಾಲೆಯನ್ನೇ ಕೊರಳಿಗೆ ಹಾಕಿಕೊಳ್ಳುತ್ತಿದ್ದಾರೆ. ಸರಿಯಾದ ನಾಯಕತ್ವವಿಲ್ಲದೆ ಜನತೆ ಪ್ರತಿಕ್ಷಣ ಪತರಗೊಳ್ಳುವಂಥ ಸ್ಥಿತಿಯಿರುವಾಗ ಈ ಸಂಸ್ಕೃತಿಯ ಪಲ್ಲಟದಂಥ ವಿಪರ್ಯಾಸಗಳು ವಿಷವಾಹಿನಿಗಳಂತೆ ಬದುಕಿನೊಳಗೆ ಸೇರಿ ಹೋಗುತ್ತಿವೆಯೆ? ಕುಟುಂಬ ವ್ಯವಸ್ಥೆ, ಅದರಲ್ಲೂ ವೈವಾಹಿಕ ಬದುಕನ್ನು ಪಲ್ಲಟ ಗೊಳಿಸಿರುವ ಬಗೆಯಂತೂ ಅತ್ಯಂತ ಅಪಾಯಕಾರೀ ಹಂತವನ್ನು ತಲುಪಿದೆ. ಜನಹಿತಕ್ಕಾಗಿ ತರಲಾದ ಅನೇಕ ಕಾನೂನು, ಸವಲತ್ತುಗಳು ದುರುಪಯೋಗವಾಗುತ್ತಿವೆ. ನ್ಯಾಯವಾದಿಯೊಬ್ಬರು ಅತ್ಯಂತ ನೊಂದುಕೊಂಡು ಹೇಳಿದ ಪ್ರಸಂಗವೊಂದು ಹೀಗಿದೆ:

ಗಂಡ-ಹೆಂಡತಿ ವಿಚ್ಛೇದನಕ್ಕೆ ಅರ್ಜಿ ಹಾಕಿದರು. ಮದುವೆಯಾಗಿ ಕೆಲವು ತಿಂಗಳುಗಳೂ ಆಗಿರಲಿಲ್ಲ. ಆ ಮದುವೆಗಳೂ ಫೇಸ್‌ಬುಕ್, ಚಾಟಿಂಗ್‌ಗಳ ಪರಿಚಯದ ಪ್ರೀತಿ-ಪ್ರೇಮದಿಂದಲೇ ಆದಂಥವು. ಈಗೆಲ್ಲ ಹಾಲಲ್ಲಿ ಹುಡುಗ, ಪಕ್ಕದ ಮನೇಲಿ ಹುಡುಗಿ ಲ್ಯಾಪ್‌ಟಾಪಲ್ಲಿ ಮದುವೆ ನಿರ್ಧಾರ ಆಗುತ್ತೆ. ವಿಚ್ಛೇದನದ ಕಾರಣವಂತೂ ತೀರಾ ಸಾಮಾನ್ಯವಾದದ್ದು. ಕೇಳಿದರೆ ನಕ್ಕುಬಿಡುವಂಥದ್ದು. ಆದರೆ ಅವರಿಗೆ ಒಟ್ಟಿಗೆ ಬದುಕಲು ಬೇಡವಾಗಿತ್ತು! ಅಂಥದೇ ಇನ್ನೊಂದು ಜೋಡಿ. ಅಂತೂ ಎರಡೂ ಜೋಡಿಗೂ ವಿಚ್ಛೇದನ ಸಿಕ್ಕಿತು. ಹೊರಟಾಗ ಕೋರ್ಟಿನಲ್ಲಷ್ಟೇ

## ಪಾರಿವಾಳ

ನಿದ್ರಿಸಲು ಬಿಡುವುದಿಲ್ಲ ಪಾಪಿಗಳು
ಚಿರನಿದ್ರೆಗೆ ನೂಕುತ್ತಾರೆ
ಎಲ್ಲ ಮರೆಯಲು

ಬಿಡುವುದಿಲ್ಲ ಕ್ರೂರಿಗಳು
ಕನಸುಗಳಲ್ಲೂ ಅವರಿಗೆ
ಕೆಂಪು ಬಣ್ಣದ ಕಾರಂಜಿ

ಅಲೆಗಳಿಗೆ ಗೊತ್ತಿಲ್ಲ ಅವರ್‍ಯಾರೆಂದು
ತನ್ನ ಪಾಡಿಗೆ ತಾನು ನಗರಕ್ಕೆ
ಪ್ರೀತಿಯ ಮುತ್ತಿಕ್ಕುತ್ತದೆ

ಪಾರಿವಾಳಗಳಿಗೆ ಗೊತ್ತಿಲ್ಲ
ಪಾಪ ತನ್ನಂತೆ
ಬಂದವರಿಗೆಲ್ಲ
ಪ್ರೀತಿ ಸಾರುತ್ತದೆ.



– ಕಮಲಂ ಅರಸು

ಪರಿಚಯವಾದ ಆ ಜೋಡಿ ಗಂಡು-ಹೆಣ್ಣುಗಳು ಅದಲುಬದಲಾಗಿ ಜೊತೆಯಾಗಿ ಹೋದವು. ಇದನ್ನು ನ್ಯಾಯವಾದಿ ಬೆರಗಾಗಿ ನೋಡಿದ್ದರಂತೆ. ಅವರು ಆಗಲೇ ಊಹಿಸಿದ್ದಂತೆ ೪-೫ ತಿಂಗಳಲ್ಲೇ ಮತ್ತೆ ಅದೇ ಜೋಡಿಗಳು ವಿಚ್ಛೇದನಗೊಂಡವು. ಇದೆಂಥ ದಾಂಪತ್ಯ ? ಒಪ್ಪಿಕೊಂಡಾಗ ಒಪ್ಪಂದಗಳೂ ಇರಬೇಕೆಂಬ ತಿಳುವಳಿಕೆ ಇರುವುದಿಲ್ಲವೆ ? ವಿದ್ಯಾಭ್ಯಾಸ ಏನನ್ನು ಕಲಿಸಿತು ? ವಿಚ್ಛೇದನ ಸುಲಭವಾಗಿದೆ. ಮಹಿಳೆಯ ಸುರಕ್ಷತೆಗಾಗಿ ಸದುದ್ದೇಶದಿಂದ, ಅದಕ್ಕಾಗಿ ಹೋರಾಟ ಮಾಡಿದ ಮಹಿಳಾ ಹಕ್ಕುಗಳ ಹೋರಾಟಗಾರ್ತಿಯರ ಶ್ರಮದ ಫಲವಾಗಿ ಜಾರಿಗೆ ಬಂದ ಕಾನೂನುಗಳು ಮಹಿಳೆಯ ಹಿತ ಕಾಯುವುದಕ್ಕಿಂತ ಹೆಚ್ಚಾಗಿ ದುರುಪಯೋಗವೇ ಆಗುತ್ತಿವೆಯೆಂಬುದು ಸಂಕಟ ತರುತ್ತದೆ. ಮೂರು ತಿಂಗಳಲ್ಲಿ ೧೮,೦೦೦ ವಿಚ್ಛೇದನಗಳಾಗಿವೆ ಎಂಬ ದಾಖಲೆ ಕೇಳಿದರೆ ಬೆಚ್ಚಿಬೀಳುವಂತಾಗುತ್ತಿದೆ. ಅದೇ ಹೊತ್ತಿನಲ್ಲಿ ನಿಜವಾಗಿಯೂ ನ್ಯಾಯಬೇಕಿದ್ದ ಮಹಿಳೆಗೆ ನ್ಯಾಯ ಸಿಗುತ್ತದೆಯೆ ? ಬಿಡುಗಡೆ, ಬದುಕು ದಕ್ಕೀತೆ ?

ಇಂಥ ದಂಪತಿಗಳ, ಹಲವು ಐಷಾರಾಮೀ ಬದುಕಿಗೆ ಒಗ್ಗಿದ ಶ್ರೀಮಂತರ ಮಕ್ಕಳು ಮಾದಕವಸ್ತು ಸೇವನೆ, ಸ್ವೈರ ವರ್ತನೆ, ಮುಕ್ತತೆ, ಸ್ತ್ರೀ ಲೋಲುಪತೆಗೆ ಬಲಿಯಾಗುತ್ತಿದ್ದಾರೆ. ಸ್ತ್ರೀ ಸಂಗವಂತೂ ಅವರಿಗೆ ಕೇವಲ ಸಹಜ. ಅತ್ಯಾಚಾರ, ಕ್ರೂರಹಿಂಸೆ, ಕೊಲೆಗಳಾದಾಗಲೇ ತೃಪ್ತರಾಗುವ ಒಂದು ವರ್ಗವೇ ಇದೆ ! ಒಂದು ಕಡೆ ಸ್ತ್ರೀ ಭ್ರೂಣ ಹತ್ಯೆ ಸ್ತ್ರೀ ಸಂತತಿಯನ್ನೇ ಕುಗ್ಗಿಸಿದ್ದರೆ, ಚಿಕ್ಕಪ್ರಾಯದ ಬಾಲೆಯರನ್ನು ಬಲವಂತ ಸಂಭೋಗಕ್ಕೆ ಒಳಪಡಿಸುವುದು ಹೆಚ್ಚಿದೆ. ಅವೆಲ್ಲದರ ಹಿಂದೆ ದೃಶ್ಯಮಾಧ್ಯಮಗಳು ಕೊಡುವ ಪ್ರಚೋದನಕಾರೀ ಚಿತ್ರಿಕೆಗಳು, ಪತ್ರಿಕೆಗಳ ರೋಚಕ ವಿವರಗಳು ಒಂದು ಕಾರಣವಾದರೆ ಮನುಷ್ಯ ಅಸಹನೆ, ಅತೃಪ್ತಿ, ವಿಕೃತಿಯನ್ನು ತುಂಬಿಕೊಂಡು ಪ್ರವರ್ತಿಸುತ್ತಿರುವುದೂ ಮುಖ್ಯ. ಈಗೆಲ್ಲ ಪ್ರೀತಿ-ಪ್ರೇಮ ಕಷ್ಟದಿಂದ, ಕಾದು, ಒಲಿಸಿ ಪಡೆಯುವಂಥದ್ದಲ್ಲ, ಪ್ರೀತ್ಸೇ ಅಂತಾರೆ, ಒಲ್ಲೆ ಅಂದರೆ ಆ್ಯಸಿಡ್ ಹಾಕ್ತಾರೆ; ಕೊಲೇನೂ ಮಾಡ್ತಾರೆ. ಹಾಗೊಮ್ಮೆ ಒಲಿದು ಮದುವೆಯಾದವರಿಗೆ ಬಹಳ ಬೇಗ ಹೆಂಡತಿಯ ಬಗ್ಗೆ ಸಂಶಯ. ಕೊಲೆ ಮಾಡುವುದೊಂದೇ ಪರಿಹಾರ.

ಜಾತಿಯ ಪ್ರತಿಷ್ಠೆಯಂತೂ ವಿಶೇಷವಾಗಿ ಬೆಳೆದಿದೆ. ಮೀಸಲಾತಿ ಇತ್ಯಾದಿ ಸವಲತ್ತುಗಳ ಹಿನ್ನೆಲೆಯಲ್ಲಿ ಮುಂದುವರೆದವರೂ ಹಿಂದುಳಿದವರಾಗಲು ಸಂಕೋಚಪಡುವುದಿಲ್ಲ, ಈ ವಿವರಗಳಿಗೆ ಹೋದರೆ ಅದೊಂದು ಬೃಹತ್ಕಥೆಯೇ !

ಅಂತರ್ಜಾತೀಯ ವಿವಾಹ ಸಹ ಈಗ ವಿಚಿತ್ರ ಸ್ವರೂಪ ಪಡೆದುಕೊಳ್ಳುತ್ತಿದೆ. ಹಿಂದೆ ವಿರೋಧ ಗಳಿದ್ದರೂ ಇವತ್ತಿನಂತಿರಲಿಲ್ಲ, ದೂರಮಾಡಿದರೂ ಹಿರಿಯರು ಮೊಮ್ಮಕ್ಕಳಾದ ಮೇಲಾದರೂ ಹತ್ತಿರ ಸೇರಿಸುತ್ತಿದ್ದರು. ದೂರ ಇಟ್ಟರೂ ಅವರ ತಂಟೆಗೆ ಬರುತ್ತಿರಲಿಲ್ಲ, ಈಗ ಮರ್ಯಾದಾ ಹತ್ಯೆಯಂಥ ಪರಿಹಾರ ಕಂಡುಕೊಂಡಿದ್ದಾರೆ. ಇವೆಲ್ಲ ಯಾವ ಕಾರಣಕ್ಕೆ ? ಯಾವ ಜಾತಿ, ಯಾವ ಜಾತಿಯಲ್ಲಿ ವಿವಾಹ ವಾದರೆ ಯಾವ ಜಾತಿಗೆ ಸೇರ್ತಾರೆ ? ಸವಲತ್ತಿಗೆ ಧಕ್ಕೆ ಉಂಟಾಗುತ್ತೋ ಎಂಬುದು ಯೋಚಿಸಬೇಕಾದ ಸಂಗತಿ. ಈ ಎಲ್ಲ ಸಾವುಗಳ ಹಿಂದೆ ಕಾಂಚಾಣದ ನೃತ್ಯವೇ ಇದೆ. ಹೇಳಿದಷ್ಟೂ ಬೆಳೆಯುವ ಈ ಸಂಗತಿಗಳ ಜೊತೆಗೇ ನಮ್ಮೆದುರು ಇನ್ನೊಂದು ವಿಶೇಷವಿದೆ. ಕಣ್ಮರೆಯಾಗಿ ಹೋದ ಸಂಸ್ಕೃತಿ ಇಂದು ಐಷಾರಾಮಿ ಪ್ರದೇಶಗಳ ಫ್ಯಾಶನ್ ಆಗಿ ಆಗೀಗ ಕಾಣಿಸುತ್ತದೆ. ಪಂಚತಾರಾ ಹೊಟೇಲಿನಲ್ಲಿ ಮಣ್ಣಿನ ಗಡಿಗೇಲಿ ಪಲಾವ್, ಬಿರಿಯಾನಿ ಕೊಟ್ಟು ನಾಲ್ಕರಷ್ಟು ವಸೂಲು ಮಾಡ್ತಾರೆ. ಅಂಗಳದ ಅಲಂಕಾರದಲ್ಲಿ ಬಂಡಿ ಚಕ್ರ, ನೊಗ, ಜೋಡೆತ್ತಿನ ಕೆತ್ತಿದ ಶಿಲ್ಪ, ಗಾಜಿನ ಕೊಳವೆಗಳ ತೋರಣ ಇತ್ಯಾದಿ ಕಾಣುತ್ತೇವೆ.

ಇನ್ನೊಂದು ವರ್ಗವಿದೆ ಆ ದಿನಗಳನ್ನು ನೆನೆದು ಬದಲಾಯಿತೇ ಎಂದು ಹಳಹಳಿಸುತ್ತಲೇ ಹೊಸ ಸಂಸ್ಕೃತಿಯಲ್ಲಿ ಬದುಕುವವರದು. ಅವರಿಗೆ ತೃಪ್ತಿಯಾಗಲೆಂದೇ ಹಳ್ಳಿ ತಿಂಡಿ, ನಮ್ಮೂರ ಊಟ, ಅಜ್ಜಿ ಮನೆ, ಬಾಳೆ ಎಲೆ ಊಟ, ಮುದ್ದೆ, ಉಪ್ಪೆಸರು, ಜೋಳದ ರೊಟ್ಟಿ, ರಾಗಿದೋಸೆ, ಗಸಗಸೆ ಪಾಯಸ, ಪಡ್ಡು, ಹಾಲುಬಾಯಿ, ಒತ್ತುಶಾವಿಗೆ ಹೀಗೆ ಥರಾವರಿ 'ನಾಟಿ' ಮಾದರಿಗಳು ಸಿಗುತ್ತಿವೆ ! ಇನ್ನು ಪೆಸ್ಟಿಸೈಡ್ಸ್ ಹಾಕದೆ ಬೆಳೆದ ಹಣ್ಣು, ತರಕಾರಿ, ಮೊಳಕೆ ಕಾಳು ಇತ್ಯಾದಿಗಳ ಮೇಳಗಳು, ಕರಕುಶಲ ವಸ್ತುಗಳ ಮೇಳಗಳು, ಫ್ಯಾಶನ್ ಶೋನಲ್ಲಿ ರ್‍ಯಾಂಪ್‌ಗರ್ಲ್‌ಗೆ ಲಂಬಾಣಿ ಕಾಸ್ಟ್ಯೂಮ್ ಹೀಗೆ ಪಟ್ಟಿ ಮಾಡುತ್ತಲೇ ಹೋಗಬಹುದು. ಇವು ಒಂದು ವರ್ಗಕ್ಕೆ ಕೊಂಚ ಸಂಸ್ಕೃತಿ ಅಂತ ಪ್ರಿಯವಾದರೂ ಇದರ ಸೂಕ್ಷ್ಮ ಗ್ರಹಿಸಿದ ಬಂಡವಾಳಶಾಹಿ ಇದನ್ನು ಸರಕಾಗಿ ಮಾರ್ಪಡಿಸಿ ಲಾಭ ಮಾಡಿಕೊಳ್ಳುತ್ತಿದೆ !

ಆರ್ಥಿಕ ಪಲ್ಲಟ, ಪ್ರಪಂಚವೇ ನಡು ಮನೆಗೆ ನುಸುಳಿದ್ದು, ಆಕ್ರಮಿಸಬಯಸುವವರು ಒಡ್ಡುತ್ತಿರುವ ಆಮಿಷಗಳು ಎಲ್ಲವೂ ಮಾರಾಟ, ಹಣಗಳಿಕೆಯ ನೆಲೆಗೆ ಬಂದುಬಿಟ್ಟಿವೆ.

ಈ ಮಾದರಿಗಳು ನೇರವಾಗಿ ಕಲೆಯ ಲೋಕವನ್ನು ಪ್ರವೇಶಿಸಿವೆ. ಚಿತ್ರಕಲೆ, ಸಂಗೀತ, ನೃತ್ಯ ಇತ್ಯಾದಿ ಹಲವು ಕ್ಷೇತ್ರಗಳಲ್ಲಾಗಿರುವ ಪಲ್ಲಟ ಗಳು ತಂದಿರುವ ಸನ್ನಿವೇಶ ನಮ್ಮ ಅಸ್ತಿತ್ವವನ್ನೇ ಹುಡುಕುವಂತಾಗಿದೆ. ಇವೆಲ್ಲದರಿಂದ ಹೊರತಾಗಿ ಉಳಿಯಬಹುದಾಗಿದ್ದ, ಉಳಿದುಬಂದ ರಂಗಭೂಮಿಯೂ ನಿಧನಿಧಾನವಾಗಿ ಪಲ್ಲಟಗಳನ್ನೇ ಅಪ್ಪಿಕೊಳ್ಳುತ್ತ, ಔಟ್ ಸೋರ್ಸಿಂಗ್ ಜಾಡಿಗೆ ಸಾಗಿದೆ! ಚಲನಚಿತ್ರಗಳೂ ತುಂಬ ತೆಳುವಾಗ್ತಿವೆ. ಹಿಂದಿನ ಹಾಗೆ ಒಂದು ಕತೆಯನ್ನು ಹೇಳುವ ಅಗತ್ಯವಿದ್ದಂತಿಲ್ಲ, ಕತೆ, ಆ ಮೂಲಕ ಒಂದು ವಿಚಾರ, ಆದರ್ಶ, ಸಂದೇಶದಂಥದ್ದು ಈಗ ಇಲ್ಲ, ಈಗಿನ ಕಥನ ಕ್ರಮ ಬದಲಾಗಿದೆ!

ವಿಡಿಯೋ ಅಥವಾ ಡಿಜಿಟಲ್ ಕ್ರಾಂತಿಯ ನಂತರ ಪ್ರಾರಂಭ ವಾಗಿರುವ ಕಥನ ವಿಧಾನ ಪುಟ್ಟ ಪುಟ್ಟ ಚಿತ್ರಿಕೆಗಳಾಗಿ ಬದಲಾಗಿವೆ. ಇವೆಲ್ಲದರ ಹೆಚ್ಚಿನ ವಿವರ ಇಲ್ಲಿ ಅಗತ್ಯವಿಲ್ಲ. ಬದಲಾವಣೆ ಕಣ್ಣೆದುರೇ ಇದೆ ! ಬದಲಾವಣೆ ಸಹಜ ಅಂತಾಗಬೇಕು. ಆದರೆ ಅದರ ಹಿಂದಿನ ಆಶಯ ಕಲೆ- ಸಂಸ್ಕೃತಿಯನ್ನು ಬೆಳೆಸುವ ದಿಕ್ಕಿನಲ್ಲಿರಬೇಕು. ಆದರೆ ಈಗ ಆಗುತ್ತಿರುವ ಪಲ್ಲಟ ಆರೋಗ್ಯವಂತವಾಗಿಲ್ಲವೆಂಬುದೇ ವಿಷಾದದ ಸಂಗತಿ. ಪತ್ರಿಕೆಯೊಂದರ ಅಂಕಣದಲ್ಲಿ ತರುಣ ಲೇಖಕ, ಆರ್ಕಿಟೆಕ್ಟ್, ಆಧುನಿಕತೆಯನ್ನು ಚೆನ್ನಾಗಿ ಬಲ್ಲ ನಾಗರಾಜ ವಸ್ತಾರೆ ಪೇಜರ್‌ನಿಂದಾರಂಭಿಸಿ ಇವತ್ತಿನ ಏರ್‌ಟೆಲ್, ಸ್ಪೈಸ್, ಬ್ರಾಂಡುಗಳು, ಪಿಜ್ಞಾ ಹಟ್‌ಗಳು, ಕಾಫಿಡೇಗಳು, ಮೆಕ್‌ಡೊನಾಲ್ಡ್‌ಗಳು, ಗಾಜಿನ ಬಾಗಿಲುಗಳು, ಬಿಗ್ ಬಜ್ಞಾರ್‌ಗಳು, ಫುಡ್‌ವರ್ಲ್ಡ್‌ಗಳು ಎಲ್ಲವೂ ಹೇಗೆ ಬೀದಿಗೂ, ಒಳಗಿಗೂ ನಡುವಿನ ಗೆರೆ ಕಡಿದಾಗಿಸಿದವೆಂದು ವಿವರಿಸಿದ್ದರು. ವೀಕೆಂಡ್ ಶಾಪಿಂಗ್‌ಗಳ ಬಗ್ಗೆ, ಒಬ್ಬ ಆರ್ಕಿಟೆಕ್ಟ್ ಆಗಿ ಈಗಿನ ಕಟ್ಟಡ ವಿನ್ಯಾಸಗಳು ಹೇಗೆ, ಏಕೆ ವಿನ್ಯಾಸಗೊಳ್ತಾವೆ ಎಂಬುದನ್ನು ಹೇಳಿದ್ದರು. ಇನ್ನೇನು ಬಂದು ಕೂರಲಿರುವ ಎಫ್.ಡಿ.ಐ. ಒಪ್ಪಂದದಂತೆ ವಿದೇಶೀ ಹೂಡಿಕೆಯ ಗೂಡಂಗಡಿಗಳು ತರಬಹುದಾದ ಪಲ್ಲಟಗಳನ್ನೂ ಕಲ್ಪಿಸಿ, ಎಂಥ ಬದಲಾವಣೆ ಆಗಬಹುದೆಂದು ಹೌಹಾರಿದ್ದರು. ನಮ್ಮ ಮಾತಿನ ಶೈಲಿ, ಮಕ್ಕಳ ಕಲಿಕೆ, ಆಸಕ್ತಿಗಳು, ಊಟ, ಉಡುಗೆ, ನಿತ್ಯದ ಬದುಕಿನ ಮೇಲೆ ಆಗಿರುವ ಪರಿಣಾಮಗಳು ಎಲ್ಲವೂ ಎತ್ತ ಸಾಗಿವೆ. ಹೇಳದೇ ಉಳಿದದ್ದೇ ಬಹಳಷ್ಟು. ನಾವು ಯೋಚಿಸಿ ಮುನ್ನಡೆಯ ಬೇಕಾದ ಹೊತ್ತಿನಲ್ಲಿ ಅರೆ ನಿದ್ರಾವಸ್ಥೆಯ ಮಂಪರು ಕವಿದಿದೆಯೇಕೆ ? ಯೋಚಿಸುವ ಹಂತಕ್ಕೆ ಬರುವಷ್ಟರಲ್ಲಿ ಮತ್ತೊಂದು, ಮಗುದೊಂದರಂತೆ ಮೇಲಿಂದ ಮೇಲೆ ಹೊಸ ಹೊಸ ಬದಲಾವಣೆಗಳು, ಸಮಸ್ಯೆಗಳು, ಆಮಿಷಗಳು, ಆಕರ್ಷಣೆಗಳು ಅಪ್ಪಳಿಸುತ್ತಿವೆ. ಇದು ನಮಗೆ ಏನನ್ನು ಕಟ್ಟಿಕೊಡಲಿದೆ ಎಂಬುದೇ ಒಂದು ಉತ್ತರವಿಲ್ಲದ ಪ್ರಶ್ನೆ.

ಕಳೆದು ಹೋಗುತ್ತಿರುವ ನಮ್ಮ ಸಂಸ್ಕೃತಿ, ನಮ್ಮತನವನ್ನು ನೆನೆದು ಕೊಳ್ಳುವುದು, ಬರುವುದನ್ನು ಎದುರಿಸಲು ಸಿದ್ಧರಾಗುತ್ತಲೇ ಏನಾದರೂ ಉಳಿಸಿಡುವ ಪ್ರಯತ್ನ ಮಾಡುವುದು ನಮ್ಮ ಮುಂದಿರುವ ಸತ್ಯ, ಸವಾಲು.

ಡಾ॥ ವಿಜಯಾ
ಪತ್ರಕರ್ತರು, ನಂ. ೧೫೧, ೩ನೇ ಮುಖ್ಯರಸ್ತೆ, ಹೊಸ ಬಿ.ಡಿ.ಎ. ಲೇಔಟ್, ಆವಲಹಳ್ಳಿ
ಬನಶಂಕರಿ ೩ನೇ ಹಂತ, ಬೆಂಗಳೂರು – ೫೬೦ ೦೮೫

# ದೇವರ ನಾಲಿಗೆಯಲ್ಲಿ ಮುಳ್ಳು ಮುರಿದಿದೆ



ನೆಲ ನುಡಿದ ಕೆಂಡದ ಮಾತುಗಳ ಮೈಮೇಲೆ ನಿಂತು
ನನ್ನನ್ನು ನಾನು ಪರೀಕ್ಷೆ ಮಾಡಿಕೊಳ್ಳಬೇಕಿದೆ
ನಸುಕಿನ ಸೂರ್ಯನ ಹಣ್ಣೆಂದು ತಿನ್ನಲು ಹಾರಿದ ಬಾಲಹನುಮನ ಬೆನ್ನಿಗೆ
ಅಡರಿಯೂ ಸುಡದಿರುವ ಸಾಹಸವ ಮಾಡಲೇಬೇಕಿದೆ.

✳ ✳ ✳

ನೆಲದ ಮೇಲಿನ ಬಾಸುಂಡೆಗಳ ದಾರಿ ಮಾಡಿಕೊಂಡು ನಡೆವ ಜನರ ಜತೆ ನಾನು ನಡೆದಿದ್ದೇನೆ
ಕಾಲುಗಳ ಬೆಂಕಿ ಜಳಕ್ಕೆ ಹಿಡಿದು ನೆಲದ ಮೈಗೆ ಕಾವು ಕೊಡಬೇಕೆನ್ನುವ ಹೊತ್ತಿಗೆ,
ಸೂಜಿಯೊಂದು ದೇಹವ ದಾಟಿತು ದಾರದಲ್ಲಿ ನಾವುಗಳೆಲ್ಲಾ ಪೋಣಿಸಿದ್ದೆವು
ಈಗ ನಮ್ಮಗಳ ಹಾರ ಅತಿಥಿಯೊಬ್ಬರ ಸತ್ಕಾರಕ್ಕೆ ಸಜ್ಜುಗೊಂಡಿದೆ.

✳ ✳ ✳

ಕನಸಿನ ಇದ್ದಿಲುಗಳಿಗೆ ಬೆಂಕಿ ಹೊತ್ತಿಸಿ ಜಗದ ಬಟ್ಟೆಯ ಸುಕ್ಕನ್ನು ಇಸ್ತ್ರಿ ಮಾಡುವ
ಆಸೆಯ ಮೈತುಂಬಾ ಮೊಳೆ ಹೊಡೆದಿದ್ದಾರೆ,
ಬೆಂಕಿ ಧಗಧಗಿಸುವಾಗ, ನೀರಿನ ಪೆಟ್ರೋಲ್ ಅವತಾರಕ್ಕೆ ನಾವು ನೀವು ಉಳಿಯುವುದುಂಟೆ ?
ಗಾಳಿಯ ಕಾಲು ಕಬ್ಬಿಣವಾದ ಬೆರಗಿಗೆ, ಶಿಲ್ಪಿ ಕೆತ್ತಲಿರುವ ಕಲ್ಲು ಹೂ ಪರಿಮಳ ಸೂಸಲೆಂದು
ಹೂಗಳ ಕತ್ತು ಕೊಯ್ದ ನೆತ್ತರಲ್ಲಿ ಕಲ್ಲನ್ನು ನೆನೆ ಇಟ್ಟಿದ್ದಾನೆ.

✳ ✳ ✳

ತಮ್ಮ ಕಾಲುಗಳ ಕಿತ್ತು ಸಾಕ್ಸ್‌ನಂತೆ ತೊಟ್ಟು ತಿರುಗಲು ಹೋದವರನ್ನು ಕಾಯುತ್ತಿದ್ದಾರೆ
ಅರ್ಧ ಕಾಲುಗಳಿಂದ ಚಿಮ್ಮುವ ರಕ್ತವನ್ನು ಗಟ್ಟಿಯಾಗಿ ಹಿಡಿದದ್ದು, ಬಿಡಿಗಾಸು ಬಾಡಿಗೆಗೆ
ಅವರ ಕೈ ಕೈಗವಸು ಮಾಡಿಕೊಂಡ ಡಾಕ್ಟರುಗಳು ಆಪರೇಷನ್ ಮುಗಿಸಿ ಮರಳಿಸುತ್ತಾರೆ,
ಆ ಕೈಗತ್ತಿದ ರಕ್ತದ ಕಲೆಯ ಕಾರಣಕ್ಕೆ ಇವರು ಕೊಲೆಯ ಆರೋಪ ಹೊತ್ತಿದ್ದಾರೆ.
ಎರಡರಲ್ಲಿ ಒಂದು ಕಣ್ಣನ್ನು ಮಾರಬಹುದು, ಪಾಪವ ನೋಡುವ ಭಾರ ಕಡಿಮೆಯಾಗುತ್ತದೆ
ಎನ್ನುವ ನಂಬಿಕೆಯನ್ನು ಬೆನ್ನಿಗೆ ಬಿಗಿದು, ಒಂದು ಕಣ್ಣನ್ನು ಹರಾಜಿಗಿಟ್ಟಿದ್ದಾರೆ.

✳ ✳ ✳

ನನ್ನ ಧ್ವನಿಪೆಟ್ಟಿಗೆಯಲ್ಲಿ ಗಾರ್ಮೆಂಟ್ ಫ್ಯಾಕ್ಟರಿಗಳಿವೆ, ಹೊರ ಬರುವ ಮಾತುಗಳೆಲ್ಲಾ
ಬಣ್ಣ ಬಣ್ಣದ ಬಟ್ಟೆ ತೊಟ್ಟೆ ಬರುತ್ತಿವೆ,
ಹಾಗಾಗಿಯೇ ಇವು ನನ್ನ ಮಾತುಗಳೆಂದು ನಿಮಗೆ ಗುರುತು ಸಿಗುತ್ತಿಲ್ಲ,
ಬಟ್ಟೆ ಹೊಲಿಯುವಾಗ ಮಾತಿನ ಬಾಯಿಯನ್ನೂ ಹೊಲೆದಿರುತ್ತಾರೆ
ಹಾಗಾಗಿ ಅವುಗಳ ಧ್ವನಿ ಕೇಳುವುದಿಲ್ಲ,
ಆ ಫ್ಯಾಕ್ಟರಿಗಳನ್ನು ಹೊರ ದಬ್ಬಲು ನಾನು ಕಸರತ್ತು ಮಾಡಿದಾಗಲೆಲ್ಲಾ
ಬಲವಂತವಾಗಿ ನನ್ನ ಕೈಗಳನ್ನು ರಾಟೆಯ ಕೆಳಗಿಟ್ಟು ಹೊಲೆಯುತ್ತಾರೆ.

✳ ✳ ✳

ಮನುಷ್ಯನ ಆಕಾರದ ರಾಕ್ಷಸರೂಪಿ ದೈತ್ಯರ ನೆರಳು ನೆಲದ ತುಂಬಾ ಹಾಸಿದೆ
ನೆರಳಿನ ಮೂಲ ಆಕಾರಗಳು ಅದೃಶ್ಯವಾಗಿವೆ
ಸುಡುತ್ತಿರುವ ಈ ನೆರಳಿನಿಂದ ಬಿಡಿಸಿಕೊಳ್ಳಲು ನಾನು ಹೆಣಗುತ್ತಿದ್ದೇನೆ.
ಚಂದ್ರನ ಹಣೆಗಿಟ್ಟು ಸೂರ್ಯನ ಟಾರ್ಚ್ ತುದಿಗೆ ಸಿಕ್ಕಿಸಿಕೊಂಡು
ನಕ್ಷತ್ರ ಹೂ ಮುಡಿದು ನಡೆಯುತ್ತಿರುವವಳ ಹಿಂಬಾಲಿಸುತ್ತಿದ್ದೇನೆ
ಸುಡುವ ನೆರಳಿನಿಂದ ಭೂಮಿಯ ಪಾರು ಮಾಡುವ ಕನಸೊತ್ತು...

✳ ✳ ✳

ಪಾಪ ದೇವರ ನಾಲಿಗೆಯಲ್ಲಿ ಮುಳ್ಳು ಮುರಿದಿದೆ
ನಾನು ಅವಳ ಮೊಲೆತೊಟ್ಟನ್ನು ಚೂಪುಗೊಳಿಸಿ ಕೀಳುವ ಕಸರತ್ತು ಮಾಡುತ್ತಿದ್ದೇನೆ,
ಈಗ ದೇವರಿಗೆ ಸಂಭೋಗದ ಕನಸು ಬಿದ್ದಿದೆ.

✳ ✳ ✳

**ಅರುಣ್ ಜೋಳದ ಕೂಡ್ಲಿಗಿ**
ಜೋಳದ ಕೂಡ್ಲಿಗಿ, ಕೂಡ್ಲಿಗಿ ತಾಲೂಕು, ಬಳ್ಳಾರಿ ಜಿಲ್ಲೆ, ಪಿನ್ - ೫೮೩ ೧೩೫

# ಬಂಡವಾಳಶಾಹಿ ಜಗತ್ತಿನ ಮುಂದುವರಿದ ಬಿಕ್ಕಟ್ಟು




ಅಮೆರಿಕದ ಅಧ್ಯಕ್ಷ ಸ್ಥಾನಕ್ಕೆ ಬರಾಕ್ ಒಬಾಮಾ ಪುನರಾಯ್ಕೆ ಅತಿಶಯವೇನಲ್ಲ. ಆದರೆ ಮೊದಲ ಸಲ ಅಧಿಕಾರಕ್ಕೇರಿದಾಗ ಕೆಲವೇ ದಿನಗಳಲ್ಲಿ ಅವರಿಗೆ ನೀಡಿದ ನೊಬೆಲ್ ಶಾಂತಿಪಾರಿತೋಷಕ ಅತಿರೇಕ. ಅಮೆರಿಕದ ಅಧ್ಯಕ್ಷ ಸ್ಥಾನಕ್ಕೆ ಯಾರೇ ಆಯ್ಕೆಯಾದರೂ ಮೂಲನೀತಿಗಳಲ್ಲಿ ಬದಲಾವಣೆ ಆಗದು ಎನ್ನುವುದನ್ನು ಒಬಾಮಾ ಮತ್ತೊಮ್ಮೆ ರುಜುವಾತು ಮಾಡಿದ್ದಾರೆ. ಚುನಾವಣಾ ಪ್ರಚಾರ ಕಾಲದ ಭರವಸೆಗಳು, ಆಶ್ವಾಸನೆಗಳು, ಅಧಿಕಾರ ವಹಿಸಿಕೊಂಡ ಮೊದಲಲ್ಲಿ ವ್ಯಕ್ತಗೊಳಿಸುವ ಆಶಯಗಳು ಕಾರ್ಯರೂಪಕ್ಕೆ ಬರುವಂಥದ್ದಲ್ಲ. ಇದು ಸಾರ್ವತ್ರಿಕ. ಅಮೆರಿಕಾಗೆ ಮಾತ್ರವೇ ಸೀಮಿತವಲ್ಲ. ಅಮೆರಿಕದ ಹಿತಾಸಕ್ತಿಗಳ ರಕ್ಷಣೆ, ಅಧಿನಾಯಕತ್ವ ಸ್ಥಾಪನೆಯ ಧೋರಣೆ ಎರಡೂ ನಿರಂತರ ಎನ್ನುವುದನ್ನು ಕಳೆದೆರಡು ದಶಕಗಳು, ಸಂಭವಿಸಿದ ಘಟನೆಗಳು ತೋರಿಸಿವೆ. ಈ ಗುರಿಯ ಸಾಧನೆಗೆ ಬಳಸುತ್ತಿರುವ ವಿಧಾನಗಳು ಬದಲಾಗಿವೆ. ಶೀತಯುದ್ಧ ಮುಕ್ತಾಯವಾದ ಮೇಲೆ ಪ್ರಪಂಚದಲ್ಲಿ ಏಕಕೇಂದ್ರೀಯ ಶಕ್ತಿ ಉಗಮದ ನಂತರ ಸಾಮ್ರಾಜ್ಯಶಾಹಿ ಶಕ್ತಿಗಳು ಹೆಚ್ಚು ಅಗ್ರೆಸಿವ್ ಆಗಿವೆ. ವಸಾಹತುಶಾಹಿಯ ಕಾಲ ಅಂತ್ಯಗೊಂಡಮೇಲೆ ಹೊಸದಾಗಿ ಸ್ವತಂತ್ರಗೊಂಡ ಏಷಿಯ, ಆಫ್ರಿಕ ಮತ್ತು ಲ್ಯಾಟಿನ್ ಅಮೆರಿಕದ ದೇಶಗಳ ಮೇಲೆ ನಿಯಂತ್ರಣ ಸಾಧಿಸಲು ಹೊಸ ವಿಧಾನಗಳನ್ನು ಅನುಸರಿಸಲಾಗುತ್ತಿದೆ. ನವ ವಸಾಹತು ವಿಧಾನ-ಆರ್ಥಿಕ ವ್ಯವಸ್ಥೆಯ ಮೇಲೆ ಸಂಪೂರ್ಣ ಅಧಿಕಾರ, ಕೈಗೊಂಬೆ ಸರಕಾರಗಳ ಸ್ಥಾಪನೆ - ಒಂದು ಕಡೆ. ಇನ್ನೊಂದು ಕಡೆ ಜಾಗತೀಕರಣ, ಉದಾರೀಕರಣ, ವ್ಯವಸ್ಥಿತ ಹೊಂದಾಣಿಕೆ ಮುಂತಾದ ಕ್ರಮಗಳನ್ನು ಹೊರಿಸುವುದರ ಮೂಲಕ ಆರ್ಥಿಕ ನಿಯಂತ್ರಣ. ವಿದೇಶೀ ಬಂಡವಾಳದ ಹರಿವಿನ ಆಮಿಷ ಒಡ್ಡಿ ಶೋಷಣೆಯ ಮುಂದುವರಿಕೆ. ಕಳೆದ ಇಪ್ಪತ್ತು ವರ್ಷಗಳಲ್ಲಿ ಬಹುರಾಷ್ಟ್ರೀಯ ಕಾರ್ಪೊರೇಟ್

## ಸೀಯಾರ್ಕೆ

ಸಂಸ್ಥೆಗಳು ಬಡದೇಶಗಳಲ್ಲಿ ಬಂಡವಾಳ ಹೂಡಿ ವಸ್ತುಗಳನ್ನು ತಯಾರಿಸಿ, ಕಡಿಮೆ ಖರ್ಚಿನಲ್ಲಿ ಹೇರಳವಾಗಿ ಲಾಭ ಸಂಪಾದಿಸುತ್ತಿವೆ. ಚೀಣಾ, ವಿಯೆಟ್ನಾಮ್, ಇಂಡೋನೇಶಿಯ, ಬಾಂಗ್ಲಾದೇಶ, ಭಾರತ ಮೊದಲಾದ ದೇಶಗಳು ಇದಕ್ಕೆ ಉದಾಹರಣೆ. ಈ ವಿಧಾನವನ್ನು ಹೊರಗುತ್ತಿಗೆ ಎಂದೂ ಕರೆಯಲಾಗುತ್ತಿದೆ. ಅಮೆರಿಕದ ಮುಕ್ಕಾಲು ಪಾಲು ಬಳಕೆದಾರಿ ವಸ್ತುಗಳು, ಸೇವೆಗಳು ಈ ವಿಧಾನದಲ್ಲಿ ಜರುಗುತ್ತಿವೆ. ಇವೆಲ್ಲದರೊಂದಿಗೆ, ಈ ಕಾಲಾವಧಿ ಯಲ್ಲಿ ಆಗಿರುವ ಅಗಾಧವಾದ ತಾಂತ್ರಿಕ ಬೆಳವಣಿಗೆ ಬಿಳಿಕಾಲರ್ ನೌಕರರ ಪೀಳಿಗೆಯನ್ನು ವಿಸ್ತರಿಸಿ, ವೇತನಗಳಲ್ಲಿ ತೀವ್ರವಾದ ಅಂತರವನ್ನು ಸೃಷ್ಟಿಸಿದೆ. ಅದರ ಜೊತೆಗೇ ಬಳಕೆದಾರಿ ಸಂಸ್ಕೃತಿಯನ್ನೂ ಹುಟ್ಟುಹಾಕಿದೆ. ಶ್ರೀಮಂತಿಕೆ ಮತ್ತು ಬಡತನದ ಕಂದರ ಈಚಿನ ವರ್ಷಗಳಲ್ಲಿ ಅಸಹನೀಯವಾಗಿ ವಿಸ್ತಾರ ಗೊಂಡಿದೆ. ಅಮೆರಿಕದಲ್ಲಿ ಜರುಗಿದ ಷೇರು ಬಜಾರ್ ಆಕ್ರಮಣ (ಆಕ್ಯುಪೈ ವಾಲ್‌ಸ್ಟ್ರೀಟ್) ಚಳವಳಿ ಒಂದು ನಿದರ್ಶನ.

ಇಂಥ ಆರ್ಥಿಕ ಕ್ರಮಗಳ ಜೊತೆಗೆ ದುರಾಕ್ರಮಣಕಾರಿ ಚರ್ಯೆಗಳು ಮುಂದುವರಿದಿವೆ. ಎರಡನೇ ಮಹಾಯುದ್ಧಾನಂತರ ಬಲಿಷ್ಠಗೊಂಡ ಅಮೆರಿಕ ಶೀತಯುದ್ಧ ಪ್ರಾರಂಭಿಸಿ ಕಮ್ಯುನಿಸಂ ವಿರುದ್ಧ ಸಮರ ಸಾರಿತು. ಈ ಕಾಲಾವಧಿಯಲ್ಲಿ ಅದು ಒಂದು ಬಗೆಯಲ್ಲಿ ರಾಷ್ಟ್ರೀಯ ವಿಮೋಚನಾ ಚಳವಳಿಗಳ ಮೇಲೆಯೇ ಯುದ್ಧ ಸಾರಿತು. ತನ್ನ ಹಿತಾಸಕ್ತಿಗಳಿಗೆ ಧಕ್ಕೆಯಾಗಿದೆ ಎಂಬ ಸಬೂಬು ಮುಂದೊಡ್ಡಿ ಪ್ರತ್ಯಕ್ಷ ಪರೋಕ್ಷ ಯುದ್ಧಗಳನ್ನು ನಡೆಸಿದ್ದು ಈಗ ಇತಿಹಾಸ. ಇಪ್ಪತ್ತೊಂದನೇ ಶತಮಾನದಲ್ಲಿ ಅದು ಸಾರಿರುವುದು ಭಯೋತ್ಪಾದನೆಯ ವಿರುದ್ಧ ಸಮರ. ಅಧಿನಾಯಕತ್ವದ ಆಕಾಂಕ್ಷೆ ನೆರವೇರಿಸಿಕೊಳ್ಳಲು ಹುಡುಕಾಡುತ್ತಿದ್ದ ಅಮೆರಿಕಕ್ಕೆ ದೊರೆತ ಶತ್ರು ಭಯೋತ್ಪಾದಕರು. ೨೦೦೧ರ ಸೆಪ್ಟೆಂಬರ್ ೧೧ರಂದು ನ್ಯೂಯಾರ್ಕ್ ನಗರದ ವರ್ಲ್ಡ್ ಟ್ರೇಡ್ ಸೆಂಟರ್ ಮೇಲೆ ಭಯೋತ್ಪಾದಕರ ದಾಳಿಯಾದ ಮೇಲೆ ಅಮೆರಿಕದ ವರ್ತನೆಯೇ ಬದಲಾಯಿತು. ಹೆಚ್ಚು ದುರಾಕ್ರಮಣಕಾರಿಯಾಯಿತು. ಭಯೋತ್ಪಾದನೆಯ ವಿರುದ್ಧ ಸಮರವು ಇಸ್ಲಾಮ್ ವಿರುದ್ಧದ ಬಣ್ಣ ತಳೆದಿರುವುದು ಇತಿಹಾಸದ



**ಸಿರಿಯಾದಲ್ಲಿ ಆಡಳಿತ ಬದಲಾವಣೆಗಾಗಿ ಮಧ್ಯೆ ಪ್ರವೇಶಿಸಲು ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಹರಸಾಹಸ ನಡೆಸಿವೆ. ಸಿರಿಯಾ ಪತನವಾದರೆ ಇರಾನ್ ಮೇಲೆ ಆಕ್ರಮಣ ನಡೆಸಲು ದಾರಿ ಸುಗಮ ಎನ್ನುವುದು ಅಮೆರಿಕದ ಲೆಖ್ಖಾಚಾರ. ಪಶ್ಚಿಮ ಏಷಿಯಾದ ದೇಶಗಳಲ್ಲಿ ನಿಧಾನವಾಗಿಯಾದರೂ ಪ್ರತಿಭಟನೆಯ ಸೂಚನೆ ಕಂಡುಬರುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ. ಪ್ಯಾಲಸ್ಟೈನ್‌ಗೆ ವಿಶ್ವಸಂಸ್ಥೆಯಲ್ಲಿ ವೀಕ್ಷಕ ಸ್ಥಾನವನ್ನು ಈಚೆಗೆ ಮೇಲ್ದರ್ಜೆಗೆ ಏರಿಸಿರುವುದು ಸ್ವತಂತ್ರ ರಾಜ್ಯಸ್ಥಾಪನೆಗೆ ಇನ್ನೊಂದು ಮೆಟ್ಟಿಲು ಏರಿದಂತೆ ಆಗಿದೆ. ಆರು ದಶಕಗಳಿಗೂ ಹೆಚ್ಚು ಕಾಲದಿಂದ ಪ್ಯಾಲಸ್ತೀನಿಯನ್ನರು ತಮ್ಮ ತಾಯ್ನಾಡಿನ ಸ್ಥಾಪನೆಗಾಗಿ ಹೋರಾಡುತ್ತ ಬಂದಿದ್ದಾರೆ. ಅಮೆರಿಕದ ಪೂರ್ಣ ಬೆಂಬಲ ಪಡೆದಿರುವ ಇಸ್ರೇಲ್ ಪ್ಯಾಲೆಸ್ತೀನಿಯನ್ನರ ಮೇಲೆ ಪುಂಡಾಟಿಕೆ ಮುಂದುವರಿಸಿದೆ.**




ವಿಪರ್ಯಾಸ. ಈ ಸಮರದ ಮೊದಲ ಬಲಿ ಅಫ್ಘಾನಿಸ್ತಾನ. ಶೀತಯುದ್ಧದ ಕಾಲದಲ್ಲೇ ಸುದೀರ್ಘಕಾಲದ ಅಂತರ್ಯುದ್ಧ, ವಿದೇಶೀ ಹಸ್ತಕ್ಷೇಪದಿಂದ ಬಳಲಿದ್ದ ಹಿಮಾಲಯದ ತಪ್ಪಲಿನ ಈ ನಾಡು ಈಗ ಅಮೆರಿಕದ ಆಕ್ರಮಣದಲ್ಲಿದೆ. ಹೆಸರಿಗೆ ಅಫ್ಘಾನಿಸ್ತಾನದಲ್ಲಿ ಅಮೆರಿಕದ ಬೆಂಬಲದಿಂದ ಸ್ಥಳೀಯ ಸರಕಾರವೊಂದು ಅಸ್ತಿತ್ವದಲ್ಲಿದ್ದರೂ ಅಮೆರಿಕದ ಸೈನಿಕರದೇ ಕಾರುಬಾರು. ಮುಂದಿನ ವರ್ಷ (೨೦೧೪) ಅಮೆರಿಕದ ಸೇನೆ ವಾಪಸ್ಸಾಗಿ ಸ್ವತಂತ್ರ ಸಾರ್ವಭೌಮ ಸರಕಾರ ಅಸ್ತಿತ್ವಕ್ಕೆ ಬರುವ ಭರವಸೆಯನ್ನು ಅಧ್ಯಕ್ಷ ಬರಾಕ್ ಒಬಾಮಾ ನೀಡಿದ್ದಾಗ್ಯೂ, ಸಾಕಷ್ಟು ಸಂಖ್ಯೆಯಲ್ಲಿ ಅಮೆರಿಕದ ಸೈನ್ಯದ ಉಪಸ್ಥಿತಿ ಇರುತ್ತದೆ. ಇಷ್ಟೆಲ್ಲ ಇದ್ದರೂ ಅಫ್ಘಾನಿಸ್ತಾನ ಇನ್ನೂ ಅಂತರ್ಯುದ್ಧದ ಪರಿಸ್ಥಿತಿಯಿಂದ ಹೊರಬಂದಿಲ್ಲ. ದೇಶದ ಬಹುಭಾಗಗಳಲ್ಲಿ ಹಿಂದೆ ಅಧಿಕಾರ ನಡೆಸಿದ್ದ ಇಸ್ಲಾಮಿಕ್ ಉಗ್ರಗಾಮಿಗಳ, ತಾಲಿಬಾನ್‌ಗಳ ಪ್ರಾಬಲ್ಯವಿದೆ. ವಿದೇಶೀ ಆಕ್ರಮಣವನ್ನು ಹಿಂದಿನಿಂದ ವಿರೋಧಿಸುತ್ತಿರುವ ಅಫ್ಘನ್ನರ ಹೋರಾಟ ಮಾತ್ರ ನಿರಂತರವಾಗಿ ಸಾಗಿದೆ. ಇದರ ಬೆನ್ನಲ್ಲೇ ದುರಾಕ್ರಮಣಕ್ಕೀಡಾದ ಇನ್ನೊಂದು ದೇಶ ಇರಾಕ್. ಪಶ್ಚಿಮ ಏಷಿಯಾದಲ್ಲಿ ಏಕಸ್ವಾಮ್ಯ ಸ್ಥಾಪಿಸುವ ದುರುದ್ದೇಶದಿಂದ ನಡೆಸಿದ ಯುದ್ಧ ಇದು. ತೈಲಸಂಪತ್ತಿನಿಂದ ಕೂಡಿರುವ ಈ ಭೂಭಾಗದ ಮೇಲೆ ಹಿಡಿತ ಸಾಧಿಸಿದವರು ಇಡೀ ಪ್ರಪಂಚವನ್ನು ನಿಯಂತ್ರಣದಲ್ಲಿಟ್ಟುಕೊಂಡಂತೆ ಎಂಬ ಮಾತಿದೆ. ಅಮೆರಿಕದ ಬಂಡವಾಳಗಾರರು ಇದರಲ್ಲಿ ಪೂರ್ಣ ನಂಬುಗೆ ಹೊಂದಿದ್ದಾರೆ. ಅದಕ್ಕಾಗಿ ಸಕಲ ಪ್ರಯತ್ನಗಳನ್ನು ಮಾಡುತ್ತಿದ್ದಾರೆ. ಇರಾಕ್ ಮುಗಿಯಿತೆಂದಾದರೆ, ಈಗ ಅವರ ದೃಷ್ಟಿ ಸಿರಿಯ, ಇರಾನ್‌ಗಳ ಮೇಲೆ, ಕಾಲು ಕೆರೆದು ಕಾಳಗಕ್ಕೆ ಸಿದ್ಧರಾಗಿದ್ದಾರೆ. ಇರಾಕ್‌ನಿಂದ ಅಮೆರಿಕದ ಸೇನೆ ವಾಪಸ್ಸಾಗಿದ್ದರೂ ಹೆಚ್ಚಿನ ಸೈನಿಕರು ನೆರೆಯ ರಾಷ್ಟ್ರ ಕುವೇತ್‌ನಲ್ಲೇ ಇದ್ದಾರೆ. ಯಾವುದೇ ಸಂದರ್ಭದಲ್ಲಾದರೂ ಮತ್ತೆ ಇರಾಕನ್ನು ಆಕ್ರಮಿಸಿಕೊಳ್ಳಬಹುದಾಗಿದೆ. ಇದಲ್ಲದೆ ಇರಾಕ್‌ನಲ್ಲೇ ಅಮೆರಿಕದ ಸೈನಿಕ ನೆಲೆಯೂ ಸ್ಥಾಪನೆಗೊಂಡಿದೆ. ಇರಾಕ್ ಯುದ್ಧದಲ್ಲಿ ಮತ್ತು ಅನಂತರ ಸಂಭವಿಸಿದ ಅಮಾಯಕರ ಸಾವು-ನೋವುಗಳು ಅಲ್ಲಿ ನಡೆದ ದೌರ್ಜನ್ಯಗಳು ಅಮಾನುಷ. ಅಫ್ಘಾನಿಸ್ತಾನ-ಪಾಕಿಸ್ತಾನ ಗಡಿಯಲ್ಲಿ ತಾಲಿಬಾನ್ ಉಗ್ರಗಾಮಿಗಳನ್ನು ಹತ್ತಿಕ್ಕಲು ಅಮೆರಿಕ ಸ್ವಯಂಚಾಲಿತ ಮಾರಕಾಸ್ತ್ರ ಡ್ರೋನ್‌ಗಳ ದಾಳಿಯನ್ನು ನಿರಂತರವಾಗಿ ಮುಂದುವರಿಸಿದೆ. ಈ ದಾಳಿಯಲ್ಲಿ ಮಡಿದವರಲ್ಲಿ ಅಮಾಯಕ ನಾಗರಿಕರೇ ಹೆಚ್ಚು. ಶಾಲೆಗಳು, ಆಸ್ಪತ್ರೆಗಳ ಮೇಲೂ ಡ್ರೋನ್‌ಗಳು ಹಾನಿ ಉಂಟುಮಾಡಿವೆ. ಪಾಕಿಸ್ತಾನದ ಸಾರ್ವಭೌಮತ್ವವನ್ನು ಉಲ್ಲಂಘಿಸಿ ಅಮೆರಿಕದ ಗುಪ್ತದಳದವರು ಒಸಾಮಾ ಬಿನ್ ಲಾಡೆನ್ ನಿವಾಸದ ಮೇಲೆ ದಾಳಿ ನಡೆಸಿ ಆತನನ್ನು ಹತ್ಯೆಗೈದದ್ದು ಅಮೆರಿಕ ತನ್ನ ಗುರಿ ಸಾಧನೆಗೆ ಏನು ಮಾಡಲೂ ಹೇಸುವುದಿಲ್ಲ ಎನ್ನುವುದನ್ನು ತೋರಿಸಿದೆ. ಈ ಪ್ರಕರಣದಲ್ಲಿ ಪಾಕಿಸ್ತಾನದ ಪ್ರತಿಭಟನೆ ಆಲಿಸುವವರಿಲ್ಲದೆ ಅಳಿಸಿಹೋಯಿತು.

ಈ ಹಿನ್ನೆಲೆಯಲ್ಲಿ ಕಳೆದ ವರ್ಷದ ಪ್ರಮುಖ ಘಟನೆಗಳನ್ನು ಅವಲೋಕಿಸುವುದು ಸೂಕ್ತ. ಸಾಮ್ರಾಜ್ಯಶಾಹಿ ಶಕ್ತಿಗಳು ಹೆಚ್ಚು ಹೆಚ್ಚು ದುರಾಕ್ರಮಣಕಾರಿಯಾಗುತ್ತಿರುವಂತೆಯೇ ಆ ದೇಶಗಳು ಅಷ್ಟೇ ಹೆಚ್ಚು ಆರ್ಥಿಕ ಮುಗ್ಗಟ್ಟುಗಳಲ್ಲಿ ಮುಳುಗಿವೆ. ಇಪ್ಪತ್ತನೇ ಶತಮಾನದ ಪ್ರಾರಂಭದಲ್ಲಿ ಕಂಡುಬಂದ ಆರ್ಥಿಕ ಕುಸಿತದ ಪುನರಾವರ್ತನೆ ಈ ಶತಮಾನದ ಪ್ರಾರಂಭದಲ್ಲೂ ಕಂಡುಬಂದದ್ದು ಗಮನಾರ್ಹ. ಕುಗ್ಗಿದ ಆರ್ಥಿಕ ಬೆಳವಣಿಗೆಯ ಪ್ರಮಾಣ, ಏಕಪ್ರಕಾರವಾಗಿ ಬೆಳೆದ ನಿರುದ್ಯೋಗಿಗಳ ಸಂಖ್ಯೆ, ಆರ್ಥಿಕ ಕುಸಿತ, ಹಣಕಾಸಿನ ಮುಗ್ಗಟ್ಟು, ಬ್ಯಾಂಕುಗಳ ದಿವಾಳಿ ಇವೆಲ್ಲ ಬಂಡವಾಳಶಾಹಿ ಜಗತ್ತನ್ನು ತತ್ತರಿಸುವಂತೆ ಮಾಡಿದುವು. ಕಾರ್ಲ್ ಮಾರ್ಕ್ಸ್ ನುಡಿದಿದ್ದ ಆಗಾಗ್ಗೆ ಮರುಕಳಿಸುವ ಬಂಡವಾಳಶಾಹಿ ಆರ್ಥಿಕ ಮುಗ್ಗಟ್ಟಿನ ವಿಚಾರವನ್ನು ಮೆಲುಕು ಹಾಕುವಂತೆ ಮಾಡಿರುವುದು ಈ ಘಟನೆಗಳು. ಮುಂದುವರಿದ ಬಂಡವಾಳಶಾಹಿ ದೇಶಗಳಲ್ಲಿ ಆರ್ಥಿಕ ಪರಿಸ್ಥಿತಿ ಇನ್ನೂ ಸಂಪೂರ್ಣವಾಗಿ ಚೇತರಿಕೆಯಾಗಿಲ್ಲ. ಅಮೆರಿಕದಲ್ಲಿ ನಿರುದ್ಯೋಗದ ಪ್ರಮಾಣ ಈಗಲೂ ಶೇ. ೧೧ರ ಪ್ರಮಾಣದಲ್ಲಿಯೇ ಇದೆ. ಯುರೋಪಿನ ದೇಶಗಳು, ಮುಖ್ಯವಾಗಿ ಗ್ರೀಸ್, ಸ್ಪೇನ್, ಇಟಲಿ ಮೊದಲಾದ ದೇಶಗಳಲ್ಲಿ ನಿರುದ್ಯೋಗದ ಪ್ರಮಾಣ ಶೇ. ೫೦ರಷ್ಟು ತಲುಪಿದೆ. ಸಾಲದ ಮಡುವಿನಲ್ಲಿ ಮುಳುಗಿರುವ ಗ್ರೀಸ್‌ನಲ್ಲಿ ಪರಿಸ್ಥಿತಿ ಹದಗೆಟ್ಟಿದೆ. ಈಗ ತಲೆದೋರಿರುವ ಬಿಕ್ಕಟ್ಟು ಅಸ್ತಿತ್ವದಲ್ಲಿರುವ ಯೂರೋಪಿಯನ್ ಯೂನಿಯನ್ನಿನ ಬುಡವನ್ನೇ ಅಲುಗಾಡಿಸಿದೆ. ಅದರ ಮುಂದುವರಿಕೆಯು ಭವಿಷ್ಯವನ್ನೇ ಆತಂಕಕ್ಕೀಡುಮಾಡಿದೆ. ಈ ಒಕ್ಕೂಟ ಅಸ್ತಿತ್ವಕ್ಕೆ ಬಂದದ್ದೇ ಶೀತಯುದ್ಧದ ಕಾಲದಲ್ಲಿ, ಅಮೆರಿಕ ನೇತೃತ್ವದ 'ನ್ಯಾಟೊ' ಮಿಲಿಟರಿ ಕೂಟದ ಸ್ಥಾಪನೆಯ ನಂತರ. ಅಮೆರಿಕ ನಡೆಸಿರುವ ಎಲ್ಲ ದುಶ್ಚರ್ಯೆಗಳಲ್ಲೂ ಯೂರೋಪಿಯನ್ ಯೂನಿಯನ್ ಭಾಗಿ. ಯೂಗೋಸ್ಲಾವಿಯ ಛಿದ್ರೀಕರಣಗೊಂಡಾಗ ಅದು ವಹಿಸಿದ ಪಾತ್ರ ಅದಕ್ಕೆ ಸಾಕ್ಷಿ. ಅಂಥದ್ದರಲ್ಲಿ ಈ ಒಕ್ಕೂಟಕ್ಕೆ ನೊಬೆಲ್ ಶಾಂತಿ ಪುರಸ್ಕಾರ ನೀಡಿದ್ದು ಆಶ್ಚರ್ಯಕರ, ನಾಚಿಕೆಗೇಡು. ಅವಸಾನದ ಅಂಚಿನಲ್ಲಿರುವ ಸಂಘಟನೆಗೆ ರಾಜಕೀಯ ಪ್ರೇರಣೆಯಿಂದ ನೀಡಿದ ಆಮ್ಲಜನಕ ಇದು ಎಂಬ ಟೀಕೆಗೊಳಗಾಗಿರುವುದು ಸಹಜ.

ಹಲವು ದಶಕಗಳಿಂದ ಸರ್ವಾಧಿಕಾರಿ ಆಡಳಿತದಲ್ಲಿದ್ದ ಉತ್ತರ ಆಫ್ರಿಕಾದ ಇಸ್ಲಾಮಿಕ್ ರಾಷ್ಟ್ರಗಳಲ್ಲಿ ನಡೆದ ಜನಾಂದೋಳನ ಗಮನಾರ್ಹವಾದ ಬೆಳವಣಿಗೆ: ಆದರೆ ಈ ಚಳವಳಿಯ ನಾಯಕತ್ವ 'ಇಸ್ಲಾಮಿಕ್ ಬ್ರದರ್‌ಹುಡ್'ನಂಥ ಬಲಪಂಥೀಯರ ಕೈಗೆ ಬಂದದ್ದೀಗ ಆತಂಕಕಾರಿ. ಟ್ಯೂನಿಸ್‌ನಲ್ಲಿ ಪ್ರಾರಂಭವಾದ ಜನಾಂದೋಳನ ಬಹುಬೇಗ ಈಜಿಪ್ಟಿಗೆ ಹರಡಿತು. ಅನಂತರ ಲಿಬಿಯಾಗೂ ಹಬ್ಬಿತು. ಲಿಬಿಯಾದಲ್ಲಿ ಉಂಟಾದ ಅಂತರ್ಯುದ್ಧದ ಪರಿಸ್ಥಿತಿಯಲ್ಲಿ 'ನ್ಯಾಟೋ' ರಾಷ್ಟ್ರಗಳ ಹಸ್ತಕ್ಷೇಪ, ನಡೆಸಿದ ಬಾಂಬು ದಾಳಿ ಖಂಡನೀಯ. ಈ ದೇಶಗಳಲ್ಲಿ ಸರ್ವಾಧಿಕಾರಿ ಆಡಳಿತಗಳು ಅಂತ್ಯಗೊಂಡಿದ್ದಾಗ್ಯೂ ಅನಿಶ್ಚಿತತೆ ಮಾತ್ರ ಮುಂದುವರಿಯುತ್ತಿದೆ. ಈ ಆಂದೋಳನಗಳು ಇಡೀ ಅರಬ್ ಜಗತ್ತಿನಲ್ಲಿ ಸಂಚಲನ ಮೂಡಿಸಿದುವು. ಸಿರಿಯಾದಲ್ಲಿ ಆಡಳಿತ ಬದಲಾವಣೆಗಾಗಿ ಹಸ್ತಕ್ಷೇಪ ಮಾಡಲು ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳು ಹರಸಾಹಸ ನಡೆಸಿವೆ. ಸಿರಿಯಾ ಪತನವಾದರೆ ಇರಾನ್ ಮೇಲೆ ಆಕ್ರಮಣ ನಡೆಸಲು ದಾರಿ ಸುಗಮ ಎನ್ನುವುದು ಅಮೆರಿಕದ ಲೆಖ್ಖಾಚಾರ. ಪಶ್ಚಿಮ ಏಷಿಯಾದ ದೇಶಗಳಲ್ಲಿ ನಿಧಾನವಾಗಿಯಾದರೂ ಪ್ರತಿಭಟನೆಯ ಸೂಚನೆ ಕಂಡುಬರುತ್ತಿರುವುದು ಸ್ವಾಗತಾರ್ಹ ಬೆಳವಣಿಗೆ. ಪ್ಯಾಲಸ್ತೈನ್‌ಗೆ ವಿಶ್ವಸಂಸ್ಥೆಯಲ್ಲಿ ನೀಡಿರುವ ವೀಕ್ಷಕ ಸ್ಥಾನವನ್ನು ಈಚೆಗೆ ಮೇಲ್ದರ್ಜೆಗೆ ಏರಿಸಿರುವುದು ಸ್ವತಂತ್ರ ರಾಜ್ಯಸ್ಥಾಪನೆಗೆ ಇನ್ನೊಂದು ಮೆಟ್ಟಿಲು ಏರಿದಂತೆ ಆಗಿದೆ. ಆರು ದಶಕಗಳಿಗೂ ಹೆಚ್ಚು ಕಾಲದಿಂದ ಪ್ಯಾಲಸ್ತೀನಿಯನ್ನರು ತಮ್ಮ ತಾಯ್ನಾಡಿನ ಸ್ಥಾಪನೆಗಾಗಿ ಹೋರಾಡುತ್ತ ಬಂದಿದ್ದಾರೆ. ಅಮೆರಿಕದ ಪೂರ್ಣ ಬೆಂಬಲ ಪಡೆದಿರುವ ಇಸ್ರೇಲ್ ಪ್ಯಾಲೆಸ್ತೀನಿಯನ್ನರ ಮೇಲೆ ಪುಂಡಾಟಿಕೆ ಮುಂದುವರಿಸಿದೆ. ವಿಶ್ವಸಂಸ್ಥೆಯ ಮಹಾಸಭೆಯಲ್ಲಿ ಪ್ಯಾಲಸ್ತೀನಿಯನ್ನರ ಸ್ಥಾನ ಹೆಚ್ಚಿಸುವ ನಿರ್ಣಯವನ್ನು ವಿರೋಧಿಸಿದ್ದು ಇಸ್ರೇಲ್ ಮತ್ತು ಅಮೆರಿಕ ಎಂಬುದನ್ನು ಮರೆಯುವಂತಿಲ್ಲ. ತನ್ನ ವಿಸ್ತರಣಾ ನೀತಿಯನ್ನು ಮುಂದುವರಿಸುತ್ತಿರುವ ಇಸ್ರೇಲ್ ಆಕ್ರಮಿತ ಪ್ರದೇಶಗಳಲ್ಲಿ ಸ್ವಾಸ್ಥ್ಯಗಳ ನಿರ್ಮಾಣವನ್ನು ಮುಂದುವರಿಸಿದ್ದು, ಪ್ಯಾಲಸ್ತೀನಿಯನ್ನರ ಮೇಲೆ ನಿರಂತರವಾಗಿ ದೌರ್ಜನ್ಯವನ್ನು

ನಡೆಸುತ್ತ ಬಂದಿದೆ. ಈಚೆಗೆ ಗಾಜ಼ಾ ಪ್ರದೇಶದಲ್ಲಿ ಇಸ್ರೇಲ್ ನಡೆಸಿದ ದಾಳಿ ಹಾಗೂ ತೋರಿದ ಕ್ರೌರ್ಯ ಎಲ್ಲ ಕಡೆಯಿಂದಲೂ ಖಂಡನೆಯನ್ನು ತಂದಿದೆ. ಈಗ ಪ್ಯಾಲಸ್ಟೈನ್ ವಿಮೋಚನಾ ಸಂಸ್ಥೆ ಇಸ್ರೇಲಿನ ಅಮಾನುಷ ಕೃತ್ಯಗಳನ್ನು ಅಂತರರಾಷ್ಟ್ರೀಯ ನ್ಯಾಯಾಲಯದ ಮುಂದೆ ತರಲು ಅವಕಾಶವಿದೆ. ಪ್ಯಾಲಸ್ತೀನ್ ಜನರ ತಾಯ್ನಾಡಿನ ಸ್ಥಾಪನೆಯಾಗುವವರೆಗೆ ಈ ಪ್ರದೇಶದಲ್ಲಿ ಶಾಂತಿ ಸುರಕ್ಷತೆ ಸಾಧ್ಯವಾಗದು.

ದಕ್ಷಿಣ ಅಮೆರಿಕದ ವೆನೆಝುವೇಲಾದಲ್ಲಿ ಅಧ್ಯಕ್ಷರಾಗಿ ಹ್ಯೂಗೋ ಚಾವೆಜ್‌ರ ಪುನರಾಯ್ಕೆ ಪ್ರಗತಿಪರ ಮುನ್ನಡೆಗೆ ಭರವಸೆ ಮೂಡಿಸಿದೆ. ಅವರ ಅನಾರೋಗ್ಯ ಆತಂಕಕಾರಿ. ಅವರು ಶೀಘ್ರವಾಗಿ ಗುಣಮುಖರಾಗಲೆಂದು ಹಾರೈಸೋಣ. ಈ ಭೂಭಾಗ ಬಹುಕಾಲ ಅಮೆರಿಕದ ನೆರಳಿನಲ್ಲಿಯೇ ಇದ್ದು, ಅಲ್ಲಿ ಬಹುರಾಷ್ಟ್ರೀಯ ಕಂಪೆನಿಗಳಿಂದ ತೀವ್ರವಾದ ಶೋಷಣೆಗೆ ಗುರಿಯಾಗಿದ್ದುದು ತಿಳಿದಿರುವ ವಿಷಯ. ಬಹುತೇಕ ಸರ್ವಾಧಿಕಾರಿ ಆಡಳಿತಗಳನ್ನೇ ಹೊಂದಿದ್ದು, ಅಮೆರಿಕದ ಹಿತ್ತಲೆಂದೇ ಪರಿಗಣಿತವಾಗಿ 'ಬನಾನಾ ಗಣರಾಜ್ಯ'ಗಳೆಂದು ಹಣೆಪಟ್ಟಿ ಹೊಂದಿದ್ದುವು. ಎಚ್ಚೆತ್ತುಕೊಂಡಿರುವ ಈ ದೇಶಗಳು ಈಗ ಅಮೆರಿಕಕ್ಕೆ ಸವಾಲಾಗಿ ನಿಂತಿವೆ. ವೆನೆಝುವೇಲದಲ್ಲಿ ನಡೆದ ಚುನಾವಣೆಗಳಲ್ಲಿ ಜಯಶಾಲಿಯಾದ ಚಾವೆಜ್ ಈ ಪ್ರದೇಶದಲ್ಲಿ ಹೊಸ ಹಾದಿಯ ಹರಿಕಾರರಾದರು. ಬಿರುಗಾಳಿಯಂತೆ ಈ ಪ್ರದೇಶದ ಹಲವು ದೇಶಗಳಲ್ಲಿ ಪುರೋಗಾಮಿ ಆಡಳಿತಗಳು ತಲೆ ಎತ್ತಿವೆ. ಅಮೆರಿಕದ ಮುಕ್ತ ಮಾರುಕಟ್ಟೆ ಆರ್ಥಿಕ ಮತ್ತು ಯಜಮಾನಿಕೆಯನ್ನು ಧಿಕ್ಕರಿಸಿ ಪರ್ಯಾಯ ವ್ಯವಸ್ಥೆಯ ಸ್ಥಾಪನೆಯತ್ತ ನಡೆದಿವೆ. ಇತ್ತೀಚೆಗೆ ಈ ಪ್ರದೇಶದ ದೇಶಗಳು ಜ್ಯೂಲಿಯನ್ ಅಸಾಂಜ್ ಪ್ರಕರಣದಲ್ಲಿ ಈಕ್ವೆಡಾರ್‌ನೊಂದಿಗೆ ತೋರಿದ ಸೌಹಾರ್ದತೆ, ನೀಡಿದ ಬೆಂಬಲ ಗಣನೀಯ. ಅಮೆರಿಕದ ಯಜಮಾನಿಕೆಯಲ್ಲಿದ್ದ ಅಮೆರಿಕ ಖಂಡದ ದೇಶಗಳ ಸಂಘಟನೆಯ ಸಭೆಯಲ್ಲಿ ಈ ಪ್ರದೇಶದ ದೇಶಗಳು ತೋರಿದ ಐಕ್ಯತೆ ಒಂದು ಸ್ತುತ್ಯಾರ್ಹವಾದ ಕ್ರಮ. ಈ ಸಭೆಯಲ್ಲಿ ಅಮೆರಿಕ ಮತ್ತು ಕೆನಡಾ ಏಕಾಂಗಿಯಾಗಿ ಮುಖಭಂಗ ಅನುಭವಿಸಿದ್ದನ್ನು ಮರೆಯುವಂತಿಲ್ಲ. ಇದೇ ರೀತಿಯ ಮುಖಭಂಗವನ್ನು ಕ್ಯೂಬಾದ ಮೇಲೆ ಆರ್ಥಿಕ ದಿಗ್ಬಂಧನ ಅಂತ್ಯಗೊಳಿಸಬೇಕೆಂಬ ವಿಷಯದಲ್ಲಿ ವಿಶ್ವಸಂಸ್ಥೆಯ ಮಹಾಸಭೆಯಲ್ಲಿ ಅಮೆರಿಕಕ್ಕೆ ಮುಖಭಂಗವಾಗಿದೆ. ಮೊಂಡುತನದಿಂದ ಅಮೆರಿಕ ಪುಟ್ಟ ಕ್ಯೂಬಾದ ಮೇಲೆ ಜಿದ್ದು ಸಾಧಿಸುತ್ತಿದೆ. ಬರಾಕ್ ಒಬಾಮಾ ಅಧಿಕಾರ ವಹಿಸಿಕೊಂಡ ಮೇಲೆ ಕ್ಯೂಬಾದ ಬಗ್ಗೆ ಅಮೆರಿಕದ ಧೋರಣೆ ಬದಲಾಗಬಹುದೆಂದು ನಿರೀಕ್ಷಿಸಲಾಗಿತ್ತು. ಆದರೆ ಅದು ಹುಸಿಯಾಗಿದೆ. ಈಗ ಪರಿಸ್ಥಿತಿ ಬದಲಾಗಿದೆ. ಲ್ಯಾಟಿನ್ ಅಮೆರಿಕದ ದೇಶಗಳು ಕ್ಯೂಬಾದ ಬೆಂಬಲಕ್ಕೆ ನಿಂತಿವೆ. ಕ್ಯೂಬಾದ ಕ್ರಾಂತಿಯ ನಾಯಕ ಫಿಡೆಲ್ ಕ್ಯಾಸ್ಟ್ರೋ ಅಧಿಕಾರದಿಂದ ನಿವೃತ್ತರಾಗಿ ಹೊಸ ಆಡಳಿತ ಅಸ್ತಿತ್ವಕ್ಕೆ ಬಂದಿದೆ. ಈ ಪ್ರದೇಶದ ಬೆಳವಣಿಗೆಗಳೂ ಏಷ್ಯಾ, ಆಫ್ರಿಕಾದ ಸ್ವತಂತ್ರ ರಾಷ್ಟ್ರಗಳಲ್ಲಿ ಹೊಸ ಜಾಗೃತಿ ಮೂಡಿಸಲು ಸಹಾಯಕವಾದೀತು.

ಸಂಕೀರ್ಣವಾಗಿರುವ ಜಾಗತಿಕ ಪರಿಸ್ಥಿತಿಯಲ್ಲಿ ಭಾರತ ವಿದೇಶಾಂಗ ನೀತಿ ಹೆಚ್ಚು ಹೆಚ್ಚಾಗಿ ಅಮೆರಿಕದೊಂದಿಗೆ ಹೊಂದಿಕೆಯಾಗುತ್ತಿರುವುದು ಅಸಹನೀಯ. ಒಂದು ಕಾಲಘಟ್ಟದಲ್ಲಿ ಸ್ವತಂತ್ರ ನೀತಿಯನ್ನು ಅನುಸರಿಸಿ ಅಲಿಪ್ತ ರಾಷ್ಟ್ರಗಳಿಗೆ ಮಾದರಿಯಾಗಿದ್ದ ಭಾರತ ಈಗ ಸಂಪೂರ್ಣವಾಗಿ ಅಮೆರಿಕದ ಕಡೆಗೆ ವಾಲಿರುವುದು



ನಿಜಕ್ಕೂ ತಲೆತಗ್ಗಿಸುವಂತಾಗಿದೆ. ನೆರೆಯ ರಾಷ್ಟ್ರಗಳ ಜೊತೆ ಸಂಬಂಧವೂ ಕೂಡ ಯಥಾಸ್ಥಿತಿಯಲ್ಲೇ ಮುಂದುವರಿಯುತ್ತಿದೆ. ಭಾರತ-ಪಾಕಿಸ್ತಾನಗಳ ನಡುವೆ ಸಂಬಂಧಗಳು ಯಾವತ್ತಿನಂತೆ ಏರಿಳಿತಗಳಿಂದಲೇ ಮುಂದುವರಿಯುತ್ತಿವೆ. ಪಾಕಿಸ್ತಾನದಲ್ಲಿ ಚುನಾಯಿತ ಸರಕಾರದ ಅಧಿಕಾರದಲ್ಲಿದ್ದಾಗ್ಯೂ ಸಂಬಂಧಗಳು ಮಾತ್ರ ಉತ್ತಮಗೊಂಡಿಲ್ಲ. ಭಯೋತ್ಪಾದಕರ ವಿರುದ್ಧ ಕ್ರಮಕೈಗೊಳ್ಳಲು ಪಾಕಿಸ್ತಾನ ತೋರುತ್ತಿರುವ ಅರೆಮನಸ್ಸಿನ ಮನೋವೃತ್ತಿ ಸಂಬಂಧಗಳ ಸುಧಾರಣೆಗೆ ಅಡ್ಡಿಯಾಗಿವೆ. ಬರ್ಮಾದಲ್ಲಿ ಮಿಲಿಟರಿ ಆಡಳಿತ ಮುಂದುವರಿದಿದೆ. ಈಚೆಗೆ ನಡೆದ ಸಾರ್ವತ್ರಿಕ ಚುನಾವಣೆಗಳಲ್ಲಿ ಪ್ರಜಾಪ್ರಭುತ್ವಕ್ಕಾಗಿ ಶ್ರಮಿಸುತ್ತಿರುವ ಆಂಗ್‌ಸಾನ್ ಸೂಕಿ ಮತ್ತು ಅವರ ಪಕ್ಷ ಭಾಗಿಯಾಗಿ ಪ್ರಾತಿನಿಧ್ಯ ಗಳಿಸಿರುವುದು ಹೊಸ ಭರವಸೆ ಮೂಡಿಸಿದೆ. ಉತ್ತರದಲ್ಲಿರುವ ನೇಪಾಳದಲ್ಲಿ ಅಸ್ಥಿರತೆ ಮುಂದುವರಿದಿದೆ. ಸಂವಿಧಾನದ ರಚನೆ ಮತ್ತು ಸುಸ್ಥಿರ ಸರಕಾರದ ಸ್ಥಾಪನೆ ಇನ್ನೂ ಮರೀಚಿಕೆಯಾಗಿದೆ. ಭಾರತ-ಚೀಣಾ ಗಡಿವಿವಾದ ಪ್ರಗತಿ ಕಾಣದೇ ಹೋದರೂ ಸಂಬಂಧಗಳು ಮಾತ್ರ ಸುಸೂತ್ರವಾಗಿ ಸಾಗಿವೆ. ಚೀಣೀ ಕಮ್ಯುನಿಸ್ಟ್ ಪಕ್ಷದ ನಾಯಕತ್ವದಲ್ಲಿ ಬದಲಾವಣೆಯಾಗಿ ನೂತನ ಕಾರ್ಯದರ್ಶಿ ಅಧಿಕಾರ ವಹಿಸಿಕೊಂಡಿದ್ದಾರೆ. ಹೊಸ ಪಾಲಿಟ್ ಬ್ಯೂರೋ ಮತ್ತು ಅದರ ಸ್ಥಾಯಿ ಸಮಿತಿ ಕೂಡ ಆಯ್ಕೆಯಾಗಿದೆ.

ವರ್ಷವಿಡೀ ಜಗತ್ತಿನಾದ್ಯಂತ ಜ್ಯೋತಿಷಿಗಳು ಹುಟ್ಟಿಸಿದ್ದ ಪ್ರಳಯದ ಭವಿಷ್ಯ ಯಾವತ್ತಿನಂತೆ ಹುಸಿಯಾಗಿದೆ. ಈ ಹಿಂದೆ ಅಷ್ಟಗ್ರಹಕೂಟದ ಹಿನ್ನೆಲೆಯಲ್ಲಿ ಇದೇ ಬಗೆಯ ಆತಂಕ ಸೃಷ್ಟಿಯಾಗಿದ್ದುದನ್ನು ನೆನಪಿಸಿಕೊಳ್ಳಬಹುದು. ಪ್ರಳಯದ ಭೀತಿ ಉತ್ತರ-ದಕ್ಷಿಣ, ಪೂರ್ವ-ಪಶ್ಚಿಮ ಎಂಬ ಭೇದವಿಲ್ಲದೆ ಎಲ್ಲೆಡೆ ಆವರಿಸಿದ್ದುದಂತೂ ನಿಜ. ಟೆಲಿವಿಷನ್ ಚಾನೆಲ್‌ಗಳು, ಇತರ ಮಾಧ್ಯಮಗಳು ಈ ವಿಷಯದಲ್ಲಿ ವಹಿಸಿದ ಪಾತ್ರ ಮುಜುಗರ ಉಂಟುಮಾಡುತ್ತದೆ. ವರ್ಷದ ಕೊನೆಯಲ್ಲಿ ಆದ ಆಘಾತವೆಂದರೆ ಅಮೆರಿಕದ ನ್ಯೂಟೌನ್ ಎಂಬಲ್ಲಿ ಮತಿಗೆಟ್ಟ ಯುವಕನೊಬ್ಬನ ಗುಂಡಿನ ದಾಳಿಗೆ ಇಪ್ಪತ್ತು ಮಂದಿ ಶಾಲಾಮಕ್ಕಳು ಆರು ಮಂದಿ ವಯಸ್ಕರು ಬಲಿಯಾದದ್ದು. ಈ ವರ್ಷದಲ್ಲಿ, ಅಂದರೆ ೨೦೧೨ರಲ್ಲಿ ಇದು ಮೂರನೆಯ ಪ್ರಕರಣ. ವಿಸ್ಕಾನ್ಸಿನ್‌ನ ಗುರುದ್ವಾರದಲ್ಲಿ, ಕೊಲರೇಡೋದ ಸಿನಿಮಾ ಮಂದಿರದಲ್ಲಿ ಇಂಥದೇ ದುರಂತ ಸಂಭವಿಸಿತ್ತು. ಇಷ್ಟಾದರೂ ಅಮೆರಿಕದಲ್ಲಿ ಬಂದೂಕು ಮುಕ್ತ ಮಾರಾಟ ಮಾತ್ರ ನಿಂತಿಲ್ಲ. ೧೯೮೨ರಿಂದ ಈವರೆಗೆ ಸುಮಾರು ಇಂಥ ೬೨ ಹತ್ಯಾಕಾಂಡದ ಪ್ರಕರಣಗಳು ನಡೆದಿವೆ ಎಂದು ಒಂದು ಲೆಖ್ಖಾಚಾರ ತಿಳಿಸುತ್ತದೆ. ಇವುಗಳಲ್ಲಿ ಬಳಕೆಯಾದ ಬಂದೂಕುಗಳಲ್ಲಿ ಹೆಚ್ಚಿನವು ಕಾನೂನು ರೀತ್ಯ ಖರೀದಿ ಮಾಡಿದವುಗಳು. ಹದಿನೆಂಟು ವಯಸ್ಸಿನ ಯಾರಾದರೂ ಡ್ರೈವಿಂಗ್ ಲೈಸನ್ಸ್ ಪಡೆದುಕೊಂಡಂತೆ ಬಂದೂಕು ಖರೀದಿಸಬಹುದು. ಮುಂದೆ ಇಂಥ ಪ್ರಕರಣಗಳು ನಡೆಯದ ಹಾಗೆ ನೋಡಿಕೊಳ್ಳುವ ಭರವಸೆಯನ್ನು ಅಧ್ಯಕ್ಷ ಒಬಾಮಾ ನೀಡಿದ್ದಾರೆ. ಅದು ಎಷ್ಟುಮಟ್ಟಿಗೆ ಸಾಧ್ಯವಾದೀತೋ ನೋಡಬೇಕು. ಅಂತೂ ಅಮೆರಿಕದ ಬಂದೂಕು ಸಂಸ್ಕೃತಿ ದೇಶದ ಒಳಗೂ ಹೊರಗೂ ಏಕಪ್ರಕಾರವಾಗಿ ಸಾಗಿದೆ.


**ಸೀಯಾರ್ಕೆ**

'ಚೌಬೀನ', ನಂ. ೮೪೧, ೬ನೇ ಕ್ರಾಸ್, ಬನಶಂಕರಿ ३ನೇ ಹಂತ, ३ನೇ ಬ್ಲಾಕ್

ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫




## ಧ್ಯಾನ

ಸರ್ಕಾರಿ ಕಛೇರಿಯಲ್ಲಿ
ಪ್ರಾಮಾಣಿಕತೆ
ಎಲ್ಲೆಂದು ಹುಡುಕುತ್ತಾ
ಕಾಯುವುದೇ...!

– ಕಮಲಂ ಅರಸು

# ನೀರು

## ವ್ಯಾಪಾರದ ಸರಕೇ ಅಥವಾ ಜೀವನಾಗತ್ಯ ವಸ್ತುವೆ ? ನೀರಿಗೆ ಬೆಲೆ ನಿಗದಿ ಮಾಡಬೇಕೆ ಅಥವಾ ಅದು ಪುಕ್ಕಟೆಯಾಗಿರಬೇಕೆ ?

ವಿಶ್ವದ ಪ್ರಜೆಗಳಾದ ನಾವು ಬೇರೆ ಬೇರೆ 'ಕಾಲ'ಗಳಲ್ಲಿ ಅಂದರೆ ಅಭಿವೃದ್ಧಿಯ ಬೇರೆ ಬೇರೆ ಹಂತಗಳಲ್ಲಿ, ಬೇರೆ ಬೇರೆ ಜೀವನಮಟ್ಟದಲ್ಲಿ ಬದುಕುತ್ತಿದ್ದೇವೆ. ಹೀಗೆ ವಿಚ್ಛಿದ್ರವಾಗಿರುವ ಈ ಪ್ರಪಂಚದಲ್ಲಿ ನೀರಿನ ಬಗೆಗೆ ಒಂದೇ ನಿಯಮವನ್ನು ಅನುಸರಿಸುವುದು ಸಾಧ್ಯವೇ ? ಪ್ರಪಂಚದಲ್ಲಿ ಹಲವು ಬಗೆಯ ಅಸಮಾನತೆಗಳಿರುವ ಕಾರಣದಿಂದಲೆ ನೀರಿಗೆ ಬೆಲೆ ನಿಗದಿಮಾಡುವ ವಿಚಾರವು ಇಷ್ಟೊಂದು ಚರ್ಚಾಸ್ಪದವಾಗಿದೆ. ಸಮಾನತೆಯ ಪ್ರಪಂಚದಲ್ಲಿ ನೀರಿನ ಬೆಲೆಯನ್ನು ಸಮನಾಗಿ ನಿಗದಿಮಾಡಿದರೆ ಚರ್ಚೆಗೆ ಅವಕಾಶವಿರುವುದಿಲ್ಲ, ಆದರೆ ಮಾರುಕಟ್ಟೆಯ ಆರ್ಥಿಕತೆಗೆ ಇದು ಸಮ್ಮತವಾಗುವುದಿಲ್ಲ. ಮಾರುಕಟ್ಟೆಯು ಯಾವಾಗಲೂ ಅಸಮಾನತೆಯ ಅವಕಾಶವನ್ನು ಬಳಸಿಕೊಂಡು ಲಾಭ ಗಳಿಸುವುದರಲ್ಲಿ ತೊಡಗುತ್ತದೆ. ಅದೇ ಮಾರುಕಟ್ಟೆಯ ನೀತಿ ನಿಯಮ.

ಡಾ॥ ಕೆ. ಎಲ್. ಗೋಪಾಲಕೃಷ್ಣಯ್ಯ

ಜನಸಂಖ್ಯೆಯ ಹೆಚ್ಚಳದ ಜೊತೆಗೆ ನಗರೀಕರಣ, ಕೈಗಾರಿಕೀಕರಣ ಮತ್ತು ನಗರ ಜೀವನದ ಅನುಭೋಗಶೈಲಿ (ಕೊಳ್ಳುಬಾಕ ಸಂಸ್ಕೃತಿ)ಗಳ ಕಾರಣದಿಂದಾಗಿ ಜಗತ್ತಿನೆಲ್ಲೆಡೆ ನೀರಿನ ಬಳಕೆಯು ಅಸಾಧಾರಣವಾಗಿ ಹೆಚ್ಚುತ್ತಿದೆ. ನೀರಿನ ಬಗೆಗೆ ಲಭ್ಯವಿರುವ ಅಂಕಿ ಸಂಖ್ಯೆಗಳು ಗಾಬರಿ ಹುಟ್ಟಿಸುವಂತಿವೆ. ಭೂಮಿಯ ಮೇಲಿರುವ ನೀರಿನ ಒಂದು ಭಾಗದಲ್ಲಿ ಅರ್ಧದಷ್ಟು ಶುದ್ಧನೀರು ಬಳಕೆಗೆ ದೊರೆಯುತ್ತದೆ.

ವಿಶ್ವಸಂಸ್ಥೆಯ ಮಾಹಿತಿಯ ಪ್ರಕಾರ ಜಾಗತಿಕವಾಗಿ ಪ್ರತಿ ಇಪ್ಪತ್ತು ವರ್ಷಗಳಲ್ಲಿ ಎರಡರಷ್ಟು, ಅಂದರೆ ಜನಸಂಖ್ಯೆ ಬೆಳವಣಿಗೆಯ ಎರಡರಷ್ಟು ಪ್ರಮಾಣದಲ್ಲಿ ಹೆಚ್ಚುತ್ತಿದೆ. ಅರೇಬಿಯಾ ಪರ್ಯಾಯದ್ವೀಪದಲ್ಲಿ ಪುನರುತ್ಪಾದನೆಯಾಗುವ ಅಂತರ್ಜಲದ ಮೂರರಷ್ಟನ್ನು ಮೇಲೆತ್ತಿ ಬಳಸಿಕೊಳ್ಳಲಾಗುತ್ತಿದೆ. ಇದೇ ಪ್ರಮಾಣದಲ್ಲಿ ನೀರನ್ನು ಮೇಲೆತ್ತುತ್ತ ಹೋದರೆ ಇನ್ನು ಐವತ್ತು ವರ್ಷಗಳಲ್ಲಿ ಅಂತರ್ಜಲವು ಸಂಪೂರ್ಣವಾಗಿ ಬತ್ತಿಹೋಗುತ್ತದೆ. ಇಸ್ರೇಲಿನಲ್ಲಿ ಇಪ್ಪತ್ತೈದು ವರ್ಷಗಳಲ್ಲಿ ಪುನರುತ್ಪತ್ತಿಯಾಗುವ ಅಂತರ್ಜಲಕ್ಕಿಂತ ೨.೫ ಬಿಲಿಯನ್ ಮೀಟರ್‌ಗಳಿಗಿಂತ ಹೆಚ್ಚಿನ ಪ್ರಮಾಣದ ನೀರನ್ನು ಹೊರತೆಗೆಯಲಾಗುತ್ತಿದೆ. ಅಲ್ಲದೆ, ಅಲ್ಲಿನ ಕರಾವಳಿಯ ನೀರಿನಲ್ಲಿ ಶೇಕಡ ೧೩ರಷ್ಟು ಭಾಗವು ಸಮುದ್ರದ ನೀರು ಮತ್ತು ಗೊಬ್ಬರಗಳ ಮಿಶ್ರಣದಿಂದ ಕಲುಷಿತಗೊಂಡಿದೆ. ಆಫ್ರಿಕಾದಲ್ಲಿ ಪುನಃಪೂರಣ ಮಾಡಲಾರದ ನೀರಿನ ಲಭ್ಯತೆಯು ಪ್ರತಿ ಹತ್ತು ವರ್ಷಗಳಲ್ಲಿ ೧೦ ಬಿಲಿಯನ್ ಘನಮೀಟರ್‌ಗಳಷ್ಟು ಕಡಮೆಯಾಗುತ್ತಿದೆ. ಭಾರತದಲ್ಲಿ ಪ್ರತಿವರ್ಷವೂ ಎಲ್ಲ ಕಡೆಗಳಲ್ಲೂ ಅಂತರ್ಜಲದಮಟ್ಟವು ಕುಸಿಯುತ್ತಿದೆ. ಬ್ಯಾಂಕಾಕ್‌ನಲ್ಲಿ ಅತಿಯಾಗಿ ನೀರೆತ್ತುತ್ತಿರುವುದರಿಂದ ಭೂಕುಸಿತವುಂಟಾಗುತ್ತಿದೆ. ಉತ್ತರ ಚೀನಾದ ಎಂಟು ಪ್ರದೇಶಗಳಲ್ಲಿ ಜಲಸಂಪನ್ಮೂಲಗಳ ಹೆಚ್ಚುವರಿ ಬಳಕೆ ಯಾಗುತ್ತಿದ್ದರೆ, ಬೀಜಿಂಗ್‌ನಲ್ಲಿ ಕಳೆದ ನಾಲ್ಕು ದಶಕಗಳಲ್ಲಿ ಅಂತರ್ಜಲದ ಮಟ್ಟವು ೩೭ ಮೀಟರ್‌ಗಳಷ್ಟು ಕುಸಿದಿದೆ ! ಜಗತ್ತಿನ ಕೃಷಿಪ್ರಧಾನ ಸ್ಥಳಗಳಲ್ಲಿ ಅಂತರ್ಜಲವನ್ನು ಅತಿಯಾಗಿ ಮೇಲೆತ್ತುವುದು ಮತ್ತು ಜಲಸಂಪನ್ಮೂಲಗಳ ಕೊರತೆಯು ತೀವ್ರ ಸಮಸ್ಯೆಗಳನ್ನುಂಟುಮಾಡಿದೆ. ಅಮೆರಿಕಾದ (೧೧.೮) ಟೆಕ್ಸಾಸ್ ಪಾನ್‌ಹಾಂಡ್ಲ್‌ನಿಂದ ದಕ್ಷಿಣದ ಡಕೋಟವರೆಗೆ ವಿಸ್ತರಿಸಿರುವ ೧೩೦೦ ಕಿಲೋಮೀಟರ್ ಪ್ರಸ್ಥಭೂಮಿಯ ಒಗಲ್ಲಾಲ ಜಲಮೂಲವು ಪ್ರಕೃತಿಯು ಪುನಃ ತುಂಬಿಕೊಡಬಹುದಾದುದಕ್ಕಿಂತ ಎಂಟರಷ್ಟು ವೇಗವಾಗಿ ಬತ್ತುತ್ತಿದೆ !

ಮುಂದಿನ ದಿನಗಳಲ್ಲಿ ಮಾನವ ಸಮುದಾಯವು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ನಗರೀಕರಣಗೊಳ್ಳಬಹುದಾದ ಸಾಧ್ಯತೆಯನ್ನು ಗಮನಿಸಿದರೆ, ನೀರಿನ ಬಗೆಗೆ ನಾವು ಯಥೋಚಿತವಾದ ನೀತಿ-ನಿಯಮಗಳನ್ನು ಅನುಸರಿಸುವುದು ಅನಿವಾರ್ಯವೆನಿಸುತ್ತದೆ. ನೀರನ್ನು ಸಂರಕ್ಷಿಸಬೇಕು ಮತ್ತು ಪ್ರಕೃತಿಯಲ್ಲಿ ನೀರಿನ ಸಮತೋಲನವನ್ನು ಅದರ ಪೂರ್ವಸ್ಥಿತಿಗೆ ತರಬೇಕು. ಈ ಕಾರಣಕ್ಕಾಗಿಯೇ ನೀರನ್ನು ವ್ಯಾಪಾರದ ಸರಕೆಂದು ಪರಿಗಣಿಸುವ ಮತ್ತು ಅದಕ್ಕೆ ಬೆಲೆ ನಿಗದಿಮಾಡುವ ವಿಚಾರದ ಚರ್ಚೆಯು ನಡೆಯಬೇಕಾಗಿದೆ.

ನೀರಿನ 'ಬೆಲೆ'ಯ ವಿಷಯಕ್ಕೆ ಬಂದಾಗ ನಾವು ಮೂರು ಮುಖ್ಯಾಂಶಗಳನ್ನು ಗಮನಿಸಬೇಕಾಗುತ್ತದೆ.



**ಪ್ಲಾಚಿಮಾಡ ಉದಾಹರಣೆ**

ಭಾರತವು ಉತ್ತಮ ಮಳೆ ಮಾರುತಗಳು, ಸಮೃದ್ಧವಾದ ನದಿಗಳಿಂದ ಕೂಡಿದ ಉಷ್ಣದೇಶ. ಇಲ್ಲಿ ದುಡ್ಡು ಕೊಡದೆ, ಸ್ವಲ್ಪ ಹೆಚ್ಚು ಕಡಮೆ ಪುಕ್ಕಟೆಯಾಗಿಯೇ ನೀರು ದೊರೆಯುತ್ತದೆ. ಪರಂಪರಾಗತವಾಗಿ ಭಾರತದ ಗ್ರಾಮೀಣ ಜನರು ನೀರಾವರಿ ಭೂಮಿಗೆ ಸಾಕಷ್ಟು ನೀರು ದೊರೆಯುವುದನ್ನು ಖಚಿತಪಡಿಸಿಕೊಂಡಿದ್ದರು. ನೀರಾವರಿ ಬೆಳೆಗಳಿಗೆ ನೀರುಣಿಸುವುದಕ್ಕೆ ಅನುಕೂಲವಾದ ಪರಿಸರ ಸಂವೇದನೆಯುಳ್ಳ ತಂತ್ರಗಳನ್ನೂ ಬಳಸುತ್ತಿದ್ದರು. ಆದರೆ, ೧೯೯೦ರ ಆರಂಭದಲ್ಲಿ ಭಾರತದಲ್ಲಿ ವಿದೇಶೀ ಬಂಡವಾಳ ಹೂಡಿಕೆಗೆ ಅವಕಾಶ ಮಾಡಿಕೊಟ್ಟಾಗ, ಖಾಸಗಿ ಕಂಪನಿಗಳಿಗೆ ನೀರು ತುಂಬ ಲಾಭದಾಯಕವಾದ ವಸ್ತುವೆಂಬುದು ತಿಳಿಯಿತು. ಅಗ್ಗವಾಗಿ ದೊರೆಯುವ ಅಂತರ್ಜಲ, ಅದನ್ನು ಮೇಲೆತ್ತಲು ತಗಲುವ ಕಡಮೆ ಖರ್ಚು, ಕಡಮೆ ಕೂಲಿ (ಸಂಬಳ)ಗೆ ಸಿಕ್ಕುವ ಕೆಲಸಗಾರರು ಮತ್ತು ವಿದೇಶೀ ಬಂಡವಾಳವನ್ನು ಆಕರ್ಷಿಸುವ ಸಲುವಾಗಿ ಸೌಲಭ್ಯಗಳನ್ನು ಒದಗಿಸುವ ದೇಶದ ಮತ್ತು ಸ್ಥಳೀಯ ಆಡಳಿತ ವ್ಯವಸ್ಥೆಗಳು ಇತ್ಯಾದಿಗಳಿಂದಾಗಿ ಕೋಕಕೋಲ ಕಂಪನಿಯು ೧೯೯೮-೨೦೦೦ದ ಕಾಲಾವಧಿಯಲ್ಲಿ ಪ್ಲಾಚಿಮಾಡವನ್ನು ಪ್ರವೇಶಿಸಿತು. ಇದೇ ಸಮಯದಲ್ಲಿ ಅಮೆರಿಕಾ ದೇಶದಲ್ಲಿ ಪ್ರತಿ ೧೦೦೦ ಲೀಟರ್ ಕೈಗಾರಿಕೋಪಯೋಗಿ ನೀರಿಗೆ ತಗಲುವ ವೆಚ್ಚವು ೨೧ ರೂಪಾಯಿ, ಬ್ರಿಟನ್‌ನಲ್ಲಿ ಪ್ರತಿ ಸಾವಿರ ಲೀಟರ್‌ಗೆ ೯೦ ರೂಪಾಯಿಗಳು ಮತ್ತು ಕೆನಡಾದಲ್ಲಿ ೭೬ ರೂಪಾಯಿಗಳ ಬೆಲೆಯಿತ್ತು. ಆದರೆ ಭಾರತದಲ್ಲಿ ಪ್ರತಿ ೧೦೦೦ ಲೀಟರ್‌ಗಳಿಗೆ ತಗಲುವ ವೆಚ್ಚವು ೧೪ ಪೈಸೆ ಮಾತ್ರ! ಕೋಕಕೋಲ ಕಂಪನಿಯು ಭಾರತದಲ್ಲಿ ಉತ್ಪಾದನೆಯನ್ನಾರಂಭಿಸಲು ಕಾರಣವಾದ ಆರ್ಥಿಕ ಲೆಕ್ಕಾಚಾರ ಇದು!

ಪ್ಲಾಚಿಮಾಡವು ಭಾರತದ ದಕ್ಷಿಣದಲ್ಲಿರುವ ಕೇರಳ ರಾಜ್ಯದಲ್ಲಿದೆ. ಅಲ್ಲಿ ಕೋಕಕೋಲ ಕಂಪನಿಯು ೧೯೯೮ರಲ್ಲಿ ೩೪.೬೪ ಎಕರೆ ಭೂಮಿಯನ್ನು ಕೊಂಡುಕೊಂಡು, ಭಾರತದ ಅತ್ಯಂತ ಕೆಳಮಟ್ಟದ ಆಡಳಿತ ವ್ಯವಸ್ಥೆಯಾದ ಪೆರುಮಟ್ಟಿ ಗ್ರಾಮಪಂಚಾಯಿತಿಯಿಂದಲೂ, ರಾಜ್ಯ ಸರ್ಕಾರದಿಂದಲೂ ದಿನಂಪ್ರತಿ ಅರ್ಧ ಮಿಲಿಯ ಲೀಟರ್‌ಗಳಷ್ಟು ತಂಪು ಪಾನೀಯವನ್ನು ಉತ್ಪಾದಿಸಲು ರಹದಾರಿ ಪಡೆಯಿತು. ಪೆರುಮಟ್ಟಿ ಗ್ರಾಮಪಂಚಾಯಿತಿಯು – ಆದಿವಾಸಿ (ಗುಡ್ಡಗಾಡು ಜನರು)ಗಳ ವಸತಿ ಪ್ರದೇಶಗಳೂ ಸೇರಿದಂತೆ – ಹಲವಾರು ಹಳ್ಳಿಗಳನ್ನು ಒಳಗೊಳ್ಳುತ್ತದೆ. ಕೋಕಕೋಲ ಕಂಪನಿಯು ತಮ್ಮ ಪ್ರದೇಶಕ್ಕೆ ಕಾಲಿಟ್ಟ ಸಂದರ್ಭದಲ್ಲಿ ಆದಿವಾಸಿ ಜನರು ತಮ್ಮ ಹಕ್ಕುಗಳ ರಕ್ಷಣೆಗಾಗಿ ಮತ್ತು ರಾಜಕೀಯ ಹಾಗೂ ಆರ್ಥಿಕ ಆಡಳಿತವನ್ನು ತಾವೇ ನಿರ್ವಹಿಸುವ ಸ್ವಾತಂತ್ರ್ಯದ ಸಲುವಾಗಿ ಹೋರಾಟ ಮಾಡುತ್ತಿದ್ದರು. ಅವರ ಎಲ್ಲ ಪ್ರಯತ್ನಗಳ ಹೊರತಾಗಿ ಇಂದಿಗೂ ಅವರು ವಿಶಾಲವಾದ ಪೆರುಮಟ್ಟಿ ಪಂಚಾಯಿತಿಯ ಅಧೀನದಲ್ಲಿಯೇ ಇದ್ದಾರೆ.

ತಾವೇ ಕೊಡುವ ಅಂಕೆಸಂಖ್ಯೆಗಳ ಪ್ರಕಾರ ಕೋಕಕೋಲ ಕಂಪನಿಯು ದಿನಂಪ್ರತಿ ಸರಾಸರಿ ಸುಮಾರು ೫೦೦,೦೦೦ದಿಂದ ೧.೫ ಮಿಲಿಯ ಲೀಟರ್ ಅಂತರ್ಜಲವನ್ನು ಮೇಲೆತ್ತುತ್ತಿದೆ. (ಸ್ಥೂಲವಾಗಿ, ಪ್ರತಿ ಲೀಟರ್ ತಂಪು ಪಾನೀಯ ಅಥವಾ ಸೀಸೆಗಳಲ್ಲಿ ತುಂಬಿಸಿದ (ಮಿನರಲ್ ? – ಸಂಸ್ಕರಿಸಿದ ?) ನೀರನ್ನು ತಯಾರಿಸಲು ೩ ಲೀಟರ್ ಅಂತರ್ಜಲವು ಬೇಕಾಗುತ್ತದಂತೆ). ಅಂದಮೇಲೆ ಎರಡು ವರ್ಷಗಳಲ್ಲಿ ಅಂತರ್ಜಲದ ಮಟ್ಟವು ಗಣನೀಯವಾಗಿ ಕುಸಿದುದರಲ್ಲಿ ಆಶ್ಚರ್ಯವಿಲ್ಲ. ಇಷ್ಟೇ ಅಲ್ಲದೆ ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅಂತರ್ಜಲವು ಕಲುಷಿತಗೊಂಡಿರುವುದಕ್ಕೆ ಪುರಾವೆಗಳಿವೆ. 'ಸ್ಟೇಟ್ಸ್‌ಮನ್' ಪತ್ರಿಕೆಯಲ್ಲಿ ಪ್ರಕಟವಾದ ಲೇಖನವೊಂದರಲ್ಲಿ ಅರ್ಜುನ್‌ಸರ್ಜಾ ಹೇಳುವುದು ಹೀಗೆ: ''ಮೂರು ವರ್ಷಗಳ ಹಿಂದೆ ಪಾಲಕ್ಕಾಡ್ ಪ್ರದೇಶದಲ್ಲಿ, ಗುಡ್ಡ ಬೆಟ್ಟಗಳಿಂದ ಸುತ್ತುವರಿದ ಮನೋಹರವಾದ ಒಂದು ತುಂಡು ಭೂಮಿಯಲ್ಲಿ ವರ್ಷಂಪ್ರತಿ ೫೦ ಚೀಲ ಅಕ್ಕಿ ಮತ್ತು ೧೫೦೦ ತೆಂಗಿನಕಾಯಿಗಳನ್ನು ಬೆಳೆಯಲಾಗುತ್ತಿತ್ತು ಮತ್ತು ಇದು ಒಂದು ಡಜ಼ನ್ ಕೆಲಸಗಾರರಿಗೆ ಉದ್ಯೋಗ ನೀಡುತ್ತಿತ್ತು. ಆ ತುಂಡು ಭೂಮಿಯ ಸಮೀಪ ೪೦ ಎಕರೆ ಜಾಗದಲ್ಲಿ ಕೋಕಾಕೋಲ ಕಂಪನಿಯು ಸೀಸೆಗಳಿಗೆ ನೀರು ತುಂಬಿಸುವ ಕಾರ್ಖಾನೆಯನ್ನು ಸ್ಥಾಪಿಸಿದ ಮೇಲೆ ಅದೇ ತುಂಡು ಭೂಮಿಯಲ್ಲಿ ಐದು ಚೀಲ ಅಕ್ಕಿ ಮತ್ತು ೨೦೦ ತೆಂಗಿನಕಾಯಿಗಳನ್ನು ಮಾತ್ರ ಬೆಳೆಯಲು ಸಾಧ್ಯವಾಗುತ್ತಿದೆ! ಕೋಕಕೋಲ ಕಂಪನಿಯು ಕೋಕ್, ಫಾಂಟ, ಸ್ಪ್ರೈಟ್ ಮೊದಲಾದ ತಂಪು ಪಾನೀಯಗಳನ್ನು ತಯಾರಿಸುವುದಕ್ಕಾಗಿ ಬಹು ಆಳವಾದ ಕೊಳವೆ ಬಾವಿಗಳಿಂದ ದಿನಂಪ್ರತಿ ೧.೫ ಮಿಲಿಯನ್ ಲೀಟರ್ ನೀರನ್ನು ಮೇಲೆತ್ತುತ್ತಿರುವುದರ ಫಲವಾಗಿ ಸುತ್ತಮುತ್ತಲಿನ ಸಾಮಾನ್ಯ ನೀರಾವರಿ ಬಾವಿಗಳು ಬತ್ತಿಹೋಗುತ್ತಿವೆ.

ವ್ಯವಸಾಯಗಾರರಿಗೆ ನೀರಿನ ಕೊರತೆಯ ಜೊತೆಗೆ ಕೋಕಕೋಲ ಕಂಪನಿಯು ಉಪಯೋಗಕ್ಕೆ ಬಾರದ ವಿಷಪೂರಿತವಾದ ಗೋಡುಮಣ್ಣನ್ನು ತಂದು ಹತ್ತಿರದ ವ್ಯವಸಾಯ ಭೂಮಿಯಲ್ಲಿ ಸುರಿಯುತ್ತಿದೆ. ೨೦೦೩ರ ಜುಲೈ ವೇಳೆಗೆ ಹೊಲ ಗದ್ದೆಗಳಲ್ಲಿ

ಸುರಿದ ಗೋಡುಮಣ್ಣು ತುಂಬ ವಿಷಪೂರಿತವಾಗಿರುವ ವಿಚಾರವು ಬಿ.ಬಿ.ಸಿ. ಸುದ್ದಿಪ್ರಸಾರದ ಮೂಲಕ ಹೆಚ್ಚಿನ ಪ್ರಚಾರ ಪಡೆಯಿತು. ಆಮೇಲೆ ಕೇರಳ ರಾಜ್ಯದ ಮಾಲಿನ್ಯ ನಿಯಂತ್ರಣ ಮಂಡಳಿಯು ಈ ವಿಚಾರವನ್ನು ಖಚಿತ ಪಡಿಸಿಕೊಂಡು ಕೋಕಕೋಲ ಕಂಪನಿಯು ಇನ್ನು ಮುಂದೆ ಅಲ್ಲಿ ಗೋಡುಮಣ್ಣು ಸುರಿಯುವುದನ್ನು ನಿಲ್ಲಿಸಬೇಕೆಂದೂ, ಹತ್ತಿರದ ಜಮೀನಿನಲ್ಲಿ ಈಗಾಗಲೇ ಸುರಿದಿರುವ ಗೋಡುಮಣ್ಣನ್ನು ತೆಗೆಸಬೇಕೆಂದೂ ಕಂಪನಿಯ ಮೇಲೆ ಒತ್ತಾಯ ಹೇರಿತು. ಅಂತರ್ಜಲವು ತೀವ್ರವಾಗಿ ಕುಸಿಯು ತ್ತಿರುವುದರಿಂದ ರೈತರು ಅನುಭವಿಸುತ್ತಿರುವ ಕಷ್ಟನಷ್ಟಗಳನ್ನು ಅರ್ಥಮಾಡಿಕೊಂಡ ಸ್ಥಳೀಯ ಪಂಚಾಯಿತಿಯು ೨೦೦೩ರಲ್ಲಿ ಕೋಕಕೋಲ ಕಂಪನಿಯ ರಹದಾರಿಯನ್ನು ರದ್ದುಮಾಡಿತು. ನೀರಿನ ಅಭಾವ, ಗೋಡುಮಣ್ಣು, ಕ್ರಿಮಿನಾಶಕಗಳ ಬಳಕೆಯ ವಿಚಾರ ಮತ್ತು ನಿರ್ದಿಷ್ಟ ಪ್ರದೇಶದ ಆಡಳಿತಾಧಿಕಾರ ಹಾಗೂ ಆದಿವಾಸಿಗಳ ಹಕ್ಕು ಬಾಧ್ಯತೆಗಳ ವಿಚಾರದಲ್ಲಿ ಸ್ಥಳೀಯ ಪಂಚಾಯಿತಿ, ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕೇರಳ ಸರ್ಕಾರಗಳ ನಡುವೆ ನ್ಯಾಯಾಲಯದಲ್ಲಿ ಕಾನೂನು ಹೋರಾಟಗಳು ಇಂದಿಗೂ ನಡೆಯುತ್ತಲೇ ಇವೆ. ೨೦೦೪ರಲ್ಲಿ ಕೇರಳ ರಾಜ್ಯವು ತೀವ್ರ ಬರಗಾಲವನ್ನು ಎದುರಿಸಬೇಕಾಗಿ ಬಂತು ಮತ್ತು ೨೦೦೫ರಲ್ಲಿ ಪ್ಲಾಚಿಮಾಡವನ್ನೂ 'ನೀರಿನ ಅಭಾವಕ್ಕೆ ಒಳಗಾದ ಪ್ರದೇಶ'ವೆಂದು ಘೋಷಿಸಲಾಯಿತು.



ಪ್ಲಾಚಿಮಾಡ ಘಟನೆಯು ಹಲವಾರು ಪ್ರಶ್ನೆಗಳನ್ನೆತ್ತುತ್ತದೆ. ಆದರೆ ಆ ಎಲ್ಲ ವಿಚಾರ ಗಳನ್ನು ಚರ್ಚಿಸಲು ಇಲ್ಲಿ ಅವಕಾಶವಿಲ್ಲ. ಪ್ರಸ್ತುತ ಲೇಖನದಲ್ಲಿ ನಾವು ಪರ್ಯಾಲೋಚಿಸ ಬೇಕಾಗಿರುವ ಮುಖ್ಯ ವಿಚಾರವು ಇದು : ಪ್ಲಾಚಿಮಾಡ ವ್ಯಾಪ್ತಿಯಲ್ಲಿರುವ ಗುಡ್ಡಗಾಡು ಜನರು ಕೋಕಕೋಲ ಕಂಪನಿಯು ಬಳಸುವ ನೀರಿನ ಮೌಲ್ಯವನ್ನು ಅರಿತಿದ್ದರಾದರೂ ಅವರು ಅದಕ್ಕೆ ಕರಾರುವಾಕ್ಕಾದ ಬೆಲೆ ನಿಗದಿ ಮಾಡಿದ್ದರೆ? ಪ್ಲಾಚಿಮಾಡ ನೀರಿಗೆ ಸೂಕ್ತ ಬೆಲೆ ನಿರ್ಧರಿಸುವುದು ಹೇಗೆ? ನೀರಿನ ಮೌಲಿಕತೆ ಏನು? ದೀರ್ಘಕಾಲದಲ್ಲಿ ಉಂಟಾಗಬಹುದಾದ ಭೂಮಿಯ ಫಲವತ್ತತೆಯ ನಷ್ಟ, ಅಂತರ್ಜಲದ ಕೊರತೆ, ಜಲಮಾಲಿನ್ಯ ಇತ್ಯಾದಿ ದುಷ್ಪರಿಣಾಮಗಳನ್ನೆಲ್ಲ ಲೆಕ್ಕಕ್ಕೆ ತೆಗೆದುಕೊಂಡು ನೀರಿಗೆ ಸರಿಯಾದ ಬೆಲೆ ಕಟ್ಟುವುದಾದರೂ ಹೇಗೆ?

ಮೇಲಿನ ಪ್ರಶ್ನೆಗೆ ಉತ್ತರವಾಗಿ 'ಜಗತ್ತಿನ ಪ್ರಥಮ ದರ್ಜೆ' ದೇಶದ ನಾಗರಿಕನೊಬ್ಬನು ಕೊಡುವ ಉತ್ತರವು ಬಹುತೇಕ ಹೀಗಿರಬಹುದು: ನೀರಿಗೆ ಬೆಲೆ ನಿಗದಿಪಡಿಸುವುದು ಖಂಡಿತವಾಗಿಯೂ ಮುಖ್ಯವಾದುದು ಮತ್ತು ಆ ಕೆಲಸ ಮಾಡುವುದಕ್ಕೆ ಮುನ್ನ ನೀರಿನ ಬಳಕೆ, ದುರ್ಬಳಕೆ ಮತ್ತು ಅನುಭೋಗಕ್ಕಾಗಿ ಬಳಕೆ ಮೊದಲಾದವುಗಳಿಂದ ಉಂಟಾಗುವ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ಬಗೆಗೆ ಸರಿಯಾದ ತಿಳಿವಳಿಕೆಯಿರುವುದು, ಒಳ್ಳೆಯ ಸಾರ್ವಜನಿಕ ನಿರ್ವಹಣೆ ಮತ್ತು ಸಮರ್ಥ ತಂತ್ರಜ್ಞಾನಗಳು ಅಗತ್ಯ ವಾಗುತ್ತವೆ. ಆದ್ದರಿಂದ ಮೊದಲು ಜಗತ್ತಿನ ಪ್ರಥಮ ದರ್ಜೆ ದೇಶದ ನಗರವೊಂದರ ಹಿನ್ನೆಲೆಯಲ್ಲಿ ಬೆಲೆ ನಿಗದಿಯ ವಿಚಾರವನ್ನು ಚರ್ಚಿಸೋಣ.

**ನೀರಿಗೆ ಬೆಲೆ ನಿಗದಿಪಡಿಸುವುದಾದರೆ ಅದನ್ನು ಸಾರ್ವಜನಿಕ ಮಂಡಳಿಗಳು ನಿರ್ವಹಿಸಬೇಕೆ?**

**ಆರ್ಥಿಕ ಸಹಕಾರ ಮತ್ತು ಅಭಿವೃದ್ಧಿ ಸಂಸ್ಥೆಯ ಉದಾಹರಣೆ :**

ನಗರೀಕರಣಗೊಂಡ ಜನಸಮುದಾಯದ ಒಂದು ಸೂಕ್ತವಾದ ಉದಾಹರಣೆ ಒ.ಇ.ಸಿ.ಡಿ. ದೇಶಗಳು. ಒ.ಇ.ಸಿ.ಡಿ. ಸದಸ್ಯದೇಶಗಳಲ್ಲಿ ಹೆಚ್ಚು ಕಡಮೆ ಶೇಕಡ ೯೦ರಷ್ಟು ಜನ ಜಲಮಾಪಕಗಳನ್ನು ಅಳವಡಿಸಿದ ಮನೆ ಗಳಲ್ಲಿ ವಾಸಿಸುತ್ತಾರೆ. ಕೆಲವು ವಿಶೇಷ ಸಂದರ್ಭಗಳಲ್ಲಿ (ಬರಗಾಲ, ಗುಣಮಟ್ಟದ ನೀರಿನ ಕೊರತೆ ಇತ್ಯಾದಿ) ನೀರಿನ ದರ ಹೆಚ್ಚಿಸುವುದನ್ನು ಒಂದು ಸಾರ್ವಜನಿಕ ನಿಯಮವೆಂದು ಒಪ್ಪಿಕೊಳ್ಳಲಾಗಿದೆ. ಬಳಸಿದ ನೀರಿಗೆ ಜಲಮಾಪಕವು ತೋರಿಸಿದ ಅಳತೆಗೆ ಅನುಗುಣವಾಗಿ ಹಣ ತೆರಬೇಕು. ಜಲಮಾಪಕಕ್ಕೆ ಹಣ ಪಾವತಿಸುವುದು, ಅಂತರ್ಜಲವನ್ನು ಮೇಲೆತ್ತುವುದು, ಕಲುಷಿತ ನೀರನ್ನು ನಿರ್ದಿಷ್ಟ ಸ್ಥಳಕ್ಕೆ ಹರಿಯಬಿಡುವುದು – ಇದಕ್ಕೆಲ್ಲ ವಾಣಿಜ್ಯ ಅನುಮತಿಯನ್ನು ಪಡೆಯುವುದು, ದಂಡ ಪಾವತಿಸುವುದು ಇವೆಲ್ಲ ಮಾರುಕಟ್ಟೆಯ ವಿಧಾನಗಳಾಗಿದ್ದು, ಇದರಿಂದ ಶುದ್ಧವಾದ ಮತ್ತು ಆರೋಗ್ಯಕರವಾದ ನೀರನ್ನು ಪಡೆಯುವುದು ಮಾತ್ರವಲ್ಲದೆ, ದೀರ್ಘಕಾಲದ ವರೆಗೆ ನೀರನ್ನೂ ರಕ್ಷಿಸಿಕೊಳ್ಳುವುದು ಸಾಧ್ಯವಾಗುತ್ತದೆ ಎಂದು ಒ.ಇ.ಸಿ.ಡಿ. ದೇಶಗಳು ತತ್ವತಃ ಅಂಗೀಕರಿಸಿವೆ. ಈ ಕಾರಣದಿಂದಾಗಿಯೇ ಒ.ಇ.ಸಿ.ಡಿ. ದೇಶಗಳು ಸುತ್ತಲಿನ ಕರಾವಳಿ ಪ್ರದೇಶಗಳೂ ಸೇರಿದಂತೆ ಪರಿಸರದ ಮೇಲೆ ಪ್ರಭಾವ ಬೀರುವ ಎಲ್ಲ ಅಂಶಗಳನ್ನೂ ಒಳಗೊಳ್ಳುವಂಥ ನೀತಿಗಳನ್ನು ರೂಪಿಸಲು ಪ್ರಯತ್ನಿಸುತ್ತಿವೆ.

ಈ ದೇಶಗಳಲ್ಲಿ ನೀರಿನ ಬೆಲೆ ನಿಗದಿ ಮಾಡುವ ಉದ್ದೇಶವು ಇದರಿಂದ ನೀರಿನ ಲಭ್ಯತೆ ಮತ್ತು ಗುಣಮಟ್ಟವನ್ನು ಕಾಪಾಡಲು ಸಾಧ್ಯವಾಗುತ್ತದೆ ಎಂಬುದಾಗಿದೆ. ಹೀಗೆ ನೀರಿಗೆ ಬೆಲೆ ನಿಗದಿ ಮಾಡುವ ವ್ಯವಸ್ಥೆಯು ಮೂಲಸೌಕರ್ಯಗಳನ್ನು ಅಭಿವೃದ್ಧಿ ಪಡಿಸಲು ಮತ್ತು ವಿಸ್ತರಣೆಗೆ ಅಗತ್ಯವಾದ ಹಣವನ್ನೂ ಒದಗಿಸುವುದರಿಂದ ಎಲ್ಲ ನಾಗರಿಕರಿಗೂ ಕೈಗೆಟಕುವ ದರದಲ್ಲಿ ನೀರನ್ನು ಒದಗಿಸಬಹುದೆಂದು ಸಾಧ್ಯ ವಾಗುವುದೆಂಬುದು ಈ ಒ.ಇ.ಸಿ.ಡಿ. ದೇಶಗಳ ಅಭಿಪ್ರಾಯ. ಗ್ರಾಹಕರು ಬಳಸಿದ ನೀರಿಗೆ ಮಾಪಕಗಳನ್ನು ಅಳವಡಿಸುವುದು ಈ ಯೋಜನೆಯ ಮೊದಲ ಹೆಜ್ಜೆ. ಹೆಚ್ಚು ನೀರು ಬಳಸುವವರಿಗೆ ಸೋಡಿ ಕೊಡುವುದಕ್ಕೆ ಬದಲಾಗಿ, ಹೆಚ್ಚುವರಿಯಾಗಿ ಬಳಸಿದ ಪ್ರತಿ 'ಯುನಿಟ್' ನೀರಿಗೆ ಹೆಚ್ಚು ಬೆಲೆ ತೆರಬೇಕಾಗಿರುವುದರಿಂದ ಲಭ್ಯವಿರುವ ನೀರನ್ನು ಉಳಿಸಿಕೊಳ್ಳಲು ಸಹಾಯಕವಾಗುತ್ತದೆ. ಮಲಿನಗೊಂಡ ನೀರನ್ನು ಸಂಸ್ಕರಿಸಿ ಪುನಃ




**ನಗರದಲ್ಲಿನ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ವರ್ಲ್ಡ್ ಕಲ್ಚರ್ ಸಭಾಂಗಣದಲ್ಲಿ ನವಕರ್ನಾಟಕ ಪ್ರಕಾಶನದ ಮೂರು ಪುಸ್ತಕಗಳನ್ನು ('ರಾಷ್ಟ್ರೀಯ ಆಂದೋಲನ' ಲೇ: ಇರ್ಫಾನ್ ಹಬೀಬ್, ಅನು : ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ ; 'ಆಧುನಿಕ ಭಾರತದ ಇತಿಹಾಸ' ಲೇ: ಬಿಪಿನ್ ಚಂದ್ರ, ಅನು : ಡಾ|| ಎಚ್. ಎಸ್. ಗೋಪಾಲರಾವ್ ; 'ಇಸ್ಲಾಂ : ಕೆಲವು ತಪ್ಪುಗ್ರಹಿಕೆಗಳು' ಲೇ: ಡಾ|| ಅಸ್ಗರ್ ಅಲಿ ಎಂಜಿನಿಯರ್, ಅನು: ಹಸನ್ ನಯೀಂ ಸುರಕೋಡ) ೨೫-೧೧-೨೦೧೨ರಂದು ಬಿಡುಗಡೆ ಮಾಡಲಾಯಿತು. ಸಭೆಯ ಅಧ್ಯಕ್ಷತೆಯನ್ನು ಪ್ರೊ|| ಷ. ಶೆಟ್ಟರ್ ವಹಿಸಿ ಕೃತಿಗಳ ಬಿಡುಗಡೆ ನೆರವೇರಿಸಿದರು. ಮೂರೂ ಕೃತಿಗಳ ಅನುವಾದಕರು ವೇದಿಕೆಯಲ್ಲಿ ಉಪಸ್ಥಿತರಿದ್ದರು. ಚಿತ್ರದಲ್ಲಿ ಕ್ರಮವಾಗಿ ಶ್ರೀ ಹಸನ್ ನಯೀಂ ಸುರಕೋಡ, ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ, ಡಾ|| ಎಂ. ವಿ. ವಸು, ಪ್ರೊ|| ಷ. ಶೆಟ್ಟರ್, ಡಾ|| ಎಚ್. ಎಸ್. ಗೋಪಾಲರಾವ್, ನವಕರ್ನಾಟಕದ ಹಿರಿಯ ಸಂಪಾದಕ ಶ್ರೀ ಸಿ. ಆರ್. ಕೃಷ್ಣರಾವ್ ಅವರನ್ನು ಕಾಣಬಹುದು.**

ಬಳಕೆ ಮಾಡಿಕೊಳ್ಳುವಂತೆ ಮಾಡುವುದು ತುಂಬ ಸಂಕೀರ್ಣವಾದ ವಿಧಾನ. ಹೀಗಾಗಿ ಒ.ಇ.ಸಿ.ಡಿ. ದೇಶಗಳಲ್ಲಿ ನೈಸರ್ಗಿಕ ಮೂಲಗಳಿಂದ ದೊರೆಯುವ ನೀರಿನ ಶೇಕಡ ೭೫ರಷ್ಟು ಭಾಗವನ್ನು ಇಲ್ಲಿ ಕೈಗಾರಿಕೆಗಳಿಗೆ ಬಳಸಿಕೊಳ್ಳಲಾಗುತ್ತಿದೆ. ಆದ್ದರಿಂದ ಕೈಗಾರಿಕೆಗಳಿಗೆ ಶುದ್ಧ ನೀರಿನ ಬಳಕೆಯು ಕಡಮೆಯಾಗುವಂತೆ ಮಾಡುವ ವಿಚಾರವು ಕೂಡ ಪರಿಶೀಲನೆಯಲ್ಲಿದೆ. ಈ ಎಲ್ಲ 'ಆದರ್ಶಮಯ' ಪ್ರಕ್ರಿಯೆಗಳ ಹೊರತಾಗಿಯೂ ಬಹುತೇಕ ಒ.ಇ.ಸಿ.ಡಿ. ದೇಶಗಳಲ್ಲಿ ಈಚಿನ ವರ್ಷಗಳಲ್ಲಿ ನೀರಿನ ದರವು ಹೆಚ್ಚುತ್ತಲೇ ಇದೆ. ಅಂತರ್ಜಲವನ್ನು ಹೆಚ್ಚಾಗಿ ಬಳಸುವುದರಿಂದ ನೀರಿನ ಗುಣಮಟ್ಟವು ಕಡಮೆಯಾಗುತ್ತಿದೆ. ಸರ್ಕಾರದ ಆಯವ್ಯಯವನ್ನು ಪರಮಾವಧಿಗೆ ಕೊಂಡೊಯ್ಯುವುದು ಕೂಡ ಪ್ರತಿವರ್ಷ ನೀರಿನ ದರವು ಹೆಚ್ಚಲು ಕಾರಣವಾಗುತ್ತದೆ. ಇದರ ಜೊತೆಗೆ ಹಿಂದಿನ ಅನಿರ್ದಿಷ್ಟ ಮೂಲಗಳಿಂದ ಹರಿದುಬರುವ ಮಾಲಿನ್ಯದಿಂದ ಕೂಡಿದ ಅಂತರ್ಜಲವನ್ನು ಸಂಸ್ಕರಿಸಲು ತುಂಬ ಸೂಕ್ಷ್ಮವಾದ ತಂತ್ರಜ್ಞಾನ ಮತ್ತು ಹೆಚ್ಚಿನ ಬೆಲೆಯ ಸಂಸ್ಕರಣ ಸಾಧನಗಳು ಅಗತ್ಯವಾಗುತ್ತವೆ. ಈ ಎಲ್ಲ ಪ್ರವೃತ್ತಿಗಳು ಸದ್ಯದಲ್ಲಿ ವಿಮುಖವಾಗುವ ಸಾಧ್ಯತೆಗಳೂ ಕಾಣಿಸುತ್ತಿಲ್ಲ. ಹೀಗಾಗಿ ಒ.ಇ.ಸಿ.ಡಿ. ದೇಶಗಳಲ್ಲಿ ನೀರಿನ ಅಭಾವವು ಮತ್ತಷ್ಟು ಬೆಳೆಯುವ ಸಾಧ್ಯತೆಯೇ ಹೆಚ್ಚು.

ಮೇಲಿನ ಎರಡು ಉದಾಹರಣೆಗಳ ಪೈಕಿ ಮೊದಲನೆಯದು ಪ್ಲಾಚಿಮಾಡ – ಗ್ರಾಮೀಣ ಅರ್ಥ ವ್ಯವಸ್ಥೆ, ಬಡತನ, ಅವಿದ್ಯಾವಂತರು, ಅನಕ್ಷರಸ್ಥರಿಂದ ಕೂಡಿದ ಅಭಿವೃದ್ಧಿ ಮತ್ತು ತಂತ್ರಜ್ಞಾನಗಳಿಗಾಗಿ ಮೊದಲ ದರ್ಜೆಯ ಜಗತ್ತಿನ ದೇಶಗಳನ್ನು ಅವಲಂಬಿಸಿರುವಂತಹ ಪ್ರದೇಶ. ಎರಡನೆಯದು (ಒ.ಇ.ಸಿ.ಡಿ. ದೇಶಗಳು) ನಗರೀಕರಣಗೊಂಡ, ವಿದ್ಯಾವಂತರಿಂದ ಕೂಡಿದ ತಂತ್ರಜ್ಞಾನ-ಕೌಶಲಗಳಲ್ಲಿ ಮುಂದುವರಿದ, ಸ್ವಯಂ ನಿಯಂತ್ರಣವುಳ್ಳ, ಆರ್ಥಿಕವಾಗಿ ಪ್ರಬಲವಾದ ಪ್ರದೇಶ. ಈ ಎರಡರಲ್ಲಿಯೂ ಸಾಮಾನ್ಯವಾಗಿರುವುದು ನೀರಿನ ಅಭಾವ. ಮೊದಲಿನ ಉದಾಹರಣೆಯ ಬಡತನದ ಪ್ರದೇಶದಲ್ಲಿ ನೀರಿನ ಬೆಲೆಯನ್ನು ನಿಗದಿ ಮಾಡಿಲ್ಲ. ಎರಡನೆಯದರಲ್ಲಿ ನೀರಿನ ಬೆಲೆಯನ್ನು ನಿಗದಿಮಾಡಿ ಬಳಕೆಯನ್ನು ನಿಯಂತ್ರಿಸಲಾಗುತ್ತಿದೆ. ಹೀಗಿದ್ದರೂ ಎರಡೂ ಬಗೆಯ ಪ್ರದೇಶಗಳಲ್ಲಿ ನೀರಿನ ಕೊರತೆಯುಂಟಾಗುತ್ತಿರುವುದು ತುಂಬ ಆತಂಕಕಾರಿ ವಿಷಯವಾಗಿದೆ.

ಒ.ಇ.ಸಿ.ಡಿ. ದೇಶಗಳಲ್ಲಿ ನೀರಿನ ಕೊರತೆಗೆ ನೀರಿನ ಅಸಮರ್ಥ ಬಳಕೆ (ದುರ್ಬಳಕೆ)ಯೇ ಕಾರಣವೆಂದು ಭಾವಿಸಿ ಈ ಲೋಪವನ್ನು ಸರಿಪಡಿಸುವ ಉದ್ದೇಶದಿಂದ ಕೆಲವರು ನೀರಿನ ಖಾಸಗೀಕರಣವನ್ನು ಪ್ರತಿಪಾದಿಸುತ್ತಿದ್ದಾರೆ. ಖಾಸಗಿ ಅರ್ಥವ್ಯವಸ್ಥೆಯಿಂದ ಪರಿಸ್ಥಿತಿಯೇನಾದರೂ ಸುಧಾರಿಸುತ್ತದೆಯೇ ಎಂದು ತಿಳಿಯಲು ಉದಾಹರಣೆಯೊಂದನ್ನು ನೋಡೋಣ :

ಯಾವುದೇ ಕ್ಷೇತ್ರದಲ್ಲಿ ಸಾರ್ವಜನಿಕ ವಲಯವು ವಿಫಲವಾದರೆ ಆಗ ಅದನ್ನು ಮಾರುಕಟ್ಟೆ ದೃಷ್ಟಿಯಿಂದ ನಡೆಯುವ ಖಾಸಗಿ ಕಾರ್ಪೊರೇಟ್ ವಲಯಕ್ಕೆ ಒಪ್ಪಿಸಬೇಕೆಂಬುದು ಒಂದು ತತ್ತ್ವ. ೧೯೮೮ರಲ್ಲಿ ಮಾರ್ಗರೆಟ್ ಥ್ಯಾಚರ್ ಸರ್ಕಾರವು ನೀರು ಸರಬರಾಜು ಸೇವೆಯ ಕಾನೂನನ್ನು ಅಂಗೀಕರಿಸಿ ಸುಮಾರು ೮ ಪ್ರಾದೇಶಿಕ ನೀರು ಪ್ರಾಧಿಕಾರಗಳನ್ನು ಖಾಸಗಿ ಕಂಪನಿಗಳಿಗೆ ಮಾರಾಟಮಾಡಿತು. ಇದರಿಂದ ನೀರಿನ ಸರಬರಾಜು ಮತ್ತು ನಿಯಂತ್ರಣವು ಖಾಸಗಿ ಏಕಸ್ವಾಮ್ಯಕ್ಕೆ ಒಳಪಟ್ಟಿತು. ಖಾಸಗೀಕರಣ ಪ್ರಕ್ರಿಯೆಯು ಕುಡಿಯುವ ನೀರಿನ ಗುಣಮಟ್ಟದ ಮೇಲ್ವಿಚಾರಣೆ; ರಾಷ್ಟ್ರೀಯ ನದಿ ನೀರು ಪ್ರಾಧಿಕಾರ (ಈಗ ಇದನ್ನು ನದಿ ನೀರು ನಿಯಂತ್ರಣ ಮತ್ತು ಮಾಲಿನ್ಯ ತಡೆಯ ಪರಿಸರ ನಿಯೋಗ – ಎನ್ನಲಾಗುತ್ತದೆ) ಮತ್ತು ಕಂಪನಿಯು ಅನುಸರಿಸುವ ಬೆಲೆ ನಿಗದಿಯ ಕ್ರಮ ಪ್ರಾಧಿಕಾರ – ಹೀಗೆ ಮೂರು ಉಪಸಮಿತಿಗಳನ್ನು ರಚಿಸಿತು. ಆದರೆ ಈ ಪೈಕಿ ಯಾವುದಕ್ಕೂ ಸಮಗ್ರ ಪರಿಸರ ರಕ್ಷಣೆಯ ನಿರ್ದಿಷ್ಟ ಜವಾಬ್ದಾರಿ ಇರಲಿಲ್ಲ. ೧೯೯೫ರಲ್ಲಿ, ಯಾರ್ಕ್‌ಶೈರ್ ಅನ್ನು ಬರಪೀಡಿತ ಪ್ರದೇಶವೆಂದು ಘೋಷಿಸಿ ನೀರಿನ ಕೊರತೆಯ ನಿವಾರಣೆಗಾಗಿ ಅಕ್ಕಪಕ್ಕದ ಪ್ರಾಧಿಕಾರಗಳಿಂದ ನೀರನ್ನು ಸಾಗಿಸಿ ತರಲು ಸಾಗಾಣಿಕೆ ವಾಹನಗಳ ಒಂದು ಪಡೆಯನ್ನೇ ನೇಮಿಸಲಾಯಿತು. ಗ್ರಾಹಕರು ನೀರಿನ ಬಳಕೆಯನ್ನು ಕಡಮೆ ಮಾಡುವಂತೆ ಕಂಪನಿಯು ಮನವಿ ಮಾಡಿತಾದರೂ ಅದಕ್ಕೆ ಸಾರ್ವಜನಿಕರ ಬೆಂಬಲ ದೊರೆಯಲಿಲ್ಲ; ನೀರಿನ ಬಳಕೆಯೇನೂ ಕಡಮೆಯಾಗಲಿಲ್ಲ.

ಅನಂತರದ ಅಧ್ಯಯನವು ಇಂಗ್ಲೆಂಡಿನ ಖಾಸಗೀಕರಣವು, ಕಂಪನಿಗಳು ತಮ್ಮ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಲಿ, ನೀರಿನ ಸೋರಿಕೆಯನ್ನು ತಡೆಗಟ್ಟುವುದಕ್ಕಾಗಲಿ ಯಾವ ಪ್ರೋತ್ಸಾಹವನ್ನೂ ಕೊಡಲಿಲ್ಲವೆಂಬ ಸಂಗತಿಯನ್ನೂ ವರದಿ ಮಾಡಿತು. ೨೦೦೦ದ ವರ್ಷದ ನವೆಂಬರ್‌ನಲ್ಲಿ, ಅಂದರೆ ಖಾಸಗಿಕರಣಗೊಳಿಸಿದ

ಹನ್ನೊಂದು ವರ್ಷಗಳ ಅನಂತರ 'ಪಾರ್ಲಿಮೆಂಟರಿ ಕಮಿಟಿ'ಯು ತೀರ್ಮಾನಿಸಿದ್ದು ಹೀಗೆ: ''ಕಂಪನಿಗಳಲ್ಲಿ ನೀರಿನ ಬಳಕೆಯ ಸಾಮರ್ಥ್ಯವನ್ನು ಹೆಚ್ಚಿಸುವುದಕ್ಕೆ ಯಾವ ಪ್ರೋತ್ಸಾಹಕ ಕಾರ್ಯಕ್ರಮವೂ ಇಲ್ಲ; ಆದ್ದರಿಂದ ಸಾಮರ್ಥ್ಯವನ್ನು ಅಳತೆ ಮಾಡುವ ಸಮಗ್ರ ಪ್ರಬಲ ವಿಧಾನವನ್ನು ಕಂಡುಕೊಂಡ ಅನಂತರ ಒಂದೊಂದು ಕಂಪನಿಗೂ ಒಂದು ನಿರ್ದಿಷ್ಟ ಗುರಿಯನ್ನು ನಿಗದಿಪಡಿಸುವ ವಿಚಾರದಲ್ಲಿ ಒಂದು ಒಪ್ಪಂದಕ್ಕೆ ಬರಬಹುದು.''

ಹೀಗೆ ಇಂಗ್ಲೆಂಡಿನಲ್ಲಿ ನೀರು ತುಂಬ ದುಬಾರಿಯಾದುದರಿಂದ ಅಲ್ಲಿ ನೀರನ್ನು ಆಧರಿಸಿದ ಕೈಗಾರಿಕೆಗಳು ಬೆಳೆಯಲು ಅವಕಾಶವಿರಲಿಲ್ಲ. ಈಗ ನಾವು ಒಂದು ವೃತ್ತವನ್ನು ಸುತ್ತುಹಾಕಿ ಪುನಃ ಹೊರಟಲ್ಲಿಗೇ ಬರುತ್ತೇವೆ. ೨೦೦೦ ವರ್ಷದ ವೇಳೆಗೆ ನಿಯಂತ್ರಣ ಮತ್ತು ಖಾಸಗೀಕರಣಗಳ ಹೊರತಾಗಿಯೂ ಇಂಗ್ಲೆಂಡಿನಲ್ಲಿ ನೀರಿನ ಕೊರತೆಯಾಯಿತು ಮತ್ತು ಅದು ತುಂಬ ತುಟ್ಟಿಯಾಯಿತು. ಸ್ವಲ್ಪ ಹೆಚ್ಚು ಕಡಮೆ ಇದೇ ಸಮಯದಲ್ಲಿ ಭಾರತದ ಪುಕ್ಕಟೆ ನೀರನ್ನು ಬಳಸಿಕೊಳ್ಳುವುದಕ್ಕಾಗಿ ಕೋಕಕೋಲ ಕಂಪನಿಯು ಭಾರತಕ್ಕೆ ಕಾಲಿಟ್ಟಿತು. ಹೀಗಾಗಿ ಸಾರ್ವಜನಿಕ ಪ್ರಾಧಿಕಾರಗಳು ಅಥವಾ ಖಾಸಗಿ ಕಂಪನಿಗಳು ನೀರಿನ ಬೆಲೆ ನಿಗದಿಪಡಿಸುವುದರಿಂದ ನೀರಿನ ಬಳಕೆಯನ್ನಾಗಲಿ ಅದರ ಅಪವ್ಯಯವನ್ನಾಗಲಿ ತಡೆಗಟ್ಟಲು ಸಾಧ್ಯವಿಲ್ಲವೆಂಬುದು ವೇದ್ಯವಾಗುತ್ತದೆ.



ಜ್ಞಾನ
ಬದುಕುವುದಕ್ಕೆ
ಬಸಿರಾಗುತ್ತವೆ
ಅಕ್ಷರಗಳು
ಸ್ವರ, ವ್ಯಂಜನ, ಕಾಗುಣಿತ
ಕತ್ತಲೆಯಲ್ಲಿ ಮಿಂಚುಹುಳುಗಳು
ಬೆಳಕು ಚೆಲ್ಲುತ್ತವೆ.
ಕೈಗೆಟಕುವ ಅಂತರ
ಪದ, ವಾಕ್ಯ, ವ್ಯಾಕರಣಗಳು
ಆಗಸದ ತುಂಬ ನಕ್ಷತ್ರಗಳು
ಬೆಳಕಾಗಲು ಜೀವ
ಸೂರ್ಯನಂತೆ ಬೆಳಗಲು
ಚೈತನ್ಯ.

ವಿಶ್ವದ ಪ್ರಜೆಗಳಾದ ನಾವು ಬೇರೆ ಬೇರೆ 'ಕಾಲ'ಗಳಲ್ಲಿ, ಅಂದರೆ ಅಭಿವೃದ್ಧಿಯ ಬೇರೆ ಬೇರೆ ಹಂತಗಳಲ್ಲಿ, ಬೇರೆ ಬೇರೆ ಜೀವನಮಟ್ಟದಲ್ಲಿ ಬದುಕುತ್ತಿದ್ದೇವೆ. ಹೀಗೆ ವಿಚ್ಛಿದ್ರವಾಗಿರುವ ಈ ಪ್ರಪಂಚದಲ್ಲಿ ನೀರಿನ ಬಗೆಗೆ ಒಂದೇ ನಿಯಮವನ್ನು ಅನುಸರಿಸುವುದು ಸಾಧ್ಯವೇ? ಪ್ರಪಂಚದಲ್ಲಿ ಹಲವು ಬಗೆಯ ಅಸಮಾನತೆಗಳಿರುವ ಕಾರಣದಿಂದಲೆ ನೀರಿಗೆ ಬೆಲೆ ನಿಗದಿಮಾಡುವ ವಿಚಾರವು ಇಷ್ಟೊಂದು ಚರ್ಚಾಸ್ಪದವಾಗಿದೆ. ಸಮಾನತೆಯ ಪ್ರಪಂಚದಲ್ಲಿ ನೀರಿನ ಬೆಲೆಯನ್ನು ಸಮನಾಗಿ ನಿಗದಿಮಾಡಿದರೆ ಚರ್ಚೆಗೆ ಅವಕಾಶವಿರುವುದಿಲ್ಲ. ಆದರೆ ಮಾರುಕಟ್ಟೆಯ ಆರ್ಥಿಕತೆಗೆ ಇದು ಸಮ್ಮತವಾಗುವುದಿಲ್ಲ. ಮಾರುಕಟ್ಟೆಯು ಯಾವಾಗಲೂ ಅಸಮಾನತೆಯ ಅವಕಾಶವನ್ನು ಬಳಸಿಕೊಂಡು ಲಾಭ ಗಳಿಸುವುದರಲ್ಲಿ ತೊಡಗುತ್ತದೆ. ಅದೇ ಮಾರುಕಟ್ಟೆಯ ನೀತಿ ನಿಯಮ.

ನೀರಿನ ದುರ್ಬಳಕೆಯು (ಅತಿ ಬಳಕೆಯು) ಜಾಗತಿಕ ಪರಿಸರದ ಮೇಲೆ ಮತ್ತು ಕೃಷಿಗಾರಿಕೆಯ ಮೇಲೆ ಕಾಲಾನಂತರದಲ್ಲಿ ತೀರ ಕೆಟ್ಟ ಪರಿಣಾಮ ಬೀರುತ್ತದೆ.

ನೀರಿನ ಬೆಲೆಯನ್ನು ಅಮೆರಿಕದ ಪ್ರಜೆಯೆ ನೀಡಲಿ ಭಾರತದ ಪ್ರಜೆಯೆ ನೀಡಲಿ ಕಾಲಾಂತರದಲ್ಲಿ ಅದರಿಂದ ನಾವೆಲ್ಲರೂ ಸಂಕಷ್ಟಕ್ಕೆ ಒಳಗಾಗುತ್ತೇವೆ. ನೀರನ್ನು ಬೆಲೆ ಕೊಟ್ಟು ಕೊಳ್ಳಬಹುದಾದ ವಸ್ತುವೆಂದು ಭಾವಿಸಿದರೆ ನಾವು ಸರ್ವಸಾಮಾನ್ಯವಾದ ಮುಗ್ಗಟ್ಟಿನೆಡೆಗೆ ಸಾಗುತ್ತಿದ್ದೇವೆಯೆಂದೇ ತಿಳಿಯಬೇಕು.

ಪ್ಲಾಚಿಮಾಡ ನಿವಾಸಿಯು ಕೂಡ ತನ್ನ ನಿವಾಸಸ್ಥಳದ ಸಂಪನ್ಮೂಲಗಳನ್ನು ರಕ್ಷಿಸಿಕೊಳ್ಳುವ ಬಗೆಗೆ ಒ.ಇ.ಸಿ.ಡಿ. ದೇಶದ ನಿವಾಸಿಗಳಷ್ಟೇ ತಿಳಿವಳಿಕೆಯುಳ್ಳವನೂ, ಚತುರನೂ ಆಗಿರುವನೆಂದು ನಾವು ಕ್ಷಣಕಾಲ ಊಹಿಸಿಕೊಳ್ಳೋಣ; ಆಗ ನೀರಿನ ಮೌಲಿಕತೆಯು ಎಷ್ಟೆಂಬುದು ಎಲ್ಲರಿಗೂ ಅರ್ಥವಾಗುತ್ತಿತ್ತು. ಇನ್ನು ಬೆಲೆ ನಿಗದಿಯ ವಿಚಾರ: ಜಗತ್ತಿನಾದ್ಯಂತ ನೀರಿಗೆ ಒಂದೇ ಮಟ್ಟದ ಬೆಲೆ – ಸದ್ಯಕ್ಕೆ ಪ್ರತಿ ೧೦೦೦ ಲೀಟರ್‌ಗಳಿಗೆ ೧ ಡಾಲರ್ ಎಂದಿಟ್ಟುಕೊಳ್ಳೋಣ – ನಿಗದಿಯಾದರೆ ಆಗ ನೀರನ್ನು ಹೇಗೆ, ಎಷ್ಟು ಪ್ರಮಾಣದಲ್ಲಿ ಬಳಸಬೇಕು ಮತ್ತು ಜಲಸಂಪನ್ಮೂಲಗಳನ್ನು ದೀರ್ಘಕಾಲದ ವರೆಗೆ ಹೇಗೆ ರಕ್ಷಿಸಿಕೊಳ್ಳಬೇಕು ಎಂಬ ವಿಚಾರದಲ್ಲಿ ತೀರ್ಮಾನಗಳನ್ನು ತೆಗೆದುಕೊಳ್ಳಲು ಸಾಧ್ಯವಾಗುತ್ತದೆಯೆನ್ನಬಹುದು. ಆಗ ತಂಪು ಪಾನೀಯಗಳನ್ನು ತಯಾರಿಸುವುದಕ್ಕೆ ಕನಿಷ್ಠ ಪ್ರಮಾಣವನ್ನೂ, ಕುಡಿಯುವ ಉದ್ದೇಶಕ್ಕಾಗಿ ಹೆಚ್ಚು ಪ್ರಮಾಣವನ್ನೂ ಬಳಸಬಹುದು. ಪ್ರಪಂಚದ ಎಲ್ಲ ದೇಶಗಳಲ್ಲಿ ನೀರಿಗೆ ಒಂದೇ ಪ್ರಮಾಣದ ಬೆಲೆ ನಿಗದಿಯಾದರೆ ಕೈಗಾರಿಕೆಗಳು ಶುದ್ಧ ನೀರಿನ ಬಳಕೆಯನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸಿ, ಕೊಳಚೆ ನೀರನ್ನು ಶುದ್ಧೀಕರಿಸಿ, ಪುನಃ ಬಳಕೆಮಾಡುವ ವಿಚಾರದ ಬಗ್ಗೆ ಯೋಚಿಸಬಹುದು.

ಆದರೆ ಈ ಪರಿಕಲ್ಪನೆಯು ಮಾರುಕಟ್ಟೆಯ ಆರ್ಥಿಕತೆಗೆ ಸಮ್ಮತವಾಗುವುದಿಲ್ಲವೆಂದು ಆಗಲೇ ಹೇಳಿದ್ದೇವೆ. ಎಲ್ಲ ಕಡೆಗಳಲ್ಲೂ ನೀರಿಗೆ ಒಂದೇ ಬೆಲೆ, ಎಲ್ಲ ದೇಶಗಳಲ್ಲೂ ಕೆಲಸಗಾರರಿಗೆ ಒಂದೇ ಬಗೆಯ ಕೂಲಿಯ ದರ, ಕೊಳಚೆ ನೀರನ್ನು ಹರಿಬಿಟ್ಟು ಪರಿಸರವನ್ನು ಹಾಳುಮಾಡುವುದಕ್ಕೆ ಒಂದೇ ರೀತಿಯ ಅಡ್ಡಿ, ನೀರನ್ನು ಸಂಸ್ಕರಿಸುವುದಕ್ಕೆ ಒಂದೇ ಮಟ್ಟದ ಖರ್ಚು-ವೆಚ್ಚಗಳು ಇರುವುದಾದರೆ ಮಾರುಕಟ್ಟೆಯ ಆರ್ಥಿಕತೆಯು ನಡೆಯುವುದಾದರೂ ಹೇಗೆ?

ಮೈಕೇಲ್ ಗೋಲ್ಡ್‌ಮನ್ ಎಂಬ ಸಮಾಜಶಾಸ್ತ್ರಜ್ಞನು ಹೇಳುವುದು ಹೀಗೆ: ''ನೀರನ್ನು ಖಾಸಗಿ ಕಂಪನಿಗಳ ವಶಕ್ಕೆ ಕೊಟ್ಟರೆ ಅದು ಬಹು ಬೇಗನೆ ಇಂಧನತೈಲದ ಹಾಗೆ ಬಂಡವಾಳದ ಸರಕಾಗಿಬಿಡುತ್ತದೆ. ಮತ್ತು ಅದರ ಹಾಗೆಯೇ ಯುದ್ಧಪ್ರಚೋದಕವಾಗಿಬಿಡುತ್ತದೆ ಎಂದು ಕೈಗಾರಿಕಾ ವಿಶ್ಲೇಷಕರು ವಾದಿಸುತ್ತಾರೆ.'' ಗೋಲ್ಡ್‌ಮನ್ ಪ್ರಕಾರ, ಜಲ ಸಂಪನ್ಮೂಲಗಳನ್ನು ಖಾಸಗೀಕರಣಗೊಳಿಸಿ ನೀರನ್ನು ದುಡ್ಡು ತೆತ್ತು ಕೊಳ್ಳಬೇಕಾದ ಸಾಮಗ್ರಿಯಾಗಿ ಪರಿವರ್ತಿಸುವುದು ನೀರಿನ ನಿರ್ವಹಣೆಯ ಅತ್ಯಂತ ಆರೋಗ್ಯಕರ ವಿಧಾನವೆಂದು ವಿಶ್ವಬ್ಯಾಂಕ್ ಭಾವಿಸುತ್ತದೆ. ಹಾಗೆ ಮಾಡುವುದರಿಂದ ನೀರಿಗೆ ಬೆಲೆ ನಿಗದಿಪಡಿಸಬಹುದು ಮತ್ತು ಗ್ರಾಹಕರು ತಾವು ತೆರಬೇಕಾದ ಬೆಲೆಗೆ ಅನುಗುಣವಾಗಿ ನೀರಿನ ಬಳಕೆಯನ್ನು ನಿರ್ಧರಿಸಿಕೊಳ್ಳಬಹುದು. ಸಾರ್ವಜನಿಕ ಕ್ಷೇತ್ರವು ಅದರ 'ನಿಜಬೆಲೆ'ಗೆ ಅನುಗುಣವಾಗಿ ನೀರಿನ ದರವನ್ನು ನಿಗದಿಪಡಿಸಲು ಉದಾಸೀನ ಮಾಡುವುದರಿಂದ, ಸಮರ್ಪಕ ಬಳಕೆಯನ್ನು ಖಚಿತಪಡಿಸಿಕೊಳ್ಳಲು ಖಾಸಗೀಕರಣವು ಅತ್ಯುತ್ತಮ ಪರ್ಯಾಯ ವಿಧಾನ. ಜಗತ್ತಿನ ಬಡಜನರಿಗೆ ಅಗತ್ಯವಿದ್ದಷ್ಟು ನೀರು ದೊರೆಯದಿರುವುದಕ್ಕೆ ಸಾರ್ವಜನಿಕ ವಲಯದ ವೈಫಲ್ಯವೇ ಕಾರಣ. ಇದರಿಂದಾಗಿ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಮತ್ತು ಆರ್ಥಿಕತೆಯನ್ನು ಆಧುನೀಕರಿಸಲು ಸಾಧ್ಯವಾಗಿಲ್ಲ – ಎಂಬುದು ವಿಶ್ವಬ್ಯಾಂಕ್ ಅಭಿಪ್ರಾಯದ ಸಾರಾಂಶ. ''ಹೀಗೆ ಸರ್ಕಾರಗಳು ನೀರು ಸರಬರಾಜು ಮತ್ತು ನೈರ್ಮಲ್ಯ ರಕ್ಷಣೆಯಂಥ ಮೂಲಭೂತ ಅಗತ್ಯಗಳನ್ನು ನಿರ್ವಹಿಸಲಾಗದಿದ್ದರೆ, ಅದು ಸಾರ್ವಜನಿಕ ಕ್ಷೇತ್ರದ ವೈಫಲ್ಯಕ್ಕೆ ಪ್ರಬಲ ನಿದರ್ಶನ'' ಎನ್ನುತ್ತದೆ ವಿಶ್ವಬ್ಯಾಂಕ್.

ನೀರಿನ ನಿಯಂತ್ರಣ ಮತ್ತು ಸರಬರಾಜನ್ನು ಸಾರ್ವಜನಿಕ ವಲಯದಿಂದ ಖಾಸಗಿ ವಲಯಕ್ಕೆ ವರ್ಗಾಯಿಸುವುದು ಸಾಮಾಜಿಕ ಮತ್ತು ರಾಜಕೀಯ ಶಕ್ತಿಗಳ ಬದಲಾವಣೆಯನ್ನು ಒಳಗೊಳ್ಳುತ್ತದೆ. ಇಂಥ ಬದಲಾವಣೆಯಲ್ಲಿ ರಾಜಕೀಯ ಮತ್ತು ಸಾರ್ವಜನಿಕರ ಪಾತ್ರವು ಲೋಪವಾದರೆ ನಾಗರಿಕರ ಪಾತ್ರವು (ಭಾಗವಹಿಸುವಿಕೆಯು) ಕುಗ್ಗುತ್ತದೆ. ಅಷ್ಟೇ ಅಲ್ಲದೆ ನೀರು ಹಣವಾಗಿ, ಬಂಡವಾಳವಾಗಿ ಬಳಕೆದಾರರು ನೀರಿಗೆ ಹಣ ಕೊಟ್ಟು ಕೊಳ್ಳುವ ಗ್ರಾಹಕರೂ ಆದರೆ (ನೀರನ್ನೂ ಪಡೆಯುವ ಹಕ್ಕುಳ್ಳ ಪ್ರಜೆಗಳು ಆಗಿರುವುದಕ್ಕೆ ಬದಲಾಗಿ) ನೀರಿನ ಸುತ್ತ ರಾಜಕೀಯ ಶಕ್ತಿಗಳು ಧ್ರುವೀಕರಣಗೊಳ್ಳುತ್ತವೆ.

ನೀರಿಗೆ ಬೆಲೆ ನಿಗದಿ ಮಾಡುವುದರಲ್ಲಿ ಇದು ನಿರ್ಣಾಯಕ ಪರೀಕ್ಷೆ. ನೀರನ್ನು ದುಡ್ಡು ಕೊಟ್ಟು ಕೊಳ್ಳಬೇಕಾದ ವಾಣಿಜ್ಯ ಸರಕಾಗಿ ಪರಿವರ್ತಿಸುವುದರಿಂದ ಅದು ಕೂಡ ಇಂಧನತೈಲ (ಪೆಟ್ರೋಲ್)ದ ಹಾಗೆ ಮತ್ತೊಂದು ತೈಲೋದ್ಯಮವಾಗುತ್ತದೆ. ನೀರಿಗೆ ಮಾರಾಟದ ಬೆಲೆ ಕಟ್ಟುವುದಾದರೆ ಆ ಬೆಲೆಯನ್ನು ಯಾರು ನಿಗದಿ ಮಾಡಬೇಕು, ಮಾಡುತ್ತಾರೆ – ಎಂಬುದಕ್ಕಾಗಿ ಹೋರಾಟಗಳು (ಯುದ್ಧಗಳು) ಆರಂಭವಾಗುತ್ತವೆ. ನೀರನ್ನು ದುಡ್ಡು ಕೊಟ್ಟು ಕೊಳ್ಳಬೇಕಾದ ವಸ್ತುವಾಗಿ ಪರಿವರ್ತಿಸುವುದು ಹೇಗೆ ಸರ್ವನಾಶಕ್ಕೆ ಕಾರಣವಾಗುತ್ತದೆಯೆಂಬುದನ್ನು ಮಾನವ ಸಮುದಾಯಗಳು ತಮ್ಮ ಹಿಂದಿನ ಅನುಭವಗಳಿಂದ ಅರಿತುಕೊಳ್ಳಬೇಕು. ನಾವು 'ಇಂಧನತೈಲ' ಇಲ್ಲದೆ ಬದುಕಬಹುದು, ಆದರೆ ನೀರಿಲ್ಲದೆ ಬದುಕಲು ಸಾಧ್ಯವೇ? ಯೋಚಿಸಿನೋಡಿ. ಆದ್ದರಿಂದ ಮೊದಲು ನಾವು ನೀರಿನ ಮೌಲ್ಯವನ್ನು ಮಾರುಕಟ್ಟೆಯ ಆರ್ಥಿಕತೆಯ ದೃಷ್ಟಿಯಿಂದ ನೋಡುವುದನ್ನು ಕೈಬಿಡುವುದೊಳ್ಳೆಯದು.

ಪುನಃ ನಾವು ನೀರನ್ನು ಮೌಲಿಕವಾಗಿಸುವುದು ಹೇಗೆ ಎಂಬ ಪ್ರಶ್ನೆಗೇ ಬರುತ್ತೇವೆ. ನೀರನ್ನು ಅಂತರರಾಷ್ಟ್ರೀಯವಾಗಿ ಮಾರಾಟ ಮಾಡುವುದಕ್ಕೆ ಬದಲಾಗಿ ರಾಷ್ಟ್ರೀಯವಾಗಿ ಬೆಲೆ ನಿರ್ಧರಿಸಬಹುದೆ? ಅಂದರೆ, ಪ್ರತಿಯೊಂದು ದೇಶವೂ ತನ್ನ ಪ್ರಜೆಗಳು ಬಳಸುವ ನೀರಿನ ಮೊತ್ತ ಮತ್ತು ಬಳಕೆಯ ವಿಧಾನಗಳನ್ನು ಅರಿತುಕೊಂಡು ತನ್ನ ಜಲಮೂಲಗಳಿಂದಲೇ ಅಗತ್ಯವಾದಷ್ಟು ನೀರನ್ನು ಒದಗಿಸಿಕೊಳ್ಳಬೇಕು ಮತ್ತು ಅದಕ್ಕೆ ತಗಲುವ ವೆಚ್ಚಕ್ಕೆ ಅನುಗುಣವಾಗಿ ದರ ನಿಗದಿಮಾಡಬೇಕು. ಉದಾಹರಣೆ: ಅಮೆರಿಕಾ

ದೇಶದಲ್ಲಿ ಸರಾಸರಿ ಪ್ರತಿಯೊಬ್ಬ ಪ್ರಜೆಯೂ ದಿನಂಪ್ರತಿ ೧೫೦ ಲೀಟರ್ ನೀರನ್ನು ಬಳಸುತ್ತಾನೆಂದರೆ, ಕಾನೂನು ಪ್ರಕಾರ ಆ ದೇಶವು ಅಷ್ಟು ನೀರನ್ನು ತನ್ನ ಜಲಮೂಲಗಳಿಂದಲೇ ಒದಗಿಸಿಕೊಳ್ಳಬೇಕು; ನೀರಿಗಾಗಿ ಅದು ಕೆನಡಾ ಕಡೆಗೆ ನೋಡಬಾರದು. ಹೀಗೆ ಮಾಡುವುದರಿಂದ ನೀರಿನ ಬಳಕೆಯನ್ನು ನಿಯಂತ್ರಿಸಲು ಸಾಧ್ಯವಾಗಬಹುದೆ? ಆಗಬಹುದೇನೋ. ಏನಿದ್ದರೂ ಇದು ಜಗತ್ತಿನ ನೀತಿ ನಿರೂಪಕರು ಪರಿಶೀಲಿಸಬೇಕಾದ ವಿಚಾರ.

ನೀರು ಒಂದು ಜೀವನಾವಶ್ಯಕ ವಸ್ತು; ದುಡ್ಡಿಗಾಗಿ ಮಾರುವ ವಾಣಿಜ್ಯ ಸರಕಲ್ಲ. ಅಗತ್ಯವಿದ್ದರೆ ಬೇರೆ ವಸ್ತುಗಳೊಡನೆ ವಿನಿಮಯ ಮಾಡಿಕೊಳ್ಳಬಹುದಾದ (ಮಲೆನಾಡ ಹಳ್ಳಿಗಳ ಕಡೆ ಇದನ್ನು 'ಸಾಟಿ ವ್ಯಾಪಾರ' ಎನ್ನುತ್ತಾರೆ) ಸಾಮಗ್ರಿ ಎಂದು ತಿಳಿಯುವುದು ಮತ್ತೊಂದು ಸಾಧ್ಯತೆ. ಇದರಿಂದ ನೀರನ್ನು ದೀರ್ಘಕಾಲ ರಕ್ಷಿಸಿಕೊಳ್ಳಲು ಸ್ವಲ್ಪಮಟ್ಟಿಗೆ ಅವಕಾಶವಾಗಬಹುದು. ಉದಾಹರಣೆಗೆ: ಕೇರಳದಲ್ಲಿ ಜಲಸಮೃದ್ಧಿಯಿದ್ದರೂ ರಾಜ್ಯವು ಅದನ್ನು ಹಣಕ್ಕಾಗಿ ಕೋಕಕೋಲ ಕಂಪನಿಗೆ ಮಾರಾಟ ಮಾಡುವಂತಿಲ್ಲ ಅಥವಾ ಹಣದಿಂದ ಕೊಳ್ಳಬಹುದಾದ ವಜ್ರ, ಒಡವೆಗಳನ್ನು, ಕೋಕಕೋಲವನ್ನು, ಆಯುಧ ಗಳನ್ನು, ತೈಲವನ್ನು ಅಥವಾ ಸೊಗಸುಗಾರಿಕೆ 'ಪ್ರಾಡಾ ಉತ್ಪನ್ನ'ಗಳನ್ನು ಕೊಳ್ಳುವುದಕ್ಕಾಗಿ ಮಾರುವಂತಿಲ್ಲ. (ಹಾಗೆ ಮಾಡುತ್ತ ಹೋದರೆ ಹಣವು ಆಳುವವರ ಮರ್ಜಿಗೆ ಅನುಗುಣವಾಗಿ ದುರುಪಯೋಗವಾಗಬಹುದು). ಅದಕ್ಕೆ ಬದಲಾಗಿ ನೀರು 'ವಿನಿಮಯದ ಸಾಮಗ್ರಿ' ಎಂದಾದರೆ ಕೇರಳ ರಾಜ್ಯವು ಅದನ್ನು ಸೌದಿ ಅರೇಬಿಯಾದೊಂದಿಗೆ ಇಂಧನ ತೈಲಕ್ಕಾಗಿ ಅಥವಾ ಅಮೆರಿಕಾದೊಂದಿಗೆ ತಂತ್ರಜ್ಞಾನಕ್ಕಾಗಿ ವಿನಿಮಯ ಮಾಡಿಕೊಳ್ಳ ಬಹುದು. ಇದರ ತರ್ಕಬದ್ಧತೆಯೇನೆಂದರೆ ಅಮೆರಿಕಾದಲ್ಲಿ ನೀರಿನ ಲಭ್ಯತೆಯು ಕಡಮೆ ಇರುವುದರಿಂದ, ಹೀಗೆ ವಿನಿಮಯ ಮಾಡಿಕೊಂಡ ನೀರನ್ನು ಕೋಕಕೋಲ ತಯಾರಿಕೆಗೆ, ಶೌಚಾಲಯಗಳನ್ನು ಶುಚಿಗೊಳಿಸಲು ಹರಿಯಬಿಡುವುದಕ್ಕೆ ಬಳಸುವುದರ ಬದಲಾಗಿ ಕುಡಿಯಲು ಮತ್ತು ನೀರಾವರಿ ವ್ಯವಸಾಯಕ್ಕೆ ಮಾತ್ರ ಬಳಸಬಹುದು.

ಕಡೆಯದಾಗಿ ಹೇಳಬಹುದಾದುದಿಷ್ಟು: ನಾವು ಪ್ರಕೃತಿದತ್ತವಾಗಿ. ಉತ್ತರಾಧಿಕಾರದಿಂದ ಪಡೆದಿರುವ ಜಲಸಂಪನ್ಮೂಲಗಳನ್ನು ಸತತವಾಗಿ ರಕ್ಷಸಿಕೊಳ್ಳುವ ಹೊಣೆಗಾರಿಕೆಯನ್ನು ಮರೆಯಬಾರದು. ನಮ್ಮ ನೀತಿ ನಿರೂಪಕರು ಕೂಡ ನೀರಿನ ಮೌಲಿಕತೆಯನ್ನು ಅರಿತು ಬದುಕಿನ ಮಾದರಿಗಳನ್ನು ರೂಪಿಸಬೇಕು.

ನೀರು ಜೀವನಾಧಾರವಾದ ಪ್ರಕೃತಿಯ ಅಮೂಲ್ಯ ಕೊಡುಗೆ. ಭೂಮಿಯ ಮೇಲೆ ಮಾನವರು ಮಾತ್ರವಲ್ಲದೆ ಸಕಲ ಜೀವಜಂತುಗಳ - ಸಸ್ಯವರ್ಗವೂ ಸೇರಿದಂತೆ – ಅಸ್ತಿತ್ವವು ನೀರನ್ನು ಆಧರಿಸಿದೆ. ಮಾಡ್ ಬಾರ್ಲೊ ಎಂಬಾತನು ಹೇಳುವ ಹಾಗೆ, ''ಪರಿಸರದ ಜಲಸಂಪತ್ತು ಈಗಾಗಲೇ ಕ್ಷೀಣಿಸುತ್ತಿದೆ; ಅದನ್ನು ಮತ್ತಷ್ಟು ಹಾಳುಮಾಡದ ಹಾಗೆ ಪರಿಸರದ ಜಲನಿಧಿಗಳನ್ನು ರಕ್ಷಿಸಿಕೊಳ್ಳಬೇಕು. ಜೀವನಾಧಾರವಾದ ನೀರು ವ್ಯಾಪಾರದ ಸಾಮಗ್ರಿಯಂತೆ ಹೆಚ್ಚು ಬೆಲೆ ಕೊಡುವವರಿಗೆ ಮಾರಬಹುದಾದ ವಸ್ತುವಲ್ಲ. ನಾವು ನೀರನ್ನು ಗೌರವಿಸುವ ಜೀವನಶೈಲಿಯನ್ನು ಅಭ್ಯಾಸ ಮಾಡಿಕೊಳ್ಳಬೇಕು. ಪ್ರತಿಯೊಬ್ಬ ಪ್ರಜೆಗೂ, ಪ್ರತಿಯೊಂದು ಜೀವಜಂತುವಿಗೂ, ನಿಸರ್ಗದ ಸಸ್ಯವರ್ಗಕ್ಕೂ ಅದು ಮೂಲಭೂತ ಹಕ್ಕಾಗಿ, ಪುಕ್ಕಟೆಯಾಗಿ ದೊರೆಯಬೇಕು. ತಾನು ಈ ಜಗತ್ತಿಗೆ ಬರುವಾಗ ಇದ್ದಷ್ಟು ನೀರನ್ನು ಮುಂದಿನ ತಲೆಮಾರಿಗೂ ಉಳಿಸಿಹೋಗುವ ಜವಾಬ್ದಾರಿಯನ್ನು ಪ್ರತಿಯೊಬ್ಬ ನಾಗರಿಕನೂ ತನ್ನ ಗುರಿಯಾಗಿಟ್ಟುಕೊಳ್ಳಬೇಕು. ಎಲ್ಲ ಬಗೆಯ ಕರ್ತವ್ಯಗಳು ಮತ್ತು ಅಭ್ಯಾಸಗಳಿಂದ ನೀರನ್ನು ರಕ್ಷಿಸುವ ಪ್ರಯತ್ನ ಮಾಡಬೇಕೇ ಹೊರತು ಅದನ್ನು ಹುಚ್ಚುಹುಚ್ಚಾಗಿ ಮಾರುಕಟ್ಟೆಯ ದೃಷ್ಟಿಯಿಂದ ನೋಡಬಾರದು. ಪ್ರಾಯಶಃ ನೀರು ಪ್ರತಿಯೊಬ್ಬ ಮಾನವನ, ಜೀವಜಂತುವಿನ ಮೂಲಭೂತ ಹಕ್ಕು ಮತ್ತು ಅದನ್ನು ರಕ್ಷಿಸುವುದು ಪ್ರತಿಯೊಬ್ಬ ಮಾನವನ ಕರ್ತವ್ಯ'' – ಎಂದು ಘೋಷಿಸಿದಾಗ ಮಾತ್ರ ಅದಕ್ಕೆ ವ್ಯಾಪಾರದ ಸರಕಿನಂತೆ ಬೆಲೆ ಕಟ್ಟುವ ಹವ್ಯಾಸವನ್ನು ತಡೆಯಬಹುದೇನೊ!

ತನ್ನ ದೇಶದ ನೀರು ಮೊದಲು ತನ್ನ ಪ್ರಜೆಗಳಿಗೆ, ಎರಡನೆಯದಾಗಿ ನಿಸರ್ಗಕ್ಕೆ (ಮಾನವೇತರ ಜೀವಜಾಲ ಮತ್ತು ಸಸ್ಯವರ್ಗ), ಮೂರನೆಯದಾಗಿ ಆರ್ಥಿಕ ವ್ಯವಹಾರಗಳಿಗೆ – ಎಂಬ ನೀತಿಯನ್ನು ಅನುಸರಿಸುವ ದಕ್ಷಿಣ ಆಫ್ರಿಕಾ ಪ್ರಾಯಶಃ ಇತರ ದೇಶಗಳು ಭವಿಷ್ಯದಲ್ಲಿ ನೀರಿನ ವಿಚಾರದಲ್ಲಿ ಹೇಗೆ ವ್ಯವಹರಿಸಬೇಕು ಮತ್ತು ಅದರ ಮೌಲಿಕತೆಯನ್ನು ಹೇಗೆ ರಕ್ಷಿಸಬೇಕು – ಎಂಬುದಕ್ಕೆ ಅತ್ಯುತ್ತಮ ಮೇಲ್ಪಂಕ್ತಿಯಾಗಬಹುದು.

*(**ಮಾಹಿತಿ ಸಂಗ್ರಹ :** ವಿವಿಧ ಮೂಲಗಳಿಂದ)*

**ಡಾ|| ಕೆ. ಎಲ್. ಗೋಪಾಲಕೃಷ್ಣಯ್ಯ**
ನಂ. ೨೨೭೩, ೨೨ನೇ ಅಡ್ಡರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು - ೫೬೦ ೦೭೦

ಡಾ|| ರಾಮಲಿಂಗಪ್ಪ ಟಿ. ಬೇಗೂರು

*(ಪ್ರತಿಭಾ ನಂದಕುಮಾರ್, ಶಶಿಕಲಾ ವೀರಯ್ಯಸ್ವಾಮಿ ಮತ್ತು ಸ. ಉಷಾ ಈ ಮೂವರ ಕಾವ್ಯವನ್ನು ಲಕ್ಷಿಸಿ ಈ ಲೇಖನ ಸಿದ್ಧಪಡಿಸಿದೆ)*

# ಹೊಸಗನ್ನಡ ಮಹಿಳಾ ಕಾವ್ಯ: ಪ್ರತಿರೋಧದ ನೆಲೆ

ಮಹಿಳೆಯರ ಕಾವ್ಯವು ಮಹಿಳೆಯನ್ನು ಮಾತ್ರ ಕುರಿತ ಕಾವ್ಯವೋ? ಅಲ್ಲ. ಸಮಾಜದಲ್ಲಿ ಹೇಗೆ ಮಹಿಳೆ ಮಾತ್ರ ಇರುವುದಿಲ್ಲವೋ ಹಾಗೆಯೆ ಕಾವ್ಯದಲ್ಲೂ ಮಹಿಳೆ ಮಾತ್ರ ಇರುವುದಿಲ್ಲ. ಯಾವುದೇ ನಿರೂಪಣೆಯಲ್ಲಿ ಅಥವಾ ಪಠ್ಯದಲ್ಲಿ ಸಂಗತಿ/ಪಾತ್ರಗಳು ಗೈರುಹಾಜರಾಗಿವೆ ಎಂದರೆ ಅವು ಉಲ್ಲೇಖಿತ ಅಲ್ಲವೆಂದು ಅರ್ಥವೇ ವಿನಾ ಸಾಲುಗಳ ನಡುವೆ ಅವುಗಳ ಅಸ್ತಿತ್ವ ಇದ್ದೇ ಇರುತ್ತದೆ. ರಾಮ, ರಾವಣ, ಲಕ್ಷ್ಮಣ, ಕೈಕೇಯಿ, ಮಂಥರೆ ಇವರ್‍ಯಾರೂ ಇಲ್ಲದ ಸೀತೆಯನ್ನು ಕಲ್ಪಿಸಿಕೊಳ್ಳುವುದಾದರೂ ಹೇಗೆ? ಸೀತೆಯ ಬಗೆಗೆ ಕವಿತೆ ಬರೆಯುವಾಗ ಕವಿತೆಯ ಪಠ್ಯದಲ್ಲಿ ಅಕ್ಷರರೂಪದಲ್ಲಿ ರಾಮನ ಹೆಸರು ಇರದೇ ಇರಬಹುದು. ಆದರೆ ನಮ್ಮ ಸಾಂಸ್ಕೃತಿಕ ಭಾವಕೋಶದಲ್ಲಿ ಆತ ಇದ್ದೇ ಇರುತ್ತಾನೆ. ಹಾಗೆ ಕೇವಲ ಗಂಡು ಅಥವಾ ಹೆಣ್ಣನ್ನು ಕುರಿತ ಕಾವ್ಯ ಇರಲು ಸಾಧ್ಯವಿಲ್ಲ. ಆದರೆ ಆಧುನಿಕ ಮಹಿಳಾ ಕಾವ್ಯದಲ್ಲಿ ಹೆಣ್ಣನ್ನು ಅಂಚಿನಿಂದ ಕೇಂದ್ರಕ್ಕೆ ತಂದುಕೊಂಡ ನಿರೂಪಣೆ ಇದೆ ಎಂಬುದು ಮಾತ್ರ ನಿಜ.

ಸಫಾಯಿ ಕರ್ಮಚಾರಿ ಮಹಿಳೆ ಮತ್ತು ಬಿಳಿ ಕಾಲರಿನ ಉದ್ಯೋಗಸ್ಥ ಮಹಿಳೆ ಈ ಇಬ್ಬರ ಅನುಭವಗಳೂ ಒಂದೇ ಆಗಿರಲು ಸಾಧ್ಯವಿಲ್ಲ. ಗ್ರಾಮೀಣ ಅವಿದ್ಯಾವಂತ ಮಹಿಳೆ ಮತ್ತು ನಗರದ ವಿದ್ಯಾವಂತ ಮಹಿಳೆ ಇವರಿಬ್ಬರ ಅನುಭವಗಳೂ ಒಂದೇ ಆಗಿರಲು ಸಾಧ್ಯವಿಲ್ಲ. ಶೂದ್ರ, ದಲಿತ, ಬ್ರಾಹ್ಮಣ, ಬುಡಕಟ್ಟು ಹೆಂಗಸರ ಅನುಭವಗಳು ಖಂಡಿತಾ ಭಿನ್ನವಾದುವು. ಹಾಗಾಗಿಯೆ ಇವರ ಭಾಷಾ ಬಳಕೆ, ಅಭಿವ್ಯಕ್ತಿ ವಿನ್ಯಾಸಗಳೂ ಭಿನ್ನವಾಗಿರುತ್ತವೆ. ಆದರೆ ಈ ಎಲ್ಲ ವರ್ಗದ ಮಹಿಳೆಯರೂ ಕನ್ನಡದಲ್ಲಿ ಕಾವ್ಯ ಬರೆಯುತ್ತಿಲ್ಲವಾದ್ದರಿಂದ ಇಷ್ಟೊಂದು ರೇಂಜು ನಮ್ಮ ಕಾವ್ಯಕ್ಕಿಲ್ಲ. ಇದು ಮಹಿಳಾ ಕಾವ್ಯಕ್ಕೆ ಮಾತ್ರವಲ್ಲ, ಒಟ್ಟಾರೆ ಕನ್ನಡ ಕಾವ್ಯಕ್ಕೇ ಅನ್ವಯಿಸುವ ಮಾತು. ನಮ್ಮ 'ಪ್ರತಿಷ್ಠಿತ' ಆಧುನಿಕ ಕಾವ್ಯ ಮಧ್ಯಮ ವರ್ಗದ ಬವಣೆಗಳ ಕಾವ್ಯ.

ಅನುಭವ ಮತ್ತು ಅಭಿವ್ಯಕ್ತಿ ಕ್ರಮಗಳಲ್ಲಿ ವ್ಯತ್ಯಾಸಗಳಿದ್ದರೂ ಹೆಣ್ಣು ನಿರೂಪಿತ ಕಾವ್ಯದಲ್ಲಿ ಒಂದು ಒಕ್ಕೊರಲು ಇದೆ. ಇದು ಮಹಿಳಾ ಕಾವ್ಯದ ಲಕ್ಷಣವೂ ಹೌದು: ಶಕ್ತಿಯೂ ಹೌದು. ಆದರೆ ಇದು ಏಕತಾನದ ದನಿ ಅಲ್ಲ, ಬಹುತ್ವ ಉಳ್ಳ ಒಕ್ಕೊರಲ ದನಿ. ಈಗಿನ ಮಹಿಳಾ ಕಾವ್ಯ ತನ್ನ ಹಕ್ಕನ್ನು ಮಂಡಿಸುವಾಗ ಕಟುವಾಗಿಯೇ ಕಾಣುತ್ತದೆ. ಖಂಡಿತಾ ಇದು ಹಕ್ಕೊತ್ತಾಯದ ಕಾವ್ಯ. ಶತಶತಮಾನದಿಂದ ದನಿಯೇ ಇಲ್ಲದ ಕೊರಳುಗಳು ಚಕ್ಕನೆ ದನಿ ಪಡೆದುಕೊಂಡಾಗ ಉಂಟಾಗುವ ಉತ್ಸಾಹ, ರೋಷ, ಜೋರುದನಿ, ಕಟುತನ, ರಾನೆಸ್ ಎಲ್ಲವನ್ನು ಈ ಕಾವ್ಯವು ಒಳಗೊಂಡಿದೆ. ಸಮಾಜದಲ್ಲಿ ತನ್ನ ಹಕ್ಕುಗಳಿಗಾಗಿ ದನಿಯೆತ್ತುವ ಜೊತೆಜೊತೆಗೇ ಇಡೀ ಗಂಡುಕುಲವನ್ನೇ (ಅಮೂರ್ತವಾದ) ಕಟಕಟೆಯಲ್ಲಿ ನಿಲ್ಲಿಸಿ ಕೊರಳುಪಟ್ಟಿ ಹಿಡಿದು ಪ್ರಶ್ನೆ ಕೇಳುವ ಹಾಗೆ ಈ ಕಾವ್ಯ ಬರೆಯಲ್ಪಟ್ಟಿದೆ. ಹೀಗೆ ಪ್ರಶ್ನಿಸುವಾಗ ನ್ಯಾಯ ಕೇಳುವ, ದಂಡಿಸುವ, ನಿಂದಿಸುವ, ದಾಳಿಮಾಡುವ ಧಾಟಿಗಳೆಲ್ಲ ಈ ಒಕ್ಕೊರಲಿನ ದನಿಗೆ ಒದಗಿವೆ. ಇಂತಹ ಒಕ್ಕೊರಲಿನ ದನಿಯ ಸಮರ್ಥ ಪ್ರತಿನಿಧಿಗಳಾಗಿ ಶಶಿಕಲಾ, ಪ್ರತಿಭಾ, ಉಷಾ ಇವರಿದ್ದಾರೆ.

ಮಹಿಳಾ ಕಾವ್ಯವನ್ನು ಇಡಿಯಾಗಿ ನೋಡಿದಾಗ ಹಲವರ ಕವಿತೆಗಳು ಹೇಗೆ ಒಕ್ಕೊರಲ ದನಿಯಾಗಿ ಕೇಳಿಸುತ್ತವೋ ಹಾಗೆಯೇ ಒಬ್ಬಳ ದನಿ ಒಂದಿಡೀ ಹೆಣ್ಣು ಸಮುದಾಯದ ದನಿಯಾಗಿಯೂ ಕೇಳಿಸುತ್ತದೆ. ಏಕಕಾಲದಲ್ಲೆ ಇದು ಇಂಡಿವಿಜುವಲ್ ಟ್ಯಾಲೆಂಟೂ ಹೌದು, ಕಲೆಕ್ಟಿವ್ ಸೆನ್ಸಿಬಲಿಟಿಯೂ ಹೌದು. ಅಂದರೆ ಇದು ಆಧುನಿಕ ಮಹಿಳಾ ಕಾವ್ಯಕ್ಕೆ ಮಾತ್ರ ವಿಶಿಷ್ಟವಾದ ಚಹರೆಯೇನೂ ಅಲ್ಲ. ನಮ್ಮ ವಚನಕಾರರಲ್ಲಿ ಇಂತಹ ಒಕ್ಕೊರಲ ದನಿಯಿದೆ. ಕೀರ್ತನಕಾರರಲ್ಲಿ, ತತ್ವಪದಕಾರರಲ್ಲಿ, ಬಂಡಾಯ-ದಲಿತ ಕವಿಗಳಲ್ಲಿ ಮಹಿಳಾ ಅನುಭಾವಿ ಪರಂಪರೆಯಲ್ಲಿ ಇಂತಹ ಒಕ್ಕೊರಲ ದನಿಯಿದೆ. ಕನ್ನಡ ಸಾಹಿತ್ಯ ಪರಂಪರೆಯ ಒಂದು ವಿಶಿಷ್ಟ ಚಹರೆ ಇದು.

ಯಾವ ಹೆಣ್ಣೂ ಹೆಣ್ತನವನ್ನು ಮೈವೆತ್ತು ಹುಟ್ಟುವುದಿಲ್ಲ, ಆಕೆಯನ್ನು ಹೆಣ್ಣಾಗಿ ನಮ್ಮ ಸಮಾಜ ರೂಪಿಸುತ್ತದೆ ಎಂದು ಸಿಮೋನ್ ದ ಬೊವಾ ಹೇಳುವ ಮಾತನ್ನೇ ಆಧುನಿಕ ಮಹಿಳಾ ಕಾವ್ಯ ತನ್ನದೆ ಬೇರೆ ಬೇರೆ ಮಾತುಗಳಲ್ಲಿ ಹೇಳುತ್ತದೆ. ಹೆಣ್ಣು ಮತ್ತು ಗಂಡುಗಳ ನಡುವಣ ಸಂಬಂಧದ ಕಥನ ಆಧುನಿಕ ಮಹಿಳಾ ಕಾವ್ಯದ ಒಂದು ಮುಖ್ಯ ವಸ್ತುವಿನ್ಯಾಸ. ಆದಿಯಿಂದ ಇದುವರೆಗಿನ ಹೆಣ್ಣಿನ ಹಾದಿಯನ್ನು ಪ್ರತಿಭಾ 'ಹಿಮದ ಹಾದಿ' ಎಂದು ಕರೆಯುತ್ತಾರೆ. ಇವರು ಪಾರಂಪರಿಕವಾದ ಹೆಣ್ಣು ಮತ್ತು ಗಂಡಿನ

ಶಶಿಕಲಾ ಧಾರಾವಾಹಿ ಎಂಬ ಪದ ಬಳಸಿದರೆ, ಉಷಾ ನಿರಂತರ ಎಂಬ ಪದ ಬಳಸುತ್ತಾರೆ. ಆದರೆ ಪ್ರತಿಭಾ ಈ ಪದಗಳನ್ನು ಬಳಸದೆ ಇದೇ ತಾತ್ವಿಕತೆಯ 'ನೈನಾ ಸಾಹ್ನಿ' ಎಂಬ ಪದ್ಯ ಬರೆದಿದ್ದಾರೆ. ಇದು ಕೆ. ಎಸ್. ನರಸಿಂಹಸ್ವಾಮಿ ಅವರ ರೈಲ್ವೆ ನಿಲ್ದಾಣದಲ್ಲಿ ಪದ್ಯದ ಅಣಕುವಾಡಿನ ರೀತಿ ಇದೆ. ಪುರಾಣದಲ್ಲಿ ತನ್ನ ಮಗಳನ್ನೆ ಮದುವೆಯಾದ ಅಗ್ನಿರಾಜನ ಪಾತ್ರಕ್ಕಿಂತ ಭಯಾನಕವಾದ ಪಾತ್ರ ಈ ನೈನಾಳ ಅಪ್ಪನದು. ಪ್ರತಿಭಾ ಅವರ ಈ ಪದ್ಯ ಪುರಾತನ ಚರಿತ್ರೆ ಮತ್ತು ಪುರಾಣ-ಪುರಾನವಗಳನ್ನು ಮೀರಿಸುವ ವರ್ತಮಾನದ ಚರಿತ್ರೆ.



ಸಂಬಂಧವನ್ನು ರಿಂಗ್ ಮಾಸ್ಟರ್ ಮತ್ತು ಹುಲಿಯ ಸಂಬಂಧವೆಂದು ಹೇಳುತ್ತಾರೆ.

*ಕಾಡಿನ ತುಂಬ ಬೇಕು ಬೇಕಾದಂತೆ।*
*ಅಂಡಲೆಯುತ್ತಿದ್ದ ಹೆಣ್ಣು ಹುಲಿ*
*ಈಗ ಅವನು ಹೇಳಿದ ಹಾಗೆ ಕೇಳುತ್ತದೆ।*
*ಇಲಿಯಂತೆ ಬಾಲ ಮುದುರಿಕೊಳ್ಳುತ್ತದೆ.*
*ಯಾರೋ ಒಂದು ಸಲ ಈ ಬಗ್ಗೆ।*
*ಪ್ರಶ್ನಿಸಿದಾಗ ಅದು ಸುಮ್ಮನೇ ನಕ್ಕು*
*ಪಂಜದೊಳಗೆ ಅಡಗಿಸಿಟ್ಟ ನಖಗಳನ್ನು।*
*ಹೊರ ತೆಗೆದು ತಲೆ ಕೆರೆದುಕೊಳ್ಳುತ್ತದೆ.* (*ಹಿಮದ ಹಾದಿ ಪ್ರ. ೩೬೬*)

ಚಾರಿತ್ರಿಕವಾಗಿ ಗಂಡು ಹೆಣ್ಣಿನ ಸಂಬಂಧ ಹೇಗಿತ್ತೆಂದು ವರ್ಣಿಸುವ ಕವಿತೆಯಿದು. ಹೆಣ್ಣು ಕಾಡಿನ ಹುಲಿಯಾದರೆ ಗಂಡು ರಿಂಗ್ ಮಾಸ್ಟರ್ ಥರ. ಅವನು ಆಕೆಯನ್ನು ಪಳಗಿಸಿ ಸರ್ಕಸ್ ಹುಲಿಯನ್ನಾಗಿ ಮಾಡಿದ್ದಾನೆ. ಕುಟುಂಬ, ಮನೆ ಎಂಬ ಪಂಜರದಲ್ಲಿ ಇರಿಸಿದ್ದಾನೆ. ಮಹಿಳೆಯ ಅಸ್ತಿತ್ವದ ಪ್ರಶ್ನೆಗಳು, ಸ್ವಂತಿಕೆಯ ಪ್ರಶ್ನೆಗಳು ಮತ್ತು ಸ್ವಾತಂತ್ರ್ಯದ ಪ್ರಶ್ನೆಗಳು ಇಂತಹ ನಿರೂಪಣೆಗಳಲ್ಲಿ ಮುನ್ನೆಲೆಗೆ ಬರುತ್ತವೆ. ಶಶಿಕಲಾ ಅವರ ಮಹಿಳಾ ವರ್ಷದಲ್ಲಿ 'ಅವ್ವನಿಗೊಂದು ಪತ್ರ' ಕವಿತೆ ಇದೇ ಪ್ರಶ್ನೆಗಳನ್ನು ತನ್ನದೇ ಚಿತ್ರಗಳ ಮೂಲಕ ಮಂಡಿಸುತ್ತದೆ :

*ಕುಡದಾಗ ಖಬರಿಲ್ಲದಾ ನಿನ್ನ ಹೊಡೆದು ಕೊಂದ।*
*ಅಪ್ಪ ಜಂತಿ ನೋಡ್ಕೋತ ಕುಂತಿದ್ದ*
*ಅವ್ವ, ಇಲ್ನೋಡ ಬಾ ಇಲ್ಲಿ।*
*ಈ ಊರ ಹೆಂಗಸರೆಲ್ಲಾ*
*ನಮಗೆ ಸ್ವಾತಂತ್ರ್ಯ ಬೇಕಂತ ಚಳವಳಿ ಹೂಡಿ।*
*ಮೆರವಣಿಗಿ ಹೊಂಟಾರ* (*ಮಹಿಳಾ ವರ್ಷದಲ್ಲಿ ಅವ್ವನಿಗೊಂದು ಪತ್ರ : ಶ. ೨೬*)

ಒಂದು ಕಡೆ ಕುಡಿದು ಬಂದ ಗಂಡ ಹೊಡೆದು ಕೊಂದ ತಾಯಿಯ ಹೆಣದ ಮೆರವಣಿಗೆ ನಡೆದರೆ ಇನ್ನೊಂದು ಕಡೆ ಬೀದಿಯಲ್ಲಿ ಮಹಿಳಾ ಸ್ವಾತಂತ್ರ್ಯಕ್ಕಾಗಿ ಚಳವಳಿಕಾರ್ತಿಯರ ಮೆರವಣಿಗೆ ನಡೆಯುತ್ತಿದೆ. ಇಂದಿನ ವರ್ತಮಾನದ ವ್ಯಂಗ್ಯ ಇದು. ಮಹಿಳಾ ದಿನಾಚರಣೆ - ಚಳವಳಿಯ ಮೆರವಣಿಗೆಗಳು ಯಾವ ಬೀದಿಯಲ್ಲಿ ನಡೆಯುತ್ತಿವೆಯೋ ಅದೇ ಬೀದಿ ಬದಿಯ ಮನೆಯಲ್ಲಿ ಅತ್ಯಾಚಾರಗಳೂ ನಡೆಯುತ್ತಿವೆ ಎಂಬ ಅರಿವಂತೂ ಹೆಣ್ಣುಮಕ್ಕಳಿಗೆ ಇಂದು ಬಂದಿದೆ. ಇಷ್ಟರಮಟ್ಟಿಗೆ ಇದೊಂದು ಪರ್ವಕಾಲ. ಇಂತಹ ಪರ್ವಕಾಲದ ಕಥನವೇ ಆಧುನಿಕ ಮಹಿಳಾ ಕಾವ್ಯದಲ್ಲಿ ಇದೆ. ಆದರೆ ಹೆಣ್ಣಿನ ಬದುಕಿನಲ್ಲಿ ಬದಲಾವಣೆಗಳು ಘಟಿಸುತ್ತಿಲ್ಲವಲ್ಲ ಯಾಕೆ ? ಎಂಬುದು ಮಹಿಳಾ ಕಾವ್ಯದ ಮುಖ್ಯ ಪ್ರಶ್ನೆಗಳಲ್ಲೊಂದು.

'ಎರಡು ಬೂರ್ಜಪತ್ರಗಳು' ಸ. ಉಷಾ ಅವರ ಒಂದು ಕಾಲ್ಪನಿಕ ಯಾನದ ಕವಿತೆ. ಚರಿತ್ರೆ, ಪುರಾಣ ಮತ್ತು ವರ್ತಮಾನಗಳೆಲ್ಲ ಕಲಸಿಕೊಂಡ ಕವಿತೆಯಿದು. ಇಲ್ಲಿ ನಿರೂಪಕಿ ತನ್ನ ಪರಿವಾರದ ಜೊತೆ ಪ್ರವಾಸ ಹೋಗಿರುತ್ತಾಳೆ. ಉಜ್ಜಯಿನಿ, ಧಾರಾನಗರಿ, ಅಲಕಾಪುರಿಯ ಪ್ರವಾಸವದು (ಕಾಳಿದಾಸನ ಮಾಲವಿಕಾಗ್ನಿಮಿತ್ರ ನಾಟಕದಲ್ಲಿ ಬರುವ ಚರಿತ್ರೆ-ಪುರಾಣದ ನಗರಗಳಿವು). ಅಲ್ಲಿ ನಿರೂಪಕಿಗೆ ಒಂದು ಬೂರ್ಜಪತ್ರ ಅಂದರೆ ಅಗ್ನಿಮಿತ್ರನ ಹಿರಿ ಹೆಂಡತಿ ಧಾರಿಣಿಯು ಮಾಳವಿಕೆಗೆ ಬರೆದ ಪತ್ರ ಸಿಗುತ್ತದೆ. ಅದರ ಅಕ್ಷರಗಳೆಲ್ಲ ನಿರೂಪಕಿಗೆ ರೋಮಾಂಚನ ಉಂಟುಮಾಡುತ್ತವೆ. ಅದನ್ನು ಜೋಪಾನವಾಗಿ ಈಕೆ ಮನೆಗೆ ತಂದು ಇತರ ಹೆಂಗಸರ ಮುಂದೆ 'ನೋಡಿರೇ, ಮಾಳವಿಕೆಗೆ ಧಾರಿಣಿ ಬರೆದ ಪತ್ರ ನನಗೆ ಸಿಕ್ಕಿದೆ' ಎಂದು ಹೇಳುತ್ತಾಳೆ. ಆದರೆ ಅವರು ಅದನ್ನು ನೋಡಿ 'ಅಯ್ಯೋ ಮಂಕೇ ಇದು ಬೂರ್ಜಪತ್ರ ಅಲ್ಲ, ಇದು ನಾವೇ ಗೌರಿ ಪೂಜೆಗೆ ಬಿಚ್ಚಿ ಎಸೆದ ಬಿಚ್ಚೋಲೆ' ಎನ್ನುತ್ತಾರೆ. ಇವಳಿಗೆ ಶಾಕ್. ಒಳಗೆ ದೇವರ ಕೋಣೆಯಲ್ಲಿದ್ದ ಅಮ್ಮನನ್ನು ಕೇಳಿದರೆ ಅಯ್ಯೋ ಹುಚ್ಚಮ್ಮಾ! ಹೌದು ಕಣೆ ಇದು ಬಿಚ್ಚೋಲೇನೆ ಎನ್ನುವ ಬದಲು ಆಕೆ ''ಅಯ್ಯೋ ಇದು ನಾನು ಉಂಡ ಸತ್ಯ; ನೀನು ಇಂದು ಕಂಡ ಸತ್ಯ'' ಎನ್ನುತ್ತಾಳೆ. ಧಾರಿಣಿ, ಇರಾವತಿ ಎಂಬ ಇಬ್ಬರು ಹೆಂಡಿರು ಇದ್ದರೂ ಮಾಳವಿಕೆಯೆಂಬ ಹರೆಯದ ಹೆಣ್ಣನ್ನು ಮೋಹಿಸಿ ಪ್ರೀತಿಸಿದವನು ಅಗ್ನಿಮಿತ್ರ. ಅವನಿಗೆ ಸಹಕರಿಸಿದವರು ವಿದೂಷಕ ಮತ್ತು ನಾಟ್ಯಾಚಾರ್ಯರು. ಇದು ನಿರೂಪಕಿಯ ತಾಯಿ ಉಂಡ ಅನುಭವವೂ ಹೌದು, ನಿರೂಪಕಿ ಕಂಡ ಅನುಭವವೂ ಹೌದು. ಮಗಳು, ಮೊಮ್ಮಗಳಿಗೂ ಇದೇ ಅನುಭವ ಆಗಬಹುದು. ಹೀಗೆ ಇಲ್ಲಿ ಪುರಾಣ ವೆಂಬುದು ಎಂದೋ ಆಗಿಹೋಗಿರುವ ಸಂಗತಿ ಅಲ್ಲ, ಇಂದಿಗೂ ಆಗುತ್ತಿರುವ ಸಂಗತಿ. ಶಶಿಕಲಾ ಅವರ ಧಾರಾವಾಹಿ ಕವಿತೆ ಕೂಡ ಚರಿತ್ರೆ-ಪುರಾಣವನ್ನು ಹೀಗೆಯೇ ನಿತ್ಯ ಹರಿಯುತ್ತ ಬಂದಿರುವ ಧಾರಾವಾಹಿ ಎನ್ನುತ್ತದೆ. ನೋಡಿ –

*ಮಾಡ್ಕೊಂಡ ಹೆಣ್ತಿ ಮನೀಗ ಬಂದ್ರ।*
*ಬಾಗಲಾ ಹಾಕಿ ಕಿಡಕಿ ಸಂದ್ಯಾಗ ಕುತಗಿ ಹಾಯ್ಸಿ*
*ಯಾರನೀ ? ಅನ್ನೂ ದುಶ್ಯಂತರು ಈಗಿಲ್ಲಂತೀರಾ ?*
*ಸೇರದವ್ರ ಚಾಡಿ ಕೇಳಿ ಬಸರಿ ಹೆಣ್ತಿನ್ನ ತವರಿಗಿ ಕಳಿಸಿ*
*ಸಾಜೂಗ ಆಗೂ ರಾಮದೇವರು ಈಗಿಲ್ಲಂತೀರಾ ?*
*ಬೇಕಂದಾಗ ಮಜಾ ಮಾಡಿ ಕೂಸಾದ ಕೂಡ್ಲೆ ಮಾರಿ ತಿರುವಿ*
*ಕೈ ಜಾಡಸೂ ಕೌಶಿಕ ಋಷಿಗೋಳು ಈಗಿಲ್ಲಂತೀರಾ ?* (ಧಾರಾವಾಹಿ ಶ. ೩೦)

ಸ. ಉಷಾ ಅವರ ನಿರಂತರ ಕವಿತೆಯೂ ಸರಿಸುಮಾರು ಇದೇ ರೀತಿಯ ಕವಿತೆ. ಇದು ಮೋದಾಳಿ ಮತ್ತು ನಾಗಶೂರರ (ವಡ್ಡಾರಾಧನೆಯ ಒಂದು ಉಪಕಥೆಯಲ್ಲಿ ಬರುವ ಪಾತ್ರಗಳು) ಪಾತ್ರಗಳ ಮೂಲಕ ಹೆಣ್ಣಿಗೆ ತನ್ನ ಇಚ್ಛೆ ಬಂದವನನ್ನು ಪ್ರೀತಿಸುವ ಹಕ್ಕು ಕೂಡ ಇಲ್ಲವೋ ಎಂಬ ಪ್ರಶ್ನೆ ಕೇಳುತ್ತದೆ. ಮೋದಾಳಿ ತೊಟ್ಟಿಲಲ್ಲಿ ಇದ್ದಾಗಲೇ ನಂದನೆಂಬ ಹುಡುಗನಿಗೆ ಆಕೆ ಹೆಂಡತಿ ಯೆಂದು ಹೆಸರಿಸಲಾಗುತ್ತದೆ. ಆತ ವ್ಯಾಪಾರಕ್ಕೆಂದು ದೇಶಾಂತರ ಹೊರಟಾಗ ೧೨ ವರುಷ ನಾನು ಹಿಂತಿರುಗದಿದ್ದರೆ ಈಕೆಯನ್ನು ನನ್ನ ತಮ್ಮ ಬೋದನಿಗೆ ಕೊಟ್ಟು ಮದುವೆ ಮಾಡಿ ಎಂದು ಆತ ಹೇಳಿ ಹೋಗುತ್ತಾನೆ. ೧೨ ವರ್ಷ ಕಳೆದರೂ ಆತ ಬರುವುದಿಲ್ಲ, ಆಗ ಬೋದನಿಗೆ ಮೋದಾಳಿಯನ್ನು ಮದುವೆ ಮಾಡಲು ಸಿದ್ಧತೆಗಳು ನಡೆಯುತ್ತವೆ. ಆದರೆ ಮದುವೆ ಮಂಟಪದಲ್ಲಿ ಇನ್ನೇನು ಹಾರ ಬದಲಾಯಿಸಬೇಕು ಎನ್ನುವ ಹೊತ್ತಿಗೆ ನಂದ ಬಂದೇ ಬಿಡುತ್ತಾನೆ. ಮದುವೆ ನಿಂತು ಹೋಗುತ್ತದೆ. ಕೊನೆಗೆ ತಾಯಿ ಮನೆಗೆ ಹೋದ ಮೋದಾಳಿ ಕೊರಗಿ ಕೊರಗಿ ಕಾಲ ತಳ್ಳುತ್ತ ಇರುತ್ತಾಳೆ. ಕಾಲಾ ನಂತರ ಅದೇ ಊರಿನಲ್ಲಿ ಇದ್ದ ನಾಗಶೂರನನ್ನು ಪ್ರೀತಿಸುತ್ತಾಳೆ. ಆಮೇಲೆ ಇಬ್ಬರೂ ಓಡಿ ಹೋಗುತ್ತಾರೆ. ಅವರು ಹಾಗೆ ಮಾಡಿದ್ದಕ್ಕಾಗಿ ಅವರಿಬ್ಬರನ್ನೂ ಎಳೆತಂದು ಗಲ್ಲಿಗೇರಿಸುತ್ತಾರೆ. ಹೆಣ್ಣಿಗೆ ಸ್ವಂತ ನಿರ್ಧಾರ ಇರಬಾರದು ಎಂಬುದನ್ನು ಹೀಗೆ ಕಥಿಸಲಾಗಿದೆ. ಇದು ಸಾಹಿತ್ಯಕ ವಾಸ್ತವ ಮಾತ್ರ ಅಲ್ಲ, ಸಾಮಾಜಿಕ ವಾಸ್ತವ ಕೂಡ. ಪುರಾಣ ಮಾತ್ರ ಅಲ್ಲ, ವರ್ತಮಾನವೂ ಕೂಡ. ಈ ಮೋದಾಳಿಯ ಕಥನಕ್ಕೆ 'ನಿರಂತರ' ಎಂದು ಹೆಸರಿಡುವ ಮೂಲಕ ಸ. ಉಷಾ ಪುರಾಣವು ವರ್ತಮಾನ ಮಾತ್ರ ಅಲ್ಲ, ಅದು ನಿರಂತರ ಹರಿಯುವ ಧಾರೆ ಎಂದೇ ಸೂಚಿಸುತ್ತಾರೆ. ಮಹಿಳಾ ಕಾವ್ಯವು ಇಂತಹ ಉದಾಹರಣೆಗಳಲ್ಲಿ ಗಂಡು ನಿರೂಪಿತ ಸಾಹಿತ್ಯ ಕಥನಗಳನ್ನು ಪುರುಷ ಹಿತಾಸಕ್ತಿ ಕಾಯುವ ಕಥನಗಳೆಂದು ವಾದಿಸುತ್ತದೆ; ಮತ್ತು ಸಾಹಿತ್ಯಕ ವಾಸ್ತವ- ಸಾಮಾಜಿಕ ವಾಸ್ತವಗಳ ನಡುವಿನ ಗೆರೆಗಳನ್ನು ಗಂಡು ಅಳಿಸುತ್ತ ಬಂದಿದ್ದಾನೆ ಎನ್ನುತ್ತದೆ.

ಶಶಿಕಲಾ ಧಾರಾವಾಹಿ ಎಂಬ ಪದ ಬಳಸಿದರೆ, ಉಷಾ ನಿರಂತರ ಎಂಬ ಪದ ಬಳಸುತ್ತಾರೆ. ಆದರೆ ಪ್ರತಿಭಾ ಈ ಪದಗಳನ್ನು ಬಳಸದೆ ಇದೇ ತಾತ್ವಿಕತೆಯ 'ನೈನಾ ಸಾಹ್ನಿ' ಎಂಬ ಪದ್ಯ ಬರೆದಿದ್ದಾರೆ. ಇದು ಕೆ. ಎಸ್. ನರಸಿಂಹಸ್ವಾಮಿ ಅವರ ರೈಲ್ವೆ ನಿಲ್ದಾಣದಲ್ಲಿ ಪದ್ಯದ ಅಣಕುವಾಡಿನ ರೀತಿ ಇದೆ. ಪುರಾಣದಲ್ಲಿ ತನ್ನ ಮಗಳನ್ನೆ ಮದುವೆಯಾದ ಅಗ್ನಿರಾಜನ ಪಾತ್ರಕ್ಕಿಂತ ಭಯಾನಕವಾದ ಪಾತ್ರ ಈ ನೈನಾಳ ಅಪ್ಪನದು. ಪ್ರತಿಭಾ ಅವರ ಈ ಪದ್ಯ ಪುರಾತನ ಚರಿತ್ರೆ ಮತ್ತು ಪುರಾಣ-ಪುರಾನವಗಳನ್ನು ಮೀರಿಸುವ ವರ್ತಮಾನದ ಚರಿತ್ರೆ. ನೋಡಿ –

*ಎಲ್ಲಿದ್ದೀಯೆ ನೈನಾ ?*
*ಇಲ್ಲೆ ಇದ್ದೀನಪ್ಪಾ*
*ಕಾಟ್ ಕಾಂಡೋಮ್ ಕ್ಯಾರಿಬ್ಯಾಗ್ ಎಲ್ಲಾ ಇಲ್ಲೆ ಇವೆಯಪ್ಪಾ*
*ಊಟಕ್ಕೇನೆ ನೈನಾ ? ರೊಟ್ಟಿ ತಂದೆಯೇನೆ ?*
*ಬೇಯ್ತಾ ಇದ್ದೀನಪ್ಪಾ , ಶರ್ಮಾ ತರ್ತಾನಪ್ಪಾ* (ನೈನಾ ಸಾಹ್ನಿ. ಪ್ರ. ೩೦೭)

ಬೆಳಕಿಗೆ ಬಂದ ನೈನಾ ಸಾಹ್ನಿಯ ಕಥೆ ಒಂದಾದರೆ ಬೆಳಕಿಗೆ ಬಾರದ ಕಥೆಗಳು ಇನ್ನೆಷ್ಟೋ. ಒಮ್ಮೆಗೇ ಸಾಯುವ ಸಾವು ಮತ್ತು ನಿತ್ಯವೂ ಸಾಯುವ ಬದುಕು ಇವುಗಳಲ್ಲಿ ಹೆಣ್ಣು ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕು ? ಎಲ್ಲಿದ್ದೀಯೆ ಮೀನಾ ಎಂದು ಪದ್ಯ ಬರೆದ ನರಸಿಂಹಸ್ವಾಮಿ ಹೀಗೆ ಎಲ್ಲಿದ್ದೀಯೆ ನೈನಾ ಎಂದು ಬರೆಯಲಾರರು. ಅವರೊಬ್ಬ ಸಜ್ಜನ ಗೃಹಸ್ಥ. ಇಲ್ಲಿ ಕೆಲವು ಮಾತು ಅವಶ್ಯ. ಬೇಂದ್ರೆ, ಕುವೆಂಪು ಮೊದಲಾದವರೆಲ್ಲ ದಾಂಪತ್ಯ ಗೀತೆಗಳನ್ನು ಬರೆದಿದ್ದಾರೆ. ಕೆ.ಎಸ್.ನ. ಅಂತೂ ಬರೆದಿರುವ ಬಹುಪಾಲು ಗೀತೆಗಳೆಲ್ಲ ದಾಂಪತ್ಯ ಗೀತೆಗಳೇ, ದಾಂಪತ್ಯದ ನವಿರು ಹಾಡುಗಳೇ. ಆಧುನಿಕ ಮಹಿಳಾ ಕಾವ್ಯ ಹೀಗೆ ದಾಂಪತ್ಯವನ್ನು ನವಿರು ಹಾಡಾಗಿ ಮಾಡಲಾರದು. ಅದು ಅಲ್ಲಿ ಹೆಣ್ಣುಗಳ ಪಾಡು ಮಾತ್ರ. ಕಾಳಿದಾಸನಲ್ಲಿ ಧಾರಿಣಿಗೆ, ಇರಾವತಿಗೆ, ಮಾಳವಿಕೆಗೆ, ಶಕುಂತಲೆಗೆ; ವಡ್ಡಾರಾಧನೆಯಲ್ಲಿ ಮೋದಾಳಿಗೆ; ನರಸಿಂಹಸ್ವಾಮಿಯವರ ಕವಿತೆಯಲ್ಲಿನ ಮಗಳಿಗೆ/ ಮೀನಾಳಿಗೆ; ಕುವೆಂಪು ಅವರ ಕವಿತೆಯಲ್ಲಿನ ಮನೆ ಮನೆಯ ತಪಸ್ವಿನಿಗೆ; ಬೇಂದ್ರೆಯವರ ಕವಿತೆಯಲ್ಲಿನ ಮನದನ್ನೆಗೆ ಹೀಗೆ ಅನೇಕರಿಗೆ ದನಿ ಇರುವಂತೆ ಕಾಣುತ್ತದೆ. ಆದರೆ ಅವರ ಪ್ರತಿನಿಧೀಕರಣಗಳೆಲ್ಲ ಗಂಡಿನ ಪ್ರತಿನಿಧೀಕರಣಗಳೆ. ನಿಜವಾಗಿಯೂ ಅಲ್ಲಿ ಅವರಿಗೆ ಪ್ರಾತಿನಿಧ್ಯ ಇದ್ದರೂ ಅವರದ್ದೇ ದನಿ ಇಲ್ಲ. ದಾಂಪತ್ಯವೆಂದರೆ ಗಂಡು ಹೆಣ್ಣುಗಳನ್ನು ಅಸಮಾನ ಸ್ಥಿತಿಯಲ್ಲಿರಿಸುವ ಸಾಮಾಜಿಕ ಹುನ್ನಾರ. ಇಂತಹ ಹುನ್ನಾರವನ್ನು ಸ್ಥಿರಗೊಳಿಸುವ ಮತ್ತು ಗಂಡುಹಿತ ಕಾಯುವ ಕೆಲಸವನ್ನೆ ಇಲ್ಲಿ ಗಂಡಸರ ದಾಂಪತ್ಯಗೀತೆಗಳು ಮಾಡುತ್ತವೆ ಎಂದು ಮಹಿಳಾ ಕಾವ್ಯ ಪ್ರತಿಪಾದಿಸುತ್ತದೆ.

'ಮೂರು ಕವನಗಳು' ಎಂಬ ಪ್ರತಿಭಾ ಅವರ ಕವಿತೆಯಲ್ಲಿ ಮೂರು ಪ್ರಸಂಗಗಳನ್ನು ನಿರೂಪಿಸಲಾಗಿದೆ. ದೈನಂದಿನ ಘಟನೆಗಳು ಎನ್ನಬಹುದಾದ ಚಿತ್ರಗಳಿವು.

**ನಿರೂಪಣೆ ೧ :** ಒಮ್ಮೆ ಸಿನಿಮಾ ನೋಡಲು ಒಂಟಿಯಾಗಿ ಒಂದು ಹೆಂಗಸು ಹೋಗುತ್ತಾಳೆ. ಆಕೆಗೆ ಕಂಪೆನಿ ಕೊಡಲು ಒಬ್ಬ ಬರುತ್ತಾನೆ. ಹಾಗೆ ಬಂದವನು ಥಿಯೇಟರಿನಲ್ಲಿ ತೆರೆಯ ಮೇಲಿನ ವಿಲನ್ನಿನಂತೆಯೆ ಆಡತೊಡಗುತ್ತಾನೆ. ಭುಜ ಹಿಸುಕುವುದು, ಗಲ್ಲ ಸವರುವುದು, ಇತ್ಯಾದಿಗಳೇ ಅವನಿಗೆ ಮುಖ್ಯವಾಗುತ್ತವೆ. ಆಕೆ ಪ್ರತಿಭಟಿಸಿ ದಾಗ ಎದ್ದು ಹೋದವನು ಮತ್ತೆ ಬರುವುದಿಲ್ಲ. ಕಂಪೆನಿಯ ಅರ್ಥ ಆಕೆಗೆ ಆಗ ಆಗುತ್ತದೆ.

**ನಿರೂಪಣೆ ೨ :** ಒಂದು ಆಫೀಸು. ಅಲ್ಲೊಬ್ಬ ಕೆಲಸಗಾರ. ಆತ ತನ್ನ ಮಹಿಳಾ ಕಲೀಗಿನೊಂದಿಗೆ ಮಧ್ಯಾಹ್ನ ಡಬ್ಬಿ ತೆರೆದು ಊಟಕ್ಕೆ ಕೂರುತ್ತಾನೆ. ಮನೆಯಿಂದ ತಂದ ಎಲ್ಲ ಪುಷ್ಕಳ ಭೋಜನ ಸವಿಯುತ್ತ ತನ್ನ ಹೆಂಡತಿಯನ್ನು ಅವಳೊಂದು ಮೊದ್ದು ಎಂದು ತೆಗಳುತ್ತಾನೆ. ಈಕೆಯನ್ನು ಈಕೆಯ ಗಂಡನನ್ನು ಹೊಗಳುತ್ತಾನೆ. ನೀವೆ ತುಂಬ ಲಕ್ಕಿ ಒಳ್ಳೆಯ ಗಂಡನನ್ನು ಪಡೆದಿದ್ದೀರಿ, ನಾನೂ ಇದ್ದೇನೆ ಸುಮ್ಮನೆ ವೇಸ್ಟು, ನನ್ನ ಹೆಂಡತಿ ನಿಮ್ಮಷ್ಟು ಜಾಣೆ ಅಲ್ಲ, ಮಾಡರ್ನ್ ಅಲ್ಲ ಇತ್ಯಾದಿ ಮಾತಾಡುತ್ತಾನೆ. ಸಂಜೆ ಈಕೆ ಮನೆಗೆ ಹೋದರೆ ಗಂಡನ ಆಫೀಸಿನ ಹುಡುಗ ಯಜಮಾನರು ಇಂದು ರಾತ್ರಿ ಊಟಕ್ಕೆ ಬರುವುದಿಲ್ಲ, ತಡವಾಗಿ ಬರುತ್ತಾರೆ ಎಂದು ಹೇಳಿ ಹೋಗುತ್ತಾನೆ.

**ನಿರೂಪಣೆ ೩:** ಒಬ್ಬ ಗೃಹಿಣಿ. ತರಕಾರಿ ಚೀಲ ಹಿಡಿದು ಮನೆಗೆ ಮೆಟ್ಟಿಲು ಹತ್ತುತ್ತ ಇರುತ್ತಾಳೆ. ಅಲ್ಲೆ ಎದುರಾದ ಒಬ್ಬಾತ, ''ಅಯ್ಯೋ, ನೀನೆಷ್ಟು ಚೆಂದ ಇದ್ದೀಯ, ಈ ಕಷ್ಟವೆಲ್ಲ ನಿನಗೆ ಯಾಕೆ ? ಬಂದುಬಿಡು, ನಾನು ನಿನ್ನನ್ನು ಚೆನ್ನಾಗಿ ನೋಡಿಕೊಳ್ಳುತ್ತೇನೆ, ನನ್ನ ಪ್ರೇಯಸಿಯಾಗು, ನೀನು ಎಲ್ಲೋ ಇರಬೇಕಾದವಳು, ಇಲ್ಲಿ ಹೀಗೆ ಗಂಡ, ಮನೆ ಅಂತ ಯಾಕೆ ಕೊಳೆಯುತ್ತಿದ್ದೀಯ'' ಎನ್ನುತ್ತಾನೆ. ಈಕೆ ಮೌನವಾಗಿ ಮನೆ ಸೇರುತ್ತಾಳೆ. ಊಟ ಬಡಿಸಲು ಇನ್ನೂ ಸಾಕಷ್ಟು ಸಮಯ ಇರುವುದರಿಂದ ಟೀವಿ ನೋಡುತ್ತ ಕೂರುತ್ತಾಳೆ.

ಈ ಮೂರೂ ನಿರೂಪಣೆಗಳಲ್ಲಿ ಹೆಣ್ಣನ್ನು ಆಕೆಯ ಕಷ್ಟದ ಸ್ಥಿತಿಯಿಂದ ಪಾರು ಮಾಡುವ ಗಂಡಿನ ಆಪದ್ಬಾಂಧವ ಪೋಸುಗಳಿವೆ. ಇವೆಲ್ಲವೂ ಹೆಣ್ಣನ್ನು ಕೇವಲ ಕಾಮದ ವಸ್ತುವಾಗಿ ನೋಡುವ ದೃಷ್ಟಿಗಳು. ಹೆಣ್ಣನ್ನು ಕೌಟುಂಬಿಕವಾಗಿ ಮತ್ತು ಹೊರಲೋಕದಲ್ಲೂ ಹೇಗೆ ಭಾವಿಸಲಾಗುತ್ತಿದೆ ಮತ್ತು ಟ್ರೀಟ್ ಮಾಡಲಾಗುತ್ತಿದೆ ಎಂಬುದಕ್ಕೆ ನಿದರ್ಶನಗಳಿವು. ಇವು ಕೆಲವು ಸ್ಯಾಂಪಲ್ಲುಗಳಷ್ಟೆ. ಇಂದಿನ ಜಗತ್ತಿನಿಂದ ಇಂತಹ ಅಸಂಖ್ಯ ನಿರೂಪಣೆ ಗಳನ್ನು ನೀಡಬಹುದು. ಇಲ್ಲಿ ಎರಡು ಲೋಕಗಳನ್ನು ನಿರೂಪಿಸಲಾಗುತ್ತಿದೆ. ಒಂದು, ಗಂಡ, ಮನೆ ಮಕ್ಕಳು, ಸಂಸಾರ, ಒಗೆತನ ಎಂಬ ಒಳಗಿನ ಲೋಕ ಮತ್ತು ಇನ್ನೊಂದು, ಇವುಗಳನ್ನು ದಾಟಿದ ಹೊರಗಿನ ಲೋಕ. ಇಲ್ಲಿನ ಒಳಜಗತ್ತು ಶೋಚನೀಯವಾದರೆ ಹೊರಜಗತ್ತು ಅತಿಶೋಚನೀಯ ಆದದ್ದು. ಇವುಗಳಲ್ಲಿ ಯಾವುದನ್ನು ಆಯ್ಕೆಮಾಡಿ ಕೊಂಡರೂ ನೋವು ತಪ್ಪಿದ್ದಲ್ಲ. ಇಂಥ ಪರಿಸ್ಥಿತಿಯಲ್ಲಿ ಹೆಣ್ಣು ಏನು ಮಾಡಬೇಕು ? ಹೇಗೆ ಬಾಳಬೇಕು ? ಇಂಥ ಪ್ರಶ್ನೆಗಳನ್ನು ಆಧುನಿಕ ಮಹಿಳಾ ಕಾವ್ಯ ನಮ್ಮ ಮುಖಕ್ಕೆ ರಾಚುತ್ತದೆ. ಇಂತಹ ಪ್ರಶ್ನಾಘಾತಿಯ ನಿರೂಪಣೆಗಳಲ್ಲಿ ಮೂರನೆಯ ಆಯಾಮದ ಶೋಧ ಮತ್ತು ಈ ಎರಡೂ ಜಗತ್ತುಗಳ ಮರುರಚನೆಗಳು ಈ ಕಾವ್ಯದ ಪ್ರಧಾನ ಕಾಳಜಿಗಳಾಗಿ ವ್ಯಕ್ತವಾಗಿವೆ.

ಹಬ್ಬ, ಜಾತ್ರೆ, ಮದುವೆ, ಪಾರ್ಟಿ ಎಂದರೆ ನಮ್ಮ ಮನೆಗಳಲ್ಲಿ ಎಲ್ಲರಿಗೂ ಸಂಭ್ರಮವೆ. ಆದರೆ ಆ ಮನೆಯ ಗೃಹಿಣಿಗೆ ಮಾತ್ರ ಅದು ಹಿಂಸೆ. ಹಬ್ಬವೆಂದರೆ, ಜಾತ್ರೆ ಎಂದರೆ ಗೃಹಿಣಿಗೆ ಅದು ಓವರ್‌ಟೈಮ್ ದುಡಿಮೆಯೆ. ('ಬೆಳಗಾಗೆದ್ದು ಅಡಿಗೆ ಮಾಡುತ್ತಿದ್ದೇನೆ / ಸುಡುಗಾಡು ಯಾವುದೋ ಹಬ್ಬವಂತೆ' ಪ್ರ. ೪೪೪) ನಮ್ಮ ಹೆಣ್ಣುಮಕ್ಕಳಿಗೆ ಕೌಟುಂಬಿಕ ವಾತಾವರಣದಲ್ಲಿ ಸುಖದ ಕಲ್ಪನೆ ಎಂಬುದು ಕೂಡ ಅನ್ಯವಾದದ್ದು. ಗಂಡ, ಮನೆ, ಮಕ್ಕಳನ್ನು ಒಳಗೊಂಡ ಕುಟುಂಬ; ಮನೆತನ, ಕುಟುಂಬಗಳನ್ನು ಒಳಗೊಂಡ ಸಮಾಜದ ಹಿತ ಮತ್ತು ಸುಖಗಳೇ ಹೆಣ್ಣಿನ ಹಿತ ಮತ್ತು ಸುಖಗಳೆಂದು ತಿಳಿದು ಹೆಣ್ಣು ಬಾಳಬೇಕು. ಹೆಣ್ಣು ತನ್ನ ಸ್ವಂತ ಸುಖ, ಸ್ವಹಿತದ ಬಗ್ಗೆ ಹೆಚ್ಚು ಕಾಳಜಿ ಮಾಡಿದರೆ ಕುಟುಂಬಗಳು 'ಒಡೆದು' ಹೋಗುತ್ತವೆ. ವೈಯಕ್ತಿಕ ಸೌಖ್ಯವನ್ನು ಆಕೆ ಕೌಟುಂಬಿಕ ಸೌಖ್ಯದಲ್ಲೆ ಕಂಡುಕೊಳ್ಳಬೇಕು. ಏನೇ ಕಷ್ಟವಾದರೂ ಸಹಿಸಿ 'ಕುಟುಂಬ ಗೌರವ', 'ಕುಲಗೌರವ', 'ಮನೆತನದ ಮಾನಮರ್ಯಾದೆ'ಗಳನ್ನೆಲ್ಲ ಕಾಪಾಡಬೇಕು. ಇಂತಹ ಮೌಲ್ಯ

ವ್ಯವಸ್ಥೆಯನ್ನು ಆಧುನಿಕ ಮಹಿಳಾ' ಕಾವ್ಯ ನಿರಾಕರಿಸುತ್ತದೆ. ತೀವ್ರವಾಗಿ ಪ್ರತಿರೋಧಿಸುತ್ತದೆ.

ಅಡುಗೆಮನೆಗೆ ಹೆಣ್ಣನ್ನು ಪರಿಮಿತಗೊಳಿಸುವುದನ್ನು; ಹಾಸಿಗೆಗೆ ಸೀಮಿತಗೊಳಿಸುವುದನ್ನು ಆಧುನಿಕ ಮಹಿಳಾ ಕಾವ್ಯ ತೀವ್ರವಾಗಿ ಪ್ರತಿರೋಧಿಸುತ್ತದೆ. ಅಷ್ಟೇ ಅಲ್ಲ ಮೇಲೆ ಹೇಳಿದಂತೆ ಕುಟುಂಬ, ಮನೆ, ದಾಂಪತ್ಯ, ತಾಯ್ತನ ಹೀಗೆ ಆಕೆಯ ಮೇಲೆ ಹೊರಿಸಲಾಗಿರುವ ಮತ್ತು ಆಕೆಯ ಆಯ್ಕೆ ಅಲ್ಲದೇ ಇರುವ ಪಾತ್ರ ಮತ್ತು ಚಹರೆಗಳೆಲ್ಲ ಇಲ್ಲಿ ಪ್ರತಿರೋಧಕ್ಕೆ ಗುರಿಯಾಗಿವೆ. (ಉದಾ: ನೋಡಿ; ಇಂದು ಬೆಳಗ್ಗೆ, ಪ್ರ. ೫೧೪, ಕೀಲಿ, ಪ್ರ. ೫೧೫) 'ಪ್ರತಿಭಾ ಅವರ ಅಭ್ಯಾಸ' ಎಂಬ ಪುಟ್ಟ ಪದ್ಯ ಹೆಣ್ಣಿಗೆ ಅಭ್ಯಾಸವಾಗಿ ಹೋಗಿರುವ ಗೃಹಿಣಿಯ ಪಾತ್ರ ಎಷ್ಟೊಂದು ರಕ್ತಗತವಾಗಿರುತ್ತದೆ ಎಂದು ತಿಳಿಸುತ್ತದೆ. ತನ್ನನ್ನು ಗಂಡ ಬಿಟ್ಟುಹೋದ ವಾಸ್ತವವನ್ನು ಆತ ಬಿಟ್ಟುಹೋದ ಎಷ್ಟೋ ವರ್ಷಗಳ ನಂತರವೂ ಒಪ್ಪಿಕೊಳ್ಳಲಾಗದ ಸ್ಥಿತಿಯಲ್ಲಿಯೆ ಹೆಣ್ಣು ಇರುತ್ತಾಳೆ. ಅವನಿಲ್ಲದಾಗಲೂ ಅವನಿದ್ದ ದಿನಗಳ ದಿನಚರಿಯೆ ಮನೆತುಂಬ ತುಂಬಿರುತ್ತದೆ. ಆ ದಿನಗಳ ತನ್ನ ಪಾತ್ರವೆ ತಲೆತುಂಬ ತುಂಬಿರುತ್ತದೆ. ಆದರಿಂದ ಈಚೆ ಬರಲಾಗದಂತೆ ಹೆಣ್ಣನ್ನು ಟ್ಯೂನ್ ಮಾಡಿರುವ ಈ ವ್ಯವಸ್ಥೆಯ ಬಗ್ಗೆ ದೊಡ್ಡ ಪ್ರತಿರೋಧವನ್ನು ಈ ಪದ್ಯ ತೋರುತ್ತದೆ. (ಅಭ್ಯಾಸ. ಪ್ರ. ೪೩೮). ಹೀಗೆ ದೇಹಕೇಂದ್ರಿತವಾಗಿ, ಕಾಮಕೇಂದ್ರಿತವಾಗಿ ಹೆಣ್ಣನ್ನು ನೋಡುವುದನ್ನು ಆಧುನಿಕ ಮಹಿಳಾ ಕಾವ್ಯ ಪ್ರತಿರೋಧಿಸುತ್ತದೆ. ಶಶಿಕಲಾ ಅವರ 'ಮನುವಿಗೊಂದು ಮಾತು', 'ಮನುಷ್ಯರಿದ್ದಾರೆ ಎಚ್ಚರಿಕೆ' ಮತ್ತು ಸ. ಉಷಾ ಅವರ 'ಈ ನೆಲದ ಹಾಡು' ಪದ್ಯಗಳೂ ಇದೇ ವಿಚಾರವನ್ನು ಪ್ರತಿಪಾದಿಸುತ್ತವೆ. ಹೆಣ್ಣೆಂದರೆ ದೇಹ, ಹೆಣ್ಣೆಂದರೆ ಕಾಮ, ಹೆಣ್ಣೆಂದರೆ ಮಾಂಸದ ಮುದ್ದೆ. ಅವಳಿಗೆ ಬೇರೆ ಪಾತ್ರ ಇಲ್ಲ ಎಂಬ ಸಾಮಾಜಿಕ ಭಾವನೆಯನ್ನು ಮಹಿಳಾ ಕಾವ್ಯ ತೀವ್ರವಾಗಿ ಪ್ರತಿರೋಧಿಸುತ್ತದೆ. ಹೆಣ್ಣು ಕೂಡ ನಮ್ಮ ಕನಸುಗಳಿಗೆ ಬಣ್ಣ ತುಂಬಬಲ್ಲಳು, ಈ ನೆಲದ ಹಾಡು ಬದಲಿಸಬಲ್ಲಳು; ಅವಳಿರುವುದು ಕೇವಲ ದೇಹದ ತೀಟೆ ತೀರುವುದಕ್ಕೆ ಮಾತ್ರ ಅಲ್ಲ; ಅವಳು ಮಾಯೆ ಅಲ್ಲ; ಅವಳೂ ನಮ್ಮಂತೆ ಒಂದು ಜೀವ; ಆದರೆ ಬಹುಪಾಲು ಜನ ಹೀಗೆ ಭಾವಿಸುವುದಿಲ್ಲ. ಇದನ್ನು ಮಹಿಳಾ ಕಾವ್ಯ ವಿರೋಧಿಸುತ್ತ ಸಹಯಾತ್ರಿಯಾಗಿ ಹೆಣ್ಣನ್ನು ಭಾವಿಸಿ ಎಂದು ಒತ್ತಾಯಿಸುತ್ತದೆ.

ದೇಹವೆನ್ನುವುದು ಒಂದು ವಾಸ್ತವ. ಹಾಗೆಯೆ ದೇಹಕ್ಕಂಟಿದ ಕಾಮವೆನ್ನುವುದೂ ಕೂಡ ವಾಸ್ತವವೆ. ಇದು ಋತುಬದ್ಧವಾದದ್ದು ಮತ್ತು ನೈಸರ್ಗಿಕವಾದದ್ದು. ಆದರೆ ಮಾನವ ಇದನ್ನು ಕೃತಕವಾಗಿ-ನಿಸರ್ಗಾತೀತವಾಗಿ ಕೆಲವೊಮ್ಮೆ ಅಜೈವಿಕವಾಗಿಯೂ ಬಳಸುತ್ತಿದ್ದಾನೆ. ಲೈಂಗಿಕತೆ ಎನ್ನುವುದು ನಮ್ಮಲ್ಲಿ ಬಹುತೇಕರಿಗೆ ಒಂದು ವ್ಯಸನ. ನಿಸರ್ಗದತ್ತ ಜೈವಿಕಕ್ರಿಯೆ ಅಲ್ಲ. ಮಾನಸಿಕ ವಿಕಾರ. ಆದರೆ ನಮ್ಮಲ್ಲಿ ಲೈಂಗಿಕತೆಯ ವಿಚಾರದಲ್ಲಿ ಪುರುಷರಿಗೆ ಒಂದು ನೀತಿಯಾದರೆ ಮಹಿಳೆಯರಿಗೆ ಇನ್ನೊಂದು ನೀತಿಯಿದೆ. ನಾವು ಅಹಲ್ಯೆಯನ್ನು ಕಲ್ಲು ಮಾಡಿದವರು. ರೇಣುಕೆಯನ್ನು ಕೊಂದುಹಾಕಿಸಿದವರು. ಸೀತೆಯನ್ನು ಶಂಕಿಸಿ ಕಾಡಿಗೆ ಕಳಿಸಿದವರು. ಅಮೃತಮತಿಯನ್ನು ನರಕಕ್ಕೆ ಕಳಿಸಿದವರು. ಮೋದಾಳಿಯನ್ನು ನೇಣಿಗೆ ಏರಿಸಿದವರು ಇತ್ಯಾದಿ, ಇತ್ಯಾದಿ. ಆದರೆ ಇಂತಹ ಪ್ರಸಂಗಗಳಲ್ಲಿ ಗಂಡಸರ ವರ್ತನೆಗೆ ಶಿಕ್ಷೆ ನಗಣ್ಯವಾದುದು. ಅಲ್ಲದೆ ನಮ್ಮಲ್ಲಿ ಪತಿವ್ರತೆಯ ಕಲ್ಪನೆ ಇದೆಯೇ ವಿನಾ ಸತೀವ್ರತರ ಕಲ್ಪನೆ ಇಲ್ಲ. ಲೈಂಗಿಕವಾದ ಈ ಇಬ್ಬಗೆಯ ನೀತಿಯನ್ನೆ ನಮ್ಮ ಮಹಿಳಾ ಕಾವ್ಯವು ಪ್ರಶ್ನಿಸುತ್ತದೆ. ಶಶಿಕಲಾ ಅವರ ಬೆಲ್ಲ ಮತ್ತು ಕಲ್ಲು ಹಾಗೂ ಗುಬ್ಬೀಮನಿ ಕವಿತೆಗಳನ್ನು ಇದಕ್ಕೆ ಉದಾಹರಣೆ ಆಗಿ ನೋಡಬಹುದು. ಬೆಲ್ಲ ಮತ್ತು ಕಲ್ಲು ಪುರಾಣದ ಶ್ರೀರಾಮನ ವರ್ತನೆಯನ್ನು ಕುರಿತ ಕವಿತೆಯಾದರೆ ಗುಬ್ಬೀಮನಿ ಸ್ವಾನುಭವದ ಕವಿತೆ.

*ಕಲ್ಲಾದ ಅಹಲ್ಯೆಯ ಮೈಯ ನೇವರಿಸಿ ।*
*ಜೀವಸೆಲೆಯೊಡೆಸಿ ಬದುಕನುದ್ಧರಿಸಿದನು*
*ಶ್ರೀರಾಮ ಕರುಣಾಸಾಗರ ಸದ್ಗುಣದಾಗರ ।*
*ಉಘೇ ಉಘೇ ಎಂದಿತು ಜನಸಾಗರ*
*ಆದರಿನ್ನೊಮ್ಮೆ ಇದೇ ಮಹಾತುಮ ।*
*ಉಕ್ಕುವ ಜೀವಗಳನ್ನು ಹೊತ್ತ*
*ಗರ್ಭಸ್ಥೆ ಮಂದಸ್ಮಿತೆ ।*
*ಜೀವನೋತ್ಸಾಹದಲ್ಲಿ ವಿಜೃಂಭಿಸುವ ।*
*ಸತಿ ಸೀತೆಯನ್ನು ಕಾಡುಪಾಲಾಗಿಸಿ*
*ಕೈ ತೊಳೆದನೀ ಸೀತಾರಾಮ ।*
*'ಈ ರಾಮಣ್ಣರೇ ಹೀಗೆ ಕಣೆ*
*ನಿಜಸತಿಗೆ ಕಲ್ಲಾಗುವ ಇವರು*
*ಪರಸತಿಗೆ ಮಾತ್ರ ಬೆಲ್ಲವಾಗುತ್ತಾರೆ'*

*(ಬೆಲ್ಲ ಮತ್ತು ಕಲ್ಲು. ಶ. ೮೮)*

ನಾ ಸಣ್ಣಾಕಿದ್ದಾಗ।
ಮಳಿ ಬಂದು ನಿಂತ ಹಸಿ ಮಣ್ಣಾಗ
ಗುಬ್ಬೀಮನಿ ಕಟ್ತಿದ್ಯಾ।
ನೀ ಅದಕೊಂದ ಬೇಲಿ ಕಟ್ಟಿ।
ನನ್ನ ಒಳಗೆ ಕುಂದರಿಸಿ
ಬೇಲಿ ದಾಟಿ ಹೊರಗ ಬಂದ್ರ।
ಕಾಲ ಮುರದ ಕೈಯಾಗ ಕೊಡ್ತೀನಿ ನೋಡ
ಅಂದ ಹೆದರಿಸ್ತಿದ್ದೆಲ್ಲ?।
ಮತ್ತ ಈಗ ನೀ ಮಾಡೋದೇನ?
ತುಡಗ ದನದಂಗ ಬೇಲಿ ಹಾರಿ।
ಸಿಕ್ಕ ಸಿಕ್ಕ ಹೊಲಾ ಎಲ್ಲ।
ಹೊಕ್ಕು ಹೊರಗ ಬರೂದು (ಗುಬ್ಬೀಮನಿ. ಶ. ೧೯)

ಸಂವಾದ ಧಾಟಿಯಲ್ಲಿರುವ ಈ ಎರಡೂ ಕವಿತೆಗಳಲ್ಲಿ ವ್ಯಂಗ್ಯ, ಗೇಲಿ ಮತ್ತು ಪ್ರಶ್ನಿಸುವ ಮನೋಧರ್ಮಗಳಿವೆ. ಸ್ವಗತ ಧಾಟಿಯ ಹಾಗೆಯೆ ಇಂತಹ ಸಂವಾದ ಮತ್ತು ವ್ಯಂಗ್ಯ ಹಾಗೂ ಪ್ರಶ್ನಿಸುವ ಧಾಟಿಗಳು ಆಧುನಿಕ ಮಹಿಳಾ ಕಾವ್ಯದ ಮುಖ್ಯ ಧಾಟಿಗಳಾಗಿವೆ. ಬೆಲ್ಲ ಮತ್ತು ಕಲ್ಲು ನಮ್ಮ ಗಂಡಸರ ವರ್ತನೆಯನ್ನು ಅದರಲ್ಲೂ ನಿಜಸತಿಗೆ ಒಂದು ರೀತಿ ನಡೆದುಕೊಳ್ಳುವ ಮತ್ತು ಪರಸತಿಗೆ ಇನ್ನೊಂದು ರೀತಿ ನಡೆದುಕೊಳ್ಳುವ ವರ್ತನೆಯನ್ನು ವಿಡಂಬಿಸುತ್ತದೆ ಮತ್ತು ಪ್ರತಿರೋಧಿಸುತ್ತದೆ. ಹಾಗೆಯೆ ಗುಬ್ಬೀಮನಿ ಈ ವರ್ತನೆಯ ಜೊತೆಗೆ ಗಂಡಂದಿರ (ಗಂಡಸರ) ಇಬ್ಬಗೆಯ ನೀತಿಯನ್ನು ಪ್ರಶ್ನಿಸುತ್ತದೆ. ಗಂಡ ತಾನು ಮಾತ್ರ ತುಡುಗು ದನದ ಹಾಗೆ ಬೇರೆಯ ಹೊಲಗಳನ್ನೆಲ್ಲ ಹೊಕ್ಕು ಬರಬಹುದು. ಹೆಂಡತಿಯಾದವಳು ಬೇಲಿ ದಾಟುವಂತಿಲ್ಲ, ದಾಟಿದರೆ ಶಿಕ್ಷೆ ಕಾದಿದೆ ಅನ್ನುವುದು ತಪ್ಪು, ಸಮಾಜದಲ್ಲಿ ಗಂಡು ಮತ್ತು ಹೆಣ್ಣಿಗೆ ಒಂದೇ ನೀತಿ ಇರಬೇಕು ಎಂದು ಈ ಮೂಲಕ ಮಹಿಳಾ ಕಾವ್ಯ ಒತ್ತಾಯಿಸುತ್ತದೆ.

ಶೀಲ, ಪಾವಿತ್ರ್ಯ ಎಂಬ ಕಲ್ಪನೆಗಳೇ ಇಂದು ಆಧುನಿಕ ಸಂದರ್ಭದಲ್ಲಿ ಗೇಲಿಗೆ ಒಳಗಾಗಿವೆ. ಅಲ್ಲದೆ ಮನಸ್ಸು ಹೇಗಾದರೂ ಹಾಳಾಗಿರಲಿ ದೇಹ ಮಾತ್ರ ಪವಿತ್ರವಾಗಿರಬೇಕು ಎಂಬ ದೇಹಮೀಮಾಂಸೆಯನ್ನು ಮಹಿಳಾ ಕಾವ್ಯ ವಿರೋಧಿಸುತ್ತದೆ. 'ಮೀಸಲಿಟ್ಟವಳ ಸಂಭೋಗದ ಉತ್ತುಂಗದಲ್ಲೂ 'ಅವಳ' ಕರೆಯುತ್ತ' ಇರುವ 'ಅವರು' ಮಾನಸಿಕವಾಗಿ ಮತ್ತು ದೈಹಿಕವಾಗಿ ಎರಡೂ ರೀತಿಯಲ್ಲಿ ಲಂಪಟರಾಗಿದ್ದರೂ ಹೆಣ್ಣಿಗೆ ಮಾತ್ರ ಶೀಲ-ಪಾವಿತ್ರ್ಯ ಎಂಬ ಮೌಲ್ಯಗಳನ್ನು ಬೋಧಿಸುತ್ತಾರೆ. ಇಂತಹ ದೇಹಮೀಮಾಂಸೆ ಮತ್ತು ಬೋಧನೆಗಳೆರಡೂ ಇಲ್ಲಿ ಪ್ರತಿರೋಧಕ್ಕೆ ಗುರಿಯಾಗಿವೆ (ತಾತ್ಕಾಲಿಕ ಸತ್ಯ ಮತ್ತು ಪಾರಮಾರ್ಥಿಕ ಸುಳ್ಳು. ಪ್ರ. ೪೩೦).

ಸುಕನ್ಯಾ ಮಾರುತಿ, ಶಶಿಕಲಾ ವೀರಯ್ಯಸ್ವಾಮಿ, ಲಲಿತಾ ಸಿದ್ಧಬಸವಯ್ಯ, ಎಚ್. ಎಸ್. ಮುಕ್ತಾಯಕ್ಕ, ವೈದೇಹಿ ಇವರ ಕವಿತೆಗಳಲ್ಲಿ ಪ್ರಾದೇಶಿಕ ಭಾಷೆ - ನುಡಿಗಟ್ಟು ಸಾಕಷ್ಟು ಬಳಕೆಯಾಗಿದೆ. ಪ್ರತಿಭಾ ನಂದಕುಮಾರ್ ಅವರಲ್ಲಿ ಸಾಕಷ್ಟು ಕಂಗ್ಲಿಷ್ ಬಳಕೆಯಾಗಿದೆ. (ಇವರ ಇತ್ತೀಚಿನ 'ಕಾಫಿ ಹೌಸ್' ಸಂಕಲನ ದೈನಂದಿನ ಲಯಗಳನ್ನೆ ಹಿಡಿದಿರುವ ಸಂಕಲನ) ಇನ್ನು ಮಿಕ್ಕಂತೆ ಬಹುಪಾಲು ಮಹಿಳಾ ಕಾವ್ಯ ಆಧುನಿಕ ಕನ್ನಡ ಕಾವ್ಯದ ಜಡಗೊಂಡ ಭಾಷೆ-ಚೌಕಟ್ಟು-ಛಂದಸ್ಸುಗಳಲ್ಲೆ ತೊಳಲುತ್ತಿದೆ. ಹಾಗೆ ನೋಡಿದರೆ ಕವಿತೆಯ ಲಯ ಮತ್ತು ಅಭಿವ್ಯಕ್ತಿ ಕ್ರಮಗಳಲ್ಲಿ ವೈವಿಧ್ಯಮಯ ಪ್ರಯೋಗಗಳನ್ನು ಪ್ರತಿಭಾ, ಉಷಾ, ಶಶಿಕಲಾ ಮೂವರೂ ಮಾಡಿದ್ದಾರೆ. ಮುಕ್ತವಾಗಿ ನಿರ್ಭಿಡೆಯಿಂದ ಬರೆಯುವುದು; ಬಿಗುಮಾನ - ಸಂಕೋಚಗಳಿಲ್ಲದೆ ಮುಖಕ್ಕೆ ಹೊಡೆದ ಹಾಗೆ ಹೇಳುವುದು ಪ್ರತಿಭಾ ಮತ್ತು ಶಶಿಕಲಾ ಅವರಲ್ಲಿ ಹೆಚ್ಚಾಗಿದ್ದರೆ ಉಷಾ ಅವರಲ್ಲಿ ಗಂಭೀರ ನಿರೂಪಣೆ-ರೂಪಕ ಮಾರ್ಗದ ನಿರೂಪಣೆ ಹೆಚ್ಚಾಗಿದೆ.

ಆಧುನಿಕ ಮಹಿಳಾ ಕಾವ್ಯದಲ್ಲಿ ಹೆಣ್ಣಿನದೇ ಆದ ಒಂದು ಭಾಷೆ ಅಥವಾ ಭಾಷೆಗಳು ನಿರ್ಮಾಣವಾಗಿವೆಯೇ? ಭಾಷಿಕ ಪರಂಪರೆಯ ಬಗ್ಗೆ ಮಹಿಳಾ ಕಾವ್ಯ ಹೇಗೆ ವರ್ತಿಸಿದೆ? ಪುರುಷ ಕಾವ್ಯವನ್ನು ಗಮನಿಸಿದರೆ ಕುವೆಂಪು-ಬೇಂದ್ರೆ-ಅಡಿಗ ಇವರೆಲ್ಲರೂ ಸಮುದಾಯದ ಭಾಷೆಯನ್ನು ಬಳಸುತ್ತಲೇ ತಮ್ಮದೇ ಕನ್ನಡಗಳನ್ನು ಸೃಷ್ಟಿಸಿರುವುದನ್ನು ಕಾಣಬಹುದು. ಹೀಗೆ ಮಹಿಳೆಯರಲ್ಲಿ ವಿಶೇಷವಾಗಿ ಶಶಿಕಲಾ, ಪ್ರತಿಭಾ, ಉಷಾ ಇವರು ತಮ್ಮದೇ ಕಾವ್ಯಭಾಷೆ, ಶೈಲಿಗಳನ್ನು ಸೃಷ್ಟಿಸಿದ್ದಾರೆಯೋ? ಸೃಷ್ಟಿಸಿಕೊಂಡಿದ್ದಾರೆ. ಬಸವ-ಅಲ್ಲಮ-ಅಕ್ಕ ಈ ಮೂವರ ಚೌಕಟ್ಟು-ಛಂದಸ್ಸು-ಭಾಷೆಗಳಲ್ಲಿ ಸಾಮ್ಯತೆಗಳಿದ್ದರೂ ಅನುಭವ ಮತ್ತು ಅಭಿವ್ಯಕ್ತಿ ಕ್ರಮಗಳಲ್ಲಿ ಈ ಮೂವರೂ ಹೇಗೆ ಭಿನ್ನರೋ ಹಾಗೆ; ಅಡಿಗರಿಂದ ಅಪಾರವಾಗಿ ಪ್ರಭಾವಿತರಾಗಿದ್ದರೂ ಪ್ರತಿಭಾ ತಮ್ಮ ಅನುಭವ ಮತ್ತು ಅಭಿವ್ಯಕ್ತಿ ಕ್ರಮಗಳಿಂದ ಭಿನ್ನರಾಗಿದ್ದಾರೆ. ಹಾಗೆಯೇ ಬೇಂದ್ರೆಯಿಂದ ಸಾಕಷ್ಟು ಪ್ರಭಾವಿತರಾದಂತೆ ಶಶಿಕಲಾ ಕಂಡರೂ ಇವರು ಭಿನ್ನರಾಗಿದ್ದಾರೆ. ಒಟ್ಟಾರೆ ನವ್ಯ ಅಭಿವ್ಯಕ್ತಿ ಕ್ರಮದಿಂದ ಸಾಕಷ್ಟು ಪ್ರಭಾವಿತರಾಗಿದ್ದರೂ ಸ. ಉಷಾ ಕೂಡ ಭಿನ್ನರಾಗಿದ್ದಾರೆ. ಈ ಮೂವರೂ ಕನ್ನಡದಲ್ಲಿ ತಮ್ಮದೇ ವಿಶಿಷ್ಟ ಭಾಷಿಕ ಶೈಲಿಗಳನ್ನು ನಿರ್ಮಿಸಿಕೊಂಡಿರುವ ಕವಿಗಳು. ಅಲ್ಲದೆ ಇವರು ತಮ್ಮದೇ ಸ್ತ್ರೀ ಸಂವೇದನೆಗಳು ಇರುವ ಕಾರಣಕ್ಕೆ ಕನ್ನಡ ಅಭಿವ್ಯಕ್ತಿ ಪರಂಪರೆಗಿಂತ ಭಿನ್ನರು ಕೂಡ.

ಅಸಡ್ಡೆಯಿಂದ ನನ್ನೆದುರು ನೀನು ಬಿಸಾಡಿದ
ಶಬ್ದಗಳನ್ನು ನಾನೆತ್ತಿಕೊಳ್ಳಲಾರೆ
ಈ ಶಬ್ದದ ಸಿಪ್ಪೆಯ ಮೇಲೆ ಸುಳ್ಳಿನ ಪೊರೆ ಕಟ್ಟಿದೆ
(ನಿರಾಕರಣೆ. ಶ. ೧೧೧)

ಸುಳ್ಳಿನ ಪೊರೆ ಕಟ್ಟಿದ ಶಬ್ದಗಳನ್ನು ನಿರಾಕರಿಸುವ ಸಂಕಲ್ಪವಂತೂ ಮಹಿಳಾ ಕಾವ್ಯದಲ್ಲಿ ಇದೆ. ನಮ್ಮ ಚರಿತ್ರೆಯನ್ನು ಬರೆಯಲು - ಪುರಾಣವನ್ನು ಬರೆಯಲು - ಸಾಹಿತ್ಯವನ್ನು ಬರೆಯಲು ಇದುವರೆಗೆ ಪುರುಷರು ಬಳಸುತ್ತಾ ಬಂದ ಭಾಷೆಯೇ ಸುಳ್ಳಿನ ಪೊರೆ ಕಟ್ಟಿದ ಭಾಷೆ. ಇದನ್ನು ಮಹಿಳಾ ಕಾವ್ಯ ನಿರಾಕರಿಸಿದೆ. ತನ್ನದೇ ಭಾಷೆ-ನುಡಿಗಟ್ಟು - ಅಭಿವ್ಯಕ್ತಿ ಕ್ರಮಗಳನ್ನು ಸೃಷ್ಟಿಸಬೇಕೆಂಬ ಎಚ್ಚರ-ಅಪೇಕ್ಷೆಗಳು ಆಧುನಿಕ ಮಹಿಳಾ ಕಾವ್ಯದಲ್ಲಿ ಇವೆ. ಪ್ರತಿಭಾ ಅವರ ಭಾಷೆ ಎಂಬ ಕವಿತೆಯಲ್ಲಿ ಇಂತಹ ಒಂದು ಯತ್ನ ಇದೆ. ಇದು ಗಂಡಸು ನಿರೀಕ್ಷಿಸುವುದಕ್ಕಿಂತ ಭಿನ್ನವಾದ ಭಾಷೆಯನ್ನು ನಿರ್ಮಿಸಿಕೊಳ್ಳುತ್ತೇವೆಂಬ ಸಂಕಲ್ಪ ಮತ್ತು ಯತ್ನ.

ಅವನ ಬಾಯಲ್ಲಿ ಸದಾ ಅಮ್ಮನ ಅಕ್ಕನ ಮಾತೇ
ಬರುತ್ತಿತ್ತು।
ನಾನು ಕಡಿಮೆ ಇಲ್ಲವೆಂದು ಅವರಪ್ಪನ ಅಂತ
ಅಂದೇ ಬಿಟ್ಟೆ
ಅಷ್ಟೇ ಆಮೇಲೆ ನಾಲಿಗೆಗೆ ಸದರವಾಗಿ।
ಬರೀ ಹೊಲಸು ಹರಿದು ಬರತೊಡಗಿ।
ಸರಾಗವಾಗಿ ತೊದಲದೆ
ಬೈಗುಳದ ರ್‍ಯಾಂಪ್ ರಿಂಗಣಿಸುತ್ತ।
ಹಿಪ್ ಆಪ್‌ಗೆ ಕಡಿಮೆ ಇಲ್ಲದಂತೆ।
ಅಷ್ಟೋತ್ತರ ಶತನಾಮಗಳಲ್ಲಿ ನಿಸ್ಸೀಮಳಾದೆ
ಇಡೀ ಬೀದಿಗೆ ಹೆಸರಾದೆ. (ಭಾಷೆ-೨, ಪ್ರ. ೪೭೯)

ಇಲ್ಲಿ ಅಮ್ಮನ್, ಅಕ್ಕನ್ ಇತ್ಯಾದಿ ಭಾಷೆಯ ನಿರಾಕರಣೆ ಇದೆ. ಹಾಗೆಯೆ ಅದರ ಬದಲಿ ಸೃಷ್ಟಿಯಾದ ನಿಮ್ಮಪ್ಪನ್ ಎಂಬ ಪ್ರಯೋಗದ ನಿರಾಕರಣೆಯೂ ಇದೆ. ಗಂಡಸರು ಸುಲಭವಾಗಿ ನಿನ್ನಕ್ಕನ್, ನಿನ್ನಮ್ಮನ್ ಎಂದು ಬಿಡಬಹುದು. ಆದರೆ ಅದೇ ಹೆಂಗಸರು ನಿನ್ನಣ್ಣನ್ ನಿನ್ನಪ್ಪನ್ ಎನ್ನಲು ಆಗುವುದಿಲ್ಲ, ಯಾಕೆಂದರೆ ಅದು ಹೆಣ್ಣಿಗೆ ನಿಷೇಧಿತ ನಡವಳಿಕೆ. ಇಲ್ಲಿ ಇಂತಹ ಬದಲಿಯನ್ನು ನಿರಾಕರಿಸುವಾಗ ಬಳಸುವ ಭಾಷೆಯಾದರೂ ಯಾವುದು? ರ್‍ಯಾಪ್, ರಿಂಗಣಿಸು, ಹಿಪ್ ಆಪ್ ಇಂತಹ ಭಾಷೆ. ಕೊಲವೆರಿ ತಂಗ್ಲಿಷ್ ಮೀರಿಸುವ ಕಂಗ್ಲಿಷ್ ಭಾಷೆ. ಇನ್ನೊಂದು ಅಷ್ಟೋತ್ತರ, ಶತನಾಮ ಎಂಬ ಪ್ರಯೋಗ. ಇನ್ನು ಮಿಕ್ಕ ಪ್ರಯೋಗಗಳೆಲ್ಲ ಅಕಡೆಮಿಕ್ ಸ್ಟಾಂಡರ್ಡ್ ಕನ್ನಡ ಪ್ರಯೋಗಗಳು. ಅಂದರೆ ೧. ಇಂಗ್ಲಿಷಿನ ನೆರಳು, ೨. ಸಂಸ್ಕೃತದ ನೆರಳು, ೩. ಶಿಕ್ಷಣ ಪ್ರಣೀತ ಪ್ರಮಾಣ ಕನ್ನಡದ ನೆರಳು. ಈ ಮೂರು ನೆರಳುಗಳಿಂದ ಹೆಣ್ಣು ಭಾಷೆ ತಪ್ಪಿಸಿಕೊಳ್ಳಬೇಕಾದ ಅಗತ್ಯವಿದೆ. ಆದರೆ ವಿಶೇಷವಾಗಿ ಪ್ರತಿಭಾ ಅವರ ಕಾವ್ಯದಲ್ಲಿ ಈ ಮೂರು ನೆರಳುಗಳಿಂದ ತಪ್ಪಿಸಿಕೊಳ್ಳಲು ಆಗಿಲ್ಲ. ಆದರೆ ಗಂಡು ಭಾಷೆಯ ನೆರಳೊಂದು ನಮ್ಮ ಪರಂಪರೆಯಲ್ಲಿ ಇವುಗಳೊಂದಿಗೆ ಇದೆ. ಈ ಗಂಡುಭಾಷೆಯ ನೆರಳಿನಿಂದ ತಪ್ಪಿಸಿಕೊಂಡ ಶೈಲಿಯನ್ನು ಈ ಮೂವರೂ ರೂಪಿಸಿಕೊಂಡಿದ್ದಾರೆ.

ಇವರೆಲ್ಲರೂ ಗಂಡಸರಂತೆ ತಾವು ಜಾತಿಗೂ ಗಟ್ಟಿಯಾಗಿ ಜೋತು ಬೀಳುವರಲ್ಲ ಎಂದು ಹೇಳುತ್ತಾರೆ. ''ಅದೇನೂ ದೊಡ್ಡ ಸಾಹಸವಲ್ಲ/ಬ್ರಾ ಕಳಚಿದಷ್ಟೇ ಸುಲಭವಾಗಿ/ ಬ್ರಾಹ್ಮಣತ್ವವನ್ನೂ ಕಳಚಬಹುದು'' (ಪೊರೆ ಕಳಚುವುದು. ಪ್ರ. ೪೩೮) ಬ್ರಾ ಕಳಚುವುದು ಅಷ್ಟು ಸುಲಭವೋ? ನಿಜವಾಗಿಯೂ ಹೆಣ್ಣು ಬ್ರಾ-ಪ್ಯಾಂಟಿ ಕಳಚಿ ಕಟ್ಟುಕಟ್ಟಳೆಗಳನ್ನು ದಾಟಿದರೆ ಆಗ ಯಾವ ಜಾತಿಗಳೂ ಇರುವುದಿಲ್ಲ ಎಂಬುದು ನಿಜವೇ ಹೌದು! ಅಂತಹ ಸಂಕರದಿಂದ ಹುಟ್ಟುವ ಹೊಸ ಜನಾಂಗಕ್ಕೆ ಜಾತಿ ಇರುವುದಿಲ್ಲ ಮಾತ್ರ. ಇಲ್ಲಿ 'ಬ್ರಾ ಕಳಚಿದಷ್ಟೇ ಸುಲಭವಾಗಿ' ಎಂದು ಭಾಷೆಯನ್ನು ಬಳಸುವುದೇ ಭಾಷೆಯ ಹೆಣ್ತನದ ಲಕ್ಷಣ. ಆಧುನಿಕ ಮಹಿಳಾ ಕಾವ್ಯವನ್ನು ಸೂಕ್ಷ್ಮವಾಗಿ ನಾವಿನ್ನೂ ಓದಿಲ್ಲ. ಭಾಷಿಕ ನೆಲೆಯಿಂದ ಅಧ್ಯಯನಗಳೂ ಗಂಭೀರವಾಗಿ ಆಗಿಲ್ಲ. ಹಾಗೆ ಆದರೆ ಹೆಣ್ಣಿನದೇ ಭಾಷೆ-ಪರಿಭಾಷೆ ಅಲ್ಲಿ ರೂಪುಗೊಳ್ಳುತ್ತ ಇರುವುದನ್ನು ಕಾಣಬಹುದು.

ಪುರುಷರಷ್ಟು ಮುಕ್ತವಾಗಿ ಹೆಂಗಸರು ಬರೆಯುವುದಿಲ್ಲ ಎಂದರೇನು? ಶ್ಲೀಲ ಅಶ್ಲೀಲದ ಗೆರೆಯಿಲ್ಲದೆ ಬರೆಯುವುದು ಎಂದೇ? ಮಡಿವಂತಿಕೆ ಎಂದೇ? ಹೆಣ್ಣು ಮುಕ್ತವಾಗಿ ಬರೆದರೆ ಆಕೆ ಹಾಸಿಗೆಗೆ ಸುಲಭವಾಗಿ ಬರಬಲ್ಲ ಹೆಂಗಸು ಎಂದೇ ತಿಳಿಯುವ ಓದುಗಳು ನಮ್ಮಲ್ಲಿವೆ! ಹೆಣ್ಣಿನ ಕವಿತೆಯ ಒಂದೊಂದು ರೂಪಕವನ್ನು ಡಬ್ಬಲ್ ಮೀನಿಂಗಿನಿಂದ ಓದುವ ಮತ್ತು ಆಕೆಯ ಕವಿತೆಯ ಒಂದೊಂದು ಶಬ್ದವನ್ನೂ ಆಕೆಯ ಚಾರಿತ್ರ್ಯದ ಸಂಕೇತವೆಂಬಂತೆ ಓದುವ ಓದುಗಳೂ ನಮ್ಮಲ್ಲಿವೆ. ಜೀವನಚರಿತ್ರೆಯನ್ನು ಮತ್ತು ಚಾರಿತ್ರ್ಯವನ್ನು ಸಾಹಿತ್ಯದಿಂದ ಅಗೆದು ತೆಗೆಯುವ ಕೆಲಸಗಳು ನಮ್ಮಲ್ಲಿ ಸಾಕಷ್ಟು ನಡೆದಿವೆ, ನಡೆಯುತ್ತಿವೆ. ಹಾಗೆ ನೋಡಿದರೆ ಹೆಣ್ಣಿಗೆ

# ಘನ ತ್ಯಾಜ್ಯ ವಸ್ತುಗಳ ನಿರ್ವಹಣೆ

## ಘನ ತ್ಯಾಜ್ಯ ವಸ್ತುಗಳ ಸಮರ್ಪಕ ಸಂಗ್ರಹಣೆ ಹಾಗೂ ವಿಲೇವಾರಿ ಪರಿಸರ ಮತ್ತು ಆರೋಗ್ಯ ರಕ್ಷಣೆಯ ದೃಷ್ಟಿಯಿಂದ ಅತಿ ಅಗತ್ಯ.

ನಗರ ಪ್ರದೇಶಗಳಲ್ಲಿ ಘನ ತ್ಯಾಜ್ಯ ವಸ್ತುಗಳ ಪ್ರಮಾಣ ಹೆಚ್ಚಾಗುತ್ತಿದ್ದು, ಅವುಗಳ ನಿರ್ವಹಣೆ ಮತ್ತು ವಿಲೇವಾರಿ ಕಷ್ಟಸಾಧ್ಯವಾಗುತ್ತಿದೆ. ಘನ ತ್ಯಾಜ್ಯ ವಸ್ತುಗಳಲ್ಲಿ ಕಾಗದ, ಗಾಜು, ಲೋಹ ಮುಂತಾದವುಗಳಿದ್ದು, ಶೇಕಡ 15 ರಿಂದ 30ರಷ್ಟು ವಸ್ತುಗಳ ಪುನರ್ಬಳಕೆ ಸಾಧ್ಯ. ಘನ ತ್ಯಾಜ್ಯ ವಸ್ತುಗಳಲ್ಲಿರುವ ಸಾವಯವವನ್ನು ಕಾಂಪೋಸ್ಟ್ ಗೊಬ್ಬರವಾಗಿ ಪರಿವರ್ತಿಸಿ, ಮನೆಗಳಲ್ಲಿನ ಕೈತೋಟಕ್ಕೆ ಬಳಸಬಹುದು. ಸಾವಯವವನ್ನು ಇಂಧನವಾಗಿಯೂ ಬಳಸಬಹುದು. ಘನ ತ್ಯಾಜ್ಯ ವಸ್ತುಗಳನ್ನು ವಿಲೇವಾರಿ ಮಾಡುವ ಮುನ್ನ ಬಯೋ-ಡಿಗ್ರೇಡಬಲ್ಸ್ ಮತ್ತು ಅಪಾಯಕಾರಿ ತ್ಯಾಜ್ಯ ವಸ್ತುಗಳನ್ನು ಮನೆಯ ಮಟ್ಟದಲ್ಲಿಯೇ ಪ್ರತ್ಯೇಕಿಸಿ.

ಕಸವನ್ನು ಬೇಕಾಬಿಟ್ಟಿಯಾಗಿ ಬಿಸಾಡುವುದರಿಂದ ಮೇಲ್ಮೈ ನೀರು ಮತ್ತು ಅಂತರ್ಜಲ ಕಲುಷಿತಗೊಳ್ಳುವುದಲ್ಲದೇ ಇತರ ಪರಿಸರ ಸಂಬಂಧಿತ ಅಪಾಯಗಳೂ ಒದಗುತ್ತವೆ.

### ಘನತ್ಯಾಜ್ಯ ವಸ್ತುಗಳ ವಿಲೇವಾರಿ: ಕುಟುಂಬಗಳಿಗೆ ಸಲಹೆಗಳು

- ಪುನರ್ಬಳಕೆಯಾಗಬಹುದಾದ ಪ್ಲಾಸ್ಟಿಕ್, ಲೋಹ, ಗಾಜು ಮುಂತಾದ ತ್ಯಾಜ್ಯಗಳನ್ನು ಬೇರ್ಪಡಿಸಿ.
- ಎಲೆಕ್ಟ್ರಾನಿಕ್ ತ್ಯಾಜ್ಯಗಳಿಗೂ ಬ್ಯಾಟರಿಗಳಿಗೂ ಪ್ರತ್ಯೇಕ ಕಸದ ತೊಟ್ಟಿಯಿರಲಿ.
- ಸಾವಯವ ಘನತ್ಯಾಜ್ಯಗಳನ್ನು ಕೈತೋಟಗಳಿಗಾಗಿ ಪುನರ್ಬಳಕೆ ಮಾಡಲು ಕಾಂಪೋಸ್ಟ್ ಆಗಿ ಪರಿವರ್ತಿಸಿ.
- ಅಂಗಡಿಗಳಲ್ಲಿ ದಿನಸಿ ವಸ್ತುಗಳನ್ನು ಕೊಳ್ಳುವಾಗ ನಿಮ್ಮ ಚೀಲವನ್ನು ಬಳಸಿ. ಅಂಗಡಿಯವರಿಂದ ಪ್ಲಾಸ್ಟಿಕ್ ಚೀಲಗಳನ್ನು ಪಡೆಯಬೇಡಿ.
- ಪುನರ್ಬಳಕೆ ಮಾಡಬಹುದಾದ ಲಂಚ್‌ಬಾಕ್ಸ್‌ಗಳನ್ನೇ ಬಳಸಿ.
- ಸರಳ ಜೀವನ ಶೈಲಿ ಅನುಸರಿಸಿ, ತ್ಯಾಜ್ಯ ಉತ್ಪಾದನೆಗೆ ಕಡಿವಾಣ ಹಾಕಿ.



ಸಾರ್ವಜನಿಕ ಹಿತದೃಷ್ಟಿಯಿಂದ ಪ್ರಕಟಣೆ:

**ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ**

'ಪರಿಸರ ಭವನ', ನಂ.49, ಚರ್ಚ್ ಸ್ಟ್ರೀಟ್, ಬೆಂಗಳೂರು - 560 001.

ಫೋನ್ : 080-2558 1383, 2558 9112 ಇ-ಮೇಲ್: kspcb@kar.nic.in

ಮಾಲಿನ್ಯದ ವಿರುದ್ಧ ನಮ್ಮ ಹೋರಾಟದಲ್ಲಿ ಪಾಲ್ಗೊಳ್ಳಿ

## 'ಹೊಸತು' ಓದುಗರಿಗೆ ಹೊಸ ವರ್ಷದ ಶುಭಾಶಯಗಳು

ಸಂಪೂರ್ಣ ಮಹಾಭಾರತ ರೂ. 387

ಸಂಪೂರ್ಣ ರಾಮಾಯಣ ರೂ. 294

ಸುವರ್ಣ ಕರ್ನಾಟಕ ದರ್ಶನ (50 ಸಂವತ್ಸರಗಳು) ರೂ. 699

ಸಂಪೂರ್ಣ ಭಾಗವತ ರೂ. 399

**ವಿದ್ಯಾ ಪಬ್ಲಿಷಿಂಗ್ ಹೌಸ್**

'ಶ್ರೀನಿಲಯ', ಅಲ್ವಾರಿಸ್ ರಸ್ತೆ, ಕದ್ರಿ, ಮಂಗಳೂರು - 575 002

ದೂರವಾಣಿ : 0824-2216691 ಮೊಬೈಲ್ : 9449856691; 9448387556

e-mail : mailrao@yahoo.com

## ಹೊಸ ವರ್ಷದ ಶುಭಾಶಯಗಳು




₹ 140/-




₹ 90/-

**ಗೀತಾಂಜಲಿ**

ಪುಸ್ತಕ ಪ್ರಕಾಶಕರು ಮತ್ತು ಮಾರಾಟಗಾರರು

ಕಂದಾಯ ಭವನ
100 ಅಡಿ ರಸ್ತೆ, ರಾಜೇಂದ್ರನಗರ
ಶಿವಮೊಗ್ಗ-577201

ದೊಣೆಹಳ್ಳಿ-577528
ಜಗಳೂರು ತಾ॥, ದಾವಣಗೆರೆ ಜಿಲ್ಲೆ

ಮಾತನಾಡುವುದೇ ಒಂದು ಸಂಕಟ. ''ತುಟಿಯ ತುದಿವರೆಗೆ ಬಂದು ತಲುಪುವ ಪದಗಳು/ ಸಾಗರದಲೆಗಳಂತೆ ಧುಮ್ಮಿಕ್ಕಿ ಅಂಚು ಚುಂಬಿಸಿ/ ಮೌನವಾಗಿ ಒಳಸರಿಯುತ್ತವೆ. ವಾಗರ್ಥಗಳ ಸಮೇತ ಬಡಿವಾರ ಬಡಿಯುವ ಶಬ್ದ/ಬಂದೂಕಿನ ತುದಿಯಲ್ಲಿ ಸ್ಫೋಟಗೊಳ್ಳುತ್ತದೆ'' (ಮಾತನಾಡುವ ಸಂಕಟ. ಶ. ೧೧೦)

ಹೆಣ್ಣಿನ ಒಡಲು ಬಂದೂಕಿನ ಹಾಗೆ; ಕಡಲಿನ ಒಡಲಿನ ಹಾಗೆ. ಅಲ್ಲಿ ಸ್ಫೋಟಿಸುವ ಗುಂಡುಗಳಿರುತ್ತವೆ. ಅಸಂಖ್ಯ ತೆರೆತೆರೆಯ ತಲ್ಲಣಗಳೂ ಇರುತ್ತವೆ. ಅವೆಲ್ಲವೂ ಮಾತುಗಳಾಗಿ ತುಟಿ ದಾಟಿ ಹೊರಬಂದರೆ ಸುನಾಮಿ-ಸ್ಫೋಟಗಳೇ ಸಂಭವಿಸಬಹುದು. ಲೋಕ ಅಲ್ಲೋಲ ಕಲ್ಲೋಲ ಆಗಬಹುದು! ಆದರೆ ಹೆಣ್ಣಿನ ಅನೇಕ ಕವಿತೆಗಳು ಸ್ಫೋಟಗೊಳ್ಳುವುದಿಲ್ಲ, ಯೋಧನ ವಿಧವೆಯ ಕುಂಕುಮವಿಲ್ಲದ ಹಣೆಯಂತೆ ಮೌನವಾಗಿವೆ. ವಿಷಾದವೇ ಮೈವೆತ್ತಂತೆ ಇವೆ. ಇದಕ್ಕಿಂತ ಮುಕ್ತವಾಗಿ ಇನ್ನು ಹೇಗೆ ಬರೆಯುವುದು? ಮುಕ್ತವಾಗಿ ಬರೆಯುವುದೆಂದರೆ ಶಕ್ತವಾಗಿ ಬರೆಯುವುದೇ ಅಲ್ಲವೇ?

ಆಧುನಿಕ ಮಹಿಳಾ ಕಾವ್ಯದಲ್ಲಿ ರೋದನ, ಅಳಲು, ದುಃಖ, ವಿಷಾದ, ತಲ್ಲಣಗಳು ಮತ್ತೆ ಮತ್ತೆ ತೋಡಿಕೊಳ್ಳಲ್ಪಟ್ಟಿವೆ. ವಿಶೇಷವಾಗಿ ಶಶಿಕಲಾ ಅವರ ಕೆಲವು ಕವಿತೆಗಳಲ್ಲಿ 'ಬದುಕೇ' ಎಂದು ಮತ್ತೆ ಮತ್ತೆ ಬದುಕನ್ನೆ ಸಂಬೋಧಿಸಲಾಗಿದೆ. ಅಕ್ಕ, ಅವ್ವ, ಮಾವ, ಮುತ್ಯಾ ಹೀಗೆ ಸಂಬಂಧಗಳ ಸಂಬೋಧನೆಯಿಂದಲೆ ಸಂವಾದಕ್ಕೆಳಸುವ, ನಿವೇದಿಸುವ, ಪ್ರಶ್ನಿಸುವ ಧಾಟಿಯಲ್ಲಿ ಇಲ್ಲಿನ ಕವಿತೆಗಳಿವೆ. ಹೂವಿನ ಪ್ರಾರ್ಥನೆ ಎಂಬ ಇವರ ಕವಿತೆಯಲ್ಲಿ;

*ಬದುಕೇ।*
*ಈ ಹೂವಿನೆದೆಯಲ್ಲೊಮ್ಮೆ ಇಣುಕಿ ನೋಡು*
*ಹನಿಹನಿಗಳಲ್ಲಿ ತೊಟ್ಟಿಕ್ಕಿದೆ ಕಂಬನಿ।*
*ಜಗದ ಕಣ್ಣಿಗಿದು ಹೊಳೆಯುವ ಇಬ್ಬನಿ*
*ಬದುಕೇ।*
*ಇರುಳು ಕಂಗಳು ಮುಚ್ಚಿದರೆ ಸಾಕು*
*ಕರುಳಿರಿಯುವ ಗಾಯಗಳ ಕದ ತೆರೆಯುತ್ತದೆ.*
(*ಪ್ರಾರ್ಥನೆ. ಶ. ೧೦೫.*)

ಪ್ರಾರ್ಥನೆ ನಮ್ಮ ಕನ್ನಡ ಕಾವ್ಯದ ಒಂದು ಮುಖ್ಯವಾದ ಕವಿತೆಯ ಕಟ್ಟಾಣಿಕೆಯ ಕ್ರಮ. ಅಲ್ಲದೆ ಅಲಿಗರಿ ಕನ್ನಡ ಕಾವ್ಯತಂತ್ರಗಳಲ್ಲಿ ಒಂದು ಮುಖ್ಯವಾದ ತಂತ್ರ. ಇಲ್ಲಿ ಎರಡನ್ನೂ ಬಳಸಲಾಗಿದೆ. ಪ್ರಾರ್ಥನೆಯನ್ನು ಸಾಮಾನ್ಯವಾಗಿ ದೇವರಿಗೆ ಸಲ್ಲಿಸಲಾಗುತ್ತದೆ. ಆದರೆ ಇಲ್ಲಿ ಬದುಕನ್ನೇ ಪ್ರಾರ್ಥಿಸಲಾಗುತ್ತಿದೆ. ಹೂವಿನ ಪ್ರಾರ್ಥನೆ ಎಂದರೆ ಇದು ಹೂವಿನ ಪ್ರಾರ್ಥನೆ ಅಲ್ಲ, ಹೆಣ್ಣೊಬ್ಬಳ ಪ್ರಾರ್ಥನೆ. ಕವಿತೆಯಲ್ಲಿ ಎಲ್ಲೂ ಹೂವೆಂದರೆ ಹೆಣ್ಣು ಎಂದು ಹೇಳಿಲ್ಲ, ಆದರೆ ಓದುಗರಿಗೆ ಅದು ತಿಳಿಯುತ್ತದೆ. ಆಲಿಗಾರಿಕ್ಕಾಗಿ ಮಾತನಾಡುವ ಹಲವಾರು ಕವಿತೆಗಳು ಆಧುನಿಕ ಮಹಿಳಾ ಕಾವ್ಯದಲ್ಲಿ ಇವೆ. ಇದು ಮಹಿಳಾ ಕಾವ್ಯಕ್ಕೇ ವಿಶಿಷ್ಟವಾದ ಕ್ರಮ ಮಾತ್ರವಲ್ಲ, ಕನ್ನಡಕ್ಕೇ ಮಾತ್ರವಲ್ಲ, ಯಾವುದೇ ಕಾವ್ಯದ ಒಂದು ಅಭಿವ್ಯಕ್ತಿ ಕ್ರಮ. ಇದು ಪರಂಪರೆಯೊಂದಿಗೆ ಕಾವ್ಯವು ಅಪ್ರಜ್ಞಾಪೂರ್ವಕವಾಗಿ ಕೊಂಡಿ ಹಾಕಿಕೊಳ್ಳುವ ಒಂದು ವಿನ್ಯಾಸವೂ ಹೌದು.

ನಡುನೀರಿನಲ್ಲಿ ಕೈ ಬಿಡುವ ಪ್ರವೃತ್ತಿ ಗಂಡಸರಲ್ಲೆ ಹೆಚ್ಚು. ಅದರಲ್ಲೂ ಒಂದು ಹಂತದವರೆಗೆ ದಾಂಪತ್ಯವನ್ನು ಅನುಭವಿಸಿ ಹೆಣ್ಣಿನ ದೇಹ ಸಡಿಲವಾಗುವ ಮಧ್ಯ ವಯಸ್ಸಿಗೆ ಹೆಂಡತಿಯನ್ನು ಬಿಟ್ಟುಹೋಗುವ ಅಥವಾ ಹಡಬೆ ತಿರುಗುವ ಪ್ರವೃತ್ತಿ ಗಂಡಸರಲ್ಲೆ ಹೆಚ್ಚು. ಪ್ರೀತಿ ಮಾಡಿ ಲೈಂಗಿಕ ಸಖ್ಯ ಬೆಳೆಸಿ ಅನಂತರ ಹೆಣ್ಣನ್ನು ಸಲೀಸಾಗಿ ದೂರ ಮಾಡಿ ಹೋಗುವ ಗಂಡು ವರ್ತನೆಯನ್ನು ಆಧುನಿಕ ಮಹಿಳಾ ಕಾವ್ಯ ತೀವ್ರವಾಗಿ ವಿರೋಧಿಸುತ್ತದೆ. ಒಡಕಲು ದಾಂಪತ್ಯ, ಒಡೆದ ಸಂಬಂಧಗಳು ಪ್ರತಿಭಾ ಅವರಲ್ಲಿ ಮತ್ತೆ ಮತ್ತೆ ಕಾಣುವ, ಕಾಡುವ ಸಂಗತಿಗಳು. ವಿಶೇಷವಾಗಿ 'ಅವರು ಪುರಾವೆಗಳನ್ನು ಕೇಳುತ್ತಾರೆ' ಸಂಕಲನದಲ್ಲಿ ಕಾಡುವ ಸಂಗತಿಗಳು. (ನೋಡಿ; ಬೆಳಕು. ೪೫೫, ರಾಸಕ್ರೀಡೆ ಮತ್ತು ನಂತರ ೪೫೩) ದಾಂಪತ್ಯದಲ್ಲಿ ನಿಷ್ಠೆ ಎಂಬುದು ಒಂದು ದೊಡ್ಡ ಮೌಲ್ಯ. ಇದು ಇದ್ದರೆ ದಾಂಪತ್ಯ ಉಳಿಯುತ್ತದೆ, ಇಲ್ಲದಿದ್ದರೆ ಇಲ್ಲ. ಈ ನಿಷ್ಠೆ ಮತ್ತು ಶ್ರದ್ಧೆಗಳು ಹೆಣ್ಣಿಗೆ ಮಾತ್ರ ಇದ್ದರೆ ಸಾಲದು. ಗಂಡಿಗೂ ಸಮಪ್ರಮಾಣದಲ್ಲಿ ಇರಬೇಕು. ಹಾಗೆ ಗಂಡಿಗೂ ಇರಬೇಕಾದ ನಿಷ್ಠೆ ಮತ್ತು ಶ್ರದ್ಧೆಗಳನ್ನು ಮಹಿಳಾ ಕಾವ್ಯ ಒತ್ತಾಯಿಸುತ್ತದೆ. ಒಡಕಲು ಬಾಳಿಗಿಂತ ಹೆಣ್ಣನ್ನು ಗೌರವಿಸುವ (ದೇಹ, ಆತ್ಮಗಳೆರಡೂ ಅಭಿನ್ನವೆಂದು ಭಾವಿಸಿ ಗೌರವಿಸುವ) ನಿಷ್ಠೆಯಿಂದ ಒಡಬಾಳುವ ಕೂಡು ಬಾಳಿಗೆ ಮಹಿಳಾ ಕಾವ್ಯವು ಹಂಬಲಿಸುತ್ತದೆ. (ದೇಹ ಮತ್ತು ಆತ್ಮ, ಪ್ರ. ೪೬೪)

*ಆ ನಿನ್ನ ಪ್ರೀತಿಯಲ್ಲಿ ಅರಳಿದಂತೇ।*
*ಈ ವಿರಹದಲ್ಲಿ ಉಗ್ರಳಾಗಿದ್ದೇನೆ*
*ಹುಚ್ಚಿಯಾಗಿದ್ದೇನೆ ಸದಾ।*
*ಕೆಂಡಾಮಂಡಲ ಉರಿಯುತ್ತಿದ್ದೇನೆ* (*ನಿರೀಕ್ಷೆ. ಶ. ೪೭*)
*ನೀನಿಲ್ಲಿ ಬಾರದ ಬದುಕಿಗೆ ಎಂದೋ ಅಂತಿಮ*
*ಸಂಸ್ಕಾರ ಸಂದಿದೆ*
*ಪ್ರಾಣ ಹಣತೆಯಲಿ ಭಾವ ತೈಲವೆಂದೋ ತೀರಿಹೋಗಿದೆ*
*ಇವಳು ಏಕಾಂಗಿ ಎಂದು ಲೋಕ ಕನಿಕರಿಸುವುದು*
*ಜತೆಗೇ ಇವೆ ನಿನ್ನ ನಿರ್ದಯ ಪ್ರಹಾರಗಳ ಹಸೀ*
*ಗಾಯಗಳು*
(*ದೀನ ನೆರಳು ನಾನು ಶ. ೯*)

ಪ್ರೀತಿಸುವ ಗಂಡನು ಅಗಲಿಹೋದರೆ ಹೆಣ್ಣಿಗೆ ಆಗುವ ಆಘಾತ ಗಂಡಿಗೆ ಲೆಕ್ಕಕ್ಕೇ ಬರುವುದಿಲ್ಲ. ಅಗಲಿಕೆಯನ್ನು ಆತಂಕವಾಗಿ ಭಾವಿಸದೆ ಹೋಗುವ ಗಂಡಿನ ನಿರ್ಲಿಪ್ತತೆ, ನಿರ್ಭಾವುಕತೆಗಳನ್ನು ಆಧುನಿಕ ಮಹಿಳಾ ಕಾವ್ಯ ತರಾಟೆಗೆ ತೆಗೆದುಕೊಳ್ಳುತ್ತದೆ. ಗಂಡು, ಹೆಣ್ಣಿನ ದೇಹ ಮತ್ತು ಮನಸ್ಸುಗಳ ಮೇಲೆ ಮಾಡುವ ಹಲ್ಲೆಯನ್ನು ಮತ್ತು ಅದಕ್ಕೆ ತನಗೆ ಅಧಿಕಾರವಿದೆ ಎಂದು ಭಾವಿಸುವ ಗಂಡಸುತನಗಳನ್ನು ಈ ಕಾವ್ಯ ಪ್ರತಿರೋಧಿಸುತ್ತದೆ. ಇಂತಹ ಗಂಡಸುತನ ಹೆಂಗಸುತನಗಳ ನಿರ್ವಚನವನ್ನೂ ಈ ಕಾವ್ಯ ಪ್ರತಿರೋಧಿಸುತ್ತದೆ. ಶಶಿಕಲಾ ಅವರ 'ಶೋಧನೆ' ಬುದ್ಧನ ನಿರ್ಗಮನವನ್ನು ಕುರಿತ ಪದ್ಯ (ನೋಡಿ; ಶೋಧನೆ. ಶ. ೪೯). ಇಲ್ಲಿರುವುದು ಕೇವಲ ಬುದ್ಧನ ಸಂಗತಿಯಲ್ಲ, ಕುಟುಂಬವನ್ನು ದಾಟಿಹೋಗುವ ಗಂಡು ಪ್ರವೃತ್ತಿಯ ಕುರಿತ ಪ್ರತಿರೋಧ. ದಾಂಪತ್ಯ-ಕುಟುಂಬವೆಂಬ ಚೌಕಟ್ಟಿನಿಂದ ಪಲಾಯನ ಮಾಡುವ ಇಂತಹ ಗಂಡು ಪ್ರವೃತ್ತಿಯನ್ನು ಮಹಿಳಾ ಕಾವ್ಯ ಅಸಹನೆಯಿಂದ ಪ್ರತಿಭಟಿಸಿದೆ. ಹೆಣ್ಣು, ಸಂಸಾರ, ದಾಂಪತ್ಯಗಳನ್ನು ಗಂಡು ತಾಪತ್ರಯ-ತೊಡಕು ಎಂದೇ ಯಾಕೆ ಭಾವಿಸಬೇಕು? ಅದರಾಚೆಗಿನ ಲೋಕಸೇವೆ ಎಂಬುದು ದಾಂಪತ್ಯದ ನಿರಾಕರಣೆಯ ಮೂಲಕವೇ ಆಗಬೇಕೆ? ಊರ ದನ ಕಾಯ್ದು ದೊಡ್ಡಬೋರೇಗೌಡ ಎನ್ನಿಸಿಕೊಳ್ಳಲು ಮನೆಯ ಹೆಂಗಸರು ಮಕ್ಕಳು ನೋವು ತಿನ್ನಬೇಕೆ? ಇಂತಹ ಹಲವು ಪ್ರಶ್ನೆಗಳನ್ನು ಮಹಿಳಾ ಕಾವ್ಯ ಕೇಳುತ್ತದೆ. ಬುದ್ಧ ಅಗಲಿದ ಯಶೋಧರೆಯ ಕತೆ ಇಲ್ಲಿ ನೆಪ ಮಾತ್ರ. ಈಗ ಇಂತಹ ಅಸಂಖ್ಯ ಯಶೋಧರೆಯರಿದ್ದಾರೆ. ಆದರೆ ಬಿಟ್ಟುಹೋಗುವವರು ಯಾರೂ ಬುದ್ಧರಲ್ಲ, ಬುದ್ಧರಾಗುವವರೂ ಅಲ್ಲ.

ಯಶೋಧರೆಯದ್ದು ಒಂದು ತೆರನ ನೋವಾದರೆ ಊರ್ಮಿಳೆಯದ್ದು ಇನ್ನೊಂದು ತೆರನ ನೋವು. ೧೪ ವರ್ಷ ಸೀತೆಯೊಡನೆ ರಾಮ ವನವಾಸ ಮಾಡಿದರೆ ಲಕ್ಷ್ಮಣನೂ ಯಾಕೆ ಮಾಡಬೇಕು? ಅದೂ ಊರ್ಮಿಳೆಯನ್ನು ಒಂಟಿಯಾಗಿ ಮನೆಯಲ್ಲೆ ಬಿಟ್ಟು ಹೋಗಿ? ರಾಮನಿಗಾದರೂ ಇದು ಅಮಾನವೀಯ ಎನ್ನಿಸಲಿಲ್ಲವೇ? ಊರ್ಮಿಳೆಯೇನೋಕಾದಳು. ಲಕ್ಷ್ಮಣನೂ ಪಾಪ ಇನ್ನೊಂದು ಹೆಣ್ಣು ನೋಡಲಿಲ್ಲ, ಆದರೆ ಆ ಕಾಯುವಿಕೆಯಲ್ಲಿ ಹರೆಯವೇ ಸೋರಿಹೋಯಿತಲ್ಲ! ಅದು ಮರಳಿ ಬರುವುದೇ? ಹೀಗೆ ಹತ್ತಾರು ವರ್ಷ ಗಂಡನ ಸಖ್ಯವಿಲ್ಲದೆ ಒಂಟಿಯಾಗಿ ಕಾಯುತ್ತ 'ಧರ್ಮಪತ್ನಿ'ಯಾಗಿ ಬಾಳುವುದು ಯಾವ ಧರ್ಮ? ಊರ್ಮಿಳೆಯ ಕತೆಗಿಂತ ದಂಡಿಗೆ ಹೋದ ಮಾದೇವರಾಯನ ಹೆಂಡತಿ ಭಾಗೀರಥಿಯ ಕತೆ ಇನ್ನೂ ಕರುಣಾಜನಕ. ನಮ್ಮ ನೂರಾರು ಮಾರವಾಡಿ ಹೆಣ್ಣುಮಕ್ಕಳ ಕತೆ ಇನ್ನೂ ಘೋರ. (ನೋಡಿ; ಮಾರವಾಡಿಯ ಮಗಳು. ಶ. ೫೧) ವ್ಯಾಪಾರ ಮಾಡಲೆಂದು ವರ್ಷಾನುಗಟ್ಟಲೆ ಪರವೂರಿಗೆ ಹೋಗುತ್ತಿದ್ದ ಗಂಡಂದಿರ ಹೆಂಡತಿಯರಾಗಿ ಒಂಟಿಯಾಗಿ ಇವರೆಲ್ಲ ಕಾಯ್ದು ಕಾಯ್ದು ಕೂತಲ್ಲೇ ಹರೆಯವನ್ನು ಕಳೆದುಕೊಳ್ಳುತ್ತಾರೆ. ಇದೆಲ್ಲ ಯಾವ ಪುರುಷಾರ್ಥಕ್ಕೆ ಅಥವಾ ಸ್ತ್ರೀಯಾರ್ಥಕ್ಕೆ? ನಮ್ಮಲ್ಲಿ ಸ್ತ್ರೀಯಾರ್ಥಗಳೇ ಇಲ್ಲವಲ್ಲ! ಹೆಂಡತಿಯನ್ನು ಅಕಾರಣವಾಗಿ ಬಿಟ್ಟುಹೋಗುವುದರಿಂದ ಉಂಟಾಗುವ ಅಗಲಿಕೆ ಮತ್ತು ದಾಂಪತ್ಯದ ಒಳಗೇ ಇರುವ ವಿಪ್ರಲಂಬ, ಅಗಲಿಕೆ ಹೀಗೆ ಈ ಎರಡೂ ಬಗೆಯ ಅಗಲಿಕೆಗಳು ಇಲ್ಲಿ ತೀವ್ರ ಪ್ರತಿರೋಧಕ್ಕೆ ಗುರಿಯಾಗಿವೆ. ದೇಹ ಸಾಂಗತ್ಯ ಮತ್ತು ಆತ್ಮ ಸಾಂಗತ್ಯ ಎರಡೂ ಜೀವಪರವಾದ ತೀವ್ರ ಅಪೇಕ್ಷೆಗೆ ಇಲ್ಲಿ ಗುರಿಯಾಗಿವೆ. (ನೋಡಿ; ಆತ್ಮಸಖ. ಶ. ೧೦೦)

ಗಂಡು ಹೆಣ್ಣಿನ ನಡುವಿನ ಅಸಮಾನ ನಂಬಿಕೆ, ನಡಾವಳಿ, ಮೌಲ್ಯವ್ಯವಸ್ಥೆಯನ್ನು ಪ್ರತಿರೋಧಿಸುವುದೇ ಇವರೆಲ್ಲರ ಪುರಾಣ ಮತ್ತು ಚರಿತ್ರೆ ಪ್ರತೀಕಗಳ ಮುಖ್ಯ ಕಾಳಜಿಯಾಗಿದೆ. ಇಲ್ಲಿ ಪ್ರತಿಭಾ ಮತ್ತು ಉಷಾ ಅವರ ಕವಿತೆಗಳು ಇಂತಹ ಕಾಳಜಿಯನ್ನು ಸಂಘರ್ಷದ ಮಾರ್ಗದಲ್ಲಿ ಪ್ರಕಟಿಸಿದರೆ ಶಶಿಕಲಾ ಅವರ ಕವಿತೆಗಳು ಸಂಘರ್ಷ ಮಾರ್ಗದ ಜೊತೆಗೆ ಸಹಯೋಗ ಮಾರ್ಗದ ಮೂಲಕವೂ ಪ್ರಕಟಿಸಿವೆ. ಇಲ್ಲಿ ಧಾರಾವಾಹಿ, ಕಲ್ಲು ಮತ್ತು ಬೆಲ್ಲ, ಚಾಮುಂಡೆವ್ವಗ ಒಂದು ಮನವಿ, ಕ್ಷೇತ್ರಪಾಲ ಸಮರ್ಚಿತಾ, ಪುಟ್ಟ ಹುಡುಗ ಮತ್ತು ಪಾಷಾಣ ಮೋಹಿನಿ, ಮಹಾ ನಿರ್ಗಮನ, ನೈನಾ ಸಾಕ್ಷಿ ಇಂತಹ ಕವಿತೆಗಳೂ ಇವೆ. ಇವುಗಳ ಜೊತೆಗೆ ಹವಳ ಹಾರಿದ ಹೊತ್ತು, ಕಡಲಾಳ, ವಿನತೆ ಮತ್ತು ಗರುಡ, ರುರು ಪ್ರಮದಾ ಪ್ರೀತಿ ಇಂತಹ ಕವಿತೆಗಳೂ ಇವೆ. ಇಲ್ಲಿ ಲಕ್ಷ್ಮಣ, ರಾಮ, ಪರಶುರಾಮ, ಗೌತಮರು ಮಾತ್ರ ಅಲ್ಲ ಗರುಡರು, ರುರುಗಳೂ ಇದ್ದಾರೆ. ತಂದೆಯ ಮಾತಿಗೆ ತಾಯಿಯ ತಲೆಯನ್ನು ಕಡಿದುಹಾಕಿದ ಪರಶುರಾಮನ ನೆಲವಿದು. ಇದೇ ನೆಲದಲ್ಲಿ ತಾಯಿಯ ದಾಸ್ಯ ಕೊನೆಗಾಣಿಸಲು ಗರುಡನು ತನ್ನ ಪ್ರಾಣವನ್ನೂ ಲೆಕ್ಕಿಸದೆ ಪಾತಾಳಕ್ಕೆ (ಸ್ವರ್ಗಕ್ಕೆ) ಹಾರಿಹೋಗಿ ಅಮೃತವನ್ನು ತರುತ್ತಾನೆ. ತನ್ನ ದಾಯಾದಿಗಳ ವಶದಲ್ಲಿ ಸೆರೆಯಲ್ಲಿ ಇದ್ದ ತನ್ನ

ತಾಯಿಯನ್ನು ಬಿಡಿಸುತ್ತಾನೆ. ಹಾಗೆಯೆ ಹೆಂಡತಿಯನ್ನು ಕಲ್ಲು ಮಾಡಿದ ಇದೇ ಗೌತಮನ ನೆಲದಲ್ಲೆ ರುರುವೂ ಇದ್ದಾನೆ. ತನ್ನ ಹೆಂಡತಿ ಪ್ರಮದೆಯು ಹಾವು ಕಚ್ಚಿ ಸತ್ತಿರುವುದನ್ನು ಕಂಡು ಇವನು ಮರುಗುತ್ತಾನೆ. (ಇನ್ನೊಂದು ಹೆಣ್ಣನ್ನು ಬಯಸದೆ) ತನ್ನ ಪ್ರಮದೆಯೆ ತನಗೆ ಬೇಕೆಂದು ತನ್ನ ಅರ್ಧ ಆಯುಷ್ಯವನ್ನು ಆಕೆಗೆ ಧಾರೆಯೆರೆದು ಅವಳನ್ನು ಬದುಕಿಸಿಕೊಳ್ಳುತ್ತಾನೆ. ಹಾಗೆಯೆ ಹಾರಲು ಸಾಧ್ಯವಿಲ್ಲದ ಹವಳಗಳನ್ನು ತಮ್ಮ ಸಂಗಾತಿಯನ್ನಾಗಿ ಮಾಡಿಕೊಳ್ಳಬಲ್ಲ ಸಾಲ್ಮನ್ನುಗಳೂ ಕಡಲಾಳದಲ್ಲಿ ಇದ್ದಾವೆ. ಗರುಡ ಮತ್ತು ವಿನತೆ, ರುರು ಮತ್ತು ಪ್ರಮದಾ, ಹವಳ ಮತ್ತು ಸಾಲ್ಮನ್ ಇಂತಹ ಪಾತ್ರಪ್ರತೀಕಗಳನ್ನು ಸೃಷ್ಟಿಸುವ ಮೂಲಕ ಸ. ಉಷಾ ಅವರು ಇದೇ ನೆಲದಲ್ಲಿನ ಬೆಳಕಿನ ಕಥನಗಳನ್ನೂ ನಿರೂಪಿಸಿದ್ದಾರೆ :

*ಕೊಡಬಲ್ಲೆಯಾ ರುರು ನಿನ್ನ ಅರ್ಧಾಯುಷ್ಯ*
*ಪ್ರಮದಾ ಪ್ರೀತಿಗೆ ?*
*ತಥಾಸ್ತು ಎಂದವನು ಸುಕನ್ಯಾ ಪೌತ್ರ ।*
*ಬದುಕಲಿ ಪ್ರಮದೆ ನನ್ನ ಅರ್ಧಾಯುಷ್ಯದಲ್ಲಿ*
*ವಿಷವಿಳಿದು ನಿದ್ದೆ ತಿಳಿದೆದ್ದಳು ಪ್ರಮದೆ ।*
*ರುರುವಿಗಿಲ್ಲ ಪುಷ್ಪವೃಷ್ಟಿಯ ಪರಿವೆ*
*(ರುರು ಪ್ರಮದಾ ಪ್ರೀತಿ. ಉ. ೩-೨೧)*

ಮರುಕಥನಕ್ಕೆ ಕಥನದ ಕಡಲಾಳದಿಂದ ಯಾವುದನ್ನು ನಾವು ಎತ್ತಿಕೊಳ್ಳುತ್ತೇವೆ ಮತ್ತು ಯಾವುದನ್ನು ಅಲಕ್ಷ್ಯ ಮಾಡುತ್ತೇವೆ ಎಂಬುದು ಏಕಕಾಲಕ್ಕೆ ನಮ್ಮ ದೃಷ್ಟಿಕೋನವನ್ನೂ ಮತ್ತು ಸಾಂಸ್ಕೃತಿಕ ಒತ್ತಡಗಳನ್ನೂ ಹೇಳುತ್ತದೆ. ತಾಯಿ ರೇಣುಕೆಯ ತಲೆ ಕಡಿದ ಪರಶುರಾಮ ಮಾತ್ರ ಕಂಡು, ತಾಯಿಯ ಸೆರೆ ಬಿಡಿಸಿದ ವೈನತೇಯ ಕಾಣದೆ ಹೋದರೆ ! ಹೆಂಡತಿಯನ್ನು ಕಲ್ಲು ಮಾಡಿದ ಗೌತಮ ಮಾತ್ರ ಕಂಡು, ಪತ್ನಿಗೆ ತನ್ನ ಅರ್ಧ ಆಯುಷ್ಯವನ್ನೆ ಧಾರೆ ಎರೆದ ರುರು ಕಾಣದೆ ಹೋದರೆ! ಇದು ಖಂಡಿತಾ ದೃಷ್ಟಿದೋಷವಲ್ಲದೆ ಮತ್ತೇನು ? ಆದರೆ ನಮ್ಮ ಮಹಿಳಾ ಕಾವ್ಯದಲ್ಲಿ ಹೀಗಾಗಿಲ್ಲ. ಇವೆಲ್ಲವೂ ಕಂಡಿವೆ ಮತ್ತು ಕಥಿಸಲ್ಪಟ್ಟಿವೆ. (ಆದರೆ ಎಲ್ಲರಿಗೂ ಇವು ಕಾಣುವುದಿಲ್ಲ ಎಂಬುದೂ ನಿಜವೇ !) ಲೋಕದಲ್ಲಿ ಬರಿ ಕತ್ತಲೆ ಮಾತ್ರ ತುಂಬಿಲ್ಲ. ಪ್ರಮಾಣ ಕಡಿಮೆ ಇರಬಹುದು, ಆದರೆ ಗಂಡು ನಿರೂಪಣೆಗಳಲ್ಲೂ ಹೆಣ್ಣು ದೃಷ್ಟಿಗಳು ಇವೆ. ಅವನ್ನು ಕಾಣುವ ಕಣ್ಣು ಬೇಕಷ್ಟೆ. ಈ ದೃಷ್ಟಿಯನ್ನೂ ನಮ್ಮ ಮಹಿಳಾ ಕಾವ್ಯ ಪ್ರಕಟಿಸಿದೆ.

*ಬನ್ನಿ ಕವಿತೆಗಳೆ ಬನ್ನಿ ಈ ಭುವಿಗೆ ।*
*ತನ್ನಿ ಶುಭದ ಒಸಗೆ*
*ಈ ಜಗವ ಸುತ್ತಿ ಆ ಮುಗಿಲ ಹತ್ತಿ ।*
*ಎತ್ತಿ ಬೊಗಸೆಯಲಿ ಶಾಂತಿ ಸುರಿಯಿರಿ*
*ಏಕಾಂಗಿಯಾದವಳ ಬಳಿಗೆ ಹೋಗಿ ।*
*ಗಾಸಿಗೊಂಡವರ ಗಾಯಗಳ ನೇವರಿಸಿ*
*ಸ್ನೇಹದ ಸವಿಯನು ತಂದು ಎರೆಯಿರಿ ।*
*(ಶುಭದ ಒಸಗೆ. ಶ. ೯೬)*

– ಇಂತಹ ಕಡೆ ಆತ್ಮಸಖ್ಯ ಮತ್ತು ದುಃಖದ ಸಾಂತ್ವನ; ಗಾಯಕ್ಕೆ ಮುಲಾಮು ಮತ್ತು ಸಮಾಜಕ್ಕೆ ಶಾಂತಿ ನೀಡುವ ಕಡೆಗೆ ಮಹಿಳಾ ಕಾವ್ಯ ಚಲಿಸುತ್ತಿದೆ. ಗಂಡು ಮತ್ತು ಹೆಣ್ಣು ಎಂಬ ಬೈನರಿ ನೆಲೆಯಲ್ಲಿ ಮಾತ್ರ ವಿರಮಿಸದೆ ಲೋಕಸಂಕಥನವಾಗಿ ಇದು ಹೊರಳುತ್ತಿದೆ. ಹೀಗೆ ಮಹಿಳಾ ಕಾವ್ಯ ಕನ್ನಡ ಕಾವ್ಯ ಆಗುತ್ತಿದೆ. ಇದು ಶುಭದ ಒಸಗೆಯೆ ಅಲ್ಲವೆ ?

ಲೋಕದಲ್ಲಿ ಎಲ್ಲ ಗಂಡಸರೂ ಕೆಟ್ಟವರು ಮತ್ತು ಎಲ್ಲ ಹೆಂಗಸರೂ ಶೋಷಿತರು ಎಂದೇನೂ ನಾವು ಭಾವಿಸಬೇಕಿಲ್ಲ. ಆದಿಕಾಲದಿಂದ ಗಂಡು ಸಮುದಾಯವೆಲ್ಲವೂ ಒಂದು ನರಪಿಳ್ಳೆಯ ಅಪವಾದವೂ ಇಲ್ಲದಂತೆ ಎಲ್ಲರೂ ಹೆಣ್ಣು ಸಮುದಾಯವನ್ನು ನಿರಂತರ ಶೋಷಿಸುತ್ತ ಬಂದಿದ್ದಾರೆ. 'ಆಧುನಿಕ' ಕಾಲದಲ್ಲಿ ಇದಕ್ಕೆ ಸ್ವಲ್ಪ ಬಿಡುಗಡೆ ದೊರೆಯುತ್ತಿದೆ ಎಂದೇನೂ ನಾವು ಭಾವಿಸಬೇಕಿಲ್ಲ. ಹಾಗೊಂದು ವೇಳೆ ಅಂತಹ ಭಾವನೆ ಇಲ್ಲಿ ಕೇಳುತ್ತಿರುವ ನಿಮಗೇನಾದರೂ ಬಂದಿದ್ದರೆ ಅದಕ್ಕೆ ನನ್ನ ಓದು ಮತ್ತು ಮಾತಿನ ಸಂಯೋಜನೆಯೆ ಕಾರಣ ಎಂದು ಭಾವಿಸುತ್ತೇನೆ. ಹೆಣ್ಣುಗಳಲ್ಲೂ ಎಲ್ಲ ಥರದವರೂ ಇರುತ್ತಾರೆ. ಗಂಡುಗಳಲ್ಲೂ ಎಲ್ಲ ಥರದವರೂ ಇರುತ್ತಾರೆ. ಇದು ಎಲ್ಲ ಕಾಲಕ್ಕೂ ಹೌದು. ಆದರೆ ಹೆಣ್ಣಿನ ಮೇಲಿನ ದಬ್ಬಾಳಿಕೆ ಸುಳ್ಳಲ್ಲ. ವಾಸ್ತವ. ಅದು ಸಾಹಿತ್ಯಕ ವಾಸ್ತವ ಮಾತ್ರವಲ್ಲ ಸಾಮಾಜಿಕ ವಾಸ್ತವ ಕೂಡ. ಅಂತಹದ್ದರ ಕುರಿತ ತೀವ್ರ ಪ್ರತಿರೋಧ ಬೇರೆ ಬೇರೆ ಬಗೆಯಲ್ಲಿ ಮಹಿಳಾ ಕಾವ್ಯದಲ್ಲಿ ವ್ಯಕ್ತವಾಗಿದೆ.*

* ಎಸ್.ಡಿ.ಎಂ. ಕಾಲೇಜು, ಉಜಿರೆ ಇಲ್ಲಿ ನಡೆದ 'ಆಧುನಿಕ ಕನ್ನಡ ಕಾವ್ಯ: ಪ್ರತಿರೋಧದ ನೆಲೆಗಳು' ಎಂಬ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಂಡಿಸಿದ ಪ್ರಬಂಧ.

**ಡಾ|| ರಾಮಲಿಂಗಪ್ಪ ಟಿ. ಬೇಗೂರು**
ನಂ. ೩೫, ೬ನೇ ಬ್ಲಾಕ್, ಬನಗಿರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು - ೫೬೦ ೦೮೫

# ಮಹಿಳಾ ಚಳುವಳಿಯ ಇಂದಿನ ಸವಾಲುಗಳು

**ಹೇಮಲತಾ ಮಹಿಷಿ**

> ಕಾನೂನು ಕ್ಷೇತ್ರದಲ್ಲಿನ ತಾರತಮ್ಯ ಧೋರಣೆಯನ್ನು ತೊಡೆದು ಹಾಕುವಲ್ಲಿ ಸರ್ಕಾರ, ಶಾಸನಸಭೆಗಳು ತೋರಿಸಿದ ಉತ್ಸಾಹವನ್ನು ನೋಡಿ ಮಹಿಳೆಯರು ಸಂತಸಗೊಂಡರು, ಇನ್ನು ಮುಂದೆ ಸಮಾಜದಲ್ಲಿ ಬದಲಾವಣೆಯಾಗಿ ತಮಗೂ ನೆಮ್ಮದಿಯಿಂದ ಬದುಕಲು ಅವಕಾಶ ಸಿಗುವುದೆಂದು ಆಸೆಪಟ್ಟರು, ನಂಬಿದರು. ಆದರೆ, ಕಾನೂನುಗಳು ಕೊಡಮಾಡಿದ ಹಕ್ಕುಗಳನ್ನು ಪಡೆಯಲು ಮುಂದಡಿಯಿಟ್ಟಾಗ, ಕಾನೂನುಗಳನ್ನು ಅನುಷ್ಠಾನಗೊಳಿಸಲು ಯತ್ನಿಸಿದಾಗ, ಹೆಜ್ಜೆ-ಹೆಜ್ಜೆಗೂ ಎದುರಾದ ಅಡಚಣೆಗಳನ್ನು, ತಡೆಗೋಡೆಗಳನ್ನು ಕಂಡು ದಿಗ್ಭ್ರಾಂತರಾದರು. ಸಂಪ್ರದಾಯಸ್ಥ ಮನಸ್ಸುಗಳು ಬದಲಾವಣೆಗಳನ್ನು ಒಪ್ಪಿಕೊಳ್ಳದೆ ಎಷ್ಟು ಕ್ರೂರವಾಗಿ ವರ್ತಿಸಬಹುದು ಎಂಬುದನ್ನು ಅರ್ಥಮಾಡಿಕೊಂಡರು. ಮಹಿಳೆಯರ ಸಮಸ್ಯೆ ಇರುವುದೇ ಅವರು ಬಯಸುವ ಬದಲಾವಣೆಗಳನ್ನು ಹೇಗೆ ವ್ಯಕ್ತಿಗಳು, ಸಮಾಜ ಒಪ್ಪಿಕೊಳ್ಳುವಂತೆ ಮಾಡುವುದು ಎಂಬುದಾಗಿದೆ. ನಮ್ಮ ಸಮಾಜ, ಮೊದಲಿನಿಂದಲೂ ಸಂಪ್ರದಾಯವಾದಿ ಹಾಗೂ ಧರ್ಮಾಧೀನವಾಗಿದ್ದು ಕಾನೂನಿನ ಪಾಲನೆ ಇನ್ನೂ ಸಹಜವಾಗಿಲ್ಲ.

ನಮ್ಮ ದೇಶದಲ್ಲಿ ಸಮಾಜವನ್ನು, ವ್ಯಕ್ತಿಗಳನ್ನು, ಸಾಮಾಜಿಕ ಸಂಬಂಧಗಳನ್ನು, ಕೌಟುಂಬಿಕ ಸಂಬಂಧಗಳನ್ನು, ಹಕ್ಕುಗಳನ್ನು, ಕರ್ತವ್ಯಗಳನ್ನು, ಅಧಿಕಾರಗಳನ್ನು ನಿರ್ಧರಿಸುತ್ತಿದ್ದುದು, ನಿರ್ವಹಿಸುತ್ತಿದ್ದುದು, ನಿಯಂತ್ರಿಸುತ್ತಿದ್ದುದು ಹಿಂದೂ ಧರ್ಮಶಾಸ್ತ್ರಗಳು ಹಾಗೂ ಅವುಗಳ ವ್ಯಾಖ್ಯಾನಕಾರರು ಮತ್ತು ಬಹುಕಾಲದಿಂದ ರೂಢಿಯಲ್ಲಿರುವ ಪದ್ಧತಿಗಳು. ಮುಂದೆ, ಮುಸ್ಲಿಂ ದೊರೆಗಳ ಆಳ್ವಿಕೆಯ ಕಾಲದಲ್ಲೂ ಇದು ಬದಲಾಗಲಿಲ್ಲ. ಮುಸ್ಲಿಮರು ಶರಿಯಾ ಕಾನೂನಿಗೆ ಒಳಗಾದರೂ ಹಿಂದೂಗಳು ತಮ್ಮ ಧರ್ಮಶಾಸ್ತ್ರಗಳು ಮತ್ತು ಪದ್ಧತಿಗಳ ಹಿಡಿತಕ್ಕೇ ಒಳಗಾಗಿದ್ದರು. ಮುಂದೆ, ಈಸ್ಟ್ ಇಂಡಿಯಾ ಕಂಪನಿಯ ಆಡಳಿತಕ್ಕೆ ಒಳಗಾದ ಭಾಗಗಳಲ್ಲಿ ಹೆಚ್ಚಿನ ಬದಲಾವಣೆಯೇನೂ ಆಗಲಿಲ್ಲ. ಈಸ್ಟ್ ಇಂಡಿಯಾ ಕಂಪನಿಗೆ ಬೇಕಾಗಿದ್ದುದು ವ್ಯಾಪಾರ, ಅದರ ಲಾಭವೇ ಹೊರತು, ಜನರಿಗೆ ಒಳ್ಳೆಯ ಆಡಳಿತ ನೀಡುವ ಯಾವುದೇ ಉದ್ದೇಶ ಅದಕ್ಕಿರಲಿಲ್ಲ. ಆದರೆ, ಗೋವಾದಲ್ಲಿ ಪೋರ್ಚುಗೀಸರು, ಇತರೆಡೆ ಈಸ್ಟ್ ಇಂಡಿಯಾ ಕಂಪನಿ ಸಹಗಮನ ಪದ್ಧತಿಯ ಬಗ್ಗೆ ಗಮನಹರಿಸಿ, ಅದರ ನಿರ್ಮೂಲನೆಗೆ ಪ್ರಯತ್ನಿಸಿದ್ದರು. ಬಾಲ್ಯವಿವಾಹದ ಬಗ್ಗೆಯೂ ಗಮನ ಹರಿಸಿದ್ದರು. ಆದರೆ, 'ಸಿಪಾಯಿ ದಂಗೆ' ನಮ್ಮ ದೇಶದ ಕಾನೂನು ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆಯನ್ನು ತಂದಿತು. ಈಸ್ಟ್ ಇಂಡಿಯಾ ಕಂಪನಿಯ ಅಧಿಕಾರವನ್ನು ಬ್ರಿಟಿಷ್ ಪಾರ್ಲಿಮೆಂಟ್ ವಹಿಸಿಕೊಂಡು ಆಧುನಿಕ ನ್ಯಾಯಾಂಗ ವ್ಯವಸ್ಥೆಯನ್ನು ಭಾರತದಲ್ಲಿ ಜಾರಿಗೆ ತಂದಿತು. ಆಧುನಿಕ ಅರ್ಥದಲ್ಲಿ ಕಾನೂನುಗಳು ರೂಪುಗೊಂಡು, ನ್ಯಾಯಾಲಯಗಳ ಮೂಲಕ ನ್ಯಾಯದ ವಿತರಣೆ, ವಿಶ್ಲೇಷಣೆ, ವ್ಯಾಖ್ಯಾನ ಆರಂಭವಾದವು. ಮೆಕಾಲೆಯ ಇಂಗ್ಲಿಷ್ ಶಿಕ್ಷಣದ ಯೋಜನೆ ಈ ಬದಲಾವಣೆಗೆ ಸಹಾಯಮಾಡಿತು.

೧೮೩೭ರಲ್ಲಿ ವಿಕ್ಟೋರಿಯಾ ರಾಣಿಯ ಆಳ್ವಿಕೆ ಆರಂಭವಾದ ಕೂಡಲೇ ಮೊದಲು ಜಾರಿಗೆ ಬಂದ ಕಾನೂನುಗಳು, ಸಹಗಮನ ನಿಷೇಧ ಕಾನೂನು, ವಿಧವಾ ಪುನರ್ ವಿವಾಹ ಕಾನೂನು, ವಿವಾಹಯೋಗ್ಯ ವಯಸ್ಸನ್ನು ಹೆಚ್ಚಿಸಿದ ಕಾನೂನುಗಳು. ಹಿಂದೂ ಮಹಿಳೆಯರಿಗೆ ಬದುಕುವ ಹಕ್ಕನ್ನು ನೀಡಿದ, ಅವರ ದುಃಸ್ಥಿತಿ ಯನ್ನು ನೀಗಲು ಮಾಡಿದ ಮೊಟ್ಟಮೊದಲ ಕಾನೂನುಗಳು ಇವು. ಇಂಗ್ಲಿಷ್ ಶಿಕ್ಷಣ ಪಡೆದ, ಆಧುನಿಕ ವಿಚಾರಧಾರೆಗೆ ತೆರೆದುಕೊಂಡ ರಾಜಾರಾಮ ಮೋಹನರಾಯ್ ಮತ್ತಿತರ ಬ್ರಹ್ಮಸಮಾಜದ ಉತ್ಸಾಹಿ ಸದಸ್ಯರ



ಒತ್ತಾಯ, ಬೆಂಬಲವಿಲ್ಲದಿದ್ದಲ್ಲಿ ಈ ಕಾನೂನುಗಳನ್ನು ಬ್ರಿಟಿಷ್ ಸರ್ಕಾರ ಮಾಡುತ್ತಿರಲಿಲ್ಲ, ಅನುಷ್ಠಾನಗೊಳಿಸಲೂ ಸಾಧ್ಯವಿರಲಿಲ್ಲ. ಬಂಗಾಲದ ಈಶ್ವರಚಂದ್ರ ವಿದ್ಯಾಸಾಗರ ಅವರ ನೇತೃತ್ವದ ವಿಧವಾ ವಿವಾಹ ಚಳುವಳಿ ದೇಶದಾದ್ಯಂತ ಗಮನ ಸೆಳೆಯಿತು. ದೇಶೀಯ ಸಂಸ್ಥಾನಗಳೂ ಈ ಬದಲಾವಣೆಯ ಗಾಳಿಗೆ ಒಳಗಾದವು. ಸಂಪ್ರದಾಯವಾದಿಗಳು ಮೂಗು ಮುರಿದರೂ, ಆರ್ಯ ಸಮಾಜದ ದಯಾನಂದ ಸರಸ್ವತಿ ವೇದಪ್ರಮಾಣದ ಮೂಲಕ ಈ ಮಹಿಳಾಪರ ಚಳುವಳಿಗಳಿಗೆ ಶಾಸ್ತ್ರಾಧಾರವನ್ನು ಒದಗಿಸಿದರು. ಮಹಿಳೆಯರ ಶಿಕ್ಷಣಕ್ಕೆ ಪ್ರೋತ್ಸಾಹ ಸಿಕ್ಕಿತು. ಬಂಗಾಲದ ಸುಧಾರಣಾವಾದಿಗಳು ಮಹಿಳಾಪರ ಚಳುವಳಿಯ ಮುಂಚೂಣಿ ಯಲ್ಲಿದ್ದು, ದೇಶದ ಉಳಿದ ರಾಜ್ಯಗಳ ಮೇಲೆಯೂ ಅದರ ಪ್ರಭಾವ ಗಾಢವಾಗಿತ್ತು. ಆ ಕಾಲದ ಬಂಗಾಲಿ ಸಾಹಿತ್ಯ ಅಂದಿನ ಸಾಮಾಜಿಕ ಸಂಘರ್ಷ, ಬದಲಾವಣೆಗೆ ಹಿಡಿದ ಕನ್ನಡಿಯಾಗಿದೆ.

೧೮೬೯ ಮತ್ತು ೧೮೭೨ರಲ್ಲಿ ಕ್ರಿಶ್ಚಿಯನ್ ವಿವಾಹ ಮತ್ತು ವಿಚ್ಛೇದನಕ್ಕೆ ಸಂಬಂಧಿಸಿದ ಕಾನೂನುಗಳನ್ನು ಬಿಟ್ಟರೆ, ಮುಂದೆ ಹಲವು ವರ್ಷಗಳ ಕಾಲ ಮತ್ತಾವುದೂ ಚಟುವಟಿಕೆ ಕಂಡುಬರಲಿಲ್ಲ. ಸುಧಾರಣೆಯ ಮೊದಲ ಅಲೆ ಸುನಾಮಿಯಾಗದೆ ಹಾಗೇ ಅಡಗಿಹೋಗಿತ್ತು. ಬಹುಶಃ ಬ್ರಿಟಿಷ್ ಸರ್ಕಾರಕ್ಕೂ ಆಳಕ್ಕೆ ಕೈಹಾಕಿ ಕೆಸರನ್ನು ಕಲಕುವ ಉದ್ದೇಶವಿಲ್ಲದೆ, ತನ್ನ



ವ್ಯಾಖ್ಯಾನಗಳನ್ನು ಅರ್ಥೈಸಿ ಆ ವೇಳೆಗಾಗಲೇ ನ್ಯಾಯಾಲಯಗಳು ಹಲವಾರು ತೀರ್ಪುಗಳನ್ನು ನೀಡಿದ್ದು, ಅವುಗಳ ಕ್ರೋಢೀಕರಣಕ್ಕಾಗಿ ಮತ್ತು ಮಹಿಳೆಯರ ವಿರುದ್ಧದ ತಾರತಮ್ಯ ನೀತಿಯ ಬದಲಾವಣೆಗಾಗಿ ಬ್ರಿಟಿಷ್ ಸರ್ಕಾರ ಒಂದು ಸಮಿತಿಯನ್ನು ನೇಮಿಸಿತು. ಅದರ ವರದಿಯೂ ಸರ್ಕಾರದ ಕೈ ಸೇರಿತ್ತು. ಆದರೆ, ಆ ವೇಳೆಗೆ ಭಾರತಕ್ಕೆ ಸ್ವಾತಂತ್ರ್ಯ ಬಂದು, ಸಂವಿಧಾನ ರಚನೆಗೆ ಆದ್ಯತೆ ಕೊಟ್ಟಿದ್ದರಿಂದಾಗಿ, ಹಿಂದೂ ಕಾನೂನಿನ ಸುಧಾರಣೆಗಳು ಮತ್ತಷ್ಟು ವರ್ಷಗಳ ಕಾಲ ಕಾಯಬೇಕಾಯಿತು.

೧೯೫೦ರಲ್ಲಿ ಜಾರಿಗೆ ಬಂದ ಭಾರತ ಸಂವಿಧಾನ ಹಲವಾರು ಮೂಲಭೂತ ಹಕ್ಕುಗಳನ್ನು ಭಾರತ ನಿವಾಸಿಗಳಿಗೆ ಕೊಟ್ಟಿತ್ತು. ಅವುಗಳಲ್ಲಿ ಮುಖ್ಯವಾದುವು, ಸ್ವಾತಂತ್ರ್ಯ, ಸಮಾನತೆ, ಬದುಕುವ ಹಕ್ಕು. ಲಿಂಗ ಸಮಾನತೆಯೂ ಅವುಗಳಲ್ಲಿ ಒಂದು ಮೂಲಭೂತ ಹಕ್ಕು. ಪ್ರಗತಿಪರ ವಾದ, ಸಮಾಜವಾದಿ, ಪ್ರಜಾಪ್ರಭುತ್ವವಾದಿ ರಾಷ್ಟ್ರವೊಂದನ್ನು ಕಟ್ಟುವ ಕನಸುಕಂಡಿದ್ದ ಅಂದಿನ ರಾಷ್ಟ್ರನಾಯಕರು ಸಮಾನತೆಯ ತಳಹದಿಯ ಮೇಲೆ ನವರಾಷ್ಟ್ರದ ನಿರ್ಮಾಣ ಮಾಡುವ ಪಣತೊಟ್ಟು, ಸಂವಿಧಾನವನ್ನು ದೇಶಕ್ಕೆ ಅರ್ಪಿಸಿದರು. ಅದೇ ಆದರ್ಶದ ಹಾದಿಯಲ್ಲಿ ಹೆಜ್ಜೆ ಇಟ್ಟು ಮಹಿಳೆಯರಿಗೆ ಸಮಾನತೆ ನೀಡುವ ಹಲವಾರು ಕಾನೂನುಗಳನ್ನು ಜಾರಿಗೆ ತಂದರು. ಅಂತರ್‌ಜಾತೀಯ - ಧರ್ಮೀಯ - ರಾಷ್ಟ್ರೀಯ ವಿವಾಹಕ್ಕೆ ಮನ್ನಣೆ ಕೊಡುವ ೧೯೫೪ರ ವಿಶೇಷ ವಿವಾಹ ಅಧಿನಿಯಮ, ಹಿಂದೂ ಮಹಿಳೆಯರಿಗೆ ವಿಚ್ಛೇದನ ಕೇಳುವ ಹಕ್ಕು, ಗಂಡನಿಂದ ಪ್ರತ್ಯೇಕವಾಗಿ ವಾಸಿಸುವ ಹಕ್ಕು, ಜೀವನಾಂಶದ ಹಕ್ಕು, ಮಕ್ಕಳ ಸುಪರ್ದನ್ನು ಪಡೆಯುವ ಹಕ್ಕು ಕೊಡುವ ೧೯೫೫ರ ಹಿಂದೂ ವಿವಾಹ ಕಾನೂನು, ಕುಟುಂಬದಲ್ಲಿ ಹಿಂದೂ ಮಹಿಳೆಯರಿಗೆ ಗಂಡನ/ತಂದೆಯ ಸ್ವಯಾರ್ಜಿತ ಆಸ್ತಿಯಲ್ಲಿ ಸಮಪಾಲು ಕೊಡುವ ೧೯೫೬ರ ಹಿಂದೂ ವಾರಸುದಾರಿಕೆ ಕಾನೂನು, ಹೆಣ್ಣುಮಕ್ಕಳಿಗೂ ದತ್ತು ತೆಗೆದುಕೊಳ್ಳಲು, ಹೆಣ್ಣುಮಕ್ಕಳನ್ನೂ ದತ್ತು ತೆಗೆದುಕೊಳ್ಳಲು ಅವಕಾಶಕೊಡುವ ೧೯೫೬ರ ಹಿಂದೂ ಜೀವನಾಂಶ ಮತ್ತು ದತ್ತಕ ಕಾನೂನು ಅವುಗಳಲ್ಲಿ ಮುಖ್ಯವಾದುವು. ಮಹಿಳೆಯರ ಜೀವನಕ್ಕೆ ಮುಳ್ಳಾಗಿದ್ದ ವರದಕ್ಷಿಣೆ ಪದ್ಧತಿಯನ್ನು ಕಿತ್ತುಹಾಕುವ ಉದ್ದೇಶದಿಂದ ೧೯೬೧ರಲ್ಲಿಯೇ ವರದಕ್ಷಿಣೆ ನಿಷೇಧ ಕಾನೂನನ್ನು ಜಾರಿಗೆ ತರಲಾಯಿತು.

ಉಳಿದ ಆಡಳಿತವನ್ನು ಭದ್ರಗೊಳಿಸಿಕೊಳ್ಳಲು ಪ್ರಯತ್ನಿಸುತ್ತಿತ್ತು. ೧೮೭೨ರಲ್ಲಿ ಯಾವುದೇ ಧಾರ್ಮಿಕ ಕ್ರಿಯೆಯಿಲ್ಲದೆ, ಅಂತರ್ಜಾತೀಯ ವಿವಾಹಕ್ಕೆ ಅನುವುಮಾಡಿಕೊಡುವ ಸಿವಿಲ್ ವಿವಾಹದ ಬಗ್ಗೆ ಕಾನೂನು ಮಾಡಲಾಯಿತು.

ಒಂದು ಕಡೆ ಗಾಂಧೀಜಿಯವರ ನೇತೃತ್ವದಲ್ಲಿ ಸ್ವಾತಂತ್ರ್ಯ ಚಳುವಳಿ ಬಲಗೊಳ್ಳುತ್ತಿದ್ದರೆ, ಅದರ ಭಾಗವಾಗಿ ಮಹಿಳೆಯರ ಸ್ಥಿತಿಗತಿಗಳ ಬಗ್ಗೆಯೂ ಚಿಂತನೆ ನಡೆಯುತ್ತಾ ೧೯೩೭ರಲ್ಲಿ ಹಿಂದೂ ಮಹಿಳೆಯರಿಗೆ, ಮುಖ್ಯವಾಗಿ ವಿಧವೆಯರಿಗೆ, ಗತಿಸಿದ ಗಂಡನ ಆಸ್ತಿಯನ್ನು ಜೀವಿತಾವಧಿಯವರೆಗೆ ಅನುಭವಿಸುವ ಹಕ್ಕನ್ನು ಮೊಟ್ಟಮೊದಲನೆಯದಾಗಿ ನೀಡುವ ಕಾನೂನು ಮಾಡಲಾಯಿತು. ೧೯೪೬ರಲ್ಲಿ ಸಗೋತ್ರ-ಸಪ್ರವರ ವಿವಾಹಗಳನ್ನು ಕಾನೂನುಬದ್ಧಗೊಳಿಸಲು ಕಾನೂನು ಜಾರಿಗೆ ಬಂದಿತು. ಈ ಕಾನೂನುಗಳನ್ನು ಜಾರಿಗೆ ತರಲು ಅಂದಿನ ಶಾಸನಸಭೆಗಳಿಗೆ ಆಯ್ಕೆಯಾಗಿದ್ದ ವಿಚಾರವಂತ, ಪ್ರಗತಿಪರ ರಾಷ್ಟ್ರೀಯವಾದಿಗಳು ಕಾರಣರಾಗಿದ್ದರು. ೧೯೩೯ರಲ್ಲಿ ಅದೇ ರೀತಿ, ಮುಸ್ಲಿಂ ಮಹಿಳೆಯರಿಗೆ ಬೇರೆ-ಬೇರೆ ಕಾರಣಗಳಿಗಾಗಿ ವಿವಾಹ ವಿಚ್ಛೇದನ ಪಡೆಯಲು ಕಾನೂನನ್ನು ಮಾಡಲಾಯಿತು. ಹಿಂದೂ ಧರ್ಮಶಾಸ್ತ್ರಗಳನ್ನು, ಅವುಗಳ ಮೇಲಿನ

೧೯೭೧ರಲ್ಲಿಯೇ ಗರ್ಭಿಣಿ ಮಹಿಳೆಯರ ಆರೋಗ್ಯ, ಪ್ರಾಣರಕ್ಷಣೆಯ ದೃಷ್ಟಿಯಿಂದ, ಹುಟ್ಟುವ ಮಗುವಿನ ಆರೋಗ್ಯ ದೃಷ್ಟಿಯಿಂದ ಗರ್ಭಪಾತಕ್ಕೆ ಅವಕಾಶ ಕೊಡುವ ಕಾನೂನನ್ನೂ ಜಾರಿಗೊಳಿಸಲಾಯಿತು, ಇತ್ತೀಚಿನ ಐರ್ಲೆಂಡ್ ಪ್ರಕರಣವನ್ನು ಗಮನಿಸಿದಾಗ, ನಮ್ಮ ದೇಶ ಎಷ್ಟೋ ವರ್ಷಗಳ ಮೊದಲು ಧರ್ಮದಿಂದ ಇಂತಹ ವಿಷಯಗಳನ್ನು ಬೇರ್ಪಡಿಸಿ ಪ್ರಗತಿಪರವಾಗಿ ಕಾನೂನನ್ನು ಮಾಡಿರುವುದು ಕಂಡುಬರುತ್ತದೆ. ಏಕೆಂದರೆ, ಗರ್ಭಪಾತ ನಮ್ಮ ದೇಶದಲ್ಲೂ ಭ್ರೂಣಹತ್ಯೆ ಎನಿಸಿ ಎಲ್ಲ ಧರ್ಮಗಳಲ್ಲೂ ನಿಷೇಧಿತವಾಗಿತ್ತು. ೧೯೫೬ರಲ್ಲಿ ಮಹಿಳೆಯರನ್ನು ಲೈಂಗಿಕ ವ್ಯಾಪಾರಕ್ಕಾಗಿ ಬಳಸಿಕೊಂಡು ಜೀವನ ನಿರ್ವಹಣೆ ಮಾಡುವುದನ್ನು ನಿಷೇಧಿಸಲಾಯಿತು. ಅದೇ ರೀತಿ, ಮಹಿಳಾ ಕಾರ್ಮಿಕರಿಗೆ ಹೆರಿಗೆ ಸೌಲಭ್ಯ ನೀಡುವ ಕಾನೂನನ್ನು ೧೯೬೧ರಲ್ಲಿ, ಕಾರ್ಖಾನೆಗಳಲ್ಲಿ ಮಹಿಳೆಯರಿಗೆ ಅಪಾಯಕಾರಿ ಯಂತ್ರಗಳಿಂದ ರಕ್ಷಣೆ ಕೊಡುವ, ರಾತ್ರಿ ಪಾಳಿಯಿಂದ ವಿನಾಯತಿ ನೀಡುವ ಕಾರ್ಖಾನೆಗಳ ಕಾನೂನು ಜಾರಿಗೆ ಬಂದಿದ್ದವು.

೧೯೭೫ನೇ ಇಸವಿ ಮಹಿಳಾ ಹಕ್ಕುಗಳ ಚಳುವಳಿಯ ಇತಿಹಾಸದಲ್ಲಿ ಒಂದು ಮೈಲಿಗಲ್ಲು. ವಿಶ್ವರಾಷ್ಟ್ರ ಸಂಸ್ಥೆ ಆ ವರ್ಷವನ್ನು ಅಂತರರಾಷ್ಟ್ರೀಯ ಮಹಿಳಾ ವರ್ಷವಾಗಿ ಆಚರಿಸಲು ಕರೆಕೊಟ್ಟ ಫಲವಾಗಿ ಮಹಿಳೆಯರಲ್ಲಿ ಒಂದು ರೀತಿಯ ಸಂಚಲನ ಆರಂಭವಾಯಿತೆಂದೇ ಹೇಳಬೇಕು. ಆ ವೇಳೆಗಾಗಲೇ ಶಿಕ್ಷಣ ಪಡೆದು ಮನೆಯ ಹೊರಗೆ ಉದ್ಯೋಗ ಕೈಗೊಂಡು ಹೊರಪ್ರಪಂಚವನ್ನು ನೋಡಲಾರಂಭಿಸಿದ್ದ ಪ್ರಜ್ಞಾವಂತ ಮಹಿಳೆಯರು ತಮ್ಮ ಸ್ಥಿತಿ-ಗತಿಗಳ ಬಗ್ಗೆ ಆತ್ಮಾವಲೋಕನ ಮಾಡಿಕೊಳ್ಳತೊಡಗಿದ್ದರು, ತಮ್ಮ ವಿರುದ್ಧದ ತಾರತಮ್ಯ ಧೋರಣೆಯ ಬಗ್ಗೆ ಅತೃಪ್ತಿ ತಾಳಲಾರಂಭಿಸಿದ್ದರು. ಕುಟುಂಬದಲ್ಲಿ, ಸಮಾಜದಲ್ಲಿ ತಮಗಿದ್ದ ಅಸಮಾನತೆಯ ನೀತಿಯ ಬಗ್ಗೆ ಪ್ರಶ್ನಿಸಲಾರಂಭಿಸಿದ್ದರು. ಅಂತರರಾಷ್ಟ್ರೀಯ ವರ್ಷ, ನಂತರ ಅಂತರ ರಾಷ್ಟ್ರೀಯ ದಶಕದ ಘೋಷಣೆಯಡಿ ಅಂತಹ ಮಹಿಳೆಯರೆಲ್ಲಾ ಸಂಘಟಿತರಾಗಿ ಬಹಿರಂಗವಾಗಿ, ತಮ್ಮ ಸಮಸ್ಯೆಗಳನ್ನು ಚರ್ಚಿಸತೊಡಗಿದರು, ಅನ್ಯಾಯದ ಅಸಮಾನತೆಯ ವ್ಯವಸ್ಥೆಯನ್ನು ಪ್ರಶ್ನಿಸತೊಡಗಿದರು, ಸಮಾನತೆಯ ಸಂಸ್ಕೃತಿಗಾಗಿ ಹಂಬಲಿಸಿದರು. ಬಹಿರಂಗ ಸಭೆಗಳು, ಜಾಗೃತಿ ಸಭೆಗಳು, ಸೆಮಿನಾರ್‌ಗಳು, ಕಾನ್ಫರೆನ್ಸ್‌ಗಳು ಎಲ್ಲೆಡೆ ನಡೆದವು. ಮಹಿಳೆಯರಲ್ಲಿ ಒಂದು ಹೊಸ ಹುರುಪು, ಆತ್ಮವಿಶ್ವಾಸ, ಹೊಸಜೀವನದ ಕನಸು ಮೂಡಿತು.

ಮಹಿಳಾ ಚಳುವಳಿಯ ಕೇಂದ್ರಬಿಂದುವಾಗಿದ್ದುದು ಆರಂಭದಲ್ಲಿ, ಕೌಟುಂಬಿಕ ಜೀವನದಲ್ಲಿ ಹಾಗೂ ಸಮಾಜದಲ್ಲಿ ಮಹಿಳೆ ಎದುರಿಸುತ್ತಿದ್ದ ವರದಕ್ಷಿಣೆಯ ಹಿಂಸೆ ಹಾಗೂ ಆಕೆಯ ಮೇಲಾಗುತ್ತಿದ್ದ ಅತ್ಯಾಚಾರದ ಅವಮಾನ. ಭಾರತದಲ್ಲಿ, ಅದರಲ್ಲೂ ಉತ್ತರ ಭಾರತದಲ್ಲಿ ವರದಕ್ಷಿಣೆಯ ಹಿಂಸೆ, ಅಮಾನವೀಯವಾದ ವಧುದಹನ, ಅಸಹಾಯಕತೆಯ ಆತ್ಮಹತ್ಯೆಗಳು ವಿಕೃತರೂಪ ತಳೆದಿದ್ದವು. ಪ್ರತಿದಿನ ಪತ್ರಿಕೆಯಲ್ಲಿ ಇಂತಹ ಹಲವಾರು ಪ್ರಕರಣಗಳ ವರದಿ ಕಾಣಿಸಿಕೊಳ್ಳುತ್ತಿತ್ತು. ಆದರೂ ೧೯೬೧ರ ವರದಕ್ಷಿಣೆ ಕಾನೂನಿನಡಿ ಒಂದೇ ಒಂದು ಪ್ರಕರಣವೂ ದಾಖಲಾಗಿರಲಿಲ್ಲ, ಆ ಕಾನೂನಿಗೆ ಹಲ್ಲೇ ಇರಲಿಲ್ಲ. ವರದಕ್ಷಿಣೆಯ ಸಂಬಂಧವಾದ ಮಹಿಳೆಯರ ಸಾವು ಒಂದೇ ಸಮನೆ ವರದಿಯಾಗುತ್ತಿದ್ದಾಗಲೂ ಪೊಲೀಸರು ನಿಷ್ಕ್ರಿಯರಾಗಿದ್ದರು, ವರದಕ್ಷಿಣೆ ಸಾವನ್ನು ಭಾರತ ದಂಡ ಸಂಹಿತೆಯಡಿ ಅಪರಾಧವಾಗಿ ದಾಖಲಿಸಲು ನಿರಾಕರಿಸುತ್ತಿದ್ದರು. ಅದೊಂದು ಕೌಟುಂಬಿಕ ಸಂಬಂಧದ ವ್ಯವಹಾರವೆಂಬುದಾಗಿ ನಿರ್ಲಕ್ಷ್ಯ ತೋರುತ್ತಿದ್ದರು. ಮಹಿಳೆಯ ಮೇಲಿನ ಅತ್ಯಾಚಾರವಂತೂ ಪೊಲೀಸರ ದೃಷ್ಟಿಯಲ್ಲಿ ಅಪರಾಧವೇ ಆಗಿರಲಿಲ್ಲ, ಕುಟುಂಬದ ಮೇಲಿನ, ಗಂಡನ ಮೇಲಿನ ಸೇಡು ತೀರಿಸಿಕೊಳ್ಳಲು ಮಹಿಳೆಯ ಮೇಲಿನ ಅತ್ಯಾಚಾರ ಒಂದು ಆಯುಧವಾಗಿತ್ತು, ದೂರು ನೀಡಲು ಪೊಲೀಸ್ ಠಾಣೆಗೆ ಹೋದ ಮಹಿಳೆಯರ ಮೇಲೆ ಪೊಲೀಸರೇ ಅತ್ಯಾಚಾರ ಮಾಡಿದ್ದರು-ಮಥುರಾ ಅತ್ಯಾಚಾರ ಪ್ರಕರಣದಲ್ಲಿ! ನ್ಯಾಯಾಲಯದ ಮುಂದೆ ವಿಚಾರಣೆಗೆ ಒಳಗಾದ, ಅತ್ಯಾಚಾರಕ್ಕೆ ಒಳಗಾದ ಮಹಿಳೆಯೇ ಚಾರಿತ್ರ್ಯಹೀನಳೆನಿಸಿಕೊಂಡು ಅವಮಾನಿತಳಾಗಿ ತಲೆತಗ್ಗಿಸಬೇಕಾಗುತ್ತಿತ್ತು. ಆಪಾದಿತರು ಮೀಸೆಯ ಮರೆಯಲ್ಲಿ ನಗುತ್ತಾ ದೋಷಮುಕ್ತರಾಗಿ ಹೊರಬರುತ್ತಿದ್ದರು. ಸಹಜವಾಗಿಯೇ, ಈ ಎರಡು ವಿಷಯಗಳು ಮಹಿಳೆಯರನ್ನು ಕೆರಳಿಸಿದವು, ಕಾನೂನಿನ ಬದಲಾವಣೆಗೆ ಮಹಿಳಾ ಸಂಘಟನೆಗಳು ಒತ್ತಾಯಿಸಿದವು, ಪೊಲೀಸರ, ನ್ಯಾಯಾಲಯಗಳ ಧೋರಣೆಗಳ ಬಗ್ಗೆ ರೋಷವನ್ನು ವ್ಯಕ್ತಪಡಿಸಿದವು. ದೇಶದಾದ್ಯಂತ ಮಹಿಳೆಯರ ಪ್ರತಿಭಟನೆ ಹೆಚ್ಚಿದಾಗ ಸರ್ಕಾರ ಸಂಬಂಧಿಸಿದ ಕಾನೂನುಗಳಲ್ಲಿ ಬದಲಾವಣೆ ತಂದು ವರದಕ್ಷಿಣೆ ಹಿಂಸೆಗೆ-ಸಾವಿಗೆ ಕಠಿಣ ಶಿಕ್ಷೆ ವಿಧಿಸಿತು, ಆಪಾದಿತರನ್ನು ತಮ್ಮ ವಶಕ್ಕೆ ತೆಗೆದುಕೊಂಡು ತನಿಖೆ ನಡೆಸಲು ಪೊಲೀಸರಿಗೆ ಹೆಚ್ಚಿನ ಅಧಿಕಾರವನ್ನು ನೀಡಿತು. ಅತ್ಯಾಚಾರಿಗಳಿಗೂ ಹೆಚ್ಚಿನ ಶಿಕ್ಷೆ ಕೊಡುವ ತಿದ್ದುಪಡಿ ತಂದು, ವಿಚಾರಣೆಯಲ್ಲಿಯೂ ಮಹಿಳಾಪರ ಪ್ರಕ್ರಿಯೆಗಳನ್ನು ಜಾರಿಗೆ ತರಲಾಯಿತು.

ಮಹಿಳಾ ವಿಷಯಗಳನ್ನು ಅಧ್ಯಯನ ಮಾಡಲು ವಿಶ್ವವಿದ್ಯಾಲಯಗಳಲ್ಲಿ ಪ್ರತ್ಯೇಕ ವಿಭಾಗಗಳೇ ಆರಂಭಗೊಂಡವು, ಮಹಿಳಾ ವಿಶ್ವವಿದ್ಯಾಲಯಗಳೂ ಸ್ಥಾಪನೆಗೊಂಡವು.




## ಆ ಕುಂಕುಮದ ಹೆಣ್ಣು ನನ್ನ ಇನ್ನೊಬ್ಬ ತಾಯಿ

ಆಕೆಯೂ ನನ್ನ ತಾಯಿ
ಬಿಕ್ಕಳಿಸುತ್ತಿದ್ದಾಳೆ ಈ ರಾತ್ರಿ
ಹಣೆ ಮೇಲೆ ಕಾಸಿನಗಲ ಕುಂಕುಮದ ಹೆಣ್ಣು
ಅಲ್ಲಾನ ಮುಂದೆ ಮಂಡಿಯೂರಿ ಕುಳಿತವನನ್ನು
ಎದೆಗೊತ್ತಿಕೊಂಡು ಮತಸೀಮೆಗಳ ಮುರಿದು
ಹೊಸ ಲೋಕವ ಹೆತ್ತವಳು

ಸಂಕರಸೂರ್ಯ ಚಂದ್ರರಿಗೆ ಎದೆಹಾಲುಣಿಸಿ
ಆಡಲು ಬಿಟ್ಟ ಮರುಘಳಿಗೆ
ಸಂತೆಯಲ್ಲಿ ದೇಶಭಕ್ತಿಯ ಘೋಷಗಳಿಗೆ ನೆತ್ತರ ಅಭ್ಯಂಜನಗಳು
ಗಾಯಗೊಂಡ ಅಜಾನಿನ ದನಿಯಲ್ಲಿ ಅಪಭ್ರಂಶಗಳು
ಪ್ರಾಣವನ್ನೇ ಅಂಗೈಗೆ ತಂದುಕೊಂಡ ತಾಯಿ
ನೆಲದ ಪದರು ಪದರುಗಳಲ್ಲಿ ಗಾಳಿಯ ಅಲೆಅಲೆಗಳಲಿ
ನೀರ ತೆರೆತೆರೆಗಳಲಿ ಹುಡುಕುತ್ತಿದ್ದಾಳೆ
ಎಲ್ಲಿ ನನ್ನ ಕರುಳ ಕನಸುಗಳು

ಆಡಲು ಬಂದು ಹುಡುಕ ಹಚ್ಚಿದ ಕೂಸುಗಳೇ
ನನ್ನ ಇನ್ನೊಬ್ಬ ತಾಯ ತೆಕ್ಕೆಗೆ ಕೂಡಿಸಿದವು
ಭಾರತದ ನಕಾಶೆ ಬರೆವವರಿಗೆ ಆಮಂತ್ರಣ ನೀಡುತ್ತಿದ್ದೇನೆ
ಬನ್ನಿ, ಈ ಬಿಕ್ಕುವ ಕಣ್ಣುಗಳಿಗಿಂತ ಹಿಮಾಲಯ ಪವಿತ್ರವೇ
ಯಾವ ಬಣ್ಣಗಳಿಂದ ಸೀಮಾರೇಖೆಗಳ ಚಿತ್ರಿಸುವಿರಿ
ತಾಯಿಯ, ತಾಯಿನಾಡಿನ, ತಾಯಭಾಷೆಯ....

**ಬಿ. ಪೀರ್‌ಬಾಷ**
ಜೆ. ಪಿ. ನಗರ, ಕರಟಗಿ ಪೋಸ್ಟ್, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ - ೫೮೩ ೨೨೯

ಕರ್ನಾಟಕದ ಬಿಜಾಪುರದಲ್ಲಿರುವ ಮಹಿಳಾ ವಿಶ್ವವಿದ್ಯಾಲಯವೂ ಅವುಗಳಲ್ಲಿ ಒಂದು. ಮಹಿಳಾ ವಿಷಯಗಳ ವಿಶ್ಲೇಷಣೆ, ಅಧ್ಯಯನಕ್ಕೆ ಸಂಬಂಧಿಸಿದಂತೆ ಹಲವಾರು ಪುಸ್ತಕಗಳು ಪ್ರಕಟಗೊಂಡವು. ದೇಶದ ಅರ್ಧದಷ್ಟು ಜನಸಂಖ್ಯೆ/ಮತದಾರರು ಮಹಿಳೆಯರಾಗಿರುವುದನ್ನು ಮನಗಂಡ ಸರ್ಕಾರ, ರಾಜಕೀಯ ಪಕ್ಷಗಳು ಮಹಿಳಾ ವಿಷಯಗಳಿಗೂ ತಮ್ಮ ಪ್ರಣಾಳಿಕೆಗಳಲ್ಲಿ, ಕಾರ್ಯಕ್ರಮ/ಯೋಜನೆಗಳಲ್ಲಿ ಅವಕಾಶ ಕಲ್ಪಿಸಿಕೊಟ್ಟವು, ಮಹಿಳಾ ವಿಷಯಗಳಿಗೆ ಮಹತ್ವ ನೀಡಿದವು. ೧೯೯೪ರಲ್ಲಿ ಸ್ತ್ರೀ ಭ್ರೂಣ ಹತ್ಯೆಯನ್ನು ನಿಷೇಧಿಸುವ ಕಾನೂನು ಜಾರಿಗೆ ಬಂದಿತು. ತಮಿಳುನಾಡು ಮತ್ತು ಕರ್ನಾಟಕ ಸರ್ಕಾರಗಳು ಸರ್ಕಾರಿ ನೌಕರಿಗಳಲ್ಲಿ ಮಹಿಳೆಯರಿಗೆ ೩೦% ಮೀಸಲಾತಿ ನೀಡಿದವು. ಕರ್ನಾಟಕ ಸರ್ಕಾರ ಪಂಚಾಯತಿಯಲ್ಲಿ ೩೦% ಮಹಿಳೆಯರಿಗೆ ಸ್ಥಾನ ನೀಡಿತು. ಮುಂದೆ, ರಾಜೀವ್ ಗಾಂಧಿ ಸರ್ಕಾರ ಸಂವಿಧಾನದಲ್ಲಿಯೇ ತಿದ್ದುಪಡಿ ತಂದು ಮಹಿಳೆಯರಿಗೆ ದೇಶದಾದ್ಯಂತ ಪಂಚಾಯತಿಗಳಲ್ಲಿ ೩೩% ರಾಜಕೀಯ ಮೀಸಲಾತಿ ಕಲ್ಪಿಸಿತು. ವಿವಾಹಕ್ಕೆ ಸಂಬಂಧಿಸಿದ ಕಾನೂನುಗಳಲ್ಲಿ ತಿದ್ದುಮಾಡಿ ಮಾಡಿತು. ಮಹಿಳೆಯರ ಒತ್ತಾಯದ ಫಲವಾಗಿ ೨೦೦೫ರಲ್ಲಿ ಕೌಟುಂಬಿಕ ದೌರ್ಜನ್ಯದಿಂದ ಮಹಿಳೆಯರನ್ನು ರಕ್ಷಿಸುವ ಕಾನೂನನ್ನು ಜಾರಿಗೆ ತಂದಿತು. ಹಿಂದೂ ಮಹಿಳೆಯರಿಗೆ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲಿನ ಹಕ್ಕು ಕೊಡುವ ಕಾನೂನಿನ ತಿದ್ದುಪಡಿ ಅದೇ ವರ್ಷದಲ್ಲಿ ಆಯಿತು. ಉಚ್ಚ-ಸರ್ವೋಚ್ಚ ನ್ಯಾಯಾಲಯಗಳೂ ಮಹಿಳಾಪರ ಕಾಳಜಿ ತೋರಿ ತೀರ್ಪನ್ನು ನೀಡಿದವು. ಮುಖ್ಯವಾಗಿ, ಉದ್ಯೋಗಸ್ಥ ಮಹಿಳೆಯರಿಗೆ ಕೆಲಸ ಮಾಡುವ ಜಾಗದಲ್ಲಿ ಲೈಂಗಿಕ ಹಿಂಸೆಯಿಂದ ರಕ್ಷಣೆ ಕೊಡುವ ಕಾನೂನು ಇಲ್ಲದಿರುವುದನ್ನು ಮನಗಂಡ ಸರ್ವೋಚ್ಚ ನ್ಯಾಯಾಲಯ ವಿಶಾಖಾ ಮೊಕದ್ದಮೆಯಲ್ಲಿ ಆ ಬಗ್ಗೆ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸಿ, ಸರ್ಕಾರ ಆ ಬಗ್ಗೆ ಕಾನೂನು ಮಾಡುವವರೆಗೆ ಅದೇ ಕಾನೂನಾಗಿರತಕ್ಕದ್ದೆಂದು ಘೋಷಿಸಿತು. ಮಹಿಳಾ ಸಮಸ್ಯೆಗಳ ಬಗ್ಗೆ ಸಾರ್ವಜನಿಕ ಹಿತಾಸಕ್ತಿಯ ಮೊಕದ್ದಮೆಗಳಲ್ಲಿ ಮಹತ್ವದ ತೀರ್ಪುಗಳನ್ನು ನೀಡಿತು.

ಆದರೆ, ರಾಜಾರಾಮ ಮೋಹನ್‌ರಾಯ್‌ರಿಂದ, ಗಾಂಧೀಜಿ-ನೆಹರೂ-ಅಂಬೇಡ್ಕರ್‌ರಿಂದ, ೧೯೭೫ರ ಅಂತರರಾಷ್ಟ್ರೀಯ ಮಹಿಳಾ ವರ್ಷದಿಂದ ಬಹುಕಾಲ ಮುಂದೆ ಸಾಗಿ ಬಂದಿರುವ ಮಹಿಳೆಯರು, ಈಗ ಒಮ್ಮೆ ನಿಂತು, ಸಾಗಿಬಂದಿರುವ ಹಾದಿಯತ್ತ ದೃಷ್ಟಿಹಾಯಿಸುವ, ತಾವು ಏನು ಸಾಧಿಸಿದೆವು, ಏನು ಕಳೆದುಕೊಂಡೆವು, ಏನು ಪಡೆದೆವು ಎಂಬುದರ ಬಗ್ಗೆ ವಿಶ್ಲೇಷಣೆ ಮಾಡುವ ಸಂದರ್ಭ ಇದಾಗಿದೆ. ನಾವು ಪಡೆದುಕೊಂಡಿದ್ದೇವೆಂದುಕೊಂಡಿದ್ದು ನೈಜವಾದುದೇ ಅಥವಾ ಕನ್ನಡಿಯೊಳಗಿನ ಗಂಟೇ, ಅದು ಕೇವಲ ಒಂದು ಭ್ರಮೆಯೇ ಎಂಬುದನ್ನು ಕಂಡುಕೊಳ್ಳಬೇಕಾಗಿದೆ. ಕಾನೂನಿನಿಂದ ನಮ್ಮ ಸಮಸ್ಯೆಗಳ ನಿವಾರಣೆ ಆಗಿದೆಯೇ, ಸಮಾಜದಲ್ಲಿ ನಿರೀಕ್ಷಿಸಿದ ಬದಲಾವಣೆ ಆಗಿದೆಯೇ, ಪುರುಷಶಾಹಿ ಧೋರಣೆಗಳು ಬದಲಾಗಿವೆಯೇ? ಸಂವಿಧಾನ ಆಶ್ವಾಸನೆ ಕೊಟ್ಟಿರುವ ಸಮಾನತೆಯ ಸಂಸ್ಕೃತಿ ದೇಶದಲ್ಲಿ ಮೊಳಕೆ ಒಡೆದಿದೆಯೇ? ಸ್ವಾತಂತ್ರ್ಯದ ಕನಸು ನನಸಾಗಿದೆಯೇ? ಉತ್ತರ ಸುಲಭವಲ್ಲ. ಪುರುಷ ಪ್ರಾಧಾನ್ಯತೆಯ ಪ್ರಪಂಚದಲ್ಲಿ, ಸಾಂಪ್ರದಾಯಿಕ ಸಾಮಾಜಿಕ ಚೌಕಟ್ಟಿನಲ್ಲಿ, ರಾಜಕೀಯದ ಒಳಸುಳಿಗಳಲ್ಲಿ ಮಹಿಳೆಯರ ಪ್ರಶ್ನೆಗಳು ಸಿಲುಕಿಕೊಂಡು, ಅದರಿಂದ ಬಿಡಿಸಿಕೊಂಡು ಹೊರಬರಲು ಕಷ್ಟಪಡುತ್ತಿವೆ, ಪ್ರಯತ್ನಿಸಿದಷ್ಟೂ ಜಟಿಲಗೊಳ್ಳುತ್ತಿವೆ. ಇಂದು ಮಹಿಳೆಯರ ಪ್ರಶ್ನೆ ಕೇವಲ ಮಹಿಳೆಯರದಾಗಿ ಉಳಿದಿಲ್ಲ, ರಾಜಕೀಯದ ದಾಳವಾಗುತ್ತಿದೆ, ಧರ್ಮ-ಸಂಸ್ಕೃತಿ-ಸಂಪ್ರದಾಯ- ರಾಜಕೀಯ ಮಹಿಳೆಯನ್ನು ಕೇವಲ ಮಹಿಳೆಯಾಗಿ, ಮಾನವಳಾಗಿ ಉಳಿಯಲು ಬಿಡುತ್ತಿಲ್ಲ.

ಕಾನೂನು ಕ್ಷೇತ್ರದಲ್ಲಿನ ತಾರತಮ್ಯ ಧೋರಣೆಯನ್ನು ತೊಡೆದುಹಾಕುವಲ್ಲಿ ಸರ್ಕಾರ, ಶಾಸನಸಭೆಗಳು ತೋರಿಸಿದ ಉತ್ಸಾಹವನ್ನು ನೋಡಿ ಮಹಿಳೆಯರು ಸಂತಸಗೊಂಡರು, ಇನ್ನು ಮುಂದೆ ಸಮಾಜದಲ್ಲಿ ಬದಲಾವಣೆಯಾಗಿ ತಮಗೂ ನೆಮ್ಮದಿಯಿಂದ ಬದುಕಲು ಅವಕಾಶ ಸಿಗುವುದೆಂದು ಆಸೆಪಟ್ಟರು, ನಂಬಿದರು. ಆದರೆ, ಕಾನೂನುಗಳು ಕೊಡಮಾಡಿದ ಹಕ್ಕುಗಳನ್ನು ಪಡೆಯಲು ಮುಂದಡಿಯಿಟ್ಟಾಗ, ಕಾನೂನುಗಳನ್ನು ಅನುಷ್ಠಾನಗೊಳಿಸಲು ಯತ್ನಿಸಿದಾಗ, ಹೆಜ್ಜೆ-ಹೆಜ್ಜೆಗೂ ಎದುರಾದ ಅಡಚಣೆಗಳನ್ನು, ತಡೆಗೋಡೆಗಳನ್ನು ಕಂಡು ದಿಗ್ಭ್ರಾಂತರಾದರು. ಸಂಪ್ರದಾಯಸ್ಥ ಮನಸ್ಸುಗಳು ಬದಲಾವಣೆಗಳನ್ನು ಒಪ್ಪಿಕೊಳ್ಳದೆ ಎಷ್ಟು ಕ್ರೂರವಾಗಿ ವರ್ತಿಸಬಹುದು ಎಂಬುದನ್ನು ಅರ್ಥಮಾಡಿಕೊಂಡರು. ಮಹಿಳೆಯರ ಸಮಸ್ಯೆ ಇರುವುದೇ ಅವರು ಬಯಸುವ ಬದಲಾವಣೆಗಳನ್ನು ಹೇಗೆ ವ್ಯಕ್ತಿಗಳು, ಸಮಾಜ ಒಪ್ಪಿಕೊಳ್ಳುವಂತೆ ಮಾಡುವುದು ಎಂಬುದಾಗಿದೆ. ನಮ್ಮ ಸಮಾಜ, ಮೊದಲಿನಿಂದಲೂ ಸಂಪ್ರದಾಯವಾದಿ ಹಾಗೂ

ಧರ್ಮಾಧೀನವಾಗಿದ್ದು ಕಾನೂನಿನ ಪಾಲನೆ ಇನ್ನೂ ಸಹಜವಾಗಿಲ್ಲ. ಕಾನೂನಿನ ಬದಲಾವಣೆ ಮಾಡುವಾಗ ದಿವ್ಯ ನಿರ್ಲಕ್ಷ್ಯದಿಂದಿದ್ದ ಸಮಾಜ ಅದನ್ನು ಅನುಷ್ಠಾನಗೊಳಿಸಲು ಮಹಿಳೆಯರು ಪ್ರಯತ್ನಿಸಿದಾಗ ಪ್ರತಿರೋಧ ಒಡ್ಡುತ್ತಿದೆ. ಹಿಂದೂ ಮಹಿಳೆಗೆ ಆಸ್ತಿ ಹಕ್ಕು ದೊರೆತರೂ, ಅದನ್ನು ಪಡೆಯಲು ಪ್ರಯತ್ನಿಸಿದಾಗ ಕುಟುಂಬದ ಪುರುಷ ಸದಸ್ಯರ ಪ್ರತಿರೋಧ ಎದುರಾಗುತ್ತಿದೆ. ಎಷ್ಟೋ ಬಾರಿ ಸಂಪ್ರದಾಯವಾದಿ ಮಹಿಳೆಯರೂ ಈ ಪುರುಷ ಸದಸ್ಯರನ್ನು ಬೆಂಬಲಿಸುತ್ತಾರೆ. ವಿಧವೆಯರ, ವಿಚ್ಛೇದಿತ ಮಹಿಳೆಯರ, ಅವಿವಾಹಿತ ಮಹಿಳೆಯರ ಸ್ಥಿತಿ ಇನ್ನೂ ಅದೇ ರೀತಿಯಲ್ಲಿದೆ. ಸಗೋತ್ರ ವಿವಾಹ, ಅಂತರ್ಜಾತೀಯಾ- ಅಂತರ್ಧರ್ಮೀಯ ವಿವಾಹ ಇನ್ನೂ ಸಾಮಾಜಿಕವಾಗಿ ನಿಷೇಧಿತವಾಗಿದೆ. ಗಂಡುಮಕ್ಕಳ ಬಗ್ಗೆಯ ವ್ಯಾಮೋಹ ಯಥಾಪೂರ್ವವಾಗಿದ್ದು ಸ್ತ್ರೀ ಭ್ರೂಣಹತ್ಯೆ ನಿರಂತರವಾಗಿ ನಡೆದಿದೆ. ವರದಕ್ಷಿಣೆಯ ಭೂತನೃತ್ಯ ಮುಂದುವರಿದಿದೆ. ಮಹಿಳೆಯರ ಮೇಲಿನ ಅತ್ಯಾಚಾರದ ಪ್ರಕರಣಗಳು ಹೆಚ್ಚುತ್ತಿವೆ. ಪಂಚಾಯತಿಯಲ್ಲಿ ಮಹಿಳಾ ಸದಸ್ಯರು ಕಾನೂನುಬದ್ಧ ಪ್ರಮಾಣದಲ್ಲಿದ್ದರೂ, ನಿಜವಾದ ಅಧಿಕಾರ ಚಲಾಯಿಸುವವರು ತೆರೆಮರೆಯಲ್ಲಿರುವ ಅವರ ಗಂಡಂದಿರೇ. ಸ್ತ್ರೀ ಶಿಕ್ಷಣಕ್ಕೆ, ಉದ್ಯೋಗಕ್ಕೆ ಮಹತ್ವ ದೊರೆತಿದ್ದರೂ, ಕೌಟುಂಬಿಕ ದೌರ್ಜನ್ಯವೇನೂ ನಿಂತಿಲ್ಲ, ಪುರುಷ ಪ್ರಧಾನ ನಂಬಿಕೆಗಳು ಇನ್ನೂ ಬಲವಾಗಿವೆ. ಮಹಿಳೆ ಎಷ್ಟು ಸಾಧನೆ ಮಾಡಿದರೂ, ಅವಳು ಎರಡನೇ ದರ್ಜೆಯ ಮಾನವಳು, ಪುರುಷನೇ ಶ್ರೇಷ್ಠ! ಅವನು ಕುಡುಕನಿರಲಿ, ನಿರುದ್ಯೋಗಿಯಾಗಿರಲಿ, ಬೇಜವಾಬ್ದಾರಿಯುತನಾಗಿರಲಿ, ಹೆಂಡತಿ-ಮಕ್ಕಳನ್ನು ನೋಡಿಕೊಳ್ಳುವ ಯೋಗ್ಯತೆ ಇಲ್ಲದ ಅಯೋಗ್ಯನಿರಲಿ ಅವನೇ ಮನೆಯ ಯಜಮಾನ, ಹೆಂಡತಿಯಿಂದಲೇ ಮನೆ ನಡೆಯುತ್ತಿದ್ದಾಗಲೂ !

ಇದು ವ್ಯಕ್ತಿಗತ-ಸಾಮಾಜಿಕ ನೆಲೆಯಲ್ಲಿನ ಮೂಲಭೂತ ಸಮಸ್ಯೆಯಾಗಿದ್ದರೆ, ಇದೇ ಪುರುಷ ಪ್ರಾಧಾನ್ಯದ ಮೌಲ್ಯಗಳನ್ನು ಪ್ರತಿನಿಧಿಸುವ ಜಾತಿಯ, ಧಾರ್ಮಿಕ ಸಂಘಟನೆಗಳು ಮಹಿಳೆಯರಿಗೆ ಹೆಚ್ಚಿನ ತೊಡಕುಗಳನ್ನು ಸೃಷ್ಟಿಸುತ್ತಿವೆ. ಜಾಟರ ಖಾಪ್ ಪಂಚಾಯತಿ ಹುಡುಗಿಯರಿಗೆ ೧೬ ವರ್ಷಕ್ಕೇ ಮದುವೆ ಮಾಡಲು ಅವಕಾಶ ಕೊಡುವಂತೆ ಕಾನೂನು ತಿದ್ದುಪಡಿ ಮಾಡಲು ಕೇಳುತ್ತಿದೆ. ಅದಕ್ಕೆ ಅವರು ಕೊಡುವ ಕಾರಣ, ಹುಡುಗಿಯರು ಪ್ರೀತಿ - ಪ್ರೇಮದಲ್ಲಿ ಸಿಲುಕಿ ಬೇರೆ ಜಾತಿಯ ಹುಡುಗರೊಡನೆ ಓಡಿಹೋಗಿ ಮದುವೆಯಾಗುತ್ತಾರೆ; ಹಾಗಾಗಿ ಅವರು ಪ್ರೇಮಪಾಶದಲ್ಲಿ ಸಿಲುಕುವ ಮೊದಲೇ ಜಾತಿಯ ಪಾವಿತ್ರ್ಯತೆಯನ್ನು ಉಳಿಸಿಕೊಳ್ಳಲು ಹುಡುಗಿಯರಿಗೆ ಮದುವೆ ಮಾಡಿಬಿಡಬೇಕು; ಅವರು ಶಿಕ್ಷಣ ಪಡೆಯದಿದ್ದರೂ ಪರವಾಗಿಲ್ಲ; ವಿವಾಹಕ್ಕೆ ಅವರು ದೈಹಿಕವಾಗಿ-ಮಾನಸಿಕವಾಗಿ ಸಿದ್ಧರಾಗಿಲ್ಲದಿದ್ದರೂ ಪರವಾಗಿಲ್ಲ, ಜಾತಿಯ-ಕುಟುಂಬದ ಮರ್ಯಾದೆ ಉಳಿಯಬೇಕು. ಅದೇ ಕಾರಣಕ್ಕೆ ಹುಡುಗಿಯರು ಮೊಬೈಲ್ ಉಪಯೋಗ ಮಾಡಬಾರದು. ಖಾಪ್ ಪಂಚಾಯತಿಯ ಇನ್ನೊಂದು ಬೇಡಿಕೆ, ಸಗೋತ್ರ ವಿವಾಹ ಕಾನೂನುಬದ್ಧಗೊಳಿಸಿರುವುದನ್ನು ತೆಗೆದುಹಾಕಬೇಕು. ಇದಷ್ಟೇ ಆಗಿದ್ದರೆ ಉತ್ತರಿಸಬಹುದಿತ್ತು, ಆದರೆ, ಅದು ಮತ್ತಷ್ಟು ಕ್ರೂರಗೊಂಡು 'ಮರ್ಯಾದಾ ಹತ್ಯೆ'ಯ ರೂಪ ತಾಳಿದೆ. ಜಾತಿಯ ಹೆಸರಿನಲ್ಲಿ, ಕುಟುಂಬದ ಮರ್ಯಾದೆಯ ಹೆಸರಿನಲ್ಲಿ, ಪಂಚಾಯತಿಯ ಮಾತು ಮೀರುವ ಯುವ ಪ್ರೇಮಿಗಳ ಹತ್ಯೆ ನಡೆಯುತ್ತಿದೆ, ಇದಕ್ಕೆ ಅಲ್ಲಿನ ಸಮುದಾಯಗಳ ಬೆಂಬಲವಿದೆ, ಅಷ್ಟೇ ಅಲ್ಲ, ಪೊಲೀಸರೂ ಅವರ ಮೇಲೆ ಕ್ರಮ ಕೈಗೊಳ್ಳುತ್ತಿಲ್ಲ. ಅದು ಕೊಲೆಯಲ್ಲದೆ ಬೇರೇನೂ ಅಲ್ಲ, ಭಾರತೀಯ ದಂಡಸಂಹಿತೆಯ 'ಕೊಲೆ' ಪ್ರಕರಣದಡಿ ಅವರ ಮೇಲೆ ಕ್ರಮ ಜರುಗಿಸಬೇಕು. ಆದರೆ, ಪೊಲೀಸರಿಗೂ ಇದು ಕುಟುಂಬದ, ಜಾತಿಯ ಒಳಗಿನ ವಿಷಯವಾಗುತ್ತದೆ, ಕಾನೂನಿನ ವಿಷಯವಲ್ಲ. ಆಘಾತಕಾರಿಯಾದ ಹೆಚ್ಚಿನ ವಿಷಯವೆಂದರೆ, ರಾಜಕೀಯ ಪಕ್ಷಗಳೂ, ಸರ್ಕಾರ ಈ ಖಾಪ್ ಪಂಚಾಯತಿಯ ಕಾರ್ಯವೈಖರಿಯ ಬಗ್ಗೆ ಪ್ರತಿಭಟನೆ ವ್ಯಕ್ತಪಡಿಸುತ್ತಿಲ್ಲ, ಮೌನಸಮ್ಮತಿ ಸೂಚಿಸುತ್ತಿವೆ. ಚುನಾವಣೆಯಲ್ಲಿ ಜಾಟರ ಮತಗಳ ಲೆಕ್ಕಾಚಾರ ಈ ಮೌನದ ಹಿಂದಿದೆ. ರಾಜಕೀಯ ಲೆಕ್ಕಾಚಾರಗಳೇ ಇನ್ನು ಮುಂದೆ ಮಹಿಳೆಯರನ್ನು ನಿಯಂತ್ರಿಸುವುದಾದರೆ ತಾಲಿಬಾನ್ ರೀತಿಯ ಆಡಳಿತ ನಮ್ಮ ದೇಶದಲ್ಲಿಯೂ ಮುಂದೆ ಜಾರಿಗೆ ಬರಬಹುದೆಂಬ ಮಹಿಳೆಯರ ಭೀತಿ ನಿಜವಾಗಬಹುದು. ಮುಸ್ಲಿಂ ಮಹಿಳೆಯರೂ ಈಗಾಗಲೇ ಇಂತಹ ಹಲವಾರು ನಿಯಂತ್ರಣಗಳಿಗೆ ಧರ್ಮದ ಹೆಸರಿನಲ್ಲಿ ಒಳಗಾಗಿದ್ದಾರೆ.

ಮತ್ತಷ್ಟು ಆತಂಕಕಾರಿಯಾದ ಬೆಳವಣಿಗೆ ಕರ್ನಾಟಕದ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಕಂಡುಬಂದಿದೆ. ಹಿಂದೂ ಧರ್ಮ, ಸಂಸ್ಕೃತಿ ರಕ್ಷಣೆಯ ಹೊಣೆ ಹೊತ್ತಿರುವುದಾಗಿ ಭಾವಿಸಿರುವ ಸಂಘಟನೆಗಳು ಯಾವುದೇ ರೀತಿಯ ಭಯವಿಲ್ಲದೆ ಕಾನೂನನ್ನು ತಮ್ಮ ಕೈಗೆತ್ತಿಕೊಂಡು ಮಹಿಳೆಯರ ಜೀವನವನ್ನು ನಿಯಂತ್ರಿಸಲು ಹೊರಟಿವೆ. ಮುಸ್ಲಿಂ ಹುಡುಗರ ಜೊತೆ ಮಾತನಾಡುವ, ಓಡಾಡುವ, ಸ್ನೇಹದಿಂದಿರುವ ಹಿಂದೂ ಹುಡುಗಿಯರ ಮೇಲೆ ಆಕ್ರಮಣ ಮಾಡಲಾಗುತ್ತಿದೆ. ಪಬ್-ರೆಸಾರ್ಟ್‌ಗಳಲ್ಲಿ, ಸಂಸ್ಕೃತಿ ರಕ್ಷಣೆಯ ಹೆಸರಿನಲ್ಲಿ, ಯುವಕ-ಯುವತಿಯರ ಮೇಲೆ ಬಲಪ್ರಯೋಗ ಮಾಡಲಾಗುತ್ತಿದೆ. ಹುಡುಗಿಯರನ್ನು ಸಾರ್ವಜನಿಕವಾಗಿ ಎಳೆದಾಡುವುದು, ವಿವಸ್ತ್ರರನ್ನಾಗಿಸುವುದು ಇವರ ಸಂಸ್ಕೃತಿ ರಕ್ಷಣೆಯ ರೀತಿಯಾಗಿದೆ. ಈ ಹಿಂದೂ ಸಂಘಟನೆಗಳು ವ್ಯಾಖ್ಯಾನಮಾಡುವ ಹಿಂದೂ ಧರ್ಮ-ಸಂಸ್ಕೃತಿಯನ್ನು, ಕಟ್ಟುಪಾಡುಗಳನ್ನು ಮಹಿಳೆಯರ ಮೇಲೆ ಹೇರಲಾಗುತ್ತಿದೆ. ಅದನ್ನು ಮೀರಲು ಧೈರ್ಯ ತೋರಿಸುವವರ ಮೇಲೆ ದಾಳಿ ಮಾಡ ಲಾಗುತ್ತಿದೆ, ಭಯೋತ್ಪಾದನೆಯ ಮೂಲಕ ಬಾಯಿ ಮುಚ್ಚಿಸಲು ಪ್ರಯತ್ನಿಸಲಾಗುತ್ತಿದೆ. ಪ್ರಸ್ತುತ ಸರ್ಕಾರದ ಬೆಂಬಲವೂ ತಮಗಿದೆ ಎನ್ನುವ ಧೈರ್ಯ ಇವರಿಗಿದೆ. ಪೊಲೀಸರೂ ನಿರುಪಾಯರಾಗಿದ್ದಾರೆ. ಈ ರೀತಿ ಖಾಪ್ ಪಂಚಾಯತಿಗಳು, ತಾಲಿಬಾನ್‌ಗಳು, ಹಿಂದೂ ಸಂಘಟನೆಗಳು ನೈತಿಕ ಪೊಲೀಸ್‌ರಂತೆ ವರ್ತಿಸುತ್ತಾ ತಮ್ಮದೇ ಪರ್ಯಾಯ ಕಾನೂನುಗಳನ್ನು ದುಂಡಾವರ್ತಿಯಿಂದ ಅನುಷ್ಠಾನಗೊಳಿಸಲು ಪ್ರಯತ್ನಿಸು ತ್ತಿರುವಾಗ, ಸರ್ಕಾರ-ಪೊಲೀಸರು ನಿಸ್ಸಹಾಯಕರಾಗಿ ವರ್ತಿಸಿದರೆ ಮಹಿಳೆಯರ ಹಲವಾರು ವರ್ಷಗಳ ಹೋರಾಟ ವಿಫಲವಾಗುತ್ತದೆ, ಬದಲಾವಣೆಯ ಕನಸು ನುಚ್ಚುನೂರಾಗಿ ಸಮಾಜ ಮಧ್ಯಯುಗಕ್ಕೆ ಹಿಂತಿರುಗಿ ಹೋಗಬೇಕಾಗುತ್ತದೆ.

ಇದರೊಂದಿಗೆ, ಮಹಿಳೆಯರಿಂದ ಕಾನೂನಿನ ದುರುಪಯೋಗ ಆಗುತ್ತಿದೆ ಎನ್ನುವ ದೂರು ಕೇಳಬರತೊಡಗಿದೆ. ಮಹಿಳೆಯರು ಸೇಡು ತೀರಿಸಿಕೊಳ್ಳಲು ವರದಕ್ಷಿಣೆ ಕಾನೂನು, ಕೌಟುಂಬಿಕ ದೌರ್ಜನ್ಯದ ಕಾನೂನು, ಲೈಂಗಿಕ ಕಿರುಕುಳದ ಕಾನೂನುಗಳನ್ನು ದುರುಪಯೋಗಪಡಿಸಿಕೊಂಡು ಸುಳ್ಳು ದೂರು ದಾಖಲಿಸಿ ಪುರುಷರನ್ನು, ಅವರ ಕುಟುಂಬದವರನ್ನು ಹಿಂಸೆಗೆ ಗುರಿಮಾಡುತ್ತಿದ್ದಾರೆ, ಆದ್ದರಿಂದ ಆ ಕಾನೂನುಗಳನ್ನು ಬದಲಾಯಿಸಬೇಕೆನ್ನುವ ಮಾತು ಆಗಾಗ್ಗೆ ಕೇಳಿಬರುತ್ತಿದೆ. ವೈಯಕ್ತಿಕವಾಗಿ ತೊಂದರೆಗೆ ಒಳಗಾದ ಕೆಲವರು ಮಹಿಳಾ ದೌರ್ಜನ್ಯದ ವಿರುದ್ಧ ಸಂಘಟನೆಯನ್ನೂ ಮಾಡಿಕೊಂಡು ಕಾನೂನಿನ ಬದಲಾವಣೆಯ ಹೋರಾಟಕ್ಕೆ ಚಾಲನೆ ನೀಡಿದ್ದಾರೆ. ಅದಕ್ಕೆ ಶ್ರೀಮತಿ ಲಲಿತಾ ನಾಯಕರಂತಹ ಮಹಿಳಾ ನಾಯಕಿಯೊಬ್ಬರನ್ನು ಅಧ್ಯಕ್ಷರನ್ನಾಗಿ ಮಾಡಿದ್ದಾರೆ! ಹಲವಾರು ಶತಮಾನಗಳ ಕಾಲ ದೌರ್ಜನ್ಯಕ್ಕೆ ಮಹಿಳೆಯರು ಒಳಗಾದರೂ ಮೌನವಾಗಿ ಸಹಿಸಿಕೊಂಡು ಬಂದರು. ಇಷ್ಟರಮಟ್ಟಿಗೆ ಕಾನೂನಿನ ಬದಲಾವಣೆಯಾಗಲು ಶತಮಾನಗಳೇ ಬೇಕಾದುವು. ಆದರೆ, ಇನ್ನೂ ಸರಿಯಾಗಿ ಜಾರಿಗೆ ಬರದ ಕಾನೂನಿನಿಂದ ತಮಗೆ ತೊಂದರೆಯಾಗುತ್ತಿದೆ ಎನ್ನುವ ಕೂಗು, ಪ್ರತಿಭಟನೆ, ಬದಲಾವಣೆಗಾಗಿ ಒತ್ತಾಯ ಈಗಾಗಲೇ ಆರಂಭವಾಗಿದೆ. ಸರ್ಕಾರವೂ ಬದಲಾವಣೆ ತರಲು ಮುಂದಾಗಿದೆ. ಕಾನೂನಿನ ದುರ್ಬಳಕೆ ತಡೆಯಲು ಬೇಕಾದ ಕ್ರಮ ತೆಗೆದುಕೊಳ್ಳುವುದು ಸ್ವಾಗತಾರ್ಹವಾಗಿದ್ದರೂ, ಆ ನೆಪದಲ್ಲಿ ಈ ಕಾನೂನುಗಳನ್ನು ನಿಷ್ಕ್ರಿಯಗೊಳಿಸಬಾರದು, ದುರ್ಬಲಗೊಳಿಸಬಾರದು.

ಪಂಚಾಯತ್ ಸಂಸ್ಥೆಗಳಲ್ಲಿ ಮಹಿಳೆಯರಿಗೆ ೩೩% ಮೀಸಲಾತಿ ಕಲ್ಪಿಸಿದ ರಾಜಕೀಯ ಪಕ್ಷಗಳು ರಾಜ್ಯ ಶಾಸನಸಭೆಗಳಲ್ಲಿ, ಲೋಕಸಭೆ-ರಾಜ್ಯಸಭೆಗಳಲ್ಲಿ ೩೦% ಮೀಸಲಾತಿ ಕೊಡಲು ಹಿಂದೇಟು ಹಾಕುತ್ತಿವೆ. ಬಹಿರಂಗವಾಗಿ ಮಹಿಳಾ ಮೀಸಲಾತಿಗೆ ಬೆಂಬಲ ಸೂಚಿಸಿದರೂ ಒಳಗೊಳಗೆ ಆ ಮಸೂದೆ ಕಾನೂನಾಗದಂತೆ ನೋಡಿಕೊಳ್ಳುತ್ತಿವೆ. ಕೆಲಸ ಮಾಡುವ ಸ್ಥಳಗಳಲ್ಲಿ ಮಹಿಳಾ ಉದ್ಯೋಗಿಯೊಬ್ಬಳು ಲೈಂಗಿಕ ಕಿರುಕುಳದ ದೂರು ನೀಡಿದಾಗ, ಅದು ಒಂದು ಜಾತಿಯ ವಿರುದ್ಧದ ದೂರಾಗಿ ಪರಿವರ್ತಿತವಾಗುತ್ತದೆ, ಎಲ್ಲ ಪುರುಷರ ವಿರುದ್ಧದ ದೂರಾಗಿ ಪರಿಗಣಿತವಾಗುತ್ತದೆ. ಜಾತಿ-ವೈಯಕ್ತಿಕ ಹಿತಾಸಕ್ತಿಯ ಕಾರಣದಿಂದ ಸಮಸ್ಯೆಯನ್ನು ಜಟಿಲಗೊಳಿಸಲಾಗುತ್ತದೆ, ಆರೋಪಿಯ ರಕ್ಷಣೆ ಮುಖ್ಯವಾಗುತ್ತದೆ. ದೂರು ನೀಡಿದ ಮಹಿಳೆ ತನ್ನ ಮೇಲಧಿಕಾರಿ, ಸಂಸ್ಥೆಯ ಮೇಲಧಿಕಾರಿ, ಆರೋಪಿಯ ಜಾತಿಯ ಸಂಘಟನೆ, ರಾಜಕೀಯ ನಾಯಕರ ಮಧ್ಯಪ್ರವೇಶ ಎಲ್ಲದರ ನಡುವೆ ತನ್ನ ಹೋರಾಟ ಮುಂದುವರಿಸಬೇಕಾಗುತ್ತದೆ.

ಈ ಎಲ್ಲ ನಕಾರಾತ್ಮಕ ಶಕ್ತಿಗಳ ವಿರುದ್ಧ ಮಹಿಳೆ ತನ್ನ ಕೌಟುಂಬಿಕ, ಸಾಮಾಜಿಕ, ಆರ್ಥಿಕ, ರಾಜಕೀಯ ಶಕ್ತಿಯನ್ನು ಬಲಪಡಿಸಿಕೊಂಡು ಸಮಾನತೆಯ ಹೋರಾಟ ಮುಂದುವರಿಸಬೇಕಾಗಿದೆ, ಈವರೆಗೆ ಗಳಿಸಿದ ಹಕ್ಕುಗಳನ್ನು ಉಳಿಸಿಕೊಳ್ಳಬೇಕಾಗಿದೆ.

**ಹೇಮಲತಾ ಮಹಿಷಿ**
೨೦೯, ಶಶಿಕಿರಣ ಅಪಾರ್ಟ್‌ಮೆಂಟ್ಸ್, ೧೮ನೇ ಮುಖ್ಯರಸ್ತೆ, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೫೫

# ರಂಗಭೀಷ್ಮ ಎ. ಎಸ್. ಮೂರ್ತಿಯವರಿಗೆ ನುಡಿನಮನ

**ಶಶಿಕಾಂತ ಯಡಹಳ್ಳಿ**

ಹವ್ಯಾಸಿ ರಂಗಭೂಮಿ ಮತ್ತು ಬೀದಿರಂಗಭೂಮಿಯ ಬೆಳವಣಿಗೆಗೆ ಅಪಾರವಾದ ಹಾಗೂ ವಿಭಿನ್ನವಾದ ಕೊಡುಗೆಯನ್ನು ನೀಡಿದ ಆ ಹಿರಿಯ ಜೀವ ಅಸ್ತಂಗತವಾಯಿತು. ಶ್ರವ್ಯ ಮಾಧ್ಯಮ, ದೃಶ್ಯಮಾಧ್ಯಮ, ಅಕ್ಷರ ಮಾಧ್ಯಮ... ಹೀಗೆ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ರಂಗದಲ್ಲಿ ವಿಶಿಷ್ಟ ಪ್ರತಿಭೆಯನ್ನು ಮೆರೆದ ಎ. ಎಸ್. ಮೂರ್ತಿಗಳು (ಎ.ಎಸ್.ಎಂ.) ೨೦೧೨ ಡಿಸೆಂಬರ್ ೧೮ರಂದು ಚಿರನಿದ್ರೆಗೆ ಜಾರಿದರು. ೮೪ ವರ್ಷಗಳ ಕಾಲ ತಮ್ಮ ಬಹುಮುಖಿ ಪಾತ್ರವನ್ನು ಸಮರ್ಥವಾಗಿ ನಿರ್ವಹಿಸಿ ನೇಪಥ್ಯಕ್ಕೆ ಸೇರಿಹೋದರು.

ಅವರು ಕಟ್ಟಿ ಪೋಷಿಸಿ ಬೆಳೆಸಿದ 'ಚಿತ್ರಾ', 'ಅಭಿನಯ ತರಂಗ', 'ಕಲಾಮಂದಿರ', 'ಬಿಂಬ'... ಮುಂತಾದ ಸಾಂಸ್ಕೃತಿಕ ದ್ವೀಪ ಸಮೂಹಗಳು ಮೂರ್ತಿಯವರು ಇರುವಾಗಲೂ ಮತ್ತು ಈಗ ಇಲ್ಲದಾಗಿರುವಾಗಲೂ ಸಕ್ರಿಯವಾಗಿವೆ ಹಾಗೂ ನಿರಂತರ ಕಾರ್ಯಚಟುವಟಿಕೆಗಳನ್ನು ನಡೆಸುತ್ತಲೇ ಇರುತ್ತವೆ ಎಂಬುದೇ ಎ.ಎಸ್.ಎಂ.ರವರ ದೂರದೃಷ್ಟಿಗೆ ಸಾಕ್ಷಿ. ಹಾಗಾಗಿ ಮೂರ್ತಿಯವರ ಅಗಲಿಕೆ ಆತ್ಮೀಯರಿಗೆ ದುಃಖವನ್ನು ತರಬಹುದೇ ಹೊರತು ನಷ್ಟವನ್ನಂತೂ ತರಲು ಸಾಧ್ಯವಿಲ್ಲ. ಶೂನ್ಯವನ್ನು ಸೃಷ್ಟಿಸಲು ಸಾಧ್ಯವಿಲ್ಲ.

ಸಾಂಸ್ಕೃತಿಕ ಲೋಕದಲ್ಲಿ ವ್ಯಕ್ತಿಗತವಾಗಿ ಬೆಳೆದವರಿದ್ದಾರೆ, ವೈಯಕ್ತಿಕವಾಗಿ ದೊಡ್ಡ ಹೆಸರನ್ನೂ ಮಾಡಿ ಮರೆಯಾದವರಿದ್ದಾರೆ. ರಂಗ ತಂಡ ಕಟ್ಟಿ ಉತ್ತಮ ನಾಟಕ ಕೊಟ್ಟವರೂ ಇದ್ದಾರೆ. ಆದರೆ... ಎ.ಎಸ್.ಎಂ.ರವರು ತಾವು ವಾಸಿಸುವ ನೆಲೆಯನ್ನೇ ರಂಗವೇದಿಕೆಯನ್ನಾಗಿಸಿದವರು. ಪತ್ನಿ, ಮಕ್ಕಳು, ಅಳಿಯಂದಿರು, ಮೊಮ್ಮಕ್ಕಳು ...ಹೀಗೆ ತನ್ನ ಇಡೀ ಕುಟುಂಬ ಪರಿವಾರವನ್ನೇ ರಂಗಭೂಮಿಯಲ್ಲಿ ಸಂಪೂರ್ಣವಾಗಿ ತೊಡಗಿಸಿಕೊಂಡವರು, ಸಾಂಸ್ಕೃತಿಕ ಚಟುವಟಿಕೆಗಳನ್ನು ಪೂರ್ಣಾವಧಿಯಾಗಿ ನಿರ್ವಹಿಸಿದವರು ಹವ್ಯಾಸಿ ರಂಗಭೂಮಿಯ ಪರಂಪರೆಯಲ್ಲಿ ಎ.ಎಸ್.ಎಂ. ಬಿಟ್ಟರೆ ಬೇರೊಬ್ಬರಿಲ್ಲ.

ರಂಗಕ್ರಿಯೆಯಿಂದ ಬಂದ ಹಣವನ್ನು ಮತ್ತೆ ರಂಗಭೂಮಿಗೆ ತೊಡಗಿಸಿ 'ಕೆರೆಯ ನೀರನು ಕೆರೆಗೆ ಚೆಲ್ಲಿ' ವರವ ಪಡೆದು ಜೀವನವನ್ನು ಸಾರ್ಥಕವಾಗಿಸಿಕೊಂಡರು. ಎ.ಎಸ್.ಎಂ.ರವರಿಗೆ ಓಡಿಸುವ ತಾಕತ್ತಿರುವವರೆಗೂ ಅಪ್ಪನ ಕಾಲದ ಪುರಾತನ ಬೈಕನ್ನೇ ಓಡಿಸುತ್ತಿದ್ದರು. ಕಾರ್ಯಕ್ರಮಗಳಿಗೆ, ಪ್ರೆಸ್‌ಮೀಟ್‌ಗಳಿಗೆ ಹೋಗಬೇಕಾದಾಗ ಅವರಿವರನ್ನು ಡ್ರಾಪ್ ಕೇಳುತ್ತಿದ್ದರು. ಕೊನೆಕೊನೆಗೆ ಆಟೋದಲ್ಲೇ ಅವರ ಸಂಚಾರ ಸಾಗುತ್ತಿತ್ತು.

ನಾಟಕ, ಬೀದಿನಾಟಕ ಪ್ರದರ್ಶನಕ್ಕೆಂದೇ 'ಚಿತ್ರಾ' ತಂಡವನ್ನು ಕಟ್ಟಿ, ಕಳೆದ ಆರು ದಶಕಗಳಿಂದ ನಾಡಿನಾದ್ಯಂತ ಸಹಸ್ರಾರು ನಾಟಕಗಳನ್ನಾಡಿಸಿದ್ದರು. 'ಅಭಿನಯ ತರಂಗ' ರಂಗ ತರಬೇತಿ ಶಾಲೆಯನ್ನು ಕಳೆದ ಮೂರು ದಶಕಗಳಿಂದ ನಿರಂತರವಾಗಿ ನಡೆಸುತ್ತಾ ಸಹಸ್ರಾರು ಕಲಾವಿದರನ್ನು ತರಬೇತಿಗೊಳಿಸಿ ದೃಶ್ಯಮಾಧ್ಯಮಕ್ಕೆ ಅಗತ್ಯವಾದ ನುರಿತ ಕಲಾವಿದರ ಕೊರತೆಯನ್ನು ನೀಗಿಸಿದ್ದಾರೆ. 'ಪ್ರೇಮ್' ಎನ್ನುವ ಹೆಸರಲ್ಲಿ ಪ್ರತಿ ವರ್ಷ ಕಾರ್ಯಾಗಾರವನ್ನು ನಡೆಸುತ್ತಾ ಸಿನೆಮಾ ನಟನೆ ಹಾಗೂ ತಂತ್ರಜ್ಞತೆ ಕುರಿತು ತರಬೇತಿಯನ್ನು ನೀಡುತ್ತಾ ಬಂದಿದ್ದಾರೆ. ಮೂರ್ತಿಯವರ ತಂದೆ ಅ. ನ. ಸುಬ್ಬರಾವ್ ಅವರು ಕಟ್ಟಿದ್ದ 'ಕಲಾಮಂದಿರ' ಚಿತ್ರಕಲಾ ಶಾಲೆಯನ್ನು ಪೋಷಿಸಿ ಬೆಳೆಸಿಕೊಂಡು ಬಂದಿದ್ದಾರೆ. ಮಕ್ಕಳಿಗಾಗಿಯೇ ಹನುಮಂತನಗರ 'ಬಿಂಬ' (೧೯೯೦ರಿಂದ), ಹಾಗೂ ವಿಜಯನಗರ 'ಬಿಂಬ' (೧೯೯೭ರಿಂದ) ಎನ್ನುವ ವಾರಾಂತ್ಯದ ರಂಗತರಬೇತಿ ಶಾಲೆ ಗಳನ್ನು ಯಶಸ್ವಿಯಾಗಿ ನಡೆಸುತ್ತಾ ಬಂದಿದ್ದಾರೆ. ಇವೆಲ್ಲಾ ಮೂರ್ತಿಯವರು ಸಂಪಾದಿಸಿದ ಆಸ್ತಿಯಾದರೆ ಇದರಿಂದ ಪ್ರಯೋಜನ ಪಡೆದ ಸಹಸ್ರಾರು ಮಕ್ಕಳು, ಯುವಕರು ಇಂದು ಸಾಂಸ್ಕೃತಿಕ ಲೋಕದ ಸಂಪತ್ತುಗಳಾಗಿದ್ದಾರೆ. ಪ್ರಕಾಶ ರೈ, ಬಿ. ಸುರೇಶ... ಮುಂತಾದ ಮೂರ್ತಿಯವರ ಶಿಷ್ಯರು ಇಂದು ಸಿನೆಮಾ ಮಾಧ್ಯಮದಲ್ಲಿ ಹೆಸರುವಾಸಿಯಾಗಿದ್ದಾರೆ. ಮೊಮ್ಮಗಳು ಪಲ್ಲವಿ ಸುಗಮ ಸಂಗೀತ ಕ್ಷೇತ್ರದಲ್ಲಿ ದೊಡ್ಡ ಹೆಸರು ಮಾಡಿದ್ದರೆ, ಇನ್ನೊಬ್ಬ ಮೊಮ್ಮಗಳು ಸುಷ್ಮಾ ನೃತ್ಯ ಸಂಯೋಜನೆಯಲ್ಲಿ ಹೆಸರುವಾಸಿ. ಹಲ್ಲಿನ ಡಾಕ್ಟರ್ ಆದ ಮೊಮ್ಮಗ ಡಾ॥ ಕಶ್ಯಪ್ ತಮ್ಮ ವೃತ್ತಿಗಿಂತ ಮಕ್ಕಳ ನಾಟಕ ಬರೆದು ಆಡಿಸಿದ್ದೇ ಹೆಚ್ಚು. ಮಗ ಪ್ರಕಾಶ, ಹೆಣ್ಣು ಮಕ್ಕಳಾದ ಗೌರಿದತ್ತು, ಶೋಭಾ ವೆಂಕಟೇಶ, ಅಳಿಯ ಗೋವಾದತ್ತು, ಸೊಸೆ ವನಮಾಲಾ ಎಲ್ಲರೂ ರಂಗಭೂಮಿ ಹಾಗೂ ವಿವಿಧ ಕಲಾಮಾಧ್ಯಮಗಳಲ್ಲಿ ಸಕ್ರಿಯರಾಗಿದ್ದಾರೆ. ಹೀಗೆ ಮೂರ್ತಿಗಳ ಕುಟುಂಬದ ಪ್ರತಿಯೊಬ್ಬರೂ ಸಾಂಸ್ಕೃತಿಕವಾಗಿ ತೊಡಗಿಸಿಕೊಂಡಿದ್ದು ನಿಜಕ್ಕೂ ಅಚ್ಚರಿಯ ಸಂಗತಿ.

ಎ. ಎಸ್. ಮೂರ್ತಿಯವರು ಹುಟ್ಟಿದ್ದು ಆಗಸ್ಟ್ ೧೬, ೧೯೨೯, ಶೈಕ್ಷಣಿಕವಾಗಿ ಓದಿದ್ದು ಕೇವಲ ಎಸ್.ಎಸ್.ಎಲ್.ಸಿ. ಮಾತ್ರ. ಆದರೆ ಸಾಂಸ್ಕೃತಿಕವಾಗಿ ಸಾಧಿಸಿದ್ದು ಅಪಾರ. ಓದಿನ ನಂತರ 'ಕ್ಯಾಲಿಕೋ ಮಿಲ್ಸ್'ನಲ್ಲಿ ೨ ವರ್ಷ ಕೆಲಸ. ಮೊಟ್ಟ ಮೊದಲು ಅಭಿನಯಿಸಿದ್ದು 'ಮಾಯಾವರ' ನಾಟಕ. ಆಗ ಅಂಟಿಕೊಂಡ ನಾಟಕದ ಮಾಯೆ ಕೊನೆವರೆಗೂ ಅವರನ್ನು ಬಿಡಲೇ ಇಲ್ಲ. ಗೆಳೆಯರ ಗುಂಪು ಕಟ್ಟಿಕೊಂಡ ಮೂರ್ತಿಯವರು ತಮ್ಮದೇ 'ಚಿತ್ರಾ' ಬೀದಿ ನಾಟಕ ತಂಡ ಹುಟ್ಟು ಹಾಕಿ 'ಬರೀ ಬ್ರಾಂತಿ' ನಾಟಕವನ್ನು ರಚಿಸಿ ಪ್ರದರ್ಶಿಸಿದರು. ಅವತ್ತಿಂದ ಶುರುವಾಯ್ತು ಮೂರ್ತಿಯವರ ಬೀದಿ ನಾಟಕಗಳ ಅಧ್ಯಾಯ. ನಾಟಕದಿಂದ ಗಳಿಸಿದ ನಟನಾನುಭವ ಮತ್ತು ಮಾತುಗಾರಿಕೆಯ ಫಲವಾಗಿ ಆಕಾಶವಾಣಿಯಲ್ಲಿ ೧೯೫೮ರಲ್ಲಿ ಕೆಲಸ ಸಿಕ್ಕಿತು. ನಂತರದ ೨೫ ವರ್ಷಗಳ ಕಾಲ ಆಕಾಶವಾಣಿಯ 'ಒಂದು ಮಾತಿನ ಈರಣ್ಣ'ನಾಗಿ ಮನೆ ಮನೆ ಮಾತಾದರು. ಆಕಾಶವಾಣಿಯಲ್ಲಿ ರೇಡಿಯೋ ನಾಟಕಗಳನ್ನು ಬರೆದು ವಾಚಿಸಿ ಕೇಳುಗರ ಮನಸೆಳೆದರು. ಈರಣ್ಣ ಪಾತ್ರಧಾರಿಯಾಗಿ 'ಒಂದು ಮಾತು' ಕಾರ್ಯಕ್ರಮವಂತೂ ಮೂರ್ತಿಯವರಿಗೆ ಜನಪ್ರಿಯತೆಯನ್ನು ತಂದಿತು. ತುರ್ತುಪರಿಸ್ಥಿತಿಯ ಸಂದರ್ಭದಲ್ಲಿ ನೇರ ನಡೆನುಡಿಯ ಮೂರ್ತಿಯವರನ್ನು ಆಕಾಶವಾಣಿಯ ಅಧಿಕಾರಶಾಹಿಗಳಿಗೆ ಸಹಿಸಿಕೊಳ್ಳಲು ಆಗಲಿಲ್ಲ. ಅಮಾನತು ಮಾಡಿ ಮನೆಗೆ ಕಳುಹಿಸಿ ಉಪಕರಿಸಿದರು. ಆಕಾಶವಾಣಿಯ ಸರಕಾರಿ ಸೇವೆಯಲ್ಲಿಯೇ ಇದ್ದಿದ್ದರೆ ಈ ಮಟ್ಟದ ರಂಗಸಾಧನೆ ಮಾಡಲು ಮೂರ್ತಿಯವರಿಗೆ ಅವಕಾಶ ಸಿಗುತ್ತಿರಲಿಲ್ಲ. ಕೆಲಸಕ್ಕೆ ದೊಡ್ಡ ನಮಸ್ಕಾರ ಹೇಳಿ ಹೊರಬಂದ ನಂತರ ನೂರ್ಮಡಿ ಹುರುಪಿನಿಂದ ಮೂರ್ತಿಯವರು ಕಾರ್ಯೋನ್ಮುಖರಾದರು.

ಆಗ ನಾಟಕಾಸಕ್ತ ಯುವಜನರಿಗೆ ತರಬೇತಿ ಕೊಡುವ ಯಾವ ಶಾಲೆಯೂ ಬೆಂಗಳೂರಿನಲ್ಲಿರಲಿಲ್ಲ. ಅಂತಹ ತರಬೇತಿಯ ಅಗತ್ಯತೆಯನ್ನು ಅರಿತ ಮೂರ್ತಿಯವರು ೧೯೮೧ರಲ್ಲಿ 'ಅಭಿನಯ ತರಂಗ' ಭಾನುವಾರದ ರಂಗಶಾಲೆಯನ್ನು ಆರಂಭಿಸಿದರು. ನಿರಂತರವಾಗಿ ಹೊಸತನಕ್ಕೆ ತುಡಿಯುವ ಮನಸ್ಸಿನ ಮೂರ್ತಿಯವರು 'ಪಪೆಟ್ ಲ್ಯಾಂಡ್' ಆರಂಭಿಸಿ ರಂಗಭೂಮಿಗೆ ಹೊಸ ಆಯಾಮವನ್ನೇ ಸೃಷ್ಟಿಸಿದರು. ಸೂತ್ರದ ಬೊಂಬೆ ಆಟದಲ್ಲಿ ನಾಟಕವನ್ನು

ಪ್ರದರ್ಶಿಸಿದ ಕೀರ್ತಿ ಮೂರ್ತಿಯವರಿಗೆ ಸಲ್ಲಬೇಕು. ಗಿರೀಶ ಕಾರ್ನಾಡ್‌ರ 'ಮಾನಿಷಾದ', ಕಂಬಾರರ 'ಕಿಟ್ಟಿ ಕಥೆ', ಚಂಪಾರವರ 'ಟಿಂಗರ್ ಬುಡ್ಡಣ್ಣ', ಗಿರಡ್ಡಿ ಗೋವಿಂದರಾಜರವರ 'ಕನಸು'... ಹೀಗೆ ಹಲವಾರು ಪ್ರಮುಖ ನಾಟಕಗಳನ್ನು 'ಸೂತ್ರದ ಬೊಂಬೆ ಆಟ' ಪ್ರಕಾರದ ಮೂಲಕ ಜನರಿಗೆ ತಲುಪಿಸಿದರು. ಆ ಮೂಲಕ ಪಪೆಟ್ ಥಿಯೇಟರ್ ಹುಟ್ಟಿಗೆ ಕಾರಣರಾದರು.

ಉತ್ತರ ಕರ್ನಾಟಕದಲ್ಲಿ ಡಾ|| ಸಿದ್ದನಗೌಡ ಪಾಟೀಲರು ಬೀದಿನಾಟಕಗಳನ್ನು ಪ್ರತಿಭಟನೆಯ ಮಾಧ್ಯಮವಾಗಿ ದುಡಿಸಿಗೊಂಡರೆ, ಬೆಂಗಳೂರಿನಲ್ಲಿ ಮೂರ್ತಿಗಳು ಯಾವುದೇ ಇಸಂಗಳ ಹಂಗಿಲ್ಲದೇ ಬೀದಿನಾಟಕಗಳ ಶಕೆಯನ್ನೇ ಆರಂಭಿಸಿದರು. ಮೂವತ್ತಕ್ಕೂ ಹೆಚ್ಚು ಬೀದಿನಾಟಕಗಳನ್ನು ರಚಿಸಿ 'ಚಿತ್ರಾ' ತಂಡದ ಮೂಲಕ ನಾಡಿನಾದ್ಯಂತ ಸಾವಿರಾರು ಪ್ರದರ್ಶನಗಳನ್ನಿತ್ತು ಬೀದಿನಾಟಕದ ಪರಂಪರೆಯನ್ನೇ ಹುಟ್ಟುಹಾಕಿದರು. ಮೂರ್ತಿಯವರ ಬೀದಿ ನಾಟಕದ ಯಶಸ್ಸಿನಿಂದ ಪ್ರೇರೇಪಿತರಾದ ಹಲವಾರು ರಂಗೋಪಜೀವಿಗಳು ಬೀದಿ ನಾಟಕವೆಂಬ ಪ್ರತಿಭಟನೆಯ ಮಾಧ್ಯಮವನ್ನು ಪ್ರಚಾರ ಮಾಧ್ಯಮವಾಗಿ ಬಳಸಿಕೊಂಡು ಬೀದಿ ನಾಟಕದ ತೀವ್ರತೆಯನ್ನೇ ಕಡಿಮೆಗೊಳಿಸಿದರು. ಬಹುತೇಕ ಬೀದಿ ನಾಟಕಗಳಲ್ಲಿ ಸ್ವತಃ ಬೀದಿ ಬೀದಿಗಳಲ್ಲಿ ಅಭಿನಯಿಸಿದ ಎ. ಎಸ್. ಮೂರ್ತಿಗಳು ಏಡ್ಸ್‌ರೋಗದ ವಿರುದ್ಧ 'ಎಚ್ಚರ ಎಚ್ಚರ' ಎನ್ನುವ ಬೀದಿ ನಾಟಕ ಬರೆದು ಆಡಿಸಿ ಜನರಲ್ಲಿ ಜಾಗ್ರತಿಯನ್ನುಂಟುಮಾಡಿದರು. ಅವರ 'ಹುಚ್ಚ' ಬೀದಿ ನಾಟಕ ಬಹು ಜನಪ್ರಿಯವಾಗಿತ್ತು.

ಐವತ್ತೈದಕ್ಕೂ ಹೆಚ್ಚು ನಾಟಕಗಳಲ್ಲಿ ಅಭಿನಯಿಸಿದ ಮೂರ್ತಿಗಳು ನೂರಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾರೆ. ಅದರಲ್ಲಿ ಬಹುತೇಕ ನಾಟಕಗಳು ಹಾಸ್ಯ ಪ್ರಧಾನ ವಾದಂತಹವುಗಳು. ಮೂರ್ತಿಗಳಿಗೆ ಯಾರೂ ಮಾಡದ್ದನ್ನು ಮಾಡುವ ತುಡಿತ. ಪಪೆಟ್ ನಾಟಕಗಳ ನಂತರ ಕವಿತೆಗಳಿಗೆ ರಂಗರೂಪ ಕೊಡುವ ಸಾಹಸ ಮಾಡಿದರು. ಕುವೆಂಪುರವರ 'ಕರಿಸಿದ್ದ' ಕವಿತೆ, ರಾಮಾನುಜಂರವರ 'ಒಂದು ಅಂಗುಲ ಹುಳುವಿನ ಪರಕಾಯ ಪ್ರವೇಶ' ಕಾವ್ಯ. ನಿಸಾರ ಅಹಮದರ 'ಒಂದೇ' ಹಾಗೂ ಲಕ್ಷ್ಮೀನಾರಾಯಣ ಭಟ್ಟರ 'ಒಂದು ಮರದ ಸುತ್ತ'... ಹೀಗೆ ಪ್ರಸಿದ್ಧ ಕವಿಗಳ ಕವಿತೆಗಳನ್ನು ರಂಗರೂಪಕ್ಕೆ ತಂದು ರಂಗಭೂಮಿಯ ಹರವನ್ನು ವಿಸ್ತರಿಸಿದರು.

ವಯಸ್ಸಾದಂತೆಲ್ಲಾ ಮಕ್ಕಳ ಮೇಲೆ ಮೋಹ ಹೆಚ್ಚಾಗ ತೊಡಗಿತೋ ಏನೋ, ೧೯೯೦ರಲ್ಲಿ ಚಿಕ್ಕ ಮಕ್ಕಳಿಗಾಗಿಯೇ 'ಬಿಂಬ' ಎನ್ನುವ ಶನಿವಾರದ ಶಾಲೆಯನ್ನು ಆರಂಭಿಸಿದರು. ಪ್ರತಿ ಬೇಸಿಗೆಯಲ್ಲಿ ಮಕ್ಕಳ ನಾಟಕ ಶಿಬಿರ ಆಯೋಜಿಸಿದರು. ೩೦ಕ್ಕೂ ಹೆಚ್ಚು ಮಕ್ಕಳ ನಾಟಕಗಳನ್ನು ರಚಿಸಿ ಶಿಬಿರದಲ್ಲಿ ತರಬೇತಾದ ಮಕ್ಕಳಿಂದ ನಾಟಕವಾಡಿಸಿದರು. ಮಕ್ಕಳ ಕಟಕಟೆಯಲ್ಲಿ ಸಾಂಸ್ಕೃತಿಕ ಹಾಗೂ ಸಾಹಿತ್ಯಕ ಲೋಕದ ದಿಗ್ಗಜರನ್ನು ತಂದು ನಿಲ್ಲಿಸಿ ಮಕ್ಕಳಿಂದ ಪ್ರಶ್ನಿಸಿದರು. ೧೯೯೭ರಲ್ಲಿ ವಿಜಯನಗರದಲ್ಲೂ 'ಬಿಂಬ' ಮಕ್ಕಳ ರಂಗಶಾಲೆಯನ್ನು ಆರಂಭಿಸಿದರು. ಮಕ್ಕಳ ರಂಗಭೂಮಿಗೆ ಎ.ಎಸ್.ಎಂ.ರವರ ಕೊಡುಗೆ ಪ್ರಶ್ನಾತೀತ.

೧೯೬೭ರಲ್ಲಿ 'ಮಹಿಳಾ ಲೇಖಕಿಯರ ಸಂಘ'ವನ್ನು ಆರಂಭಿಸಿ ಅಸಂಘಟಿತ ಲೇಖಕಿಯರನ್ನು ಒಂದೇ ವೇದಿಕೆಗೆ ತರುವ ಪ್ರಯತ್ನ ಮಾಡಿದರು. ಒಟ್ಟು ೧೧ ಕ್ಯಾಸೆಟ್ ಪ್ರಹಸನಗಳನ್ನು ರಚಿಸಿ, ನಿರ್ಮಿಸಿದರು. ಮೊಟ್ಟಮೊದಲ ಬಾರಿಗೆ 'ವಿಡಿಯೋ ಮ್ಯಾಗಜಿನ್' ಶುರುಮಾಡಿದರು. ಮೂರು ವರ್ಷಗಳ ಕಾಲ 'ಬೀದಿ' ರಂಗಪತ್ರಿಕೆಯನ್ನು ಮುನ್ನಡೆಸಿದರು. ಹದಿನಾರು ಚಲನಚಿತ್ರಗಳಲ್ಲಿ ಅಭಿನಯಿಸಿದರು. ೧೦ಕ್ಕೂ ಹೆಚ್ಚು ಧಾರಾವಾಹಿಗಳಲ್ಲಿ ನಟಿಸಿದರು. ಶಂಖನಾದ, ಸಂದರ್ಭ, ಡ್ರೈವರ್ ಹನಮಂತು, ಕುರಿದೊಡ್ಡಿ ಕುರುಕ್ಷೇತ್ರ... ಹೀಗೆ ಹಲವು ಸಿನೆಮಾಗಳಿಗೆ ಸಂಭಾಷಣೆಯನ್ನೂ ಬರೆದರು. ಚಲನಚಿತ್ರಗಳಲ್ಲಿ ಅಭಿನಯಿಸಲು ಬಯಸುವವರಿಗಾಗಿ 'ಪ್ರೇಮ್' ಎನ್ನುವ ಕಾರ್ಯಾಗಾರವನ್ನು ೨೦೦೩ ರಿಂದ ಪ್ರತಿ ವರ್ಷ ನಡೆಸುತ್ತಾ ಬಂದರು. ಹಲವಾರು ಪತ್ರಿಕೆಗಳಿಗೆ ನಿಯಮಿತವಾಗಿ ಅಂಕಣಗಳನ್ನು ಬರೆದರು. ಸಿನೆಮಾ ಪತ್ರಕರ್ತರಾಗಿ ಇಳಿವಯಸ್ಸಿನಲ್ಲಿಯೂ ಹದಿಹರೆಯದವರು ನಾಚುವ ಹಾಗೆ ಸಿನೆಮಾ ಪತ್ರಿಕಾಗೋಷ್ಠಿಗಳಿಗೆ ಹಾಜರಾಗಿ ಸಿನೆಮಾ ಕುರಿತು ಪ್ರತಿವಾರ ವಿಮರ್ಶೆಗಳನ್ನು ಬರೆದರು. ಹಲವಾರು ಲೇಖನಗಳನ್ನು ಬರೆದರು, ಪುಸ್ತಕಗಳನ್ನು ಪ್ರಕಟಿಸಿದರು. ಹಲವಾರು ಜನಪರ ಪ್ರತಿಭಟನೆಗಳಲ್ಲಿ ಪಾಲ್ಗೊಂಡರು.

ಒಂದಾ ಎರಡಾ ಮೂರ್ತಿಯವರ ಸಾಹಸಗಳು, ಒಬ್ಬ ಕ್ರಿಯಾಶೀಲ ವ್ಯಕ್ತಿಯಾಗಿ ಬದುಕಿನುದ್ದಕ್ಕೂ ತಮ್ಮನ್ನು ಪ್ರಯೋಗಗಳಿಗೆ ತೊಡಗಿಸಿಕೊಂಡು ಬೆರಗು ಹುಟ್ಟಿಸಿದರು. ಸದಾ ಹೊಸತನಕ್ಕಾಗಿ ತುಡಿದರು, ರಂಗಭೂಮಿಗಾಗಿ ಅಹೋರಾತ್ರಿ ದುಡಿದರು. ಇಷ್ಟೆಲ್ಲಾ ಮಾಡಿದರೂ... ತಮ್ಮ ಜೀವನವನ್ನೇ ಸಾಂಸ್ಕೃತಿಕ ಕ್ಷೇತ್ರಕ್ಕಾಗಿ ಮುಡುಪಾಗಿಟ್ಟರೂ... ಬ್ರಾಹ್ಮಣನೆಂಬ ಶ್ರೇಷ್ಠತೆಯ ಬ್ರ್ಯಾಂಡ ಬೆನ್ನಿಗಿದ್ದರೂ... ಯಾಕೆ ಪ್ರಮುಖ ಪ್ರಶಸ್ತಿಗಳು, ರಾಷ್ಟ್ರಮಟ್ಟದ ಪುರಸ್ಕಾರಗಳು, ನಾಟಕ ಅಕಾಡೆಮಿಯ ಅಧ್ಯಕ್ಷಗಿರಿಯಂತಹ ಹುದ್ದೆಗಳು ಎ.ಎಸ್.ಎಂ.ರವರಿಗೆ ದೊರೆಯಲಿಲ್ಲ? ೧೯೯೪ರಲ್ಲಿ ನಾಟಕ ಅಕಾಡೆಮಿ ಪ್ರಶಸ್ತಿ ಹಾಗೂ ೧೯೯೯ರಲ್ಲಿ ರಾಜ್ಯೋತ್ಸವ ಪ್ರಶಸ್ತಿಗಳನ್ನು ಹೊರತು ಪಡಿಸಿ ಸರಕಾರಿ ಸಂಸ್ಥೆಗಳು ಯಾಕೆ ಮೂರ್ತಿಯವರ ಸಾಧನೆಯನ್ನು ಗುರುತಿಸಿ ಸನ್ಮಾನಿಸಲಿಲ್ಲ? ಯಾಕೆಂದರೆ 'ಖಂಡಿತವಾದಿ ಲೋಕವಿರೋಧಿ' ಎನ್ನುವ ಮಾತು ಮೂರ್ತಿಯವರ ವಿಷಯದಲ್ಲಿ ಸತ್ಯವಾಯಿತು. ಸದಾ ವಿಡಂಬನೆಯನ್ನೇ ತಮ್ಮ ಮಾತಿನ, ನಾಟಕದ, ಬರವಣಿಗೆಯ ಸ್ಥಾಯಿಭಾವವನ್ನಾಗಿಸಿಕೊಂಡಿದ್ದ ಎ.ಎಸ್.ಎಂ.ರವರ ನಿಷ್ಠುರ ಮಾತುಗಳು, ಲೇವಡಿಯ ಪ್ರತಿಕ್ರಿಯೆಗಳು, ಎದುರಿದ್ದವರ ಕಾಲೆಳೆಯುವ - ಎದುರಾಳಿಗಳ ತಪ್ಪುಗಳನ್ನು ಕೊಂಕು ಮಾತುಗಳಿಂದ ಎತ್ತಿ ತೋರಿಸುವ ಗುಣಗಳು ಹಲವಾರು ನಾಜೂಕಯ್ಯಗಳಿಗೆ ಇಷ್ಟವಾಗುತ್ತಿರಲಿಲ್ಲ. ಅವರ ನೇರ ವಿಮರ್ಶೆಗಳನ್ನು ಜೀರ್ಣಿಸಿಕೊಳ್ಳುವ ಸಕಾರಾತ್ಮಕ ಮನೋಭಾವ ಅದೆಷ್ಟೋ ಜನಕ್ಕೆ ಇರಲೇ ಇಲ್ಲ. ಸರಕಾರಿ ಸಾಂಸ್ಕೃತಿಕ ಸಂಸ್ಥೆಗಳು ಹಾಗೂ ಅದರ ತಾತ್ಕಾಲಿಕ ಯಜಮಾನರುಗಳಿಗೆ ಎ.ಎಸ್.ಎಂ.ರವರ ನೇರನುಡಿ ಅಪಥ್ಯವಾಗುತ್ತಿತ್ತು. ಬುದ್ಧಿಜೀವಿಗಳು ಮೂರ್ತಿಯವರಿಂದ ಪರಿಪೂರ್ಣತೆಯನ್ನು, ಬರವಣಿಗೆಯಲ್ಲಿ ಮೆಚುರಿಟಿಯನ್ನು, ಮಾತಿನಲ್ಲಿ ನಾಜೂಕುತನವನ್ನು ಬಯಸಿದರೆ ಮೂರ್ತಿಯವರು ಅಪೂರ್ಣರಾಗಿರಲು, ಇಮ್ಮೆಚುರ್ಡ್ಡಾಗಿರಲು, ಒರಟರಾಗಿರಲು ಆಶಿಸುತ್ತಿದ್ದರು. ಇದು ಅವರ ಶಕ್ತಿ ಹಾಗೂ ದೌರ್ಬಲ್ಯ ಎರಡೂ ಆಗಿತ್ತು. ಈ ಗುಣಗಳೇ ಅವರನ್ನು ಕೊನೆಯ ಕ್ಷಣದವರೆಗೂ ಜೀವಂತವಾಗಿಟ್ಟದ್ದವು. ಒಳಗೊಂದು ಹೊರಗೊಂದು ಎನ್ನುವ ಗೋಸುಂಬೆತನ ಗೊತ್ತಿಲ್ಲದ ಮೂರ್ತಿಯವರು ಅನ್ನಿಸಿದ್ದನ್ನು ನುಡಿದರು, ನುಡಿದಂತೆಯೇ ಬರೆದರು, ಬರೆದಂತೆ ನಡೆದರು. ಅಂತರಂಗದಲ್ಲಿ ಬ್ರಾಹ್ಮಣ್ಯವನ್ನು ಕಾಪಿಟ್ಟುಕೊಂಡರೂ ಬಹಿರಂಗದಲ್ಲಿ ಅದನ್ನು ಮುರಿಯುವ ಪ್ರಯತ್ನವನ್ನು ಮಾಡಿದರು. ತಮ್ಮ ಮೂಗಿನ ನೇರಕ್ಕೆ ಜಗತ್ತು ಇರಬೇಕು ಎಂದೂ ಬಯಸಿದರು. ಎಲ್ಲವನ್ನೂ ಎಲ್ಲರನ್ನೂ ನಿಷ್ಠುರವಾಗಿ ವಿಮರ್ಶಿಸಿದರು ತಾವೂ ಬೆಳೆದರು, ತಮ್ಮ ಕುಟುಂಬ ಪರಿವಾರವನ್ನೂ ಸಾಂಸ್ಕೃತಿಕವಾಗಿ ಬೆಳೆಸಿದರು ಜೊತೆಗೆ ಅಪಾರ ಕಲಾವಿದ-ತಂತ್ರಜ್ಞರನ್ನೂ ಬೆಳೆಸಿದರು. ಇಂತಹ ಬಹುಪ್ರತಿಭೆಯ, ವರ್ಣಮಯ ವ್ಯಕ್ತಿತ್ವದ, ವಿಶಿಷ್ಟ ಖಯಾಲಿಯ, ವಿಚಿತ್ರ ಹಠದ ಮತ್ತೊಬ್ಬ ಎ. ಎಸ್. ಮೂರ್ತಿ ಬರಲು ಸಾಧ್ಯವೇ ಇಲ್ಲ, ಬಂದರೂ ನಮ್ಮ ವ್ಯವಸ್ಥೆ ಬದುಕಲು ಬಿಡೋದೂ ಇಲ್ಲ. ವೈಯಕ್ತಿಕ ದೌರ್ಬಲ್ಯಗಳನ್ನು ಹೊರತುಪಡಿಸಿದರೆ ಎ.ಎಸ್.ಎಂ. ರವರ ಸಾಧನೆ ನಿಜಕ್ಕೂ ಅನುಕರಣೀಯ, ಆದರ್ಶಮಯ. ಯಾರೇನೇ ಅಂದರೂ ಮೂರ್ತಿಗಳ ರಂಗಬದ್ಧತೆ ಪ್ರಶ್ನಾತೀತ.

ಎ. ಎಸ್. ಮೂರ್ತಿ



ಬೀದಿನಾಟಕದ
ಭೀಷ್ಮರಾದರು

ರಂಗಭೂಮಿಗೇ
ರಂಗಾದರು

ಆಲವಾಗಿ
ಆಶ್ರಯವಾದರು

ಶಿಲ್ಪವಾಗಿ
ದ್ರೋಣರಾದರು

ಎಲ್ಲವನು ಬಿಟ್ಟು
ದೂರಾದರು

ದಿವಂಗತರಿಗೆ 'ಹೊಸತು'
ಗೌರವ ಸಲ್ಲಿಸುತ್ತದೆ.

**ಶಶಿಕಾಂತ ಯಡಹಳ್ಳಿ**
ನಂ. ೧೩೧, ದೊಮ್ಮಲೂರು, ಬೆಂಗಳೂರು - ೫೬೦ ೦೭೧

# OUR ADVERTISERS

## OUR ADVERTISERS



ಶ್ರೀ ಜಗದೀಶ್ ಶೆಟ್ಟರ್
ಸನ್ಮಾನ್ಯ ಮುಖ್ಯಮಂತ್ರಿಗಳು




ಮಕ್ಕಳ ಶಿಕ್ಷಣ ಹಕ್ಕು ಅಭಿಯಾನ

'ಶಿಕ್ಷಣದಲ್ಲಿನ ಎಲ್ಲರ ಉತ್ಸಾಹ, ಮಕ್ಕಳ ಪ್ರತಿಭೆಗೆ ಪ್ರೋತ್ಸಾಹ'



ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ
ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರು

# ಶಿಕ್ಷಣ ಹಕ್ಕು ಕಾಯ್ದೆ 2009

























**ಮಕ್ಕಳ ಶಿಕ್ಷಣ ಹಕ್ಕು ಅಭಿಯಾನ-2012** | **ಸಹಾಯವಾಣಿ ಸಂಖ್ಯೆ: 180042534567**


Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. Siddanagouda Patil

